# ಅನಾವರಣ

## ೧

'ರಾವಬಹಾದ್ದೂರ'ರ ಈ ಕೃತಿಗೂ ನನಗೂ ಬಾದರಾಯಣಸಂಬಂಧವೊಂದು ಸೂಕ್ಷ್ಮವಾಗಿ ಬೆಳೆದು ಬಂದಿದೆ. ಅದನ್ನು ಅವರು ತಮ್ಮ ಪೀಠಿಕೆಯಲ್ಲಿ ಹೇಳಿದ್ದಾರೆ. ಈ ಕಾದಂಬರಿಯನ್ನು ಬರೆಯುವ ಮೊದಲೇ ಅವರು ಅದರ ಕತೆಯನ್ನು ನನಗೆ ಹೇಳಿದ್ದರು. ಅವರ ಕೊನೆಮೊದಲಿಲ್ಲದ ಹರಟೆಗೆ ಮುಗ್ಧನಾದವರಲ್ಲಿ ನಾನೂ ಒಬ್ಬ. ಆ ಕತೆಯನ್ನು ಜೀವಂತವಾಗಿ ಅವರು ಬಣ್ಣಿಸಿ ಹೇಳಿದಾಗ ಅದನ್ನು ಬರೆಯಲು ನಾನು ಅವರಿಗೆ ಗಂಟುಬಿದ್ದೆ. ನಮ್ಮಿಬ್ಬರ ಸ್ನೇಹ ಇನ್ನೂ ಹೊಸದಾಗಿತ್ತಾದ್ದರಿಂದ ನಾನು ಉತ್ಸಾಹದಲ್ಲಿದ್ದೆ. ತಾವು ಬರೆಯುವ ಕಾದಂಬರಿಗೆ ನಾನು ಮುನ್ನುಡಿಯನ್ನು ಬರೆಯಬೇಕೆಂದು ಅವರು ಕರಾರು ಹಾಕಿದರು. ಅದೇ ವಿವೇಕರಹಿತ ಉತ್ಸಾಹದಲ್ಲಿ ನಾನು ಒಪ್ಪಿಕೊಂಡೆ. 'ರಾವಬಹಾದ್ದೂರ'ರು ವೀರಪ್ರತಿಜ್ಞೆಯನ್ನೆ ಕೈಕೊಂಡವರಂತೆ ಮೂರು ನಾಲ್ಕು ತಿಂಗಳಲ್ಲಿಯೇ ಬರೆದು ಮುಗಿಸಿ ಕಾದಂಬರಿಯನ್ನು ನನ್ನ ಮೋರೆಗೆ ಹಿಡಿದರು. ನಾನೂ ಆತುರದಿಂದ ಹಸ್ತಪ್ರತಿಯನ್ನು ನುಂಗಿದೆ. ನನ್ನ ಸಭ್ಯತೆಯನ್ನು ಉಳಿಸಿಕೊಳ್ಳುವದಕ್ಕಾದರೂ ಮಾತು ಕೊಟ್ಟಂತೆ ಮುನ್ನುಡಿಯನ್ನು ಬರೆಯಬೇಕಾಯಿತು.

ಈ ಕಾದಂಬರಿ 'ರಾವಬಹಾದ್ದೂರ'ರ ಮೊದಲ ಕೃತಿ. ಸುಮಾರು ಇಪ್ಪತ್ತು ವರ್ಷಗಳಿಂದ ಅವರು ಬರೆಯುತ್ತಲೇ ಇದ್ದಾರೆ. ಅವರ ಬರೆಹಗಳೆಲ್ಲ ಪತ್ರಿಕೆಗಳಲ್ಲಿ ಬೆಳಕುಕಂಡಿವೆಯೇ ಹೊರತು ಪುಸ್ತಕರೂಪದಲ್ಲಿ ಪ್ರಕಟವಾಗಿಲ್ಲ. ಪತ್ರಿಕೆಗಳಲ್ಲಿ ಪ್ರಕಟವಾದ ಅವರ ಸಣ್ಣಕತೆಗಳನ್ನೂ ನಗೆಬರೆಹಗಳನ್ನೂ ಮೆಚ್ಚಿಕೊಂಡವರಿರಬಹುದಾದರೂ, ಅವರ ಸಾಹಿತ್ಯದ ಗುಣಾವಗುಣಗಳನ್ನು ವಿವೇಚಿಸುವ ಗೋಜಿಗೆ ಯಾರೂ ಹೋಗಿಲ್ಲ. 'ರಾವಬಹಾದ್ದೂರ'ರಿಗೂ ಪುಸ್ತಕವೊಂದನ್ನು ಪ್ರಕಟಿಸಬೇಕೆಂಬ ಹಂಬಲವೂ ಇದ್ದಂತೆ ತೋರಲಿಲ್ಲ. ಮೊದಮೊದಲು ಈ ಕಾದಂಬರಿಯ ವಿಷಯಕ್ಕೆ ನನಗೂ ಅವಿಶ್ವಾಸವಿತ್ತು. ಪತ್ರಿಕಾವ್ಯವಸಾಯ 'ರಾವಬಹಾದ್ದೂರ'ರಿಗೆ ರಕ್ತಗತವಾಗಿ ಹೋಗಿದೆ. ಆದ್ದರಿಂದಲೇ ಅವರು ಇಂಥ ದೊಡ್ಡ ಕೃತಿಯನ್ನು ಬರೆಯುವ ಬಗ್ಗೆ ನನಗೆ ಸಂಶಯವಿತ್ತು. 'ಕಾಲಮ್ಮಿ'ನ ಲೆಕ್ಕ ಹಾಕಿ ಲೇಖಗಳನ್ನು ಬರೆಯುವವರಿಗೆ ಕಾದಂಬರಿಯಂಥ ಸುಸಂಬದ್ಧ ಕೃತಿರಚನೆ ಜಡವಾಗು

ವದು ಸಹಜ. ಆದರೆ ನನ್ನ ಎಣಿಕೆಯನ್ನು ಮೀರಿ 'ರಾವಬಹಾದ್ದೂರ'ರು ಅಸಾಧ್ಯ ವನ್ನು ಸಾಧ್ಯವನ್ನಾಗಿ ಮಾಡಿದ್ದಾರೆ.

'ರಾವಬಹಾದ್ದೂರ'ರ ವಿಸ್ತಾರವಾದ ಜೀವನಾನುಭವವೇ ಇದಕ್ಕೆ ಕಾರಣ ವೆಂದು ನಾನು ತಿಳಿದಿದ್ದೇನೆ. ಅವರಿಗೀಗ ಮಧ್ಯವಯಸ್ಸು. ಈ ಅವಧಿಯಲ್ಲಿ ಅನೇಕ ವ್ಯಕ್ತಿಗಳಿಗೆ ಗಂಟುಬಿದ್ದು, ಜಗತ್ತಿನ ವಿವಿಧ ಕ್ಷೇತ್ರಗಳ ಪರಿಚಯು ಅವ ರಿಗೆ ಆಗಿದೆ. ಬಹಿರ್ಮುಖವಾದ ಅವರ ದೃಷ್ಟಿಗೆ ಜಗತ್ತಿನ ಸಾವಿರ ಸಂಗತಿಗಳು ಅಗ್ರಲೇಖದ 'ಕಾಲಮ್ಮಿ'ನಷ್ಟು ಸುಪರಿಚಿತವಾಗಿವೆ. ಎಷ್ಟೋ ಜನರೊಡನೆ ಹುಟ್ಟಿದ ಸ್ನೇಹ-ವಿರಸಗಳು ಅವರ ಸಾಹಿತ್ಯನಿರ್ಮಿತಿಗೆ ಅವಶ್ಯವಾದ ಹದವನ್ನು ತಂದು ಕೊಟ್ಟವೆ. ಪ್ರಾಮಾಣಿಕವಾದ ಅನುಭವವನ್ನು ಪ್ರಾಮಾಣಿಕವಾಗಿಯೇ ಚಿತ್ರಿಸು ವದು ಅವರ ಸಾಹಿತ್ಯದ ವೈಶಿಷ್ಟ್ಯ. ಅವರ ನಗೆಬರಹಗಳಲ್ಲೂ, ಸಣ್ಣಕತೆಗಳಲ್ಲೂ ಈ ಗುಣವನ್ನು ಕಾಣಬಹುದು. ಮೇಲಾಗಿ ಅವರು ಆಕರ್ಷಕವಾಗುವಂತೆ ಕತೆ ಹೇಳಬಲ್ಲರು. ನಡುವೆ ಸಹಜವಿನೋದ ಈ ಆಕರ್ಷಕತೆಗೆ ಮೊನೆಯನ್ನೂ ಮೆರುಗನ್ನೂ ತಂದುಕೊಡುತ್ತದೆ. ಇದುವರೆಗೆ ಪ್ರಕಟವಾದ ಅವರ ಬರೆಹಗಳೆಲ್ಲ ಒಂದೇ ಸಂಪುಟದಲ್ಲಿ ಪ್ರಕಟವಾದಾಗ ಈ ಸತ್ಯ ಹೊಳೆಯದಿರದು.

೨

'ರಾವಬಹಾದ್ದೂರ'ರ ಈ ಕಾದಂಬರಿ ಮಾತ್ರ ಅವರ ಉಳಿದ ಎಲ್ಲ ಲೇಖಗಳಿ ಗಿಂತ ತೀರ ಭಿನ್ನವಾಗಿದೆ. ಇಲ್ಲಿಯೂ ಅದೇ ಜೀವನಾನುಭವವೇ ತಳಹದಿಯಾಗಿ ದ್ದರೂ ಕೂಡ, ಅಲ್ಲಿ ಕಂಡುಬರದ ಜೀವನದೃಷ್ಟಿ ಇಲ್ಲಿ ಸಫಲವಾಗಿದೆ. ಒಂದು ಗಳಿಗೆಯ ಕುತೂಹಲಕ್ಕೆ ಮಾತಿನ ತೊಡಿಗೆಯನ್ನು ತೊಡಿಸುವ ಕೃತಿ ಇದಲ್ಲ. ಜೀವನವನ್ನು ಸಮಗ್ರವಾಗಿ ನೋಡುವ ಧೀರದೃಷ್ಟಿ, ದಿನನಿತ್ಯದ ಅನೇಕ ಸಂಗತಿ ಗಳ ನಡುವೆ ಇರಬಹುದಾದ ಸಂಬಂಧವನ್ನು ನೋಡುವ ಕುತೂಹಲ, ಬದುಕಿನ ಒಡಲಿನಲ್ಲಿಯೇ ಹುಟ್ಟಿ, ಬದುಕನ್ನೇ ನುಂಗಲು ಹವಣಿಸುವ ಸಮಸ್ಯೆಗಳ ರಹಸ್ಯ ವನ್ನು ಅರಿಯುವ ಆಂತರಿಕ ತಳಮಳ ಈ ಕೃತಿಗೆ ಪ್ರೇರಕಶಕ್ತಿಯಾಗಿವೆ. ಅದಕ್ಕ ನುಗುಣವಾಗಿ ಈ ಕಾದಂಬರಿಯ ರಚನೆ ಬಹುಮಟ್ಟಿಗೆ ಮಹಾಕಾವ್ಯಗಳ ರಚನೆ ಯನ್ನು ಹೋಲುತ್ತದೆ.

ಅರವತ್ತು ವರ್ಷಗಳ ಹಿಂದಿನ ಒಂದು ಗ್ರಾಮದ ಜೀವನವನ್ನು ಇಲ್ಲಿ ಚಿತ್ರಿಸ

ಲಾಗಿದೆ. ಒಂದು ಅರ್ಥದಲ್ಲಿ ಇದು ಶುದ್ಧ ಸಾಮಾಜಿಕ ಕಾದಂಬರಿ. ಸಾರ್ವಜನಿಕ ಜೀವನವೇ ಇಲ್ಲಿಯ ಕಾರ್ಯಾರಂಗ. ಸುಮಾರು ನಲವತ್ತು ನಲವತ್ತೈದು ವ್ಯಕ್ತಿಗಳು ಇಲ್ಲಿ ವ್ಯವಹರಿಸುತ್ತವೆಯಾದರೂ ಒಂದಾದರೂ ವ್ಯಕ್ತಿಯ ಕೌಟುಂಬಿಕ ವಿವರಗಳು ದೊರೆಯಲಾರವು. ಈ ವಿಷಯದಲ್ಲಿ ಲೇಖಕರ ಸಂಯಮ ಅಭಿನಂದನೀಯವಾಗಿದೆ. ಈ ಕಾದಂಬರಿಯನ್ನು ಓದುವಾಗ ಪಾದಳ್ಳಿಯ ಸಾರ್ವಜನಿಕ ಜೀವನ ಮೆರವಣಿಗೆಯಂತೆ ನಮ್ಮ ಕಣ್ಣಮುಂದೆ ಹಾದು ಹೋಗುವ ಅನುಭವ ನಮಗಾಗುತ್ತದೆ.

ಇದು ಮುಖ್ಯವಾಗಿ ಪಾದಳ್ಳಿಯ ಕತೆ. ಕೃಷ್ಣಾನದಿಯ ದಂಡೆಯ ಮೇಲೆ ಇರುವ ಈ ಊರು ಪ್ರಾದೇಶಿಕ ಸತ್ಯವಷ್ಟೇ ಆಗಿರದೆ, ಈ ಕಾದಂಬರಿಯಲ್ಲಿಯ ಅನೇಕ ಸಂಗತಿಗಳಿಗೆ,ಸನ್ನಿವೇಶಗಳಿಗೆ, ವ್ಯಕ್ತಿಗಳಿಗೆ ಕೇಂದ್ರಬಿಂದುವಾಗಿದೆ. ಅಥವಾ ವಿಮರ್ಶೆಯ ಪರಿಭಾಷೆಯಲ್ಲಿ ಹೇಳಬೇಕಾದರೆ ಇಲ್ಲಿ ನಡೆಯುವ ಕತೆಯ ವಸ್ತುವಾಗಿದೆ. ಅಂತಲೇ ಇಲ್ಲಿ ನಡೆಯುವ ಘಟನೆಗಳು, ಅವುಗಳಲ್ಲಿ ಭಾಗವಹಿಸಿದ ವ್ಯಕ್ತಿಗಳು ಪಾದಳ್ಳಯ ದೈವ(ದುರ್ದೈವ)ಕ್ಕೆ ಅಭಿವ್ಯಕ್ತಿಯನ್ನು ನೀಡುತ್ತವೆ. ಕತೆ ಪಾದಳ್ಳಿಯನ್ನು ಬಿಟ್ಟು ಇನ್ನೊಂದು ಊರಿಗೆ ಹೋದರೂ, ಬೇರೆ ಊರಿನ ವ್ಯಕ್ತಿಗಳು ಪಾದಳ್ಳಿಗೆ ಬಂದರೂ ಪಾದಳ್ಳಿಯ ಜೀವನವೇ ಅಲ್ಲಿ ಪ್ರಕಾಶಿತವಾಗುತ್ತದೆ. ಪಾದಳ್ಳಿಯ ಸ್ಥಿತಿ, ಗತಿ, ಅವನತಿಗಳೇ ಕಾದಂಬರಿಯ ಜೀವವಾಗಿ ಮಿಡಿಯುತ್ತವೆ.

ಅಂತಲೇ ಒಂದು ಜನಾಂಗದ ಸಾಮಾನ್ಯ ಸುಖ-ದುಃಖಗಳೇ ಈ ಕತೆಯ ರಸಪ್ರಕರವಾಗಿದ್ದರೆ ಆಶ್ಚರ್ಯವೇನಿಲ್ಲ. ಹಬ್ಬ-ಹುಣ್ಣಿವೆಗಳ, ಜಾತ್ರಿ-ಉತ್ಸವಗಳ ಸಂತೋಷ-ಸಂಭ್ರಮಗಳ, ಕಾಲರಾ, ಪ್ಲೇಗು, ನೆರೆಹಾವಳಿ, ಬರಗಾಲ ಮೊದಲಾದವುಗಳಿಂದುಂಟಾಗುವ ದುಃಖದ ದಾರುಣತೆ, ಕಳವು, ಕೊಲೆಸುಲಿಗೆಗಳ ಭೀತಿ, ಇನ್ನೊಬ್ಬರ ಆಸ್ತಿಯ ಮೇಲಿನ ಲೋಭ, ನೆಲದಲ್ಲಿಯೇ ಬೇರು ಬಿಟ್ಟಂತಿರುವ ಅಭಿಮಾನ ಮೊದಲಾದವುಗಳ ಭಾವಪ್ರಪಂಚ ಅದ್ಭುತವಾಗಿ ಚಿತ್ರಿತವಾಗಿದೆ. ಪಾದಳ್ಳಿಯ ಅವನತಿಯ ಇತಿಹಾಸ ಪ್ರಾರಂಭದಲ್ಲಿಯೇ ಗೋಚರವಾಗುತ್ತದೆ. ವಾಡೆಯಲ್ಲಿಯ ಅಂತಃಕಲಹ ಹೊರಸುಗ್ಗಿ ಬಂದು, ಹೆಣ್ಣಿನ ಮೋಹ ಯಾರದೋ ದುರ್ಮರಣಕ್ಕೆ ಕಾರಣವಾಗಿ, ಅದರಿಂದ ಹುಟ್ಟಿದ ಸಮಸ್ಯೆಯನ್ನು ಬಿಡಿಸಲು ಹೋದಾಗ ಬಂದಿದ್ದ ಸಮಸ್ಯೆ ನೂರಾಗಿ ಹಬ್ಬಿ, ಕಾಲರಾ ಪಿಡುಗಿನಲ್ಲಿ, ಬರಗಾಲ

ದಲ್ಲಿ, ಘೋರವಾಗಿ ಕೊನೆಗೆ ಬರುವ ಸರ್ವನಾಶದಲ್ಲಿ ಈ ಇತಿಹಾಸ ಕೊನೆಗೊಳ್ಳು ತ್ತದೆ. ಕಾಲರಾ, ನೆರೆಹಾವಳಿಯಂಥ ಹೊರಗಿನ ಕಾರಣವಲ್ಲದೆ, ಪಾದಳ್ಳಿಯ ಆಂತರಿಕ ಜೀವನದಲ್ಲಿಯ ನೈತಿಕ ಅಧಃಪತನವೂ ಇದಕ್ಕೆ ಕಾರಣವಾಗುತ್ತದೆ. ಇದೇ ಇಲ್ಲಿಯ ಎಲ್ಲ ಘಟನೆಗಳನ್ನೂ ಪೋಣಿಸುವ ಸೂತ್ರವಾಗಿದೆ. ಮೇಲು-ನೋಟಕ್ಕೆ ಕಾದಂಬರಿಯಲ್ಲಿ ಸುಸಂಬದ್ಧತೆ ಕಾಣದಿದ್ದರೂ, ಅದರ ಉದ್ದೇಶದ ಬೆಳಕಿನಲ್ಲಿ ನೋಡಿದಾಗ, ಏಕಮುಖತೆ ಕಾಣದಿರದು. ಯಾವ ಸನ್ನಿವೇಶವೂ ಸ್ವತಂತ್ರವಾಗಿ ಬೆಳೆಯಲು ಲೇಖಕರು ಅವಕಾಶ ಕೊಟ್ಟಿಲ್ಲ. ಅದು ಪಾದಳ್ಳಿಯಿಂದ ಎಷ್ಟೇ ದೂರದಲ್ಲಿ ನಡೆದಿರಲಿ, ಕತೆಯ ಕಾಲಕ್ರಮವನ್ನು ತಪ್ಪಿಸಿ ಹಿಂದೆ ಎಂದೋ ನಡೆದಿರಲಿ, ಪಾದಳ್ಳಿಯ ಜೀವನದೊಡನೆ ಅದರ ರಕ್ತಸಂಬಂಧ ಇದ್ದೇ ಇದೆ.

೩

ಪ್ರಸ್ತುತ ಕಾದಂಬರಿ ವಸ್ತುನಿಷ್ಠವಾಗಿದೆಯೆಂದೇ ನನ್ನ ಅಭಿಪ್ರಾಯ. ಪಾತ್ರಸೃಷ್ಟಿ ವಸ್ತುವಿನ ಒಡಲಿನಲ್ಲಿಯೇ ಹುಟ್ಟಿದಂತಿದೆ. ಅದಕ್ಕಾಗಿಯೇ ಏನೋ ಪಾತ್ರರಚನೆಯಲ್ಲಿ ವೈವಿಧ್ಯವಾಗಲಿ, ಬೆಳವಣಿಗೆಯಾಗಲಿ ಕಂಡುಬರಲಾರದು. ವ್ಯಕ್ತಿಗಳ ಬಹುಮುಖನಿರ್ಮಾಣಕ್ಕೆ ಅವಕಾಶವೇ ಇಲ್ಲ. ದ್ವೇಷ, ಮೋಹ, ಅಭಿ ಮಾನ, ಸ್ವಾರ್ಥಸಾಧನೆ, ಕಪಟಕಾರಸ್ಥಾನಗಳ ಬಲೆಯಲ್ಲಿ ಸಿಕ್ಕು ಒದ್ದಾಡುವ ಒಂದು ಜೀವಂತ ಸಮಾಜವೇ ಈ ಕತೆಯ ನಾಯಕಪಾತ್ರವನ್ನು ವಹಿಸಿದೆ. ಪಾತ್ರಗಳ ಜೀವಂತತನಕ್ಕಾಗಲಿ, ಮಾನವೀಯತೆಗಾಗಲಿ ಎಲ್ಲಿಯೂ ಚ್ಯುತಿ ಬಂದಿಲ್ಲ ವೆಂಬುದೇನೋ ನಿಜ. ಶಂಕರಪ್ಪಗೌಡರ ತೀವ್ರ ಅಭಿಮಾನ ಹಾಗೂ ಉದಾತ್ತತೆ, ಬದುಕಿನ ಅವಿಶ್ರಾಂತ ಗಡಿಬಿಡಿಯಲ್ಲಿಯೂ ನಿಶ್ಚಲತೆಯನ್ನು ಕಾಯ್ದುಕೊಂಡ ಬಾಳಾಚಾರ್ಯರು, ಮಠದ ಸ್ವಾಮಿಯಾಗಿಯೂ ದುರಂತದಲ್ಲಿಯೇ ರುಚಿ ಕಾಣುವ ಪಡದಯ್ಯನವರು, ಉರುಲು ಹಾಕಿಕೊಂಡು ತನ್ನ ಜೀವನದ ರಹಸ್ಯವನ್ನೇ ಹಿಚುಕಿ ಕೊಂಡ ಪುತಳಾಬಾಯಿ, ನಿರುದ್ದಿಶ್ಯವಾಗಿಯೇ ಕತೆಯ ಪ್ರಳಯಕೇಂದ್ರಳಾದ ಚಿಮಣಾ ಈ ವ್ಯಕ್ತಿಗಳೆಲ್ಲ ಅವಿಸ್ಮರಣೀಯರಾಗಿದ್ದಾರೆ. ವಾಲೀಕಾರ ಮಲ್ಲ, ಜೈನರ ಜಿನ್ನಪ್ಪ, ಮಾದರ ಚನ್ನ, ಚಂದ್ರಿ ಮೊದಲಾದ ಉಪಪಾತ್ರಗಳೂ ಕೂಡ ಸಜೀವವಾಗಿ ವರ್ತಿಸುತ್ತವೆ.

ಇಲ್ಲಿಯ ಪ್ರಮುಖ ಪಾತ್ರಗಳು ಸುತ್ತಲಿನ ಪರಿಸ್ಥಿತಿಯೊಂದಿಗೆ ನಿರಂತರ

ವಾದ ಹೋರಾಟದಲ್ಲಿ ತೊಡಗಿವೆ. ಪಾಡಳ್ಳಿಯ ಅಭಿಮಾನವನ್ನು ಪ್ರಾಣದಂತೆ ರಕ್ಷಿಸುವ ಶಂಕರಪ್ಪಗೌಡರ ಕಲಹದ ಕೈ ಜಾಗೀರದಾರರ ವಾಡೆಯ ವರೆಗೆ ಚಾಚಿದೆ. ಶೇಷಪ್ಪನ ಕಾರಸ್ಥಾನದ ಬಲೆ ಊರು ತುಂಬ ವ್ಯಾಪಿಸಿದೆ. ಈ ಕಲಹಗಳ ವಿಷ್ಟಕರ್ಮರಾದ ಪಡದಯ್ಯರವರಿಗೂ ಪರಿಸ್ಥಿತಿ ಅನುಕೂಲವಾಗಿಲ್ಲ. ತನಗರಿವಿಲ್ಲದೆಯೆ ಬಾಪೂಸಾಹೇಬ ಬಣಕಟ್ಟುತ್ತಾನೆ. ಹೊರಗೆ ನಡೆಯುವ ಈ ಕಲಹ ವ್ಯಕ್ತಿಗಳ ಅಂತರಂಗದಲ್ಲಿ ಒಳತೋಟಿಯನ್ನು ಸೂಚಿಸುತ್ತದೆ. ಬಾಳಾಚಾರ್ಯರ ಪ್ರತಿಯೊಂದು ಕೆಲಸದ ಹಿಂದೆಯೂ ವಿಚಾರಮಂಥನ ನಡೆದಿದೆ. ತನ್ನ ಒಂದು ಪಾಪ ಅನರ್ಥಪರಂಪರೆಯನ್ನೇ ರಚಿಸಿದಾಗ ಅದನ್ನು ನೋಡಲಾರದೆ ಉರಲು ಹಾಕಿಕೊಂಡು ಪ್ರಾಣ ನೀಗಿದ ಪುತಳಾಬಾಯಿಯ ಹೃದಯದಲ್ಲಿ ಪಾಪ-ಪುಣ್ಯಗಳು ಹೋರಾಟವನ್ನೆಬ್ಬಿಸುತ್ತವೆ. ಶಂಕರಪ್ಪಗೌಡ, ದಾದಾನಂಥವರು ವಿಚಾರಶೀಲರಲ್ಲದಿದ್ದರೂ, ಜೀವಿತದ ಉತ್ಕಟಕ್ಷಣಗಳಲ್ಲಿ ಅವರ ಮನೋವೃತ್ತಿಯೇ ಬದಲಾಗುತ್ತದೆ. ತಮಗೆ ತಿಳಿದೋ ತಿಳಿಯದೆಯೋ ಅನರ್ಥಗಳ ಬಿರುಗಾಳಿಯನ್ನೆಬ್ಬಿಸುವ ಶೇಷಪ್ಪ ಹಾಗೂ ಪಡದಯ್ಯನಂಥವರಿಗೂ ಈ ಒಳತೋಟಿ ಬಿಟ್ಟಿಲ್ಲ.

ಆದರೂ ಇಲ್ಲಿಯ ಪಾತ್ರಗಳಿಗೆ ತಾಂತ್ರಿಕವಾಗಿ ಸ್ವಾತಂತ್ರ್ಯವೆಂಬುದಿಲ್ಲ. ಲೇಖಕರ ಲಕ್ಷ್ಯವೆಲ್ಲ ಜೀವನದ ಏರಿಳಿತಗಳ ಕಡೆಗೇ ಕೇಂದ್ರೀಕೃತವಾಗಿದೆ. ಪಾತ್ರಸೃಷ್ಟಿ ಈ ವಿಲಕ್ಷಣವಾದ ಜೀವನವಿನ್ಯಾಸದ ವ್ಯಕ್ತರೂಪವಾಗಿ ಕಾಣುತ್ತದೆ. ಅಂತೆಯೇ ಒಮ್ಮೊಮ್ಮೆ ಇಲ್ಲಿ ವಸ್ತುವಿನ ವಿನ್ಯಾಸ ಪಾತ್ರಗಳನ್ನು ದಿಗ್ಬಂಧನಗೊಳಿಸುವಂತೆ ಕಾಣುತ್ತದೆ. ಆದರೆ ಅದು ಒಮ್ಮೊಮ್ಮೆ ಮಾತ್ರ. ಪ್ರಮುಖ ಪಾತ್ರಗಳೆಲ್ಲ ಸಂವಿಧಾನವನ್ನು ರಚಿಸುತ್ತಲೇ ಹೋಗುತ್ತವೆ. ಇದಕ್ಕೆ ಹಿಂದಿನ ತಲೆಮಾರಿನ ಜೀವನಪದ್ಧತಿಯೂ ಬಹುಮಟ್ಟಿಗೆ ಕಾರಣವಾಗಿದೆಯೆನ್ನಬಹುದು. ಈಗಿನಂತೆ ಮನುಷ್ಯ ತನ್ನ ಪರಿಸರದೊಂದಿಗೆ ವಿಜಾತೀಯವಾಗಿ ವರ್ತಿಸುತ್ತಿರಲಿಲ್ಲ. ಈಗಿನ ಕಾಲದ ಜೀವನ, ಸಹಕಾರಯುತವಾದ, ಹಾಸುಹೊಕ್ಕಾದ, ನೆಲದಲ್ಲಿ ಬೇರು ಬಿಟ್ಟ ಜೀವನ. ಈ ವ್ಯಕ್ತಿಗಳೆಲ್ಲ ಪಾಡಳ್ಳಿಯ ಜೀವನದಲ್ಲಿ ಬೆರೆತು ಹೋಗಿದ್ದಾರೆ. ಆನೆಯ ಪ್ರಕರಣದಲ್ಲಿ ಬಾಳಾಚಾರ್ಯರ ಅಂತರ್ಮಥನದಲ್ಲಿ ಈ ಭಾವ ಸ್ಪಷ್ಟವಾಗಿ ಒಡಮೂಡಿದೆ. ಶಂಕರಪ್ಪಗೌಡರಿಗೆ ಪಾಡಳ್ಳಿಯೆಂದರೆ ಪ್ರಾಣಕ್ಕಿಂತ ಹೆಚ್ಚಾಗಿದೆ. ದಾದಾ ಊರು ಬಿಟ್ಟು ಹೋದವನು ಕೊನೆಗೆ ಪಾಡಳ್ಳಿಯನ್ನು ನೋಡಬೇಕೆಂದೇ ಬರುತ್ತಾನೆ. ಜೈನರ ಚೆನ್ನಪ್ಪ ಅರುವತ್ತು ವರ್ಷಗಳ

ಜೀವಿತದ ಅವಧಿಯಲ್ಲಿ ಒಂದೇ ಸಾರೆ ಮಾತ್ರ ತಾಲೂಕಿಗೆ ಹೋಗುತ್ತಾನೆ. ಸರ್ವ ನಾಶವಾಗಿ ಊರೆಲ್ಲ ಹಾಳಾದರೂ ಕಮತಿಗರ ಕರಿಯಪ್ಪ ಒಡೆಯರ ತೋಟದಲ್ಲಿ ನೆಲೆನಿಂತಿದ್ದಾನೆ. ಪ್ಲೇಗು ಬಂದಾಗ ಅಧಿಕಾರಿಗಳು ಎಷ್ಟು ಒತ್ತಾಯಪಡಿಸಿದರೂ ಪಾರ್ವತೆವ್ವಗೌಡಿತಿ ಮನೆ ಬಿಟ್ಟು ಹೊರಗೆ ಬರಲೊಪ್ಪುವದಿಲ್ಲ. ಲಕ್ಷ್ಮಣನಿಗೆ ಹೊಲದ ಕಬಜಾ ಬಿಟ್ಟುಕೊಡುವದೆಂದರೆ ಪ್ರಾಣವನ್ನೇ ಕೊಟ್ಟಷ್ಟು ದುಃಖವಾಗು ತ್ತದೆ. ಇನ್ನೊಂದು ದೃಷ್ಟಿಯಿಂದ ನೋಡಿದಾಗಲೂ ಇದೇ ಮಾತು ಸ್ಪಷ್ಟವಾಗು ತ್ತದೆ. ಈ ಕಾದಂಬರಿಯಲ್ಲಿ ನಡೆದ ದಾರುಣವಾದ ದುಃಖಗಳಿಗೆ ಕಾರಣವಾದ ವ್ಯಕ್ತಿಗಳಿಗೆ ಊರ ಅಭಿಮಾನವಿಲ್ಲ. ಪಡದಯ್ಯನವರು ಬೇರೆ ಊರಿನಿಂದ ಬಂದ ವರು. ಅದೇ ಊರಿನಿಂದ ಬಂದ ಲಿಂಗಪ್ಪನಿಗೆ ಈ ಊರ ಆಸ್ತಿಯ ಮೇಲೆ ಮಾತ್ರ ಲೋಭವಿದೆ. ಕನಕೇರಿಯ ಗೌಡನಾದ ಬಾಪೂಸಾಹೇಬನಿಗೆ ಅಕ್ಕನ ಆಸ್ತಿ ಜೂಜಾಟದ ಹಣವಾಗಿ ಪರಿಣಮಿಸುತ್ತದೆ. ಇಲ್ಲಿಯ ಕಲಹ ನಡೆದದ್ದೇ ಈ ಎರಡು ಬಣಗಳ ನಡುವೆ. ಪಾದಳ್ಳಿಯವನೇ ಆಗಿದ್ದರೂ ಸ್ವಾರ್ಥಸಾಧನೆಯ ಅವಸರದಲ್ಲಿ ಶೇಷಪ್ಪ ಅಭಿಮಾನವನ್ನೇ ತೊರೆದು ನಿಂತಿದ್ದಾನೆ.

ಈ ಕಾದಂಬರಿಯ ಸ್ತ್ರೀಪಾತ್ರಗಳ ವಿಷಯವಾಗಿಯೂ ಒಂದು ಮಾತು ಹೇಳಬೇಕು. ಆಗಿನ ಕಾಲದ ಸಾರ್ವಜನಿಕ ಜೀವನದಲ್ಲಿ ಹೆಣ್ಣು ಪಾತ್ರ ವಹಿಸು ವದೇ ಅಪರೂಪವಾಗಿತ್ತು. ಅಂತೆಯೇ ಇಲ್ಲಿ ಸ್ತ್ರೀಯರು ಹೆಚ್ಚಾಗಿ ಕಾಣಬರುವ ದಿಲ್ಲ. ಆದರೆ ಇಲ್ಲಿ ಕಂಡುಬರುವ ಸ್ತ್ರೀಯರ ವ್ಯಕ್ತಿತ್ವವೇ ಅಪೂರ್ವವಾಗಿದೆ. ಪುತಳಾಬಾಯಿಯ ಅದ್ಭುತ ಸಂಯಮ ಹಾಗೂ ಶಕ್ತಿಗಳು ಗ್ರೀಕ್ ನಾಟಕದ ನಾಯಿಕೆಯರನ್ನು ನೆನಪುಮಾಡಿಕೊಡುತ್ತವೆ. ಚಿಮಣಾ ಕೊನೆಯ ವರೆಗೂ ಶೋಕದ ಮೂರ್ತಿಯಾಗಿಯೇ ಕಂಡರೂ ಜೀವನದ ಕೆಚ್ಚು ಅವಳಲ್ಲಿಯೂ ಕಡಿಮೆಯಾಗಿಲ್ಲ. ಬಾಳಾಚಾರ್ಯರ ಜೀವನಪ್ರವಾಹದಲ್ಲಿ ಗುಪ್ತಗಾಮಿನಿಯಾಗಿ ರುವ ಅವರ ಪತ್ನಿಯ ಜೀವನ ಅಷ್ಟೇ ಪವಿತ್ರವಾಗಿದೆ. ಇನ್ನು ಮಾದರ ಮಲ್ಲಿ, ಹಾಗೂ ಚಂದ್ರಿಯಂಥವರು ಹೇಳಿಕೇಳಿ ಸಾರ್ವಜನಿಕ ವ್ಯಕ್ತಿಗಳು. ಆದರೆ ಅವರಲ್ಲಿಯೂ ಹೆಣ್ಣುತನ ಅಳಿಸಿಲ್ಲ. ನದಿಯ ದಂಡೆಯ ಮೇಲೆ ಊರ ಇತಿಹಾಸ ವನ್ನೆಲ್ಲ ಒಗೆದು ಒಣಹಾಕುವ ಗರತಿಯರು ಸುತ್ತಲಿನ ಸಂಗತಿಗಳ ಮೇಲೆ ಕಾವ್ಯ ಮಯವಾದ ಭಾಷ್ಯವನ್ನೇ ಬರೆಯುತ್ತಾರೆ. ದಿಟ್ಟತನದಿಂದ ಪಡದಯ್ಯನವರ ವಿರುದ್ಧವಾಗಿ ಸಾಕ್ಷಿ ಕೊಟ್ಟ ದಾನವ್ವ, ಒಂದೇ ಪ್ರಕರಣದಲ್ಲಿ ಕಂಡುಬಂದರೂ

ಸ್ಮರಣೀಯಳಾಗುತ್ತಾಳೆ. ಬಾಪೂಸಾಹೇಬನ ಹೆಂಡತಿಯಾದ ರತ್ನಾಳ ವೀರಶ್ರೀಯೂ ಅಷ್ಟೇ ಗಮನಾರ್ಹವಾಗಿದೆ.

೪

ಅಂತೆಯೇ ಇಲ್ಲಿಯ ಪಾತ್ರಸೃಷ್ಟಿ ಎಷ್ಟೇ ವೈವಿಧ್ಯಪೂರ್ಣವಾಗಿದ್ದರೂ ಕೂಡ, ಇಲ್ಲಿ ಕತೆಯ ಸಂವಿಧಾನವೇ ಮುಖ್ಯವಾದದ್ದು. ಜೀವನದ ಸಮಗ್ರಚಿತ್ರವನ್ನು ಆದಷ್ಟು ವಾಸ್ತವವಾಗಿ ನಿರೂಪಿಸುವದೇ ಲೇಖಕರ ಉದ್ದೇಶವಾಗಿದೆ. ಪಾದಳ್ಳಿಯ ದುರಂತವೇ ಈ ಕಾದಂಬರಿಯ ಮಧ್ಯವರ್ತಿಯಾದ ವಿಷಯ. ಪ್ರಾರಂಭದಲ್ಲಿಯೇ ಜಾಗೀರದಾರರ ಗೃಹಕಲಹ ಈ ದುರಂತದ ಬೀಜವನ್ನು ಬಿತ್ತಿದೆ. ಚಿಮಣಾಳ ಪ್ರಕರಣದಿಂದ ಮೊದಲುಗೊಂಡು ಮುಂದಿನ ಎಲ್ಲ ಘಟನೆಗಳೂ ಅನಿವಾರ್ಯವಾಗಿ ಕತೆಯನ್ನು ದುರಂತದ ಕಡೆಗೇ ಎಳೆಯುತ್ತವೆ. ಶೀಪಪ್ಪ ಹಾಗೂ ಪಡದಯ್ಯನಂಥವರು ಈ ದುರಂತದ ಕ್ರಿಯಾಶೀಲ ಪ್ರತಿನಿಧಿಗಳಾಗಿದ್ದಾರೆ. ಯಾವ ಒಳ್ಳೆಯದಕ್ಕೂ ಕೆಡುಕಿನ ಬಣ್ಣವನ್ನು ಅವರು ಕೊಡಬಲ್ಲರು. ತಿಳಿಯಾದ ಜೀವನವನ್ನು ಕಲಕುವದೇ ಅವರ ಜೀವನಧ್ಯೇಯವಾಗಿದೆ. ಕಳವು, ಕೊಲೆ, ಹೆಣ್ಣಿನ ಮಾನಭಂಗ ಮೊದಲಾದ ಘೋರ ಕೃತ್ಯಗಳಿಗೆಲ್ಲ ಇವರು ಪ್ರೇರಕಶಕ್ತಿಯಾಗಿದ್ದಾರೆ. ಅವರ ಕಾರ್ಯಗಳೆಲ್ಲ ನೇರವಾಗಿ ವಿನಾಶದ ದಾರಿಯನ್ನು ತುಳಿಯುತ್ತವೆ.

ಆದರೆ ಇದಕ್ಕೂ ಹೆಚ್ಚಿನ ದುರಂತ ಇಲ್ಲಿಯ ಒಳ್ಳೆಯ ಪಾತ್ರಗಳಲ್ಲಿಯೇ ಅಡಗಿದೆ. ಎಷ್ಟು ನಿಲ್ಲಿಸಬೇಕೆಂದರೂ ಜನರ ಅವಿವೇಕ ಬಾಳಾಚಾರ್ಯರ ಕೈಯಿಂದ ನುಸುಳಿ ಹೋಗುತ್ತದೆ. ಅವರಿಗೆ ಹೃದಯಸಂಸ್ಕಾರವಿದೆ, ಶೀಲದ ಬಲವಿದೆ, ಆದರೂ ಅವರು ದುರ್ಬಲರಾಗಿದ್ದಾರೆ. ಶಂಕರಪ್ಪಗೌಡರ ಜಿದ್ದಿನ ಸ್ವಭಾವ ಅವರ ಎಲ್ಲ ಸದ್ಗುಣಗಳನ್ನೂ ಹಾಳುಮಾಡಿದೆ. ದಾದಾನಲ್ಲಿ ಅಸಾಮಾನ್ಯವಾದ ಬಲವೇನೋ ಇದೆ. ಆದರೆ ಅವನಿಗೆ ವಿವೇಕದ ಬಲವಿಲ್ಲ. ದುರಂತ ನೆರೆ ಬಂದ ಹೊಳೆಯಂತೆ ಕೊಚ್ಚಿಕೊಂಡು ಹೋಗುತ್ತದೆ.

ಇದಕ್ಕನುಗುಣವಾಗಿಯೇ ಕತೆಯ ಸಂವಿಧಾನ ಹಬ್ಬಿದೆ. ಒಂದು ಘಟನೆಯ ಒಡಲಿನಲ್ಲಿಯೇ ಇನ್ನೊಂದು ಘಟನೆ ಕವಲೊಡೆಯುವ ರೀತಿಯನ್ನು ಲೇಖಕರು ಅದ್ಭುತವಾಗಿ ತೋರಿಸಿದ್ದಾರೆ. ದಾದಾನ ಮರಣ ಎಷ್ಟೋ ಸಂಗತಿಗಳಿಗೆ ಕಾರಣ

ವಾಗುತ್ತದೆ. ಫೌಜದಾರರ ಆಗಮನದಿಂದಂತೂ ಪಾದಳ್ಳಿಯ ಜೀವನ ಬೇರೆ ದಿಕ್ಕಿಗೆ ತಿರುಗುತ್ತದೆ. ಅನಿರೀಕ್ಷಿತವಾಗಿ ಪ್ರತಿಯೊಂದು ಸನ್ನಿವೇಶಕ್ಕೂ ಹೊಸ ದಾರಿಯನ್ನು ಕತೆ ಹಿಡಿಯುತ್ತಿರುವಾಗ ಸಂಸ್ಕೃತ ಗದ್ಯಕಾವ್ಯಗಳ ನೆನೆಪಾಗದೆ ಇರದು. ಬಾಪೂ ಸಾಹೇಬ ಪ್ರೀತಿಸಿದ್ದ ಚಿಮಣಾ ಪಡದಯ್ಯನವರಿಗೆ ಬಲಿಯಾಗುತ್ತಾಳೆ. ಹೊಲ ಗೇರಿಯಲ್ಲಿ ಬಾಳ್ಯಾನ ಶವವನ್ನು ಕಂಡ ಶಂಕರಪ್ಪಗೌಡರು ಮುಂದೆ ಅದೇ ದಾರಿ ಯನ್ನು ಹಿಡಿಯುತ್ತಾರೆಂದು ಯಾರು ಬಲ್ಲರು? ಚಾವಡಿಯಲ್ಲಿ ದಾದಾನ ವಿಚಾರಣೆ ನಡೆದದ್ದನ್ನು ಕೇಳಿ ಪುತಳಾಬಾಯಿ ಆತ್ಮಹತ್ಯೆ ಮಾಡಿಕೊಳ್ಳು ತ್ತಾಳೆ. ಜಿನ್ನಪ್ಪ ಊರು ಬಿಟ್ಟು ಹೋದಾಗ ಅವನ ಬಣಿವೆ ಬೆಂಕಿಗಾಹುತಿ ಯಾಗುತ್ತದೆ; ಅದೇ ಕಾರಣವಾಗಿ ಪಡದಯ್ಯನವರು ಊರು ಬಿಡಬೇಕಾಗುತ್ತದೆ. ಕನ್ನಡ ಲಿಪಿಯ ಪರಿಚಯವಿಲ್ಲದ ಬಾಳಾಚಾರ್ಯರು, ಶ್ಯಾಮರಾಯನ ವಿರುದ್ಧ ಶೇಷಪ್ಪ ಮಾಡಿದ ಅರ್ಜಿಗೆ ಸಹಿ ಹಾಕುತ್ತಾರೆ. ತನ್ನ ಮನೆತನವನ್ನು ಎದೆ ಗೊಟ್ಟು ರಕ್ಷಿಸಿದ ದಾದಾನನ್ನು ಪಾರ್ವತೆವ್ವ ಮನೆಬಿಟ್ಟು ಹೊರಗೆ ಹಾಕುತ್ತಾಳೆ. ಆದರೆ ಯಾವ ಘಟನೆಯೂ ಅಸಹಜವಾಗಿ ನಡೆಯುವದಿಲ್ಲ. ನಡೆಯುವದಕ್ಕೆ ಅವಕಾಶವೂ ಇಲ್ಲ.

ಸಂವಿಧಾನದ ಹಬ್ಬುಗೆಯಲ್ಲಿ ಇನ್ನೊಂದು ಹೊಸತನವನ್ನೂ ಇಲ್ಲಿ ಕಾಣ ಬಹುದಾಗಿದೆ. ಒಂದೇ ಸಮಯಕ್ಕೆ ಐದಾರು ಘಟನೆಗಳು ಜರುಗಿಹೋಗುತ್ತವೆ. ಒಂದಕ್ಕೊಂದು ವಿರುದ್ಧವಾಗಿದ್ದರೂ ಕತೆಯ ಭಾವಲಹರಿಗೆ ಅವು ಕುಂದು ತರುವ ದಿಲ್ಲ. ಫೌಜದಾರರು ಊರಿಗೆ ಬಂದಾಗ, ರಾತ್ರಿ ನಡೆಯುವ ಘಟನೆಗಳನ್ನು ವಾಚ ಕರು ಲೆಕ್ಕ ಹಾಕಬೇಕು. ಮುಂದೆ ಏನಾಗುವದೋ ಎಂಬ ಹೆದರಿಕೆಯಲ್ಲಿ ಶಂಕ ರಪ್ಪಗೌಡರು ಹಾಗೂ ಬಾಳಾಚಾರ್ಯರು ಚಿಂತೆಯಲ್ಲಿ ತೊಡಗಿದ್ದಾರೆ. ಪುತಳಾ ಬಾಯಿ ವಾಡೆಯ ಕೋಣೆಯಲ್ಲಿ ಆತ್ಮಹತ್ಯೆಯ ವಿಚಾರದಲ್ಲಿ ಮಗ್ನಳಾಗಿದ್ದಾಳೆ. ಚಾವಡಿಯ ಸೆರೆಮನೆಯಲ್ಲಿ ದಾದಾ ಅಸ್ಪಷ್ಟನಾಗಿ ಹೊರಳಾಡುತ್ತಿದ್ದಾನೆ. ಮಠ ದಲ್ಲಿ ಪಡದಯ್ಯನವರ ಸಮ್ಮುಖದಲ್ಲಿ ಕೆಂಚ ವಿನೋದಪೂರ್ಣವಾದ ಕತೆಯನ್ನು ಹೇಳುತ್ತ ಸನ್ನಿವೇಶದ ಗಂಭೀರತೆಯನ್ನು ಹೆಚ್ಚಿಸುತ್ತಾನೆ. ಅದೇ ಮಠದ ಅಂತ ರಂಗದ ಕೋಣೆಯಲ್ಲಿ ಚಿಮಣಾ ತನ್ನ ಬಾಳಿನ ಬಗೆಯ ನೋವನ್ನು ಅನುಭವಿಸು ತ್ತಿದ್ದಾಳೆ ಇವೆಲ್ಲ ಸಂಗತಿಗಳನ್ನು ಒಂದುಗೂಡಿಸಲೆಂದೋ ಏನೋ ರಾತ್ರಿ ಪಾದಳ್ಳಿಯನ್ನೇ ತನ್ನ ಮುಸುಕಿನಲ್ಲಿ ಮಲಗಿಸಿಕೊಂಡಿದೆ.

ಕೊನೆಯ ಭಾಗದಲ್ಲಿಯಂತೂ ಈ ಸನ್ನಿವೇಶಗಳ ವಿತರಣೆಯಲ್ಲಿ ಲೇಖಕರು ಅಪೂರ್ವಕೌಶಲವನ್ನು ತೋರಿಸಿದ್ದಾರೆ. ಮಹಾರಾಜರು ಊರು ಬಿಟ್ಟು ಹೋದೊಡನೆ ಪಾದಳ್ಳಿಯ ಅಂತರಂಗದಲ್ಲಿದ್ದ ವಿಕಾರಗಳೆಲ್ಲ ಹೊರಬೀಳುತ್ತವೆ. ಊರು ಬಿಟ್ಟು ಹೋಗಿದ್ದ ಪಡದಯ್ಯ ಹಾಗೂ ಲಿಂಗಪ್ಪಗೌಡರು ಮತ್ತೆ ತಮ್ಮ ತಮ್ಮ ಸ್ಥಾನಗಳಲ್ಲಿ ಪ್ರಸ್ಥಾಪಿತರಾಗಿದ್ದಾರೆ. ಬಾಳಾಚಾರ್ಯರು ಕೈ ಸೋತಂತವರಾಗಿದ್ದಾರೆ. ಲಿಂಗಪ್ಪಗೌಡನೇ ಈ ಭಾಗದ ನಾಯಕನಾಗಿ (?) ಪಾದಳ್ಳಿಯ ಆಸ್ತಿಯನ್ನು ನುಂಗಲು ಹವಣಿಸುತ್ತಿದ್ದಾನೆ. ಸ್ವಭಾವತಃ ದುರ್ಬಲನಾದ ಅವನಿಗೂ ಪರಿಸ್ಥಿತಿ ಇಲ್ಲದ ಬಲವನ್ನು ತಂದುಕೊಟ್ಟಿದೆ. ಪರಿಸ್ಥಿತಿ ದೈವದಷ್ಟೇ ದುರ್ದಮ್ಯ ಶಕ್ತಿಯಾಗಿದೆ. ಶಿವಯೋಗಿಸ್ವಾಮಿಗಳು ಉರು ಬಿಟ್ಟು ತೆರಳುತ್ತಾರೆ. ವೈಯಕ್ತಿಕ ಶಕ್ತಿಗಳೆಲ್ಲ ಒಂದೊಂದಾಗಿ ನಿಸ್ಸತ್ವವಾಗುತ್ತಿರುವಾಗಲೇ ಪರಿಸ್ಥಿತಿ ಕ್ರಮೇಣ ಮೋಡ ಮುಸುಕಿದಂತೆ ಮುಸುಕುತ್ತದೆ. ವ್ಯಕ್ತಿಗಳೆಲ್ಲ ಅದರ ಬಲೆಯಲ್ಲಿ ಸಿಕ್ಕು ಒದ್ದಾಡುತ್ತಿದ್ದಾರೆ. ಕೊನೆಗೆ ಅದಕ್ಕೆ ಶರಣಾಗದೆ ವಿಧಿಯಿಲ್ಲ. ತಾಂತ್ರಿಕವಾಗಿ ಕೂಡ ಇಲ್ಲಿ ವಾತಾವರಣದಲ್ಲಿ ಪಾತ್ರಸೃಷ್ಟಿ ಕರಗಿಹೋಗುತ್ತದೆ.

ಸಂವಿಧಾನದಂತೆಯೇ ವಾತಾವರಣಸೃಷ್ಟಿಯೂ ಈ ಕಾದಂಬರಿಯ ಮಹತ್ವದ ಅಂಗವಾಗಿದೆ. ವರ್ಣನಾತ್ಮಕ ಭಾಗಗಳು ವಿರಳವಾಗಿದ್ದಂತೆ ಕಂಡುಬರುತ್ತವೆ. ಆದರೂ ವಾತಾವರಣಸೃಷ್ಟಿಯೆಲ್ಲ ಸೂಕ್ಷ್ಮವಾಗಿ ಇದ್ದೇ ಇದೆ. ಶಂಕರಪ್ಪಗೌಡರು ಹೊಲಗೇರಿಯಲ್ಲಿ ಬಾಳ್ಯಾನ ಹೆಣವನ್ನು ನೋಡಿದಾಗಿನ ಮಧ್ಯಾಹ್ನದ ವರ್ಣನೆ, ಗೌಡರ ಹೊಲದ ಬೆಳೆಯನ್ನು ಲೂಟಿ ಮಾಡಲು ಬಂದಾಗಿನ ಬೆಳದಿಂಗಳ ವರ್ಣನೆ, ಹೋಳಿಹುಣ್ಣಿಮೆಯ ವಿನೋದಪೂರ್ಣಚಿತ್ರ, ಚಿನ್ನಪ್ಪನ ಚಕ್ಕಡಿ ಪಾದಳ್ಳಿಗೆ ಹಿಂದಿರುಗಿದಾಗ ಮುಂಗಾರಿಯ ಮಳೆಯ ವರ್ಣನೆ ಇವೆಲ್ಲ ಸತ್ವಪೂರ್ಣವಾಗಿರುವವಲ್ಲದೆ, ಅರ್ಥಪೂರ್ಣವೂ ಆಗಿವೆ. ೪೬--೪೭ ನೆಯ ಪ್ರಕರಣಗಳಂತೂ ವಾತಾವರಣಸೃಷ್ಟಿಗೆ ಶ್ರೇಷ್ಠ ಮಾದರಿಗಳಾಗಿವೆ. ಆಚಾರ್ಯರ ಪತ್ನಿ ತೀರಿಕೊಂಡ ಸನ್ನಿವೇಶವನ್ನು ಇಲ್ಲಿ ನೆನೆಯಬಹುದು. ಅಖಂಡವಾಗಿ ಸುರಿಯುತ್ತಿರುವ ಮಳೆ, ನೆನೆದು ಬಿದ್ದ ಗೋಡೆಗಳು, ಉಕ್ಕಿಬಂದ ನದಿ, ಕತ್ತಲೆ, ಆಚಾರ್ಯರು ಸ್ನಾನಮಾಡಿ ತಿರುಗಿ ಬರುವಾಗ ನುಡಿಯುತ್ತಿರುವ ಗೀತೆಯ ಶ್ಲೋಕಗಳು,— ಈ ವಿವರಗಳೆಲ್ಲ ಸನ್ನಿವೇಶದ ದಾರುಣವನ್ನು ಭಯಾನಕವಾಗಿ ಚಿತ್ರಿಸುತ್ತವೆ. ಲಿಂಗಪ್ಪಗೌಡ ಚಮ-ನಾಳನ್ನು ವಶಪಡಿಸಿಕೊಳ್ಳಲು ನಡೆದ ಸನ್ನಿವೇಶವಂತೂ ನಡುಗು ಹುಟ್ಟಿಸು

ವಂತಿದೆ. ಊರ ತುಂಬ ನಡೆದ ಭಜನೆ, ಮಾಯಪ್ಪನ ತತ್ವಪದ, ಶ್ರಾವಣಮಾಸದ ರಾತ್ರಿ, ಪಿಡುಗಿನ ಕಪ್ಪುನೆರಳು,— ಇದಕ್ಕಿಂತ ಭೀಕರವಾದ ಹಿನ್ನೆಲೆ ಬೇರೆಲ್ಲಿಯೂ ದೊರೆಯಲಾರದು. ವರ್ಣನೆಯ ಈ ಸತ್ವಯುತವಾದ ವಿವರಗಳು ಕತೆಯನ್ನು ನೆಲದಿಂದ ಮುಗಿಲಿಗೊಯ್ಯಬಲ್ಲವು.

ಜೀವನದ ಮರೆಗೆ ನಿಂತು ಆಟವಾಡುವ ಅದೃಷ್ಟವನ್ನೂ ಹೀಗೆಯೇ ವಾತಾವರಣ ಸೃಷ್ಟಿಯ ಮೂಲಕ ಲೇಖಕರು ಸೂಚಿಸಿದ್ದಾರೆ. ಅಂಥ ಪ್ರಸಂಗಗಳಲ್ಲೆಲ್ಲ ಸನ್ನಿವೇಶರಚನೆಯಲ್ಲಿ ಅಗಾಧವಾದ ಧ್ವನಿಸಾಮರ್ಥ್ಯವನ್ನೂ ತೋರಿದ್ದಾರೆ. ಕಾ:ಲರಾ ಪಿಡುಗಿನಲ್ಲಿ ಬಾಳಾಚಾರ್ಯರ ಚಕ್ರಾಣಿಬೇರು, ಸವೆದು ಹೋಗುವ ಜೀವನಕ್ಕೆ ಸಂಕೇತವಾದಂತಿದೆ. ಗೌಡರ ಬೆಳೆಯನ್ನು ಲೂಟಿ ಮಾಡಿದಾಗ ಹುಟ್ಟಿದ ಶಂಕರಪ್ಪಗೌಡರ ದೆವ್ವದ ಕತೆ ಸುಪ್ತಭೀತಿಯ ಕಲ್ಪಕತೆಯನ್ನು ಎತ್ತಿತೋರಿಸುತ್ತದೆ. ಚಾವಡಿಯಲ್ಲಿ ಮಲಗಿದ್ದ ವಾಲೀಕಾರ ಮಲ್ಲನ ಕಿವಿಗೆ ಬಿದ್ದ ಗೂಗೆಯ ಕೂಗು, ಭವಿಷ್ಯವಾಣಿಯಾಗುತ್ತದೆ. ಶಿವಯೋಗಿಗಳು ಕಣಿಹೇಳಿದ ಮಾತು ಪಾದಳ್ಳಿಯ ಅವನತಿಯ ಇತಿಹಾಸವನ್ನೇ ಪೋಣಿಸುವ ಸೂತ್ರವಾಗಿದೆ. ಇನ್ನೂ ಬೇಕಾದಷ್ಟು ಉದಾಹರಣೆಗಳು ಕಾದಂಬರಿಯಲ್ಲಿ ದೊರೆಯುಬಹುದು.

ರಚನೆಯ ದೃಷ್ಟಿಯಿಂದ ಇನ್ನೊಂದು ವಿಶೇಷ ಅಂಶವನ್ನು ಇಲ್ಲಿ ಗಮನಿಸಬಹುದು. ಕತೆ, ಉಳಿದೆಲ್ಲ ಕತೆಗಳಂತೆ ಸರಳರೇಖೆಯಲ್ಲಿ ಸಾಗಿದೆ. ಪಾತ್ರಗಳ ಬೆನ್ನು ಹತ್ತಿ ಈ ಗತಿಯನ್ನು ಅನುಸರಿಸಬಹುದು. ಆದರೆ ಕಾದಂಬರಿಗೆ ಇನ್ನೊಂದು ಗತಿಯೂ ಇದೆ. ಕ್ರಮವಾಗಿ ಸಾಗಿದ ಸನ್ನಿವೇಶಗಳ ಮಧ್ಯದಲ್ಲಿಯೇ ನುಸುಳಿ ಮತ್ತೊಂದು ಸನ್ನಿವೇಶದ ಮೂಲಕ ಅವುಗಳ ರಹಸ್ಯವನ್ನು ಹೊಳೆಯಿಸುವ ಪ್ರಯತ್ನ ಇಲ್ಲಿದೆ. ಅಂಥ ಸಂದರ್ಭಗಳಲ್ಲಿ ಕತೆ ತನ್ನ ಸುತ್ತು ತಾನೇ ತಿರುಗಿ ಚಕ್ರವ್ಯೂಹವನ್ನು ಸೃಷ್ಟಿಸುತ್ತದೆ. ಫೌಜದಾರರು ಊರಿಗೆ ಬಂದು ಪರಿಸ್ಥಿತಿ ತೊಡಕಿನಿಂದ ಕೂಡಿದಾಗ ಬಾಳಾಚಾರ್ಯರ ಹಳೆಯ ನೆನಪುಗಳು ಅದಕ್ಕೆ ಕಾರಣ ಪರಂಪರೆಯನ್ನೊದಗಿಸುತ್ತವೆ. ಪುತಳಾಬಾಯಿಯ ಜೀವನದಿತಿಹಾಸ ಅನಿರೀಕ್ಷಿತವಾಗಿ ಪ್ರಕಟವಾಗಿ ನಾನಾನ ಮರಣದ ರಹಸ್ಯದ ಮೇಲಿರುವ ತೆರೆಯನ್ನು ಸರಿಸುತ್ತದೆ. ಆದರೆ ಎಲ್ಲಿಯೂ ವಿಷಯಾಂತರವಾಗಿಲ್ಲವೆಂಬುದೇ ಇಲ್ಲಿಯ ಮಹತ್ವ. ಲೇಖಕರ ಆಳವಾದ ವಸ್ತುಪ್ರಜ್ಞೆಯ ಬೆಳಕಿನಲ್ಲಿ ಕಂಡ ಪ್ರತಿಯೊಂದು ವಿವರವೂ ಮೂಲಕಥೆಯ ಅಂಗದಲ್ಲಿ ಸಹಜವಾಗಿಯೇ ಸೇರಿಬಿಡುತ್ತದೆ.

೫

ಇನ್ನು ಶೈಲಿಯ ವಿಷಯವಾಗಿ ಒಂದೆರಡು ಮಾತುಗಳನ್ನು ಹೇಳಬಹುದು. ಸಾಮಾನ್ಯವಾಗಿ ಲೇಖಕರು ಕಾದಂಬರಿಗೆ ಆದರ್ಶಪ್ರಾಯವಾದ ಸರಳತೆಯನ್ನೇ ಅವಲಂಬಿಸಿದ್ದಾರೆ. ಕ್ಲಿಷ್ಟತೆಗಾಗಲಿ, ಚಮತ್ಕಾರಕ್ಕಾಗಲಿ ಇಲ್ಲಿ ಆಸ್ಪದವಿಲ್ಲ. ಉತ್ಕಟ ಪ್ರಸಂಗಗಳಲ್ಲಿ ಸಹಜವಾಗಿಯೇ ಭಾಷೆ ಕಾವ್ಯಮಯವಾಗುತ್ತದೆ. ಅಲ್ಲಲ್ಲಿ ಸಹಜವಾದ ಉಪಮೆ ರೂಪಕಗಳು, ಜಾಣ್ಣುಡಿಗಳು ಶೈಲಿಯ ಕಾಂತಿಯನ್ನು ಹೆಚ್ಚಿಸುತ್ತವೆ. ಆದರೆ ಮುಖ್ಯವಾಗಿ ಸಂವಾದರಚನೆಯಲ್ಲಿ ಲೇಖಕರ ಕೌಶಲ ವನ್ನು ಮೆಚ್ಚಲೇಬೇಕು. ಸಂಭಾಷಣೆಗಳೆಲ್ಲ ಬಳಕೆ-ಮಾತಿನಲ್ಲಿಯೇ ಬರೆಯಲ್ಪ ಟ್ಟಿವೆ. ದೇಶಿ-ನುಡಿಯ ತಿರುಳು ಶೈಲಿಯ ನೇಯ್ಗೆಯಲ್ಲಿ ಗಟ್ಟಿಯಾದ ಎಳೆಗಳನ್ನು ಕೂಡಿಸುತ್ತದೆ. ಈ ಬಗೆಯ ಬರವಣಿಗೆ ಈಗ ಹೆಚ್ಚು ಲೋಕಪ್ರಿಯವಾಗು ತ್ತಿದೆ. 'ರಾವಬಹಾದ್ದೂರ'ರು ಇದಕ್ಕೂ ಒಂದು ಹೆಜ್ಜೆ ಮುಂದೆ ಹೋಗಿದ್ದಾರೆ. ನಾಟಕೀಯವಾದ ಸನ್ನಿವೇಶಗಳಲ್ಲಿ ಲೇಖಕರು ಆಯಾ ಪಾತ್ರಗಳಿಗನುಗುಣ ವಾಗುವಂತೆ ವಿವಿಧ ಶೈಲಿಯನ್ನುಪಯೋಗಿಸಿದ್ದಾರೆ. ಮೂರನೆಯ ಪ್ರಕರಣದಲ್ಲಿ ನದಿಯ ತೀರದಲ್ಲಿ ಹೆಂಗಳೆಯರಾಡುವ ಮಾತುಗಳು ತಾಯನೆಲದಿಂದಲೇ ಅರಳಿ ಬಂದಿವೆ. ಈ ಕಾದಂಬರಿಯಲ್ಲಿಯ ನಾಲ್ಕಾರು ವ್ಯಕ್ತಿಗಳಂತೂ ಶ್ರೇಷ್ಠತರಗತಿಯ ಮಾತುಗಾರರು. ಮಾದರ ಚನ್ನನ ಮಾತುಗಳಿಗೆ ಬಯಲಾಟದ ಭಾಷೆಯ ಲಯ ವಿದೆ. ಮಠದಲ್ಲಿ ಇಪ್ಪತ್ತುನಾಲ್ಕು ತಾಸೂ ಧ್ಯಾನಮಗ್ನನಾದ ಕೆಂಚ ಗಾಂಜಿಯ ಅಮಲಿನಲ್ಲಿ ಲೋಕೋತ್ತರವಾದ ಕಾವ್ಯವನ್ನು ಸೃಷ್ಟಿಸಬಲ್ಲ. ಈ ಎರಡು ಪಾತ್ರ ಗಳ ವಿನೋದ, ವಿದಗ್ಧತೆಯ ಮಟ್ಟವನ್ನೂ ಮುಟ್ಟಬಲ್ಲದು. 'ರಾವಬಹಾದ್ದೂರ'ರ ವಿನೋದಪರಂಪರೆ ದಿ. ಕೌಜಲಗಿ ಹಣಮಂತರಾಯರಿಂದ ನಡೆದುಬಂದದ್ದು. ಜಗತ್ತಿನ ಮರುಳಾಟ ಆ ವಿನೋದಕ್ಕೆ ಪ್ರಾಣವಾಗಿದ್ದರೆ ಚತುರೋಕ್ತಿ ಅದರ ದೇಹವಾಗಿದೆ. ಶಂಕರಪ್ಪಗೌಡರ ಪರ್ವೋದ್ಭೃತ ಮಾತುಗಾರಿಕೆ, ಚಂದ್ರಿಯ ಬಿನ್ನಾಣದ ನುಡಿಗಳು, ಪಡಸಯ್ಯನವರ ದಾಂಭಿಕತೆಯ ಮನಸೆಳೆಯುವ ವಾಗ್ವೈಖರಿ, ಶೇಷಪ್ಪನ ಕಾಯದೆಪಾಂಡಿತ್ಯದ ಉಕ್ತಿವೈಚಿತ್ರ್ಯ ಇವೆಲ್ಲ ಸ್ವಾಭಾ ವಿಕವಾಗಿಯೇ ಬಣ್ಣಗೊಂಡು ಬಂದಿವೆ. ಆದರೆ ಫಕರುದ್ದೀನಸಾಹೇಬ, ಗಿಬ್ಸನ್, ಮಹಾರಾಜರು ಇಂಥ ಅನ್ಯದೇಶೀಯ ವ್ಯಕ್ತಿಗಳ ವಿಷಯದಲ್ಲಿ ಮಾತ್ರ ಸಂಭಾ ಷಣೆ ಯಶಸ್ವಿಯಾಗಿಲ್ಲ.

೬

ಇಲ್ಲಿಯ ವರೆಗೆ ನಾನು ಮಾಡಿದ್ದು ವಿಮರ್ಶೆಯೆಂದು ಮಾತ್ರ ಯಾರೂ ತಿಳಿಯಬಾರದು. ಯಾವ ಕೃತಿಯೂ ಹುಟ್ಟಿದೊಡನೆ ತನ್ನ ಬೆಲೆಯನ್ನು ಕಟ್ಟಿಕೊಂಡು ಬರಲಾರದು. ಬರೆದು ಸಿದ್ಧವಾದ ಮೇಲೂ ಕೂಡ ಗ್ರಂಥ ಬೆಳೆಯುತ್ತಲೇ ಹೋಗುತ್ತದೆ. ಕಾಲಕ್ರಮದಂತೆ ಅದಕ್ಕೆ ಉತ್ಕರ್ಷವೋ ಅವನತಿಯೋ ಬರಬೇಕು. ಇಪ್ಪತ್ತನೆಯ ಶತಮಾನದ ಶೇಕ್ಸಪೀಯರ ಹದಿನೇಳನೆಯ ಶತಮಾನದ ಶೇಕ್ಸಪಿಯರನಿಗಿಂತ ದೊಡ್ಡವನಾಗಿದ್ದಾನೆಂದು ಅವನ ಮೇಲಿನ ವಿಮರ್ಶೆಯ ಇತಿಹಾಸವೇ ಸಾರುತ್ತದೆ. ತಮ್ಮ ಕಾಲಕ್ಕೆ ದೊಡ್ಡವರೆಂದೆನಿಸಿಕೊಂಡ ಭಾರವಿ, ಮಾಘ ಮೊದಲಾದ ಕವಿಗಳು ಸದ್ಯಕ್ಕೆ ತಮ್ಮ ಯಶಸ್ಸಿನ ಸ್ವರ್ಣಪೀಠವನ್ನು, ಇನ್ನಾರಿಗೋ ಬಿಟ್ಟುಕೊಟ್ಟಿದ್ದಾರೆ. ಅಂದಮೇಲೆ 'ರಾವಬಹಾದ್ದೂರ'ರ ಈ ಕೃತಿಯ ಮೇಲೆ ಕೊನೆಯ ನಿರ್ಣಯವನ್ನುಮುನ್ನುಡಿಯ ಮುಖಾಂತರ ಹೇಗೆ ಹೇಳಬಹುದು? ಮೊದಲೇ ಹೇಳಿದಂತೆ ನನಗೂ ಈ ಕಾದಂಬರಿಗೂ ಒಂದು ಹಾರ್ದಿಕವಾದ ಸಂಬಂಧವಿದೆ. ಈ ಕತೆಯ ವಾತಾವರಣದಲ್ಲಿ ನಾನು ಉಸಿರಾಡಿಸಿದ್ದೇನೆ; ಇಲ್ಲಿಯ ವ್ಯಕ್ತಿಗಳ ಸುಖ-ದುಃಖಗಳೊಂದಿಗೆ ಸಮರಸನಾಗಿದ್ದೇನೆ; ಪಾದಳ್ಳಿಯ ಸರ್ವನಾಶವನ್ನು ಕಂಡು ಬೆರಗಾಗಿದ್ದೇನೆ. ಇಷ್ಟು ಹತ್ತಿರದಿಂದ ನೋಡಿದ ನಾನು ಈ ಕೃತಿಯ ಯೋಗ್ಯತೆಯನ್ನು ಹೇಳಲು ಸಮರ್ಥನಾಗಲಾರೆ. ಬಹಳವಾದರೆ ನನ್ನದು ಅಭ್ಯಾಸದ ದೃಷ್ಟಿ.

ಆ ದೃಷ್ಟಿಯಿಂದಲೇ ಕಾದಂಬರಿಯನ್ನು ನಾನು ಭಿನ್ನಭಿನ್ನವಾಗಿ ನೋಡಿ ಚರ್ಚಿಸಿದ್ದೇನೆ. ಅನೇಕ ವಿಧಗಳಲ್ಲಿ ಈ ಕಾದಂಬರಿ ಮಹತ್ವಪೂರ್ಣವಾಗಿದೆಯೆಂದು ನಾನು ದೃಢವಾಗಿ ನಂಬಿದ್ದೇನೆ. ಕನ್ನಡ ಕಾದಂಬರಿಯಪರಂಪರೆ ಶ್ರೀಮಂತವಾಗಿದೆ. ಗಳಗನಾಥರ, ಬಿ. ವೆಂಕಟಾಚಾರ್ಯರ ಐತಿಹಾಸಿಕ ಪರಂಪರೆಯಿಂದ ಮೊದಲುಗೊಂಡು ಶ್ರೀರಂಗರ 'ಪ್ರಜ್ಞಾಪ್ರವಾಹ'ತಂತ್ರದ ವರೆಗೆ ಅದರ ವ್ಯಾಪ್ತಿಯಿದೆ. ಕುವೆಂಪುರವರ 'ಕಾನೂರು ಸುಬ್ಬಮ್ಮ ಹೆಗ್ಗಡಿತಿ' ಕಾರಂತರ 'ಮರಳಿ ಮಣ್ಣಿಗೆ'–ಇಂಥ ಕೃತಿಗಳು ತಮ್ಮ ವ್ಯಕ್ತಿತ್ವದ ಸಾಮರ್ಥ್ಯದಿಂದಲೇ ಒಂದು ಕಡೆಗೆ ಮೆರೆಯುತ್ತಿದ್ದರೆ - ವಿನಾಯಕರ 'ಸಮರಸವೇ ಜೀವನ' ಕನ್ನಡ ಕಾದಂಬರಿಯ ಬರವಣಿಗೆಯ ಇತಿಹಾಸವನ್ನೇ ನಿರೂಪಿಸುವ ಕೃತಿಯಾಗಿದೆ. ಕನ್ನಡದ ತರುಣ ಲೇಖಕರೆಲ್ಲ ತಮ್ಮ ಪ್ರತಿಭೆಯನ್ನು ಈ ಸಾಹಿತ್ಯರೂಪದ ನಿರ್ಮಾಣಕ್ಕೆ ಧಾರೆಯೆರೆ

ಯುತ್ತಿದ್ದಾರೆ. ಇಂಥ ಉತ್ಸಾಹದ ಕಾಲದಲ್ಲಿ ‘ರಾವಬಹಾದ್ದೂರ’ರ ‘ಗ್ರಾಮಾಯಣ’ ಮೂಡಿ ಬಂದದ್ದು ಸಂತೋಷದ ಮಾತು. ವಾಸ್ತವವಾದದ ಸಂಪ್ರದಾಯವೊಂದು ಕಾದಂಬರಿಯ ಪ್ರಪಂಚದಲ್ಲಿ ಸಾವಕಾಶವಾಗಿ ರೂಪುಗೊಳ್ಳುತ್ತಲಿದೆ. ಈ ಕಾದಂಬರಿ ಆ ಸಂಪ್ರದಾಯಕ್ಕೆ ನೀಡಿದ ಬೆಲೆಯುಳ್ಳ ಕಾಣಿಕೆಯಾಗಿದೆ. ಸಾಮಾನ್ಯವಾಗಿ ನಮ್ಮ ಎಲ್ಲ ಕಾದಂಬರಿಕಾರರೂ ವಾಸ್ತವಮಾರ್ಗಕ್ಕೇ ಸೇರಿದವರಾಗಿದ್ದಾರೆ. ಆದರೆ ನಿಜವಾದ ವಾಸ್ತವಪ್ರಜ್ಞೆಯುಳ್ಳವರು ಎಷ್ಟು ಜನ? ಕೇವಲ ‘ಜನಜೀವನದ ಪ್ರತಿಬಿಂಬ’ವಾದ ವಾಸ್ತವಿಕತೆಯನ್ನು ರೂಪಿಸುವದರಲ್ಲಿಯೇ ನಾವು ತೃಪ್ತಿಗೊಳ್ಳುತ್ತಿದ್ದರೆ ನಮ್ಮ ಮಹತ್ವಾಕಾಂಕ್ಷೆ ನಮ್ಮ ಕೈಯಳತೆಗಿಂತ ದೂರವಿಲ್ಲವೆನ್ನಬೇಕು. ವಾಸ್ತವವಾದ ಸಾಹಿತ್ಯಸೃಷ್ಟಿಯು ಮೂಲಭೂತ ತತ್ವಗಳನ್ನೇ ತಳಹದಿಯಾಗಿ ಇಟ್ಟುಕೊಂಡಿದೆಯೆಂಬ ಮಾತನ್ನು ನಾವು ಮರೆಯಲಾಗದು.

‘ರಾವಬಹಾದ್ದೂರ’ರ ಈ ಕೃತಿ ವಾಸ್ತವಮಾರ್ಗದಲ್ಲಿ ಒಂದು ಹೆಜ್ಜೆಯನ್ನಾದರೂ ಮುಂದಿಟ್ಟಿದೆಯೆನ್ನುವದು ಸಂತೋಷದ ಸಂಗತಿ. ಅವರು ಆಯ್ದುಕೊಂಡ ಕಥಾವಸ್ತು ಬಹಳ ತೊಡಕಿನದು – ಹದಿನೆಂಟು ಜಾತಿಗಳ, ಅನೇಕ ಸ್ವಭಾವಗಳ, ಭಿನ್ನಭಿನ್ನ ಸಂಸ್ಕಾರಗಳ, ನೂರಾರು ಭಾವ-ಲಹರಿಗಳ ಕಲಬೆರಕೆ. ಇವೆಲ್ಲವುಗಳನ್ನೂ ಮೈಗೂಡಿಸಿಕೊಂಡ ಕತೆ ಅನೇಕ ಗತಿಗಳಲ್ಲಿ ಮುಂದುವರಿಯುತ್ತದೆ. ಇವೆಲ್ಲದರ ಜೊತೆಗೆ ಪಾದಳ್ಳಿಯ ಜೀವನದ ದೈವರೇಖೆಯೆಂಬಂತೆ ಆಂತರಿಕ ಜೀವನಪ್ರವಾಹದ ಗತಿಯನ್ನೂ ಲೇಖಕರು ತೋರಿಸಿದ್ದಾರೆ. ಇವೆಲ್ಲ ಉದ್ದೇಶಗಳನ್ನೂ ಸಮರ್ಥವಾಗಿ ಒಂದೇ ಕೃತಿಯಲ್ಲಿ ಸಾಧಿಸುವದು ಸಾಹಸವೇ ಸರಿ. ವಾಸ್ತವಮಾರ್ಗದ ಲೇಖಕ ಫೋಟೊಗ್ರಾಫರನಂತೂ ಅಲ್ಲವೇ ಅಲ್ಲ. ಅಥವಾ ಕೃತಕ(synthetic)ರೇಶಿಮೆಯನ್ನು ತಯಾರಿಸುವ ರಸಾಯನಶಾಸ್ತ್ರಜ್ಞನೂ ಅಲ್ಲ. ಜೀವನದ ಅಪರಿಹಾರ್ಯತೆ(inevitability)ಯನ್ನೂ, ಅದರ ಹಿಂದಿದ್ದ ಅಗಮ್ಯತೆ(Mystery)ಯನ್ನೂ ತೆರೆದು ತೋರಿಸುವ ಕಲಾವಿದ. ಈ ದೃಷ್ಟಿಯಿಂದ ನೋಡಿದರೆ ಈ ಕಾದಂಬರಿಯ ಕೆಲ ಸನ್ನಿವೇಶಗಳಾದರೂ ಒರೆಗೆ ನಿಲ್ಲುತ್ತಿದ್ದರೆ ಬರವಣಿಗೆ ಸಾರ್ಥಕವೆಂದೇ ಹೇಳಬೇಕು.

ಇದಕ್ಕಿಂತ ಹೆಚ್ಚಿಗೆ ನಾನೇನೂ ಹೇಳಲಾರೆ. ಪ್ರಾರಂಭದಿಂದಲೇ ಈ ಕೃತಿಯನ್ನು ಕಂಡ ನನಗೆ ಅದರ ಮೇಲೆ ಒಂದು ಮಮತೆ ಬೆಳೆದು ಬಂದಿದೆ. ಅಂತಲೇ ಅದರ ಮುಖಭಾವಗಳ ಮೇಲಿನ ಮುಸುಕನ್ನು ಮಾತ್ರ ತೆರೆದು ತೋರಿದ್ದೇನೆ.

ಅದರ ಸ್ಥಾನ, ಯೋಗ್ಯತೆ, ಭವಿತವ್ಯ ಇವುಗಳ ವಿಃ 'ಏವಾಗಿ, ಕಣ್ವರು ಶಕುಂತಲೆಯ ಬಗ್ಗೆ ಹೇಳಿದ ಮಾತನ್ನೇ ಹೇಳಬೇಕು. ' ಾಗ್ಯಾಯತ್ರಮತಃ ಪರಂ" ಎಂದು ಹೇಳುವದರಲ್ಲಿ ಔಚಿತ್ಯವೂ ಇದೆ, ಸೌಜನ್ಯವೂ ಇದೆ.

ಡಿ. ಕುರ್ತಕೋಟಿ.

# ನನ್ನ ಮಾತು

'ಭಲಿರೆ ಜಟ್ಟಿ ಅಂದರೆ ಕೆಮ್ಮಣ್ಣು ಮುಕ್ಕಿದ' ಎಂಬ ಗಾದೆಯ ಮಾತು ಅಕ್ಷರಶಃ ನನಗೆ ಅನ್ವಯಿಸುತ್ತದೆಂಬುದು ಈ ಕಾದಂಬರಿಯನ್ನು ಬರೆಯಲು ಒಪ್ಪಿಕೊಂಡ ಮೇಲೆ ನನಗೆ ಅನುಭವಕ್ಕೆ ಬಂದಿತು. ಗೆಳೆಯ ಜಿ. ಬಿ. ಜೋಶಿಯವರು ಆಪರೇಶನ್ ಮಾಡಿಸಿಕೊಂಡು ಹುಬ್ಬಳ್ಳಿಯ ಆಸ್ಪತ್ರೆಯಲ್ಲಿ ಮಲಗಿಕೊಂಡಿದ್ದರು. ನಿತ್ಯ ಅವರ ಬೇಸರ ಕಳೆದಂತೆಯೂ ಆಯಿತು, ಮಧ್ಯಾಹ್ನದ ಮೂರು ಗಂಟೆಗೆ ಚಹದ ಬಿಡುವಿನ ಸಾರ್ಥಕವೂ ಆಯಿತು ಎಂದುಕೊಂಡು ನಾನು ಅವರನ್ನು ದಿನಾಲು ಕಾಣಲು ಹೋಗುವ ವಾಡಿಕೆಯನ್ನಿಟ್ಟುಕೊಂಡಿದ್ದೆ. ಒಂದು ದಿನ ಹೋಗದಿದ್ದರೆ ಅವರಿಂದ ಕರೆ ಬರುತ್ತಿತ್ತು. ಹೀಗಾಗಿ ಸುಮಾರು ಒಂದು ತಿಂಗಳ ವರೆಗೆ ಮಧ್ಯಾಹ್ನ ಮುಕ್ಕಾಲುಗಂಟೆ ಅವರೊಡನೆ ಹರಟೆ ಮೀಸಲಾದಂತಿತ್ತು.

ಬಹಳ ಸ್ವಾರಸ್ಯವಾಗಿ ಹರಟೆ ಹೊಡೆಯುವವನೆಂದು ನನಗೆ ಅಪಖ್ಯಾತಿಯೂ ಇದೆ. ಅದೇ ನೆವವನ್ನು ಮುಂದೆ ಮಾಡಿ, ಶ್ರೀ. ಜೋಶಿಯವರು ಹಾಗೂ ಅವರ ಜೊತೆಗಿರುತ್ತಿದ್ದ ಶ್ರೀ. ಕೆ. ಡಿ. ಕುರ್ತಕೋಟಿಯವರು, ತಾವು ಮಾತಾಡದೆ ನನ್ನನ್ನೇ ಮಾತನಾಡಲು ಹುರಿದುಂಬಿಸುತ್ತಿದ್ದರು. ಅದು ಸಾಕಾಗದಿದ್ದರೆ ರೇಗಿಸಿ ಬಿಡುತ್ತಿದ್ದರು.

ಒಂದು ದಿನ ನಮ್ಮ ಹರಟೆ ಕಾದಂಬರಿಯ ವಿಷಯಕ್ಕೇ ಎರಗಿತು. ಪ್ರೀತಿಯನ್ನೇ ಮುಖ್ಯ ಸಮಸ್ಯೆಯಾಗಿಟ್ಟುಕೊಂಡು ಬರೆದ ಕಾದಂಬರಿಗಳೇ ಈಗ ಹೆಚ್ಚಾಗಿರುವವರಿಂದ ನಮ್ಮ ಟೀಕೆ, ಪ್ರೀತಿಯ ಕಡೆಗೆ ಮುಖಮಾಡಿತ್ತು. ಜಗತ್ತಿನಲ್ಲಿ ಪ್ರೇಮಕ್ಕಾಗಿ ಮಡಿಯುವ ವ್ಯಕ್ತಿಗಳನ್ನು ಬಿಟ್ಟರೆ ಬೇರೆ ಪಾತ್ರಗಳೇ ದೊರೆಯುವದಿಲ್ಲವೇ ಎಂದು ನಾನು ಆಹ್ವಾನಿಸಿದೆ. ಒಬ್ಬೊಬ್ಬರು ಒಂದೊಂದು ರೀತಿಯಾಗಿ ಅದನ್ನು ಉತ್ತರಿಸಿದರು. ಗಂಡು-ಹೆಣ್ಣಿನ ಒಲುಮೆ ಜೀವನದ ಪ್ರಬಲವಾದ ಪ್ರೇರಕಶಕ್ತಿಯಾಗಿರುವದರಿಂದ ಅದೇ ಸಾಹಿತ್ಯದ ಅಥವಾ ಲಲಿತಕಲೆಗಳ ಮುಖ್ಯ ವಿಷಯವಾಗಿದ್ದರೆ ಆಶ್ಚರ್ಯವೇನಿಲ್ಲ ಎಂದೊಬ್ಬರು ವಾದ ಹೂಡಿದರು. ಮಾತಿಗ ಚರ್ಚೆಯ ಸ್ವರೂಪ ಬಂದಿತ್ತು. ಪ್ರೀತಿಯ ಹೊರತಾಗಿ ಮನುಷ್ಯನನ್ನು ಕಾಡುವ ಸಮಸ್ಯೆಗಳು ಬೇರೆ ಇವೆ ಎಂದು ನನ್ನ ವಾದ. ಪ್ರಕಾಶಕರು ಓದುಗರ ಅಭಿರುಚಿಯ ಕಾರಣವನ್ನು ಮುಂದೆ ಇಟ್ಟರು. ಲೈಂಗಿಕ ಸಮಸ್ಯೆಯನ್ನು ಚರ್ಚಿಸದಿದ್ದರೂ

ಕಾದಂಬರಿ ಲೋಕಪ್ರಿಯವಾಗಬಲ್ಲದು; ಅದರಲ್ಲಿ ಬಂದ ಜೀವನಚಿತ್ರ ಮಾನವೀಯ ಸಹಾನುಭೂತಿಯಿಂದ ತುಂಬಿದ್ದರೆ ಮಾತ್ರ ಸಾಕು ಎಂದು ನಾನು ಹೇಳಿದೆ. ಜೋಶಿಯವರ ಪ್ರಕಾಶಕನ ದೃಷ್ಟಿ ನನ್ನ ಮೇಲೇ ಬಿತ್ತು. 'ಅಂಥದೊಂದು ಕಾದಂಬರಿಯನ್ನು ಬರೆದು ಕೊಡಬಾರದೇ ?' ಎಂದು ನನ್ನನ್ನೇ ಕೇಳಿಬಿಟ್ಟರು. ಸಾಧ್ಯವಿಲ್ಲವೆಂದರೆ ನನ್ನ ಮಾತು ನನಗೇ ತಿರುಗುತ್ತಿತ್ತು. ನಮಾಜು ಮಾಡಲು ಬಂದರೆ ಮಸೀದೆ ಕೊರಳಿಗೆ ಬಿತ್ತು.

ಮರುದಿನ ಈ ಕಾದಂಬರಿಯ ಮೊದಲ ಪ್ರಕರಣವನ್ನು ಬಗೆದು ಜೋಶಿಯವರಿಗೆ ತೋರಿಸಿಬಿಟ್ಟೆ. 'ಮುಂದೆ ಸಾಗಲಿ' ಎಂದು ಪ್ರೋತ್ಸಾಹನವನ್ನಿತ್ತರು. 'ಎರಡನೇ ಪ್ರಕರಣ ಬೇಗ ಬರಲಿ' ಎಂದರು. ಅದರ ಮರುದಿನ ಮತ್ತೊಂದು ಪ್ರಕರಣವನ್ನು ಬರೆದು ಓದಿದೆ. ಗ್ರಂಥಮಾಲೆಯಲ್ಲಿ ಪ್ರಕಟಿಸುವ ವಿಚಾರವಿದೆಯೇ ಎಂದು ನಾನು ಕೇಳಿದೆ. ಜೋಶಿಯವರು ನೋಡೋಣವೆಂದರು. ಪ್ರಕಟಿಸಬೇಕಾದ ಪುಸ್ತಕಗಳು ಇನ್ನೂ ಇದ್ದುದ್ದರಿಂದ ಅವರು ಹೀಗೆ ಹೇಳಬೇಕಾಯಿತು.

ಅಲ್ಲಿಗೆ ಕಾದಂಬರಿಯನ್ನು ಮುಂದುವರಿಸುವ ವಿಚಾರ ನನ್ನ ತಲೆಯಿಂದ ಹಾರಿಹೋಯಿತು. ಜೋಶಿಯವರು ದವಾಖಾನೆಯಿಂದ ಬಿಡುಗಡೆ ಹೊಂದಿ ತಮ್ಮ ಮನೆಗೆ ಹೋದರು. ಹೋದ ವರ್ಷ ಹೋಳಿಹುಣ್ಣಿವೆಯ ವರೆಗೆ ಅವರ ದರ್ಶನ ನನಗಾಗಲಿಲ್ಲ. ಅಂದು ಧಾರವಾಡದ ಆಕಾಶವಾಣಿಯ ಕಾರ್ಯಕ್ರಮದಲ್ಲಿ ನಾನು ಭಾಗವಹಿಸಿದ್ದೆ. ಆಗ ಭೆಟ್ಟಿಯಾದ ಜೋಶಿಯವರು 'ಕಾದಂಬರಿ ಎಲ್ಲಿಗೆ ಬಂದಿದೆ?' ಎಂದು ಕೇಳಿದರು. 'ಬಚ್ಚಲು-ಮನೆಯ ವರೆಗೆ ಬಂದಿದೆ, ಇನ್ನೂ ನೀರೊಲೆಗೆ ಹೋಗಿಲ್ಲ' ಎಂದು ನಾನು ನಗುತ್ತಲೇ ಹೇಳಿದೆ. 'ಈಗ ಹಸ್ತಪ್ರತಿಯ ಅಗತ್ಯವಿದೆ. ಅದನ್ನು ಬೇಗ ಬರೆದು ಮುಗಿಸಿಕೊಡಿರಿ' ಎಂದು ಅವರು ಹೇಳಿದರು. ಏನೇನೋ ಹುರುಪಿನ ಮಾತುಗಳನ್ನೂ ಆಡಿದರು.

ಅಂದಿನಿಂದ ಆಗ ಈಗ ಎಂದು ಕುಂಟುತ್ತ ಲೇಖನಕಾರ್ಯ ಮುಂದುವರಿಯಿತು. ಜೋಶಿಯವರ ಅವಸರ ಹೆಚ್ಚಾಯಿತು; ನಾನೂ ಅವಸರದಲ್ಲಿಯೇ ಬರೆಯಬೇಕಾಯಿತು. ನಾನು ಬರೆದದ್ದನ್ನು ನೋಡಿ ತಿದ್ದಿ ಪ್ರೆಸ್‌ಕಾಪಿ ತಯಾರಿಸುವ ಹೊಣೆಯನ್ನು ಕೆ. ಡಿ. ಕುರ್ತಕೋಟಿಯವರು ಹೊತ್ತರು. ಈ ಕಾದಂಬರಿ ಈಗಿದ್ದ ಸ್ವರೂಪಕ್ಕೆ ಬಂದದ್ದು ಅವರು ವಹಿಸಿದ ಅವ್ಯಾಹತ ಶ್ರಮದ ಫಲವಾಗಿದೆ. ಅದಕ್ಕಾಗಿ ನಾನು ಅವರಿಗೆ ಚಿರಋಣಿಯಾಗಿದ್ದೇನೆ.

ಈ ಕಾದಂಬರಿಯನ್ನು ಬರೆದ ಇತಿಹಾಸವೂ ಸ್ವಾರಸ್ಯವಾಗಿದೆ. ದಾದಾ ಎಂಬ ಒಬ್ಬ ವ್ಯಕ್ತಿಯ ಸಾಹಸಮಯ ಜೀವನದ ಸುತ್ತಲೂ ಒಂದು ಕತೆ ಕಟ್ಟಬೇಕೆಂದು ನನ್ನ ಹಂಬಲವಿತ್ತು. ಆದರೆ ಬರೆಯುತ್ತ ಹೋದಂತೆ ಅದರ ರಚನೆಯೇ ಭಿನ್ನವಾಗುತ್ತ ನಡೆಯಿತು. ನಾನು ಸೃಷ್ಟಿಸಿದ ಪಾತ್ರಗಳು ಸ್ವತಂತ್ರವಾಗಿ, ತಮ್ಮ ಸ್ವಭಾವಸಹಜವಾದ ಲೀಲೆಯೆಂಬಂತೆ ಕತೆಯನ್ನು ಎತ್ತಲೋ ಎಳೆದುಕೊಂಡು ಹೋದವು. ಪಾತ್ರಗಳು ಆಡಿದಂತೆ, ಮಾಡಿದಂತೆ ಕತೆಯ ಓಟ ಸಾಗಿತು. ನಾನು ಅವುಗಳನ್ನು ಒತ್ತಾಯಪಡಿಸಲಿಲ್ಲ. ಕಲ್ಪಕತೆಯ ಬೆನ್ನುಹತ್ತಿ ಸಾಗುವದರಲ್ಲಿಯ ಮನೋರಂಜಕತೆಯನ್ನು ನಾನು ಅನುಭವಿಸತೊಡಗಿದೆ. ನಾನು ಮಾಡಿದ ಕೆಲಸವೆಂದರೆ ಆ ಕಲ್ಪಕತೆಗೆ ನನ್ನ ಪ್ರಜ್ಞೆಯನ್ನೆಲ್ಲ ಸಂಪೂರ್ಣವಾಗಿ ತೆರೆದಿಟ್ಟೆ.

ಇಂಥದೊಂದು ಕಾದಂಬರಿಯನ್ನು ಬರೆಯಬೇಕೆಂಬ ಹಂಬಲ ನನಗೆ ಮೊದಲಿನಿಂದಲೂ ಇತ್ತು. ಬಾಲ್ಯದಿಂದಲೂ ಹಳ್ಳಿಯಜೀವನದ ಪರಿಚಯ ನನಗೆ ಸಾಕಷ್ಟಾಗಿದೆ. ಅದನ್ನೆಲ್ಲ ಒಂದು ಕಾದಂಬರಿಯಲ್ಲಿ ಪ್ರತಿಫಲಿಸಿ, ಅದಕ್ಕೊಂದು ಜೀವಂತ ಅರ್ಥವನ್ನು ಕಲ್ಪಿಸಬೇಕಾಗಿತ್ತು. ಹದಿನೆಂಟು ಜಾತಿಗಳಿಂದ ಒಡಕು-ಕನ್ನಡಿಯಾದ ನಮ್ಮ ಸಮಾಜದ ಚಿತ್ರ ಇಲ್ಲಿದೆ. ಇಲ್ಲಿ ನಿರೂಪಿಸಲಾದ ವ್ಯಕ್ತಿಗಳನ್ನು ಓದುಗರು ಪ್ರತಿ ಹಳ್ಳಿಯಲ್ಲಿಯೂ ಕಾಣಬಹುದು.ಆಯಾ ಜಾತಿಯ ಗುಣದೋಷಗಳನ್ನು ವಿವರಿಸುವ ಉದ್ದೇಶವೇನೂ ನನಗಿಲ್ಲ. ಮನುಷ್ಯನನ್ನು ಅವನ ಜಾತಿಯಿಂದ ಬೇರ್ಪಡಿಸಿ ನೋಡುವದು ಆದರ್ಶದ ಮಾತಾದರೂ ವಾಸ್ತವತೆಗೆ ಅದರಿಂದ ಭಂಗಬರುತ್ತದೆಂದು ಹಾಗೆ ಮಾಡಹೋಗಿಲ್ಲ. ಪಡದಯ್ಯ, ಶೇಷಪ್ಪ,ಲಿಂಗಪ್ಪಗೌಡರಂಥ ಸಮಾಜಕಂಟಕರು ಒಂದು ಕಡೆಗೆ, ಬಾಳಾಚಾರ್ಯರು, ಶಿವಯೋಗಿಗಳಂಥ ಆದರ್ಶದ ಕನಸಿಗರು ಇನ್ನೊಂದು ಕಡೆಗೆ ಆಗಿ ಬಹುಜನ ಸಮಾಜ ದಿಕ್ಕುಗಾಣದೆ ನಿಂತಿದೆ. ಇಂಥ ವಿಭಿನ್ನಸ್ವಭಾವದ ಅನೇಕ ವ್ಯಕ್ತಿಗಳನ್ನು ಚಿತ್ರಿಸಿದರೂ, ಅವರಲ್ಲಿಯೂ ಒಬ್ಬ ಸಾಮಾನ್ಯ ಮನುಷ್ಯನ ಅಂತಃಕರಣವನ್ನೇ ಕಾಣಲು ನಾನು ಯತ್ನಿಸಿದ್ದೇನೆ.

ಈ ಕಾದಂಬರಿಗೆ ನಾಯಕನಿಲ್ಲ, ನಾಯಿಕೆಯೂ ಇಲ್ಲ. ಪ್ರಮುಖವಾಗಿ ಕಂಡುಬರುವ ಪಾತ್ರಗಳು ಇರಬಹುದಾದರೂ, ಅವು ಜೀವನವಿನ್ಯಾಸದ ದೃಷ್ಟಿಯಿಂದ ಮಾತ್ರ ಪ್ರಮುಖವಾಗಿವೆ. ಹಾದಳ್ಳಿಯ ಜನಸಮೂಹವೇ ಈ ಕಾದಂಬರಿಯ ನಾಯಕನೆಂದು ನಾನು ತಿಳಿದಿದ್ದೇನೆ. ಕೊನೆಯಲ್ಲಿ ಬರುವ ಪ್ರಳಯದ

ಚಿತ್ರವೇ ಕೊನೆಯಲ್ಲ; ಅದರಲ್ಲಿಯೂ ಬರಲಿರುವ ಮನ್ವಂತರದ ಬೀಜಗಳು ಅಡಗಿವೆಯೆಂಬುದನ್ನು ವಾಚಕರು ಗಮನಿಸಬೇಕು. ಅಂತೂ ಜೋಶಿಯವರಿಗೆ ವಚನ ಕೊಟ್ಟಂತೆ ಒಂದು ಕಾದಂಬರಿಯನ್ನು ಬರೆದೆನಲ್ಲ ಎಂಬ ಸಮಾಧಾನ ನನಗಿದೆ. ಇಲ್ಲಿ ಇನ್ನೊಂದು ಮಾತನ್ನು ನಾನು ಹೇಳದಿರಲಾರೆ. ಹಸ್ತಪ್ರತಿಯಲ್ಲೇ ಈ ಕಾದಂಬರಿಯನ್ನೋದಿದ ಕೆಲ ಮಿತ್ರರು, ಇಲ್ಲಿಯ ಘಟನೆಗಳನ್ನು, ಪಾತ್ರಗಳನ್ನು ನಿಜಜೀವನದಲ್ಲಿ ಹುಡುಕುವ ಸಾಹಸಮಾಡಿದರು. ಇದು ನಿಜವಾಗಿ ನಡೆದ ಘಟನೆಗಳನ್ನೊಳಗೊಂಡ ಕತೆಯೇ ಇರಬೇಕು ಎಂದು ಅವರ ವಿಚಾರ. ಅದರ ಬಗ್ಗೆ ಅವರು ನನ್ನನ್ನು ಕೆಣಕಿ ಕೆಣಕಿ ಕೇಳಿದ್ದಾರೆ. ಆದರೆ ನಾನು ಬರೆದದ್ದು ಇತಿಹಾಸವಲ್ಲ, ಕಾದಂಬರಿ ಎಂದು ನಾನು ಸೂಚಿಸಬಲ್ಲೆ. ಪ್ರತಿಯೊಂದು ಕಾದಂಬರಿಯೂ ನಿಜಜೀವನವನ್ನೇ ತಳಹದಿಯಾಗಿಟ್ಟುಕೊಂಡಿದೆ. ಅಷ್ಟರ ಮಟ್ಟಿಗೆ ನಾನೂ ನಿಜಜೀವನವನ್ನು ಅವಲಂಬಿಸಿದ್ದೇನೆ. ಆದರೆ ಕಾದಂಬರಿಗಿರುವ ಕಲ್ಪಕತೆಯ ಸೀಮೆಯನ್ನು ನಾನು ದಾಟಿ ಹೋಗಿಲ್ಲ. ಸತ್ಯಸೃಷ್ಟಿಯಲ್ಲಿ ನಡೆದಿರಲೇಬೇಕೆನ್ನುವಷ್ಟು ಈ ಘಟನೆಗಳು ವಾಸ್ತವವಾಗಿದ್ದರೆ ಅದು ನನ್ನ ತಪ್ಪಲ್ಲ.

ಕಾದಂಬರಿಯನ್ನು ಉದ್ದಕ್ಕೆ ಬರೆದು ಮುಗಿಸಿದ ಮೇಲೆ ಅದಕ್ಕೆ ಹೆಸರಿಡುವದೊಂದು ನನ್ನ ಬುದ್ಧಿಗೆ ಮೀರಿದ ಸಮಸ್ಯೆಯಾಗಿ ಕಾಡತೊಡಗಿತು. ಪ್ರಕಾಶಕರಿಗೂ ಅದು ಬಗೆಹರಿಯಲಿಲ್ಲ. ಮುದ್ರಣ ನಿಲ್ಲಬಾರದೆಂದು ಹೆಸರಿಲ್ಲದೆ ಹಾಗೆಯೇ ಪುಟಗಳನ್ನು ಮುದ್ರಿಸಲಾಯಿತು. ಪ್ರಿನ್ಸಿಪಲ್ ಗೋಕಾಕರಿಗೆ ಈ ನಾಮಕರಣದ ಹೊಣೆಯನ್ನು ನಾನೊಪ್ಪಿಸಿದ್ದೆ. ಅಷ್ಟರಲ್ಲಿ ಹುಬ್ಬಳ್ಳಿಯ ವಾಣಿಜ್ಯ ಮಹಾವಿದ್ಯಾಲಯದ ಪ್ರೊ. ಎ. ವ್ಹಿ. ಶಾಸ್ತ್ರಿಯವರು ನನಗೆ ಅಕಸ್ಮಾತ್ತಾಗಿ ಭೆಟ್ಟಿಯಾದರು. ಕತೆಯಿಂದ ಮೊದಲುಗೊಂಡು, ಹೆಸರಿಲ್ಲದಿದ್ದುದಕ್ಕಾಗಿ ಒದ್ದಾಡುವ ಇತಿಹಾಸವೆಲ್ಲ ಅವರಿಗೆ ಹೇಗೋ ಗೊತ್ತಾಗಿತ್ತು. "ಆ ಕತೆಯನ್ನು ನಾನು ಕೇಳಿದ್ದೇನೆ. It is a saga of a village ಎಂದು ನನಗನಿಸುತ್ತದೆ. ಅದಕ್ಕೆ **'ಗ್ರಾಮಾಯಣ'** ಎಂದು ಹೆಸರಿಟ್ಟರಾಗದೇ?" ಎಂದು ನನ್ನನ್ನು ಕೇಳಿದರು. ಪ್ರಿನ್ಸಿಪಲ್ ಗೋಕಾಕರಿಗೆ ಈ ಸುದ್ದಿಯನ್ನು ತಿಳಿಸುವ ಹೊಣೆಯನ್ನೂ ಹೊತ್ತುಕೊಂಡರು. ಯಾವ ರೀತಿಯಿಂದ ಅವರಿಗೆ ನನ್ನ ಕೃತಜ್ಞತೆಯನ್ನು ಸಲ್ಲಿಸಬೇಕೋ ತಿಳಿಯದಾಗಿದೆ. 'ಗ್ರಾಮಾಯಣ' ಎಂಬ ಪದವೇ ಒಂದು ಪುಟ್ಟ ಭಾವಗೀತ (Miniature-lyric)ವಾಗಿದೆ. ರಾಮಾಯಣದ ಆದರ್ಶಕ್ಕೂ, ನಮ್ಮ ವಾಸ್ತವತೆಗೂ ಇರುವ

ಅಂತರವನ್ನು ವ್ಯಂಗ್ಯವಾಗಿ ಸೂಚಿಸುತ್ತದೆ. ಸ್ವಯಂಸ್ಫೂರ್ತಿಯಿಂದ ಇಂಥ ಅನುರೂಪವಾದ ಹೆಸರನ್ನು ಸೂಚಿಸಿದ್ದಕ್ಕಾಗಿ ಪ್ರೊ. ಎ. ವ್ಹಿ. ಶಾಸ್ತ್ರಿಯವರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ.

ಹೀಗೆ ನನ್ನಿಂದ ಬರೆಯಲ್ಪಟ್ಟು, ಶ್ರೀ ಕೆ. ಡಿ. ಕುರ್ತಕೋಟಿಯವರಿಂದ ಸಂಸ್ಕಾರಹೊಂದಿ, ಶ್ರೀ ಎ. ವ್ಹಿ. ಶಾಸ್ತ್ರಿಯವರಿಂದ ನಾಮಕರಣ ಹೊಂದಿದ ಈ 'ಗ್ರಾಮಾಯಣ' ಕಾದಂಬರಿಯನ್ನು ಗೆಳೆಯ ಜಿ. ಬಿ. ಜೋಶಿಯವರು ತಮ್ಮ ಗ್ರಂಥ ಮಾಲೆಯಲ್ಲಿ ಪ್ರಕಟಿಸಿ ನನ್ನ ಮೇಲೆ ಉಪಕಾರ ಮಾಡಿದ್ದಾರೆ. ಅವರಿಗೂ ನಾನು ಕೃತಜ್ಞನಾಗಿದ್ದೇನೆ.

—'ರಾವಬಹಾದ್ದೂರ'

# ಅರಿಕೆ

ಮನೋಹರ ಗ್ರಂಥಮಾಲೆ ಕಳೆದ ಕೆಲ ವರ್ಷಗಳಿಂದ ತನ್ನ ಹಿಂದಿನ ನಿಯಮಿತತನವನ್ನು ಅನಿವಾರ್ಯ ಪರಿಸ್ಥಿತಿಯ ಮೂಲಕ (ಪ್ರಬಲಕಾರಣಗಳೂ ಇಲ್ಲದಿಲ್ಲ) ಕಳೆದುಕೊಂಡಿದ್ದರೂ ಆ ಆ ವರ್ಷದ ಗ್ರಂಥಗಳನ್ನು ಗ್ರಾಹಕರು ಸಲ್ಲಿಸಿದ ಚಂದಾಹಣಕ್ಕೆ (ಒಟ್ಟಿಗೆಯಾದರೂ ಅಡ್ಡಿ ಇಲ್ಲ.) ಆ ಆ ವರ್ಷದಲ್ಲಿ ಸಲ್ಲಿಸುತ್ತ ಬಂದು ತಾನು ಇನ್ನೂ– ಇಂತಹ ವಿಷಮಪರಿಸ್ಥಿತಿಯಲ್ಲಿಯೂ-- ಜೀವ ಹಿಡಿದುಕೊಂಡಿದೆ ಎಂಬುದನ್ನು ಮಾತ್ರ ತೋರಿಸಿದೆ. ಭಾರತವು ಸ್ವತಂತ್ರವಾದಾಗಿನಿಂದ ಹುಟ್ಟಿದ ರಾಜಕೀಯ ಆರ್ಥಿಕ ವಿಷಮವಾತಾವರಣವು ಸಾಮಾನ್ಯ ಜೀವನವನ್ನೇ ಉಸಿರುಕಟ್ಟುವಂತೆ ಮಾಡಿ, ಯಾವುದಕ್ಕೂ ಸುರಕ್ಷಿತತೆಯ ನೆಲೆಯಿಲ್ಲದಂತೆ ಮಾಡಿದೆ. ಈ ಪರಿಸ್ಥಿತಿಯೊಳಗಿಂದಲೂ ಹಾಯ್ದು ಒಂದು ಸುವ್ಯವಸ್ಥೆಗೆ– ನಮ್ಮ ದೈವವೇ ಅದನ್ನು ತರಬೇಕು – ಬಂದು ಮುಟ್ಟುವ ವರೆಗೆ ಸರಕಾರದಿಂದ ಹಿಡಿದು ಸಾಮಾನ್ಯನ ವರೆಗೂ ಅವ್ಯವಸ್ಥೆ ತಪ್ಪಿದ್ದಲ್ಲ. ಈಗ ನಿಯಮಿತತನ ಯಾವುದರಲ್ಲಿ ಉಳಿದಿದೆ? ಗಾಡಿಯ ಓಡಾಟಗಳಲ್ಲಿದೆಯೇ? ತಾರು-ಪತ್ರವ್ಯವಹಾರಗಳನ್ನು ಮುಟ್ಟಿಸುವದರಲ್ಲಿದೆಯೇ? ಸಮಸ್ಥಿತಿ ಬರುವುದಾವಾಗೋ ತಿಳಿಯದು. ಅಲ್ಲಿಯ ವರೆಗೂ ಮಾತ್ರ ನಾವು ಮೂಕರಾಗಿ ಸಹನೆಯಿಂದಿರುವದೇ ದಾರಿ ಎನಿಸುತ್ತದೆ. ಹಣದ ಕೊರತೆಯಂತೂ ಎಲ್ಲರನ್ನೂ ಭೂತವಾಗಿ ಕಾಡುತ್ತಿದೆ. ಏನೇ ಮಾಡಿ ಹಣ ಒದಗಿಸಿದರೂ ಹೊತ್ತಿಗೆ ಕಾಗದ ಸಿಗುವದಿಲ್ಲ. ಈ ಕ್ಷಣಕ್ಕೆ ಇದೆ ಎನ್ನುವದರೊಳಗಾಗಿ ಇನ್ನೊಂದು ಕ್ಷಣಕ್ಕೆ ಮಟಂಗಳಮಾಯವಾಗಿರುತ್ತದೆ. ಕಾಗದ ಸಿಕ್ಕ ಮೇಲೂ ದಾರಿಬಡಿಯಲು ನೂರೆಂಟು ಕುತ್ತುಗಳು ಕಾದು ನಿಂತಿರುತ್ತವೆ. ಇವನ್ನೆಲ್ಲಾ ದಾಟಿ ಒಂದು ಪುಸ್ತಕ ಹೊರಕ್ಕೆ ಬಂದರೆ, "........ಹೊರಗಿಲ್ಲಿ ಪಡೆದುದೇನು?" ಎನ್ನಬೇಕಾಗುತ್ತದೆ. ಎಷ್ಟು ರೀತಿಯಿಂದ ವಿಚಾರಿಸಿದರೂ — ಸರಕಾರ, ರಾಜ್ಯಸರಕಾರಗಳು ಎಷ್ಟೇ ತಾವು ಕಲೆಯ ಕೈವಾರಿ ಎಂದುಕೊಳ್ಳುತ್ತಿದ್ದರೂ — ಉತ್ಕೃಷ್ಟಸಾಹಿತ್ಯ ನಿರ್ಮಿತಿಗೆ ಅನುಕೂಲಕಾಲವಲ್ಲವಿದಂ. ಯಾರೂ ಕೇಳುವವರಿಲ್ಲದ ಕಾಲದಲ್ಲಿ ಇದ್ದಷ್ಟು ಅನುಕೂಲ ಕಾಲ, ಎಲ್ಲರೂ ಕೇಳುವವರೇ ಆಗಿರುವ ಈ ಕಾಲದಲ್ಲಿ ಇಲ್ಲದಂತಾಗಿದೆ. ಏನೇ ಇದ್ದರೂ ನಮ್ಮ ಗ್ರಾಹಕರು ನಮಗಿತ್ತ ಸಹಾನುಭೂತಿ, ಈಗಲೂ ಗ್ರಂಥಮಾಲೆಯನ್ನು ನಿಲ್ಲಿಸದೆ ಮುಂದು

ವರಿಸಲು ಪ್ರೇರೇಪಿಸುತ್ತದೆ. ಅವರ ನೆರವಿನ ಕೈಯೇ ನಮ್ಮನ್ನು ಮುಂದಕ್ಕೆ ನಡೆಯಿಸುತ್ತಿದೆ.

ಇಪ್ಪತ್ನಾಲ್ಕನೆಯ ವರ್ಷದ ಮೊದಲ ಕುಸುಮ "ಖೊ !" ಎಂಬ ಪ್ರಾಯೋಗಿಕ ಕಾದಂಬರಿಯ ನಂತರ ಬಂದ ಈ "ಗ್ರಾಮಾಯಣ"ವು ಗ್ರಂಥಮಾಲೆಯ ಈ ವರ್ಷದ ಮುಕ್ಕಾಲುಭಾಗದ ಗ್ರಾಸವಾಗಿಯೇ ಬಂದಿದೆ. ಆರುನೂರು ಪುಟಕ್ಕೂ ಮಿಕ್ಕಿದ ಈ ಕಾದಂಬರಿಯು ಗಾತ್ರದಷ್ಟೇ ಗುಣದಲ್ಲಿಯೂ ದೊಡ್ಡದಾಗಿದೆ. ಎಂತಹ ಸಂದರ್ಭ ಯಾವ ಕೃತಿನಿರ್ಮಾಣಕ್ಕೆ ಕಾರಣವಾಗುತ್ತದೋ ಹೇಳಲು ಬರುವಂತಿಲ್ಲ. ನನ್ನ ಆಸ್ಪತ್ರೆಯ ವಾಸ "ಗ್ರಾಮಾಯಣ"ದಂತಹ ಕಾದಂಬರಿಯ ನಿರ್ಮಾಣಕ್ಕೆ ಕಾರಣವಾಯಿತಲ್ಲ ಎಂದು ನನ್ನಲ್ಲಿಯೇ ನಾನು ಹೆಮ್ಮೆಪಟ್ಟುಕೊಂಡರೂ ಅದರ ಎಲ್ಲ ಶ್ರೇಯಸ್ಸಿಗೂ ಲೇಖಕರೇ ಕಾರಣರು. ಉಳಿದವರೆಲ್ಲ ಕೇವಲ ಪರಿಸರ, ಹಿನ್ನೆಲೆ, ನಿಮಿತ್ತಮಾತ್ರ. ಇಷ್ಟು ದೊಡ್ಡ ತಮ್ಮ ಕಾದಂಬರಿ ಪ್ರಕಟವಾಗಲಿಕ್ಕಿಲ್ಲ ಎಂಬ ಅನುಮಾನವಿದ್ದ 'ರಾವಬಹಾದ್ದೂರ'ರು ಈಗೇನೋ ತಮ್ಮ ಎಣಿಕೆಯಲ್ಲಿ ಸೋತಿದ್ದರೂ ಮುಂದೆ ನನ್ನನ್ನೇ ಸೋಲಿಸುವ ಸಂಭವವಿದೆ. ಯಾಕಂದರೆ ಈಗ ಈ ಕಾದಯಬರಿಯಲ್ಲಿ ನಿರೂಪಿತವಾದದ್ದು, ಪಾದಳ್ಳಿಯ ಒಂಬತ್ತು ತಿಂಗಳ ಜೀವನ ಮಾತ್ರ. ಆನಂತರದ ಅಂದರೆ ೧೯೪೩ರಿಂದ – ಈ ವರೆಗೆ— ಪಾದಳ್ಳಿಯ ಸಮಗ್ರ ಜೀವನವನ್ನು ಹಂತಹಂತವಾಗಿ ಚಿತ್ರಿಸುವ ವಿಚಾರವಿದೆಯೆಂದು 'ರಾವಬಹಾ-ದ್ದೂರ'ರು ಹೇಳಿದಾಗ ಮಾತ್ರ ನನ್ನ ಎದೆ ಸ್ವಲ್ಪ ನಡುಗಿತು. ಒಂಬತ್ತು ತಿಂಗಳ ಜೀವನಕ್ಕೇ ಆರುನೂರು ಪುಟ ನುಂಗಿದ 'ರಾವಬಹಾದ್ದೂರ'ರು ಆರವತ್ತು ವರ್ಷದ ಜೀವನವನ್ನು ಚಿತ್ರಿಸಲಿಕ್ಕೆ ಎಷ್ಟು ಸಾವಿರ ಪುಟ ತೆಗೆದುಕೊಳ್ಳಬಹುದು? ಎಂದು ಲೆಕ್ಕ ಹಾಕಿದಾಗ ರಾಷ್ಟ್ರೀಯ ಉಳಿತಾಯ ದೃಷ್ಟಿಯಿಂದಲಾದರೂ ನಾನೇ ಎಲ್ಲಿ ಸೋಲಬೇಕಾಗುವದೋ ಏನೋ ಎಂಬ ಅಧೈರ್ಯ ನನ್ನಲ್ಲಿ ಹುಟ್ಟಿತು. 'ರಾವ ಬಹಾದ್ದೂರ'ರರಿಗೂ ಈ ವಿಷಯ ತಿಳಿಸಿದೆ. ಆದರೂ 'ರಾವಬಹಾದ್ದೂರ'ರೇನು ತಮ್ಮ ಲೆಕ್ಕಣಿಕೆ ಕೆಳಗಿಡುವ ಲಕ್ಷಣ ತೋರಲಿಲ್ಲ. 'ಕಾಗದಕ್ಕೇನು ಮಾಡುವಿರಿ?' ಎಂದು 'ರಾವಬಹಾದ್ದೂರ'ರೇ ಕೇಳಿದಾಗ "ನೋಡಬೇಕು, ಯಾವುದಾದರೂ ಒಂದು ಪೇಪರ ಮಿಲ್ಲನ್ನೇ 'ರಾಬಹಾದ್ದೂರ'ರ ಕಾದಂಬರಿಗಾಗಿ ದತ್ತಿಯಾಗಿ ಕೊಡಬೇಕೆಂದು ಭಾರತಸರಕಾರಕ್ಕೇ ಮೊರೆ ಹೋಗಬೇಕಾಗುವದೋ ಏನೋ!" ಎಂದು ನಗೆಮಾಡಿದೆ. ಏನೇ ಇರಲಿ, ಈಗಂತೂ 'ರಾವಬಹಾದ್ದೂರ'ರು ತಮ್ಮ

ಈ ಉತ್ತಮ ಕಾದಂಬರಿಯನ್ನು ಮನೋಹರ ಗ್ರಂಥಮಾಲೆಯಲ್ಲಿ ಪ್ರಕಟಿಸಲು ಒಪ್ಪಿಗೆ ಕೊಟ್ಟದ್ದಕ್ಕಾಗಿ ಅವರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ. ಹಾಗೆಯೆ ಶ್ರೀ. ಕೀರ್ತಿನಾಥ ಕುರ್ತಕೋಟಿಯವರು ಈ ಕಾದಂಬರಿಯಲ್ಲಿ ಹುದುಗಿದ್ದ ಭಾವ ಪ್ರಪಂಚಕ್ಕೆ ಕನ್ನಡಿ ಹಿಡಿದು, ವಾಚಕರ ಮತ್ತು ಗ್ರಂಥದ ನಡುವಿದ್ದ ತೆರೆಯನ್ನು ಸರಿಸಿದ್ದಾರೆ; ಕಾದಂಬರಿಯ ಸ್ವರೂಪ ಅದರಲ್ಲಿ ಕಾಣುವಂತೆ ಮಾಡಿದ್ದಾರೆ. ಈ ಅನಾವರಣ'ವು ಜ್ಞಾನ ಅಜ್ಞಾನದ ನಡುವಿನ ತೆರೆಯನ್ನುಸರಿಸಿ ಎರಡನ್ನೂಎದುರು ಬದರು ನಿಲ್ಲುವಂತೆ ಮಾಡಿದೆ. ಇಂತಹ ಈ ತೂಕದ ಬರವಣಿಗೆಗಾಗಿ ಅವರನ್ನು ಎಷ್ಟು ಅಭಿವಂದಿಸಿದರೂ ಕಡಮೆಯೆ. ಈ ಗ್ರಂಥದ ಹೊದಿಕೆ-ಚಿತ್ರ ತಯಾರಿಸುವದಕ್ಕೆ ಸಲಹೆ ಕೊಟ್ಟ ಗೆಳೆಯ ವಿ. ವಾಯ್. ಜಠಾರ, ಚಿತ್ರ ತೆಗೆದುಕೊಟ್ಟ ಶ್ರೀ. ಮೂರ್ತಿ, ಫೋಟೊಗಳನ್ನು ಒದಗಿಸಿಕೊಟ್ಟ ಶ್ರೀ. ಶ್ರೀನಿವಾಸರಾವ ಮೊದಲಾದ ಎಲ್ಲ ಸ್ನೇಹಿತರಿಗೂ ಕತಜ್ಞತೆಯ ವಂದನೆಗಳನ್ನು ಸಲ್ಲಿಸದಿರಲಾರೆ.

—ಸಂಪಾದಕ

# ಈ ಕಾದಂಬರಿಯಲ್ಲಿ ಬರುವ ಜನರು

## ಪಾದಳ್ಳಿಯವರು :

೧. ರಾಣೋಜಿರಾಯ (ಘೋರಪಡೆ) : ಪಾದಳ್ಳಿಯ ಜಾಗೀರದಾರರು
೨. ಲಕ್ಷ್ಮೀಬಾಯಿ : ರಾಣೋಜಿರಾಯರ ಹಿರಿಯ ಹೆಂಡತಿ
೩. ಪುತಳಾಬಾಯಿ : ರಾಣೋಜಿರಾಯರ ಕಿರಿಯ ಹೆಂಡತಿ
೪. ಬಾಪೂಸಾಹೇಬ (ಪಾಟೀಲ) : ಕನಕೇರಿಯ ಪಾಟೀಲ; ಪುತಳಾಬಾಯಿಯ ತಮ್ಮ
೫. ರತ್ನಾ : ಬಾಪೂಸಾಹೇಬನ ಹೆಂಡತಿ
೬. ಯಶವಂತರಾವ ಪಾಟೀಲ : ಅಜರಾಣಿಯ ಪಾಟೀಲ; ರತ್ನಾಳ ತಂದೆ
೭. ಯಮುನಾ : ಜಾಗೀರದಾರ ಮನೆಯ ಅಡಿಗೆಯವಳು
೮. ಶಿಲೇದಾರ ಗೋಪಾಳ : ಶಿಲೇದಾರ ನಾನಾನ ತಂದೆ
೯. ಶಿಲೇದಾರ ನಾನಾ : ಜಾಗೀರದಾರರ ನಂಬಿಗಸ್ಥ; ಊರಲ್ಲಿ ಪ್ರತಿಷ್ಠಿತ; ಚಿಮಣಾಳ ತಂದೆ
೧೦. ಶಿಲೇದಾರ ಲಕ್ಷ್ಮಣ : ನಾನಾನ ತಮ್ಮ; ದಾದಾನ ತಂದೆ
೧೧. ಚಿಮಣಾ : ನಾನಾನ ಮಗಳು
೧೨. ರುಕುಮಾ : ನಾನಾನ ಹೆಂಡತಿ
೧೩. ದಾದಾ (ಭೀಮಸೇನ) : ಶಿಲೇದಾರ ಲಕ್ಷ್ಮಣನ ಮಗ, ಕುಸ್ತಿಗಡಿ
೧೪. ಶಂಕರೆಪ್ಪಗೌಡರು : ಪಾದಳ್ಳಿಯ ಗೌಡರು;
೧೫. ಪಾರ್ವತೆವ್ವ : ಶಂಕರೆಪ್ಪಗೌಡರ ಹೆಂಡತಿ; ಗೌಡಿತಿ
೧೬. ಶಿವನಗೌಡ : ಶಂಕರೆಪ್ಪಗೌಡರ ಮಗ
೧೭. ಗುರುಲಿಂಗಪ್ಪ : ಶಂಕರೆಪ್ಪಗೌಡರ ಬೀಗ
೧೮. ಬಾಳಾಚಾರ್ಯ (ರಾಜಪುರೋಹಿತ) : ಇಂದುಪುರ ಸಂಸ್ಥಾನಿಕರ ರಾಜಪುರೋಹಿತರು
೧೯. ಗೋಪಾಳಾಚಾರ್ಯ
೨೦. ನಾರಾಯಣಾಚಾರ್ಯ } : ಬಾಳಾಚಾರ್ಯರ ಅಣ್ಣನ ಮಕ್ಕಳು
೨೧. ಆಚಾರ್ಯರ ಪತ್ನಿ : ಬಾಳಾಚಾರ್ಯರ ಸಹಧರ್ಮಿಣಿ
೨೨. ಹಣಮಂತಾಚಾರ್ಯರು : ಬಾಳಾಚಾರ್ಯರ ಕಕ್ಕ
೨೩. ಶೇಷಪ್ಪ (ಕುಲಕರ್ಣಿ) : ಪಾದಳ್ಳಿಯ ಕುಲಕರ್ಣಿ.
೨೪. ತುಳಸಕ್ಕ : ಶೇಷಪ್ಪನ ಹೆಂಡತಿ

೨೫. ಶ್ಯಾಮರಾಯ (ಕುಲಕರ್ಣಿ) : ಪಾದಳ್ಳಿಯ ಇನ್ನೊಬ್ಬ ಕುಲಕರ್ಣಿ

೨೬. ಪಡದಯ್ಯನವರು : ಪಾದಳ್ಳಿಯ ಹಿರೇಮಠಕ್ಕೆ ಗುರುಪಾದಸ್ವಾಮಿಗಳ ನಂತರ ಬಂದ ಮಠಪತಿ; ಅಜರಾಣಿಯುವರು

೨೭. ಲಿಂಗಪ್ಪಗೌಡ : ಅಜರಾಣಿಯ ಕುರುಬ ಶಂಕರಪ್ಪನ ಮಗ; ನಾಮಸಾದೃಶ್ಯದಿಂದ, ಪಡದಯ್ಯನ ಹಸ್ತಲಾಘವದಿಂದ, ಪಾದಳ್ಳಿಯ ಗೌಡಿಕಿ ಪಡೆದವ

೨೮. ಶಂಕರಪ್ಪ : ಅಜರಾಣಿಯ ಕುರುಬ; ಲಿಂಗಪ್ಪನ ತಂದೆ

೨೯. ಗುರುಪಾದ : ಪಡದಪ್ಪನವರ ಒಬ್ಬ ಶಿಷ್ಯ

೩೦. ದಾನವ್ವ : ಪಡದಯ್ಯನವರ ಪ್ರೇಯಸಿ

೩೧. ಗಂಗಾಧರಯ್ಯನವರು : ಗುರುಪಾದಸ್ವಾಮಿಗಳ ತಮ್ಮ

೩೨. ಶಿವಯೋಗಿ ಸ್ವಾಮಿಗಳು : ಸದಾನಂದಶಿವಯೋಗಿಗಳ ಅಂಶಸಂಭೂತರು; ಗಂಗಾಧರಯ್ಯನವರ ಮಕ್ಕಳು; ಪಡದಯ್ಯನವರನ್ನು ಬಿಡಿಸಿದ ನಂತರ ಮಠಕ್ಕೆ ಚರಮೂರ್ತಿಗಳಾಗಿ ಬಂದವರು

೩೩. ಸದಾನಂದಶಿವಯೋಗಿಗಳು : ಹಿರೇಮಠಕ್ಕೆ ಗುರುಪಾದಸ್ವಾಮಿಗಳ ಪೂರ್ವದಲ್ಲಿ ಮಠಪತಿಗಳಾಗಿ ಕೀರ್ತಿ ಹೆಚ್ಚಿಸಿದವರು

೩೪. ಜೈನರ ಜಿನ್ನಪ್ಪ : ಶಂಕರೆಪ್ಪಗೌಡರ ಅಪ್ತಸ್ನೇಹಿತ ರೈತ

೩೫. ಹಿರೇಕುರುಬ ಮಾಯಪ್ಪ : ಜಾಗೀರದಾರರ ರೈತ

೩೬. ಕಮತಿಗರ ಕರಿಯಪ್ಪ : ಜಾಗೀರದಾರರ ಕಮತಿಗ

೩೭. ಕಾಶೀಮಸಾಹೇಬ
೩೮. ಸಂಗಪ್ಪ
೩೯. ಬಸಪ್ಪ
೪೦. ರಾಯಣ್ಣ
: ಜಾಗೀರದಾರರ ಇನ್ನಿತರ ರೈತರು

೪೧. ಮಾಲಿಕಾರ ಮಲ್ಲಪ್ಪ
೪೨. ತಳವಾರ ಕಲ್ಲಪ್ಪ
೪೩. ತಳವಾರ ಕೆಂಚ
: ಗೌಡರ ಪರಿವಾರದವರು

೪೪. ಪಿಂಜಾರ ಲಾಡ
೪೫. ಅಂಬಿಗರ ಬಸಪ್ಪ
೪೬. ಅಂಗಡಿ ಶಿವರುದ್ರ
: ದಾದಾನ ಗರಡಿಮನಿ ದೋಸ್ತರು

೪೭. ಬಿರಾದಾರ ನಿಂಗವ್ವ
೪೮. ಮೂಲಿಮನಿ ತಾರವ್ವ
೪೯. ತಳವಾರ ನಾಗವ್ವ
೫೦. ಹಿರೇಕುರುಬ ನಿಂಬೆವ್ವ
: ರೈತರ ಹೆಂಡಂದಿರು

೫೧. ಗಿಡ್ಡ ಶಂಕರ್‍ಯಾ : ಪಡದಪ್ಪನ ಕೈಕೆಳಗೆ ಓಡಾಡುವ ಉಂಡಾಡಿ

೫೨. ದಳವಾಯಿ ತಿಪ್ಪ : ಹುಲಿಬ್ಯಾಟೆ ಹಳಬರ ಹಿರಿಯ

೫೩. ಕೊಂಬಿನ ಶಿಂಗ್ಯಾ : ಕೊಂಬು ಊದುವ ವೃತ್ತಿಯ ಹೊಲೆಯ

೫೪. ಮಾದರ ಚನ್ನ : ಪಾದಳ್ಳಿ ವತನದಾರ ಮಾದಿಗ

೫೫. ಮಾದರ ಮಲ್ಲಿ : ಚನ್ನನ ತಂಗಿ; ದೇವರಿಗೆ ಬಿಟ್ಟ ಬಸವಿ

೫೬. ಹೊಲೆಯರ ರುದ್ರ : ಹೊಲೆಯರಲ್ಲಿ ಪ್ರಮುಖ

೫೭. ಹೊಲೆಯರ ಬಾಳ್ಯಾ : ಪಾದಳ್ಳಿಯಲ್ಲಿ ಕಾಲರಾಕ್ಕೆ ಮೊದಲು ಆಹುತಿಯಾದವ

೫೮. ತಳವಾರ ರಂಗಿ : ಗೋಪಾಳಾಚಾರಿಯ ಉಪಪತ್ನಿ

೫೯. ದರಿಯಾ : ಓಲೆಕಾರ

೬೦. ರಡ್ಡೇರ ಯಂಕ
೬೧. ಲಕ್ಷ್ಮಿಟ್ಟಿ
: ಮಠದಲ್ಲಿ ಕೂಡುವ ಉಂಡಾಡಿಗಳು

## ಹೊರಗಿನಿಂದ ಪಾದಳ್ಳಿಗೆ ಬಂದವರು :

೬೨. ಮಹಾರಾಜರು : ಇಂದುಪುರದ ಸಂಸ್ಥಾಪಿಕರು; ಲಕ್ಷ್ಮೀಬಾಯಿಗೆ ಅಪ್ತಸಂಬಂಧ

೬೩. ಗಿಬ್ಬನ್ಸ್ ಸಾಹೇಬ : ಪಾದಳ್ಳಿಗೆ ಬಂದ ಅಸಿಸ್ಟಂಟ ಕಲೆಕ್ಟರ

೬೪. ಕೃಷ್ಣರಾಯ : ಪಾದಳ್ಳಿಗೆ ಬಂದ ಮಾಮಲೇದಾರ

೬೫. ರುಕ್ಮಿಣಿಬಾಯಿ : ಮಾಮಲೇದಾರರ ಕುಟುಂಬ;

೬೬. ಫಕರುದ್ದೀನ ಸಾಹೇಬ : ಪಾದಳ್ಳಿಗೆ ಬಂದ ಫೌಜದಾರರು

೬೭. ಜಕ್ಕಪ್ಪನವರು : ಪಾದಳ್ಳಿಗೆ ಬಂದ ಪ್ರಾಂತಕಚೇರಿ ಶಿರಸ್ತೇದಾರರು

೬೮. ಕೇಶವರಾಯ (ಅಡ್ಡಿ) : ಫೌಜದಾರರ ಅಡ್ಡಿ (orderly)

೬೯. ಗೋಪಾಳರಾಯ : ಮಾಮಲೇದಾರರ ಕಾರಕೂನ

೨೦. ಉಸ್ಮಾನ : ಮಾಮಲೇದಾರರ ಪಟ್ಟೇವಾಲಾ
೨೧. ಇಸ್ಮಾಯಿಲ್ : ಫಕರುದ್ದೀನರ ಪೋಲೀಸ ಸಿಪಾಯಿ
೨೨. ಬಾಳಾರಾಮ ಮಾರವಾಡಿ : ಪಾದಳ್ಳಿಗೆ ಬಂದು ನೆಲಸಿದ ವ್ಯಾಪಾರಸ್ಥ
೨೩. ವೆಂಕಣ್ಣ ಮಾಸ್ತರ : ಪಾದಳ್ಳಿಯ ಗಾವಠಿಶಾಲೆಯ ಶಿಕ್ಷಕರು
೨೪. ಕಲ್ಲನಗೌಡ : ಹಾವನೂರ ಗೌಡ
೨೫. ಚಂದ್ರಿ : ಅಜರಾಣಿಯ ಕಸಬಿ
೨೬. ಕಂಟ್ಯಾ : ಚಂದ್ರಿಯ ತಮ್ಮ
೨೭. ಪಂಜಾಬಿ ಲಾಮಾ : ಪಾದಳ್ಳಿಗೆ ಕುಸ್ತಿ ಆಡಲು ಬಂದವ
೨೮. ಉಸ್ತಾದ ಗುಲಾಬ : ಇಂದುಪುರದ ಪೈಲವಾನ; ಉಸ್ತಾದ.
೨೯. ಪೋಲಿಸ ಹವಾಲ್ದಾರ : ಪಾದಳ್ಳಿಗೆ ದಾದಾನನ್ನು ಹುಡುಕಲು ಬಂದವ
೩೦. ಹುಲಿಬ್ಯಾಟಿ ಹಳಬರು : ಜಾಗೀರದಾರರೊಡನೆ ಹುಲಿ ಬೇಟೆಗೆ ಹೋಗುವ ಹಳಬರು. ಸಾಮಾನ್ಯವಾಗಿ ಇವರು ಜಾಗೀರದಾರರ ವಾಡೆಯ ಹಿತ ಸಂಬಂಧ ನೋಡಿಕೊಳ್ಳುವ, ಅವರು ಹೇಳಿದ ಕೆಲಸ ಮಾಡುವ ಅವರ ಸಿಬ್ಬಂದಿಯವರಾಗಿದ್ದರು.
೩೧. ಕಟುಬುರು : ಗುನ್ಹೆಗಾರ ಜನಾಂಗವೆಂದು ಇವರನ್ನು ಸರಕಾರವು ಗಣಿಸಿ ಕ್ರಿಮಿನಲ್ ಟ್ರಾಯಿಬ್ಸ ಸೆಟಲ್‌ಮೆಂಟನಲ್ಲಿ ಕೆಲಕಾಲ ಇಟ್ಟಿತ್ತು. ಈ ಕಾದಂಬರಿಯ ಕಾಲದಲ್ಲಿ ಇವರು ಪಾದಳ್ಳಿಯ ಜಾಗೀರದಾರರ ಆಶ್ರಯದಲ್ಲಿ ಬಂದು ನೆಲಸಿದವರು. ಮೀನ ಹಿಡಿಯುವದು ಗಂಡಸರ ಮುಖ್ಯ ಹೋರೆ. ಕಿಳ್ಳಿಕ್ಯಾತರ ಆಟ ಆಡಿಸಿ ತೋರಿಸುವದು ಇವರ ವಿಶೇಷ ಉದ್ಯೋಗ. ಇವರ ಹೆಣ್ಣುಮಕ್ಕಳು ಹಚ್ಚಿ ಚುಚ್ಚುವ ಉದ್ಯೋಗ ಮಾಡುವರು.

:: ೧ ::

ಹನ್ನೆರಡು ತಾಸು ಕತ್ತಲೆ ತುಂಬಿದ ರಾತ್ರಿ ಮುಗಿದು, ಬೆಳಕು ಹರಿಯುವ ಸಂಧಿಕಾಲವು ವೈಶಿಷ್ಟ್ಯಪೂರ್ಣವಾದದ್ದು. ಕತ್ತಲೆ ಬೆಳಕು ಒಂದನ್ನೊಂದು ಅಪ್ಪಿಕೊಂಡಂತಿದ್ದರೂ ಅವಕ್ಕೆ ಅಗಲಿಕೆ ಅನಿವಾರ್ಯವಾಗಿರುತ್ತದೆ. ಆಗ ನಿದ್ದೆಯಿಂದ ಎಚ್ಚತ್ತ ಕಣ್ಣು ಈ ನೋಟದಿಂದ ಗೊಂದಲಗೆಡುವದು ಸ್ವಾಭಾವಿಕ. ಕತ್ತಲೆ ಬೆಳಕಿನ ಕನಸನ್ನು ಕಾಣುವಂತೆ ತೋರುತ್ತಿರುವಾಗ ಎರಡರಲ್ಲಿಯೂ ವಿರೋಧ ಎಲ್ಲಿಂದ ಬಂತು? ಒಂದು ದೃಷ್ಟಿಯಿಂದ ಅವೆರಡಕ್ಕೂ ಆನುವಂಶಿಕ ಸಂಬಂಧ ಇದೆ. ಸೃಷ್ಟಿಯಲ್ಲಿ ಒಂದು ದಿನದಲ್ಲಿಯ ಸಂಧಿಕಾಲ ಯುಗಯುಗಾಂತರಗಳ ಸಂಧಿಕಾಲದ ನೆನಪನ್ನು ಮತ್ತೆ ಮತ್ತೆ ತಂದುಕೊಡುತ್ತದೆ. ಅಂದ ಮೇಲೆ ರಾಷ್ಟ್ರದ ಜೀವನದಲ್ಲಿ ಒಂದು ಶತಮಾನ ಸರಿದು ಇನ್ನೊಂದು ಶತಮಾನ ಕಾಲಿಡುವ ಕಾಲಕ್ಕೆ ಮಹತ್ವ ಬರುತ್ತಿದ್ದರೆ ಆಶ್ಚರ್ಯವೇನಿಲ್ಲ.

ಸರಂಜಾಮಿ ಪದ್ಧತಿಯನ್ನು ಆಧರಿಸಿ ನಿಂತ ಸಮಾಜದ, ಅದರ ಪರಮ ಇಷ್ಟಾರ್ಥವೆನಿಸಿದ ಸಾಮ್ರಾಜ್ಯಶಾಹಿಯ ಸುಗ್ಗಿಯ ಕಾಲವಾದ ಹತ್ತೊಂಬತ್ತನೆಯ ಶತಮಾನ ಗತಿಸಿ ಹೊಸ ಶತಮಾನ ಇನ್ನೇನು ಹೊಸ ಧ್ಯೇಯಗಳನ್ನು ತೋರುವದೋ ಎಂದು ನಾಡಿನಲ್ಲಿ ಕುತೂಹಲ ಪ್ರಾರಂಭವಾಗಿತ್ತು. ಸ್ವಾತಂತ್ರ್ಯ, ಸಮತೆ, ರಾಷ್ಟ್ರೀಯವಾದ ಮೊದಲಾದ ಹೊಸ ವಿಚಾರಗಳಿಂದ ತುಂಬಿದ ಇಪ್ಪತ್ತನೆಯ ಶತಮಾನ ಕಾಲಿಡುವ ಸಂಧಿಕಾಲ ನಮ್ಮ ದೇಶದಲ್ಲಿ ಮಹತ್ವದ ಸ್ಥಿತ್ಯಂತರದ ಕಾಲ. ಹಳೆಯ ಸರಂಜಾಮಿ ಪದ್ಧತಿ ಅಳಿದಿಲ್ಲ; ಹೊಸ ಸಾಮಾಜಿಕ ವ್ಯವಸ್ಥೆ ರೂಪಗೊಂಡಿಲ್ಲ. ಪರಕೀಯರ ಪ್ರಭುತ್ವದಿಂದ ದೇಶವನ್ನು ವ್ಯಾಪಿಸಿದ ಅಜ್ಞಾನ ಜಡತನಗಳ ಕಾರ್ಗತ್ತಲೆ ಹರಿದಿಲ್ಲ. ದರ್ಪದ ಅಧಿಕಾರೀ ವರ್ಗದ ಸ್ವೇಚ್ಛಾಚಾರ, ಸ್ವಾರ್ಥಿಗಳ ಕುಟಿಲ ಕಾರಸ್ಥಾನ-- ಇದೇ ನ್ಯಾಯವೆಂಬ ಭಾವನೆಯಿಂದ ತಗ್ಗುತ್ತ ನಡೆದಿದ್ದರೂ ಅಜ್ಞರು ದುರ್ಬಲರು ಇವರ ಜಾಲದ ಭೀತಿಯಿಂದ ಇನ್ನೂ ಮುಕ್ತರಾಗಿಲ್ಲ. ವೇದಕಾಲದಿಂದ ನಡೆದು ಬಂದ ಜಾತೀಯ ಪದ್ಧತಿಗೆ ಸರಂಜಾಮಿ

ಪದ್ಧತಿಯ ಅಂಗವಾಗಿ ಹೊಸ ವರ್ಗಪದ್ಧತಿಯೊಂದು ಜೊತೆಯಾಗಿತ್ತು. ಅದರ ಫಲವಾದ ಸಾಮಾಜಿಕ ರೀತಿನೀತಿಗಳು ಇನ್ನೂ ಅಳಿದಿರಲಿಲ್ಲ. ಸಮಾಜವ್ಯವಸ್ಥೆಯ ತಳಹದಿಗೆ ಗೆದ್ದಲಿ ಹತ್ತಿದಂತಾಗಿ ಸಾವಿರಾರು ವರ್ಷಗಳಿಂದ ಕಟ್ಟಿದ ಮಂದಿರ ಬೀಳಬಹುದೆಂಬ ಭೀತಿಯಿತ್ತು. ಹೊಸ ಸಮಾಜವ್ಯವಸ್ಥೆಯ ರೂಪು ರೇಷೆಗಳ ಅಸ್ಪಷ್ಟ ಚಿತ್ರವು ಧ್ಯೇಯವಾದಿಗಳ ಕನಸುಗಳಲ್ಲಿ ಮಾತ್ರ ಸುಳಿದಿತ್ತು.

ಆದರೆ ದಿನನಿತ್ಯದ ಬದುಕನ್ನು ನಡೆಯಿಸುವ ಸಾಮಾನ್ಯ ಮನುಷ್ಯನಿಗೆ ಇದಾವುದರ ಅರಿವೂ ಇರಲಿಲ್ಲ. ಇದು ಇತಿಹಾಸಕಾರನ ಕಣ್ಣಿಗೆ ಕಾಣುವ ಭೀಕರ ಚಿತ್ರ. ಯಾವ ಪ್ರಳಯದ ಶಕ್ತಿಯೂ ಜೀವನದ ಬೀಜವನ್ನು ಸಂಪೂರ್ಣವಾಗಿ ನಾಶಮಾಡಲಾರದು. ಐತಿಹಾಸಿಕ ಅನರ್ಥಗಳ ನೆರಳಿನಲ್ಲಿಯೇ ಬದುಕು ಸಾಗಿಸುವ ಧೈರ್ಯ ಸಾಮಾನ್ಯ ಮನುಷ್ಯನಿಗೆ ಇದೆ. ಹತ್ತೊಂಬತ್ತನೆಯ ಶತಮಾನದ ಅಂತ್ಯಭಾಗದಲ್ಲಿಯೂ ಸಾಮಾನ್ಯ ಮನುಷ್ಯನ ಸುಖದುಃಖಗಳು ನಿತ್ಯನೈಮಿತ್ತಿಕವಾಗಿದ್ದವು. ಆದರೆ ವಾತಾವರಣಕ್ಕೆ ತಕ್ಕ ಹಾಗೆ ಅವನ ಜೀವನಕ್ರಮ ಬೇರೆಯಾಗಿತ್ತು. ಹೊಸ ವೈಜ್ಞಾನಿಕ ಶೋಧಗಳಿಂದ ಅವನ ಇರುವಿಕೆ ಇನ್ನೂ ಬದಲಾಗಿರಲಿಲ್ಲ. ರಾಜ್ಯಕ್ರಾಂತಿ ಅವನ ಜೀವನದ ಅಂಚಿನಲ್ಲಿಯೇ ಸುಳಿದಾಡುತ್ತಿತ್ತು. ರಾಜಕೀಯ ಅವ್ಯವಸ್ಥೆಯಿಂದಾಗಿ ಅವನ ವಿತ್ತಜೀವಿತಗಳು ಸುರಕ್ಷಿತವಾಗಿರಲಿಲ್ಲ. ನಾಗರಿಕತೆಯ ಹಕ್ಕು-ಕಾಯಿದೆಗಳು ಅವನಿಗೆ ಪರಿಚಿತವಾಗಬೇಕಾದರೆ ಇನ್ನೂ ದೀರ್ಘ ಕಾಲ ಬೇಕಾಗಿತ್ತು. ನಾಡಿನ ಜೀವನದಲ್ಲಿ ಮಹತ್ವದ ಬದಲಾವಣೆಗಳಾದವು. ಇದ್ದ ರಾಜ್ಯಗಳು ಬಿದ್ದು ಹೊಸ ರಾಜ್ಯಗಳು ತಲೆಯೆತ್ತಿದವು. ದೇಶೀಯ ರಾಜರೆಲ್ಲ ಪರಕೀಯ ಆಳಿಕೆಗೆ ಶರಣಾಗತರಾಗಿದ್ದರು. ಸಮುದ್ರದ ಅಲೆಗಳಗುಂಟ ವಿದೇಶೀಯ ಸಂಸ್ಕೃತಿಯ ಪ್ರವಾಹವೊಂದು ಮೆಲ್ಲಗೆ ಹರಿದುಬರುತ್ತಿತ್ತು.

ಇದರ ಪ್ರಭಾವ ನಾಡಿನ ಎಲ್ಲ ಜನರ ಮೇಲೆ ಬಿದ್ದಿದ್ದರೆ ಆಶ್ಚರ್ಯವೇನಲ್ಲ. ವರ್ಷೆರಡುವರ್ಷಕ್ಕೊಮ್ಮೆ ಯಾವುದೋ ದೂರದ ಊರಿನಿಂದ ಹಬ್ಬಿದ ವಾರ್ತೆಯೊಂದು ಇವರೆದೆಯನ್ನು ನಡುಗಿಸುತ್ತಿತ್ತು. ಆದರೆ ಕೆಲವೊಂದು ಕಾಲ ಮಾತ್ರ ಗತಕಾಲದ ಸಂಸ್ಕೃತಿಯ ವಿನಾಶದ ಪರಿಣಾಮವಾಗಿ ಸಾಮಾನ್ಯ ಮನುಷ್ಯ ಅಜ್ಞಾನದ ಆಳದಲ್ಲಿಯೇ ಮುಳುಗಿದ್ದ. ಅವನ ಪಾಲಿಗೆ ಊರಿನ ಗೌಡ-ಕುಲಕರ್ಣಿಗಳೇ ದೊರೆಗಳು. ಅವರು ಹೇಳಿದ್ದೇ ವೇದ; ನಡೆಸಿದ್ದೇ ಅಧಿಕಾರ. ಬಡತನವಂತೂ ಅವರಿಗೆ ಪರಂಪರಾಗತ ಆಸ್ತಿಯಾಗಿತ್ತು.

ಇಡೀ ದೇಶವನ್ನೆ ಆ ಕಾಲದಲ್ಲಿ ಕಗ್ಗತ್ತಲೆ ವ್ಯಾಪಿಸಿತೆಂದು ಹೇಳಿದ ಮೇಲೆ ಅದರ ನೆರಳು ಕೃಷ್ಣಾನದಿಯ ದಡದ ಮೇಲಿರುವ ಪರಶುರಾಮಕ್ಷೇತ್ರವನ್ನೂ ವ್ಯಾಪಿಸಿತೆಂಬುದನ್ನು ಹೇಳುವದು ಅನಗತ್ಯ.

ಸ್ಥಳಪುರಾಣದಲ್ಲಿ ಈ ಗ್ರಾಮವು ಪರಶುರಾಮಕ್ಷೇತ್ರವೆಂದು ವರ್ಣಿಸಲ್ಪಟ್ಟಿದೆ. ವ್ಯಕ್ತಿಗಳ ಹೆಸರು ಕೂಡ ಅನೇಕ ಸಂದರ್ಭಗಳಲ್ಲಿ ರೂಪಾಂತರ ಹೊಂದುವದನ್ನು ನೋಡುತ್ತಿರುವ ನಮಗೆ ಈ ಗ್ರಾಮದ ಹೆಸರು ಸಾವಿರ ವರ್ಷಗಳಿಂದ ಬದಲಾಗಿಲ್ಲವೆಂದು ಹೇಗೆ ಹೇಳಬೇಕು? ಹೆಸರು ಪರಶುರಾಮಕ್ಷೇತ್ರದಿಂದ ರಾಮಕ್ಷೇತ್ರ, ರಾಮನಹಳ್ಳಿ, ರಾಮಪಾದಳ್ಳಿಯಾಗಿ ಕೊನೆಗೆ ಪಾದಳ್ಳಿಯಾಯಿತು. ಬಹುಶಃ ನಾಡಿನ ಸಂಸ್ಕೃತಿಯ ಅವನತಿಯ ಇತಿಹಾಸ ಈ ಹೆಸರಿನ ಇತಿಹಾಸದಲ್ಲಿಯೂ ಪ್ರತಿಫಲಿಸಿರಬಹುದು. ಆ ಗ್ರಾಮದ ಜಾಗೀರದಾರರ ಹಳೆಯ ಕಾಗದಪತ್ರಗಳಲ್ಲಿ ಈ ಬದಲಾವಣೆಯ ಕತೆಯನ್ನು ಓದಬಹುದು.

ಆ ಗ್ರಾಮದ ಜನರೇ ಹೇಳುವ ಒಂದು ದಂತಕಥೆ ಈ ಪ್ರದೇಶದಲ್ಲೆಲ್ಲ ವಿಖ್ಯಾತವಾಗಿದೆ. ಪುರಾಣಕಾಲದಲ್ಲಿ ಅಂಧಕಾಸುರನೆಂಬ ರಾಕ್ಷಸ ಇದೇ ಗ್ರಾಮದಲ್ಲಿ ಬೀಡುಬಿಟ್ಟಿದ್ದನಂತೆ. ಪರಶುರಾಮನು ಅವನ ಸಂಹಾರ ಮಾಡಿ ಈ ಗ್ರಾಮವನ್ನು ಬ್ರಾಹ್ಮಣರಿಗೆ ಅಗ್ರಹಾರ ಹಾಕಿ ಕೊಟ್ಟನಂತೆ. ಆದರೆ ಆ ರಾಕ್ಷಸನ ರಕ್ತಸಂಬಂಧಿಕರು ಇನ್ನೂ ಜೀವಿಸಿದ್ದರು. ಅವರು ಕಾಲಾಂತರದಿಂದ ಬ್ರಾಹ್ಮಣರನ್ನು ಓಡಿಸಿ ಇಲ್ಲಿ ತಮ್ಮ ಅಧಿಕಾರ ಸ್ಥಾಪಿಸಿದರಂತೆ. ಈ ಕಥೆ ಇಲ್ಲಿಯ ಜೀವನದ ಒಂದು ಸತ್ಯವನ್ನು ಮಾತ್ರ ನಿರೂಪಿಸುತ್ತದೆ. ಇನ್ನೂ ಇಲ್ಲಿಯ ನಿವಾಸಿಗಳಲ್ಲಿ ಸುತ್ತಮುತ್ತಲಿನ ಹಳ್ಳಿಗಳನ್ನು ಸುಲಿದು ಜೀವನ ಸಾಗಿಸುವ ಕಟುಬರ ಕತೆಗಳು ಈ ದಂತಕಥೆಗಿಂತ ಭೀಕರವಾಗಿವೆ. ಹತ್ತೊಂಬತ್ತನೆಯ ಶತಮಾನದಲ್ಲಿ ಈ ಗ್ರಾಮದ ಅರಸನಾದ ಓರ್ವ ಮರಾಠಾ ಸರದಾರನು ಹುಲಿಬ್ಯಾಟಿ-ಹಳಬರೆಂಬ ಕಾಟಕರ ತಂಡವನ್ನು ಸಾಕಿ, ಅವರಿಂದ ದರೋಡೆ ಹಾಕಿಸಿ ತನ್ನ ತಿಜೋರಿಯನ್ನು ತುಂಬಿಕೊಳ್ಳುತ್ತಿದ್ದನಂತೆ. ಈ ಕಾರಣಕ್ಕಾಗಿ ಅವನ ಅಧಿಕಾರಕ್ಕೊಳಪಟ್ಟ ಎಂಬತ್ತೆಂಟು ಹಳ್ಳಿಗಳನ್ನು ಖಾಲಸಾ ಮಾಡಿ ಇದೊಂದೇ ಗ್ರಾಮವನ್ನು ಅವನ ಅರಸೊತ್ತಿಗೆಯ ಕುರುಹಿಗಾಗಿ ಉಳಿಸಿದರೆಂದು ಈಗಿನ ಜಾಗೀರದಾರರ ಮನೆಯ ಕಾಗದಪತ್ರಗಳಿಂದ ಕಂಡುಬರುವದು.

ಜಾಗೀರಿಯಲ್ಲಿ ಈ ಗ್ರಾಮವೊಂದೇ ಉಳಿದ ಮೇಲೆ ಅರಸನ ಆದಾಯದ

ಮುಖ್ಯ ಬಾಬು ಹಾದಿ ಬಡಿಯುವದೇ ಆಗಿತ್ತು. ಪೆಂಡಾರಿಗಳನ್ನು ಮೀರಿಸಿದ ಹುಲಿಬ್ಯಾಟಿ-ಹಳಬರ ಕಾಟ ಸುತ್ತುಮುತ್ತಲಿನ ಪ್ರದೇಶಗಳಲ್ಲಿ ಜನರ ನಿತ್ಯ ವ್ಯವಹಾರಕ್ಕೂ ಮಾರಕವಾಗಿ ಪರಿಣಮಿಸಿತು. ಕಂಪನಿ-ಸರಕಾರ ಹೋಗಿ ರಾಣೀ ಸರಕಾರವು ಸ್ಥಾಪಿತವಾದ ಮೇಲೆ ಜಾಗೀರದಾರರ ಪಾರುಪತ್ಯವಾಗುವದೆಂದು ಜನರು ನೆನೆಸಿದ್ದರು. ಆದರೆ ರಾಣೋಜಿರಾಯ ರಾಜಕಾರಣದ ಚದುರಂಗ ದಾಟವನ್ನು ಚೆನ್ನಾಗಿ ಬಲ್ಲವನು. ಜಾಗೀರದಾರರ ಹಸ್ತಕರು ಇಂಗ್ಲೀಷ ಅಧಿಕಾರಿ ಗಳ ಕಿವಿ ಊದಿ ಇವರಂಥ ರಾಜನಿಷ್ಠರೇ ಈ ಭಾಗದಲ್ಲಿಲ್ಲವೆಂದು ಬಿಂಬಿಸಿದರು. ತಪಾಸಣಿಗೆಂದು ಬಂದ ರೆಸಿಡೆಂಟ್ ಸಾಹೇಬನು ಜಾಗೀರದಾರರ ವಾಡೆಯ ಸುಖ ವಿಲಾಸಗಳಲ್ಲಿಯೇ ಮಗ್ನನಾದವನು ಹೊರಗೆ ಕಾಲಿಡಲೇ ಇಲ್ಲ. ಇದರಿಂದ ರಾಣೋಜಿರಾಯ ಜೀವದಿಂದ ಇರುವ ವರೆಗೆ ಹಳಬರ ಉದ್ಯೋಗವು ಅಬಾಧಿತ ವಾಗಿ ಸಾಗಲು ಅನುಕೂಲವಾಯಿತು.

ರಾಣೋಜಿರಾಯನ ಮರಣದ ನಂತರ ಅವನ ಇಬ್ಬರು ಹೆಂಡಂದಿರಲ್ಲಿ ಆಸ್ತಿಯ ಒಡೆತನದ ಬಗ್ಗೆ ಕಲಹ ಪ್ರಾರಂಭವಾಯಿತು. ಜಾಗೀರಿಗೆ ಸಂಬಂಧಿಸಿದ ಎಲ್ಲ ಕಾಗದಪತ್ರಗಳನ್ನು ಕಿರಿಯ ಹೆಂಡತಿ ಪುತಳಾಬಾಯಿ ಎತ್ತಿಕೊಂಡು ತವರು ಮನೆ ಸೇರಿದಳು. ಹಿರಿಯ ಹೆಂಡತಿ ಲಕ್ಷ್ಮೀಬಾಯಿಯನ್ನು ಗ್ರಾಮದ ಪ್ರಜೆಗಳು ತಾಯಿಯಂತೆ ಪ್ರೀತಿವಿಶ್ವಾಸದಿಂದ ಕಾಣುತ್ತಿದ್ದರು. ಜನರ ಹಾರ್ದಿಕ ಸಹಕಾರ ದಿಂದ ಅವಳು ಜಾಗೀರಿಯನ್ನು ಕೆಲ ವರ್ಷ ನಡೆಸಿಕೊಂಡು ಹೋದಳು. ಅಷ್ಟರಲ್ಲಿ ಬ್ರಿಟಿಷ್ ಸರಕಾರದವರು ನಿಯಮಿಸಿದ ಇನಾಮ್ ಕಮೀಶನ್ನದವರು ಈ ಜಾಗೀ-ರಿಗೆ ಸಂಬಂಧಿಸಿದ ಕಾಗದಪತ್ರಗಳನ್ನು ಹಾಜರಪಡಿಸಲು ನೋಟೀಸು ಕೊಟ್ಟರು. ಆದರೆ ಲಕ್ಷ್ಮೀಬಾಯಿಯ ಹತ್ತಿರ ಕಾಗದಪತ್ರಗಳಿರಲಿಲ್ಲ ! ಜಾಗೀರು ಖಾಲಸಾ ಮಾಡುವದಾಗಿ ಅಧಿಕಾರಿಗಳು ತಿಳಿಸಿದರು. ಈ ಸಮಾಚಾರ ರಾಣೋಜಿರಾಯನ ಅಣ್ಣನ ಮಗನಿಗೆ ತಿಳಿಯಿತು. ಅವನು ತನ್ನ ಎಂಬತ್ತೆಂಟು ಹಳ್ಳಿಗಳ ಇಂದುಪುರ ಸಂಸ್ಥಾನಕ್ಕೆ ಒಡೆಯನಾಗಿದ್ದನು. ತನ್ನ ಅಜ್ಜನಿಗೆ ಪಾಲುಮಾಡಿಕೊಟ್ಟ ಸಂಬಂಧದ ಕಾಗದಪತ್ರಗಳಲ್ಲಿ ಪಾದಳ್ಳಿಗ್ರಾಮದಲ್ಲಿಯ ನೂರಿಪ್ಪತ್ತು ನಂಬರುಗಳು ಖಾಸಗಿ ಜಮೀನು ಎಂಬ ಆಧಾರ ಸಿಕ್ಕಿತು. ಅದನ್ನು ಇನಾಮ್‌ಕಮೀಶನ್ನಿಗೆ ಹಾಜರ ಪಡಿಸಿದ್ದರಿಂದ ಪಾದಳ್ಳಿಯ ಗ್ರಾಮ ಖಾಲಸಾ ಆದರೂ ನೂರಿಪ್ಪತ್ತು ನಂಬರು ಭೂಮಿ ಲಕ್ಷ್ಮೀಬಾಯಿಗೆ ಉಳಿಯಿತು. ಇದರಿಂದ ತನ್ನ ಆಪ್ತನಾದ ಸಂಸ್ಥಾನಿಕ

ನಲ್ಲಿ ವಿಶ್ವಾಸ ಹುಟ್ಟಿತು. ಅಲ್ಲಿಗೆ ಇವಳು ಹೋಗುವದು, ಮಗನಿಂದ ಆದರಾತಿಥ್ಯ ಸ್ವೀಕರಿಸುವದು ಪ್ರಾರಂಭವಾಯಿತು. ಇದು ಪಾದಳ್ಳಿಯ ಜನರಿಗೆ ಸೇರಲಿಲ್ಲ. ಭಾಗಾದಿಗಳ ಮನೆಯ ಆತಿಥ್ಯ ಸ್ವೀಕರಿಸುವದು ಸಂಸ್ಥಾನದ ಕೀರ್ತಿಗೆ ಕಲಂಕ ವೆಂಬ ಸುದ್ದಿ ಊರಲ್ಲಿ ಹಬ್ಬಿತು. ಇದೇ ಭಾವನೆ ಮುಂದೆ ಆಗಬಹುದಾದ ನೂರಾರು ಸನ್ನಿವೇಶಗಳಿಗೆ ಎಡೆಮಾಡಿಕೊಟ್ಟಿತು.

ಇಂದುಪುರದ ರಾಜವಾಡೆಯಲ್ಲಿ ಸಂಸ್ಥಾನಿಕನ ಕಕ್ಕಿಯೆಂದು ಲಕ್ಷ್ಮೀ ಬಾಯಿಗೆ ವಿಶೇಷ ಮರ್ಯಾದೆ ಸಿಗತೊಡಗಿತು. ವರ್ಷದಲ್ಲಿ ನಾಲ್ಕಾರು ಸಾರೆ ಇಂದುಪುರಕ್ಕೆ ಹೋಗಿಬರುವದು ನಡೆಯಿತು. ಈ ಸಾರೆ ನವರಾತ್ರಿಗೇ ಲಕ್ಷ್ಮೀ ಬಾಯಿ ಇಂದುಪುರಕ್ಕೆ ಹೋದವಳು ದೀಪಾವಳಿಯಾದರೂ ತಿರುಗಿ ಬರಲಿಲ್ಲ. ನವ ರಾತ್ರಿಯ ಉತ್ಸವದಲ್ಲಿ ಹತ್ತು ದಿನ ವಾಡೆಯಿಂದ ಭೋಜನವ್ಯವಸ್ಥೆ ನಡೆದು ಸಂಭ್ರಮದ ಉತ್ಸವವಾಗುವದು ಪರಂಪರೆಯಾಗಿತ್ತು. ಆದರೆ ಈ ಸಲ ವಾಡೆ ಯಲ್ಲಿ ಲಕ್ಷ್ಮೀಬಾಯಿಯೇ ಇಲ್ಲದ್ದರಿಂದ ಯಾರೋ ಏನೇನೋ ಮಾತಾಡಿದರು. ಜನರಿಗೆ ಲಕ್ಷ್ಮೀಬಾಯಿಯ ಬಗ್ಗೆ ಅಸಂತೃಪ್ತಿ ತಲೆದೋರಿತು. ಇದೇ ಹೊತ್ತಿಗೆ ಅಜರಾಣಿಯ ಗೌಡರಾದ ಪಾಟೀಲ ಯಶವಂತರಾಯರೂ ಅಲ್ಲಿದ್ದರು. ಅವರು ಮನೆತನಸ್ಥ ಗೌಡರು; ಪುತಳಾಬಾಯಿಯ ಸೋದರಮಾವ; ಸ್ವತಃ ರಾಣೋಜಿ ರಾಯರ ಸೋದರಳಿಯ. ಪಾದಳ್ಳಿಯ ಜಾಗಿರದಾರರ ವಾಡೆ ಉತ್ಸವವಿಲ್ಲದೆ ಸಪ್ಪ ಗಾಯಿತೆಂದು ಅವರಿಗೂ ಕೆಡುಕೆನಿಸಿತು.

ಊರ ಗೌಡರು, ದೇಶಪಾಂಡೆಯವರು, ಕುಲಕರ್ಣಿ ಮನೆತನದವರು, ರೈತರು ಎಲ್ಲಾ ಸೇರಿ ಯಶವಂತರಾಯರಿಗೆ ಪುತಳಾಬಾಯಿಯನ್ನೇ ವಾಡೆಯಲ್ಲಿ ಕರೆತರಲು ಬಿನ್ನವಿಸಿಕೊಂಡರು. ಊರ ಜನರ ಇಚ್ಛೆ ಹಾಗಿದ್ದರೆ ತಾವು ಅದನ್ನು ಪೂರ್ಣಗೊಳಿಸುವದು ಕರ್ತವ್ಯವೆಂದು ಅವರಿಗೂ ಅನಿಸಿತು.

ಮರುವರ್ಷ ಗಣೇಶಚವತಿಗೆ ಲಕ್ಷ್ಮೀಬಾಯಿ ಯಥಾಪ್ರಕಾರ ಇಂದುಪುರಕೆ ನಡೆದಳು. ರಾಜಪುರೋಹಿತರಾದ ಬಾಳಾಚಾರ್ಯರು "ತಿರುಗಿ ಬರುವದೆಂದು?" ಎಂದು ಕೇಳಿದಾಗ "ಇಂದುಪುರದ ಮಹಾರಾಜರು ಅಪ್ಪಣೆ ಕೊಟ್ಟಾಗ ತಿರುಗಿ ಬರುತ್ತೇನೆ" ಎಂದು ಅವಳು ಸಹಜವಾಗಿ ಉತ್ತರವಿತ್ತಳು. ಅವಳು ಊರಿಗೆ ಹೋದಾಗ ಪುತಳಾಬಾಯಿಯನ್ನು ಕರೆತರುವದೆಂದು ಮೊದಲೇ ನಿರ್ಧರಿಸ ಲಾಗಿತ್ತು. ಪುತಳಾಬಾಯಿ ಪಾದಳ್ಳಿಗೆ ಬಂದಳು. ಆದರೆ ಒಬ್ಬಳೇ ಬರಲಿಲ್ಲ.

*

ಪುತಳಾಬಾಯಿಯ ತಮ್ಮನಾದ ಕನಕೇರಿಯ ಗೌಡ ಬಾಪೂಸಾಹೇಬನೂ ಅವಳ ಜೊತೆಗೆ ಬಂದ. ಬಾಪೂಸಾಹೇಬನ ಹೆಂಡತಿಯೂ ಜೊತೆಗಿದ್ದುದರಿಂದ ಒಂದು ಸಣ್ಣ ಪರಿವಾರವೇ ಆಗಿತ್ತು. ನವರಾತ್ರಿಯ ಉತ್ಸವಕ್ಕೆ ಬಾಪೂಸಾಹೇಬನ ದರ್ಬಾರಿ ನಡೆವಳಿಕೆಯಿಂದ ವಿಶೇಷ ಕಳೆ ಬಂದಿತ್ತು. ದಸರೆಯ ದಿನ ಹುಲಿಬ್ಯಾಟೆ ಹಳಬರಿಗೆಲ್ಲ ಬಾಪೂಸಾಹೇಬನಿಂದ ಹೊಸ ವಲ್ಲಿ, ಅಂಗಿಗಳ ಉಡುಗೊರೆ ದೊರೆಯಿತು. ಗೌಡರ ಮನೆಗೆ ಪುತಳಾಬಾಯಿ ಸ್ವತಃ ಹೋಗಿ ಬನ್ನಿ ಕೊಟ್ಟು ಬಂದಳು. ಹಿರೇಮಠದ ಪಡದಪ್ಪನವರ ಮಠದ ಜೀರ್ಣೋದ್ಧಾರಕ್ಕಾಗಿ ಪುತಳಾಬಾಯಿಯ ಹಸ್ತದಿಂದ ನೂರು ರೂಪಾಯಿಗಳ ದೇಣಿಗೆ ಸಂದಿತು. ನವರಾತ್ರಿಯಲ್ಲಿ ಬ್ರಹ್ಮ-ವೃಂದಕ್ಕೆ ವಾಡೆಯಿಂದ ನಿತ್ಯ ಸೀದಾ ದೊರೆಯಿತು.

ದೀಪಾವಳಿಯ ಹಬ್ಬ ಮುಗಿಸಿಕೊಂಡು ಒಂದು ಸಂಜೆ ಲಕ್ಷ್ಮೀಬಾಯಿ ಮರಳಿ ಊರಿಗೆ ಬಂದಳು. ಗ್ರಾಮದ ವಿರೋಧವೇ ಅವಳನ್ನು ಸ್ವಾಗತಿಸಿತು. ವಾಡೆಯ ಹೆಬ್ಬಾಗಿಲಿನ ಭವ್ಯವಾದ ಹೊಸ್ತಿಲನ್ನು ಅವಳಿನ್ನೂ ದಾಟಿರಲಿಲ್ಲ. ಅಷ್ಟರಲ್ಲಿ, 'ವಾಡೆಯಲ್ಲಿ ಕಾಲಿಟ್ಟರೆ ಜೋಕೆ' ಎಂದು ಹೇಳಲು, ದಳವಾಯಿಗೆ ಬಾಪೂಸಾಹೇಬ ಸದರಿನಲ್ಲೇ ಕುಳಿತು ಗರ್ಜಿಸಿದನು. ಲಕ್ಷ್ಮೀಬಾಯಿ ಬೆರಗಾದರೂ ಧೈರ್ಯದಿಂದ ಮುಂದೆ ಬಂದಳು. ಹುಲಿಬ್ಯಾಟಿ-ಹಳಬರ ದಳವಾಯಿ ಲಕ್ಷ್ಮೀ-ಬಾಯಿಯ ಮುಂದೆ ಬಂದು, ವ್ಯಂಗ್ಯವಾಗಿ ಮುಜುರೆ ಮಾಡಿದ. ಲಕ್ಷ್ಮೀಬಾಯಿಗೆ ಇನ್ನೂ ದಿಗಿಲಾಯಿತು. ದಳವಾಯಿ, "ಯವ್ವಾ, ಈಗ ವಾಡೇದ ನೆಪ್ಪಾತೇನು ನಿಮಗ? ಹಬ್ಬದಾಗ ವಾಡೇ ಹಾಳಗೆಡವಿ ಹೋಗಿ ಈಗ ಬಂದರ ಯಾರು ಕೇಳಬೇಕು? ದೇವರು ನಮ್ಮ ಮ್ಯಾಗ ಇದ್ದಾ ಅಂತ ಚಿಕ್ಕಅವ್ವಾ ಅವರು ನಾವು ಕರ್‍ಯಾಣಾ ಬಂದರು. ದೊಡ್ಡ ಹಬ್ಬದಾಗ ವಾಡೆದಾಗ ದೀಪಕ್ಕ ದಿಕ್ಕಿಲ್ಲಧಾಂಗ ಮಾಡಿದವರಿಗ ಇಲ್ಲೇನ್ ದಗದ? ಎಲ್ಲಿಗೆ ಹೋಗಿದ್ದಿರೋ ಅಲ್ಲೇ ಹೋಗೂದಿನ್ನ" ಎಂದು ನಾಟಕೀಯವಾಗಿ, ಮರ್ಯಾದೆ ಮೀರಿ ಮಾತಾಡಿದನು.

ಲಕ್ಷ್ಮೀಬಾಯಿಗೆ ನೆಲ ಎದ್ದು ಬಡಿದಂತಾಯಿತು. ದಳವಾಯಿ ತಿಪ್ಪನೇ ಈ ರೀತಿ ಮಾತಾಡುವವನು? ತನ್ನ ಜೀವಮಾನದಲ್ಲಿಯೇ ಇಂಥ ವಿರೋಧವನ್ನು ಅವಳು ಕಂಡಿರಲಿಲ್ಲ. ದಳವಾಯಿಗೆ ಈ ಧೈರ್ಯ ಎಲ್ಲಿಂದ ಬಂತು? ಲಕ್ಷ್ಮೀ-ಬಾಯಿಗೆ ಕ್ಷಣಮಾತ್ರದಲ್ಲಿ ಎಲ್ಲವೂ ಅರ್ಥವಾಯಿತು. ಬಾಪೂಸಾಹೇಬ ಕಲಿಸಿದ ಮಾತುಗಳನ್ನು ತಿಪ್ಪ ಕಲಿತಂತೆ ನುಡಿದಿದ್ದ. ಪಾಪ, ಅವನಿಗೇನು? ಸದರಿನಲ್ಲಿ

ಕುಳಿತವರೆಲ್ಲ ಯಜಮಾನರೇ! "ಅಲ್ಲೋ ತಿಪ್ಪ, ನೀನು ಹುಲಿಬ್ಯಾಟಿ-ಹೆಳಬರ ದಳವಾಯಿ. ನಮ್ಮ ಉಪ್ಪು ಉಂಡಽ ನಿಮ್ಮ ಇಡೀ ವಂಶ ಜೀವದದ್ದು. ಅಂಥಾದ್ದು ನೀನಽ ಎದುರು ನಿಲ್ಲತೀಯಾ?" ಎಂದು ಲಕ್ಷ್ಮೀಬಾಯಿ ತಿಪ್ಪನ ಅಂತರಂಗವನ್ನು ಮಾತಾಡಿಸಿದಳು.

ದಳವಾಯಿ ತಿಪ್ಪ ಈ ಮಾತುಗಳಿಂದ ಕರಗಿ ಹೋದ. ತಲೆಯುದ್ದದ ಬಿದಿರು-ಬಡಿಗೆಯನ್ನು ಹಿಡಿದು, ಅಭಿಮಾನದಿಂದ ಸೆಟೆದು ನಿಂತವನು ಜೆತ್ತದಂತೆ ಮಣಿದುಹೋದ. ಬಡಿಗೆಗೆ ತಲೆ ಹಚ್ಚಿ ಕಣ್ಣೀರನ್ನು ಮರೆಮಾಡಲು ಪ್ರಯತ್ನಿಸಿದನು. ನಡುಗುವ ಕೈ ಈ ಪ್ರಯತ್ನವನ್ನು ವಿಫಲಗೊಳಿಸಿತು. ವಲ್ಲಿಯ ಸೆರಗಿನಿಂದ ಕಣ್ಣೀರನ್ನೊರಸಿಕೊಳ್ಳುತ್ತ, "ಯವ್ವಾ ಹೊಟ್ಟಿ ಹೊಲ್ಯಾರ ಮನಿ ಹೊಗಿಸಿತ್ರಂತ. ಅನ್ನದ ರಿಣಾ ಕೆಟ್ಟದು. ನೀವಿಲ್ಲಿಗೆ ಬರಾಕಿಲ್ಲ ಅಂತ ತಿಳದು, ಎಲ್ಲೆ ಆಸರ ತಪ್ಪೀತೋ ಅಂತ ಚಿಕ್ಕಅವ್ವಾ ಅವರ ಕಾಲಿಗಿ ಬಿದ್ವಿ. ನನ್ನ ಪರೀಕ್ಷಾ ಮಾಡಬ್ಯಾಡ ಯವ್ವಾ...." ಎಂದವನೇ ಮುಂದೆ ಮಾತು ಹೊರಡದೆ ಅಲ್ಲಿಯೇ ಕಟ್ಟಿಗೆ ಆತು ಕುಸಿದು ಕುಳಿತ.

ಲಕ್ಷ್ಮೀಬಾಯಿ ತನ್ನ ಮಾರ್ಗ ನಿರಾತಂಕವಾಯಿತೆಂದುಕೊಂಡು ಒಳಗೆ ನಡೆದಳು. ತಾನೇ ಜಾಗೀರದಾರನೆಂಬ ದರ್ಪದಿಂದ ಸದರಿನಲ್ಲಿ ಕುಳಿತ ಬಾಪೂಸಾಹೇಬನನ್ನು ಕೆಣಕುವ ಸಿಟ್ಟಿನಿಂದ ನೋಡಿದಳು. ಅವಳು ಕಟ್ಟೆಯ ಮೇಲೆ ಕಾಲಿಡುತ್ತಲೇ, ಇಲ್ಲಿಯ ವರೆಗೆ ಕೀಲಿಕೈಯೊಂದಿಗೆ ಆಟವಾಡುತ್ತಿದ್ದ ಬಾಪೂಸಾಹೇಬ ಜಗ್ಗನೇ ಎದ್ದು ಬಂದು ಲಕ್ಷ್ಮೀಬಾಯಿಯ ಕಾಲು ಮುಟ್ಟಿ ನಮಸ್ಕಾರ ಮಾಡಿ, "ಅಕ್ಕಾಸಾಹೇಬ, ಯಾವಾಗ ಬಂದಿರಿ? ಎಲ್ಲಾ ಖುಶಾಲ ಹೌದಲ್ಲೊ?" ಎಂದು ಕುಶಲಪ್ರಶ್ನೆ ಮಾಡಿದ. ಲಕ್ಷ್ಮೀಬಾಯಿ ಮಾತಾಡದೆ ಒಳಗೆ ನಡೆದಳು. ಪರಿವಾರ ಅವಳನ್ನು ಹಿಂಬಾಲಿಸಿತು.

ಊರ ತುಂಬ ಸುದ್ದಿ ಹಬ್ಬುವದೇನೂ ತಡವಾಗಲಿಲ್ಲ. ಭೂಮಿಯಲ್ಲಿ ತನಗೆ ಪಾಲು ಕೊಡಬೇಕೆಂದು ಪ್ರತಿಭಾಬಾಯಿ ಕೇಳಿದ್ದು, 'ನಿನಗ ಪಾಲು ಬೇಕಾಗಿದ್ದರೆ ನೀನು ಹೊತ್ತುಕೊಂಡು ಹೋದ ಬೆಳ್ಳಿ ಬಂಗಾರ, ಮುತ್ತುರತ್ನಗಳ ಒಡವೆಗಳನ್ನು, ನಗದು ಹಣ, ಕಾಗದಪತ್ರ ಇವುಗಳನ್ನೆಲ್ಲ ತಿರುಗಿ ತಂದು ಕೊಟ್ಟರೆ ಪಾಲು ಸಿಕ್ಕೀತು' ಎಂದು ಲಕ್ಷ್ಮೀಬಾಯಿ ಹೇಳಿದ್ದು, ಈ ಸುದ್ದಿ ನಾಲ್ಕೈದು ದಿನಗಳಲ್ಲಿಯೇ ಮನೆಮನೆಯ ಚರ್ಚೆಯಾಗಿ ಪರಿಣಮಿಸಿತು. ಕೆಲವರು ಲಕ್ಷ್ಮೀಬಾಯಿಯ ಪರ

ವಾಗಿ, ಇನ್ನುಳಿದವರು ಪುತಳಾಬಾಯಿಯ ಪರವಾಗಿ ವಾದಿಸಲು ಪ್ರಾರಂಭಿಸಿದರು. ಪಾದಳ್ಳಿಯ ಜಾಗೀರದಾರರ ವಾಡೆ ಆ ಗ್ರಾಮದ ಜನರಿಗೆಲ್ಲ ಕುತೂಹಲದ ಕೇಂದ್ರವಾಗಿತ್ತು; ಎಲ್ಲರಿಗೂ ಅವರ ಆಗುಹೋಗುಗಳ ಬಗ್ಗೆ ವಿಶೇಷ ಆಸಕ್ತಿ ಇತ್ತು. ಒಂದು ದೃಷ್ಟಿಯಿಂದ ಜಾಗೀರದಾರರ ಮನೆತನ ಸಾರ್ವಜನಿಕವಾಗಿತ್ತು. ಅಲ್ಲಿಯ ಒಂದು ಸಾಮಾನ್ಯ ಘಟನೆ ಊರ ಜೀವನದ ಬಣ್ಣವನ್ನೇ ಬದಲಿಸ ಬಹುದಾಗಿತ್ತು.

ಊರ ನ್ಯಾಯಗಳನ್ನೆಲ್ಲ ತೀರಿಸುವ ಜಾಗೀರದಾರರ ಮನೆಯ ನ್ಯಾಯ ವನ್ನು ಊರವರೇ ತೀರಿಸಬೇಕಲ್ಲವೆ? ಊರ ಪಂಚರೆಲ್ಲ ಜಾಗೀರದಾರರ ವಾಡೆಯ ಭವ್ಯವಾದ ದಿವಾಣಖಾನೆಯಲ್ಲಿ ಸಮ್ಮಿಲಿತರಾದರು. ಬಾಪೂಸಾಹೇಬ ಕೂಡಿದ ಪ್ರತಿಷ್ಠಿತರನ್ನೆಲ್ಲ ದರ್ಬಾರೀ ವಿನಯದಿಂದ ಸ್ವಾಗತಿಸಿದ. ಲಕ್ಷ್ಮೀಬಾಯಿ ಹಾಗೂ ಪುತಳಾಬಾಯಿಯವರು ಒಳಗಿನ ಕೋಣೆಯಲ್ಲಿ ಕುಳಿತಿದ್ದರು. ಪುತಳಾಬಾಯಿಗೆ ತನ್ನ ಗಂಡನ ಆಸ್ತಿಯಲ್ಲಿ ಪಾಲು ದೊರೆಯಬೇಕೆಂದು ಬಾಪೂಸಾಹೇಬನ ವಾದ. ಆ ವಾದಕ್ಕೆ ಯಾರೂ ಇಲ್ಲೆನ್ನಲಾರರು. ಅದು ನ್ಯಾಯವಾದದ್ದೇ. ಆದರೆ ಪುತಳಾ ಬಾಯಿ ತೌರುಮನೆಗೆ ಒಯ್ದು ತುಂಬಿದ ವಸ್ತ್ರ-ಒಡವೆಗಳನ್ನು ದುಡ್ಡು-ದುಗ್ಗಾಣಿ ಯನ್ನು ತಿರುಗಿ ತಂದು ಕೊಡಲಿ ಎಂದು ಲಕ್ಷ್ಮೀಬಾಯಿ ಸ್ವಲ್ಪ ನಿಷ್ಠುರವಾಗಿಯೇ ಹೇಳಿದಳು. ಕೆಲವರಿಗೆ ಅದೂ ಸರಿಯೆನಿಸಿತು. ಆದರೆ ಭೂತಕಾಲದ ಸತ್ಯ ಅದನ್ನು ಕೇಳುವವರ ಮೇಲೆಯೇ ಅವಲಂಬಿಸುತ್ತದೆ. ರಾಣೋಜಿರಾಯರು ಬೇಟೆಗೆ ಹೋದಾಗ ಕುದುರೆಯ ಮೇಲಿಂದ ಬಿದ್ದು ಅಕಸ್ಮಾತ್ತಾಗಿ ಮರಣಹೊಂದಿದ್ದರು. ಗಂಡ ಸತ್ತ ದುಃಖದಲ್ಲಿ ಪುತಳಾಬಾಯಿ ಉಟ್ಟ ಸೀರೆಯ ಮೇಲೆಯೇ ತವರು ಮನೆ ಸೇರಿದ್ದಳು. ಆಗ ವಾಡೆಯಲ್ಲಿದ್ದವಳು ಲಕ್ಷ್ಮೀಬಾಯಿ. ಕಾಗದಪತ್ರ, ತಿಜೋರಿಯ ಕೀಲಿಕೈ ಎಲ್ಲಾ ಅವಳ ಕಡೆಗೇ ಇದ್ದವು. ಬೆಳ್ಳಿ-ಬಂಗಾರ ಹಾಗೂ ನಗದು ಹಣದಲ್ಲಿ ಪಾಲು ಕೊಡಬೇಕಾಗುವದೆಂದು ಲಕ್ಷ್ಮೀಬಾಯಿ ಈ ವಾದ ಹೂಡಿದ್ದಾಳೆ. ಈ ಆರೋಪದಲ್ಲಿ ಏನೂ ಅರ್ಥವಿಲ್ಲವೆಂದು ಬಾಪೂಸಾಹೇಬ ಸ್ಪಷ್ಟವಾಗಿಯೇ ಆಡಿತೋರಿಸಿದ. ಕೂಡಿದ ಜನರಿಗೆ ಅದೂ ನಿಜವಿರಬಹುದೆನಿ ಸಿತು.

ತಲೆಗೊಬ್ಬರು ತಮ್ಮ ಅಭಿಪ್ರಾಯ ಹೇಳಿದರು. ಲಕ್ಷ್ಮೀಬಾಯಿ ಹೀಗೆ ಮಾತಾಡುವದು ಅವರ ಘನತೆಗೇ ಕುಂದು ಎಂದು ಪಡದಪ್ಪನವರು ಗಂಭೀರ

ವಾಗಿ ಮೂಪಲಿಸಿದರು. ಹಾಗೆ ನೋಡಿದರೆ ಜಾಗೀರದಾರರ ಆಸ್ತಿಯ ಮೇಲೆ ಇಬ್ಬರದೂ ಸಮಾನಾಧಿಕಾರವಿತ್ತು. ಮಕ್ಕಳಾದರೂ ಹುಟ್ಟಿದ್ದರೆ ಈ ವಾದಕ್ಕೆ ಆಸ್ಪದವೇ ದೊರೆಯುತ್ತಿರಲಿಲ್ಲ. ಕೆಲ ಹೊತ್ತು ಪಂಚರ ನಿರ್ಣಯ ಹೊಯ್ದಾಡಿತು. ಇಬ್ಬರೂ ಕೂಡಿ ಒಮ್ಮತದಿಂದ ಇರಲಿಕ್ಕಾಗುವದಿಲ್ಲವೇ ಎಂದು ಕೆಲವರು ಕೇಳಿದರು. ಅದು ಅಸಾಧ್ಯವೆಂಬ ಮಾತು ಮರುಕ್ಷಣದಲ್ಲಿಯೇ ಗೊತ್ತಾಯಿತು.

ಕೊನೆಗೆ, ಭೂಮಿ-ಸೀಮೆಗಳಲ್ಲಿ ಮಾತ್ರ ಸರಿಯಾದ ಪಾಲು ಮಾಡಬೇಕೆಂದು ಗೊತ್ತಾಯಿತು. ಬೆಳ್ಳಿ-ಬಂಗಾರ, ವಸ್ತ್ರ-ಒಡವೆಗಳ ಬಗ್ಗೆ ಸ್ಪಷ್ಟವಾಗಿ ಏನೂ ಹೇಳಲು ಬರುವಂತಿರಲಿಲ್ಲ. ಅವರವರ ಕಡೆಗಿದ್ದವುಗಳೆಲ್ಲ ಅವರವರಿಗೇ ದಕ್ಕಾಗಬೇಕೆಂದು ಪಂಚರು ನಿರ್ಣಯ ಹೇಳಿದರು. ಜಾಗೀರದಾರರ ವತನದಲ್ಲಿ ಹಿಂದೆ ಎಂದೂ ಪಾಲಾಗಿರಲಿಲ್ಲ; ಆದ್ದರಿಂದ ಪಾಲುಮಾಡಲು ತನ್ನ ಒಪ್ಪಿಗೆಯಿಲ್ಲವೆಂದು ಲಕ್ಷ್ಮೀಬಾಯಿ ಹಟ ಹಿಡಿದಳು.

"ಹಾಗೆಲ್ಲ ನೀವು ಹಟಾನ್ನ ಹಿಡಿದರ ದೈವದವರ ಮಾತಿಗೆ ಮೀರಿ ನಡಧಾಂಗ ಆಗೂದಿಲ್ಲೆ? ಇನ್ನು ಮುಂದೆ ಜಾಗೀರದಾರರ ನ್ಯಾಯದಾಗ ಯಾರೂ ಕೈಹಾಕದ್ಹಾಂಗ ಆಗತೈತಿ. ಪುತಳಾಬಾಯಿಸಾಹೇಬರಿಗೆ ರೈತರೆಲ್ಲಾ ಕಬುಲಾಯತಿ ಬರಕೊಟ್ಟು ಪಾಲು ಒಪ್ಪಿಸಿದರ ನೀವೇನು ಮಾಡಾವರದೀರಿ? ಆವ್ಯಾಗ ನೀವು ತಕರಾರು ತಗದರ ನಾವೇನು ಕೇಳೋದಿಲ್ಲ" ಹಿರೇಮಠದ ಪಡದಪ್ಪನವರು ದೈವದವರ ಪರವಾಗಿ ಎಚ್ಚರಿಕೆ ಕೊಟ್ಟರು.

ಅಂದಿನ ದೈವದವರ ಸಭೆ ಗೊಂದಲದಲ್ಲಿಯೇ ಮುಗಿಯಿತು. ಮುಂದೆ ಕೆಲವೇ ದಿವಸಗಳಲ್ಲಿ ಹುಲಿಬ್ಯಾಟಿ-ಹಳಬರು ತಾವು ಪುತಳಾಬಾಯಿಗೇ ವಿಧೇಯರಿರುವೆವೆಂದು ಸಾರಿದರು. ಬಾಪೂಸಾಹೇಬ ವಾಡೆಯಲ್ಲಿ ಪುತಳಾಬಾಯಿಯ ಪ್ರತಿನಿಧಿಯಾಗಿ, ಅನಭಿಷಿಕ್ತ ದೊರೆಯಾಗಿ ತಳವೂರಿದನು. ಮೊದಲೇ ಊರಲ್ಲಿ ಪ್ರಸ್ಥಾಪಿತವಾಗಿದ್ದ ಅವನ ವರ್ಚಸ್ಸು ಈಗ ದೈವದವರ ಅಧಿಕೃತ ಬೆಂಬಲದಿಂದ ಇನ್ನಿಷ್ಟು ದೃಢವಾಯಿತು.

ಲಕ್ಷ್ಮೀಬಾಯಿ ಪರಿಸ್ಥಿತಿಯನ್ನೆಲ್ಲ ಕೂಡಲೆ ಅರ್ಥಮಾಡಿಕೊಂಡಳು. ಹಾದಳ್ಳಿಯಲ್ಲಿ ಎಲ್ಲರೂ ತನಗೆ ಪ್ರತಿಕೂಲರಾಗಿರುವದನ್ನು ಕಂಡು ಅವಳ ಮನಸ್ಸು ಮರುಗಿತು. ಇಂಥ ವಿರೋಧಮಯ ವಾತಾವರಣದಲ್ಲಿ ತಾನಿನ್ನು ಸುಖವಾಗಿ ಜೀವಿಸುವದು ಅಸಾಧ್ಯವೆಂದು ಅವಳಿಗೆ ಮನವರಿಕೆಯಾಗತೊಡಗಿತು.

ಜನರ ವಿಶ್ವಾಸ ಎಷ್ಟು ಚಂಚಲವಾಗಿರುವದೆಂಬುದರ ಬಗ್ಗೆ ಪ್ರಮಾಣ ದೊರೆತು, ಒಂದು ರೀತಿಯ ವಿರಕ್ತಭಾವನೆ ಅವಳಲ್ಲಿ ಮೂಡಿತು. ಒಂದು ದಿನ ಪುತಳಾಬಾಯಿಯ ಜೊತೆಗೆ ಮಾತನಾಡುತ್ತಿರುವಾಗ ಸಹಜವಾಗಿಯೆಂಬಂತೆ, "ಇಷ್ಟು ದಿನಾ ಈ ಆಸ್ತಿ ನಾ ಉಣಕೋತ ಬಂದೀನು. ಇನ್ನಮ್ಯಾಗ ಅದರ ಮಾಲ್ಕೀ ನಿಂದ್ಯ ಆತು. ಯಾಕೋ ಇಲ್ಲೆ ಜೀವ ನಿಲ್ಲಗೊಡುದಿಲ್ಲ. ಮನಸ್ಸು ಬಂದ ಕಡೇ ಹೊಕ್ಕೇನು." ಎಂದು ಹೇಳಿದಳು. ಪುತಳಾಬಾಯಿಯ ಮನಸ್ಸೂ ಈ ಮಾತುಗಳನ್ನು ಕೇಳಿ ಕರಗಿತು. ಅಕ್ಕನ ಜೊತೆಗೆ ಬಡಿದಾಡುವ ಪ್ರಸಂಗವನ್ನೇ ಹಗಲೆಲ್ಲ ನಿರೀಕ್ಷಿಸುತ್ತಿದ್ದುದರಿಂದ ಅವಳ ಹೃದಯ ನಿಷ್ಠುರವಾಗುತ್ತಿತ್ತು. ಆದರೆ ಈಗ ಈ ಮಾತಿಗೇನು ಹೇಳಬೇಕು? ತಾನು ಮಾತಾಡಿದರೆ ಏನಾದರೂ ಹುಚ್ಚುತನವಾದೀತೆಂಬ ಹೆದರಿಕೆಯಿಂದ ಪುತಳಾಬಾಯಿ ಸುಮ್ಮನಿದ್ದಳು. ಆದರೂ ಅವಳ ಹೃದಯ ರಹಸ್ಯವಾಗಿಯೇ ಕಣ್ಣೀರು ಸುರಿಸಿತು.

ಬಾಪೂಸಾಹೇಬ ಮಾತ್ರ, "ನೀವೇನೂ ಹೋಗೋ ಅಗತ್ಯ ಇಲ್ಲ. ಹಿರೇರಾಗಿ ಇಲ್ಲೇ ಇರಬಹುದಲ್ಲ" ಎಂದು ಶುಷ್ಕ ಉಪಚಾರದ ಒಂದೆರಡು ಮಾತುಗಳನ್ನು ಆಡಿದ. ಲಕ್ಷ್ಮೀಬಾಯಿ ಅವನಿಗೆ ಉತ್ತರವನ್ನೇ ಕೊಡಲಿಲ್ಲ. ಅವಳ ಅಭಿಮಾನಕ್ಕೇ ಬಲವಾದ ಪೆಟ್ಟು ಬಿದ್ದಿತ್ತು. ಒಂದೇ ಒರೆಯಲ್ಲಿ ಎರಡು ಖಡ್ಗಗಳು ಸ್ನೇಹದಿಂದಿರಲಾರವೆಂಬ ಅನುಭವ ಅವಳಿಗೆ ಇದೀಗ ಬಂದಿತ್ತು. ಹೃದಯವೇ ಬಿರಿದು ಹೋಗುವಂಥ ದುಃಖ ಅವಳಿಗಾಗಿದ್ದರೂ ಅದನ್ನೇನೂ ತೋರಗೊಡಲಿಲ್ಲ. ಅಂದು ಗೋಪಾಲಕೃಷ್ಣನ ಗುಡಿಗೆ ಹೋಗಿ ಕಣ್ತುಂಬ ದೇವರ ದರ್ಶನವನ್ನು ಪಡೆದಳು. ತಿರುಗಿ ಬಂದು ವಾಡೆಯ ದೇವರ ಮನೆಯಲ್ಲಿ ಒಂದು ತಾಸು ಕುಳಿತು ಮೌನವಾಗಿಯೇ ಕಣ್ಣೀರಿಟ್ಟಳು. ಅವಳ ವಿಚಿತ್ರ ವರ್ತನೆಯನ್ನೂ, ಗಂಭೀರ ಮೌನವನ್ನೂ ಎಲ್ಲರೂ ಕಣ್ಣಿಟ್ಟು ನೋಡುತ್ತಿದ್ದರೇ ಹೊರತು, ಅವಳನ್ನು ಮಾತಾಡಿಸುವ ಧೈರ್ಯ ಒಬ್ಬರಿಗೂ ಆಗಲಿಲ್ಲ. ಅದೇ ದಿನ ತನ್ನ ಪರಿವಾರದೊಂದಿಗೆ ಅವಳು ಊರು ಬಿಟ್ಟು, ತನ್ನ ಇಬ್ಬರು ಹೆಣ್ಣುಮಕ್ಕಳೊಡನೆ ಬಡೋದೆಗೆ ಹೊರಟು ಹೋದಳು.

ಜಾಗೀರದಾರರ ವಾಡೆಗೆ ಈಗ ಬಾಪೂಸಾಹೇಬನೇ ಅಧಿಕಾರಿಯಾದ. ಪುತಳಾಬಾಯಿಯ ತಮ್ಮನಾದ್ದರಿಂದ ಜಾಗೀರಿನ ಹಕ್ಕುಬಾಧ್ಯತೆಗಳೆಲ್ಲ ತನಗೇ ಮೀಸಲಾದವೆಂಬ ದರ್ಪದಿಂದಲೇ ವರ್ತಿಸತೊಡಗಿದ. ಬಾಪೂಸಾಹೇಬ ಬಾಲ್ಯ

ದಿಂದಲೇ ತಂದೆಯನ್ನು ಕಳೆದುಕೊಂಡು ವಿಲಾಸಕ್ಕೆ ಅಂಟಿಕೊಂಡ ವ್ಯಕ್ತಿಯಾಗಿ ಬೆಳೆದು ಬಂದಿದ್ದ. ಶ್ರೀಮಂತಿಕೆಯ ವಿಲಾಸದ ಮುಖವಷ್ಟೇ ಅವನಿಗೆ ಪರಿಚಿತ ವಾಗಿತ್ತು. ಜನ್ಮಜಾತವಾದ ಗೌರವ ಅವನಿಗಿರಲಿಲ್ಲ. ಈಗಂತೂ ಅಕ್ಕನ ಜಾಗೀರು ಅನಾಯಾಸವಾಗಿ ಅವನಿಗೆ ದೊರೆತಿತ್ತು. ಹಿರೇಮಠದ ಪಡಪಯ್ಯ ನವರು ಅವನಿಗೆ ಆಪ್ತಮಿತ್ರರಾದರು. ಗೌಡ-ಕುಲಕರ್ಣಿಯವರ ಮನೆತನದ ಹಿಂಡು ಆವನ ಅಧಿಕಾರವನ್ನು ಸ್ಥಿರಗೊಳಿಸುವದರಲ್ಲಿ ನಿರತವಾಗಿತ್ತು.

ಬಾಪೂಸಾಹೇಬ ಜಾಗೀರದಾರನೆಂದು ಮಾತ್ರ ಊರಲ್ಲಿ ಗಣ್ಯವ್ಯಕ್ತಿಯಾಗಿ ದರಬಾರು ನಡೆಸಹತ್ತಿದ. ವಾಡೆಯ ಕಮತ-ಕಟ್ಟಿ ತನಗೇನೂ ಸಂಬಂಧವಿಲ್ಲವೆನ್ನು ವಂತೆ ಊರ ಕಾರಭಾರದಲ್ಲಿ ನಿರತನಾದ. ಒಕ್ಕಲುತನ ಯಾರದೋ ಪಾಲಾ ಯಿತು. ವಾಡೆಯ ಮೊದಲಿನ ವರ್ಚಸ್ಸು ಇಳಿದು ಹೋಯಿತು. ಸಿಕ್ಕವರೆಲ್ಲ ವಾಡೆಯ ಸದರಿನಲ್ಲಿ ಸೇರತೊಡಗಿದರು. ರಾಣೋಜಿರಾಯನ ಕಾಲದಿಂದ ವಾಡೆಯ ಭೂಮಿ-ಸೀಮೆಗಳ ವ್ಯವಸ್ಥೆಯನ್ನು ನೋಡಿಕೊಳ್ಳುತ್ತ ಬಂದಿದ್ದ ಶಿಲೆ: ದಾರ ನಾನಾ ಅನಿವಾರ್ಯ ವ್ಯಕ್ತಿಯಾಗಿ ಪರಿಣಮಿಸಿದ. ವಾಡೆಯ ಆಂತರಿಕ ವ್ಯವ ಹಾರದ ಕೀಲಿಕೈ ಅವನ ಕಡೆಗೇ ಇದ್ದಿತೆಂದು ಪರಿವಾರದಲ್ಲಿ ಅವನ ಮಹತ್ವ ಹೆಚ್ಚಿತು. ನಾನಾ ಅದರ ದುರುಪಯೋಗವನ್ನು ಮಾತ್ರ ಮಾಡಿಕೊಳ್ಳಲಿಲ್ಲ. ವಾಡೆಯ ಗೌರವವನ್ನು ಕಾಪಾಡುವ ಹೊಣೆ ತನ್ನದೆಂದೇ ತಿಳಿದುಕೊಂಡು ನಡೆಯಹತ್ತಿದ.

:: ೨ ::

ಬಾಪೂಸಾಹೇಬ ವಾಡೆಯಲ್ಲಿ ಇರಹತ್ತಿ ಎಂಟು ವರ್ಷಗಳಾದವು. ಹೊಸ ಹೊಸದಾಗಿ ಪಾದಳ್ಳಿಯವರು ಅವನನ್ನು ಅಪರಿಚಿತನಂತೆ ನೋಡಿದ್ದರೂ, ಆ ಮೇಲೆ ಮಾತ್ರ ಅವನು ಪಾದಳ್ಳಿಯವನೇ ಆದ. ಜಾಗೀರದಾರರಿಗೆ ಸಲ್ಲಬೇಕಾದ ಮಾನಮರ್ಯಾದೆಗಳೆಲ್ಲ ಅವನಿಗೆ ಸಲ್ಲತೊಡಗಿದವು. ಆದರೆ ಅವನ ಉತ್‌ಶೃಂಖಲ ನಡೆವಳಿಕೆಯಿಂದ ಜನರಿಗೆ ಅವನ ಬಗ್ಗೆ ಬೇಸರ ಹುಟ್ಟಿತು. ಅವನ ಮುಂದೆ ಆಡುವ ಧೈರ್ಯವಿರದಿದ್ದರೂ, ಹಿಂದೆ ಆಡಿಕೊಳ್ಳಲು ಯಾರೂ ಹಿಂಜರಿಯಲಿಲ್ಲ.

ವಾಡೆಯ ಅಭಿಮಾನವನ್ನು ಕಾಯಲು ಜನ್ಮದಾರಭ್ಯ ತನ್ನ ಜೀವನವನ್ನು ಸವೆಸಿದ ಶಿಲೇದಾರ ನಾನಾನಿಗೂ ಬಾಪೂಸಾಹೇಬನ ನಡತೆಯ ಬಗ್ಗೆ ಆದರವಿರಲಿಲ್ಲ. ಬಾಪೂಸಾಹೇಬನ ಸ್ಥಾನಗೌರವದ ಬಗ್ಗೆ ಸಂಪೂರ್ಣ ಅರಿವಿದ್ದದರಿಂದಲೇ ಅವನು ಯಾವ ಅಭಿಪ್ರಾಯವನ್ನೂ ವ್ಯಕ್ತಮಾಡುವ ಗೋಜಿಗೆ ಹೋಗಿರಲಿಲ್ಲ. ಅಗತ್ಯದ ಕೆಲಸವಿದ್ದಾಗ ಮಾತ್ರ ನಾನಾ ಬಾಪೂಸಾಹೇಬನನ್ನು ಕಂಡು ಮಾತಾಡುತ್ತಿದ್ದ. ಉಳಿದ ವೇಳೆಯಲ್ಲೆಲ್ಲ ಆದಷ್ಟು ಗೌರವದ ಅಂತರವನ್ನಿಟ್ಟುಕೊಂಡೇ ನಡೆದಿದ್ದ. ಹೆಂಡತಿ ತೀರಿಕೊಂಡ ಮೇಲೆ ಈಗ ಅವನು ವಾಡೆಯಲ್ಲಿಯೇ ಬಂದು ಜೀರೆ ಇರಹತ್ತಿದ. ಆದರೂ ಕೂಡ ಬಾಪೂಸಾಹೇಬನೊಡನೆ ಅವನ ಸಂಬಂಧ ಮೊದಲಿನಂತೆಯೇ ಇತ್ತು. ಹೊಲ-ಮನೆಗಳ ಆಡಳಿತದಲ್ಲಿಯೆ ಅವನ ಹೊತ್ತೆಲ್ಲ ಕಳೆದು ಹೋಗುತ್ತಿತ್ತು. ಏನಾದರೂ ವೇಳೆ ಉಳಿದಿದ್ದರೆ ಊರ ಕಾರಭಾರ ಅವನ ಪಾಲಿಗಿದ್ದೇ ಇರುತ್ತಿತ್ತು. ಮೊದಲಿನಿಂದಲೂ ಸಾರ್ವಜನಿಕ ವ್ಯವಹಾರಗಳಲ್ಲಿ ನಾನಾ ಗೌರವದ ಪಾಲುಗಾರನಾಗಿದ್ದ. ಹೀಗಾಗಿ ಬಾಪೂಸಾಹೇಬನೊಡನೆ ಸಲಿಗೆಯನ್ನು ಬೆಳೆಸಿಕೊಳ್ಳಲು ಅವನಿಗೆ ಅವಕಾಶವೇ ಇರಲಿಲ್ಲ.

ಹೆಂಡತಿ ತೀರಿಕೊಂಡ ನಂತರ ನಾನಾನಿಗೆ ಜೀವನೋತ್ಸಾಹವೇ ತೀರಿದಂತೆ ಆಗಿತ್ತು. ನಡಿಗೆಯಲ್ಲಿ ಈಗ ಮೊದಲಿನ ಸೆಡವು ಉಳಿದಿರಲಿಲ್ಲ; ಚೂರಿಯಂಥ ಹದನಾದ ನೋಟವುಳ್ಳ ಕಣ್ಣುಗಳು ಈಗ ವಿಷಾದದ ಛಾಯೆಯಿಂದ ತುಂಬಿಕೊಂಡವು.

ಬಿಲ್ಲಿನ ಸೆಟೆದ ಹೆದೆಯಂತಿದ್ದ ದೇಹ ಈಗ ದುಃಖದ ಭಾರದಿಂದ ಸಡಿಲಿತು. ಜೀವನದಲ್ಲಿ ಆಸೆ ಹುಟ್ಟಿಸಲು ಆಧಾರವೆಂದರೆ ಅವನ ಮಗಳು ಚಿಮಣಾ ಒಬ್ಬಳೇ. ಚಿಮಣಾ ಸೀರೆ ಉಡತೊಡಗಿದಂದಿನಿಂದ ತಾಯಿಯ ರೂಪವನ್ನೇ ಅಚ್ಚಳಿಯದೆ ಅನುಸರಿಸಿದ್ದಳು. ತಂದೆಯ ಆರೋಗ್ಯವನ್ನೂ ತಾಯಿಯ ಸೌಂದರ್ಯವನ್ನೂ ಸಹಜವಾಗಿ ಪಡೆದ ಅವಳು ಪಾದಳ್ಳಿಯ ಹುಡುಗಿಯರಲ್ಲೇ ಅತ್ಯಂತ ಚಲುವೆ ಎನಿಸಿಕೊಂಡಳು. ಅಂಥ ಬಡತನದಲ್ಲೂ ಪ್ರೀತಿಯಿಂದ ಸಾಕಿ ಬೆಳೆಸಿದ್ದರಿಂದ ಚಿಮಣಾಳ ರೂಪ ದಿನಕ್ಕೊಂದು ರೀತಿಯಂತೆ ವರ್ಧಿಸುತ್ತಿತ್ತು. ಅವಳ ಸೌಂದ-ರ್ಯದ ಈ ಬೆಳವಣಿಗೆ ನಾನಾನ ಮನಸ್ಸಿನಲ್ಲಿ ಚಿಂತೆಯನ್ನು ಹುಟ್ಟಿಸಿತು. ಎಲ್ಲಿ ಯಾದರೂ ವರ ನೋಡಿ ಅವಳ ಮದುವೆ ಮಾಡಿ ಕೃತಾರ್ಥನಾಗಬೇಕೆಂದು ನಾನಾ ಎಣಿಕೆ ಹಾಕಹತ್ತಿದ.

ಆದರೆ ಆ ಕೆಲಸ ಅಷ್ಟೇನೂ ಸುಲಭವಾಗಿರಲಿಲ್ಲ. ಮಗಳನ್ನು ಒಬ್ಬೊಂಟಿ ಯಾಗಿ ಬಿಟ್ಟು ಹೋಗುವುದಾದರೂ ಹೇಗೆ? ತಮ್ಮ ಲಕ್ಷ್ಮಣನ ಹೆಂಡತಿಯೂ ತೀರಿಕೊಂಡದ್ದರಿಂದ ಅವನ ಮನೆಯಲ್ಲೂ ಅವಳನ್ನು ಬಿಟ್ಟು ಹೋಗುವಂತಿರ ಲಿಲ್ಲ. ಸಹಜವಾಗಿ ಇದರ ಬಗ್ಗೆ ಒಮ್ಮೆ ಪುತಳಾಬಾಯಿಯ ಎದುರಿಗೆ ಮಾತು ತೆಗೆದಾಗ ನಾನಾನ ಸಮಸ್ಯೆ ಬಿಟ್ಟಿತು. ಪುತಳಾಬಾಯಿ ಚಿಮಣಾಳ ರಕ್ಷಣೆಯ ಭಾರವನ್ನು ಸಂತೋಷದಿಂದ ಹೊತ್ತಳು.

ಪುತಳಾಬಾಯಿ ಚಿಮಣಾಳನ್ನು ತನ್ನ ಹೊಟ್ಟೆಯ ಮಗಳಂತೆಯೇ ನೋಡಿ ಕೊಂಡಿದ್ದಳು. ವಾಡೆಯಲ್ಲಿ ಇರಹತ್ತಿದಂದಿನಿಂದ ಒಬ್ಬೊಂಟಿಗಳಾದ ಇವಳಿಗೆ ಇನ್ನೊಂದು ಹೆಣ್ಣುಜೀವದ ಸಹವಾಸ ಅಗತ್ಯವಾಗಿತ್ತು. ಅವರಿಬ್ಬರಲ್ಲಿಯೂ ಸಹಜ ವಾಗಿಯೇ ಅನ್ಯೋನ್ಯ ಸ್ನೇಹ ಬೆಳೆದುಬಂದಿತ್ತು. ಚಿಮಣಾ ಪುತಳಾಬಾಯಿಯ ಸೀರೆಯನ್ನುಟ್ಟುಕೊಂಡು ತಿರುಗಾಡುತ್ತಿರುವಾಗ ಅವಳೂ ವಾಡೆಗೆ ಸಂಬಂಧವಿದ್ದವ ರಂತೆಯೇ ವರ್ತಿಸುತ್ತಿದ್ದಳು. ಚಿಮಣಾಳ ರೂಪದ ಹೊಗಳಿಕೆ ಪುತಳಾಬಾಯಿಯ ದಿನದ ಮಾತಾಗಿತ್ತು.

ಜ್ಯೇಷ್ಠಮಾಸ ಬಂದಿತು. ಮಗಳಿಗೆ ವರ ನೋಡಲು ನಾನಾ ಕೊಲ್ಲಾ-ಪುರಕ್ಕೆ ಹೋಗಬೇಕಾಯಿತು. ನಾನಾನ ಹೆಂಡತಿ ರುಕಮಾ ಕೊಲ್ಲಾಪುರದವಳೇ. ಹೆಂಡತಿ ಸತ್ತ ಮೇಲೆ ಅವನು ಆ ಊರಿಗೆ ಹೋಗಿರಲೇ ಇಲ್ಲ. ಗತಕಾಲದ ಸ್ಮೃತಿಯು ಅವನಿಗೆ ಬೇಡವಾಗಿತ್ತು. ಆದರೆ ಈಗ ವರನ ಶೋಧಾರ್ಥವಾಗಿ ಹೋಗಲೇ

ಬೇಕಾಗಿ ಬಂದದ್ದರಿಂದ, ಪುತಳಾಬಾಯಿಗೆ ಚಿಮಣಾಳ ಮೇಲೆ ಒಂದು ಕಣ್ಣಿಡಲು ಹೇಳಿ, ಬಾಪೂಸಾಹೇಬನಿಗೂ ಒಂದು ಮಾತು ತಿಳಿಸಿ ನಾನಾ ಊರು ಬಿಟ್ಟ.

ನಾನಾ ಊರಲ್ಲಿದ್ದಾಗ ಬಾಪೂಸಾಹೇಬ ಎರಡು ಹೊತ್ತು ಊಟಕ್ಕೆ ಮಾತ್ರ ಅಡಿಗೆಮನೆಗೆ ಹೋಗುತ್ತಿದ್ದ. ಉಳಿದ ವೇಳೆಯಲ್ಲಿ ವಾಡೆಯ ಸದರಿನಲ್ಲಿ ಕುಳಿತು ಹಿಂಡು ಜನರೊಡನೆ ಹರಟೆ ಕೊಚ್ಚುವದೇ ಅವನಿಗೆ ಕೆಲಸವಾಗಿತ್ತು. ಇಲ್ಲದಿದ್ದರೆ ಮಠದಲ್ಲಿ ಪಡದಪ್ಪನವರ ಸಾನಿಧ್ಯದಲ್ಲಿ ಕೆಲ ವೇಳೆ ಹೋಗುತ್ತಿತ್ತು. ಆದರೆ ನಾನಾ ಊರಿಗೆ ಹೋದ ಮೇಲೆ ವಾಡೆಯ ಒಳ ಆಡಳಿತದಲ್ಲೂ ಲಕ್ಷ್ಯ ವಹಿಸುವದು ಅನಿವಾರ್ಯವಾಗಿತ್ತು.

ಕಾರಹುಣ್ಣಿಮೆಯ ಮುನ್ನಾದಿನ; ಹೊನ್ನುಗ್ಗಿಯಾದ್ದರಿಂದ ವಾಡೆಯ ಎತ್ತುಗಳಿಗೆಲ್ಲ ಒಳ್ಳೆಣ್ಣೆ, ಹಾಗೂ ಕೋಳಿತತ್ತಿಯ ಗೊರಟ ಹಾಕಿಸಿ ನದಿಗೆ ಈಸಲು ಕಳಿಸಬೇಕಾಗಿತ್ತು. ಬಾಪೂಸಾಹೇಬ ಧಾಬೆಯಲ್ಲಿಯೇ ನಿಂತು ಆ ಕೆಲಸ ಮಾಡಿಸಬೇಕಾಯಿತು. ನಡುವೆ ಒಳ್ಳೆಣ್ಣೆ ತೀರಿದ್ದರಿಂದ ಬಾಪೂಸಾಹೇಬ ಎಣ್ಣೆ-ಯನ್ನು ತಂದುಕೊಡಲು ಕೂಗಿದ. ಒಳಗೆ ಅಡಿಗೆಮನೆಯಲ್ಲಿ ಕೆಲಸ ಮಾಡುತ್ತಿದ್ದ ಚಿಮಣಾ ಈ ಕೂಗು ಕೇಳಿ, ಅವಸರದಿಂದ ಎಣ್ಣೆಯ ಪಾತ್ರೆಯನ್ನು ಕೈಯಲ್ಲಿ ಹಿಡಿದುಕೊಂಡು ಬಂದಳು. ಅದೇ ಎರೆದುಕೊಂಡಿದ್ದರಿಂದ ಮಿಂಚುವ ಕೂದಲು ಬೆನ್ನಮೇಲೆಲ್ಲ ಹರಡಿದ್ದವು. ಹಣೆ, ಗದ್ದ, ಮೂಗು ಎಲ್ಲ ದಂತದಲ್ಲಿ ಕೊರೆದಿಟ್ಟಂತೆ ಹೊಳೆಯುತ್ತಿದ್ದವು. ಹೊಗೆಯಿಂದಲೋ, ಎರೆದುಕೊಂಡಿದ್ದರಿಂದಲೊ ಕಣ್ಣುಸ್ವಲ್ಪ ಕೆಂಪಾಗಿದ್ದವು. ಪುತಳಾಬಾಯಿಯ ಪತ್ತಲವನ್ನೇ ಉಟ್ಟುಕೊಂಡು ಬಂದ ಚಿಮಣಾ ಸುಂದರಿಯಾಗಿಯೇ ಕಂಡಳು. ಅವಳ ಕೈಯಿಂದ ಎಣ್ಣೆಯ ಪಾತ್ರೆಯನ್ನು ತೆಗೆದು ಕೊಳ್ಳುವಾಗ ಬಾಪೂಸಾಹೇಬನ ಕಣ್ಣು ಸಹಜವಾಗಿಯೇ ಅವಳ ಕಡೆಗೆ ತಿರುಗಿ-ದವು.

ಬಾಪೂಸಾಹೇಬ ಈ ಮೊದಲು ಚಿಮಣಾಳನ್ನು ಅದೆಷ್ಟೋ ಸಾರೆ ನೋಡಿರಬೇಕು. ಆದರೆ ತನ್ನ ಸ್ಥಾನಗೌರವದ ಮೂಲಕವೋ ಅಥವಾ ನಾನಾನ ಮಗ-ಳೆಂದೋ ಅವನು ವಿಶೇಷ ಲಕ್ಷ್ಯವಿತ್ತಿರಲಿಲ್ಲ. ಸಾಮಾನ್ಯವಾಗಿ ಅವನ ಕಣ್ಣಿಗೆ ಅವಳು ಹಳ್ಳಿಯ ಹುಡುಗಿಯಾಗಿಯೇ ಕಂಡಿದ್ದಳು. ಆದರೆ ಇಂದು ಅವಳ ರೂಪ ಬಾಪೂಸಾಹೇಬನ ಕಣ್ಣು ತೆರೆಸಿತು. ಮನಸ್ಸಿನೊಳಗಿನ ಗುಪ್ತವಾದ ಆಸೆಯೊಂದು ಚಿಮಣಾಳ ಚಲುವಿಗೆ ವಿಶೇಷ ಕಾಂತಿಯನ್ನು ಆ ಕ್ಷಣದಲ್ಲಿ ಕೊಟ್ಟಿತು.

ಆಳು ಎಣ್ಣೆಯ ಪಾತ್ರೆಯನ್ನು ತಿರುಗಿ ತಂದು ಕೊಡುವ ತನಕ ಚಿಮಣಾ ಅಲ್ಲಿಯೇ ನಿಲ್ಲಬೇಕಾಯಿತು. ಏನು ಮಾಡಬೇಕೆಂಬುದು ತಿಳಿಯದೆ ಅಲ್ಲಿಯೇ ಬಿದ್ದಿದ್ದ ರವದಿಯೊಂದನ್ನು ಬಾಯಲ್ಲಿ ಕಡಿಯುತ್ತ ನಿಂತುಬಿಟ್ಟಳು. ಹೊಟ್ಟಿನ ಚೀಲ ವೊಂದರ ಮೇಲೆ ಕುಳಿತು ಬಾಪೂಸಾಹೇಬ ಅವಳನ್ನೇ ಎವೆಯಿಕ್ಕದಂತೆ ನೋಡ ಹತ್ತಿದ. ಯಾವುದೋ ಕೆಲಸಕ್ಕಾಗಿ ಥಾಬೆಗೆ ಬಂದ ಪುತಳಾಬಾಯಿಯ ಕಣ್ಣಿಗೆ ಈ ನೋಟ ಬಿತ್ತು. ತಮ್ಮನ ಸ್ವಭಾವವನ್ನು ಸಂಪೂರ್ಣವಾಗಿ ಅರಿತ ಅವಳಿಗೆ ಪರಿಸ್ಥಿತಿಯ ಅರಿವಾಯಿತು. ಚಿಮಣಾಳಿಗೆ ಏನೋ ಕೆಲಸ ಹೇಳಿ ಒಳಗೆ ಕಳಿಸಿ-ದಳು. ಆಮೇಲೆ ತಮ್ಮನ ಕಡೆಗೆ ತಿರುಗಿ, “ಯಾಕೋ, ಇಂದ ಮನಿ ಬಿಟ್ಟು ಹೊರಗs ಹೋಗಿಲ್ಲಲ್ಲ ಬಾಪೂ?” ಎಂದು ವ್ಯಂಗ್ಯವಾಗಿಯೇ ಕೇಳಿದಳು. ಬಾಪೂ ಸಾಹೇಬ ಒಮ್ಮೆಲೆ ಉತ್ತರವೀಯುವ ಸ್ಥಿತಿಯಲ್ಲಿರಲಿಲ್ಲ. “ಆಂ, ಏನಂದಿ ಅಕ್ಕಾ?” ಎಂದು ಅವಳನ್ನೇ ತಿರುಗಿ ಕೇಳಿದ.

“ಮನಸು ಎಲ್ಲೆ ಹೋಗೇತಿ? ಕೇಳಿದ್ದರ ಕಡೆ ಖಬರುs ಇದ್ದಾಂಗಿಲ್ಲ” ಎಂದು ಮತ್ತೊಂದು ಬಾಣ ಬಿಟ್ಟು ಪುತಳಾಬಾಯಿ ಒಳಗೆ ಹೋಗಬೇಕೆಂದಿದ್ದವಳು ಬಾಪೂ ಸಾಹೇಬನ ಮಾತನ್ನು ಕೇಳಿ ತಡೆಯಬೇಕಾಯಿತು. ಬಾಪೂಸಾಹೇಬ ಮೆಲ್ಲನೆ ಮಾತು ತೆಗೆದ. “ನಾನಾಮಾಮಾಗ ತಲಿ ಇಲ್ಲ ನೋಡ ಅಕ್ಕಾ. ಎಂಥಾ ಮುತ್ತಿ ನಂತಾ ಹುಡುಗಿನ್ನ ಆ ಕೊಲ್ಲಾಪುರದ ಸ್ವಾರಗ ಕೊಡಬೇಕಂತ ಹೋಗ್ಯಾನ.ಅದನ್ನ ವಿಚಾರ ಮಾಡ್ತಿದ್ದೆ ಅಕ್ಕಾ” ಎಂದು ನಾಚಿಕೆಯಿಲ್ಲದೆ ತನ್ನ ವರ್ತನೆಯನ್ನು ಸಮ ರ್ಥಿಸಿಕೊಂಡ. ಪುತಳಾಬಾಯಿಗೆ ಇದು ಸರಿಬರಲಿಲ್ಲ. ಈಗ ತಮ್ಮನಿಗೆ ಎಚ್ಚರಿಕೆ ಕೊಡಲು ಒಂದು ನೆವವೂ ಸಿಕ್ಕಂತಾಗಿತ್ತು. ಯಾಕೋ ಚಿಮಣಾಳ ಭವಿತವ್ಯದ ಬಗ್ಗೆ ಅವಳಿಗೆ ಎಲ್ಲಿಲ್ಲದ ಹೆದರಿಕೆ ಉಂಟಾಗಿತ್ತು. “ಬಾಪೂ, ಹಾಗೆಲ್ಲಾ ಬೆಳದ ಹೆಣಮಕ್ಕಳ ಸಂಬಂಧೀ ಮಾತಾಡೂದು ನಡತಿ ಅಲ್ಲ. ಚಿಮಣಾ ನನ್ನ ಮಗಳಿ ದ್ಹಾಂಗ. ಹಾಗೆಲ್ಲ ಹುಚ್ಚುಚ್ಚಾರ ಮಾತಾಡಿದರ ನನಗ ಸರಿ ಬರಾಕಿಲ್ಲ” ಎಂದು ನಿಷ್ಠುರವಾಗಿಯೇ ನುಡಿದು ಒಳಗೆ ನಡೆದಳು.

ಬಾಪೂಸಾಹೇಬನಿಗೆ ಈ ಮಾತು ಕೇಳಿ ಮರ್ಮಾಘಾತವಾದಂತಾಯಿತು. ಆದರೂ ಸೋಲನ್ನೊಪ್ಪಿಕೊಳ್ಳಲು ಅವನಿಗೆ ಮನಸ್ಸಾಗಲಿಲ್ಲ. “ಲಗ್ನ ಆಗೂ ಹುಡಿಗಿ. ಒಳ್ಳೆದಾಗಲಿ ಅಂತ ಹೇಳಿದೆ. ನಾಯೇನಂತಾ ಆಡಬಾರದ್ದನ್ನು ಆಡಿದ್ನ?” ಎಂದು ತನಗೆ ತಾನೇ ಒಟಗುಟ್ಟಿದ. ಆದರೆ ಅದನ್ನು ಕೇಳಲು ಪುತಳಾಬಾಯಿ ಅಲ್ಲಿರ

ಲಿಲ್ಲ. ಬಾಪೂಸಾಹೇಬನಿಗೆ ಮತ್ತೆ ಚಿಮಣಾಳ ಬಗ್ಗೆ ಗುಂಗು ಹಿಡಿಯಿತು. ಅಕ್ಕನ ವಿರೋಧದಿಂದಲೋ ಏನೋ ಅದು ಇನ್ನೂ ತೀಕ್ಷ್ಣವಾಗಿತ್ತು. ಆದರೆ ಪುತಳಾಬಾಯಿಯ ರಕ್ಷಣೆಯಲ್ಲಿದ್ದ ಚಿಮಣಾಳ ರೂಪ ಹಾವಿನ ಹೆಡೆಯಲ್ಲಿಯ ರತ್ನದಂತೆ ಅಪ್ರಾಪ್ಯವಾಗಿತ್ತು. ಉಳಿದ ವಿಷಯಗಳಲ್ಲೆಲ್ಲ ಕೈಲಾಗದವನಾಗಿದ್ದರೂ, ಹೆಣ್ಣಿನ ಬೇಟೆಯಲ್ಲಿ ಮಾತ್ರ ಬಾಪೂಸಾಹೇಬ ನಿಷ್ಣಾತನಾಗಿದ್ದ. ಈಗಿನ ಸೋಲು ಅವನ ಸಾಹಸವನ್ನೇ ಕೆರಳಿಸಿತು. ಸ್ವಸ್ಥವಾಗಿ ಕೂಡಲು ಮನಸ್ಸೊಪ್ಪಲಿಲ್ಲ. ಅಕ್ಕನನ್ನಂತೂ ಈ ವಿಷಯದಲ್ಲಿ ಮಾತನಾಡಿಸುವ ಹಾಗೆ ಇರಲಿಲ್ಲ. ತನ್ನ ಆಸೆ ಪೂರ್ತಿಯಾಗಲು ದಾರಿ ಏನೆಂದು ಅವನ ಮನಸ್ಸು ಒಂದೇ ಸವನೆ ಕುದಿಯಿತು. ಹಿರೇಮಠದ ಪಡದಯ್ಯನವರ ಸಹಾಯ ದೊರೆತರೆ ಕಾರ್ಯ ಸುಲಭವಾಗಬಹುದೆಂಬ ವಿಚಾರ ಸುಳಿಯಲು ಉತ್ತೇಜಿತನಾಗಿ ನಕ್ಕು ಮಠಕ್ಕೆ ನಡೆದ.

ಬಾಪೂಸಾಹೇಬನ ಮೃದುವಾದ ಮಾತುಗಾರಿಕೆ, ಆಗಿನ ಅವನ ಕಣ್ಣಲ್ಲಿಯ ಆಮಂತ್ರಣವೀಯುವ ನೋಟ ಇವೆಲ್ಲವುಗಳಿಂದ ಚಿಮಣಾ ನಾಚಿ ತಲೆಬಾಗಿಸಿದ್ದಳು. ಅದೃಷ್ಟವಾದ ಆಸೆಯ ಬೆಳಕು ಅವಳ ಕಣ್ಣಲ್ಲಿ ಮೂಡಿ ಮಿಂಚಿತ್ತು. ಪುತಳಾಬಾಯಿ ಒಮ್ಮೊಮ್ಮೆ ಚಿಮಣಾಳ ರೂಪವನ್ನು ಮೆಚ್ಚುತ್ತ "ಈ ವಾಡೇದ ಯಜಮಾನತಿ ಆಗಾಕ ಲಾಯಖ ಇದ್ದೀ ನೋಡು" ಎಂದು ಹೇಳಿದ ಮಾತಿಗೆ, ಈ ಆಸೆ ಜೀವವಿತ್ತಿತು. ಅಸ್ಪಷ್ಟವಾಗಿದ್ದರೂ ಅಪೂರ್ವವಾದ ಅನುಭವವೊಂದು ಅವಳ ಹೃದಯದಲ್ಲಿ ತೆರೆಯೆಬ್ಬಿಸಿತು.

ವಾಡೆಯ ಬಲಬದಿಗೆ ಹೊಂದಿಯೇ ಪಡದಯ್ಯನವರ ಮಠವಿತ್ತು. ಪುರಾತನವಾದ ಈ ಮಠದ ಕಟ್ಟಡ ವಾಡಳ್ಳಿಯ ಯೋಗ್ಯತೆಯನ್ನೂ ಮೀರಿ ಭವ್ಯವಾಗಿತ್ತು. ಮಹಾದ್ವಾರವನ್ನು ದಾಟಿದೊಡನೆಯೇ ವಿಶಾಲವಾದ ಅಂಗಳ, ಎದುರಿಗೆ ಅಚ್ಚ ಕರಿಯ ಕಲ್ಲಿನಿಂದ ಕಟ್ಟಿದ ಕಂಬಗಳುಳ್ಳ ರಂಗಮಂಟಪ; ಎರಡೂ ಬದಿಗೆ ಭಕ್ತರಿಗೆ ಇರಲು ವಸತಿಗಳು; ರಂಗಮಂಟಪದ ಹಿಂದೆ ಅಡಿಗೆಮನೆ ಹಾಗೂ ಸ್ವಾಮಿಗಳ ಧ್ಯಾನಮಂದಿರ ಇವನ್ನೆಲ್ಲ ನೋಡಬಹುದಾಗಿತ್ತು. ಬಾಪೂಸಾಹೇಬ ಮಠಕ್ಕೆ ಹೋದಾಗ ಪಡದಯ್ಯನವರು ಒಳಗಿನ ಕೋಣೆಯಲ್ಲಿಯೇ ಮಧ್ಯಾಹ್ನದ ಬೇಸರದಿಂದ ಅಡ್ಡಾಗಿದ್ದರು. ಕೇವೆ ಬಣ್ಣದ ಕಫನಿ ಧರಿಸಿದ ಹುಡುಗನೊಬ್ಬ ಅವರ ಪಾದಸೇವೆಯಲ್ಲಿ ನಿರತನಾಗಿದ್ದ. ಬಾಪೂಸಾಹೇಬನನ್ನು ನೋಡಿದೊಡನೆ ಪಡದಯ್ಯನವರು ಜೋರಾಗಿ ನಗುತ್ತ, "ಓಹೋ ಜಾಗೀರದಾರರ ಸವಾರಿ ದಾರಿ ತಪ್ಪಿ

ಬಂದೈತಲ್ಲ" ಎಂದು ನಗೆಯಾಡಿದರು. ಬಾಪೂಸಾಹೇಬ ಏನೋ ಪೇಚಿನಲ್ಲಿ ಸಿಕ್ಕ ವರಂತೆ ಮುಖ ಮಾಡುತ್ತ "ಹೌದು ಬುದ್ಧೀ, ದಾರಿ ಕೇಳಲಿಕ್ಕೇ ನಿಮ್ಮ ಹತ್ತರ ಬಂದದ್ದು" ಎಂದು ಉತ್ತರವಿತ್ತು, ತೂಕಡಿಸುತ್ತ ಕಾಲೊತ್ತುತ್ತ ಕುಳಿತ ಹುಡುಗ-ನತ್ತ ದೃಷ್ಟಿ ಬೀರಿದ. ಪಡದಯ್ಯನವರು ಅದರರ್ಥವನ್ನು ಗ್ರಹಿಸಿಕೊಂಡು "ಲೇ ಗುರುಪಾದಾ, ಆ ಗಾಂಜಿಬಡಕ ಕೆಂಚಗ ನಾ ಒಂದು ಕೆಲಸಾ ಹೇಳಿದ್ದೆ. ಮಾಡ್ಯಾನ ಏನ ಕೇಳಿ ಬಾರಲೇ" ಎಂದು ಆಜ್ಞಾಪಿಸಿದರು. ಗುರುಪಾದನೂ ಅಷ್ಟೇ ಸಾಕೆಂದು ಹೊರಗೋಡಿದ.

ಬಹಳ ಹೊತ್ತು ಇಬ್ಬರಲ್ಲಿಯೂ ವಿಚಾರವಿನಿಮಯ ನಡೆದಿರಬೇಕು. ಪಡ ದಯ್ಯನವರ ಅಂತರಂಗದ ಕೋಣೆಯಿಂದ ಹೊರಗೆ ಬಂದಾಗ ಬಾಪೂಸಾಹೇಬನ ಮುಖ ಅರಳಿತ್ತು. "ಸ್ವಾಮೇರ, ನಿಮ್ಮ ಶಾಣೇತನಕ್ಕ ಜೇಲಿನಽ ಇಲ್ಲ ನೋಡ್ರಿ. ನಾನೂ ಮೂರು ತಾಸು ತಲಿ ಕೆಡಿಸಿಕೊಂಡೆ. ಆದರ ಇಷ್ಟ ಹಗರಾಗಿ ಕೆಲಸಾ ಮಾಡಿಕೊಳ್ಳೋ ಹಂಚಿಗಿ ಹೊಳದಿದ್ದಿಲ್ಲ" ಎಂದು ಹೊಗಳಿ ಪಡದಯ್ಯನವರಿಗೆ ಧನ್ಯವಾದಗಳನ್ನರ್ಪಿಸಿದ.

ಪಡದಯ್ಯನವರು ಅವನ ಸಮೀಪಕ್ಕೆ ಬಂದು, " ಜಾಗೀರದಾರಸಾಹೇಬ, ವಿಷಯ ನಾಜೂಕ ಐತಿ. ಒಂದ ಮಾತ ಹೇಳಿರತೀನಿ. ಆ ದಾದಾಗ ಈ ಸುದ್ದಿ ತಿಳಿದರ ಒಂದು ಹೋಗಿ ಒಂದಾದೀತು. ನೀವು ನನ್ನ ವ್ಯಾಗ ವಿಶ್ವಾಸ ಇಡರಿ. ನಮ್ಮ ದಾನಿ ನಿಮ್ಮನ್ನು ನಾಳೆ ಕರ್‍ಯಾಕ ಬಂದ ಕೂಡಲೇ ನೀವು ಮಠಕ್ಕ ಬರ್ರಿ. ಕಾರಹುಣ್ಣಿವಿ, ವಾಡೆದ ಎತ್ತಿನ ಮೆರವಣಿಗಿ ನೋಡಾಕ ಊರ ಜನಾ ಎಲ್ಲ ಅಗಸಿ ಮುಂದ ನೆರದಿರತಾರ. ಆಗಽ ನಮ್ಮ ದಾನಿ ಚಿಮಣಾನ್ನೂ ಮಠಕ್ಕ ಕರ ಕೊಂಡ ಬರತಾಳ. ನೀವು ಎತ್ತಿನ ಮೆರವಣಿಗಿ ಮುಗಸೂತನಾ, ಆಕಿ ಚಿಮಣಾನ ಮನಸ್ಸು ಒಲಿಸಿರತಾಳ. ಆಕಿ ಬಂದು ನಿಮ್ಮನ್ನು ಕರದಾಗ ನೀವು ಬಿಟ್ಟ ಕೆಲಸಾ ಬಿಟ್ಟು ಬರಬೇಕು ಅತು" ಎಂದು ಉಪಾಯ ಹೇಳಿ ಬೀಳ್ಕೊಟ್ಟರು.

ಮರುದಿನ ಮಧ್ಯಾಹ್ನಕ್ಕೆ ಕಾರಹುಣ್ಣಿವೆಯ ವೈಭವದಲ್ಲಿ ಊರಿಗೂರೇ ದಂಗಾಗಿತ್ತು. ವಾಡೆಯ ಎತ್ತುಗಳ ಮೆರವಣಿಗೆ ಅಗಸೆಯ ಮುಂದೆ ಬಂದಾಗ ಆಗಲೇ ಎರಡು ಗಂಟೆಯಾಗಿತ್ತು. ಊರಿಗೂರೇ ನೆರೆದು ಮೆರವಣಿಗೆಯ ಉತ್ಸಾಹ ದಲ್ಲಿ ಮುಳುಗಿಹೋಗಿತ್ತು. ಜಾಗೀರದಾರರ ಎತ್ತುಗಳ ಹಿಂದಿನಿಂದಲೇ ಗೌಡರ ಎತ್ತುಗಳ ಮೆರವಣಿಗೆ ಅವಕ್ಕೂ ಹೆಚ್ಚಿನ ಸಡಗರದಿಂದ ನಡೆದಿತ್ತು. ಹಾಗೆಯೇ

ಒಂದರ ಹಿಂದೊಂದು ಮೆರವಣಿಗೆ. ಸಂಜೆಯ ವರೆಗೆ ಅಗಸೆಗೆ ಬರುವದು ವಾಡಿಕೆ ಯಾಗಿತ್ತು. ಮಧ್ಯಾಹ್ನವೇ ಬಂದು ಕುಳಿತ ಹೆಣ್ಣುಮಕ್ಕಳೆಲ್ಲ, ದೀಪ ಹಚ್ಚುವ ಹೊತ್ತಿಗೆ ಕರಿಹರಿಯುವದನ್ನು ನೋಡಿಕೊಂಡು ಹೋಗಬೇಕು. ಯಾರಿಗೂ ಮನೆಯ ಚಿಂತೆಯಾಗಲಿ, ಕೆಲಸದ ಚಿಂತೆಯಾಗಲಿ ಇರುತ್ತಿರಲಿಲ್ಲ. ಹೀಗಿರುವಾಗ ಚಿಮಣಾ ದಾನವ್ವನೊಡನೆ ಮೆರವಣಿಗೆ ನೋಡಲು ಹೋಗುತ್ತೇನೆಂದಾಗ ಪುತಳಾಬಾಯಿ ಬೇಡವೆನ್ನಲಿಲ್ಲ. ಇನ್ನೂ ಸಣ್ಣವಳು, ಮೆರವಣಿಗೆ ನೋಡುವ ಕೌತುಕವಿದ್ದಾಗ ಬೇಡವೆಂದು ಹೇಗೆ ಹೇಳುವದು? ಆಗಲೆಂದು ಕಳಿಸಿಕೊಟ್ಟಳು. ದಾನವ್ವ ಚಿಮಣಾಳೊಡನೆ ಹೊರಬಿದ್ದವಳು ನೇರವಾಗಿ ಅಗಸೆಗೆ ಹೋಗಲಿಲ್ಲ. "ಮಟಕ್ಕ ಹೋಗಿ ಮುಂದ ಹೋದರಾತು ಬಾ" ಎಂದು ಏನೇನೋ ಹೇಳಿದಾಗ ಚಿಮಣಾ ವಿಧಿಯಿಲ್ಲದೆ ಅವಳನ್ನು ಹಿಂಬಾಲಿಸಬೇಕಾಯಿತು.

ದಾನವ್ವ ಮಾತಾಡುವದರಲ್ಲಿ ಎಲ್ಲಿಲ್ಲದ ಸವಿಗಾರ್ತಿ. ಮಠದಲ್ಲಿ ಚಿಮಣಾ ಳೊಬ್ಬಳನ್ನೇ ಕೂಡಿಸಿಕೊಂಡು ಸವಿಮಾತುಗಳಿಂದ ಬಾಪೂಸಾಹೇಬನ ಮನದಾಶ ಯವನ್ನು ಅವಳಿಗೆ ಹೇಳಿ ಮರುಳುಗೊಳಿಸಿದಳು. ಭಾಪೂಸಾಹೇಬನ ರೂಪ, ಸಂಪತ್ತು, ಅಧಿಕಾರ ಇವನ್ನೆಲ್ಲ ಬಣ್ಣ ತುಂಬಿ ಬಣ್ಣಿಸಿದಳು. ಹುಡುಗಿಯ ಕಣ್ಣಿಗೆ ಕನಸಿನ ಮರುಳು ಮಾಟ ಹಾಕಿತು. ಏನೂ ಮಾತಾಡದೆ ತೆರೆದ ಕಣ್ಣುಗಳಿಂದ ಎಲ್ಲಿಯೋ ನೋಡುತ್ತ ದಾನವ್ವನ ಮಾತುಗಳನ್ನು ಕೇಳುವದರಲ್ಲಿ ಲೀನಳಾಗಿ ದ್ದಳು. ಆವಳ ಕಣ್ಣೆದುರಿಗೆ ಭವಿಷ್ಯದ ಮೋಹಕ ಚಿತ್ರಮಾಲೆ ದಾನವ್ವನ ಮಾತು ಗಳಿಂದ ಜೀವ ಪಡೆದು ನರ್ತಿಸುತ್ತಿತ್ತು. ಬಾಪೂಸಾಹೇಬ ಕೈಹಿಡಿದರೆ ಪಾದಳ್ಳಿ ಯಲ್ಲಿಯೇ ಚಿಮಣಾಳ ಸ್ಥಿತಿ ಎಷ್ಟು ಉನ್ನತವಾದೀತೆಂಬುದರ ಚಿತ್ರವನ್ನು ದಾನವ್ವ ಕಣ್ಣೆದುರು ಹಿಡಿದಾಗ, ಚಿಮಣಾ ನಾಚುತ್ತಲೇ "ನಾ ಎಲ್ಲೆ, ಅವರೆಲ್ಲೆ" ಎಂದು ಮನಸ್ಸಿನಲ್ಲಿ ಆಸೆ ತುಂಬಿಕೊಂಡೇ ನುಡಿದಳು.

"ನೀ ಹೂಂ ಅನ್ನು. ನಿಮ್ಮ ಅಪ್ಪ ಬಂದ ವಾರದಾಗ ಮದಿವೆ ಆಗದಿದ್ದರ ನನ್ನ ಹೆಸರ ಕರೀಬ್ಯಾಡ. ಅದರ ಹೊರೀ ಎಲ್ಲಾ ಸ್ವಾಮೇರ್ನ ಕೂಡೈತಿ. ಬಾಪೂ ಸಾಹೇಬು ಕೈಹಿಡಿದರ ಊರ ಮಂದೆಲ್ಲ ನಿನ್ನ ಕಾಲಿಗೆ ಬೀಳತಾರು." ದಾನವ್ವ ಬೇಟೆಯನ್ನು ಸೆರೆಹಿಡಿದಳು.

"ಖರೇವಂದ್ರೂ ಆವರು ನನ್ನ ಲಗ್ನ ಆಗತಾರೂ?" ಚಿಮಣಾ ಆರ್ತಳಾಗಿ, ಮಂತ್ರಮುಗ್ಧಳಾದವಳಂತೆಯೇ ಕೇಳಿದಳು.

"ಹುಚ್ಚೀ, ನೀ ಹೊಂ ಅಂದರ ಇಂಪುಪುರದ ಸರಕಾರಬಂದ ನಿನ್ನ ಲಗ್ನ ಆದಾನು. ಗೊಂಬೀ ಅಂತಾ ಹುಡುಗಿನ್ನ ಯಾರು ಬಿಟ್ಟಾರು ? ಸ್ವತಃ ಬಾಪೂ ಸಾಬರು ಬಂದು ಸ್ವಾಮೇರ ಪಾದಾ ಮುಟ್ಟಿ, ಲಗ್ನಕ್ಕ ನಿನ್ನ ಒಪ್ಪಸೂ ಹಾಗ ಮಾಡ್ರಿ ಅಂತ ಹೇಳಿಕೊಂಡಾರು. ಸ್ವಾಮೇರ ಹೇಳಿದ ಮಾತು ಯಾರ ಅಡ್ಡ ಬಂದರೂ ನಿರಾಕಿಲ್ಲ, ಅಂತ ಆಣೀ ಮಾಡ್ಯಾರು. ಬೇಕಾರ ಸ್ವಾಮೇರ ಬಾಯಿಂದನs ಈ ಮಾತ ಕೇಳೀಯಂತ ನಡೀ ಒಳ್ಯಾಕ" ಎಂದು ಕೈ ಹಿಡಿದು ಎಬ್ಬಿಸಿದಳು.

ಯಂತ್ರದಂತೆ ಚಿಮಣಾ ದಾನವ್ವನನ್ನು ಅನುಸರಿಸಿದಳು. ಮಠದ ಅಂತ ರಂಗದ ಕೋಣೆಯಲ್ಲಿ ಕಾಲಿಟ್ಟಳು. ಕೇವೆಯ ವಸ್ತ್ರದ ಮೇಲೆ ವ್ಯಾಘ್ರಾಂಬರ ಹಾಸಿದ ಮಂಚದ ಮೇಲೆ ಸ್ವಾಮಿಗಳು ಸುಖಾಸೀನರಾಗಿದ್ದರು. ಚಿಮಣಾಳನ್ನು ಕಂಡೊಡನೆಯೇ ಮೇಲೆದ್ದು, ಆಶೀರ್ವಾದ ನೀಡುವ ಮುನಿಯಂತೆ ನಾಟಕೀಯ ವಾಗಿ "ಬಾ ಮಗಳೇ ಬಾ, ದೊಡ್ಡವರ ಕೈಹಿಡದು ನಿನ್ನ ದೈವ ತೆರೀಲಿ." ಎಂದು ಆಶೀರ್ವದಿಸಿದರು.

"ದಾನೀ, ನೀ ವಾಡೇಕ್ಕ ಹೋಗಿ ಬಾಪೂಸಾಹೇಬರಿಗೆ ಬಾ ಅಂತ ಹೇಳಿ ಬಾ. ಚಿಮಣಾ, ನೀ ಅವರು ಬರೋಮಟ ಇಲ್ಲೇ ಕುಂತಿರು" ಎಂದು ಹೇಳಿ ಪಡಪಯ್ಯ ನವರು ವಿಚಿತ್ರ ನಗೆ ನಕ್ಕರು.

ದಾನವ್ವ ಹೊರಟು ಹೋದಳು; ಸ್ವಾಮಿಗಳು ವಿಚಾರಮಗ್ನರಾದವರಂತೆ, ಗದ್ದ ತಿಕ್ಕುತ್ತ ಕುಳಿತರು. ಏನೂ ಅರಿಯದವಳಾಗಿ ಚಿಮಣಾ ಪಡದಯ್ಯನವರ ಬಲಗಿವಿಯಲ್ಲಿದ್ದ,ಬಂಗಾರದಲ್ಲಿ ಕಟ್ಟಿದ ದೊಡ್ಡ ರುದ್ರಾಕ್ಷಿಯನ್ನೇ ನೋಡುತ್ತಿದ್ದಳು.

* * * *

ಅಂದು ರಾತ್ರಿ ವಾಡೆಯಲ್ಲಿ ಪುತಳಾಬಾಯಿ ತನ್ನ ಕೋಣೆಯಲ್ಲಿ ಕಿಡಿ ಕಾರುವ ಕಣ್ಣುಗಳಿಂದ, ಬಾಪೂಸಾಹೇಬನೆದುರಿಗೆ ಸಿಟ್ಟಿನಿಂದ ಮಾತಾಡುತ್ತಿದ್ದಳು. ಒಂದು ಮೂಲೆಯಲ್ಲಿ ಚಿಮಣಾ ಅಳುತ್ತ ಕುಳಿತಿದ್ದಳು. ಅಂದು ಚಿಮಣಾನ ಮೇಲೆ ಬಲಾ ತ್ಕಾರ ನಡೆಸಿದ್ದಕ್ಕಾಗಿ ಸ್ವಾಮಿಗಳಿಗೆ ಚನ್ನಾಗಿ ಶಾಸನ ಮಾಡಬೇಕೆಂದು ಪುತಳಾ ಬಾಯಿಯ ವಾದ. ಇಂಥವಳ ಮಾತು ಕೇಳಿಕೊಂಡು ಊರ ಗುರುಗಳಿಗೆ ಅಪ ವಾದ ಕೊಡಲಾಗದೆಂದು ಬಾಪೂಸಾಹೇಬ ನಿರ್ಲಜ್ಜತನದಿಂದ ಪ್ರತಿಯಾಗಿ ವಾದಿ ಸುತ್ತಿದ್ದ.

"ನೀ ಆಕಿನ್ನ ಲಗ್ನ ಆಗತೀನಿ ಅಂತ ಭುಲತಾಪಿ ತುಂಬಿ,ಮಠಕ್ಕ ಕರಿಸಿಕೊಂಡು

ಆ ತ್ವಾಳನ ಕೈಯಾಗ ಕೊಟ್ಟು, ಬಂಗಾರದಂತಾ ಹುಡುಗಿನ್ನ ಹಾಳಗೆಡವಿಟ್ಟೆ. ಮತ್ತ ವ್ಯಾಲೆ ಅವನ ತಪ್ಪು ಮೇಲಗಟ್ಟೆ ಹೇಳತಿಯಾ? ಪಂಚರ ಸಮಕ್ಷಮ ಈ ನ್ಯಾಯ ಬಗೀಹರಿದಿದ್ದರ ನಾಯೇನು ಬಿಡಾಕೆಲ್ಲ" ಪುತಳಾಬಾಯಿಯ ದನಿ ಅನ್ಯಾಯದ ವಿರುದ್ಧ ತ್ವೇಷದಿಂದ ಆವೇಶಗೊಂಡಿತ್ತು; ಸಂತಾಪದಿಂದ ಅವಳ ಕಣ್ಣಲ್ಲಿ ನೀರೂ ಉಕ್ಕಿದ್ದವು.

"ಅಕ್ಕಾ, ಇದು ಪಂಚರ ಸಮಕ್ಷಮ ಹೋಗೋ ಪ್ರಕರಣ ಅಲ್ಲ. ಲಗ್ನ ಆಗೋ ಹುಡುಗಿ, ನಾಜೂಕ ರೀತಿಯಿಂದ ಬಗೆಹರಿಸಬೇಕಾಗತದ. ಸ್ವಾಮಿ-ಗೋಳು ಒಂದು ವ್ಯಾಳ್ಯಾ ಹಂಗ ಮಾಡಿದ್ದು ಖರೇ ಇದ್ದರೂ ಈ ಮಾತು ನಮ್ಮನ್ನು ಬಿಟ್ಟು ಇನ್ನೊಬ್ಬರ ಕಿವಿಗೆ ಬೀಳಬಾರದು. ಪಡದಯ್ಯನವರ ವಜನ ಎಷ್ಟದs ಅನ್ನೂದು ನಿನಗ ಗೊತ್ತಿಲ್ಲ. ಅವರ ವಿರುದ್ಧ ಯಾರೂ ಒಂದು ಶಬ್ದ ಮಾತಾಡೂ ಹಂಗಿಲ್ಲ. ಈ ಚಿಮಣಾ ಅವರ ಮಠಕ್ಕ ಹೋದದ್ದs ತಪ್ಪು. ಅಷ್ಟಾದರೂ ಸುಮ್ಮನs ಕೈಬಾಯಿ ಮುಚಿಗೊಂಡು ಸುಮ್ಮಗs ಬರಬೇಕಾಗಿತ್ತು. ಈ ಸುದ್ದಿ ನಾನಾಮಾಮಾಗ ಗೊತ್ತಾದರ ನಿನ್ನ ಮಾನಾನೂ ಅವ ಉಳಸೂದುಲ್ಲ. ಅಂವಾ ಅಂತೂ ವಯಸ್ಸಾದವ, ನಾಲ್ಕು ಮಾತಾಡಿ ಕಡೀಕಾಗತಾನ. ಆದರ ಆ ದಾದಾನ ಕಿವಿಗೆ ಬಿದ್ದರ ಅಂವಾ ಎಲ್ಲಾರ ಪ್ರಾಣಾ ನುಂಗಿ ನೀರ ಹಿಡೀತಾನ. ನೋಡು, ವಿಚಾರ ಮಾಡು" ಎಂದು ಬಾಪೂಸಾಹೇಬ ತನ್ನ ಸರ್ವ ನಿಪುಣತೆಯನ್ನೂ ಪ್ರಯೋಗಿಸಿ ಪುತಳಾಬಾಯಿಯ ಮನವೊಲಿಸಲು ಪ್ರಯತ್ನಿಸಿದ.

ದಾದಾನ ಹೆಸರು ಕೇಳಿದೊಡನೆ ಪುತಳಾಬಾಯಿ ನಡುಗಿದಳು. ಪಡದಯ್ಯ ಚಿಮಣಾಳ ಮೇಲೆ ಎಸಗಿದ ಅನ್ಯಾಯದಿಂದ ಅವಳು ಸಿಟ್ಟಿನಿಂದ ಹುಚ್ಚಿಯಂತಾಗಿದ್ದಳು. ಅವಳ ಮನಸ್ಸಿನಲ್ಲಿ ಬೇಗೆ ಹತ್ತಿದಷ್ಟು ಸಂಕಟವಾಗಿ ಇಂಥ ಮಾತನ್ನಾಡಿದ್ದಳು. ಆದರೆ ದಾದಾನ ನೆನಪಾದೊಡನೆ, ತಪ್ಪು ದಾರಿ ಹಿಡಿದಿರುವೆನೆಂದು ಅವಳಿಗೂ ಅನಿಸಿತು. ದಾದಾ ಅನ್ಯಾಯವನ್ನು ಎಷ್ಟೊ ಸಹಿಸನೆಂಬ ವಿಷಯ ಅವಳಿಗೆ ಚನ್ನಾಗಿ ಮನವರಿಕೆಯಾಗಿತ್ತು.

ಅಂದು ಲಕ್ಷ್ಮೀಬಾಯಿ ಮನೆ ಬಿಟ್ಟು ಹೋದ ಮೇಲೆ, ಆಸ್ತಿಯ ಒಡೆತನ ತನಗೆ ದಕ್ಕಿತೆಂದು ಪುತಳಾಬಾಯಿ ಊರ ದೇವರಿಗೆ ನೈವೇದ್ಯ ಮಾಡಿಸಿ, ಊರಿಗೇ ಊಟ ಹಾಕಿಸಿದ್ದಳು. ಗುಡಿಯಲ್ಲಿ ಸಮಾರಂಭದ ನಿಮಿತ್ತ ಎಲ್ಲಿಲ್ಲದ ಗದ್ದಲವಾಗಿತ್ತು. ತಾನು ಕಟ್ಟಿಸಿದ ಎಲೆಪೂಜೆಯನ್ನು ನೋಡಲು ಪುತಳಾಬಾಯಿ

ಸಂಭ್ರಮದಿಂದ ಬರುತ್ತಿರುವಾಗ, ದಾದಾ ಗುಡಿಯ ಹಿಂದಿನಿಂದ ಓಡಿ ಬಂದು ಅವಳನ್ನು ತರುಬಿದ್ದ. ಆಗ ಅವನಿಗಿನ್ನೂ ೧೨-೧೩ ವರ್ಷದ ಪ್ರಾಯವಿರಬಹುದು. ಆದರೂ ಸಿಟ್ಟಿನಿಂದ ಅವಡುಗಚ್ಚುತ್ತ "ದೊಡ್ಡ ಅಪ್ಪಾವರ್ನ ಊರು ಬಿಟ್ಟು ಓಡಿಸಿ ನೀನು ಮೆರೆದಾಡಬೇಕಂತೀಯಾ?" ಎಂದು ದೊಡ್ಡದನಿಯಲ್ಲಿ ಕೂಗುತ್ತ ಏರಿ ಬಂದ. ಪುಣ್ಯಕ್ಕೆ ಅಲ್ಲಿಯೇ ಇದ್ದ ನಾಲ್ಕೆಂಟು ಜನರು, ಅವನನ್ನು ಹಿಡಿದು ನಿಲ್ಲಿಸಿದರೆಂದು ಅನಾಹುತ ತಪ್ಪಿತು. ಆಗಿನ ಹುಡುಗ ಈಗ ೨೦ ವರ್ಷದ ಯುವಕನಾಗಿದ್ದಾನೆ. ಅವನ ಸಿಟ್ಟಿನಿಂದ ಕೆಂಪಾಗಿಹೋಗಿದ್ದ ಮುಖ, ಹುಡುಗತನದ ಅಸಹಾಯತೆಯಿಂದ ಅವಡುಗಚ್ಚಿದ ತುಟಿ, ಅಂತರಂಗದ ಸಂಕಟವನ್ನು ಹೊರ ಸೂಸುವ ಕಣ್ಣು, ಕಣ್ಣೀರು ಇವುಗಳನ್ನು ಪುತಳಾಬಾಯಿ ಮರೆತಿರಲಿಲ್ಲ. ಶಿಲೇದಾರ ಲಕ್ಷ್ಮಣ ಎಷ್ಟು ಶಾಂತಸ್ವಭಾವದನೋ, ಅಷ್ಟು ಅವನ ಮಗ ದಾದಾ ಹಟಮಾರಿಯಾಗಿದ್ದ. ಈಗ ಅವನು ಸಿಟ್ಟಿಗೆದ್ದರೆ ಏನು ಅನಾಹುತವಾಗುವದೋ ಬಲ್ಲವರಾರು? ಪುತಳಾಬಾಯಿ ಮುಂದೊದಗಬಹುದಾದ ದುರ್ಘಟನೆಗಳನ್ನೆಲ್ಲ ನೆನೆದು, ಚಿಮಣಾಳನ್ನೇ ಸಮಾಧಾನಪಡಿಸಲು ಪ್ರಯತ್ನಿಸಿದಳು. ಈ ಸಂಗತಿ ಯಾರ ಕಿವಿಗೂ ಹೋಗದಂತೆ ಎಚ್ಚರಿಕೆಯಿಂದಿರಲು ತಿಳಿಸಿದಳು.

ಈ ರಹಸ್ಯವನ್ನು ವಾಡೆಯ ನಾಲ್ಕು ಗೋಡೆಗಳಲ್ಲಿ ಎಷ್ಟು ಬಚ್ಚಿಡಲು ಪ್ರಯತ್ನಿಸಿದರೂ ಅದು ಬೇರೊಂದು ದಾರಿಯಿಂದ ಹೊರಬಿತ್ತು. ಗಾಳಿಯಂತೆಯೇ ಸುದ್ದಿಯನ್ನು ಹಿಡಿದಿಡುವದು ಸಾಧ್ಯವಿಲ್ಲ. ಈ ಪ್ರಕರಣ ಎಲ್ಲರಿಗಿಂತ ಹೆಚ್ಚಾಗಿ ಪಡದಯ್ಯನವರ ಪ್ರೇಯಸಿಯಾದ ದಾನವ್ವನನ್ನು ರೇಗಿಸಿತು. ತನ್ನನ್ನು ಹಾಳು ಮಾಡಿದ್ದಲ್ಲದೆ ಈ ಎಳೆಗೂಸು ಚಿಮಣಾಳನ್ನೂ ಹಾಳುಗೆಡವಿದರಲ್ಲ ಎಂದು ಸಿಟ್ಟಿಗೆದ್ದಳು. ಚಿಮಣಾಳ ಬಗ್ಗೆ ಅವಳ ಸಹಾನುಭೂತಿ, ಪಡದಯ್ಯನವರ ಮೇಲಿನ ಸೇಡಿನ ಫಲವಾಗಿತ್ತು. ಅದನ್ನು ಹೇಗೆ ತೀರಿಸಿಕೊಳ್ಳಬೇಕೆಂದು ಉಪಾಯಗಾಣದೆ ದಾನವ್ವ ಅವರಿವರೆದುರು ಸ್ವಾಮಿಗಳ ದಾಂಪತ್ಯಜೀವನದ ಬಗ್ಗೆ ಆಡಿಕೊಂಡಳು. ಕೇಳುವವರಿಗೆಲ್ಲ ಇದೊಂದು ಮೋಜಿನ ವಿಷಯವಾಗಿತ್ತು. ಆದರಿಂದ ದಾನವ್ವನಿಗೇನೂ ಸಮಾಧಾನವಾಗಲಿಲ್ಲ. ಇಲ್ಲಿದ್ದರೆ ಸಿಟ್ಟು ಹೆಚ್ಚಾದೀತೆಂದೋ ಏನೋ ಒಂದು ಸಂಜೆ ದಾನವ್ವ ಯಾರಿಗೂ ಹೇಳದೆ ಕೇಳದೆ ಊರು ಬಿಟ್ಟಳು.

ಪಡದಯ್ಯನವರೂ ದೂರದ ಊರಿನ ಒಂದು ಬಿನ್ನಾಯದ ನೆವ ಮಾಡಿಕೊಂಡು ಈ ಪ್ರಕರಣವಾದ ಮರುದಿನವೇ ಊರು ಬಿಟ್ಟು ಕೆಲ ತಿಂಗಳು ಅಸ್ತಂ-

ಗತರಾದರು. ಇವರಿಬ್ಬರೂ ಮಾತಾಡಿಕೊಂಡಂತೆ ಅದೃಶ್ಯರಾದ ವಿಷಯ, ಊರ
ವರ ಅನಂತ ಊಹೆಗಳಿಗೆ, ಸಂಶಯಗಳಿಗೆ ಎಡೆಮಾಡಿಕೊಟ್ಟಿತು. ಜನರ ಕಲ್ಪ
ಕತೆ ಒಂದಕ್ಕೆ ಹತ್ತಾಗಿ ನನೆಕೊನೆಯೇರಿತು. ಆದರೆ ಅವರ ಮಾತಿನಲ್ಲಿ ಸತ್ಯ
ಸಂಗತಿ ಧರಿಸಿದ ವಿಕೃತವೇಷವನ್ನು ನೋಡಿದ್ದರೆ ಸತ್ಯವೇ ನಾಚಿ ಮುಖ ಕೆಳಗೆ
ಹಾಕಬಹುದಿತ್ತು. ಎಲ್ಲರ ಸಂಶಯವೂ ಬಾಪೂಸಾಹೇಬನ ಮೇಲೆಯೇ. ಅವನು
ಚಿಮಣಾಳನ್ನು ಮಠಕ್ಕೆ ಕರೆಸಿಕೊಂಡು ಮಾಡಬಾರದ ಕೆಲಸ ಮಾಡಿದ್ದರಿಂದಲೇ,
ಮನಸ್ಸು ಕಲಕಿ ಪಡದಯ್ಯನವರು ಊರು ಬಿಟ್ಟರೆಂದು ದಟ್ಟವಾದ ವಾರ್ತೆ
ಹಬ್ಬಿತು. ದಾನವ್ವ ಹೇಳಿದ್ದು ಸುಳ್ಳಿನ ಕಂತೆ ಎಂದು ಪಡದಪ್ಪನವರ ಹಸ್ತಕರು
ಪಿಸುಮಾತುಗಳಲ್ಲಿ ಹೇಳಿ, ಸತ್ಯಸ್ವರೂಪವನ್ನು ಬಲ್ಲವರು ತಾವೊಬ್ಬರೇ ಎಂಬ
ಭ್ರಮೆಯನ್ನು ಹುಟ್ಟಿಸಿಬಿಟ್ಟರು. ಜನರಿಗೆ ಇತಿಮಿತಿ ಬಿತ್ತು. ದಾನವ್ವನೂ ಪಡ
ದಪ್ಪನವರ ಪ್ರೇಯಸಿಯೆ ಅಲ್ಲವೇ? ಈ ವಾದ ಅರಳಿಕಟ್ಟೆಯಲ್ಲಿ ದಿನ ನಿತ್ಯ
ಸೇರುವ ಉಂಡಾಡಿಗಳಿಗೆ ಆಹಾರವನ್ನು ಒದಗಿಸಿಕೊಟ್ಟಿತು. ಊರ ತುಂಬ
ಬಾಪೂಸಾಹೇಬ ಹಾಗೂ ಚಿಮಣಾರ ಸಂಬಂಧ ಹರಡಿದ್ದರೂ ಅದನ್ನು ದಾದಾನ
ಕಿವಿಗೊಯ್ದು ಮುಟ್ಟಿಸುವ ಧೈರ್ಯ ಯಾರಿಗೂ ಇರಲಿಲ್ಲ.

ಇದಕ್ಕೆ ಕಾರಣವೂ ಇಲ್ಲದಿರಲಿಲ್ಲ. ಗರಡಿಮನೆಯಲ್ಲಿಯ ದಾದಾನ ಗೆಳೆಯ
ರಿಗೆ ಅವನೆದುರು ಈ ಸುದ್ದಿಯನ್ನು ಹೇಳಿದರೆ ಭಾಪೂಸಾಹೇಬನ ತಲೆಯಾಗಲಿ,
ಚಿಮಣಾಳ ಕುತ್ತಿಗೆಯಾಗಲಿ ಬಲಿಯಾಗಬಹುದೆಂಬ ಭೀತಿಯಿತ್ತು. ದಾದಾನ
ಶಕ್ತಿಸಾಮರ್ಥ್ಯಗಳು ಅಸಾಮಾನ್ಯವಾಗಿದ್ದಂತೆಯೇ ಅವನ ದುಡುಕು ತೀಕ್ಷ್ಣ
ವಾಗಿತ್ತು. ಅವನನ್ನು ಕೆಣಕುವದೆಂದರೆ ನಾಗರಹಾವನ್ನು ಕೆಣಕಿದಂತೆಯೇ
ಎಂದು ಅವನ ಗೆಳೆಯರೆಲ್ಲರ ಅನುಭವ. ಈ ಕಾರಣದಿಂದ ದಾದಾನ ಕಿವಿಗೆ ಈ
ಸುದ್ದಿ ಮುಟ್ಟಲಿಲ್ಲ. ದಾದಾ ಸ್ವಭಾವತಃ ಕುತೂಹಲಿಯಲ್ಲವಾದ್ದರಿಂದ, ಅವರ
ಅನುಮಾನದ ಮುಖಗಳನ್ನು ನೋಡಿ ಅವನಿಗೆ ಸಂಶಯವೂ ಬರಲಿಲ್ಲ.

:: ೩ ::

ಕಾರಹುಣ್ಣಿಮೆ ಎಂದಿನಂತೆ ಈ ವರ್ಷ ಮಳೆಗಾಲದ ನಾಂದಿಯನ್ನು ಹಾಡ ಲಿಲ್ಲ. ರೈತರಿಗೆ ಭಾಷೆ ಕೊಟ್ಟ ಉತ್ತರೆ-ಹಸ್ತಾ ಮಳೆಗಳೂ ಹೊತ್ತಿಗೆ ಕೈಕೊಟ್ಟವು. ಆಕಾಶದಲ್ಲಿ ಕವಿದು ಬಂದ ಮೋಡಗಳು, ಪಾದಳ್ಳಿಯ ರೈತರು ಹುಬ್ಬುಗೈ ಹಚ್ಚಿ ಮುಗಿಲು ನೋಡುತ್ತ ನಿಂತದ್ದನ್ನು ಲೆಕ್ಕಿಸದೆ ದಾಟಿ ಹೋದವು. ಭೂಮಿ ನಿರಾಶೆ ಯಿಂದ ಮಲಗಿತು. ಬಾಳಾಚಾರ್ಯರ ಪಂಚಾಂಗ ಅವರಿಗೇ ಮೋಸಮಾಡಿತು. ಪಾದಳ್ಳಿಯಲ್ಲಿ ಮಳೆಯಾಗದಿದ್ದರೂ, ದೂರದ ಮಲೆನಾಡಿನಲ್ಲಿ ಹೆಚ್ಚು ಮಳೆ ಬಿದ್ದಿ ರುವದನ್ನು ಕೃಷ್ಣೆಗೆ ಬಂದ ಮಹಾಪೂರ ತೋರಿಸಿ ಕೊಟ್ಟು ಇಲ್ಲಿಯ ಜನರ ಆಸೆ ಯನ್ನು ಕೆಣಕಿತು. ನದಿ ಮುಳುಗಿದ ಭೂಮಿಗಳಲ್ಲಿ ಮಾತ್ರ ಬಿತ್ತಿಗೆಯಾಯಿತು. ದೀಪಾವಳಿಯಾದ ಮೇಲೆ ಚಿತ್ತಿಮಳೆಯ ಒಂದೆರಡು ಸೆಳಕುಗಳು ಬಿದ್ದಿದ್ದರಿಂದ, ನದಿ ಮುಳುಗಿದ ಹೊಲಗಳಲ್ಲಿಯ ಬೆಳೆ ಕೈಗೆ ಬರುವಂತಾಯಿತು. ಆದರೇನು, ಉಳಿದ ಹೊಲಗಳೆಲ್ಲ ಬರಿದೋ ಬರಿದು; ಬರಗಾಲದ ಕರಿನೆರಳುಗಳು ಪಾದಳ್ಳಿಯ ಕರಿನೆಲದ ತುಂಬ ವ್ಯಾಪಿಸಿದವು.

ಎಳ್ಳ-ಅಮಾಸೆ ಕಾಲಿಟ್ಟಿತು. ಮಳೆ ಚನ್ನಾಗಿ ಬಿದ್ದು ಭೂಮಿಯಲ್ಲಿ ಬೆಳೆ ಬಿಗಿದು ನಿಂತಿದ್ದರೆ ಉತ್ಸಾಹದಿಂದ ಚರಗ ಚಲ್ಲಲು ಹೋಗಬಹುದಾಗಿತ್ತು. ಈ ವರ್ಷ ಯಾರೂ ಹೊಲದ ಕಡೆಗೆ ಹಾಯಲಿಲ್ಲ. ಅಂದಿನ ಬೆಳಕು ಹರಿಯುವ ಮೊದಲೇ ನದಿಯಲ್ಲಿ ಮಿಂದು ಉತ್ಸಾಹದಿಂದ ನೀರು ತರುವ ಹೆಣ್ಣುಮಕ್ಕಳನ್ನು ಕಾಣಬಹುದಾಗಿತ್ತು. ಆದರೆ ಈ ವರ್ಷ ಮಾತ್ರ ಬರಗಾಲದ ಮೂಲಕವಾಗಿ, ಬೆಳಕು ಹರಿದರೂ ವಾಡಿಕೆಯ ಗಡಿಬಿಡಿ ಈಗ ಅಲ್ಲಿ ಕಾಣುತ್ತಿರಲಿಲ್ಲ.

ಊರ ಮಗ್ಗುಲಿಗೇ ಹರಿಯುವ ಈ ನದಿಯ ಹರವು ಪಾದಳ್ಳಿಯ ಅಭಿ- ಮಾನಗಳಲ್ಲೊಂದಾಗಿತ್ತು. ಬೇಸಿಗೆಯಲ್ಲಿಯೂ ಬತ್ತಿ ಹೋಗದ ನಾಲ್ಕು ಮೈಲು ಉದ್ದದ ವಿಸ್ತಾರವಾದ ಮಡುವು ಊರನ್ನು ತಬ್ಬಿಕೊಂಡಿತ್ತು. ಆ ವಿಸ್ತಾರವಾದ ಜಲ ರಾಶಿಯಲ್ಲಿ ಅನೇಕ ಮೊಸಳೆಗಳಿದ್ದದ್ದನ್ನು ಪಾದಳ್ಳಿಯ ಜನರೆಲ್ಲ ಕಣ್ಣಾರೆ ನೋಡಿ

ದ್ದರು. ಆದರೆ ಯಾರಿಗೂ ಅವುಗಳ ಭೀತಿಯಿರಲಿಲ್ಲ. ನೀರೆಂದ ಮೇಲೆ ಮೀನ
ಗಳಂತೇ ಮೊಸಳೆಗಳೂ ಇರುವವೇ ಎಂದು ಅವರಿಗೆ ಸ್ವಾಭಾವಿಕ ಕಲ್ಪನೇಯೇ
ಇತ್ತು. ಅಂತೆಯೇ ಬಾಳಾಚಾರ್ಯರು ನಸುಕು ಹರಿಯುವ ಮೊದಲೇ ನದಿಯ ನೀರಿ
ನಲ್ಲಿ ಈಸಿ ಹೋಗಿ, ನದಿಯ ಮಧ್ಯದಲ್ಲಿರುವ ಒಂದು ನಡುಗಡ್ಡೆಯನ್ನು ಮುಟ್ಟಿ,
ಅಲ್ಲಿ ಬೆಳೆದ ತುಳಿಸಿಯನ್ನು ಥಾಲಿಯಲ್ಲಿ ತುಂಬಿಕೊಂಡು ತರುತ್ತಿದ್ದರು. ತಿರುಗಿ
ಬರುವಾಗ ಆ ಥಾಲಿಯನ್ನು ಪಂಜೆಯಲ್ಲಿ ಕಟ್ಟಿ ನಡುವಿಗೆ ಬಿಗಿದುಕೊಂಡು ಈಸು
ತ್ತಲೇ ದಂಡೆಯನ್ನು ಮುಟ್ಟುತ್ತಿದ್ದರು. ಆದರೆ ಒಂದು ದಿನವೂ ಒಂದು ಮೊಸ-
ಳೆಯೂ ಅವರನ್ನು ಹೆದರಿಸಿರಲಿಲ್ಲವೆಂದು ಅವರೇ ಹೇಳುತ್ತಿದ್ದರು.

ಆ ನದಿಯ ತೀರ ಊರ ಜನರ ಸ್ವಭಾವದ ಪ್ರತಿಬಿಂಬವೆನ್ನುತ್ತಿತ್ತು. ಮನೆ
ಯಲ್ಲಿ ಭದ್ರವಾಗಿದ್ದ ರಹಸ್ಯಗಳೆಲ್ಲ ಇಲ್ಲಿ ಬಯಲಿಗೆ ಬರುತ್ತಿದ್ದವು. ಮೇಲಾಗಿ ಹರಿ
ಯುವ ನದಿಯ ಸದ್ದನ್ನೂ ನಾಚಿಸುವಂತೆ ಗರತಿಯರ ದನಿ-ಮೊಳಗನ್ನು ಅಲ್ಲಿ
ಕೇಳಬಹುದಾಗಿತ್ತು.

ಎಳ್ಳ-ಅಮವಾಸೆಯ ದಿನವೂ ಬೆಳಗಿನಲ್ಲಿ ಎಂದಿನಂತೆ ಸ್ತ್ರೀಸಮುದಾಯ
ಸೇರಿತ್ತು. ಎಲ್ಲ ಜಾತಿಯ ಎಲ್ಲ ವಯಸ್ಸಿನ ಸ್ತ್ರೀಯರು ನೆರೆದಿದ್ದರು. ನದಿಯ
ದಂಡೆಯಲ್ಲಿರುವ ಎರೆಮಣ್ಣಿನ ಮುದ್ದೆಯನ್ನೆತ್ತಿ ಒಡಕು ಕೊಡದ ಸೋರುವ
ಭಾಗಕ್ಕೆ ಅದರ ಅಲಂಕಾರವನ್ನಿಡುತ್ತ ಬಿರಾದಾರ ನಿಂಗವ್ವ, "ಅಲ್ಲs ತಾರೀ, ನಿನ್ನ
ಗಂಡ ಹೊಸಾ ಸೀರಿ ತಂದಾನಂತ, ನಮಗ ತೋರಿಸಿದ್ದರ ಕಸಗೊಂಡು ಹೋಗಿ
ತಿದ್ದೆವೇ?" ಎಂದು ಅರಿವೆಯ ಸಿಂಬೆಯನ್ನು ಸುತ್ತುತ್ತ ನಿಂತ ಹೊಸ ಮೊದಲಗಿತ್ತಿ
ಯಾದ ತಾರವ್ವನನ್ನುದ್ದೇಶಿಸಿ ಕೇಳಿದಳು.

"ಎಲ್ಲಾರಂಪಾಗ ಹಣೇಬಾರ-ಶೀಟಿ ದುಡ್ಡು ಗಳಿಸಿ ತಂದಿದ್ದರ ತೋರಿಸ-
ತಿದ್ದಳು ಚಿಗವ್ವಾ" ಎಂದು ತಳವಾರ ನಾಗವ್ವ ಪಿಸುದನಿಯಲ್ಲಿಯೇ ವಿವರಣೆ
ಯಿತ್ತಳು.

"ಅಂದರೇನಬೇ, ತುಡುಗು ಮಾಡಿ ತಂದಾನಂತೀಯಾ?" ಅರೆಗಣ್ಣು
ಮುಚ್ಚಿ ಆಪ್ತಾಲೋನೆಯ ದನಿಯಲ್ಲಿ ನಿಂಗವ್ವ ಕೇಳಿದಳು.

"ತುಡುಗ ಮಾಡಿ ತರಲಾಕೂ ಎದಿ ಬೇಕಾಗತೈತಿ ಚಿಗವ್ವಾ. ಆ ರಾಜಾನಲ್ಲೆ
ಅದೆಲ್ಲಿ ಬಂದೀತು ತಗಿ. ಜಾಗೀರದಾರ ಬಾಪೂಸಾಬನ ಕೈಯೊಗ-ಬಾಯೊಗ
ಓಡ್ಯಾಡಿ ಅವನ ಮುಂದ ಮೂನತ್ತ್ಯಾಡ ಹಲ್ಲ ತಗವನ್ಯಾಗ ಅಂವಾ ರೂಪಾಯಿ

ತಗದು ಕೊಟ್ಟನಂತ" ಎಂದು ನಾಗವ್ವ ಹೇಳುತ್ತಿರುವಾಗ ತಾರವ್ವ ನೀರಲ್ಲಿಳಿದು ಕೊಡ ತುಂಬುತ್ತಿದ್ದಳು. ಅವಳಿಗೆ ತನ್ನ ಗಂಡನ ಈ ನಿಂದೆ ಅಸಹನೀಯವಾಗಿತ್ತು. ಅಂತೆಯೇ ಅವಳು "ಹೌಂದs ಯಕ್ಕಾ, ನಿಮ್ಮವನ್ಹಾಂಗ ದಾರಿ ಬಡದು ಜಾಗೀರದಾರರ ಉಡಿ ತುಂಬಿ ಅವರು ಕೊಡೂ ಹಿಡಿ ರೂಪಾಯಿ ನಮಗ್ಯಾಂಗ ಸಿಕ್ಯಾವು?" ಎಂದು ಕೊಂಕಾಡಿ ತಲೆಯ ಮೇಲೆ ಕೊಡವನ್ನಪ್ಪಳಿಸಿಕೊಂಡಳು.

ಬಿರಾದಾರ ನಿಂಗವ್ವನ ಮಣ್ಣು ಮೆತ್ತುವ ಕೆಲಸ ಇನ್ನೂ ಮುಗಿದಿರಲಿಲ್ಲ. "ನಿಲ್ರೀ, ಗಡಾನs ಹೋಗಿ ಹೋಳಿಗಿ ಮಾಡಿಕೊಂಡು ಹೊಲಕ್ಕ ಹೋಗವ-ರ್ಹಾಂಗ ಹೊಂಟಿರಲ್ಲ? ಮಳಿರಾಯ ಊರs ಮರತಬಿಟ್ಟಾನು. ಕರೀ ಭೂಮಿ ಕೂರಿಗಿ ಏರಿಲ್ಲ. ಬರೇ ಹೊಲದಾಗs ಚರಗಾ ಚಲ್ಲೂದೈತೀ?" ನಿಂಗವ್ವ ಉಳಿದವರನ್ನು ನಿಲ್ಲಿಸಿಕೊಳ್ಳಲು ನುಡಿದಳು.

ಹಿರೇಕುರುಬ ನಿಂಬೆವ್ವ ಬರಿಗೊಡವನ್ನು ಕೆಳಗಿಳಿಸಿ ನೀರಿಗಿಳಿಯುತ್ತಿದ್ದವಳು, "ನಿಂಗವ್ವತ್ತಿ, ಮಳಿ ಬೆಳಿ ಎಲ್ಲಾ ಪುಣ್ಯೇದ ಫಲಾ. ಈ ಊರಾಗಿನ ಕರ್ಮ ನೋಡಿದ ಮ್ಯಾಗೂ ಮಳಿರಾಯ ಹ್ಯಾಗ ಬಂದಾನು?" ಎಂದು ಸೃಷ್ಟಿಯ ಪ್ರಕೋಪದ ಕಾರಣವನ್ನು ವಿವರಿಸಿದಳು. ತಳವಾರ ನಾಗವ್ವನಿಗೆ ಈ ಮಾತು ಸರಿಬರಲಿಲ್ಲ. "ಪುಣ್ಣೇದ ಕಾರೇವು ಈ ಊರಾಗ ನಡದಷ್ಟು ಮತ್ತೆಲ್ಲಿ ನಡೀತಾವು ನಿಂಬೆಕ್ಕ? ಹಣಮಂತದೇವರ ಓಕಳಿ, ಸಣಸ್ವಾಮಾರದ ಪೂಜಿ ಎಲ್ಲಾ ನಡಸತಾನು ನಮ್ಮಪ್ಪ ಬಾಪೂಸಾಬ. ಇಂತಾ ಪುಣ್ಯವಂತ ಧೊರೀನ್ನ ಹಿಂದ ಮುಂದ ಆಡಿಕೊಳ್ಳೋ ಹೇಸಿ ಜನಾ ಐತೆಂತs ಮಳೀ ಬೆಳಿ ಹೋಗೇತಿ. ಯಾಕ ನಿಂಗವ್ವಾ, ನಾ ಹೇಳೂದು ರಾಸ್ತ ಐತಿಲ್ಲೋ?" ಎಂದು ಬೆಂಬಲಕ್ಕಾಗಿ ನಿಂಗವ್ವನನ್ನು ಕೇಳಿಕೊಂಡಳು.

ಹಿರೇಕುರುಬ ನಿಂಬೆವ್ವ ವಾಡೆಯ ಸಮೀಪದಲ್ಲಿಯೇ ಇರುವವಳಾದ್ದರಿಂದ ವಾಡೆಯ ಅಂತರಂಗದಲ್ಲಿ ನಡೆಯುವ ವರ್ತಮಾನಗಳನ್ನೆಲ್ಲ ಅರಿತವಳು. ಬಾಪೂಸಾಹೇಬನ ದಾನಧರ್ಮವೆಲ್ಲ ಪಾಪವನ್ನು ಮುಚ್ಚಿಕೊಳ್ಳುವ ಗತ್ತುಗಾರಿಕೆ ಎಂದು ಅವಳ ಅಭಿಪ್ರಾಯ. ಆದ್ದರಿಂದ ನಾಗವ್ವನ ಮಾತನ್ನು ಗೋಣೆಸಿಂವಳೀ ಖಂಡಿಸುತ್ತ "ನಾಗವ್ವಾ ನಿನ್ನ ಗಂಡ ಹುಲಿಬ್ಯಾಟಿ-ಹಳಬ; ಊರ ಮುಂದಿನ್ನ ಬಡದು ಜಾಗೀರದಾರರ ಉಡಿ ತುಂಬತಾನು. ಅಂತಾ ದುಡ್ಡಿನ ಆಸೇಕ್ಕ ಬಿದ್ದ ಜಾಗೀರದಾರನ ಬಡಿವಾರ ಏನ ಹೇಳತೀ? ಒಂದ ದುಡ್ಡ ಬಿಡೂದುಲ್ಲ, ಒಂದು ರೊಕ್ಕ

ಬಿಡೂದಿಲ್ಲ, ಅಂಥವರ ಪುಣ್ಣೆ ಏನ ಹೇಳ್ತಿ ತಗಿ. ಪಾಪದ ಕೊಡಾ ತುಂಬೂತನಾ ಉರದಬೀಳತಾನು ಆತು" ಎಂದು ಗರ್ಜಿಸಿದಳು.

ಬಿರಾದಾರ ನಿಂಗವ್ವ ಸುತ್ತಲೂ ನೋಡುತ್ತ "ಮಾಡಿದವರ ಪಾಪ ಆಡಿದವರ ಬಾಯಾಗ ಯಾಕ ? ನಡಿ ತಂಗಿ" ಎಂದು ನುಡಿದವಳೇ ಕೊಡವನ್ನು ಹೊತ್ತು ತಲೆಯ ಮೇಲಿಟ್ಟುಕೊಂಡು ನಡೆದಳು.

ತಳವಾರ ನಾಗವ್ವ ಎಷ್ಟೆಂದರೂ ವಾಡೆಯ ಉಪ್ಪುಂಡವಳು. ಅವಳಿಗೆ ಬಾಪೂ ಸಾಹೇಬ ಕೊಡುಗೈ ದೊರೆ ಎಂದೆನಿಸಿತ್ತು. "ಸಿಂಬೆಕ್ಕ, ಬಡಬಗ್ಗರು ಕೈ ಒಡ್ಡಿದಾಗ ನೀಡೂ ಧನಿ ಬಾಪೂಸಾಬ. ಇದು ನಿನಗ ಗೊತ್ತ ಇರಾಕಿಲ್ಲ. ಇನ್ನೇನು, ವಯಸ್ಸಿನಾಗ ಅದಾನು, ಒಬ್ಬಿಬ್ಬರ ಮ್ಯಾಗ ಮನಸು ಆಗಿದ್ದೀತು. ಆದರ ಜುಕ್ಕಜುಲಿಮಿ ಮಾಡಿ ಅಂವೇನು ಯಾರ ಒಗತನಾನೂ ಹರದಿಲ್ಲ." ಎಂದು ಬಾಪೂಸಾಹೇಬನ ಸ್ತ್ರೈಣಸ್ವಭಾವ ಅಂಥ ದೊಡ್ಡ ದೋಷವೇನೂ ಅಲ್ಲ ಎಂದು ಸಮರ್ಥಿಸಿದಳು.

ನಿಂಬೆವ್ವನಿಗೆ ತಡೆಯಲಾಗಲಿಲ್ಲ. "ಅಯ್ಯ ಬಿಡು, ನಿನ ಬಾಪೂಸಾಬಂದೇನು ಹೇಳತಿ? ಚಿಮಣಾ, ಏನೂ ಅರೇದ ಮಳ್ಳ ಹುಡಿಗಿ. ಇವನ ಬಣ್ಣದ ಮಾತಿಗೆ ಬಲೀ ಬಿತ್ತು. ಕಡೀಕೆ ಅದರ ಗತಿ ಈಗ ಏನಾಗೇತಿ ನೋಡು. ಕೊಲ್ಲಾಪುರದ ವರಾ ಒಲ್ಲೆ ಅಂದಾ. ಮದಿವಿ ಆಗದ ಕುಂತೈತಿ ಹುಡಿಗಿ. ಮಾತು ಕೊಟ್ಟಾಂಗ ಮದವಿ ಆಗಬಾರದೇನ ಬಾಪೂಸಾಬ ?" ಎಂದು ಪ್ರಶ್ನಿಸಿದಳು.

"ಆಗತಿದ್ದರs ಯಕ್ಕಾ. ಆದರ ಏನ ಮಾಡೂದು ? ಸ್ವಾಮೇರ ಮಿಸಲಾ ಮುರದಾರಂತ ಲಗ್ನ ಆಗೂದುಲ್ಲ ಅಂದರಂತ" ನಾಗವ್ವ ಮತ್ತೆ ಸಮರ್ಥಿಸಿದಳು.

"ಈ ಮಾತು ಯಾರ ಮುಂದ ಹೇಳತಿ? ಇದs ಮಾತಿಗೆ ಅಂಜಿ ಸ್ವಾಮೇರು ಮಟಾ ಬಿಟ್ಟು ಮೂರು ತಿಂಗಳ ಊರಿಗೆ ಹೋಗಿದ್ದರು. ಮಾತು ಕೊಟ್ಟಾಂಗ ಮದಿವಿ ಆಗತೀವಿ ಅಂತ ಹೇಳಿ ಕಳಸಿ ಸ್ವಾಮೇರ್ನ ಕರಿಸಿಗೊಂಡಾ ಬಾಪೂಸಾಬ. ಅದೂ ಆಗಲಿಲ್ಲ. ಮದಿವಿ ಮಾಡಿಕೊಳ್ಳೂದು ಮನಸ್ಸಿನ್ಯಾಗ ಇರದಿದ್ರ, ಆ ಹುಡಿಗಿನ್ನ, ಆಕಿ ಅಪ್ಪನ್ನ ತಮ್ಮ ಮನಿಗೆ ಹೋಗಾಕ ಯಾಕ ಬಿಡಬಾರದು? ಒಟ್ಟ ಅವನ ನಡತಿ ಬರಾಬರಿ ಇಲ್ಲ ತಗಿ. ಮನ್ನೆ ಮಟದಾಗ ಕುಡದು, ನಿಶೇದಾಗ ನನ್ನ ಸೊಸೀಗೇನೋ ಅನ್ನಾಕ ಬಂದಿತ್ತಂತ. ಕೈಯಾಗಿನ ಶಗಣಿ-ಬುಟ್ಟಿ ತಲೀಮ್ಯಾಗ ಒಗದು ಬುದ್ಧೀ ಹೇಳತಿದ್ದೆ ನಾ ಆಗಿದ್ದರ. ದೊಡ್ಡವರುದೆ ಊಡ್ಡಮನಶ್ಯಾರಿಗೆ ಒಪ್ಪೂಹಾಗಿದ್ದರ ಮರ್ಯಾದಿ ಸಿಕ್ಕೀತು." ಎಂದಿಷ್ಟು ಮಾತನಾಡುವಾಗ ನಿಂಗವ್ವನ

ದನಿ ರೋಷದಿಂದ ಕಾವೇರಿತ್ತು. ತಲೆಯ ಮೇಲೆ ಕೊಡ ಹೊತ್ತ ಪರಿವೆಯೂ ಅವಳಿಗಿರಲಿಲ್ಲ. ಆದರೆ ಉಳಿದವರು ಎಷ್ಟೊತ್ತು ಹಾಗೇ ಕೊಡ ಹೊತ್ತು ನಿಲ್ಲಲಿಕ್ಕಾದೀತು?

ಬಿರಾದಾರ ನಿಂಗವ್ವ ಮಾತು ಬದಲಿಸಬೇಕೆಂದೇ "ಅಲ್ಲs ನಿಂಬೆವ್ವ, ನಿನ್ನ ಸೊಸಿ ಹಬ್ಬಕ ಊರಿಗೆ ಹ್ವಾದಾಕಿ ಇನ್ನೂ ಯಾಕ ಬರಲಿಲ್ಲ?" ಎಂದು ಪ್ರಶ್ನೆ ಹಾಕಿದಳು. ಆ ಪ್ರಶ್ನೆಯಲ್ಲಿ ಕುತೂಹಲವೂ ಅಡಗಿತ್ತು.

"ಏನು ಹೇಳೂದೈತಿ ಚಿಗವ್ವ? ಹುಡಿಗಿಗೆ ದೆವ್ವ ಬಡದೈತಿ ಅಂತಾರು. ನಾವು ಕರೀಲಾಕ ಹೋದಾಗೆಲ್ಲ ಕಲ್ಲ-ಕೊರಡ ಆಗಿ ಬೀಳತಾಳು."

"ಇಂತಾ ದಿನದಾಗ ಹೊರಗ ಇದ್ದದ್ದs ಪಾಡ. ನನ್ನ ಸೊಸಿನ್ನ ತವರಮನಿಗೆ ಕಳಸಿಕೊಡಬೇಕಂತ ಮಾಡಿದ್ನಿ. ಆದರ ಏನು ಮಾಡೂದು, ಅವೊಂದು ದೇಶನಿಕಾಳಿ ಗಂಟುಬಿದ್ದಾವು. ಊರಾಗ ಮಾರೀಬ್ಯಾನಿ. ಅದಕ ಕಳಿಸಬ್ಯಾಡ್ರಿ ಅಂತ ಹೇಳಿ ಕಳಿಸ್ಯಾವು. ಹೊಲಾನರ ಕೂರಿಗಿ ಏರದs ಹಂಗs ಬಿದ್ದವು. ಮುಂದಿನ ಸುಗ್ಗಿಗೆ ಹೋಗಿ ಹತ್ತಬೇಕು ಹ್ಯಾಂಗs ಅಂತs ಚಿಂತಿ ಕೊರೀತೈತಿ. ಹಗೇದಾಗೇನರೆ ಜ್ವಾಳಾ ಸಾಕೀದೇನಬೇ ನಿಂಬೆವ್ವಾ?"

ನಿಂಬೆವ್ವ ಸ್ಥಿತಿವಂತ ರೈತರ ಮನೆತನದವಳು. ಅವಳ ಗಂಡ ದೇಶಪಾಂಡೆ ಹಾಗೂ ಜಾಗೀರದಾರರ ಹೊಲಗಳನ್ನು ಲಾವಣಿಯಿಂದ ಸಾಗುಮಾಡುತ್ತಿದ್ದ. ಎಂಟೆತ್ತಿನ ಕಮತವಿದ್ದ ಮನೆಯಲ್ಲಿ ಏನಿಲ್ಲೆಂದರೂ ಇನ್ನೂ ಮೂರು ವರ್ಷ ಸಾಕಾಗುವಷ್ಟು ಧಾನ್ಯಸಂಗ್ರಹವಿತ್ತು. ಆದರೂ ಜೋಳದ ಸಂಗ್ರಹವಿರುವದೆಂದು ನಿಜ ಸಂಗತಿ ಹೇಳಿದರೆ, ಕಡ ಕೊಡುವ ಪ್ರಸಂಗ ಬರಬಹುದೆಂದು, "ದೊಡ್ಡ ಹಗೇದಾಗ ನಾಲ್ವತ್ತು ಚೀಲ ಇದ್ದದ್ದು, ಜಾಗೀರದಾರರು ಹುಲಿಬ್ಯಾಟಿ-ಹಳಬರನ್ನ ಹಚ್ಚಿ, ಹಗೇ ತೆಗಿಸಿ ಕಡಾ ತಗೊಂಡಾರು. ಕಾಗದಾ ಬರಕೊಟ್ಟಾರಂತ. ಅದನ್ನೇನು ಉಪ್ಪು ಹಚ್ಚಿ ನೆಕ್ಕೂದೈತೆ ? ಯಾರ ಮುಂದ ಹೇಳೂದು ನಿಂಗವ್ವಾ? ಊರ ಮಂದಿಗೆ ಬಂದದ್ದು ನಮಗೂ ಬರತೈತಿ. ಈ ವರಸ ತಿನ್ನಾಕ ಸಾಲೂವಷ್ಟು ಕಾಳು ಸಣ್ಣ ಹಗೇದಾಗ ಇದ್ದರ ಇರಬೇಕು" ಎಂದು ನಿಂಬೆವ್ವ ಮುಂಧೋರಣೆಯಿಂದಲೇ ಹೇಳಿದ್ದರೂ, ಉಳಿದವರಿಗೆಲ್ಲ ಅವಳ ಮಾತಿನ ಅರ್ಥವಾಯಿತು.

"ಅದ್ಯಾಕs, ಮಲ್ಲಯ್ಯನ ಗುಡಿ ಮುಂದಿನ ಹಗೇದಾಗ ಮೂವತ್ತು ಚೀಲಕ್ಕ ಕೈಸs ಹಚ್ಚಿಲ್ಲಂತs? ಮನ್ನೆ ಶಂಕರೆಪ್ಪಗೌಡರು, ಊರಾಗಿನ ಎಲ್ಲಾ

ಹಗೇದಾಗಿನ ಜ್ವಾಳಾ ಕೂಡಿ, ಊರಿಗೆ ಆರು ತಿಂಗಳ ಗಂಜಿ ಆಗತೈತಿ ಅಂತ ಮಾತಾಡುವಾಗ ನಿನ್ನ ಹಗೇದ ಸುದ್ದಿ ಹೊಂಟಿತ್ತು."ಎಂದು ಬಿರಾದಾರ ನಿಂಗವ್ವ ನಿಂಬೆವ್ವನ ಅಸತ್ಯವನ್ನು ಬಯಲಿಗೆಳೆದಳು.

"ಹೋದ ಸುಗ್ಗ್ಯಾಗ ನಾ ಹಾವನೂರಿಗೆ ಹೋದಾಗ, ಹಿರ್‍ಯಾ ಹಗೇ ತಗದು ಕಾಳ ಹಾಕ್ಯಾನ. ಎಷ್ಟು ಹಾಕ್ಯಾನೋ ಅವಗss ಗೊಂತು. ದೊಡ್ಡ ರಾಬದ ಮನಿ; ಮ್ಯಾಲೆ ಎಂಟೆತ್ತಿನ ಕಮತ. ಕೂಲಿ-ಕುಯಿಳಿ ಸಾಗಬೇಕಲ್ಲಾ" ಎಂದು ನಿಂಬೆವ್ವ ನಾಲಿಗೆ ಸವರಿಕೊಂಡಳು.

"ನದಿ ಮುಳಗೂ ಭೂಮಿ ನಿನ್ನದು. ಬಿಗದ ನಿಂತಾವು. ಊರಿಗೆ ಬರಾ ಬಂದರೂ ನಿನಗ್ಯಾಕ ಅದರ ಚಿಂತಿ ಚಿಗವ್ವಾ?" ಎಂದು ನಾಗವ್ವ ನಡುವೆ ಬಾಯಿ ಹಾಕಿದಳು.

"ನದಿ ಮುಳುಗೂ ಭೂಮಿ ಸ್ವಂತದ್ದೇನಬೆ? ಜಾಗೀರದಾರರದು. ಅವರ ಪಾಲಾ, ಮೇಲಪಟ್ಟಿ ಕೊಟ್ಟು, ಉಳದರ ನಮ್ಮದು." ನಿಂಬೆವ್ವ ಹಾರಿಸಿ ನುಡಿದಳು.

ಇನ್ನೇನು ನೀರಗಸೆಯನ್ನು ದಾಟಿಬಿಟ್ಟರೆ, ಅವರವರ ದಾರಿ ತಮ್ಮ ತಮ್ಮ ಮನೆಗಳಿಗೆ. ಕೂಡಿಕೊಂಡು ಬರುವದು ಇಲ್ಲಿಯ ವರೆಗೆ ಮಾತ್ರ. ಬಗಲಲ್ಲಿ, ತಲೆಯ ಮೇಲೆ ತುಂಬಿದ ಕೊಡಗಳು ಕೂಡ, ತುಳುಕಿ ಸಪ್ಪಳ ಮಾಡುತ್ತಿದ್ದವು. ಅಷ್ಟೇ ಅವಿರತವಾಗಿ ಇವರ ಹರಟೆಯೂ ಸಾಗಿತ್ತು.

ಮಾತಾಡುತ್ತ ಇವರು ನಡೆದಿರುವಾಗಲೇ, ಎದುರಿನಿಂದ ಹೊಲೆಯರು ಕುಳ್ಳು ಹೊತ್ತುಕೊಂಡು ಬಂದರು. ಹೆಂಗಳೆಯರು ಭಯ, ಕುತೂಹಲಗಳಿಂದ ತ್ರಸ್ತರಾದರು.

ಶಿಲೇದಾರ ನಾನಾಸಾಹೇಬನು ಬೆಳಗಿನ ಜಾವಕ್ಕೆ ಸತ್ತನೆಂದು ಅವರ ಬಾಯಿಂದ ಕೇಳಿದಾಗ ಇವರಿಗೆಲ್ಲ ಆಘಾತವಾದಂತಾಯಿತು.

"ಪಾಪ, ಮಗಳ ಬೆಳದು ಮನ್ಯಾಗ ಕೂತದ್ದು ನೋಡಲಾಗದ್ದಕ್ಕ, ಎದಿ ಒಡಕೊಂಡು, ಜೀವಾ ನೀಗಿತು ನೋಡಬೆ ನಾನಾಸಾಬ" ಒಬ್ಬಳು ಕಣ್ಣೀರು ತಂದು ನುಡಿದಳು.

"ಛೀ ಬಿಡ, ಎದಿ ಒಡಕೊಳ್ಳಾಕ ಏನ ಆಗಿತ್ತು? ವಾಡೇದಾಗ ಹೋಗಿ ಘಾರಹುಣ್ಣಿವಿ ಮುಂದ ತಳಾ ಊರಿದಾಗಿನಿಂದ ಜಾಗೀರದಾರರ ಮಾಮಾ ಆಗಿ

ಮಜಾದಾಗs ಇದ್ದ." ತಳವಾರ ನಾಗವ್ವ ತನಗೆ ತಿಳಿದದ್ದು ಹೇಳಿದಳು.

"ನಿನಗ ಗೊತ್ತಿಲ್ಲ ಯಕ್ಕಾ, ಯಾವಾಗ ಕಾರಹುಣ್ಣಿವಿಗೆ ಹೊರಗ ಕುಂತಾಕಿ ಚಿಮಣಾ, ತಿರುಗಿ ಹೊರಗ ಆಗಿಲ್ಲ. ಅದs ಹೊಟ್ಟಿಬ್ಯಾನಿ ಇತ್ತು ಮುದಕಗ. ದಾದಾನ ಕಿವಿಗೆ ಈ ಸುದ್ದಿ ಬಿದ್ದರಂತೂ ತಮ್ಮಿಬ್ಬರದೂ ಜೀವ ಉಳ್ಯಾಕಿಲ್ಲ ಅಂತ ಕಣ್ಣೀರು ತಗದು ನಮ್ಮನ್ಯಾಗ ಹೇಳಿತ್ತು ಮುದುಕ. ದಾದಾಗ ಏನರೆ ಗೊತ್ತಾತೋ ಏನೋ, ಅದಕ್ಕs ಪ್ರಾಣ ಹೋಗಿರಬೇಕು." ನಿಂಬೆವ್ವ ಎಲ್ಲವೂ ಗೊತ್ತಿದ್ದವಳಂತೆ ಮಾತಾಡಿ, ಪ್ರಕರಣದ ರಹಸ್ಯ ತನಗೆ ಗೊತ್ತಿದ್ದವಳಂತೆ ಹೇಳಿದಳು.

"ಅದೆಲ್ಲಾ ಹಾದಿಗುಂಟ ಏನ ಮಾತಾಡತೀರೇ? ಒಂದು ಹೋಗಿ ಮತ್ತೊಂದಾದೀತು. ನಿಂಬೆವ್ವ, ಮನ್ನೆ ಬಾಪೂಸಾಬ ಪಡದಪ್ಪನವರ ಮುಂದ ಕುಂತು ನಾನಾ ಊರ ತುಂಬ ಹರ್ಲಿ ಮಾಡಕೊಂತ ತಿರಗದ್ಹಾಂಗ ಏನು ಮಾಡಬೇಕು ಅಂತ ಕೇಳತಿದ್ದ. ಮುದಕಗ ತಲೀ ಕೆಟ್ಟಾಂಗ ಆಗಿ ಮಾತಾಡತಾನಂತ ತಮ್ಮ ಕಿವಿಗೂ ಸುದ್ದಿ ಬಿದ್ದs ತಿ ಅಂತ ಸ್ವಾಮೇರ ಅಂದರಂತ. ನಿನ್ನೆ ನೆಟ್ಟಗಿದ್ದ ನಾನಾ ಬೆಳಗಾಗೂದರಾಗ ಇಲ್ಲ ಅಂದರ, ಎಲ್ಲಿ ಬಾಪೂಸಾಬ ಮತ್ತ........." ತಳವಾರ ನಾಗವ್ವ ಸತ್ತ ಸುದ್ದಿಗೆ ಸಂಶಯದ ಜೀವ ತುಂಬಿದಳು.

"ಅದೆಲ್ಲಾ ಏನೈತೋ ಶಿವಗs ಗೊತ್ತು. ನಿನ್ನೆ ಥೆಂಜೀ ಕಡಸೆ ಮನೀ ಕಟ್ಟಿಗೆ ಕುಂತು ನಾರಿನ ಹಗ್ಗಾ ಹೊಸೀತಿತ್ತು ಮುದುಕ. 'ಮುಪ್ಪಾತು, ಮಗಳು ಮಾಡಿದ ಬಿಸಿ ರೊಟ್ಟಿ ತಿಂದು ಸುಮಾಕ ಕೂಡಬಾರದ ಮುದಕಾ' ಅಂತ ನಾ ಅಂದ್ನಿ. 'ನನಗೇನಾಗೇತಿಬೇ, ಇನ್ನೂ ನಡಾ ಬಾಗಿಲ್ಲ; ಚೀಲಜ್ವಾಳಾ ಒಮಾತ ನೆಗವಿಟ್ಟೇನು' ಅಂತ ಅಂದ. ಅಂತಾವ ಬಾಯಾಗ ಹಿಡಿ ಮಣ್ಣು ತುಂಬಿಕೊಂಡು ಹೋದ" ಬಿರಾದಾರ ನಿಂಗವ್ವ ಈ ಮಾತು ಹೇಳುತ್ತಲೇ ನಿಡಿದಾಗಿ ಉಸಿರು ಬಿಟ್ಟಳು.

ಸೀರಗಸೆ ದಾಟಿತ್ತು. ಎಲ್ಲರ ದಾರಿ ಬೇರೆಬೇರೆಯಾದವು. ಊರೊಳಗೆ ಬರುವ ಕೆಲವರು ಮೌನ ಧರಿಸಿದರು. ಊರ ಮಧ್ಯದಲ್ಲಿರುವ ಗೋಪಾಲಕೃಷ್ಣನ ಗುಡಿಯ ಮುಂದೆ ಹಾಯ್ದು ಹೋಗುವಾಗ ಗೌಡರು, ಕುಲಕರ್ಣಿ ಮನೆತನದ ಹಿಂಡು, ಬಾಳಾಚಾರ್ಯರು, ಬಾಪೂಸಾಹೇಬ ಹೀಗೆ ಊರ ಹಿರಿಯರೆಲ್ಲ ಗುಡಿ ಯಲ್ಲಿ ಕುಳಿತಿದ್ದರು. ಎಲ್ಲರ ಮುಖದ ಮೇಲಿಯೂ ವ್ಯಗ್ರತೆ, ನಡಿಗೆಯಲ್ಲಿ ಆತುರ

ಕಾಣುತ್ತಿದ್ದವು. ಇಷ್ಟು ಜನ ಹಿರಿಯರು ಗುಡಿಯಲ್ಲಿ ಕೂಡಿದ್ದನ್ನು ನೋಡಿ, ಹೆಣ್ಣುಮಕ್ಕಳೆಲ್ಲ ಸೆರಗನ್ನು ಸರಿಯಾಗಿ ಹೊದ್ದುಕೊಂಡು ಒಬ್ಬೊಬ್ಬರೆ ಗುಡಿಯ ಮುಂದಿನಿಂದ ಹಾದು ಹೋದರು.

ನಾನಾನ ದುರ್ಮರಣ ಊರ ಜೀವನವನ್ನು ಕಲಕಿತ್ತು. ಒಂದಿಲ್ಲೊಂದು ರೀತಿಯಿಂದ ಊರ ಹಿರಿಯರು, ಆ ಮರಣದ ಹೊಣೆಯನ್ನು ತಾವರಿಯದೆಯೇ ಹೊತ್ತಿದ್ದರು. ಚಿಮಣಾಳ ಅಪಮಾನ, ನಾನಾನ ಸಾವು ಇವು ಈಗ ವೈಯಕ್ತಿಕ ವಿಷಯಗಳಾಗಿರಲಿಲ್ಲ. ಇವು ಕೇವಲ ದುಃಖಗಳಾಗಿದ್ದರೆ ನಾಲ್ಕು ಸಮಾಧಾನದ ಮಾತಾಡಿಬಿಡಬಹುದಾಗಿತ್ತು. ಆದರೆ ಈ ದುಃಖಗಳಿಗೆ ಅನ್ಯಾಯದ ಕಲಂಕ ವಿದೆ. ಅನ್ಯಾಯವೇ ಈ ದುಃಖಗಳನ್ನು ಎಳೆದು ತಂದು ಸಮಸ್ಯೆಯನ್ನಾಗಿ ಮಾಡಿ ಸಾರ್ವಜನಿಕರ ಮುಂದೆ ತಂದಿಟ್ಟಿದೆ. ಇದಕ್ಕೆ ಯಾರು ಉತ್ತರ ಹೇಳಬಲ್ಲರು ?

ಬಾಪೂಸಾಹೇಬ ಊರ ಜಾಗಿರದಾರನಾಗಿ ದರ್ಬಾರ ನಡೆಸುವ ದೊರೆ ಯಾಗಿ ದರ್ಪದಿಂದ ಕುಳಿತಿರಲಿಲ್ಲ. ಇಂದು ತಲೆಯ ಮೇಲೆ ಪೇಟಾ ಇರಲಿಲ್ಲ; ತೊಡೆಯ ಮೇಲೆ ಯಾವಾಗಲೂ ಇರುತ್ತಿದ್ದ ಎಲೆಯಡಿಕೆಯ ಜರದ ಚಂಚಿಯಿರ ಲಿಲ್ಲ. ತುಟಿಗಳ ನಗೆ ಮಾಯವಾಗಿತ್ತು. ಇನ್ನೊಬ್ಬರು ಪ್ರತ್ಯೇಕವಾಗಿ ಅವನನ್ನೇ ಮಾತಾಡಿಸಿದರೆ ಮಾತ್ರ ಬಹು ಪ್ರಯಾಸದಿಂದ ಕೇಳುತ್ತಿದ್ದ. ಇಲ್ಲದಿದ್ದರೆ ಮಂಕು ಹಿಡಿದವರಂತೆ ಸುಮ್ಮನೆ ಕೂತುಬಿಟ್ಟಿದ್ದ. ಇಂದೇಕೋ ಅವನ ಮುಖದ ಮೇಲೆ ಆರೋಪಿಯ ಕಳೆ ಇತ್ತು.

ಮಾತಾಡುವದೆಲ್ಲ ಆಗಲೇ ಮುಗಿದು ಹೋಗಿತ್ತು. ನಾನಾನ ಮೃತದೇಹ ವನ್ನು ಆಸ್ಪತ್ರೆಗೆ ಸಾಗಿಸಬೇಕೆಂಬ ನಿರ್ಣಯವನ್ನು ಹಿರಿಯರ ಸಭೆ ಸ್ವೀಕರಿಸಿತ್ತು. ನಾನಾನಿಗೆ ವಿಷಪ್ರಯೋಗವಾಗಿರಲೇಬೇಕೆಂದು ಗೌಡರ ನಿಷ್ಠುರವಾದ ಅಭಿ ಪ್ರಾಯವಿತ್ತು. ಇಲ್ಲದಿದ್ದರೆ ಉಕ್ಕಿನ ಗೊಂಬೆಯಂತಿದ್ದ ನಾನಾ ಹೀಗೆ ಒಮ್ಮೆಲೇ ಸಾಯುವದೆಂದರೇನು? ಅದು ಅಲ್ಲದೆ ಬಾಪೂಸಾಹೇಬನೇ ವಿಷಪ್ರಯೋಗದ ಪ್ರೇರ ಕನೆಂದು ಗೌಡರು ಸ್ಪಷ್ಟವಾಗಿ ಆರೋಪಿಸಿದ್ದರು. ಈ ಆರೋಪವನ್ನು ಬಾಪೂ ಸಾಹೇಬ ಒಪ್ಪಿ ರೀತಿಯಂತೆ ದೈವದವರಿಗೆ ತಪ್ಪದಂಡ ಇಡಲು ಒಪ್ಪದ್ದರಿಂದ, ನಾನಾನ ಹೆಣವನ್ನು ಆಸ್ಪತ್ರೆಗೆ ಸಾಗಿಸುವದು ಅನಿವಾರ್ಯವಾಗಿತ್ತು.

ಶಂಕ್ರಪ್ಪಗೌಡರ ಮುಖದಲ್ಲಿ ಹೊಣೆಗಾರಿಕೆಯ ಗೆರೆಗಳು ಸ್ಪಷ್ಟವಾಗಿ ಮೂಡಿದ್ದವು. ಈ ವಿಷಯ ಎಂದಿನಂತೆ ಸಾಮಾನ್ಯವಾಗಿರಲಿಲ್ಲ. ಶಿಲೇದಾರ ನಾನಾ

ಸಣ್ಣ ಮನುಷ್ಯನಾಗಿದ್ದರೂ, ಅವನ ಮರಣ ಊರ ಪ್ರತಿಷ್ಠಿತರನ್ನೆಲ್ಲ ಸುತ್ತು ಹಾಕಿಕೊಂಡಿತ್ತು. ಮತ್ತು ಈ ಸಭೆಯಲ್ಲಿ ದಾದಾ ಅಥವಾ ಅವನ ತಂದೆ ಲಕ್ಷ್ಮಣ ಇವರೂ ಇರಲಿಲ್ಲ. ದಾದಾ ಕುಸ್ತಿಗೆಂದು ಜತ್ತಿಗೆ ಹೋದವನು ಇನ್ನು ಮೂರು ದಿನಗಳ ಮೇಲೆ ಮರಳಿ ಬರುವದಾಗಿ ತಿಳಿದಿತ್ತು. ಅನಾವೃಷ್ಟಿಯಿಂದ ಮೇವಿನ ಅಭಾವವಾದುದರಿಂದ, ಲಕ್ಷ್ಮಣ ತಾಸಗಾಂವಿಗೆ ತನ್ನ ಬರಡು ದನಗಳನ್ನು ಬೀಗರ ಮನೆಗೆ ಅಟ್ಟಬರಲು ಹೋಗಿದ್ದನು. ನಾನಾನ ಸಮೀಪದ ಆಪ್ತರೆಂದರೆ ಇವರಿಬ್ಬರೇ. ಅವರು ಈ ಮರಣದ ವಿಷಯವಾಗಿ ಫಿರ್ಯಾದಿ ಕೊಟ್ಟಿದ್ದರೆ ಮಾತ್ರ ಗೌಡರು, ನ್ಯಾಯಾಧೀಶನಂತೆ, ನಿರ್ಣಯ ಕೊಡಬಹುದಾಗಿತ್ತು. ಆದರೆ ಈಗ ಮಾತ್ರ ಅದರ ಚಿಂತೆಯೂ ಗೌಡರ ಮೇಲೆಯೇ ಇತ್ತು. ಈ ಹಿನ್ನೆಲೆಯನ್ನು ವಿಚಾರ ಮಾಡಿಮಾಡಿದಂತೆ ಗೌಡರಿಗೆ ಇನ್ನೊಂದು ವಿಚಾರವೂ ಸೂಕ್ಷ್ಮವಾಗಿ ಗೋಚರವಾಗತೊಡಗಿತ್ತು. ಇವರಿಬ್ಬರೂ ಊರಲ್ಲಿಲ್ಲದ ಸಮಯವನ್ನೇ ಸಾಧಿಸಿಯೇ ನಾನಾನಿಗೆ ವಿಷಪ್ರಯೋಗ ಮಾಡಲಾಗಿದೆ ಎಂದು ಅವರಿಗೆ ಸಂಶಯ ಬಂದಿತ್ತು. ಈಗ ಹೆಣವನ್ನು ಆಸ್ಪತ್ರೆಗೆ ಕಳಿಸಲು ಮೃತನ ವಾರಸದಾರರ ಫಿರ್ಯಾದಿಯ ಅಗತ್ಯವಿತ್ತು. ಚಿಮಣಾನಿಂದ ಫಿರ್ಯಾದಿಯನ್ನು ಬರೆಸಿಕೊಳ್ಳುವ ಯೋಜನೆಯಲ್ಲಿ ಗೌಡರು ತೊಡಗಿದ್ದರು. ಈ ಎಲ್ಲ ವಿಚಾರಗಳಿಂದ ಗೌಡರ ಮುಖ ತ್ರಸ್ತವಾಗಿತ್ತು.

ಇಂಥ ಅನೇಕ ಪ್ರಕರಣಗಳನ್ನು ಯಶಸ್ವಿಯಾಗಿ ಬಗೆಹರಿಸಿದ ಗೌಡರಿಗೆ ಚಿಮಣಾಳ ಫಿರ್ಯಾದಿ ಪಡೆಯುವ ಯುಕ್ತಿ ಹೊಳೆಯಲು ತಡವಾಗಲಿಲ್ಲ. ಬಾಯಲ್ಲಿಯ ತಂಬಾಕವನ್ನು ಉಗುಳಿದವರೇ ಓಲೆಕಾರನನ್ನು ಕರೆದು "ಲೇ ದರಿಯಾ, ವಾಡೇಕ ಹೋಗಿ ಚಿಮಣಾಬಾಯಿಗೆ ಕರದಾರಂತ ಹೇಳಿ ಕರಕೊಂಡು ಬಾ. ಗೌಡರು ಕರದಾರಂತ ಹೇಳಲೇ !" ಎಂದು ಆಜ್ಞಾಪಿಸಿದರು. ಆಮೇಲೆ ದೈವದ ಪರೆಡುರು "ಜಾಗೀರದಾರರು ಗುನ್ನೆ ಮಾಡಿರದಿದ್ದರ, ಚಿಮಣಾ ಮಾಡಿರಬೇಕು. ಆಕಿನ್ನಃ ಚಾವಡಿಗೆ ಕರೆಸಿ ಜವಾಬು ತೊಗೊಂತೀನಿ. ಈ ಪ್ರಕರಣದ ಪತ್ತೆ ಹಚ್ಚಿ ನಿಕಾಲಿ ಮಾಡದಿದ್ದರ ಗೌಡಿಕೀ ಬಿಡತೇನಿ ಗೌಡಿಕಿ" ಎಂದು ಮೀಸೆ ತಿರಿವಿ ಆರ್ಭಟಿಸಿದರು.

"ಎಂತಾ ಮಾತಾಡತೀರಿ ಗೌಡರ? ಪೋಲೀಸ ಪಾಟೀಲಕಿ ಕೈಯಾಗ ಅದಅಂತ ಎಸರ ಸಂಶಯ ತೊಗೊಂಡರ ಆತೇನು? ತಂದೆಗೆ ಮಗಳಿಂದಾದರೂ ವಿಷಾ

ಹಾಕತಾಳs? ನಾನಾ ಧಡೇದ ಬ್ಯಾನಿ ಬಂದು ಸತ್ತಾ ಅಂತ ನಾ ಸುಳ್ಳು ಹೇಳೂದಿಲ್ಲ. ಹೆಣಾ ಆಸ್ಪತ್ರಿಗೆ ಒಯ್ದು ಏನ ಮಾಡತೀರಿ? "ಎಂದು ಬಾಪೂಸಾಹೇಬ ಮತ್ತೆ ವಾದಿಸಿದ.

ಕುಲಕರ್ಣಿ ಶೇಷಪ್ಪ ನಶ್ಯದ ಚಿಟಿಕೆಯನ್ನು ಏರಿಸಲು ಇನ್ನೇನು ಮೂಗಿನ ತುದಿಗೆ ಕೈ ಒಯ್ಯಬೇಕೆಂದವನು, ಅದನ್ನು ತಡೆದು ಕೈ ಮುಂದೆ ಮಾಡಿ "ಜಾಗೀರ ದಾರ ಸಾಹೇಬ, ಇನ್ನೂ ಈ ಊರ ನೀರು ನಿಮಗ ಹತ್ತಿಲ್ಲ. ಈ ಊರಾಗ ಇಂಥಾ ವೆಲ್ಲಾ ಪ್ರಕರಣ ಬೇಕಾದಷ್ಟು ಆಗ್ಯಾವ. ಮಗಳು ಅಪ್ಪನ ಖೂನ ಮಾಡಿದ್ದು ನೋಡೇನಿ; ಹೇಣತಿ ಗಂಡನ ಖೂನ ಮಾಡಿಸಿದ್ದು ನೋಡೇನಿ; ಇಷ್ಟs ಅಲ್ಲ ಸ್ವತಃ ಅಪ್ಪ ಮಗನ ಕೊಂದದ್ದೂ ಪ್ರಸಂಗ ಆಗ್ಯಾವ. ಈ ಊರ ಭೂಮೀ ಗುಣಾನs ಅಂಥಾದ್ದು. ಚಿಮಣಾ ಭಾಳ ಭೋಳೀ ಹುಡಿಗಿ ಅಂತ ನಿಮಗನಿಸಿರಬಹುದು. ಆದರ ಆಕೀನs ನಾನಾನ ಮರಣದ ಹಿಂದ ಇದ್ದಾಳ ಅನ್ನೋದು ದೈವದವರಿಗೆಲ್ಲಾ ಗೊತ್ತದ." ಎಂದು ಆಧ್ಯತೆಯಿಂದ ಗುಡುಗಿದ.

ಬಾಪೂಸಾಹೇಬ ಹತಾಶನಾಗಿ ತಲೆ ಕೆಳಗೆ ಮಾಡಿ ಕುಳಿತುಕೊಂಡ. ಅಷ್ಟ ರಲ್ಲಿ ಓಲೆಕಾರ ದರಿಯಪ್ಪ ಚಿಮಣಾ ಚಾವಡಿಗೆ ಬಂದಳೆಂದು ಗೌಡರಿಗೆ ಅರಿಕೆ ಮಾಡಿಕೊಂಡ. ಗೌಡರಿಗೆ ಅವಸಾನ ಉಳಿಯಲಿಲ್ಲ. ತಲೆಯ ಮೇಲಿನ ಜರದ ಕೆಂಪು ರುಮಾಲನ್ನೂ ಇಟ್ಟಲ್ಲಿಯೇ ಮರೆತು, ಬೇಟೆ ಸಿಕ್ಕಾಗ ಹಾರುವ ಹುಲಿ ಯಂತೆ, ಗುಡಿಯಿಂದ ಟಣ್ಣನೆ ಹಾರಿ ಚಾವಡಿಗೆ ನಡೆದರು. "ಗೌಡ್ರs, ಗೌಡ್ರ, ರುಮಾಲಾ ಬಿಟ್ರಿ" ಎಂದು ಶೇಷಪ್ಪ ಒದರಿಕೊಂಡದ್ದೂ ಅವರಿಗೆ ಕೇಳಿಸಲಿಲ್ಲ. ದರಿಯಪ್ಪನೇ ರೂಮಾಲು ತೆಗೆದುಕೊಂಡು, ದೆಸೆಬಾಯಿ ಬಿಡುತ್ತ ಓಡಿ ಗೌಡರಿಗೆ ಮುಟ್ಟಿಸಿದ.

ಗುಡಿಯಲ್ಲಿ ಕುಳಿತ ಜನರೆಲ್ಲ ಮಂಕುಬಡಿದಂತಾಗಿದ್ದರು. ಯಾರಿಗೂ ಏನು ಮಾತಾಡಬೇಕೆಂಬುದೇ ತಿಳಿಯದಾಗಿತ್ತು. ಆದರೆ ಮೌನವೂ ಆ ವೇಳೆಗೆ ಅಸಹನೀಯವಾಗಿತ್ತು. ಆಗ ಬಾಳಾಚಾರ್ಯರು ಪರಿಸ್ಥಿತಿಯನ್ನು ಹದಕ್ಕೆ ತರ ಬೇಕೆಂದು "ಇಲ್ಲಿ ನೋಡ್ರಿ ಜಾಗೀರದಾರ ಸಾಹೇಬ, ಗೌಡರು ಈ ಪ್ರಕರಣ ಬೆಳಿಸಬಾರದಂತs ಸಾಮೋಪಚಾರದಿಂದ ಹೇಳಿದ ಮಾತು ನಿಮಗೆ ಬಗೀಹರೀ ಲಿಲ್ಲ. ದೈವದವರು ಅಂದರ ದೇವರ ಸಮಾನ. ಅವರ ಮುಂದೆ ತಪ್ಪು ಒಪ್ಪಲಿಕ್ಕೆ ಎಂದೂ ನಾಚಬಾರದು. ಶಂಕರಪ್ಪ ದೀರ್ಘಕ್ಕ ಹೋದಾ ಅಂದರ ಯಾರಿಗೂ

ಸೋಲಿಲೂ ಆಸಾಮಿ ಅಲ್ಲ. ದಿನಬೆಳಗಾದರ ಮಾರಿ ನೋಡವರು, ಹೀಂಗ ಮುರ
ಕೊಂಡು ಬಾಳೂದು ಯೋಗ್ಯ ಆಗೂದುಲ್ಲ" ಎಂದು ನುಡಿದರು. ಅವರ ಮಾತಿ
ನಲ್ಲಿ ನ್ಯಾಯನಿಷ್ಠುರತೆಯಿರಲಿಲ್ಲ; ಅಂತಃಕರಣದ ತೀವ್ರ ವೇದನೆಯಿತ್ತು.
ನಾನಾನ ಮರಣದ ದುಃಖದಿಂದ ಗಾಸಿಯಾದ ಅವರಿಗೆ ಈ ತೊಡಕಿನಿಂದ
ಹೆಚ್ಚು ಆಘಾತವಾಗಿತ್ತು.

"ಆಚಾರಸ್ವಾಮಿ, ನಾ ಮಾಡಿದ ಉಪಕಾರಾ ನೀವೆಲ್ಲ ಇಷ್ಟು ಲಗೂ
ಮರೀತೀರಂತ ನನಗನಿಸಿದ್ದಿಲ್ಲ. ಊರ ಜನರೆಲ್ಲ ಸುಖದಿಂದ ಇರಬೇಕೂ ಅಂತ
ಎಷ್ಟು ರೀತೀ ಸಹಾಯ ಮಾಡೀನಿ ಅಂಬೂದು ನಿಮಗೆ ಗೊತ್ತದ. ಇಷ್ಟಾಗೀನೂ
ನನ್ನ ಮ್ಯಾಲೀ ತುಫಾನಿ ಹೊರಸತೀರಲ್ಲ?" ಎಂದು ಬಾಪೂಸಾಹೇಬ ಬೇಡಿಕೊಂಡ.

"ಊರಿಗೆ ಉಪಕಾರ ಮಾಡಿದಾವಾ ಅಂತನ ನೀವು ನಡೆಸಿದ ಚಲ್ಲಾಟಾ
ನೋಡೀನೂ ನಾವು ಸುಮ್ಮಗ ಇದ್ದೇವಿ. ಈಗ ನಿಮ್ಮ ಮ್ಯಾಲೆ ಬಂದ ಆರೋಪ
ಗಂಭೀರಸ್ವರೂಪದ್ದದ. ಈ ಪ್ರಕರಣ ಮುಂದ ಹೋದರ ವಾಡೆಯ ಹೆಸರಿಗೆ
ಕಲಂಕ ಬಂದೀತು ಅಂತ, ಹೋಗದಂತೆ ಮಾಡ್ರಿ ಅಂತ ಗೌಡರಿಗೆ ಹೇಳಿದಿವಿ.
ಅಂತೇ ವಿಚಾರಮಾಡಿ, ಪಾಪಕ್ಕ ಪ್ರಾಯಶ್ಚಿತ್ತ ಅಂತ ದೈವದವರಿಗೆ ದಂಡಾ
ಕೊಟ್ಟು ಮುಗಿಸಿಬಿಡಬೇಕಂದರ ನಮ್ಮ ಮಾತಿಗೆ ನೀವು ಕಿಮ್ಮತ್ತ ಕೊಡಲಿಲ್ಲ.
ಅದಕ ಗೌಡರು ಸಿಟ್ಟಿಗೆದ್ದರು" ಎಂದು ಬಾಳಾಚಾರ್ಯರು ಗಂಭೀರವಾಣಿಯಲ್ಲಿ
ವಿವರಿಸಿದರು.

ಕುಲಕರ್ಣಿ ಶೇಷಪ್ಪನೂ ಆಚಾರ್ಯರ ಅಭಿಪ್ರಾಯವನ್ನೇ ಅನುಮೋದಿಸಿದ.
"ಇಲ್ಲಿ ನೋಡ್ರಿ ಜಾಗೀರದಾರ್ರs. ಊರ ಧಣೇರು ನೀವು. ನಿಮ್ಮ ಮಾನಾ
ಮರ್ಯಾದಿ ಅಂದರ ಊರಿನ ಮಾನಾ ಮರ್ಯಾದಿ ಇದ್ದ್ಹಾಂಗ. ಇದನ್ನೆಲ್ಲಾ
ಲಕ್ಷ್ಯದಾಗ ತಂದುಕೊಂಡನ ನಾವು ಈ ಪ್ರಕರಣ ಇಲ್ಲೇ ಮುಗಿಸಿಬಿಡಬೇಕೂ
ಅಂತ ಹಂಚಿಕಿ ಹಾಕಿದಿವಿ. ಗೌಡರು, ಆಚಾರು, ನಾನು ಇಷ್ಟೊತ್ತನಕಾ ಅದೇ
ವಿಚಾರದಾಗs ಇದ್ದೆವಿ. ವಾಡೇದ ಮ್ಯಾಲಿನ ಅಭಿಮಾನದಿಂದನs ಇಷ್ಟೆಲ್ಲ
ಮಾಡಿದಿವೆಲ್ಲ? ಹಾಂಗ ನೋಡಿದರ ಕಾಯದೇದ ದೃಷ್ಟಿಯಿಂದ ನಾವು
ಮಾಡೂದು ಖೂನಿ ಛಪಾಯಿಸುವ ಗುನ್ಹೇನs ಸರಿ. ಆದರೂ ನಿಮ್ಮ ಮರ್ಯಾದಿ
ಉಳಸಬೇಕಂತ ದೈವದವರು ಗುನ್ಹೆ ತಮ್ಮ ಮೈಮ್ಯಾಲಿ ತಗೋಬೇಕಂತಾರ.
ತಪ್ಪದಂಡ ಕೊಟ್ಟು ಪಾರಾಗರಿಪಾ ಅಂತ ಕೈಯಾಗ ಖಡ್ಡೀ ಕೊಟ್ಟು ಹೇಳಿದಿವಿ.

ನೀವೇನು ಕೇಳೋ ಲಕ್ಷಣ ಕಾಣಲಿಲ್ಲ. ಇನ್ನ ಕಾಯದೇ ಏನ ಹೇಳತದೋ ಅದನ್ನ ಮಾಡತೇವಿ. ನಮಗೇನು, ಸರಕಾರದ ನೌಕರೀನs ಮಾಡತೀವಿ. ಕರ್ತವ್ಯಕ್ಕ ಅಂತಃಕರಣ ಇಲ್ಲ ನೋಡ್ರಿ. ಒಡಹುಟ್ಟಿದ ತಮ್ಮ ಇಂಥಾ ಕೆಲಸಾ ಮಾಡಿದರೂ, ಅವನ ಮ್ಯಾಲೂ ಖಟ್ಲಿ ಮಾಡಬೇಕಾಗತದ. ಉಪಾಯ ಇಲ್ಲ" ಶೇಷಪ್ಪ ತನ್ನ ಒಂದು ಮಾತಿನಿಂದ ಸ್ವಾರ್ಥ ಪರಾರ್ಥಗಳೆರಡನ್ನೂ ಸೂಚಿಸಿದ.

"ತಪ್ಪು ಮಾಡಿದ್ದರ ನೀವು ಹೇಳಿದ್ದಕ್ಕ ಕಬೂಲ ಮಾಡ್ತಿದ್ದೆ ಕುಲ-ಕರ್ಣ್ಯಾರ. ಆದರ ನಾನಾಮಾಮಾ ಸತ್ತದ್ದು ಧಡೇದ ಬ್ಯಾನಿ ಬಂದು. ನಾನs ಅವನ ಖೂನಿ ಮಾಡಿದ್ಹಾಂಗ ನೀವೆಲ್ಲ ನನ್ನ ಮ್ಯಾಲೆ ಮುರಕೊಂಡು ಬಿದ್ದರ ನಾ ಏನು ಹೇಳಬೇಕು?" ಎಂದು ಬಾಪೂಸಾಹೇಬ ತನ್ನ ಮುಖ ಮೇಲಕ್ಕೆತ್ತದೆ ಹೇಳಿದ.

ಶೇಷಪ್ಪ ಪಾದಳ್ಳಿಯಲ್ಲಿಯೇ ಕಾಯದೇ ಪಂಡಿತ. ಇಂಥ ವಾದಗಳ ಉಗಮವೇನೆಂಬುದು ಅವನಿಗೆ ಗೊತ್ತಿತ್ತು. "ಜಾಗೀರದಾರ್ರs, ನೀವು ಹೇಳೂದು ಎಲ್ಲಾ ಖರೇ ಅಂತ ದೈವದವರಿಗೆ ಅನಿಸಿಲ್ಲ. ನಾನಾನ ದುರ್ಮರಣದ ಕಾರಣ ಚಿಮಣಾನ ತೊಡಕು ಅಂತ ಎಲ್ಲಾರಿಗೂ ಅನಿಸೇದ. ಇರಲಿ. ನೀವು ಹೇಳಿದ ಮಾತು ಖರೇ ಮಾಡಲಿಕ್ಕೆ ನೀವು ಎಷ್ಟು ಸಾವಿರ ಖರ್ಚ ಮಾಡಬೇಕಾದೀತು ಅಯಿೂದನ್ನ ವಿಚಾರಮಾಡೀರೇನು? ನಾನಾಽಧಡೇದ ಬ್ಯಾನಿ ಬಂದ ಸತ್ತಾ ಅಂತ ಸಿದ್ಧಮಾಡಬೇಕಾಗತದ. ಹೆಣದ ಮಾರಿ ವಿಷಾ ಹಾಕಿದವರ್ಹಾಂಗ ಹಸರು ಏರೇದ. ನಿರಪರಾಧಿ ಅಂತ ಸಿದ್ಧ ಆಗದಿದ್ದರ ಎಲ್ಲಾ ಗೋವಿಂದಾ. ಅದಕ್ಕಂತs ನಿಮ್ಮನ್ನ ಪೇಚಿನಿಂದ ಉಳಸಲಿಕ್ಕೆ ಈ ವಿಚಾರ ನಾವು ಮಾಡಿದ್ದು" ಎಂದು ವಿವರಿಸಿ ಹೇಳಿದ.

ಮೂಲೆಯಲ್ಲಿ ಕುಳಿತ ಏರೀ ಹಣಮಂತಾಚಾರಿಗೆ ಈ ನಿಷ್ಪ್ರಯೋಜಕ ಮಾತುಗಳಿಂದ ಬೇಸರ ಬಂತು. "ಯಾಕ ಬೆಣ್ಣೀ ಹಚ್ಚತೀರಿ ಬಿಡ್ರ್ಯೋ. ಶೇಕಡಾ ಐದೈದರಂತೆ ಬರೋ ರೊಕ್ಕಕ್ಕ ಇಷ್ಟ್ಯಾಕ ಬಾಯಿ ತಗೀತೀರಿ? ಜಾಗೀರದಾರರೂ ಅಂತ ದಂಡಾ ವಸೂಲ ಮಾಡಿ ಖೂನಿ ಮುಚ್ಚಿಬಿಟ್ಟರೂ ಅಂತ ಊರ ಮಂದಿ ನಾಳೆ ಮಾರೀ ಮ್ಯಾಲ ಉಗಳ್ಯಾರು. ಜಾಗೀರದಾರ ಸಾಹೇಬ, ನೀವೇನು ಕೊಡ ಬ್ಯಾಡ್ರಿ, ಕೊಸಿಬ್ಯಾಡ್ರಿ. ಖುಶಾಲ ಮನಿಗೆ ಹೋಗಿ ಮಲಕೊಂಡುಬಿಡ್ರಿ. ನಮಗೂ ಸ್ನಾನಕ್ಕ ಹೊತ್ತಾಗತದ, ಏಳತೀವಿನ್ನ" ಎಂದು ಗೊಣಗುತ್ತ ಪಂಜೆಯನ್ನು

ಝಾಡಿಸುತ್ತ ಎದ್ದೇ ಬಿಟ್ಟ.

ಅಷ್ಟರಲ್ಲಿ ಗೌಡರು ಚಾವಡಿಯಿಂದ ಗೆಲುವಿನ ನಗೆ ನಗುತ್ತ ಬಂದದ್ದು ನೋಡಿ, ಆ ಮುದುಕನ ಕುತೂಹಲ ಮತ್ತೆ ಕೆರಳಿ ಎದ್ದವನು ಮತ್ತೆ ಕುಳಿತ.

"ಯಾಕ ಹಣಮಂತಾಚಾರಽ, ಮತ್ತ ಕೂತಿರೆಲ್ಲ? ಹೋಗ್ರಿ ಸ್ನಾನಕ್ಕ ಹೊತ್ತಾಗೂದಿಲ್ಲೇನು ? ಮತ್ತ ತಡಾ ಆದರ ಹೊಳಿ ಅಟ್ಟಿಸಿ ಹೋದೀತು!" ಎಂದು ಕುಲಕರ್ಣಿ ಶೇಷಪ್ಪ ನಗೆಯಾಡಿದ.

ಆಚಾರ್ಯರು ಈ ಕೊಂಕನ್ನು ಅರಿತರು. ಅಂತಲೇ ತಾವೂ ನಗುತ್ತ "ನೀವೆಲ್ಲ ಸ್ನಾನಕ್ಕ ಎದ್ದರ, ನಮ್ಮದೂ ಸ್ನಾನದ ಹೊತ್ತಾಗತದೇನಪಾ ಶೇಷಪ್ಪ. ಮತ್ತ ಗೌಡರೂ ಬಂದರು; ಮುಂದೇನಾಗತದೋ ನೋಡಿಕೊಂಡಽ ಎದ್ದರಾತು. ಅತತ್ತ ಸರಿಯುಲಾ" ಎನ್ನುತ್ತ ಕೈಯಲ್ಲಿಯ ಬಡಿಗೆಯಿಂದ ಶೇಷಪ್ಪನ ಬೆನ್ನಿಗೆ ತಿವಿದರು. ಇನ್ನು ಹಣ ಕೈಗೆ ಬರುವದು ಖಂಡಿತ ಎಂಬ ಸಾಂಕೇತಿಕ ಭಾಷೆಯ ದ್ಯೋತಕವಾಗಿತ್ತು ಅದು.

ಗೌಡರು ಬಂದವರು ಒಮ್ಮೆ ಎಲ್ಲರನ್ನೂ ನೋಡಿ, ತಮ್ಮ ಸ್ಥಾನದಲ್ಲಿ ಕುಳಿತುಕೊಂಡರು. "ಇಗಾ ಚಿಮಣಾ ಫಿರ್ಯಾದಿ ಕೊಟ್ಟ್ಯಾಳು. ತನ್ನ ತಂದಿಗೆ ಯಾರೋ ವಿಷಾ ಹಾಕ್ಯಾರಂತ ಸಂಶೇ ಬಂದೈತಂತ ಹೇಳಿ ಬಟ್ಟ ಒತ್ತ್ಯಾಳ. ಯಾರ ಮ್ಯಾಲೆ ಸಂಶೇ ಬಂದೈತೀ ಅಂತ ಕೇಳಿದರ, ಅವರ ಹೆಸರು ಪೋಲೀಸರ ಮುಂದಽ ಹೇಳತೇನಿ ಅಂತ ಹೇಳ್ಯಾಳು. ಈಗ ರೀತಿಪ್ರಕಾರ ಪಂಚನಾಮೆ ಮಾಡ ಬೇಕಾಗತೇತಿ. ಅದಕ್ಕ ದೈವದವರೆಲ್ಲ ಚಾವಡಿಗೆ ಬರಬೇಕು" ಎಂದು ದರ್ಪದಿಂದ ನುಡಿದರು.

ಬಾಪೂಸಾಹೇಬನ ಅಂಗಾಂಗಗಳೆಲ್ಲ ಬೆವರಿದವು. ಚಳಿ ಬಂದವರಂತೆ ನಡುಗಲಾರಂಭಿಸಿದ. ಕುಳಿತಲ್ಲಿ ಕೂಡುವದೂ ಅವನಿಗೆ ಅಸಾಧ್ಯವೆನಿಸಿ, ಅವನು ಬಾಳಾಚಾರ್ಯರ ಕಾಲಿಗೆ ಬಿದ್ದು "ಆಚಾರಸ್ವಾಮಿ, ನನ್ನ ಮಾನಾ ಕಳೀಬ್ಯಾಡ್ರಿ. ಈ ಪ್ರಕರಣ ಇಲ್ಲಿಗೇ ಮುಗಿಯೂ ಹಂಗ ಮಾಡ್ರಿ. ನೀವು ಹೇಳಿದ ದಂಡ ಕೊಡ ಲಿಕ್ಕೆ ನಾ ತಯಾರಿದ್ದೇನಿ" ಎಂದು ದೈನ್ಯದಿಂದ ಬೇಡಿಕೊಂಡ.

"ಅದೆಲ್ಲಾ ಆಗಾಣಿಲ್ಲ. ಫಿರ್ಯಾದಿ ಕೈ ಸೇರೇತಿ ಅಂದ ಮ್ಯಾಲೆ, ಪಂಚ ನಾಮೆ ಆಗಾಕಬೇಕು. ಹೆಣಾ ದವಾಖಾನಿ ಕಾಣಸದಿದ್ದರ, ಇದ್ದ ಫಿರ್ಯಾದಿ ಹರದು ಹಾಕಿ ನಾ ಜೇಲ ಕಾಣಬೇಕಾದೀತು. ಯಾರು ಹೇಳಿದರೂ ನಾ ಏನು

ಈಗ ಕೇಳಾಂವ ಅಲ್ಲ" ಎಂದು ಆರ್ಭಟಿಸುತ್ತ ಗೌಡರು ಗುಡಿಯ ತುಂಬ ಹಾಸು ಹೊಯ್ಯತೊಡಗಿದರು.

ಬಾಳಾಚಾರ್ಯರು ನಡುವೆ ಬಾಯಿ ಹಾಕದೆ ನಿರ್ವಾಹವಿರಲಿಲ್ಲ. "ಗೌಡ್ರs ಸಲ್ಪ ಕೂತು ಸಮಾಧಾನ ಮಾಡಿಕೊಳ್ರಿ. ಇದು ಊರ ಮಾನದ ಪ್ರಶ್ನಿ. ಜಾಗಿರ-ದಾರರು ಅಂದರ ಊರ ಧೊರೀ ಇದ್ದಾಂಗ. ಅವರ ಮಾನಾ ಕಳದರ ಊರ ಮಾನಾ ಕಳದ್ಹಾಂಗ. ಅದಕ್ಕ ಈ ಪ್ರಕರಣ ಇಲ್ಲೇ ಮುಗಿಸಿಬಿಡೂದು ಒಳ್ಳೇದು. ಬಾಪೂಸಾಹೇಬ್ರ, ಈ ಮೊದಲೇ ಹೇಳಿತ್ತಲ್ಲ; ಹೋಗಿ ಒಂದು ಸಾವಿರ ರೂಪಾಯಿ ತಂದುಗೌಡರಿಗೆ ಮುಟ್ಟಿಸರಿ."ಎಂದು ಸಮಾಧಾನಮಾಡುವ ಪ್ರಯತ್ನ ಮಾಡಿದರು.

"ಆಚಾರೆಪ್ಪ, ನೀ ಹೇಳೋದು ದೈವದವರಿಗೆ ಕೊಡೂ ದಂಡ. ಈಗ ಫಿರ್ಯಾದಿ ಕೈಯಾಗ ಬಂದ್ಯತಿ.ಅದನ್ನ ಹರದ ಹಾಕಿ ಹೆಣಾ ದಫನ ಮಾಡಲಾಕ ಪರವಾನಕಿ ಕೊಟ್ಟರ ಪೋಲೀಸರಿಗೆ ನಾ ತೆತ್ತಬೇಕಾಗತ್ತೈತಿ ದಂಡಾ. ಅದಕ್ಕೊಂದು ಸಾವಿರಾ ಕೊಡು ಅನ್ನರಿ.ಅಂದ್ರ ಏನರ ಮಾಡಾಕ ನಮಗೂ ಧೈರ್ಯಾ ಬಂದೀತು. ಹಿರ್‍ಯಾರದೀರಿ, ಗೌಡನ್ನ ಪೇಚಿಗೆ ಹಾಕಬ್ಯಾಡ್ರಿ" ಗೌಡರ ದನಿಯಲ್ಲಿ ವಿಜಯದ ಉತ್ಸಾಹವಿತ್ತು.

"ಆಗಲಿ ಹಂಗs ಆಗಲಿ. ಜಾಗೀರದಾರರು ಮೊದಲs ನಮ್ಮ ಮಾತಿಗೆ ಒಪ್ಪಿದ್ರ ಈ ಪ್ರಸಂಗ ಬರತಿದ್ದಿಲ್ಲ. ಹೋಗ್ರಿ ಬಾಪೂಸಾಹೇಬ, ಗೌಡರಿಗೆ ಪ್ರತ್ಯೇಕ ಐನೂರು ರೂಪಾಯಿ ತಂದು ಕೊಡ್ರಿ" ಬಾಳಾಚಾರ್ಯರು ಮತ್ತೆ ದನಿಗೂಡಿಸಿದರು.

ನಿರುಪಾಯನಾಗಿ ಬಾಪುಸಾಹೇಬ ಹಣದ ವ್ಯವಸ್ಥೆಮಾಡಲು ಹೊರಟು ಹೋದನು.

"ಆಚಾರs ಪ್ರತ್ಯೇಕ ಗೌಡರಿಗೇ ಅಂತ ಹೇಳಿದಿರಿ. ಮತ್ತ ಕುಲಕರ್ಣಿ ಗೇನು ಸಿಕ್ಕಾಂಗಾತು ಗೊರಟ ?" ಶೇಷಪ್ಪ ಕೊಂಕು ಮಾತಾಡಿದ.

"ಆತಪಾ, ಅದರರ್ಧ ನಿನಗೂ ಕೊಡಂತ ಹೇಳತೀನಿ ಆತಿಲ್ಲೋ?" ಬಾಳಾ ಚಾರ್ಯರ ದನಿ ಬೇಸರಕ್ಕೆ ತಿರುಗಿತು.

"ಒಳೇ ನ್ಯಾಯಾ ತಗದಿರೆಲ್ಲ ಆಚಾರs? ಗೌಡರಿಗೆ ಎಷ್ಟು ಬರತದ, ಅಷ್ಟs ನಮಗೂ ಬರೂದು ಮಾಮೂಲು. ರಿವಾಜು ತಪ್ಪಸಬ್ಯಾಡ್ರಿ. ಇದೆಲ್ಲೀ ಹೊಸ ಪದ್ಧತಿ ತಗದಿರಿ ಮತ್ತ?" ಶೇಷಪ್ಪ ಜಗಳ ಹೂಡಿದ.

"ಶೇಷಪ್ಪ, ಇದರಾಗ ಏನೂ ಅನ್ಯಾಯ ಆಗಿಲ್ಲ. ಸಾವಿರದಾಗ ಗೌಡಗ

ಐದನೂರು, ಅದರರ್ಧ ನಿನಗ; ಉಳಿದ ಎರಡೂವರಿನೂರು ದೈವದವರಿಗೆ ಹಂಚ ಬೇಕಾಗತದ. ಇದು ತಲೆತಲಾಂತರದಿಂದ ನಡದು ಬಂದ ರೂಢಿ. ಇನ್ನೇನಪಾ, ಪೋಲೀಸರಿಗೆ ಕೊಡೂದು ಅಂತ, ಗೌಡರಿಗೆ ಐನೂರು ರೂಪಾಯಿ ಹೆಚ್ಚಿಗಿ ಕೊಡಸಿದ್ದು ಖರೆ. ನಿನಗ ಪ್ರತ್ಯೇಕ ಎರಡೂವರಿ ನೂರು ಕೊಡಸಿದರ ಗೌಡನಷ್ಟೇ ಆಯಿತಲ್ಲ?" ಎಂದು ಬಾಳಾಚಾರ್ಯರು ಬುದ್ಧಿ ಹೇಳಿದರು.

ಅಷ್ಟರಲ್ಲಿ ಹಣಮಂತಾಚಾರ್ಯರು "ಅಲ್ಲೋ ಬಾಳೂ, ಒಟ್ಟು ರೊಕ್ಕದಾಗ ಗೌಡಗ ಅರ್ಧ, ಅದರರ್ಧ ಕುಲಕರ್ಣಿ ತೊಗೋಬೇಕು. ಉಳಿದದ್ದ ದಶಾಂಶ ನಮ್ಮಲ್ಲಿ ಒಬ್ಬೊಬ್ಬರಿಗೆ ಸಿಗಬೇಕು. ನೀ ಇಪ್ಪತ್ತೈದರ ಮ್ಯಾಲೆ ಮುಗಿಸಿಬಿಡತೀಯಲ್ಲಾ?" ಎಂದು ಬಚ್ಚಬಾಯಿಂದ ಗುರುಗುಟ್ಟಿದರು.

"ಹಣಮೂಕಾಕಾ, ನಾವೂ ನೀವು ವೈದಿಕಬ್ರಾಹ್ಮಣರು. ಇಂಥಾದರಾಗ ಬಾಯಿ ಹಾಕಬಾರದು. ಲಂಚದ ವ್ಯವಹಾರ ನಮ್ಮದಲ್ಲ. ಅದು ಗೌಡರಿಗೆ ಕುಲಕರ್ಣಿಗೆ ನಡೆದುಬಂದ ಹಕ್ಕು. ನೀ ಹಾಂಗ ನ್ಯಾಯಾ ತಗದರ, ಇಕಾ ನನ್ನ ಪಾಲಿಂದು ಬಿಟ್ಟುಬಿಡತೇನಿ ಆತs?" ಎಂದರು ಬಾಳಾಚಾರ್ಯರು.

ಹಣಮಂತಾಚಾರ್ಯರಿಗೆ ಸಿಟ್ಟು ಬಂತು. "ಮುರ್ಖನ್ನ ತಂದಕಾದ, ಇದರಾಗ ಹಕ್ಕಿನ ಪ್ರಶ್ನಿ ಎಲ್ಲಿ ಬರತದ? ಇದು ಹಗಲದರೋಡೆ. ಆ ಜಾಗೀರದಾರ ದಾರಿ ಬಡಿಸಿ ತಂದ ಹಣಾ ಅದು. ಅದನ್ನ ನೀನು ಮತ್ತೆ ಯಾರ ಉಡ್ಯಾಗೋ ತುಂಬ ಲಿಕ್ಕೆ ಹೊಂಟೇದಿ ಆತು." ಎಂದು ಒಟಗುಟ್ಟಿದರು.

"ನಮ್ಮ ಈ ಬಡಿದಾಟದಾಗ ಬಾಪೂಸಾಹೇಬ ಮೆತ್ತಗಾದ ತೀರ್‍ಯ್ಯ. ಏನು ಮಾಡತೀರ್‍ಯೋ ಮಾಡೀಕೋಳ್ರಿ. ಈ ವ್ಯವಹಾರದಾಗ ನಾ ಕೈನೇ ಹಾಕೂದುಲ್ಲ. ಗೌಡ್ರು, ತೊಗೊಳ್ಳೋದು ತೊಗೊಂಡು ಈ ಪ್ರಕರಣ ಅಷ್ಟು ಇಲ್ಲಿಗೇ ಮುಗಿಸಿ ಬಿಡ್ರಿ. ಶೀನೂ, ನೀ ಮತ್ತೇನಾರ ಕಿತಾಪತಿ ತಗದು ಊರ ಮಾನಾ ಕಳೀ ಬ್ಯಾಡ. ನಡಿ, ಹಣಮೂಕಾಕಾ, ಸ್ನಾನಕ್ಕ ಆಗಳೇನs ಎದ್ದಿದ್ದೆಲ್ಲ" ಎಂದು ನಶ್ಯ ಏರಿಸಿ ಬಾಳಾಚಾರ್ಯರು ಎದ್ದರು. ಅವರ ದನಿಯಲ್ಲಿ ಎಲ್ಲಿಲ್ಲದ ಅನಾಸಕ್ತಿ ಬಂದಿತ್ತು. ಹಿಂದಕ್ಕೆ ಎಷ್ಟೋ ಪ್ರಕರಣಗಳಲ್ಲಿ ಅವರೂ ಲಂಚ ತಿಂದವರೇ. ಆದರೆ ಇಂದೇಕೋ ಅವರ ಮನಸ್ಸು ಬೇಸರಗೊಂಡಿತ್ತು. ಮೊದಲಿನಿಂದಲೂ ಹಟಮಾರಿಯಾದ ಮನಸ್ಸು; ಹಿಂದಕ್ಕೆ ಲೌಕಿಕದಲ್ಲಿಯೂ ಅದೇ ಹಟದಿಂದ ತಮ್ಮ ಸಾಮರ್ಥ್ಯ ತೋರಿದ್ದರು. ತಮ್ಮ ವ್ಯಕ್ತಿತ್ವದ ಪ್ರಭಾವದಿಂದ ಊರಗೌಡ-ಕುಲಕರ್ಣಿಯರನ್ನೆಲ್ಲ

ಅಂಗೈತಳದಲ್ಲಿ ಕುಣಿಸಿದ್ದರು. ಆದರೆ ಇಂದಿನ ಪ್ರಕರಣದಲ್ಲಿ ಯಾವುದೋ ಒಂದಂಶ ಅವರಿಗೆ ಬೇಸರ ಹುಟ್ಟಿಸಿತ್ತು; ತಾನು ಮಾಡುತ್ತಿರುವದೆಲ್ಲ ಅನ್ಯಾಯ ಎಂದು ತೋಚಿತ್ತು. ಅಂತೆಯೇ ಮನಸ್ಸು ಒಮ್ಮೆಲೇ ವೈರಾಗ್ಯದ ಕಡೆಗೆ ತಿರುಗಿತ್ತು. ಒಮ್ಮೆ ಮುಖ ತಿರುಗಿಸಿದರೆ ಸಾಕು. ತಿರುಗಿ ಆ ಕಡೆಗೆ ನೋಡಲಾರೆ ಎಂಬ ಹಟ ಅವರಲ್ಲಿತ್ತು. ನಾನಾನ ಮರಣದ ದುಃಖವೂ ಅದಕ್ಕೆ ಕಾರಣವಾಗಿರಬಹುದು.

ಮಧ್ಯಾಹ್ನವಾಗಿದ್ದರೂ ಮಾಗಿಯ ಬಿಸಿಲು ಬೆಳುದಿಂಗಳಂತೆ ಎನಿಸುತ್ತಿತ್ತು. ಉತ್ತರ ದಿಕ್ಕಿನಿಂದ ಬೀಸುವ ಗಾಳಿಗೆ ನಡಗು ಹುಟ್ಟಿ, ಇನ್ನೂ ಬಿಸಿಲು ಬೇಕೆನ್ನಿಸುತ್ತಿತ್ತು. ನದಿಯ ದಂಡೆಯ ಮೇಲೆ ಧಗಧಗ ಉರಿಯುತ್ತಿದ್ದ ನಾನಾನ ಚಿತೆಯ ಕಾವು ಈ ಚಳಿಯನ್ನು ಓಡಿಸಲು ಹಿತಕರವೆನಿಸಿದರೆ ಆಶ್ಚರ್ಯವೇನಿಲ್ಲ.

:: ೪ ::

ನಾನಾನ ಹೆಣ ನದಿ ದಂಡೆಯಲ್ಲಿ ಸುಟ್ಟು ಎಂದೋ ಬೂದಿಯಾಯಿತು. ಊರ ಹಿರಿಯರ ಸಲಹೆಯಂತೆ ಗೌಡರು ಮರಣ-ರಜಿಸ್ಟರದಲ್ಲಿ, ನಾನಾ ಹೃದಯವಿಕಾರದಿಂದ ಮರಣ ಹೊಂದಿದನೆಂದು ಶರಾ ಬರೆದು ಸರಕಾರಿ ಅಧಿಕಾರಿಗಳ ದೃಷ್ಟಿ ಈ ಪ್ರಕರಣದ ಮೇಲೆ ಬೀಳದಂತೆ ತೆರೆಯೆಳೆದರು. ಈ ಪ್ರಕರಣ ಇಷ್ಟಕ್ಕೇ ಮುಗಿದು ಹೋಯಿತೆಂದು ಊರ ಹಿರಿಯರೆಲ್ಲ ಭಾವಿಸಿದರು. ಬಾಪೂಸಾಹೇಬನೂ ಹಾಗೆ ಭಾವಿಸಿ ಹದಿನೈದು ನೂರು ರೂಪಾಯಿಗಳನ್ನು ಗೌಡರಿಗೆ ಮುಟ್ಟಿಸಿದನು.

ಪಾದಳ್ಳಿಯ ಊರ ಹಿರಿಯರು ಈ ಮೊದಲು ಇಂಥ ಅನೇಕ ದುರ್ಮರಣಗಳನ್ನು ಪಂಚನಾಮೆ ಇಲ್ಲದೆ ಮಣ್ಣು ಮುಚ್ಚಿ ದಕ್ಕಿಸಿಕೊಂಡಿದ್ದರು. ಆದರೆ ಹಿಂದಿನ ಎಲ್ಲ ದುರ್ಮರಣಗಳಲ್ಲಿಲ್ಲದ ಒಂದು ದೊಡ್ಡ ಸಮಸ್ಯೆ ಈ ಸಂದರ್ಭದಲ್ಲಿ, ಎಲ್ಲವನ್ನೂ ಬೈಲಿಗೆಳೆಯುವ ಭೀತಿಗೆ ಎಡೆ ಮಾಡಿಕೊಟ್ಟಿತು. ಬಾಪೂಸಾಹೇಬ ಕೊಟ್ಟ ಹಣದಲ್ಲಿ ಗೌಡನಿಗೆ ಒಂದು ಸಾವಿರ, ಕುಲಕರ್ಣಿಗೆ ಎರಡೂವರೆ ನೂರು ಹೀಗೆ ಹಂಚಿ ಹೋದದ್ದರಿಂದ, ಶೇಷಪ್ಪ ಅಸಮಾಧಾನಗೊಂಡು ಗೌಡರು ತಿಂದ ಹಣವನ್ನು ತಿರುಗಿ ಕಕ್ಕಿಸುವ ವಿಚಾರದಲ್ಲಿದ್ದ. ತನಗೆ ಬರಬೇಕಾದ ಹಣವನ್ನು ಪಡೆಯಲು

ಬಾಳಾಚಾರ್ಯರಿಮರು ಅವನು ಕೊನೆಯ ಪ್ರಯತ್ನವನ್ನೇನೋ ಮಾಡಿದ. ಆದರೆ ಅದು ಸಫಲವಾಗಲಿಲ್ಲ. ಆಚಾರ್ಯರಿಗೆ ಈ ಪ್ರಕರಣವೇ ಮೊದಲು ಹೇಸಿಗೆ ಹುಟ್ಟಿ ಸಿತ್ತು. ಅವರಲ್ಲಿ ಶೇಷಪ್ಪನ ಲೋಭ ಹಟಮಾರಿತನಗಳನ್ನು ನೋಡಿಯಂತೂ ಅವರ ಮನಸ್ಸು ಇನ್ನೂ ಕಲ್ಲಾಗಿತ್ತು.

ಶೇಷಪ್ಪನ ವಿಚಾರ ಈಗ ಬಾಪೂಸಾಹೇಬನ ಕಡೆಗೆ ತಿರುಗಿತು. ಅಪ ಮಾನದಿಂದ ಹಣ್ಣಾದ ಅವನ ಮನಸ್ಸು ಸೇಡಿನ ಭಾವನೆಗೆ ಹದವಾಗಿತ್ತು. ಶೇಷಪ್ಪ ಅದರ ಲಾಭವನ್ನು ಪಡೆಯದೆ ಇರಲಿಲ್ಲ. ಆದ ಅಪಮಾನದ ಸೇಡನ್ನು ತೀರಿಸಿ ಕೊಳ್ಳಲೇಬೇಕೆಂದು ಹಟ ಹಿಡಿದ. ಆದರೆ ಬಾಪೂಸಾಹೇಬನಿಗೆ ಮಾರ್ಗ ಹೊಳೆ ದಿರಲಿಲ್ಲ. ಬಹಳ ಹೊತ್ತು ವಿಚಾರಮಾಡಿ ಇಬ್ಬರೂ ಒಂದು ನಿರ್ಣಯಕ್ಕೆ ಬಂದರು. ಅನಾವೃಷ್ಟಿಯಿಂದ ಜನರು ಕಂಗಾಲಾದುದರ ಪ್ರಯೋಜನ ಪಡೆದು ಕೊಂಡು, ಗೌಡರಿಂದ ಕಾಳು ಕೇಳಲು ಜನರನ್ನು ಪ್ರೇರೇಪಿಸಬೇಕು. ಇಲ್ಲದಿದ್ದರೆ ಗೌಡರು ಬಾಪೂಸಾಹೇಬನಿಂದ ಪಡೆದುಕೊಂಡ ಹಣವನ್ನು ಬರಗಾಲದ ಸಹಾಯ ಕ್ಕಾಗಿ ಕೊಡಬೇಕು. ಬಾಪೂಸಾಹೇಬ ಶೇಷಪ್ಪನ ತಂತ್ರಕ್ಕೆ ತಲೆದೂಗಿದ. ಇದೇ ಹೊತ್ತಿಗೆ ಊರು ಬಿಟ್ಟು ಹೋಗಿದ್ದ ಪಡದಯ್ಯನವರೂ ತಿರುಗಿ ಬಂದು ಈ ತಂತ್ರಕ್ಕೆ ಸೇರಿಕೊಂಡರು. ಗೌಡರು ಒಪ್ಪದಿದ್ದರೆ ಜನರಿಂದ ಬಂಡು ಹೂಡಿಸ ಬೇಕು. ಹಗೆ ತೆಗೆಸಿ ಕಾಳು ಕೊಡಲು ಗೌಡರನ್ನು ಒತ್ತಾಯಪಡಿಸಬೇಕು. ಮೂವರೂ ಇವೇ ಯೋಚನೆಗಳಲ್ಲಿಯೇ ದಂಗಾದರು.

ರಾತ್ರಿ ಮಠದಲ್ಲಿ ಸಭೆ ಸೇರಿತ್ತು. ಪಡದಯ್ಯನವರ ಅಧ್ಯಕ್ಷತೆಯಲ್ಲಿ ರೈತರ ನ್ನೆಲ್ಲ ಕರೆಸಲಾಗಿತ್ತು. ಕಾಳಿದ್ದ ರೈತರ ಹಗೆ ತೆಗೆಸಿ ಉಪವಾಸ ಬಿದ್ದ ಜನರಿಗೆ ಕಾಳು ಹಂಚುವ ಬಗ್ಗೆ ದೈವದವರನ್ನು ಒತ್ತಾಯಪಡಿಸಬೇಕೆಂದು ಬಾಪೂಸಾಹೇಬ ಹೇಳಿದ. ಪಡದಯ್ಯನವರೂ ತಮ್ಮ ಬೆಂಬಲವನ್ನು ಹಾರ್ದಿಕವಾಗಿ ಸೂಚಿಸಿದರು. ಜನರ ತಲೆ ತಿರುಗಿದಂತಾಯಿತು.

ಅಮಾವಾಸ್ಯೆಯ ಮರುದಿನ ಗೌಡರು ಹಾಸಿಗೆಯಿಂದೇಳುವ ಮೊದಲೇ ಬಡ ಜನರು ಗುಂಪುಗುಂಪಾಗಿ ಅವರ ಮನೆಯ ಬಾಗಿಲಿನಲ್ಲಿದ್ದರು. ಗೌಡರು ಹೊರಗೆ ಬಂದು ನೋಡಿದರು; ಗುಂಪಿನ ಸ್ಥಿತಿ ನಿಜವಾಗಿಯೂ ಶೋಚನೀಯ ವಾಗಿತ್ತು. ಮುಂದೆ ನಿಂತಿದ್ದವನೊಬ್ಬ "ನಿನ್ನಿನ ದಿನಾ ಊರಾಗ ಹೇಗಾ ಇಟ್ಟಿ ಗೊಂಡ ಕುಂತಾಗ ನಾವು ಬರಬಾರದಂತ ಬಿಟ್ಟೇವರಿ ಎಪ್ಪಾ. ಅಮಾಸಿಯಂಥಾ

ಅಮಾಸಿ; ಬಾಯಾಗ ತುಣುಕ ರೊಟ್ಟಿ ಹಾಕಿಲ್ಲ. ಕಾಳ ಕೊಡಾಕ ಬೇಕು"
ಎಂದು ಹಟ ಹಿಡಿದ. ಆ ಆಕ್ರೋಶ, ಹಟಮಾರಿತನ, ಕ್ರೋಧ ಇವುಗಳ ಹಿಂದೆ ಕಲ್ಲೆದೆಯನ್ನು ಕರಗಿಸುವ ಕರುಣೆ ಮಿಡಿಯುತ್ತಿತ್ತು.

ಗೌಡರು ಸಮಾಧಾನ ಹೇಳಿದರು. ಪಾದಳ್ಳಿಯ ಗೋಳು ಅವರ ಎದೆಯನ್ನೇ ಕಲಕಿತ್ತು. ಮಧ್ಯಾಹ್ನದೊಳಗೆ ಕಾಳು ಹಂಚುವ ವ್ಯವಸ್ಥೆಮಾಡುವದಾಗಿ ಆಶ್ವಾಸನವಿತ್ತು ಜನರನ್ನೆಲ್ಲ ಮನೆಗೆ ಕಳಿಸಿದರು.

ಜನರೆಲ್ಲ ಮನೆಗೆ ಹೋದೊಡನೆ ಗೌಡರು ದೈವದವರ ಸಭೆಯನ್ನು ತಮ್ಮ ಮನೆಯಲ್ಲಿಯೇ ಕರೆದರು. ಗೌಡರ ಪಡಸಾಲೆಯ ತುಂಬ ಜನ ನೆರೆದಿತ್ತು. ಊರ ಹಿರಿಯರಿಗೆಂದು ಹಾಸಿದ ಕಂಬಳಿಯ ಮೇಲೆ, ಬಾಳಾಚಾರ್ಯರು, ಹಣಮಂತಾ-ಚಾರ್ಯರು, ಶೇಷಪ್ಪ ಇವರ ಜೊತೆಗೆ ಗೌಡರೂ ಕುಳಿತಿದ್ದರು. ಬಾಪೂಸಾಹೇಬನನ್ನು ಕರೆಕಳಿಸಿದ್ದರೂ ಅವನು ಬಂದಿರಲಿಲ್ಲ.

ಬಡವರಿಗಾಗಿ ಕಾಳು ಕೊಡಿಸುವ ಪ್ರಶ್ನೆ ಎದ್ದಿತು. ಆದರೆ ಊರ ಹಿರಿಯರ ಒಡಕಿನಿಂದಲೇ ಸಭೆ ಪ್ರಾರಂಭವಾಯಿತು. ಪ್ರಶ್ನೆಗೆ ತಲೆಗೊಂದರಂತೆ ಉತ್ತರ ಬಂದಿತೇ ಹೊರತು ಮತ್ತೇನೂ ಆಗಲಿಲ್ಲ. "ಜಾಗೀರದಾರರಿಂದ ಅಧಿಕಾರಿಗಳಿಗೆ ಕೊಡಲಿಕ್ಕೆ ಅಂತ ಇಸಗೊಂಡ ರೊಕ್ಕಾ ಈಗ ಗೌಡರು ಖರ್ಚು ಮಾಡಲಿಕ್ಕೆಬೇಕು. ದುರ್ಮರಣದ ಪ್ರಕರಣದ ತಪಾಸಣಿಗೆ ಇನ್ನ್ಯಾರೂ ಬರೂದಿಲ್ಲ. ಅಂದಮ್ಯಾಲೆ ಗೌಡರ ಹತ್ತರ ಆ ಹಣಾ ಯಾಕ ಇರಬೇಕು?" ಶೇಷಪ್ಪ ಜೋರಾಗಿ ವಾದಿಸಿದ.

ಗೌಡರದು ಅಡಕ್ಕೊಂದೇ ಉತ್ತರ. "ಆ ದುಡ್ಡಿನ ಮಾತು ಎತ್ತಬ್ಯಾಡ್ರಿ. ಮ್ಯಾಗಿನ ಅಮಲದಾರರು ಬಂದು ಕೇಳಿದಾಗ ಅವರ ಉಡಿ ತುಂಬಲಿಕ್ಕೆ ಅಂತ ಕಾವು ಇಟ್ಟದ್ದು ಅದು" ಗೌಡರೂ ಹಟದಿಂದಲೇ ಆರ್ಭಟಿಸಿದರು.

"ಊರ ದೈವದವರ ಮಾತಿಗೆ ಮರ್ಯಾದಿ ಕೊಟ್ಟು ಗೌಡರು ಎಂಥಾ ಜವಾಬ್ದಾರಿಹೊತ್ತಾರ! ಆ ದುಡ್ಡಿನ ಉಪಯೋಗ ಪ್ರಸಂಗ ಬಂದಾಗ ಆಗಬೇಕಾದದ್ದೇ ಯೋಗ್ಯ." ಬಾಳಾಚಾರ್ಯರೂ ಗೌಡರ ವಾದವನ್ನೇ ಸಮರ್ಥಿಸಿದರು.

ಶೇಷಪ್ಪ ಸಿಡಿದೆದ್ದ. "ಅಲ್ರೀ ಆಚಾರ. ನೀವು ಬಾಯಿ ಹಾಕಿದ್ದರಿಂದ ನಾ ಸುಮ್ಮನಾದೆ. ನನಗ ಪ್ರತ್ಯೇಕ ದುಡ್ಡು ಕೊಡಸತೀನಿ ಅಂತ ಹೇಳಿದ್ದಿರೋ ಇಲ್ಲೋ? ಆ ಮಾತು ಅಲ್ಲಿಗೇ ಮುಗೀತೇನು?" ಎಂದು ಕೇಳಿಯೇಬಿಟ್ಟ.

"ನೋಡು ಶೇಷಪ್ಪ, ಊರಗಾರಕಿ ವ್ಯವಹಾರದೊಳಗ ಹಾಂಗೆಲ್ಲಾ ಅಂತೀ

ಕಟ್ಟೆ, ಕೆಲಸ ಸಾಗೂದುಲ್ಲ. ನಾ ಕೊಡಸತೀನಿ ಅಂತ ಹೇಳಿದಾಗ ಬಾಪೂಸಾಹೇಬ ಅಲ್ಲಿದ್ದಿಲ್ಲ. ಈಗ ಅದೊಂದೂ ತನಗ ಗೊತ್ತಿಲ್ಲ ಅಂತ ಹೇಳತಾನ. ಏನ ನನ್ನ ಕೈಯಿಂದ ಕೊಡೂ ಅಂತೀಯಾ?" ಎಂದು ಬಾಳಾಚಾರ್ಯರು ಇದ್ದ ಸ್ಥಿತಿಯನ್ನು ವಿವರಿಸಲೇ ಬೇಕಾಯಿತು.

"ವ್ಯವಹಾರಾ ನಿಸ್ತರಸೂ ಯೋಗ್ಯತಾ ಇಲ್ಲದವರು ನಡುವ ಬಾಯಿ ಹಾಕ ಬಾರದಿತ್ತು" ಎಂದು ಶೇಷಪ್ಪ ಒಟಗುಟ್ಟುತ್ತಲೇ ಬಾಣ ಬಿಟ್ಟ.

ಪರಿಸ್ಥಿತಿ ವಿಕೋಪಕ್ಕೆ ಹೋಗದಂತೆ ನೋಡಿಕೊಳ್ಳುವದು ಗೌಡರ ಕರ್ತವ್ಯ ನಾಗಿತ್ತು. "ಅವರ ಮಾತ ತಂಗೊಂಡೇನ ಮಾಡ್ತೀರಿ ಆಚಾರೆಪ್ಪ? ಬಡ ಜನರ ಹೊಟ್ಟೆಗೆ ಕಾಳ ಕೊಡಸಲಾಕ ಏನ ಹಾದಿ ಹೇಳ್ತೀರಿ ಹೇಳ್ರಿ?" ಎಂದು ಹೇಳಿ ವಿವಾದವನ್ನು ಒಳ್ಳೆಯ ಹಾದಿಯಲ್ಲಿ ತರಲು ಪ್ರಯತ್ನಿಸಿದರು.

"ಅವರು ಅನ್ನೋದೇನು ಗೊತ್ತsa ಅದ. 'ಊರಾಗ ಹಗೇ ಇದ್ದವರ ದೊಂದು ಯಾದಿ ಮಾಡ್ರಿ. ಅವನ್ನೆಲ್ಲ ತೆಗಿಸಿ ಕಾಳ ಹಂಚಿಬಿಡ್ರಿ.' ಅಂತ ಹೇಳಿ ಪಾರಾಗತಾರ. ಊರ ಸುಟ್ಟರೂ ಹಣಮಪ್ಪ ಹೊರಗ ಅಲ್ಲ!" ಶೇಷಪ್ಪನ ಹೇಡಿ ಸಿಟ್ಟು ತಡೆಯಲಾರದ ಇಂಥ ಮಾತುಗಳನ್ನಾಡಿಸಿತು.

ಬಾಳಾಚಾರ್ಯರು ಏನೂ ಉತ್ತರ ಹೇಳಲಿಲ್ಲ. ಆದರೆ ಹಗೆ ತೆಗೆಸಿ ಕಾಳು ಹಂಚದೆ ಗತಿಯೇ ಉಳಿದಿಲ್ಲವೆಂದು ಗೌಡರೇ ಅವರ ಪರವಾಗಿ ಹೇಳಿಬಿಟ್ಟರು. ಇಷ್ಟೊತ್ತಿನ ವರೆಗೆ ಸುಮ್ಮನೆ ಕುಳಿತಿದ್ದ ಹಣಮಂತಾಚಾರಿಗೆ ಏನು ಸ್ಫೂರ್ತಿ ಉಕ್ಕಿ ಬಂದಿತ್ತೋ, ಬಚ್ಚಬಾಯಿ ತೆಗೆದು "ಏನ್ರೋ್ಯ ಊರ ಬದಕಸಲಿಕ್ಕೆ ಪರ-ಮಾತ್ಮನ ತುಣುಕು ಅಂತ ತಿಳಿದೀರೇನು? ಬಡವರ ಸಲುವಾಗಿ ಕಳಕಳೀ ಇದ್ದರು ಬಾಪೂಸಾಹೇಬನಿಂದ ತೊಗೊಂಡ ರೊಕ್ಕಾ ಒಗೀರಿ; ಕಾಳು ಕೊಡಸರಿ" ಎಂದು ಹೇಳಿಯೇಬಿಟ್ಟ.

ಶೇಷಪ್ಪನಿಗೆ ಈ ಮಾತಿನಿಂದ ಬೆಂಬಲ ದೊರೆತಂತಾಗಿ ಅವನು ಹಲ್ಲು ಕಿರಿದು ನಗಹತ್ತಿದ. "ನನ್ನ ಪಾಲಿಗೆ ಬಂದ ಎರಡೂವರಿನೂರು ಕೊಟ್ಟುಬಿಡತೇನಿ ನಾನು, ಆತಿರ್ಲ್ಲೋ?" ಎಂದು ಚೇಷ್ಟೆಯನ್ನೂ ಮಾಡಿದ.

ಗೌಡರಿಗೆ ಸಿಟ್ಟು ತಡೆಯದಾಯಿತು. "ಬರಬೇಕಾದದ್ದು ಬರಲಾರದ್ದು ಕೊಟ್ಟು ಉಪಕಾರದ ಸೋಂಗು ಮಾಡಿದರ ನಡ್ಯಾಕಿಲ್ಲ. ನಿನ್ನೆ ಝುಣಾಝುಣಾ ಎಣಿಸಿ ತೊಗೊಂಡ ರೊಕ್ಕಾ ಒಗೀರಿ. ನಾನೂ ನನ್ನ ಪಾಲಿಗೆ ಬಂದ ಐನೂರು

ರೂಪಾಯಿ ಚಲ್ಲತೀನಿ" ಎಂದರು.

ಬಾಳಾಚಾರ್ಯರು "ನೀವು ಕೊಟ್ಟಮ್ಯಾಲೆ ಉಳಿದವರೂ ಯಾಕ ಇಟಗೋಬೇಕು? ಅವರೂ ಕೊಟ್ಟಬಿಡಲಿ. ಹಣಮೂಕಾಕಾ ನಿನ್ನ ಪಾಲಿನ ಇಪ್ಪತ್ತೈದು ರೂಪಾಯಿ ತಂದ ಇಡಪಾ" ಎಂದರು.

ಈಗ ಮಾತ್ರ ಹಣಮಂತಾಚಾರಿಗೆ ಎಚ್ಚರ ಬಂತು. "ಛೇ, ಅಧ್ಯಾಂಗ ಆದೀತು? ಬಡವರಿಗಾಗಿ ದುಡ್ಡ ಕೊಡಸೂ ಮಾತ ನಡದದ. ಮತ್ತು ನಾನರೇ ಏನ ಇದ್ದಾವನಽ? ಬಡ ಬ್ರಾಹ್ಮಣ. ಕೈಗೆ ಬಂದದ್ದೆಲ್ಲ ಖರ್ಚು ಆಗಿ ಹೋಗೇದ. ಬೇಕಾದರ ಬಡವರಿಗೆ ಕೊಡೂ ಕಾಳು ನನಗ ಕೊಡಬ್ಯಾಡ್ರಿ, ಆತಿಲ್ಲೋ?" ಎಂದು ಅರ್ಧ ಜಾಣತನದಿಂದ, ಅರ್ಧ ಹುಚ್ಚಿನಿಂದ, ಉಳಿದರ್ಧ ಅಸಹಾಯತೆಯಿಂದಲೇ ಹೇಳಿದರು. ಗೌಡರು ವಿಜಯದ ಮುದ್ರೆಯಿಂದಲೇ ಎಲ್ಲವನ್ನು ನಿರೀಕ್ಷಿಸುತ್ತಿದ್ದರು.

ಕೊನೆಗೂ ಬಗೆಹರಿಯಲಿಲ್ಲ. ಗೌಡರು ಅಮಲದಾರರಿಗೆ ಕೊಡಲಿಕ್ಕೆಂದು ಇಟ್ಟುಕೊಂಡ ಹಣದ ಮೇಲೆಯೇ ಶೇಷಪ್ಪನ ಕಣ್ಣು. ಏನು ಬಂದರೂ ಅದನ್ನು ಕೊಡಲಾರೆ ಎಂದು ಗೌಡರ ಹಟ. ಎಲ್ಲರೂ ತಮ್ಮ ತಮ್ಮ ಪಾಲಿಗೆ ಬಂದದ್ದನ್ನು ಕೊಡಲಿ, ತಮ್ಮ ಪಾಲನ್ನೂ ಕೊಡಬಹುದೆಂದು ಗೌಡರ ಅಭಿಪ್ರಾಯ. ಆದರೆ ಅಧಿಕಾರಿಗಳ ಲಂಚದ ನೆವ ಮಾಡಿಕೊಂಡು ತನ್ನ ಪಾಲನ್ನೇ ಮುಳುಗಿಸಿದಂತಾಯಿತಲ್ಲ, ಎಂದು ಶೇಷಪ್ಪನ ಗೋಳು. ಮಾತು ಬರಬರುತ್ತ ಬಿರುಸಾದವು. ವೈಯಕ್ತಿಕವಾಗಿ ಆಪಾದನೆ ಹೇರುವದೂ ನಡೆಯಿತು. ಹಿಂದಿನ ಅಕೃತ್ಯಗಳ ಪುನರ್ವಿಚಾರಣೆ ಕೂಡ ನಡೆಯುವಂತಾಯಿತು. ಪ್ರಸ್ತುತ ಪ್ರಶ್ನೆಯನ್ನೇ ತಮ್ಮ ವಾದದಲ್ಲಿ ಎಲ್ಲರೂ ಮರೆತಾಗ ಬಾಳಾಚಾರ್ಯರೇ ಮತ್ತೆ ಅದನ್ನು ನೆನಪು ಮಾಡಿಕೊಟ್ಟರು.

"ಊರಾಗ ಒಕ್ಕಟ್ಟು ಇದ್ದಾಗ ಹಗೆ ತಗಿಸಿ ಕಾಳ ಹಂಚೂದು ಸಾಧ್ಯ ಇತ್ತು. ಈಗ ಜನರ ಕಬೂಲಿ ಇದ್ದರ ಕಾಳು ಹಂಚರಿ. ಬೇಕಾಯದೇಶೀರ ರೀತಿಯಿಂದ ಹಗೇ ತಗಸೂ ಧೈರ್ಯ ನನಗಂತೂ ಇಲ್ಲ. ಆ ಧೈರ್ಯಾ ಇದ್ದವರು ಬೇಕಾದರ ಆ ಕೆಲಸಕ್ಕ ಮುಂದಾಗಲಿ" ಎಂದಿಷ್ಟು ಹೇಳಿ ಶೇಷಪ್ಪ ಗೌಡರತ್ತ ನೋಡಿದ.

"ನನಗರೆ ಬೇಕಾಯದೇಶೀರ ಕೆಲಸಾ ಮಾಡೂದೆಲ್ಲೆ ಬೇಕಾಗೇತಿ? ನಾಳೆ ಕೂಳಿಲ್ಲದ ಜನರು ಹಗೇ ಲೂಟಿ ಮಾಡಿದರಂದರ ಅದರ ಪಂಚನಾಮೆ ಮಾಡಿ ಸೂದಟಃ ನಮ್ಮ ಕರ್ತವ್ಯ" ಎಂದು ಗೌಡರೂ ಶೇಷಪ್ಪನ ಪ್ರಶ್ನೆಗೆ ಉತ್ತರವಿತ್ತು ಉದಾಸೀನತೆಯನ್ನು ತಳೆದರು.

ಮುಂದೆ ಮಾತಾಡಲು ಒಬ್ಬರೂ ಸಿದ್ಧರಿರಲಿಲ್ಲ. ವೈಯಕ್ತಿಕವಾಗಿ ಒಬ್ಬರು ಇನ್ನೊಬ್ಬರನ್ನು ಕಂಡರೆ ಹೆದರುವಂತಾಯಿತು. ಹಗೆ ತೆಗೆಸಿ ಕಾಳು ಹಂಚಿದರೆ, ಮೂಕರ್ಜಿ ಬರೆಸಿ ಶೇಷಪ್ಪ ತಮ್ಮನ್ನು ಜೇಲಿಗೂ ಕಳಿಸಬಹುದೆಂದು ಗೌಡರ ಭಯ. ಶೇಷಪ್ಪನಿಗಂತೂ ಊರ ದುಃಖದ ಬಗ್ಗೆ ಕಳಕಳಿಯೇ ಇರಲಿಲ್ಲ. ಯಾವ ಪ್ರಸಂಗ ಬಂದರೂ ಅದರಲ್ಲಿ ತನ್ನ ಲಾಭವೆಷ್ಟು ಎಂದು ಲೆಕ್ಕಾಚಾರ ಹಾಕುವದೇ ಅವನ ಸ್ವಭಾವವಾಗಿತ್ತು. ಇನ್ನುಳಿದವರ ಸಲಹೆಗಳಿಗೆ ಅಷ್ಟೇನೂ ಬೆಲೆ ಬರಲಿಲ್ಲ. ಏನಾದರೂ ಸಲಹೆ ಹೇಳಿದರೂ ಎಲ್ಲಿ ತಮ್ಮ ಮೈಮೇಲೆಯೇ ಬಂದೀತೋ ಎಂದು ಅವರಿಗೆ ಭಯ. ಬಾಳಾಚಾರ್ಯರಿಗೂ ಪರಿಸ್ಥಿತಿ ಬಗೆಹರಿಯದಂತಾಯಿತು.

ಶೇಷಪ್ಪ ಹಾಗೂ ಗೌಡ ಇವರಿಬ್ಬರಲ್ಲಿ ಮಾತಿನ ಕಾವೇರಿದಾಗಲೇ ಎಲ್ಲರಿಗೂ ಮಾತು ಸಾಕೆಂದು ಅನಿಸಿತ್ತು. ಕೂಡಿದ ಸಭೆಯಿಂದ ಬಡವರಿಗೆ ಏನೂ ಪ್ರಯೋಜನ ದೊರೆಯಲಾರದೆಂಬ ಮಾತು ಸ್ಪಷ್ಟವಾಗಿಯೇ ಇತ್ತು. ಆಡುತ್ತಾಡುತ್ತ ಸಭೆಯ ಉದ್ದೇಶವೇ ವಿಪರೀತವಾಗಿತ್ತು. ಸ್ವಂತ ದ್ವೇಷ, ಸ್ವಂತ ಫಲ, ಸ್ವಾರ್ಥಲೋಭಗಳ ವ್ಯೂಹದಲ್ಲಿ ಅದು ಅಡಗಿಹೋಗಿತ್ತು. ದೊಡ್ಡವರು ತಮಗೆ ತಿಳಿದಂತೆ ಮಾಡಲಿ ಎಂದು ಉಳಿದವರು ಉದಾಸಿನತೆಯಿಂದ ಕೈಚಲ್ಲಿದರು.

ಎಷ್ಟೊತ್ತು ಹಾಗೇ ಸುಮ್ಮನೆ ಕೂಡಲಾದೀತು? ಆದರೆ ಸಭೆ ಕಾವೇರಿದ್ದರಿಂದ ಏಳಲು ಕೂಡ ಯಾರಿಗೂ ಧೈರ್ಯವಾಗಲಿಲ್ಲ. ಗೌಡರೇ ಸಭೆ ಮುಗಿಯಿತೆಂದು ಹೇಳಬೇಕಾಯಿತು. ದೈವದವರ ಸಭೆ ಅಂತಃಕಲಹದಿಂದ ಯಾವ ನಿರ್ಣಯಕ್ಕೂ ಬರದೆ ಮುಗಿಯಿತು.

ಅಂದಿನ ರಾತ್ರಿ ಶಂಕ್ರಪ್ಪಗೌಡರಿಗೆ ನಿದ್ದೆಯೇ ಹತ್ತಲಿಲ್ಲ. ತಮ್ಮ ಸ್ವಾರ್ಥದ ಪರಿಣಾಮವಾಗಿ ಪಾದಳ್ಳಿಯೇ ಉಪವಾಸ ಬೀಳುವಂತಾಯಿತಲ್ಲ! ಬೆಳಗಿನಲ್ಲಿ ಹೊಟ್ಟೆಗಿಲ್ಲದೆ ಕಾಳು ಕೇಳಲು ಬಂದ ಬಡವರ ಕರುಣಚಿತ್ರ ಗೌಡರ ಕಣ್ಣಮುಂದೆ ಇನ್ನೂ ಇತ್ತು. ಗೌಡರೆಂದು ಊರನ್ನೇ ಕಾಯುವ ಹೊಣೆ ಹೊತ್ತ ತಮ್ಮನ್ನಲ್ಲದೆ ಅವರು ಇನ್ನಾರನ್ನು ಕೇಳಬೇಕು? ಆದರೆ ಅಭಿಮಾನವೊಂದು ಅಡ್ಡಗೋಡೆಯಾಗಿ ಬಂದಿತ್ತು. ಉಪವಾಸ ಬಿದ್ದ ಜನರಿಗೆ ಕಾಳು ಕೊಡಿಸಲು ತಾವು ಅಸಮರ್ಥರಾದೆವಲ್ಲ ಎಂದು ಅವರಿಗೆ ಅಪಾರ ವ್ಯಥೆಯಾಗಿತ್ತು. ಕುಲಕರ್ಣಿಯ ಮೇಲೆ ಸಿಟ್ಟೇನೋ ಬಂದಿತ್ತು. ಆದರೆ ಅವನು 'ಲೇಖಣಿ ಬಹದ್ದೂರ.' ಮೇಲಾಗಿ ಕಾಯದೆ ಕಾನೂನುಗಳಲ್ಲಿ ಗತಿಯಿದ್ದವ; ಸ್ವಾರ್ಥಸಾಧಕ: ಒಂದು ಮೂಕಿ-ಅರ್ಜಿ ಮಾಡಿ ಊರನ್ನೇ

ನುಂಗಬಲ್ಲ ಸಮರ್ಥ. ಅದೂ ಅಲ್ಲದೆ ಈ ಬರಗಾಲದ ಪರಿಹಾರದ ಹೊಣೆಯೆಲ್ಲ ತಮ್ಮ ಮೇಲೆಯೇ ಹೊರತು ಕುಲಕರ್ಣಿಯ ಮೇಲಲ್ಲ. ಊರಲ್ಲಿಯ ಹಗೆಗಳಲ್ಲಿ ಆರು ತಿಂಗಳು ಸಾಕಾಗುವಷ್ಟು ಧಾನ್ಯಸಂಗ್ರಹವಿತ್ತು. ಆದರೆ ಮುಂಗೈಜೋರಿನಿಂದ ಅವುಗಳನ್ನು ತೆಗೆಸಿದರೆ, ಲೂಟಿ ಮಾಡಿದ ಅಪಾದನೆಯೂ ತಮ್ಮ ಮೇಲೆಯೇ ಬಂದರೆ? ಸುಮ್ಮನೆ ಕುಳಿತರೆ ಲೂಟಿ, ಕಳವು, ಮೊದಲಾದ ದುರ್ಘಟನೆಗಳಿಗೆ-ಡೆಕೊಟ್ಟಂತೆಯೇ. ಕೊನೆಗೂ ತಾನೇ ಸೋಲುವದು ಹಿತಕರವೆಂಬ ನಿರ್ಧಾರಕ್ಕೆ ಬಂದು ನಸುಕಿನಲ್ಲಿಯೇ ಎದ್ದು ಗೌಡರು ಬಾಳಾಚಾರ್ಯರ ಮನೆಗೇ ಬಂದರು.

"ಇಗಾ ಆಚಾರೆಪ್ಪ, ನನ್ನ ಕಡೆ ಬಂದ ಹಣ ನಿಮ್ಮ ಕೈಯಾಗ ಹಾಕ್ಕೇನಿ. ಏನರ ಮಾಡಿ ಆ ಶೇಷಪ್ಪಗ ಸಮಜೂತ ಹಾಕಿ ಸಮಾಧಾನಮಾಡ್ರಿ. ಊರಾಗ ಇಲ್ಲದ ಕಿತಾಪತಿ ಏಳದ್ಹಾಂಗ ನೋಡಿಕೋಬೇಕಾಗೇತಿ." ಎಂದು ಗೌಡರು ಬಾಳಾಚಾರ್ಯರಿಗೇ ಬಿನ್ನವಿಸಿಕೊಂಡರು.

"ಗೌಡ್ರs ನೀವೇನೋ ರೂಪಾಯಿ ಕೊಡತೀರಿ ಖರೆ. ಆದರ ಇದರಿಂದ ಶೇಷಪ್ಪನ ಸಮಾಧಾನ ಆದೀತು ಅಂತ ನನಗೇನು ಅನಸೂದುಲ್ಲ. ಅಂವಗ ಬಾಪೂಸಾಹೇಬನ ಬೆಂಬಲ ಸಿಕ್ಕದ. ಇಬ್ಬರೂ ಕೂಡಿ ಊರು ತಮ್ಮ ಹಿಡಿತದಾಗ ಬರಬೇಕೂ ಅಂತ ಹೊಂಚು ಹಾಕಲಿಕ್ಕೆ ಹತ್ತ್ಯಾರ. ಈ ಬಾಪೂ ಎಷ್ಟು ದಿನದಾಂವ? ಈ ಶೇಷಪ್ಪನ ಕುಲಕರ್ಣಿಕೀ ಪಾಳೀ ಏಷ್ಟು ದಿನದ್ದು? ನಾಳೆ ಬೆಳಗಾದರ ಶ್ಯಾಮರಾಯನ ಪಾಳೀ ನೇಮಣೂಕಿ ಆಗಬೇಕಾಗೇದ. ಅದs ಶ್ಯಾಮರಾಯನ್ನ ಕರೆಸಿ ನಿನ್ನ ಪಾಳೀ ನೀ ನೋಡಿಕೊಳ್ಳಪಾ ಅಂತ ಹೇಳಿಬಿಟ್ಟರ ಈ ಶೇಷಪ್ಪ ತಾನs ಥಣ್ಣಗಾಗತಾನ. ಇನ್ನ ಬಾಪೂಸಾಹೇಬ ಮಾಡಿದ ಕೆಲಸ ಮಾಡೇದ ಹೆಸರಿಗೇ ಬಟ್ಟಾ ತರೂವಂಥದು. ಲಕ್ಷ್ಮೀಬಾಯಿಗೆ ಪತ್ರಾ ಹಾಕಿ ಕರೆಸಿಗೊಂಡುಬಿಟ್ರ ಅಂವನೂ ಥಣ್ಣಗಾಗತಾನ. ಇವೆಲ್ಲ ವಿಷಯ ನಿಮಗ ಹೇಳಬೇಕಾಗಿತ್ತು. ನೀವs ಬಂದಿರಿ ನೆಟ್ಟಗs ಆತು" ಎಂದರು ಬಾಳಾಚಾರ್ಯರು. ಅವರ ಮಾತಿನಲ್ಲಿ ಈಗ ನಡೆದುಹೋದ ಸಂಗತಿಗಳ ಬಗ್ಗೆ ಬೇಸರ ವ್ಯಕ್ತವಾಗುತ್ತಿತ್ತು.

"ಆಗಲಿ ಆಚಾರೆಪ್ಪ, ನಿಮ್ಮ ಆಶೀರ್ವಾದ ಇದ್ದರ ಶೇಷಪ್ಪಗ ಉಪ್ಪ ಹಾಕ ಕೊಡಾಕಿಲ್ಲ. ಆದರೂ ಅದೇನು ಸಾಮಾನ್ಯ ಇಸಮು ಅಲ್ಲ. ನೀವೊಬ್ಬರು ಬೆಂಬಲಕ್ಕ ಇರ್ರಿ ಸಾಕು. 'ಅದೀನಿ' ಅಂದರ ಆನೀ ಬಲಾ, ಇದ್ದಾಂಗ. ಅಷ್ಟಾದರ

ಏನ ಹೇಳ್ಲಿ ಆಚಾರೆಪ್ಪ, ಈ ಶೇಷಪ್ಪನ ಮಾತು ಯಾವ ಕೋಳೀ ಮೇರೀನೂ ಕೇಳಧಾಂಗ ಮಾಡತೀನ್ರಿ." ಗೌಡರಿಗೆ ನಿಜವಾಗಿ ಭಾರವಿಳಿದಂತಾಗಿತ್ತು.

"ಅದೆಲ್ಲ ಸರಿ, ಆದರ ಈಗ ಕಾಳಿನ ವ್ಯವಸ್ಥಾ ಏನಾದರೂ ಮಾಡ ಬೇಕಲ್ಲಾ. ಇದಕ್ಕ ಏನಾರ ವಿಚಾರ ಮಾಡಿಲ್ಲೇನು ?"

"ಅದಕ್ಕ ಹೀಗ ಮಾಡೂಣು. ನನ್ನ ಓಣೀ ಜನರಿಗೆ ಸುಗ್ಗಿಮಟಾ ನಾವು ಕಾಳು ಕೊಡತೀವಿ. ಶೇಷಪ್ಪ ತಮ್ಮ ಓಣೀದು ತಾನೆ ನೋಡಿಕೊಳ್ಳಲಿ."

"ನಿಮ್ಮ ಓಣಿಯೊಳಗಿನ ಎಲ್ಲಾ ಜನರೂ ನೆಟ್ಟಗಿದ್ದಾರ ಗೌಡ್ರ. ಇದ್ದ ನಾಲ್ಕೆಂಟು ಬಡ ಕುಟುಂಬ ಛಲೋ ದಿನದಾಗೂ ನಿಮ್ಮೆಲ್ಲಾರ ಆಧಾರದ ಮ್ಯಾಲೇ ಬದಕಿದ್ದವು. ಆದರ ಶೇಷಪ್ಪನ ಓಣಿ, ನಮ್ಮ ಓಣೀಯೊಳಗ ಯಾರಿಗೂ ಆಹಾರ ಇಲ್ಲ. ಆ ಜನರಿಗೇ ಈಗ ಕಾಳು ಕೊಡಿಸಬೇಕಾಗೇದ. ಬರೇ ಕುಲಕರ್ಣಿ ಬಾಪೂ ಸಾಹೇಬರ ಮ್ಯಾಲs ಭಾರ ಹೊರಿಸಿ ಬಿಟ್ರ, ನಿಮ್ಮ ಹಗೇಕ್ಕs ದಾಳಿ ಬರತದ."

"ಅವರಿಬ್ಬರೂ, ಬಡವರಿಗೆ ಏನೂ ಮಾಡಲಿಲ್ಲಾ ಅಂತ ಗೊತ್ತಾಗಲಿ ಆಚಾರೆಪ್ಪ. ದಾಳಿ ಬಂದರ ನಾ ಅದೀನಲ್ಲಾ, ಮೊದಲ ಜಾಗೀರದಾರರ ಹಗೆ ಲೂಟಿ ಮಾಡಿ ಆಮ್ಯಾಲೆ ನಮ್ಮ ಕಡೆ ಬರ್ರಿ ಅಂತ ಹೇಳಾಕ."

"ಹಸಿದ ಹೊಟ್ಟೆ ಕೆಟ್ಟದು ಗೌಡರs. ನಿಮ್ಮ ನಿಮ್ಮ ತಿಕ್ಕಾಟದೊಳಗ್ಗ ಬಡ ವರು ಸತ್ತಿರಬಾರದು. ಈಗ ಹೀಂಗ ಮಾಡ್ರಿ. ಐನೂರು ರುಪಾಯಿ ಕೊಡಲಿಕ್ಕೆ ಒಪ್ಪಿದವರು, ಊರ ಜನರಿಗೆ ಕಾಳು ಕೊಡಲಿಕ್ಕೆ ಹಿಂಜರೀಬಾರದು. ಮೊದಲು ನಿಮ್ಮ ಹಗೇ ತಗಸಿ ಕಾಳು ಹಂಚರಿ. ಆಮ್ಯಾಲೆ ಉಳಿದವರಿಗೆ ಹೇಳಲಿಕ್ಕೆ ಬರತದ. ಏನಂದರೂ ಊರ ತಂದೀ ತಾಯಿ ನೀವs ಅನ್ನೂದು ಸುಳ್ಳು ಮಾಡಬ್ಯಾಡ್ರಿ ಗೌಡರs."

ಬಾಳಾಚಾರ್ಯರ ಕೊನೆಯ ವಾಕ್ಯದಿಂದ ಗೌಡರ ಅಂತಃಕರಣ ಕರಗಿತು. ಪಾದಳ್ಳಿಯ ನೆಲದ ಮೇಲೆ ಗೌಡರ ಮನೆತನಕ್ಕಿರುವ ಅಭಿಮಾನ ಮತ್ತಾರಿಗೂ ಇರಲಿಲ್ಲ. ಅದು ಗೌಡರ ರಕ್ತದ ಗುಣ. ಕುಲಕರ್ಣಿಯಂತೆ ಹಾರುವ ಹಕ್ಕಿಯಲ್ಲ ಗೌಡರು. ಜನರು ಬದುಕಿದರೆ ಮಾತ್ರ ತಾನು ಬದುಕಿದಂತೆ ಎಂಬ ಭಾವನೆ ಗೌಡರ ಮನೆತನದ ಸಂಸ್ಕೃತಿಯ ಒಂದು ಜೀವಂತ ಅಂಶವಾಗಿತ್ತು. ಅಂತಲೇ ಬಾಳಾಚಾರ್ಯರ ಮಾತಿಗೆ ಗೌಡರಿಗೆ ಇಲ್ಲೆನ್ನಲಾಗಲಿಲ್ಲ. "ಹಂಗs ಆಗಲಿ ಆಚಾರೆಪ್ಪ. ನಿಮ್ಮ ಮಾತು ಮೀರಿದರ ದೇವರ ಮಾತು ಮೀರಿದ್ಹಂಗ" ಎಂದು ಹೇಳಿ

ಗೌಡರು ಇನ್ನೇನು ಹೊರಡುವೆವೆರಿದ್ದರು; ಅಷ್ಟರಲ್ಲಿ ಶಿಲೇದಾರ ಲಕ್ಷ್ಮಣ ಅಲ್ಲಿಗೆ ಬಂದ. ಗೌಡರನ್ನು ಕಂಡ ಕೂಡಲೇ "ರಾವ್ ರಾವ್ ಪಾಟೀಲ" ಎಂದು ಮುಜುರೆ ಮಾಡಿದ.

ಶಿಲೇದಾರ ಲಕ್ಷ್ಮಣ ಇನ್ನೂ ಬಿಕ್ಕಿಬಿಕ್ಕಿ ಅಳುತ್ತಿದ್ದ. ಅತ್ತು ಅತ್ತು ಕಣ್ಣು ಕೆಂಪಗಾಗಿದ್ದವು. ತಲೆಯ ಮೇಲಿನ ರುಮಾಲು ಬಗಲಲ್ಲಿ ಬಂದಿತ್ತು. ಮೊದಲೇ 'ಅಪೇಶಿ' ಎಂದು ಅವನು ಹೆಸರಾಗಿದ್ದ. ಈಗಂತೂ ದುಃಖದಿಂದ ಅವನ ಮುಖದ ಮೇಲೆ ಮತ್ತಿಷ್ಟು ಹುಚ್ಚುಕಳೆ ಬಂದಿತ್ತು. ಅಂತಃಕರಣ ಉಕ್ಕಿ ಬಂದ ಲಕ್ಷ್ಮಣನ ಮುಖದಲ್ಲಿ ದುಃಖವು ಸಾಕಾರವಾದಂತೆ ಕಾಣುತ್ತಿತ್ತು. ಯಾವಾಗಲೂ ಮೇವಿನ ಹೊರೆ ಹೊತ್ತುಕೊಂಡು ದನಗಳ ಜೊತೆಗೆ ತಾನೂ ಕಾಲೆಳೆಯುತ್ತ ನಡೆಯುತ್ತಿದ್ದ ಲಕ್ಷ್ಮಣ, ನಾನಾನ ಮರಣದ ದುಃಖದಿಂದ ಹಣ್ಣಾಗಿ ಇನ್ನೂ ಕಾಲ ಎಳೆಯುತ್ತ ಬಾಳಾಚಾರ್ಯರ ಬಾಗಿಲಿಗೆ ಹಾಗೂ ಹೀಗೂ ಬಂದಿದ್ದ.

ಹಿಂದಿನ ರಾತ್ರಿ ಲಕ್ಷ್ಮಣ ಊರಿನಿಂದ ಬಂದಾಗ ಅವನಿಗೆ ನಾನಾನ ಮರಣದ ಸುದ್ದಿ ತಿಳಿದಿತ್ತು. ಬೆಳಿಗ್ಗೆ ಎದ್ದು ಗೌಡರ ಮನೆಗೆ ಬರುವಷ್ಟರಲ್ಲಿ ಅವರು ಮನೆಯಲ್ಲಿಲ್ಲವೆಂದು ಕೇಳಿ, ಅವರನ್ನು ಹುಡುಕುತ್ತ ಈಗ ಇಲ್ಲಿಗೇ ಬಂದಿದ್ದ.

"ಬಿಡು ಲಕ್ಷ್ಮಣಾ, ಗಂಡಸಾಗಿ ಹಾಂಗೆಲ್ಲ ಅಳಬಾರದು. ನೀ ಅತ್ತರು ಹೋದ ನಾನಾ ಏನು ತಿರಗಿ ಬರತಾನs? ಹುಟ್ಟಿದವರೆಲ್ಲ ದೇವರು ಕರೆದಾಗ ಅವನ ಕಡಿ ಹೋಗಬೇಕಲ್ಲಪಾ !" ಎಂದು ಬಾಳಾಚಾರ್ಯರು ಸಹಾನುಭೂತಿಯಿಂದ ಮಾತಾಡಿದರು.

"ದೇವರು ನಾನಾನ್ನ ಒಯ್ಯಲಿಲ್ಲ ಆಚಾರೆಪ್ಪ. ಪಿಶಾಚಿ ಅವನ ಜೀವಾ ಹಿಂಡಿತು. ಅಂವಾ ಸತ್ತ ಸುದ್ದಿ ಸೈತ ಹೇಳಿಕಳಿಸದಂತಾದ್ನು ನಾ ಏನು ಮಾಡಿದ್ನಿ ಗೌಡರs?" ಎಂದು ಲಕ್ಷ್ಮಣ ಧೋತರದ ಸೆರಗಿನಿಂದ ಮುಖ ಮುಚ್ಚಿಕೊಂತು ಮತ್ತೆ ಅಳಹತ್ತಿದ.

"ನೀನೂ ಏನ ಮಾಡಿಲ್ಲ, ನಾನಾನೂ ಏನೂ ಮಾಡಲಿಲ್ಲ. ಅದೆಲ್ಲ ವಿಧಿ ಲಿಖಿತ ಲಕ್ಷ್ಮಣಾ. ಅದನ್ಯಾರು ತಪ್ಪಸಬೇಕು ಹೇಳು? ಸಮಾಧಾನ ಮಾಡಿಕೊ." ಬಾಳಾಚಾರ್ಯರು ಅಂತಃಕರಣ ಕರಗಿ ನುಡಿದರು.

ದುಃಖದ ಆವೇಗ ಕಡಿಮೆಯಾಗಲೆಂದು ಆಚಾರ್ಯರು ಗೌಡರು ಕೆಲಹೊತ್ತು ಸುಮ್ಮನಿದ್ದರು. ಒಮ್ಮೆ ಜೋರಾಗಿ ಅತ್ತು, ಲಕ್ಷ್ಮಣ ಕಣ್ಣೊರಸಿಕೊಂಡು

ಶೂನ್ಯದೃಷ್ಟಿಯಿಂದ ಇವರೆಲ್ಲರನ್ನೂ ಮಿಕಿಮಿಕಿ ನೋಡಹತ್ತಿದ. ಕೊನೆಗೆ ಆಚಾರ್ಯರೇ ಮತ್ತೊಮ್ಮೆ ಮೌನವನ್ನು ಮುರಿದು ಹೇಳಬೇಕಾಯಿತು.

"ಇಲ್ನೋಡು ಲಕ್ಷ್ಮಣಾ, ಬಾಪೂಸಾಹೇಬ ಇಂಥಾ ನೀಚ ಕೆಲಸಕ್ಕ ಕೈ ಹಾಕಬಾರದಿತ್ತು. ಇನ್ನೇನು ನಾನಾನ ಆಯುಷ್ಯ ಮುಗದs ಬಂದಿತ್ತು ಅನ್ನು. ಅದಕs ಅಂವಗ ಅಂಥಾ ದುರ್ಬುದ್ಧಿ ಹುಟ್ಟಿರಬೇಕು. ಆದದ್ದು ಆಗಿ ಹೋತು. ನೀನು ಆಗ ಇದ್ದರೂ ನಾವು ಮಾಡಿದ್ದನ್ನs ಮಾಡತಿದ್ದಿ."ಎಂದು ತಿಳಿಸಿ ಹೇಳಿದರು.

"ಆಚಾರಪ್ಪ ಹೇಳಿದ್ದು ಕೇಳಿದೇನು ಲಕ್ಷ್ಮಣಾ? ಅವರೆಂದೂ ಗೈರ ಮಾತು ಆಡೂದೇ ಇಲ್ಲ." ಗೌಡರು ಬಾಳಾಚಾರ್ಯರ ಮಾತಿಗೆ ಬೆಂಬಲವಿತ್ತರು.

"ವಿಷಾ ಹಾಕಿ ಕೊಂದರ, ಆಯುಷ್ಯ ಮುಗದು ಸತ್ತಾ ಅಂತ ಹ್ಯಾಂಗ ನಂಬಲಿ ಆಚಾರೆಪ್ಪಾ? ತಪ್ಪ ಮಾಡಿದವರಿಗೆ ಶಿಕ್ಷಾ ಆಗಾಕs ಬೇಕು ಎಪ್ಪಾ. ಇಲ್ಲದಿರಕ ನಾನಾನ ಹೊಂದಿದವರಾಗಿ ಏನು ಮಾಡಿದ ಹಾಗಾತು?" ಲಕ್ಷ್ಮಣನ ಅಂತಃಕರಣ ಸವಾಲು ಹಾಕಿತು.

"ಹಾಗೆಲ್ಲ ಸಿಟ್ಟಿನ ಕೈಯಾಗ ಬುದ್ಧಿ ಕೊಡಬಾರದು ಲಕ್ಷ್ಮಣಾ. ನೀನs ಇಚಾರ ಹಾಕಿ ನೋಡು. ಚಿಮಣಾನ ಮರ್ಯಾದಿ ನಮ್ಮದಾರ್‍ಯಾಗ ಅಡ್ಡ ಬಂತು. ಆಕಿ ನಾನಾನ ಮಗಳಾದರ ನಿನಗೂ ಮಗಳಾಲಿಲ್ಲs? ಆಕೀ ಮರ್ಯಾದೀ ಕಳದು ಹೋಳೀಪಾಲು ಮಾಡಿದ್ದರ ಪಾಡಾಗತಿತ್ತೇನು ಹೇಳು?" ಗೌಡರು ಹೊಣೆ ಅರಿತು ವಿವರಿಸಬೇಕಾಯಿತು. "ಮತ್ತ ಇದು ನಿನ್ನ ಮನಸ್ಸಿಗೆ ಬರದಿದ್ದರ ಹೇಳು. ಊರ ಹಿರ್‍ಯಾರಿಗೆಲ್ಲ ಶಿಕ್ಷಾ ಮಾಡಸತಿದ್ರ ಮಾಡಿಸಿಬಿಡು." ಎಂದು ಅವನಿಗೇ ತಿಳಿಯಲೆಂದು ಹೇಳಿದರು.

"ತಪ್ಪು ಮಾಡಿದವರಿಗೆಲ್ಲ ಶಿಕ್ಷಾ ಆಗಾಕs ಬೇಕು ಎಪ್ಪಾ, ಅದು ದೇವರ ನ್ಯಾಯ. ಸುಮಾಕs ಉಳದ ಹಿರ್‍ಯಾರಿಗೂ ಶಿಕ್ಷಾ ಮಾಡಸಂತ ಹೇಳಿದರ ಬಾಯಾಗ ಹುಳಾ ಬಿದ್ದಾವು" ಲಕ್ಷ್ಮಣನ ಮುಗ್ಧತೆ ಈ ಮೊಂಡುತನವನ್ನು ಕಲಿಸಿತ್ತು.

"ಲಕ್ಷ್ಮಣಾ, ನಿನ್ನ ಮಾತು ಖರೆ. ಆದರೂ ನೋಡು, ಪ್ರಸಂಗ ಎಷ್ಟು ತೊಡಕಿನದಾಗಿ ಕೂತದ ಈಗ? ಆದ ಪ್ರಕರಣ ಮತ್ತೊಮ್ಮೆ ತಗದರ ಚಿಮಣಾನ್ನ ಕರಸಬೇಕು, ಕೇಳಬೇಕು. ಅವ್ಹಾಲೆ ಖರೇ ಮಾತು ಹೊರಬಿದ್ದರ, ನಾವೆಲ್ಲ ಲೋಕ್ಕಾ ತಿಂದು ಗುನ್ಹೆ ಮುಚ್ಚಿಟ್ಟಿವಿ ಅಂತ ಜೇಲಿಗೆ ಹೋಗಬೇಕು. ಇದರಿಂದ ಏನು ಸಾಧಿಸಿದ್ಹಾಂಗ ಆತು? ನಾನಾ ಸತ್ತದ್ದಕ್ಕ ನಿನಗ ಎಷ್ಟು ದುಃಖ ಆಗೇದ, ಅಷ್ಟು

ನೆನೆಗೂ ಆಗೇದ. ಆದರ ಉಪಾಯ ಇಲ್ಲದಃ ಸುಮುನಃಕೂಡಬೇಕಾಗೇದ."

"ಆಚಾರೆಪ್ಪ ಹೇಳೂದೆಲ್ಲ ವಾಜಮಿ ಮಾತು ಲಕ್ಷ್ಮಣಾ. ಈಗ ಇಲ್ಲದ ಬಬ್ಬಾಟ ಮಾಡೂಹಂಗಿಲ್ಲ. ಯಾರೆದುರೂ ಹೇಳದ ಸುಮಾಕ ಇರೂದಃ ಪಾಡ." ಎಂದು ಗೌಡರೂ ಹೇಳಿದರು.

"ಅದೆಲ್ಲ ಕರೇ ಮಾತು ಎಪ್ಪಾ. ಆದರ ಬಾಪೂಸಾಬಗ ಶಾಸನ ಆಗದಿದ್ದರ ಎಂತಾ ಮಾತರಿ? ಇದಕೇನಂತೀರಿ ನನಗ ಹೇಳ್ರಿ?" ಲಕ್ಷ್ಮಣ ಮತ್ತೆ ಕೇಳಿದ.

"ಅದಕ್ಕ ಎರಡಃ ಹಾದಿ ಲಕ್ಷ್ಮಣ. ಒಂದು ಚಿಮಣಾನ್ನ ಬಾಪೂಸಾಹೇಬಗ ಕೊಟ್ಟ ಮದಿವೀ ಮಾಡಬೇಕು. ಇಲ್ಲಾ ಅಂದರ ಲಕ್ಷ್ಮೀಬಾಯಿನ್ನ ಕರಿಸಿ ಬಾಪೂ ಸಾಹೇಬನ್ನ ಊರು ಬಿಟ್ಟು ಓಡಸಬೇಕು. ಇವೆರಡರೊಳಗ ಯಾವದು ಮಾಡಂತೀ ಹೇಳು?" ಆಚಾರ್ಯರು ಅವನ ಮೇಲೇ ಹೊಣೆ ಹಾಕಿದರು.

"ಚಿಮಣಾನ್ನ ಬಾಪೂಸಾಹೇಬಗ ಕೊಡೂದಃ? ಎಂತಾ ಮಾತ ಹೇಳತೀ ಆಚಾರೆಪ್ಪಾ. ಸತ್ತ ನಾನಾ ಏನಂದಾನು ನನಗಃ? ಆ ಮಾತು ಆಗಾಣೆಲ್ಲ ತಗೀರಿ. ಇನ್ನಾ ಬಾಪೂಸಾಹೇಬನ್ನಃ ಊರು ಬಿಟ್ಟು ಓಡಿಸರಿ. ಅದು ನಮಗ ಸನಮಂತ ಮಾತು" ಲಕ್ಷ್ಮಣ ಉತ್ತರವಿತ್ತ.

"ಆದರ ಬಾಪೂಸಾಬ ಊರಾಗ ಬೇರುಬಿಟ್ಟಾನೋ. ತಮ್ಮ ಪಡದಯ್ಯ ಸ್ವಾಮೇರು ಅವರೂ ಜೀವದ ಗೆಣ್ಯಾರು. ಹುಲಿಬ್ಯಾಟಿ-ಹಳಬರ್ನ ಸಾಕ್ಯಾನ. ಅವನ್ನ ಹೊರಗ ಹಾಕೂದಂದ್ರ ಓಟು ತೆಗವಃ ಹರೀತೇತಿ" ಗೌಡರು ತಮ್ಮ ಅಭಿಪ್ರಾಯ ಹೇಳಿದರು.

"ಹಾಗಾರ ನಮ್ಮಂತಾ ಬಡಜನರಿಗೆ,ಬಾಳೆ ಮಾಡೂದು ಸಾಧ್ಯ ಇಲ್ಲ.ಊರು ಬಿಟ್ಟು ಹೋಗಂತ ಹೇಳಬಾರದಃ ಎಪ್ಪಾ" ಲಕ್ಷ್ಮಣನ ದನಿ ಮತ್ತೆ ಅಳುವಿನ ರಾಗ ತೆಗೆಯಿತು.

"ಹಾಗೆಲ್ಲ ಅಳಬ್ಯಾಡೋ ಲಕ್ಷ್ಮಣ. ಬಾಪೂಸಾಬನ್ನ ಹೊರಗ ಹಾಕೂದು ಬಿಗಿ ಅಂತ ಹೇಳಿದ್ನಿ ಅಷ್ಟಃ. ಹಾಗ ನೋಡಿದರ ನಾವೇನು ಬಳಿ ಇಟ್ಟಿಲ್ಲ ಅನ್ನು. ಈಗ ನೀನು ಹ್ಯಾಂಗಾರೂ ಶಿಲೇದಾರ. ಲಕ್ಷ್ಮೀಬಾಯಿಯವರ್ನ ನೀ ಕರೆಸು. ಮುಂದಿನ ಕೆಲಸ ನನ್ನ ಕೂಡಿತು" ಗೌಡರು ಸಮಾಧಾನ ಹೇಳಿದರು.

"ಬರೇ ಹಾಂಗೆಲ್ಲ ಕರೆಸಿದರ ಆಗೂದುಲ್ಲ ಗೌಡರಃ. ಲಕ್ಷ್ಮೀಬಾಯಿಗೆ ಊರೊಳಗ ಬಲಾ ಬೇಕು. ಮೊದಲ ನಾವು ಕಾಳು ಕಡಿ ಕೊಟ್ಟು ಊರವರ

ಪ್ರೀತಿ ಗಳಿಸಿಗೋಬೇಕು. ಅಂದರ ಮುಂದಿನ ಕೆಲಸ ಸುಸೂತ್ರ ಆಗತದ."

"ಅದೆಲ್ಲ ನನಗ ಒಪ್ಪಿತು ಆಚಾರೆಪ್ಪ. ಈಗಿಂದೀಗಣ ಹಗೇ ತೆರವು ಮಾಡ ತೀನಿ. ರೈತರಿಂದನೂ ಕಾಳು ಕೂಡಸತೀನಿ ಆತs ?" ಎಂದು ಗೌಡರು ನುಡಿದರು.

"ನಾ ಹೋಗಿ ದೊಡ್ಡ ಅವ್ವಾಅವರ್ನ ಕರಕೊಂಡು ಬರತೀನಿ ಎಪ್ಪಾ. ಅದೇನ ದೊಡ್ಡಮಾತಲ್ಲ. ಆದರ ಬಾಪೂಸಾಬ ಈ ಊರಾಗ ನಿಂದರಬಾರದ್ಹಾಂಗ ಮಾಡೂದು ನಿಮ್ಮನ್ನ ಕೂಡಿತು" ಲಕ್ಷ್ಮಣ ಅದೇ ತಂತಿಯನ್ನು ಮತ್ತೆ ಮೀಟಿದ.

"ಅದನ್ನೆಲ್ಲ ನಾವು ಮಾಡತೀವಿ ಲಕ್ಷ್ಮಣಾ. ಮೊದಲ ನಾನಾನ ದಿವಸಾ ಮಾಡೂದು, ಅದನ್ನೆಲ್ಲ ವಿಚಾರ ಮಾಡಿರಿ. ಅದು ಮುಗದ ಮ್ಯಾಲೆ ನೀನs ಹೋಗಿ ಲಕ್ಷ್ಮೀಬಾಯಿನ್ನ ಕರಕೊಂಡು ಬರಬೇಕು. ಚಿಮಣಾಗ ನೀನs ಸಮಾಧಾನ ಮಾಡಬೇಕು. ಮತ್ತ ಮನ್ಯಾಗ ನೀನs ಹಿರೇಮನಸ್ಯಾ; ಎಲ್ಲಾ ಒಂದೂ ಬಿಡ ದ್ಹಾಂಗ ನಡೆಸಿಕೊಂಡು ಹೋಗು" ಆಚಾರ್ಯರು ಉಪದೇಶದ ರೀತಿಯಲ್ಲಿ ಹೇಳಿ ದರು.

"ಅದೆಲ್ಲಾ ಆದೀತು ಬಿಡರಿ. ಆದರ........" ಲಕ್ಷ್ಮಣ ಏನೋ ಹೇಳ ಬೇಕೆಂದವನು ತಡವರಿಸಿದ.

"ಮತ್ತೇನು ತಗಡೆಪಾ? ನಿಂದೇನು ಮುಗಿಯೂ ಹಾಂಗ ಕಾಣೂದುಲ್ಲ." ಗೌಡರು ಸ್ವಲ್ಪ ಬೇಸರದಿಂದಲೇ ನುಡಿದರು.

"ಏನಿಲ್ಲರಿ. ನಾ ಏನೋ ನಿಮ್ಮ ಮಾತು ಉಗುಳುಹಾಕಿ ದಾಟೂದುಲ್ಲ. ಹಿರ್ಯಾರ ಮಾತು ತಗದಹಾಕಿ ಬಾಳೇ ಮಾಡಾಕ ಆದೀತರೇ? ಆದರ ನಾ ಕೇಳಿ ದ್ಹಾಂಗ ನನ್ನ ಮಗಾ ಕೇಳತಾನ್ರೇ? ಮುಂಚೇಕಿಂದನೂ ದಾದಾ ಓಟು ಹಟಮಾರಿ ಹುಡುಗ. ಬಿಸಿನೆತ್ತರ ಕುಣಿದಾಡತೈತಿ. ಅದರಾಗ ಚಿಮಣಾನ ಮ್ಯಾಗಂತೂ ಬಾಳ ಜೀವರಿ ಅಂವಂದು. ಈ ಸುದ್ದಿ ಅವನ ಕಿವಿಗೆ ಹಾಕಿಲ್ಲಾ ಹಾಕಿಲ್ಲ. ಅದರಾಗ ಬ್ಯಾರೆ ನಾನಾಂದು ಈ ಗತಿ ಆತು. ನನಕಿಂತಾ ನಾನಾಕಾಕಾನ್ನs ಹಚಿಕೊಂಡಿತ್ತು ಹುಡುಗ. ಈಗೇನು ಊರಾಗ ಇಲ್ಲ, ಆದರ ನಾನಾನ ದಿವಸಕ್ಕಂತೂ ಬರಾಕ ಬೇಕಲ್ಲರಿ! ಬಂದಮ್ಯಾಲೆ ಏನಾದೀತೋ ಅಂತ ಎದಿಬಡಿಕಿ ಹತ್ತೈತರಿ." ಲಕ್ಷ್ಮಣ ತನ್ನ ಮನಸ್ಸಿನಲ್ಲಿ ಹುದುಗಿದ್ದ ಭಯವನ್ನು ಆಡಿ ತೋರಿಸಿದ.

ಈ ಮಾತಿಗೆ ಯಾರೂ ಇಲ್ಲವೆನ್ನುವಂತಿರಲಿಲ್ಲ. ದಾದಾನ ಮುಂಗೋಪಿ ಸ್ವಭಾವ ಎಲ್ಲರಿಗೂ ಚನ್ನಾಗಿ ಪರಿಚಿತವಾಗಿತ್ತು. ಸ್ವಲ್ಪ ಹೊತ್ತು ಬಾಳಾಚಾರ್ಯರು

ಯೋಚಿಸಿ ನುಡಿದರು. "ಹೌದು ಅದೂ ಖರೇನs. ದಾದಾ ಮೊದಲಿನಿಂದs ಉಲ ಕೋಚಿ. ಅವನ್ನ ಅನಕಾತ ಊರಿಗೆ ಬರದ್ದಾಂಗ ಮಾಡಬೇಕು. ಈಗ ಎಲ್ಲಿ ಹೋಗ್ಯಾನs?"

"ಜತ್ತಿಗೆ ಅಂತ ಹೋಗ್ಯಾನ್ರಿ. ಅಲ್ಲಿಂದ ಸೊಲ್ಲಾಪುರ, ಪಂಢರಪುರಕ್ಕ ಹೋಗೇ ಬರತಾನು. ಅಂದವ್ಯಾಗ ಅವಗ ಹೇಳಿ ಹ್ಯಾಗ ಕಳಸೂದ್ರಿ ಈಗ ? ಇನ್ನೇನು ತಾಸಗಾಂವಿಗೆ ಬಂದರೂ ಬಂದಾನು."

"ಹಂಗಾರ ಹೀಂಗ ಮಾಡೂಣು. ತಾಸಗಾಂವಿಗೆ ಒಬ್ಬ ವಾಲೀಕಾರನ್ನ ಕಳಿಸಿ ಅವನ ಕಡಿಂದ ಒಂದು ಪತ್ರಾ ಕಳಸೂಣು ಆತs ?"

"ಹಂಗಾರ ಆ ಪತ್ರದಾಗ ಹೀಂಗ ಕಾಣಸರಿ. ತಾಸಗಾಂವ್ಯಾಗ ದನಾ ಬಿಟ್ಟು ಬಂದೀನಿ. ನಾ– ಅಂದರ ಲಕ್ಷ್ಮಣ್ಣಾರಿ– ಅಲ್ಲಿ ಬರೂತನಕಾ ತಾಸಗಾಂವ್ಯಾಗs ದನಾ ಜ್ವಾಪಾನ ಮಾಡಿಕೊಂತs ಇರು ಅಂತ ಬರದು ಕಳಿಸಿಬಿಡ್ರಿ. ನನ್ನಿಂವ ಪತ್ರ ಬರೂತನಾ ಇಲ್ಲಿ ಬರಬಾರದೂ ಅಂತ ತಾಕೀದು ಮಾಡ್ರಿ ಆತು" ಎಂದು ಲಕ್ಷ್ಮಣ ತಾನು ಹೇಳುವದನ್ನೆಲ್ಲ ಹೇಳಿ ಮುಗಿಸಿ, "ಬರ್ತೀನಿ ಆಚಾರೆಪ್ಪ, ಬರ್ತೀನಿ ಗೌಡ್ರ. ಎಂದು ಹೇಳಿಹೊರಟ.

"ಆಗಲೆಪಾ. ನಾನಾನ ಬೂದಿ ಹೊರ್ಳೀ ಕಾಣಿಸುವ ಕೆಲಸ ಸಮಾಧಾನ ದಿಂದ ಮುಗಸು ಆತು" ಎಂದು ಬಾಳಾಚಾರ್ಯರು ಲಕ್ಷ್ಮಣನನ್ನು ಬೀಳ್ಕೊಟ್ಟರು"

ಲಕ್ಷ್ಮಣ ತಮ್ಮ ಮಾತಿಗೆ ಮರ್ಯಾದೆ ಕೊಟ್ಟು ನಾನಾನ ಮರಣದ ವಿಷಯದಲ್ಲಿ ಹೆಚ್ಚಿನ ಗೊಂದಲಕ್ಕೆಡೆಕೊಡದಂತಾದುದಕ್ಕೆ ಗೌಡರಿಗೆ ತಮ್ಮ ಮೇಲಿನ ದೊಡ್ಡ ಭಾರ ಅದೆಷ್ಟೋ ಇಳಿದಂತಾಗಿತ್ತು.

ಆಗ ಹೇಮಂತದ ಸೂರ್ಯನು ತುಸು ಏರಿದ್ದರೂ ಇನ್ನೂ ಚಳಿಯ ಪ್ರಭಾವ ಕುಗ್ಗಿರಲಿಲ್ಲ. ಗೌಡರಿಗೆ ಅಲ್ಲಿಯೇ ಇನ್ನೂ ಕೂಡಬೇಕೆನಿಸಿದರೂ ಬಡ ಜನರಿಗೆ ಕಾಳುಕೊಡಿಸುವ ಕೆಲಸ ಅವರನ್ನು ತತ್‌ಕ್ಷಣ ಮನೆಗೆ ಹೋಗಲು ಪ್ರೇರೇಪಿಸಿತು.

:: ೫ ::

ಎಳ್ಳಅಮಾಸೆಯ ಮುನ್ನಾದಿನ ಜತ್ತಿಯಲ್ಲಿ ನಡೆಯುವ ಕುಸ್ತಿಯಲ್ಲಿ ಭಾಗ ವಹಿಸಲು ಪಾದಳ್ಳಿಯ ಕುಸ್ತಿಗಡಿಗಳು ದಾದಾನ ಧುರೀಣತ್ವದಲ್ಲಿ ಬಂದಿದ್ದರು. ರಾಜೇಸಾಹೇಬರ ಖಾಸ ನೇತೃತ್ವದಲ್ಲಿ ಹೆಸರಾಂತ ಪೈಲವಾನರ ಕುಸ್ತಿಗಳನ್ನು ಅಲ್ಲಿ ಏರ್ಪಡಿಸಲಾಗಿತ್ತು. ಪಂಜಾಬದ ನಾಮಾಂಕಿತ ಪೈಲವಾನ ಲಾಮಾನೊಡನೆ ದಾದಾ 'ಗಡಿ' ಎಂದು ಗೊತ್ತಾಗಿತ್ತು. ಲಾಮಾನ ಹೆಸರು ಸುಪ್ರಸಿದ್ಧವಾದದ್ದ ರಿಂದ ಸುತ್ತುಮುತ್ತಲಿನ ಹಳ್ಳಿಯ ಜನರು ಸಾವಿರ ಸಂಖ್ಯೆಯಲ್ಲಿ ಬಂದು ಸೇರಿದ್ದರು.

ದಾದಾ ಈ ಮೊದಲು ಎಂದೂ ಸೋಲರಿಯದ ಗರಡಿಯಾಳು. ಚಿಕ್ಕಂದಿ ನಲ್ಲಿಯೇ ನಾನಾಕಾಕಾ ದಾದಾನಿಗೆ ಕುಸ್ತಿಯ ಎಲ್ಲ ಪೇಚುಗಳನ್ನೂ ಕಲಿಸಿದ್ದ ಪಾದಳ್ಳಿಯ ತಾಲೀಮುಖಾನೆಯ ವೀರರೆಲ್ಲ ದಾದಾನೆದುರು ಮಣ್ಣುಮುಕ್ಕಿದ್ದರು. ಪಂಜಾಬಿ ಲಾಮಾನಿಗೆ ದಾದಾನೇ ಯೋಗ್ಯ ಗಡಿ ಎಂದು ಅವನ ಸಂಗಡಿಗರು ಗೊತ್ತುಮಾಡಿದ್ದು ಇದೇ ಕಾರಣದಿಂದಲೇ. ಪಾದಳ್ಳಿಯ ಗರಡಿಮನೆಯ ಕೀರ್ತಿ ಈ ಮೊದಲೇ ಸುತ್ತುಮುತ್ತಲಿನ ಪ್ರದೇಶದಲ್ಲಿ ಸಾಕಷ್ಟು ಹಬ್ಬಿತ್ತು. ಇಂದು ದಾದಾ ಆ ಕೀರ್ತಿಧ್ವಜವನ್ನು ಇನ್ನೂ ಎತ್ತರವಾಗಿ ಮೆರೆಸಬೇಕಾಗಿತ್ತು. ಇದೇ ಉಬ್ಬಿನಲ್ಲಿಯೇ ದಾದಾ ತನ್ನ ಸಂಗಡಿಗರೊಡನೆ ಕುಸ್ತಿಯ ಕಣಕ್ಕೆ ಬಂದಿದ್ದ.

ಪ್ರಾರಂಭದಲ್ಲಿ ಒಂದೆರಡು ಸಾಮಾನ್ಯ ಪೈಲವಾನರ ಜೋಡಿ ಕಣಕ್ಕೆ ಇಳಿ ದವು. ಅಲ್ಲಿಯೂ ಪಾದಳ್ಳಿಯ ಗಡಿಯೇ ವಿಜಯ ಸಂಪಾದಿಸಿದ್ದನ್ನು ಕಂಡು ದಾದಾನ ಸಂಗಡಿಗರ ಹರ್ಷ ಮೇರೆದಪ್ಪಿತ್ತು. ತಲೆಯ ಮೇಲಿನ ಪಟಗಾಗಳೆಲ್ಲ ಆಕಾಶದಲ್ಲಿ, ಇವರ ಕೇಕೆಯೊಡನೆ ಹಾರಿದವು. ಪಂದ್ಯದ ಬಯಲಿನಲ್ಲಿಯ ಆನಂದ ಸಾಂಸರ್ಗಿಕವಾಗಿರುತ್ತದೆ. ಇವರೊಡನೇ ಉಳಿದವರೂ ಕೇಕೆಹಾಕಿದರು.

ದಾದಾ ಚಡ್ಡಿ ಏರಿಸುತ್ತಿರುವಾಗಲೇ ಲಾಮಾನ ಗಡಿ ಎದ್ದನೆಂಬ ಗದ್ದಲ ಪ್ರೇಕ್ಷಕರಲ್ಲಿ ಎದ್ದಿತು. ದಾದಾ ನಿಂತಿರುವ ಕಡೆಗೆ ಎಲ್ಲರ ದೃಷ್ಟಿ ಹೊರಳಿತು. ಇನ್ನೂ ಹದಿನೆಂಟರ ಪ್ರಾಯ; ಎಣ್ಣೆಗೆಂಪಿನ ಮುಖದಮೇಲೆ ಎಳಮೀಸೆ ಕಾಡೂ

ಕಾಣದಂತೆ ಮೂಡಿದ್ದವು. ಮುಖದಲ್ಲಿ, ಕಣ್ಣುಗಳ ಚಂಚಲತೆಯಲ್ಲಿ, ತುಟಿಗಳ ಮುಗುಳುನಗೆಯಲ್ಲಿ ಇನ್ನೂ ಹಸುಗೂಸಿನ ಮುಗ್ಧತೆಯಿತ್ತು- ಆದರೆ ದೇಹವೋ ನದಿಯ ದಂಡೆಯುಮೇಲಿನ ಆಲದ ಮರದಂತೆ ಬೀಸಾಗಿ ಬೆಳೆದಿತ್ತು. ಹೆಜ್ಜೆಯೂರಿ ದರೆ ನೆಲ ನಡುಗುವಂತಾಗಬೇಕು. ದೇಹ ಸ್ಥೂಲವಾಗಿರಲಿಲ್ಲ; ಸ್ವಚ್ಛಂದವಾಗಿ ಬೆಳೆದ ಬಿದಿರಿನಂತೆ 'ಸಬುಳಾ'ಗಿತ್ತು. ದಾದಾನ ಸಂಗಡಿಗರು ಅವನನ್ನು ಹೊತ್ತು ತಂದು ಕೇಕೆಹಾಕುತ್ತ ಕುಸ್ತಿಯ ಕಣದಲ್ಲಿ ಇಳಿಸಿದರು. ಲಾಮಾ ಬೆಟ್ಟದಂತೆ ಸ್ಥೂಲಕಾಯದ ಆಳು. ದಾದಾ ಹಾಗೂ ಲಾಮಾ ಎದುರುಬದುರಾಗಿ ನಿಂತಾಗ, ದಾದಾನಂಥ ಪುಡಿಯಾಳು ಲಾಮಾನನ್ನು ಗೆಲ್ಲುವದು ಅಸಾಧ್ಯವೆಂದೇ ಎಲ್ಲರ ಮನವರಿಕೆಯಾಗಿತ್ತು. ಆದರೆ ದಾದಾನ ಕೈಚಳಕದ ಪರಿಚಯವಿದ್ದವರು ಮಾತ್ರ ಈ ಸಮಸಾದ ಜೋಡಿಯನ್ನು ನೋಡಿ ನಿರ್ಣಯದ ಬಗ್ಗೆ ಕಾತರರಾಗಿದ್ದರು.

ಕುಸ್ತಿಯ ಕಣದಲ್ಲಿ ದಾದಾ ಮಿಂಚು ಸುಳಿದಂತೆ, ಲಾಮಾ ಬರುತ್ತಿರುವ ಕಡೆಗೆ ಹಾರಿದನು. ಕಣದ ಮಣ್ಣನ್ನು ಕೈಮೈಗಳಿಗೆ ಸವರಿಕೊಂಡು ಕುಸ್ತಿಯ ಸಂಪ್ರದಾಯದಂತೆ, ಲಾಮಾನ ಕೈ ಜಗ್ಗಿ, ಜೋಲಿಹೊಡೆದು ಸಲಾಮು ಕೊಟ್ಟನು. ಕೈಹಿಡಿದಾಗ ಮಾತ್ರ ಲಾಮಾನಿಗೆ ತಾನು ಅಸಮಬಲ ವೀರನೊಬ್ಬನನ್ನು ಎದುರಿ ಸುತ್ತಿರುವೆನೆಂಬುದರ ಅರಿವಾಯಿತು. ಯಾವಾಗಲೂ ರೇಶಿಮೆಯಂತೆ ಮೃದು ವಾಗಿರುತ್ತಿದ್ದ ದಾದಾನ ಮೈ ಈಗ ಉಕ್ಕಿನಂತೆ ಕಠಿಣವಾಗಿತ್ತು. ಕೈಹಿಡಿದು ನೆಲಕ್ಕೆ ಒಗೆಯುವೆನೆಂಬ ಲಾಮಾನ ಆತ್ಮವಿಶ್ವಾಸ ಮಾಯವಾಯಿತು. ಎಚ್ಚರದಿಂದಲೇ ಕೈಗೆ ಕೈಕೊಡುತ್ತ ಕುಸ್ತಿಗಾರಂಭವಾಯಿತು.

ದಾದಾನ ಕುಸ್ತಿ ವ್ಯರ್ಥ ಶ್ರಮದ್ದಲ್ಲ. ಯಾವುದಾದರೂ ಅಪೂರ್ವವಾದ ಪೇಚನ್ನು ಹಾಕಿ, ಶತ್ರುವನ್ನು ಹಣ್ಣುಮಾಡಿ ಸೋಲಿಸುವದು ಅವನ ವೈಶಿಷ್ಟ್ಯ ವಾಗಿತ್ತು. ಈಗ ಲಾಮಾನನ್ನು ಸೋಲಿಸಲು ಯಾವ ಪೇಚನ್ನು ಹಾಕಬಹುದೆಂದು ಅವನ ಸಂಗಡಿಗರು ತಲೆತುರಿಸಿಕೊಳ್ಳುತ್ತಿರುವಾಗ, ಕಣದಲ್ಲಿ ನಿಂತ ದಾದಾ ಒಮ್ಮೆಲೆ ನೆಲಕ್ಕೆ ಕುಳಿತವನೇ ಲಾಮಾನ ಎರಡೂ ಕಾಲುಗಳ ಮಧ್ಯದಲ್ಲಿ ತಲೆ ಹಾಕಿದ್ದು ಕಂಡಿತು. ಲಾಮಾ ಮೈಮರೆತು ನಿಂತಿದ್ದರೆ, ಕ್ಷಣಾರ್ಧದಲ್ಲಿ ದಾದಾನ ಪೇಚಿಗೆ ಬಲಿಬೀಳಬಹುದಾಗಿತ್ತು. ಲಾಮಾ ನುರಿತ ಜಟ್ಟಿ. ಆ ಬೆಟ್ಟದಂಥ ದೇಹದಲ್ಲಿ ಎಲ್ಲಿಯ ಶಕ್ತಿ ಸಂಚರಿಸಿತ್ತೋ, ಮಿಂಚಿನ ವೇಗದಿಂದ ಬಾಗಿದವನೇ ಅವನ ಕಾಲು ಗಳಿಗೆ ಕೈಹಾಕಿದ್ದನು. ಇದರಿಂದ ಮೇಲಕ್ಕೇಳಲು ದಾದಾನಿಗೆ ಸಾಧ್ಯವಾಗಲಿಲ್ಲ.

ಲಾಮಾ ತನ್ನ ತೊಡೆಗಳ ನಡುವೆ ದಾದಾನ ತಲೆಯನ್ನು ಅದುಮಿ ಕುಳಿತನು.

ಉಸಿರು ಬಿಗಿಹಿಡಿದು ನೋಡುತ್ತಿದ್ದ ಪ್ರೇಕ್ಷಕರು ಈ ಪೇಚುಗಳಿಂದ ಅಪ್ರತಿಭರಾದರು. ತನ್ನ ಭಾರದಿಂದ ದಾದಾ ಉಸಿರುಗಟ್ಟಿ ಶರಣಾಗತನಾಗುವನೆಂಬ ಬಿಂಕದಿಂದ ಲಾಮಾ ತನ್ನ ಹಿಡಿತವನ್ನು ಬಿಗಿಪಡಿಸಿ, ಸುತ್ತಲೂ ನೋಡಿ ನಗೆ ಬೀರಿದ. ಆದರೆ ದಾದಾನಿಗೆ ಇದೇನೂ ಅನಿರೀಕ್ಷಿತವಾಗಿರಲಿಲ್ಲ. ನುರಿತ ಈಸುಗಾರ ನೀರಲ್ಲಿ ಮುಳುಗಿದಂತೆ, ಒಂದು ನಿಮಿಷ ಸ್ವಸ್ಥವಾಗಿ ಕುಳಿತಲ್ಲಿಯೇ ಕುಳಿತು, ಒಮ್ಮೆಲೇ ತನ್ನ ಕೈಗಳೆರಡನ್ನೂ ಲಾಮಾನ ತೊಡೆಗಳಿಂದ ಹೊರತೆಗೆದು ಅವನ ಎರಡೂ ಕೈಗಳು ತನ್ನ ತಕ್ಕೆಯಲ್ಲಿ ಬರುವಂತೆ ತೆಕ್ಕೆಹಾಯ್ದುದ್ದೆ ತಡ, ಅವನ ಕಾಲುಗಳು ಮುಕ್ತವಾದವು. ಕ್ಷಣದಲ್ಲಿ ದಾದಾ ತಲೆಯನ್ನು ನೆಲಕ್ಕೂರಿ ನಿಂತುಬಿಟ್ಟನು. ಲಾಮಾನ ದೇಹ ದೊಪ್ಪನೆ ನೆಲಕ್ಕೆ ಅಂಗಾತ ಅಪ್ಪಳಿಸಿತು. ದಾದಾ ಸಡ್ಡು ಹೊಡೆದು ಆಳಾಗಿ ನಿಂತು, ಎರಡೂ ಕೈ ಮೇಲಕ್ಕೆತ್ತಿ, ತಾನು ಗೆದ್ದೆನೆಂದು ಹಾರಿ ತನ್ನ ಸ್ಥಳದತ್ತ ಸಾಗಿದನು. ಕಣವೆಲ್ಲ ಪ್ರೇಕ್ಷಕರ ಹರ್ಷೋದ್ಗಾರಗಳಿಂದ ದುಮುದುಮಿಸಿತು. ಇದೇ ಗದ್ದಲದಲ್ಲಿಯೇ ಲಾಮಾ ಹಿಂದಿನಿಂದ ಬಂದು ದಾದಾನ ಚಡ್ಡಿಯಲ್ಲಿ ಕೈಹಾಕಿಹಿಡಿದು ಟಾಂಗ ಹಾಕಲು ಪ್ರಯತ್ನಿಸಿದ್ದೇ ತಡ, ಕುಸ್ತಿಯ ಕಣದಲ್ಲೆಲ್ಲ ಸಮುದ್ರಕ್ಕೆ ಉಕ್ಕು ಬಂದಂತೆ ಕೋಲಾಹಲವೆದ್ದಿತು.

ಲಾಮಾ ಬಿದ್ದವನು. ಅವನಿಗೆ ಪುನಃ ಕುಸ್ತಿ ಹಿಡಿಯಲು ಅಧಿಕಾರವೇ ಇಲ್ಲ. ಎಂದು ಜನರ ಹಿಂಡು ಕೂಗಿತು. ದಾದಾನ ಸಂಗಡಿಗರು ಕಣದಲ್ಲಿ ನುಗ್ಗಿಬಂದು, ದಾದಾನನ್ನು ಹೊತ್ತುಕೊಂಡು ಕೇಕೆಹಾಕುತ್ತ ಕಣದ ಸುತ್ತಲೂ ಪ್ರದಕ್ಷಿಣೆ ಹಾಕಲು ಪ್ರಾರಂಭಿಸಿದರು. ಅಷ್ಟರಲ್ಲಿ ಲಾಮಾನ ಕಡೆಯವರು ಬಂದು ಇನ್ನೂ ಕುಸ್ತಿ ಮುಗಿದೇ ಇಲ್ಲವೆಂದು ವಾದಿಸಿದರು. ದಾದಾ ಇನ್ನೊಬ್ಬನ ಹೆಗಲು ಮೇಲಿದ್ದವನು ಕೆಳಗೆ ಹಾರಿಬಂದ. ಗುಲಾಬಿ ಬಣ್ಣದ ಪಟಕಾ ಸುತ್ತಿದ ಲಾಮಾನ ಅನುಯಾಯಿಯೊಬ್ಬ ಜಗಳ ತೆಗೆದ. "ಲಾಮಾ ನಾಹೀ ಪಡಲಾ. ತ್ಯಾಚೀ ಪಾಠ ಜಮಿನಿಲಾ ಲಾಗಲಿನಾಹಿ. ಪುನಃ ಕುಸ್ತೀ ವ್ಹಾಯಲಾಚ ಪಾಹಿಜೆ" ಎಂದು ಮರಾಠಿಯಲ್ಲಿ ಒದರಾಡಹತ್ತಿದ.

"ದಾದಾ ಅಲಕ್ಶಸ್ಸ ಜಿಗಿದಾಗ, ಲಾಮಾ ಅಂಗಾತ ಬಿದ್ದದ್ದು ಇದS ಕಣ್ಣ ನೋಡೇತಿ. ಪತ್ತ ಇಲ್ಲಂತಾನಲ್ಲಲೇ? ಹೋಗೋ ಜೋಕುಮಾರಾ ಹೋಗು" ಎಂದು ದಾದಾನ ಸಂಗಡಿಗರೆಲ್ಲ ಸಿಟ್ಟಿಗೆದ್ದು ಒಮ್ಮೆಲೆ ಕೂಗಿದರು.

ಈ ವಾದವಿವಾದ ವಿಕೋಪಕ್ಕೆ ಹೋಗಿ ಕುಸ್ತಿಯು ಎರಡು ಗಡಿಗಳ ಪರ ವಾಗಿ ಪ್ರೇಕ್ಷಕರ ಸಮೂಹದಲ್ಲಿ ಎರಡು ತಂಡಗಳಾಗಿ, ಬಾಯಿಗೆ ಬಾಯಿ ಹತ್ತಿ, ಕೈಗೆ ಕೈಹತ್ತಿತು. ಕುಸ್ತಿ ಮುಗಿದಿಲ್ಲ ಅನ್ನುವವರ ಮೇಲೆ ಪಾದಳ್ಳಿಯ ಗರಡಿ ಯಾಳುಗಳು ಏರಿಹೋಗಿ ಕೆಲವರನ್ನು ಥಳಿಸಿದರು. ಕೆಲವರ ತಲೆಯೊಡೆದವು. ಕಣದಲ್ಲೆಲ್ಲ ಹಾಹಾಕಾರ ವ್ಯಾಪಿಸಿತು. ಪರಿಸ್ಥಿತಿ ಕೈಮೀರಿ ಹೋದದ್ದರಿಂದ ಸ್ಥಳೀಯ ವ್ಯವಸ್ಥಾಪಕರು ಕುಸ್ತಿಯ ಕಾರ್ಯಕ್ರಮ ಅಲ್ಲಿಗೇ ಮುಗಿಯಿತೆಂದು ಸಾರಿದರು. ಪೋಲೀಸರು ಪಾದಳ್ಳಿಯ ಜನರನ್ನು ಹಿಡಿಯಲು ಶೋಧ ನಡೆಸಿದರು.

ಕುಸ್ತಿಯ ಕಣದಲ್ಲಿ ಎದ್ದ ಗಲಭೆಯಿಂದ ಪಾದಳ್ಳಿಯ ಗಡಿಗಳು ತಮಗೆ ಸಲ್ಲತಕ್ಕ 'ಬಿದಾಗಿ'ಯ ಆಸೆಯನ್ನೂ ತೊರೆದು ದಾರಿ ಸಿಕ್ಕತ್ತ ಕಾಲಿಗೆ ಬುದ್ಧಿ ಹೇಳಿದರು. ಅಷ್ಟರಲ್ಲಿ ಹೊತ್ತು ಮುಳುಗಿದ್ದರಿಂದ ಅವರಿಗೆ ಪಾರಾಗಲು ಅನು ಕೂಲವೂ ಆಯಿತು. ಓಡಿ ಓಡಿ ನಾಲ್ಕಾರು ಮೈಲು ದಾರಿ ಕ್ರಮಿಸಿದ ಮೇಲೆ ದಾರಿಯಲ್ಲಿ ಒಂದು ಹಳ್ಳದಲ್ಲಿ ನೀರು ಕುಡಿದು, ವಿಶ್ರಾಂತಿ ಪಡೆಯಲು ಕುಳಿತರು. ಒಬ್ಬೊಬ್ಬರೆ ಪಾದಳ್ಳಿಯ ಗರಡಿಯಾಳುಗಳು ಅಲ್ಲಿಗೆ ಬಂದು ಸೇರಿದರು. ಆದರೆ ದಾದಾ ಮಾತ್ರ ಇನ್ನೂ ಬಂದಿರಲಿಲ್ಲ. ಪೋಲೀಸರು ದಾದಾನನ್ನು ಹಿಡಿದಿರ ಬಹುದೇ ಎಂಬ ಚಿಂತೆ ಅವನ ಸಂಗಡಿಗರನ್ನು ಆವರಿಸಿತು. ಅವನಿಲ್ಲದೆ ಊರಿಗೆ ಹೋಗಿ ಮುಖ ತೋರಿಸುವದಾದರೂ ಹೇಗೆ ಎಂದುಕೊಂಡು ದಾರಿಗೆ ಹೊಂದಿ ಕೊಂಡಿದ್ದ ಒಂದು ಒಡ್ಡಿನ ಮರೆಯಲ್ಲಿ ಅವಿತುಕೊಂಡು ದಾದಾನ ದಾರಿ ಕಾಯುತ್ತ ಸರಿರಾತ್ರಿಯ ವರೆಗೆ ವೇಳೆ ಕಳೆದರು.

ಬಯಲು ಸೀಮೆಯಲ್ಲಿ ಕತ್ತಲೆ ಭಯಾನಕವಾಗಿಯೇ ಬಿದ್ದಿತ್ತು. ಹೊಲ ಗಳಲ್ಲಿ, ಯಾರದೋ ಮುಗಿಯದ ಕತೆಯೊಂದನ್ನು ಬೇಸರದಿಂದ ಕೇಳುತ್ತಿರುವಂತೆ ನೆಲಗುಮ್ಮಗಳು 'ಹುಂ ಹೂಂ' ಎಂದು ಧ್ವನಿಮಾಡುತ್ತಿದ್ದವು. ಅಷ್ಟರಲ್ಲಿ ದೂರ ದಿಂದ ಗಾಡಿಯೊಂದು ಬರುತ್ತಿರುವ ಸಪ್ಪಳ ಕೇಳಿತು. ಒಡ್ಡಿನ ಮರೆಯಲ್ಲಿ ಅವಿತು ಕುಳಿತು ತಳವಾರ ಕೆಂಚ, ಹಾಗೂ ಪಿಂಜಾರ ಲಾಡ ಇವರಿಬ್ಬರಿಗೂ ತಡೆಯಲಾಗ ಲಿಲ್ಲ. "ಗಾಡಿ ಬರೂ ಹಾಂಗ ಕಾಣತೈತ್ರೀಲೇ" ಎಂದು ಪಿಸುದನಿಯಲ್ಲಿ ಸಂಗಡಿಗರಿಗೆ ಉಸುರಿದರು.

"ಯಾಕರಲೆ, ಕುಸ್ತಿಗೆ ಬಂದಾಗ ಸಿಗದ ದುಡ್ಡು, ಹಾದಿ ಬಡದು ಸುಲ ಕೊಂಡು ಹೋಗೂ ಇಚಾರ ಐತೇನು?" ಎಂದು ಅಂಬಿಗರ ಬಸಪ್ಪ ತನ್ನ ಸಂಶ

ಯವನ್ನು ವ್ಯಕ್ತಗೊಳಿಸಿದ.

"ಪಾದಳ್ಳಿ ಭೂವ್ಯಾಗ ಅದೇನಂತ ತಿಳದೀ ಏನಲೇ ಮಳ್ಳ? ನಮ್ಮನ್ನು ಹುಡುಕಲಾಕ ಪೋಲೀಸರು ಗಾಡಿ ಹೊಡಿಕೊಂಡು ಬರತಿದ್ದಾರಾದೀತು. ಸತ್ತವ ರ್‍ಹಾಂಗ ಸುಮಾಕ ಬಿದ್ದುಕೊಂಡು ತಲಿ ಉಳಿಸಿಕೊಳ್ರಿ" ಎಂದು ಅಂಗಡಿ ಶಿವರುದ್ರ ಬುದ್ದಿ ಹೇಳಿದ.

ಕ್ಷಣಹೊತ್ತು ಯಾರೂ ಮಾತಾಡಲಿಲ್ಲ. ಗಾಡಿಯ ಸಪ್ಪಳ ಬರಬರುತ್ತ ಸಮೀಪದಲ್ಲಿಯೇ ಕೇಳಹತ್ತಿತು. ಅಂಬಿಗರ ಬಸಪ್ಪ ಬಾಪೂಸಾಹೇಬನ ಹುಲಿ ಬ್ಯಾಟಿ ಹಳಬರಲ್ಲಿಯೇ ತೀರ ಗಟ್ಟಿಗ. ಹಾದಿಬಡಿಯುವದು ಕೇವಲ ಅವನ ಕಸಬಾಗಿರದೆ ಚಟವೂ ಆಗಿತ್ತು. ಸರಿರಾತ್ರಿ; ಅರಣ್ಯ; ಸಮೀಪದಲ್ಲಿ ಯಾರೂ ಇರ ಲಿಲ್ಲ; ಜನಸಂಚಾರ ನಿಂತು ಬಹಳ ಹೊತ್ತಾಗಿತ್ತು. ಅನಾಯಾಸವಾಗಿ ಗಾಡಿ ಬಂದಿರುವಾಗ ಅದನ್ನು ತಡೆದು "ಯಾರು? ಏನು?" ಎಂದು ವಿಚಾರಿಸಿ, ಅಳವಿನಲ್ಲಿ ದ್ದರೆ ಒಂದೇಟು ಕೊಟ್ಟು ಹಣ ಏಕೆ ಸಂಪಾದಿಸಬಾರದು? ಜೇಳಗಾಗುವದರಲ್ಲಿ ಧನಿಕರಾಗುವ ದೈವ ತನ್ನಮ್ಮದಿದ್ದರೆ, ಏಕೆ ಬಿಡಬೇಕು? ಅಂಬಿಗರ ಬಸಪ್ಪನಿಗೆ ಮೋಹವನ್ನು ತಡೆಯುವದಾಗಲಿಲ್ಲ.

"ಗಾಡಿ ಅಟೂಕಿನಾಗಃ ಬಂಧಾಂಗಾತ್ರಲೇ! ನಾ ಹೋಗಿ ಗಾಡೀ ತರಬಿ ತಂಬಾಕ ಕೇಳಲೇನು. ಪೋಲೀಸರ ಗಾಡಿ ಇದ್ದರ ಹೊಳ್ಳಿ ಬರತೀನಿ. ಮತ್ತ ಮನಿ ಮಾರಗಿ ಗಾಡಿ ಇದ್ದರ, ತಂಬಾಕ ಕೊಟ್ಟರೂ ಸೈ, ಕೊಡದಿದ್ದರೂ ಸೈ! ನೀವೆಲ್ಲಾ ಬಂದು ಗಾಡಿಗೆ ಸುತ್ತ ಹಾಕಿದರಾತಪಾ. ಇದ್ದದ್ದೆಲ್ಲಾ ಕೊಟ್ಟು ಹೋಗತಾರು. ನಾವೀಟು ಜನಾ ಧುತ್ತ್ಯಾನ್ಹಾಂಗ ಎದರಿಗೆ ನಿಂತಾಗ, ಅವರ ಎದೀ ಒಡೀದಿದ್ರ ನನ್ನ ಹೆಸರು ಬಸ್ಯಾನಃ ಅಲ್ಲ" ಎಂದಿಷ್ಟು ಹೇಳಿದವನೇ ರುಮಾಲನ್ನು ಬಗಲಲ್ಲಿ ಹಿಡಿದುಕೊಂಡು, ಒಡ್ಡು ಇಳಿದು ಗಾಡಿಯ ಎದುರಿಗೆ ಹೊರಟ.

ಗಾಡಿ ಸಮೀಪಕ್ಕೆ ಬಂದಂತೆ ಬಸಪ್ಪ ಕೆಮ್ಮಿದ. ಎದುರಿಗೆ ಮನುಷ್ಯ ಬಂದದ್ದು ನೋಡಿ ಎತ್ತುಗಳು ಬೆದರಿ ಅಡ್ಡ ಎಳೆಯಲು, ಗಾಡಿ ಹೊಡೆಯುವವ "ಯಾರ ವರು?" ಎಂದು ಕೂಗಿದ.

ಬಸಪ್ಪ ಗಾಡಿಯ ಬದಿಗೆ ಬಂದು "ಓಟು ತಂಬಾಕ ಇದ್ದರ ಕೊಡರಿ" ಎಂದು ವಿನಯದಿಂದ ಕೇಳಿದ.

"ಎಲ್ಲೀ ತಂಬಾಕಲೇ? ಯಾವ್ನೂರಾವನ, ಸರಿರಾತ್ರ್ಯಾಗ ತಂಬಾಕ ಕೇಳ

ತಾನು? ಮುಂದ ಬಿಡಲೇ ಗಾಡಿ," ಎಂದು ಒಳಗೆ ಕುಳಿತ ಯಜಮಾನ ಕೂಗಿಕೊಂಡ.

ಈ ಅವೇಳೆಯಲ್ಲಿ ತಂಬಾಕ ಕೇಳುವದು ಒಳ್ಳೆಯ ಲಕ್ಷಣವಲ್ಲ ಎಂದು ಗಾಡಿ ಹೊಡೆಯುವವನಿಗೆ ಮೊದಲೇ ಗೊತ್ತಾಗಿತ್ತು. ಕೂಡಲೇ ಬಾರಕೋಲಿನ ಏಟು ಕೊಟ್ಟು ಎತ್ತುಗಳನ್ನು ಓಡಿಸಿದ. ಬಸಪ್ಪ ಗಾಡಿಯಲ್ಲಿ ಇಣುಕಿ ನೋಡಿದಾಗ ಕಂಡ ದೃಶ್ಯದಿಂದಲೇ ಅವನು ಕಲ್ಪನಾಶಕ್ತಿಯಿಂದ ವಸ್ತುಸ್ಥಿತಿಯನ್ನು ಊಹಿಸಿದ. ಗಾಡಿಯಲ್ಲಿ ಒಬ್ಬ ಮುದುಕ, ಒಬ್ಬಿಬ್ಬರು ಹೆಣ್ಣುಮಕ್ಕಳು ಮಾತ್ರ ಇದ್ದರು. ಹೆಣ್ಣುಮಕ್ಕಳಲ್ಲಿ ಒಬ್ಬಳು ನಡುವಯಸ್ಸಿನ ಮುತ್ತೈದೆ. ಅವಳ ಹತ್ತರ ಕರೆ ಹರಿಯದ ಚಂದ್ರಕಾಳಿ ಸೀರೆಯನ್ನುಟ್ಟ ಒಬ್ಬ ತರುಣಿ ಕುಳಿತಿದ್ದಳು. ಮೊದಲಗಿತ್ತಿಯನ್ನು ಮನೆ ತುಂಬಿಸಲು ಕರೆದೊಯ್ಯುವ ಗಾಡಿಯೆಂದು ಬಸಪ್ಪ ತರ್ಕ ಕಟ್ಟಿಯೇ ಬಿಟ್ಟ. ತನ್ನ ಪರಿವಾರದವರಿಗೆ ಮೆಲ್ಲಗೆ ಸಿಳ್ಳುಹಾಕಿ ಸೂಚನೆ ಕೊಟ್ಟ. ಅವರು ಒಡ್ಡಿನಿಂದ ಇಳಿದು ಬರುವಷ್ಟರಲ್ಲಿ ಗಾಡಿ ಅವರಿದ್ದ ಸ್ಥಳಕ್ಕೇ ಬಂದಿತು.

ಬಸಪ್ಪ ಹಿಂದಿನಿಂದ ಓಡುತ್ತ ಗಾಡಿಯ ಸಮೀಪಕ್ಕೆ ಬಂದ. ಕ್ಷಣದಲ್ಲಿ ಗಾಡಿಗೆ ಮುತ್ತಿಗೆ ಹಾಕಿದರು. ಎತ್ತುಗಳು ಓಡದೆ ನಿಂತು ಬಿಟ್ಟವು. ಒಳಗಿದ್ದವರಿಗೆ ನಾಲಿಗೆಯ ದ್ರವವಾರಿ ಮಾತಾಡಲು ಆಗಲೇ ಇಲ್ಲ. ಗಾಡಿಯ ಯಜಮಾನ ನಡುನಡುಗುತ್ತ "ಬಡವರೋ ಎಪ್ಪಾ ನಾವು. ನಮ್ಮಲ್ಲೇನೂ ಇಲ್ಲ. ಇಗಾ ಈ ಬುತ್ತೀಗಂಟು ಒಂದೈತಿ" ಎಂದು ತಡವರಿಸುತ್ತ ನುಡಿಯಬೇಕಾದರೆ ನಾಲ್ಕು ಸಲ ಕೆಮ್ಮಿದ.

ಪಿಂಜಾರ ಲಾಡ "ಬುತ್ತಿ ಗಂಟು ತತಾ ಇಲ್ಲೆ" ಎಂದು ಟಬರಿನಿಂದ ನುಡಿದ.

ಮುದುಕ ಗಂಟನ್ನು ಕೊಡಲು ಹೊರಗೆ ಕೈಚಾಚಿದೊಡನೆ, ಬಸಪ್ಪ ಆ ಕೈ ಹಿಡಿದು "ಜೀವ ಬೇಕಾಗಿದ್ದರ, ಆ ಹೆಣಮಗಳ ಕೊಳ್ಳಾಗಿನ ಸರಾ ಉಚ್ಚಿ ತಾ" ಎಂದು ಆಜ್ಞೆ ಮಾಡಿದ.

ಭಯದಿಂದ ಗಾಡಿಗೆ ಗಾಡಿಯೇ ನಡುಗಿತು. ಹೆಣ್ಣುಮಕ್ಕಳು ಮುಚ್ಛೆ ಬಂದಂತಾದರು. ಗಾಡಿಹೊಡೆಯುವವನೂ ಹೆದರಿಕೆಯಿಂದ ಮುದ್ದೆಯಾಗಿದ್ದ. ಆದರೆ ಬಸಪ್ಪನಿಗೇನೂ ಕನಿಕರ ಬರಲಿಲ್ಲ.

"ಹಂ ಗಡಾನಃ ಏನಿದ್ದದ್ದೆಲ್ಲಾ ತೆಗದುಕೊಡು" ಎಂದು ಮತ್ತೆ ಗುಡುಗಿದ. ಒಂದು ನಿಮಿಷ ಹಾಗೆಯೇ ಕಳೆದಿರಬೇಕು. ಆ ಅವಧಿಯಲ್ಲಿ ಭಯ ಹೆಪ್ಪುಗಟ್ಟಿದಂತಾಗಿತ್ತು. ಎತ್ತುಗಳು ಕೂಡ ಸುಮ್ಮನೆ ನಿಂತಿದ್ದವು.

ಅಷ್ಟರಲ್ಲಿ ಹಿಂದಿನಿಂದ "ಯಾರಲೀ ಅದು, ಬಂದ್ನಿ ತಡೀರಿ" ಎಂದು ಯಾರೋ ಕೂಗಿದ್ದು ಕೇಳಿಸಿತು. ಕಾಲ ಕೂಡ ತಡೆದಂತಿದ್ದ, ಆ ಸಮಯಕ್ಕೆ ಮತ್ತೆ ಚಾಲನೆ ದೊರೆತಿತು.

ಬಸಪ್ಪ ಬೆಚ್ಚಿ ಹೊರಳಿ ನೋಡಿದ. ಅವನಿಗೆ ದನಿಯ ಗುರುತು ಹತ್ತಿತೇನೋ! "ಪೀಡಾ ಇನ್ನೊಂದು ಗಳಿಗಿ ತಡದು ಬರಬಾರದಿತ್ತs!" ಎಂದು ಚಕಿತನಾಗಿಯೇ ತನ್ನೊಳಗೇ ನುಡಿದು ಹಿಂದೆ ಸರಿದ. ಉಳಿದವರೂ ಹಿಂದೆ ಸರಿದರು. ಪಿಂಜಾರ ಲಾಡ ಮಾತ್ರ ಬುತ್ತಿಗಂಟು ತೆಗೆದುಕೊಂಡು ಒಡ್ಡನ್ನೇರಿದ.

ಇದೇ ಸಮಯವೆಂದು ಗಾಡಿ ಹೊಡೆಯುವವನು ಎತ್ತುಗಳನ್ನು ಓಡಿಸಿಬಿಟ್ಟ. ಗಾಡಿ ಮುಂದೆ ಓಡಿಹೋಯಿತು. ಕೆಲ ನಿಮಿಷಗಳಲ್ಲಿಯೇ ದಾದಾ ಓಡುತ್ತ ಬಂದ. ತೇಕುತ್ತ "ಗಾಡಿ ಎಲ್ಲೈತಿ?" ಎಂದು ಬಸಪ್ಪನನ್ನು ಕೇಳಿದ.

"ಗಾಡಿ? ಎಲ್ಲೀ ಗಾಡಿ?" ಎಂದು ಬಸಪ್ಪ ಮರುಸವಾಲು ಹಾಕಿದರೂ ನಾಲಿಗೆ ಸವರಿಕೊಂಡ.

"ಲೇ ಸುಳ್ಳ ಹೇಳಿದರ ಒಬ್ಬೊಬ್ಬರ ಚಮುಟಾ ಬೆಳಗೇನು. ಇದs ದಾರ್‍ಯಾಗ ಗಾಡಿ ಹಾದು ಹೋಗಲಿಲ್ಲs? ಏನೂ ಕಾಣದವರ್‍ಹಾಂಗ ಹೇಳತೀರಲ್ಲಲೇ? ನಾ ಅದs ಗಾಡ್ಯಾಗs ಇಲ್ಲಿ ಮಟಾ ಬಂದೆ. ಹಳ್ಳದಾಗ ಇಳದು ಬೈಲಕಡೆಗೆ ಹೋಗಿ ಬರೂದರಾಗ ಜರಾ ಫರಕ ಆತು." ಎಂದು ದಾದಾ ದುರದುರನೆ ಎಲ್ಲರನ್ನೂ ನೋಡಿದ.

"ಎಣ್ಣಾ ಗಾಡಿ ಬಂದಿತ್ತು. ಇಗಾ ಇಲ್ಲೇ ಕೈಗಲ್ಲ ಅಳತೀ ಹೋಗಿರಬೇಕು; ದಿನ್ನಿ ವಾರಿ ಆಗೇತಿ. ಅವರs ಈ ಬುತ್ತಿಗಂಟು ಕೊಟ್ಟದ್ದು. ಒಳೇಸಂಪನ್ನರು ಕಾಣತಾರು." ಎಂದು ಲಾಡ ನಿಜ ಸಂಗತಿಯನ್ನರುಹಿದ.

"ಗಾಡೀ ತರಬಿದ್ದರಿ ಹೌದಲ್ಲೊ? ನಿಮ್ಮ ಗುಣಾ ಎಲ್ಲಿ ಹೋದರೂ ಯಾಕ ಬಿಟ್ಟೀರಲೀ? ಏನೇನು ಕಿತಕೊಂಡ್ರಿ ಹೇಳ್ರಿ. ಇಲ್ಲಾಂದ್ರ ಪಾಡಾಗಾಕಿಲ್ಲ." ಎಂದು ದಾದಾ ಜಬರಿಸಿದ.

"ಏನಿಲ್ಲ ಏಳಲೀ! ನಮ್ಮನ್ನ ನೋಡಿ ನಡಗಾಕs ಹತ್ತಿದ ಮುದುಕ. ಅಂಟರಾಗ ಬಂದ ಬಡದಿ. ಗಾಡೀ ಹಾಗs ಬಿಟ್ಟವಿ. ಹಸದು ಬಾಯಿಬಿಡತಿದ್ದಾ ಅಂತ ಲಾಡ್ಯಾ ಬುತ್ತಿಗಂಟ ಇಸಕೊಂಡ. ಮತ್ತ ಅದs ಮುದುಕನs ಕೈಎತ್ತಿ ಕೊಟ್ಟಾನಲೀ" ಎಂದು ಬಸಪ್ಪ ಜೇಷ್ಟೆಯ ಮೇಲೆ ಹಾಕಿ ಹೇಳಿದ.

“ಈ ಘಂಟ ಹಚ್ಚಬ್ಯಾಡ್ರೆಲೇ! ಆ ಮುದಕ ಯಾರಂತ ತಿಳದೀರಿ. ನಮ್ಮ ಬಾಪೂಸಾಬ ಜಾಗೀರದಾರರ ಮಾವ, ಸೊಸಿನ್ನ ಕರಕೊಂಡ ಮನಿ ತುಂಬಿಸಿಕೊಳ್ಳ ಲಾಕ ಹೊಂಟಾನು. ನಾಳಿ ಬೆಳಗಾದರ ಅಮಾಸಿ. ಮುಂದ ದಿನಾ ಇಲ್ಲ; ಇಂದಕ ಮೂರ್ತ ಇತ್ತು. ಕುಸ್ತಿ ನೋಡದಲೇನ ಹೊಂಡತಿದ್ದರಂತ. ನನ್ನ ಕುಸ್ತಿ ಅಂತ ಕೇಳಾಣಾ ಕಣಕ್ಕ ಬಂದಾರು. ಕುಸ್ತಿ ನೋಡಿ ಕೊಳ್ಳ ಕಟ್ಟಬೇಕನ್ನೂದರಾಗ ನ್ಯಾಯ ಬಿತ್ತು. ಆಗ ಇದ ಯಶವಂತರಾಯನು ಹುಡಿಕ್ಯಾಡಿಕೊಂಡು ಬಂದು ರಾಜೇಸಾಹೇಬರ್ನ ಭೆಟ್ಟಿ ಮಾಡಿಸಿ ನೂರು ರುಪಾಯಿ ಬಿದಾಗಿ ಕೊಡಿಸಿದ. ಅವರ ಗಾಡ್ಯಾಗ ಬಂದು; ಇದ ಹಳ್ಳಕ್ಕ ಇಳದಿದ್ನಿ. ನಾ ಬರೂದರಾಗ, ಈಟೆಲ್ಲ ಗೊಂದಲಾ ಮಾಡಿ ಪಾದಳ್ಳಿ ಮಾನಾ ಕಳದರಲ್ಲಲೇ” ಎಂದ ದಾದಾ.

“ಬಾಪೂಸಾಬರ ಮಾವ ಅಂದರ ಮಾತ ಮುಗೀತಲ್ಲ. ಇನ್ನು ಊರಾಗ ಮಕಾ ತೋರಸಥಾಂಗಾತು ಬಾಳೇವು.” ಎಂದು ಬಸಪ್ಪ ನಿಟ್ಟುಸಿರು ಬಿಟ್ಟ.

“ಜತ್ತಿ ಪೋಲೀಸರು ನಿಮ್ಮನ್ನೆಲ್ಲ ಹಿಡಿದು ಸಾಲ ಬೇಡೀ ಹಾಕತಿದ್ರು ಬಾ. ಯಶವಂತರಾಯನ ಪುಣ್ಯೇದಿಂದ ಪಾರಾಗಿ ಬಂದಿರಿ. ಅವರ ಮ್ಯಾಲೇ ಕೈಮಾಡಿ ಭಂಡರಾದ್ರ್ಯಲ್ಲಲೇ. ನಾ ಈಗ ಓಡಿ ಹೋಗಿ ಅವರ ಕಾಲ ಬೀಳಬೇಕಾತು.” ಎಂದ ದಾದಾ.

“ಗೆಣ್ಯಾರ ಮರ್ಯಾದಿ ಕಳದು ಜೇಲಿಗೆ ಕಳಸೂ ಮನಸ್ಸಿದ್ದರ ಹೇಳು”ಎಂದು ಬಸಪ್ಪ ಮತ್ತೆ ಅಡ್ಡ ಹೂಡಿದ.

“ಇಂತಾ ಮಾತ ಯಾಕ್ರಲೇ? ಯಶವಂತರಾಯನ ಊರು ಇಲ್ಲೀದ ಎಡು ಮೈಲಾಗತೈತಿ. ಆ ಗಿಡಾ ಕಾಣತಾವಲ್ಲ ಅದ ಊರು. ಇಂದ ರಾತ್ರಿ ಅಲ್ಲಿ ಮುಕ್ಕಾಮು ಹಾಕಿ ನಾಳಿ ಊಟಾ ತೀರಿಸಿಗೊಂಡು ಹೋಗಂತ ಹೇಳ್ಯಾರು. ಅಲ್ಲೆ ಹೋಗಿ ಎಲ್ಲಾರೂ ಕಾಲ ಬಿದ್ದು ಬರೂಣು.” ಎಂದು ದಾದಾ ಗೆಳೆಯರಿಗೆ ಔತಣ ವಿತ್ತ.

“ಮಾರೀ ಹ್ಯಾಗ ತೋರಸಬೇಕೋ ಮಾರಾಯಾ! ಆಗದ ಮಾತು. ನೀ ಬೇಕಾರ ಬೆಟ್ಯಾಗಿ ಬಾ. ನಮ್ಮ ಸುದ್ದೀನ ತಗೀಬ್ಯಾಡಾ. ನಮ್ಮ ಸುದ್ದಿ ಅವ ರಿಗೆ ಗೊತ್ತಾದರ, ನಾಳೆ ಬಾಪೂಸಾಬ ಊರಾಗ ಇರಗೊಡಾಕಿಲ್ಲ.” ಎಂದು ಲಾಡ ಅಳುತ್ತಲೇ ನುಡಿದ.

“ಆತು ಹಂಗರ, ಗೆಣೆತನ ಹೆಚ್ಚಿಂದು. ನಾ ಯಶವಂತರಾಯನ ಕಡೆ

ಹೊಕ್ಕೇನು. ನೀವು ನಿಮ್ಮ ದಾರಿ ಹಿಡೀರಿ" ಎಂದು ಹೇಳಿ ದಾದಾ ಹೊರಟು ನಿಂತ. ಸಂಗಡಿಗರೆಲ್ಲ ಅವನನ್ನು ಬೀಳ್ಕೊಟ್ಟು, ನಾಳೆ ಬೇಗ ಬಂದು ತಮ್ಮನ್ನು ಸೇರ ಬೇಕೆಂದು ದಾದಾನಿಗೆ ಹೇಳಿ ಹೊರಟರು.

ಸಂಗಡಿಗರನ್ನು ಕಳಿಸಿದ ದಾದಾ ಊರ ಸಮೀಪಕ್ಕೆ ಬಂದಾಗ ನಾಯಿಗಳು ಹುಚ್ಚು ಹಿಡಿದವರಂತೆ ಬೊಗಳುತ್ತಿದ್ದವು. ಆಗಲೇ ಏಳು ತಾಸು ರಾತ್ರಿಯಾಗಿತ್ತು. ಗಾಢವಾದ ಕತ್ತಲೆಯಲ್ಲಿ, ಹಳ್ಳಿ ಮಲಗಿದಂತಿತ್ತು. ನಕ್ಷತ್ರಗಳ ಬೆಳಕಿನಲ್ಲಿ ದಾದಾ ಯಶವಂತರಾಯ ಪಾಟೀಲನ ಮನೆ ಹುಡುಕಿ ಬಾಗಿಲು ಬಡೆದ. ಹೆದರಿಕೆಯಿಂದ ಮುದುಕ ಬೇಗನೆ ಬಾಗಿಲು ತೆರೆಯಲಿಲ್ಲ. ಹತ್ತಾರು ಸಲ ಒದರಿದ ಮೇಲೆ ದಾದಾನ ದನಿಯ ಗುರುತು ಹತ್ತಿ ಬಾಗಿಲು ತೆರೆದ. ದಾದಾ ಒಳಗೆ ಬಂದಾಗ ಸಂತೋಷ ದಿಂದ ಮೈಮರೆತಿದ್ದ ಮುದಕ ಇನ್ನೇನು ಅವನನ್ನು ಅಪ್ಪಿಕೊಳ್ಳುವದೊಂದು ಉಳಿ ದಿತ್ತು. ಸಂಗಡಿಗರೆಲ್ಲಿ ಎಂದು ಮುದುಕ ಕೇಳಿದಾಗ ಅವರು ಭೆಟ್ಟಿಯೇ ಆಗಲಿಲ್ಲ ವೆಂದು ದಾದಾ ಸುಳ್ಳು ಹೇಳಬೇಕಾಯಿತು. ಮುದುಕ ದಾದಾನಿಗೆ ಬಿಸಿ ಹಾಲು ತರಿಸಿಕೊಟ್ಟು, ಒಂದು ಕಂಬಳಿಯನ್ನೊಗೆದು ಮಲಗಲು ಹೇಳಿದ.

ದಾದಾ ಪಡಸಾಲೆಯಲ್ಲಿ ಬಂದು ಮಲಗಿದ. ಗಾಢವಾದ ನಿದ್ರೆ ಹತ್ತಿತು. ಬೆಳಗಿನ ಜಾವ ದಾದಾ ಕೆಟ್ಟದನಿಯಿಂದ "ಕಾಕಾ ಕಾಕಾ" ಎಂದು ಕೂಗಿಕೊಳ್ಳು ತ್ತಿದ್ದ. ಇದನ್ನು ಕೇಳಿ ಯಶವಂತರಾಯರು ಗಾಬರಿಗೊಂಡು ಅವನನ್ನೆಬ್ಬಿಸಿ ಏನಾ ಯಿತೆಂದು ಕೇಳಿದರು.

ದಾದಾನ ಕಣ್ಣು ನೀರು ತುಂಬಿದ್ದವು. ಮುಖವೆಲ್ಲ ಗಾಬರಿಯಿಂದ ತುಂಬಿತ್ತು. ಪಾಟೀಲರನ್ನು ಕಂಡೊಡನೆ ಅವನ ದುಃಖ ಉಕ್ಕಿ ಬಂತು. "ಕನಸಿನ್ಯಾಗ ಒದ ರಿದ್ನಿ ಎಜ್ಜಾ. ಏನೂ ತಿಳಕೋ ಬ್ಯಾಡ್ರಿ" ಎಂದು ಕನಸಿನ ವಿವರವನ್ನು ತಿಳಿಸಲು, ಪಾಟೀಲರು ಆಗ್ರಹ ಪಡಿಸಲು, ದಾದಾ ತನಗೆ ನೆನಪಿದ್ದಷ್ಟು ಹೇಳತೊಡಗಿದ.

"ಎಜ್ಜಾ ಕನಸಿನ್ಯಾಗ, ನಾನು, ನಾನಾಕಾಕಾ ಮತ್ತ ಚಿಮಣಾ ಕೂಡಿ, ಪಂಢರಪುರಕ್ಕ ದಿಂಡೀ ಕೂಡ ಹೊಂಟಿದ್ದಿವಿ. ಬಾಪೂಸಾಬರು ಕುದರಿ ಮ್ಯಾಗ ಮುಂದ ಸಾಗಿದ್ದರು. ದಾರ್ಯಾಗs ಕತ್ತಲಾತು. ಚಿಮಣಾ ಬೈಲಕಡೆಗೆ ಹೋಗಿದ್ದಳು. ನೋಡು ಎಜ್ಜಾ ದೊಡ್ಡ ನಾಗರಹಾವು ಬಂದು ಕಡೀತು. ಚೀರಿದಾಕೀನs ಬಕ ಬಾರಲೇ ಬಿದ್ದಳು. ಬಾಪೂಸಾಬರು ಆಕೀನ್ನ ತಂದು ನಾನಾಕಾಕಾನ ಮುಂದ ಹಾಕಿದರು. ಮುಂದೇನಾತೋ ಏನೋ ನೆಪ್ಪಿಲ್ಲ. ಆಮ್ಯಾಲೆ ನಾನಾಕಾಕಾ ಪುತಳಾ

ಬಾಯಿ ಸಂಗಾಟ ಮದವಿ ನಡದಿತ್ತು. ಹೆಂದರಾ ಹಾಕಿದ್ದರು. ನಾನಾಕಾಕಾ ಕುದರಿ ಮ್ಯಾಗ ಬಂದ. ಅಷ್ಟರಾಗ ರಾಜೋಜಿರಾವ ಸರಕಾರ ಬಂದು, ಹುಲಿಯಾಗಿ ನಾನಾಕಾಕಾನ ಹೊಟ್ಟೀ ಹರದರು. ಆಗs 'ಕಾಕಾ ಕಾಕಾ' ಅಂತ ನಾ ಚೀರಿದ್ದು" ಎಂದು ದಾದಾ ಕೂಸಿನಂತೆ ಅಳಹತ್ತಿದ.

ಯಶವಂತರಾಯರ ಮುಪ್ಪಿನ ಮುಖದ ಮೇಲೆ ಚಿಂತೆ ಮೂಡಿತ್ತು. ಅವರೂ ಕಲಿತವರಲ್ಲ. ಆದರೆ ಅರವತ್ತು ವರ್ಷಗಳ ದೀರ್ಘ ಅನುಭವ ಅವರಿಗೆ ಜೀವನದ ಸುಖದುಃಖಗಳ ಆಳವನ್ನು ತೆರೆದು ತೋರಿಸಿತ್ತು. ದಾದಾನ ಕನಸಿನಲ್ಲಿ ಅವರಿಗೆ ಜೀವದ ಇತಿಹಾಸ ಕಂಡಿತ್ತು.

"ತಮ್ಮಾ ಇದು ಕೆಟ್ಟ ಕನಸು. ನೀ ಊರ ಬಿಡೂವಾಗ ನಿಮ್ಮ ಕಾಕಾಗ ಏನರ ಜಡ್ಡ ಆಗಿತ್ತೇನು?" ಎಂದು ಸಹಾನುಭೂತಿಯಿಂದ ಹೇಳಿದರು.

"ನಾ ಊರು ಬಿಟ್ಟ ಐದ ದಿನಾ ಆತು ಎಜ್ಜಾ. ಬರುವಾಗ ಕಾಕಾ ನೆಟ್ಟಗs ಇದ್ದ. ಕುಸ್ತೀಗೆ ಹೋಗತೀನಿ ಅಂತ ಹೇಳಾಕ ಹೋದರ ಕಡೆ ಕಟ್ಟಿಸಿಗೊಂಡು ಬಾ ತಮ್ಮಾ ಅಂದು ಹರಕಿ ಕೊಟ್ಟ ಕಳಿಸಿದ್ದ." ದಾದಾ ಮಾತಿಗೊಮ್ಮೆ ಬಿಕ್ಕುತ್ತಿದ್ದ.

"ಕಾಕಾನ ಮ್ಯಾಲೆ ಬಾಳ ಜೀವ ಏನ ತಮ್ಮಾ?" ಎಂದು ಪಾಟೀಲರು ಕೇಳುತ್ತಲೆ, ದಾದಾ ಮೈಮರೆತು ಅವರ ತೊಡೆಯ ಮೇಲೆ ತಲೆಯಿಟ್ಟು ಅಳ ಹತ್ತಿದ. "ಏಳ ತಮ್ಮಾ ಹಣಮಂತದೇವರ ಗುಡಿಗೆ ಹೋಗಿ ದೀಪಾ ಹಚ್ಚಿಟ್ಟು ನಮಸ್ಕಾರಾ ಮಾಡಿ ಬಾ" ಎಂದು ಯಶವಂತರಾಯರು ಸಮಾಧಾನ ಮಾಡಿದರು.

ದಾದಾನ ಮನಸ್ಸು ಕಳವಳಗೊಂಡಿತ್ತು. ಗುಡಿಗೆ ಹೋಗಿ, ದೀಪ ಹಚ್ಚಿದ. ಇನ್ನೂ ತಾಸು ರಾತ್ರಿಯಿತ್ತು. ಗುಡಿಯ ಕಟ್ಟೆಯ ತುದಿಗೇ ಬಂದು ಕುಳಿತು ದಾದಾ ನಿಟ್ಟುಸಿರು ಬಿಟ್ಟ.

ತನಗೇ ಅರಿಯದ ಒಂದು ತೀವ್ರ ಆತ್ಮೀಯತೆ ದಾಧಾನ ಕರುಳನ್ನು ಹಿಚು ಕಿತ್ತು. ಕಣ್ಣೆದುರು ನಾನಾಕಾಕಾನ ಭವ್ಯಮೂರ್ತಿ ಬಂದು ನಿಂತಂತಾಯಿತು. ತುಂಬು ಮೀಸೆ, ಹದನಾದ ನೋಟ, ಶಿಲೇದಾರಿಕೆಯ ಬಡಿಗೆ ಇವನ್ನು ನೋಡು ತ್ತಿರುವಂತೆಯೇ, ದಾದಾನ ಬಾಲ್ಯ ಮತ್ತೊಮ್ಮೆ ಮರುಕಳಿಸಿದಂತಾಯಿತು. ತಂದೆ ಲಕ್ಷ್ಮಣನಿಗಿಂತ, ನಾನಾಕಾಕಾನ ಸಲಿಗೆ ದಾದಾನಿಗೆ ಹೆಚ್ಚಾಗಿತ್ತು. ನೆನಪು ಬಂದ ದಾರಿಯಿಂದ ತಿರುಗಿ ನೋಡಿತು. ಈಗ ವಯಸ್ಸಾದ ನಾನಾ ಒಂದು ಕಾಲಕ್ಕೆ ಹರೆ ಯದ ಉತ್ಸಾಹದಿಂದ ಬೀಗುತ್ತಿದ್ದ. ರುಕಮಾಕಾಕೂ ಅಡ್ಡ ಕುಂಕುಮ ಹಚ್ಚಿ

ಕೊಂಡು; ದಿನಾಲು ತನಗೆ ಹಾಲು ಕೊಡುವದನ್ನು ಎಂದೂ ಮರೆಯುತ್ತಿರಲಿಲ್ಲ. ತಾನು ಒಂದು ವರ್ಷದ ಕೂಸಿರುವಾಗಲೇ ತಾಯಿಯನ್ನು ಕಳೆದುಕೊಂಡವನು. ಅಂದಿನಿಂದ ನಾನಾಕಾಕಾನ ಹೆಗಲು, ರುಕಮಾಕಾಕೂನ ತೊಡೆ ಅವನಿಗೆ ಆಶ್ರಯವಾಗಿತ್ತು. ದಾದಾನ ಕಣ್ಣುಗಳಿಗೆ ಮತ್ತೊಮ್ಮೆ ಮಹಾಪೂರ ಬಂದಿತು.

ತಾನು ಕುಸ್ತಿಗಡಿ ಆಗಬೇಕು ಎಂದು ನಾನಾಕಾಕಾನ ಹಿರಿದಾದ ಅಪೇಕ್ಷೆ. ಅದಕ್ಕಾಗಿ ಎಮ್ಮೆ ಕಟ್ಟಿದ್ದ. ದಾದಾ ಎಷ್ಟು ತಿಂದರೂ ಕಡಿಮೆಯಾಗಿತ್ತು. ಚಿಮಣಾ ಹುಟ್ಟಿದಾಗ "ತಂಗಿ ಹುಟ್ಟಿದಳೋ ದಾದಾ. ತಮ್ಮ ಆಗಿದ್ದರ ನಿನ್ನ ಸರಿಜೋಡಿ ಕುಸ್ತಿಗಡಿ ತಯಾರ ಮಾಡತಿದ್ದೆ. ನಿನಗ ಮೇಯಿಸೋದು ಕಡಿಮಿ ಆದೀತು ಅಂತ ದೇವರು ಹಾಗ ಮಾಡಿದ" ಎಂದು ನುಡಿದಿದ್ದ. ನಾನಾಕಾಕಾ ಕೈ ಇಟ್ಟಲ್ಲೆಲ್ಲ ಹೊನ್ನಾಗುತ್ತಿತ್ತು. ಒಳ್ಳೆಯ ವಸ್ತುವನ್ನು ಕಂಡ ಕೂಡಲೆ ಗುರುತಿಸುವ 'ನಜರು' ಅವನಿಗೇ ಮೀಸಲಾಗಿತ್ತು. ಬೀಜಗಾಳಿಸಿಂದ ಹಿಡಿದು, ಒಳ್ಳೆಯ ತಳಿಯ ದನದ ವರೆಗೆ ಅವನ ಆಯ್ಕೆಗೆ ಹಳ್ಳಿಯಲ್ಲಿ ಬೆಲೆಯಿತ್ತು. ಆ ನಾನಾಕಾಕಾನ ಗರಡಿಯಲ್ಲಿ ತಾನು ತಯಾರಾಗಿದ್ದ.

ರುಕಮಾಕಾಕೂ ಸತ್ತ ಮೇಲೆ ನಾನಾಕಾಕಾ ನಮ್ಮ ಮನೆಗೆ ಬರಲಿ ಎಂದು, ದಾದಾ ಹಟ ಹಿಡಿದಿದ್ದ. ಆದರೆ ನಾನಾ ಒಪ್ಪಿರಲಿಲ್ಲ. ಪುತಳಾಬಾಯಿ ವಾಡೆಯಲ್ಲಿ ಬಂದಿರಬೇಕೆಂದು ಎಷ್ಟು ಆಗ್ರಹ ಪಡಿಸಿದರೂ ನಾನಾ ಕೇಳಿರಲಿಲ್ಲ. ಚಿಮಣಾಳ ಜವಾಬ್ದಾರಿ ಈಗ ಸಂಪೂರ್ಣ ಅವನ ತಲೆಯ ಮೇಲಿತ್ತು. ಆವಳ ಲಗ್ನವಾಗುವವರೆಗೆ ಸ್ವತಂತ್ರನಾಗಿ ತನ್ನ ಮನೆಯಲ್ಲಿರಬೇಕು. ಪರದೇಶಿತನದ ಅನುಭವವಾಗದಂತೆ ಅವಳನ್ನು ಸಾಕಬೇಕು. ಅವಳ ತಲೆಯ ಮೇಲೆ ಅಕ್ಕಿಕಾಳು ಬಿದ್ದ ಮರು ದಿನವೇ ದಾದಾನ ಮನೆಗೆ ಹೋಗಿ ಇದ್ದುಬಿಡಬೇಕೆಂದು ಅವನ ಸಂಕಲ್ಪವಾಗಿತ್ತು. ಕೊಲ್ಲಾಪುರಕ್ಕೆ ಹೋಗುವ ಮುಂಪೆಯೂ ಮನಸ್ಸಿಲ್ಲದ ಮನಸ್ಸಿನಿಂದ ಚಿಮಣಾಳನ್ನು ವಾಡೆಯಲ್ಲಿ ಬಿಟ್ಟು ಹೋಗಿದ್ದ. ಮರಳಿ ಬಂದ ಮೇಲೆ ಬೇರೆ ಮನೆ ಹೂಡುವ ವಿಚಾರವೂ ಇತ್ತು. ಆದರೆ ಚಿಮಣಾಳನ್ನು ಬಿಟ್ಟಿರಲು ತನಗಾಗದೆಂದು ಪುತಳಾಬಾಯಿ ಗೋಳಿಟ್ಟಳೆಂದು, ಅನಿವಾರ್ಯವಾಗಿ ನಾನಾ ವಾಡೆಯಲ್ಲಿರಹತ್ತಿದ.

ಈಗೀಗ ನಾನಾಕಾಕಾ ಯಾಕೋ ಬಹಳ ಹಣ್ಣಾಗಿದ್ದಾನೆ. ಮೊದಲಿನ ಉಕ್ಕಿನ ಪಿಂಡ ಶಿಥಿಲವಾಗಿದೆ. ತಾನು ಕಾಕಾನ ಆರೈಕೆ ಮಾಡಬೇಕು. ಅವನಿಗೆ ತೊಂದರೆಯಾಗದಂತೆ ನೋಡಿಕೊಳ್ಳಬೇಕು. ಈಗ ಏನಾಗಿದೆಯೋ! ಸಣ್ಣ ಪುಟ್ಟ

ಜಡ್ಡುಗಳಿಗೆ ಬಗ್ಗುವ ದೇಹವಲ್ಲ ಅದು. ಕನಸಿನಲ್ಲಿ ರಕ್ತರಂಜಿತವಾದ ಕಾಕಾನ ದೇಹವನ್ನು ನೆನೆದು ದಾದಾನ ಮೈಯೆಲ್ಲ ನಡುಗಿತು.

ಆಗಲೇ ಬೆಳಗಾಯಿತು. ದಾರಿಯಲ್ಲಿ ಜನರು ಬಂದು ಹೋಗುತ್ತಿದ್ದರು. ಆದರೆ ದಾದಾನ ಕಣ್ಣಿಗೆ ಅದಾವುದೂ ಕಾಣುತ್ತಿರಲಿಲ್ಲ. ದಾದಾನ ಧೈರ್ಯ ಅಸಾಮಾನ್ಯವಾಗಿತ್ತು. ಅವನು ಧೀರವಾಗಿ ಹೆಜ್ಜೆಯಿಡುತ್ತ ಎದುರು ಬಂದರೆ ಮಲಗಿದ ಹುಲಿ ಎದ್ದು ದಾರಿ ಬಿಡಬೇಕು. ಆದರೆ ಅಂಥ ದಾದಾ ಈಗ ಧೈರ್ಯ ವನ್ನೆಲ್ಲ ಕಳೆದುಕೊಂಡಿದ್ದ. ಅವನ ಅಂತಃಕರಣಕ್ಕೆ ಕಂಡ ದೃಶ್ಯ ತೀವ್ರವಾದ ಭೀತಿಯಿಂದ ತುಂಬಿತ್ತು. ಅವನ ಜೀವ ತನ್ನ ಅವ್ಯಕ್ತ ಭಾಷೆಯಲ್ಲಿ ನೋವಿನ ಕತೆ ಯನ್ನು ಹೇಳುತ್ತಿತ್ತು.

ನಾನಾಕಾಕಾನ ಬಗ್ಗೆ ಎಲ್ಲಿಲ್ಲದ ಹುರುಹುರು ದಾದಾನ ಮನಸ್ಸಿಗಾಗಿತ್ತು. ಆಗಲೇ ಊರಿಗೆ ಹೊರಡಬೇಕೆಂದು ಮನಸ್ಸಾಗಿತ್ತು. ಆದರೆ ಯಶವಂತರಾಯರು ಕೇಳಲಿಲ್ಲ. ಕುಸ್ತಿಯ ಕಣದಲ್ಲಿ ಜಗಜಟ್ಟಿಯಾದವನಿಗೆ ಸನ್ಮಾನ, ಊಟ ಉಪ ಚಾರಗಳಾಗವೆ ಹಾಗೆಯೇ ಕಳಿಸುವರೇ ? ಮೇಲಾಗಿ ದಾದಾ ಅವರನ್ನು ಕಳ್ಳರಿಂದ ಪಾರು ಮಾಡಿದ್ದ; ಅವರ ಹಣ ಉಳಿಸಿದ್ದ; ಅವರ ಸೊಸೆಯ ಮಾನ ಉಳಿಸಿದ್ದ. ದಾದಾ ಎಷ್ಟು ಕೇಳಿಕೊಂಡರೂ ಅಪ್ಪಣೆ ದೊರೆಯಲಿಲ್ಲ. ದಾದಾ ಕೊನೆಯ ಅಸ್ತ್ರ ಹೂಡಿದ. ತನ್ನ ಸಂಗಡಿಗರನ್ನು ಹುಡುಕಲು ಜತ್ತಿಗೆ ಹೋಗುವೆನೆಂದು ಹೇಳಿದ. ಯಶವಂತರಾಯರು ಅದನ್ನೂ ಕೇಳಲಿಲ್ಲ. ಜತ್ತಿಗೆ ಬೇಕಾದರೆ ಆಳು ಕಳಿಸಬಹು ದೆಂದರು. ಹೀಗಾಗಿ ದಾದಾ ಅಲ್ಲಿಯೇ ಅಮಾವಾಸ್ಯೆ, ಮರುದಿನ ಕರಿ ಹೀಗೆ ಯಶ-ವಂತರಾಯರ ಆಗ್ರಹದಿಂದ ಎರಡು ದಿನ ನಿಲ್ಲಬೇಕಾಯಿತು. ಆದರೂ ದಾದಾನ ಮನಸ್ಸಿನ ಸ್ವಾಸ್ಥ್ಯ ಉಳಿಯಲಿಲ್ಲ. ಕೇವಲ ಪಾಟೀಲರ ಆಗ್ರಹಕ್ಕಾಗಿ ಅಲ್ಲಿ ನಿಂತನು.

ಮರುದಿನ ಊಟ ಮಾಡಿ ದಾದಾ ಊರಿಗೆ ಹೊರಡುವ ಸಿದ್ಧತೆಯಲ್ಲಿದ್ದ. ಅಷ್ಟರಲ್ಲಿ ಪಾದಳ್ಳಿಯಿಂದ ಬಂದ ಹೊಲೆಯನೊಬ್ಬನು ಯಶವಂತರಾಯರಿಗೆ ಮುಜುರೆ ಮಾಡಿ, ಒಂದು ಪತ್ರವನ್ನು ಕೊಟ್ಟನು.

ಯಶವಂತರಾಯರು ಅಕ್ಷರಶತ್ರುಗಳು. ದಾದಾನಂತೂ ಅಕ್ಷರಗಳ ಮುಖ ಪರಿಚಯ ಕೂಡ ಇಲ್ಲದವನು. ಆ ಊರಲ್ಲಿ ಓದು-ಬರೆಹಬಲ್ಲ ಬೃಹಸ್ಪತಿಗಳೆಂದರೆ ಇಬ್ಬರೇ– ಒಬ್ಬ ಊರ ಕುಲಕರ್ಣಿ, ಇನ್ನೊಬ್ಬ ಅದೇ ಊರಲ್ಲಿ ಗಾವಠೀ ಶಾಲೆಯ ನ್ನಿಟ್ಟ ಮಾಸ್ತರನೊಬ್ಬ. ಕುಲಕರ್ಣಿ ಯಾರದೋ ಖರೀದಿಪತ್ರದ ನೋಂದಣಿ

ಮಾಡಿಸಲು ವಿಜಾಪುರಕ್ಕೆ ಹೋಗಿದ್ದ. ಸುಗ್ಗಿಯ ದಿನದಲ್ಲಿ ಹುಡಗರು ಹೊಲಕ್ಕೆ ಹೋಗುತ್ತಿದ್ದವು. ಮಾಸ್ತರನು ಸಾಲೆ ಮುಚ್ಚಿ ತನ್ನ ಹೊಲದ ಮುಂಗಾರಿ ಸುಗ್ಗಿಗೆ ತನ್ನೂರಿಗೆ ಹೊರಟುಹೋಗಿದ್ದ. ಹೀಗಾಗಿ ಹೊಲೆಯ ತಂದ ಪತ್ರ ಇವರಿಬ್ಬರಿಗೂ ಒಡೆಯದ ಒಗಟಾಯಿತು. ಆ ಹೊಲೆಯನನ್ನೇ ಪ್ರಶ್ನೆಮಾಡಿ ವಿಷಯವೇನೆಂದು ತಿಳಿದುಕೊಳ್ಳವ ಪ್ರಯತ್ನವೂ ಸಫಲವಾಗಲಿಲ್ಲ. ಆ ಹೊಲೆಯ ಪಾದಳ್ಳಿಯವ ನಾಗಿರದೆ, ಆ ಊರ ವತನದಾರ ಹೊಲೆಯರ ಸಂಬಂಧಿಕನಾಗಿದ್ದ. ಪಾದಳ್ಳಿಯ ಹೊಲೆಯನು ತನ್ನ ಸಂಬಂಧಿಕನ ಕಡೆಯಿಂದ ಈ ಪತ್ರವನ್ನು ಯಶವಂತರಾಯ ರಿಗೆ ಮುಟ್ಟಿಸಲು ಹೇಳಿ ತಾನು ಜಡ್ಡಾಗಿ ಮಲಗಿದ್ದ.

ಪಾದಳ್ಳಿಯಲ್ಲಿಯ ಬರಗಾಲ, ಅಲ್ಲಿಯ ಆಹಾರದ ಅಭಾವ ಮೊದಲಾದ ಇನ್ನಿತರ ವಿಷಯಗಳು ಆ ಹೊಲೆಯನಿಂದ ತಿಳಿದವು. ತನ್ನ ಆಪ್ತ ಹೊಲೆಯನ ಬೇನೆಯ ವಿಷಯವಾಗಿಯೇ ಅವನು ಹೇಳಹತ್ತಿದ. "ಹೊಟ್ಟೆಗಿಲ್ಲದಕ್ಕ ಇದ್ದ ಮುಗ್ಗ ಕಾಳೆಲ್ಲ ಮುಕ್ಕಿಬಿಟ್ಟನರಿ. ರಾತ್ರಿ ಹೊಟ್ಟೆ ಜಾಡಿಸಿ, ನೆಲಹಿಡದು ಮಲಗಿ ಬಿಟ್ಟನರಿ" ಎಂದು ಮೇಲಿಂದ ಮೇಲೆ ನುಡಿದ.

ಅನಕ್ಷರಸ್ಥರಾದರೂ ಯಶವಂತರಾಯರ ಅನುಭವದ ಕಣ್ಣಿಗೆ ಪತ್ರದ ವಾರ್ತೆ ಅಸ್ಪಷ್ಟವಾಗಿ ತಿಳಿಯಿತು. ಸಾಮಾನ್ಯವಾಗಿ ಸತ್ತ ಸುದ್ದಿಯನ್ನು ಹೊಲೆಯಾಳಿ ನಿಂದ ಕಳಿಸುವ ರೂಢಿಯಿದುದ್ದರಿಂದ, ಪಾದಳ್ಳಿಯ ವಾರ್ತೆ ಕ್ಷೇಮಕರವಾಗಿಲ್ಲ ವೆಂದು ಅವರು ಅರಿತರು. ಆದರೂ ಪತ್ರದ ಸಂಗತಿ ತಿಳಿಯದೆ ಹೊರಡುವದು,ಅವರ ಪ್ರತಿಷ್ಠೆಗೆ ಕುಂದೆನಿಸಿತ್ತು. ಆದ್ದರಿಂದ "ದಾದಾ ನೀ ಮುಂದ ಹೋಗಿ ಸುದ್ದಿ ಕಳಿಸು. ಆ ಮ್ಯಾಲ ನಾವು ಬರೂಣಂತ" ಎಂದು ಹೇಳಿ ದಾದಾನನ್ನುಬೀಳ್ಕೊಟ್ಟರು.

ದಾದಾ ತಡವಾಗಿಯೇ ಊರು ಮುಟ್ಟಿದ. ಸಾಮಾನ್ಯವಾಗಿ ಎಂಟು ತಾಸಿನ ದಾರಿಯನ್ನು ನಾಲ್ಕು ತಾಸಿನಲ್ಲಿ ಕ್ರಮಿಸುವದು ಅವನಿಗೆ ಸುಲಭವಾಗಿತ್ತು. ಆದರೆ ಈಗ ಮನಸ್ಸು ಅಸ್ವಸ್ಥವಾಗಿತ್ತು. ಅಂತಲೇ ತಾಸು ಹೊತ್ತಿರುವಾಗ ಊರು ಮುಟ್ಟಿದ. ಆಗ ಲಕ್ಷ್ಮಣ ಬಾಳಾಚಾರ್ಯರ ಮನೆಯಿಂದ ಹೊರಟವನು, ನದಿಗೆ ಹೋಗಿ ನಾನಾನ ಬೂದಿ ಚಲ್ಲಿ ಸ್ನಾನಮಾಡಿ ಮನೆಗೆ ಬಂದು ಮಲಗಿ ಅದೇ ಎದ್ದು ಊರಲ್ಲಿ ಅಡ್ಡಾಡಿ ತಾಸಗಾಂವಿಗೆ ಕಳಿಸುವ ಆಳನ್ನು ಗೊತ್ತುಮಾಡಿ ಮನೆಗೆ ಬಂದ. ದಾದಾ ಆದೇ ಮನೆಗೆ ಮುಟ್ಟಿದ್ದ. ಲಕ್ಷ್ಮಣನಿಂದ ನಾನಾಕಾಕಾನ ಮರ ಣದ ಸುದ್ದಿಯನ್ನು ಕೇಳಿ ಕಲ್ಲಿನಂತೆ ಕುಳಿತುಬಿಟ್ಟ.

:: ೬ ::

ದಾದಾ ಊರಿಗೆ ಬಂದ. ಆದರೆ ತಪ್ಪಿಕೂಡ ಗರಡಿಮನೆಯ ಹತ್ತರ ಸುಳಿಯಲಿಲ್ಲ. ಕಕ್ಕನ ಮರಣದಿಂದ ಬಲವಾದ ಆಘಾತವಾಗಿ ಮನೆಸೇರಿಬಿಟ್ಟದ್ದನು. ಜತ್ತಿಯಲ್ಲಿ ಪಂಜಾಬೀ ಲಾಮಾನನ್ನು ಗೆದ್ದ ದಾದಾನಿಗೆ ಹೂಮಾಲೆ ಹಾಕಿ ಮೆರವಣಿಗೆ ಮಾಡಿಸಬೇಕು; ಅವನು ಅಂದು ಹಾಕಿದ ಪೇಚನ್ನು ಅವನಿಂದಲೇ ಕಲಿಯಬೇಕೆಂದು ಉತ್ಸಾಹದಲ್ಲಿದ್ದ ಕೆಲ ಗರಡಿಯಾಳುಗಳಿಗೆ ಇದರಿಂದ ನಿರಾಶೆಯಾಯಿತು. ಅವನ ಮನೆತನಕ ಹೋಗಿ ಸಾಂತ್ವನಗೊಳಿಸುವ ಔಪಚಾರಿಕ ಕೆಲಸವನ್ನು ಅವರು ಮುಗಿಸಿದ್ದರು. ನಾನಾನ ಬೂದಿಯನ್ನು ಹೊಳೆಕಾಣಿಸುವದರಲ್ಲಿ ಲಕ್ಷ್ಮಣನಿಗೆ ನೆರವಾಗಲು, ಸ್ಮಶಾನಕ್ಕೂ ಹೋಗಿದ್ದರು. ದಾದಾನ ಗಂಭೀರ ಮೌನವನ್ನು ಕೆಣಕಿ ಅವನನ್ನು ಮಾತಾಡಿಸುವ ಧೈರ್ಯ ಮಾತ್ರ ಯಾರಿಗೂ ಆಗಲಿಲ್ಲ.

ದಾದಾನ ಮನೆ ಅಷ್ಟೇನೂ ದೊಡ್ಡದಲ್ಲ. ಮೂರಂಕಣದ ಪಡಸಾಲೆ, ಮೂರಂಕಣದ ಅಡಿಗೆಮನೆ ಇಷ್ಟೇ. ಪಡಸಾಲೆಯ ಮುಂದಿನ ಬಯಲಲ್ಲಿ ಎಮ್ಮೆ ಕಟ್ಟಲು ಒಂದು ಚಪ್ಪರ. ದನಗಳನ್ನು ಮಗ್ಗುಲ ಮನೆಯ ಧಾಬೆಯಲ್ಲಿಯೇ ಕಟ್ಟುತ್ತಿದ್ದರು. ಆ ಮನೆಯನ್ನು ಇನ್ನೂರು ರೂಪಾಯಿ ಇಡಗಂಟು ಕೊಟ್ಟು ನಾನಾ ಹಿಡಿದಿದ್ದ. ಅಲ್ಲಿಯ ಅಡಿಗೆಮನೆ ಇಂದು ಖಾಲಿ ಇತ್ತು. ಪಡಸಾಲೆ ಮತ್ತು ಕೋಣೆಗಳಲ್ಲಿ ಕಾಳು, ಕಡಿ, ಬೀಜ, ಬಿರಡಿ, ಗಳೇದ ಸಾಮಾನು ಮೊದಲಾದವನ್ನಿಡಲು ನಾನಾ ಉಪಯೋಗಿಸುತ್ತಿದ್ದ. ನಾನಾ, ಲಕ್ಷ್ಮಣ ಇಬ್ಬರೂ ಬೇರೆಯಾಗಿದ್ದರು. ಅವರಿಬ್ಬರಲ್ಲಿ ಮುಂದೆ ಸಾಲದ ತಂಟೆ ಬರಬಾರದೆಂದು, ಅವರ ತಂದೆಯಾದ ಶಿಲೇದಾರ ಗೋಪಾಳ ತಾನಿನ್ನೂ ಬದುಕಿರುವಾಗಲೇ ಭೂಮಿಯಲ್ಲಿ ಪಾಲು ಮಾಡಿ ಇಬ್ಬರಿಗೂ ಅರ್ಧದಂತೆ ಹಂಚಿದ್ದ. ಆದ್ದರಿಂದ ಅವರು ವಿಭಕ್ತರಾದರೆಂದು ಸರಕಾರೀ ಲೆಕ್ಕದಲ್ಲಿ ದಾಖಲೆ ಇತ್ತು. ರುಕುಮಾಕಾಕೂ ಒಬ್ಬಳೇ ಇದ್ದಾಗ ಊಟ-ಉಪಚಾರಗಳೆಲ್ಲ ಕೂಡಿಯೇ ನಡೆಯುತ್ತಿದ್ದವು. ಲಕ್ಷ್ಮಣನ ಲಗ್ನವಾದ ಮೇಲೆ ಮಾತ್ರ ಇರುವಿಕೆಯ ಬಣ್ಣ ಬದಲಾಯಿತು. ಅಣತಮ್ಮಂದಿರಲ್ಲಿಯ ಅನ್ಯೋನ್ಯ ಪ್ರೇಮ

ಒರೆಗಿತ್ತಿಯರಲ್ಲಿರಲಿಲ್ಲ. ಅದರ ಸಲುವಾಗಿ ಮನೆ ಬೇರೆಯಾದವು. ಆದರೆ ದನಕರುಗಳು ಮಾತ್ರ ಅವರ ಅವಿಭಕ್ತ ಕುಟುಂಬದ ಆಸ್ತಿಯಾಗಿದ್ದವು. ಲಕ್ಷ್ಮಣನ ಬದುಕೆಲ್ಲ ಭೂಮಿಯ ಸಾಗುವಳಿಯಲ್ಲೇ ಕಳೆದಿತ್ತು. ಲಾವಣಿಗೆ ಭೂಮಿ ಹಿಡಿಯುವದು, ಕೊಡಕೊಳ್ಳಿ ಮೊದಲಾದ ವ್ಯವಹಾರವೆಲ್ಲ ನಾನಾ ನೋಡಿಕೊಳ್ಳುತ್ತಿದ್ದ. ಅಣ್ಣತಮ್ಮಂದಿರಲ್ಲಿ ಎರಡು ಧ್ರುವಗಳ ಅಂತರವಿತ್ತು. ಲಕ್ಷ್ಮಣ ಭೂಮಿಯಲ್ಲಿ ದುಡಿದು ಅಲ್ಲಿಯೇ ಸಾಯುವ ಒಕ್ಕಲಿಗ. ಕಾರಭಾರ ಮಾಡುತ್ತ ಪ್ರತಿಷ್ಠಿತರಲ್ಲಿ ಒಬ್ಬನಾಗಿ ನಾನಾ ಆಡ್ಡಾಡುತ್ತಿದ್ದ. ಆದರೆ ಇಬ್ಬರಲ್ಲಿಯೂ ಸ್ನೇಹ ಸೌಹಾರ್ದಗಳಿಗೆಂದೂ ಕಡಿಮೆಯಾಗಿರಲಿಲ್ಲ.

ನಾನಾ ಇದ್ದಾಗ, ಕುಟುಂಬದ ಭಾರ ಲಕ್ಷ್ಮಣನಿಗಿರಲಿಲ್ಲ. ವಾಡೆಯಲ್ಲಿ "ಮಾಮಾಸಾಹೇಬ" ಎಂದು ಗೌರವದಿಂದ ಕರೆಯಿಸಿಕೊಳ್ಳುವ ನಾನಾ ಮನೆತನವನ್ನು ಸಾಗಿಸಿಕೊಂಡು ಹೋಗಲು ಸಮರ್ಥನಾಗಿದ್ದ. ಈಗ ಆ ಭಾರವೂ ಲಕ್ಷ್ಮಣನ ಮೇಲೆಯೇ ಬಿತ್ತು. ಈ ಎಲ್ಲ ವಿಚಾರಗಳಿಂದ ಜರ್ಜರಿತನಾದ ದಾಧಾ ಮನೆಬಿಟ್ಟು ಕದಲಿರಲಿಲ್ಲ.

ದಾದಾನ ಗರಡಿಯಾಳುಗಳಿಗೆ ಹೆಚ್ಚಿನ ಚಿಂತೆ ಉಂಟಾಯಿತು. ನಾನಾನ ಮರಣದ ವಿಷಯವಾಗಿ ಹೆಚ್ಚಿನ ಸುದ್ದಿ ಅವರಿಗೆ ಗೊತ್ತಿರದಿದ್ದರೂ ಕೆಲವೊಂದು ಹಾರು ಸುದ್ದಿಗಳು ಅವರ ಕಿವಿಗೆ ಬಿದ್ದಿದ್ದವು. ಬಾಪೂಸಾಹೇಬ ಹಾಗೂ ಚಿಮಣಾರ ನಡುವೆ ಏನೋ ಅನೈತಿಕ ಸಂಬಂಧವಿರಲೇಬೇಕೆಂಬ ನಿಶ್ಚಯ ಅವರಲ್ಲಿತ್ತು. ಅದಕ್ಕೆ ಪಡದಯ್ಯ ಸ್ವಾಮಿಗಳ ಬೆಂಬಲವಿದ್ದರೂ ಇರಬಹುದೆಂಬ ಸೂಕ್ಷ್ಮ ಸಂಶಯ ಬೇರೆ. ಅಂತೂ ಹತ್ತು ಸುಳ್ಳು, ಹತ್ತು ಸತ್ಯ ಕೂಡಿ ಒಂದು ಕತೆ ಜನರಲ್ಲಿ ಹಬ್ಬಿತು. ಕಾರಹುಣ್ಣಿವಿ ಆದ ಮಳ್ಳಾಪುರದಿನ ಊರಬಿಟ್ಟು ಹೋಗಿದ್ದ ಪಡದಯ್ಯನವರನ್ನು ದೀಪಾವಳಿ ಹಬ್ಬಕ್ಕೆಬಾ ಪೂಸಾಹೇಬ ತಿರುಗಿ ಕರೆಸಿಕೊಂಡ. ಮಠದಲ್ಲಿ ಬಾಪೂಸಾಹೇಬ ಪಡದಯ್ಯನವರ ಏಕಾಂತ ನಡೆಯಿತು. ಚಿಮಣಾ ಎರಡು ದಿನ ಹೊಟ್ಟೆ ಕಡಿತವೆಂದು ಅತ್ತಳು. ಎಳ್ಳಅಮಾಸಿ ಮುನ್ನಾದಿನ ನೆಟ್ಟಗಿದ್ದ ನಾನಾ ಬೆಳಗಾಗುವದರಲ್ಲಿ ಸತ್ತ. ದವಾಖಾನೆಗೆ ಹೆಣ ಕಳಿಸಬೇಕೆಂದಾಗ, ಬಾಪೂಸಾಹೇಬ ಪುತಳಾಬಾಯಿಯ ವಸ್ತ್ರಗಳನ್ನು ಹಿರೇ ಕುರುಬ ಸಾಬುನಲ್ಲಿಟ್ಟು ಹದಿನೈದು ನೂರು ರೂಪಾಯಿ ತಂದು ದೈವದವರಿಗೆ ಕೊಟ್ಟು ನಾನಾನ ಮರಣ ಹೃದಯವಿಕಾರದಿಂದ ಎಂದು ಗೌಡರು ಪಂಚನಾಮೆಮಾಡಿ ಮಣ್ಣು ಮುಚ್ಚಿದರು.

ಇದು ಮನೆ-ಮನೆಗಳಲ್ಲಿ, ಹೊಳೆಯ ದಂಡೆಯ ಮೇಲೆ, ಗರಡಿ ಮನೆಯಲ್ಲಿ ಹಬ್ಬಿ ಬೆಳೆದ ಕತೆ. ಇದನ್ನು ಹೇಳಿದವರೂ, ಕೇಳಿದವರೂ ತಮ್ಮ ಕಲ್ಪಕಶಕ್ತಿಯನ್ನಷ್ಟು ವೆಚ್ಚಮಾಡಿ, ಅದನ್ನು ಸಜೀವವಾಗುವಂತೆ ಮಾಡಿದ್ದರು. ಆದರೆ ಯಾರೂ ಅದರ ಹೊಣೆಹೊರುತ್ತಿರಲಿಲ್ಲ. ಯಾರನ್ನು ಕೇಳಿದರೂ "ನಮಗೇನ ಗೊತ್ತಪ್ಪಾ ನಾವು ಕೇಳಿದ ಸುದ್ದಿ ಇಷ್ಟು" ಎಂದೇ ಹೇಳುತ್ತಿದ್ದರು. ನಾನಾಕಾಕಾ ಸತ್ತದ್ದರಿಂದ, ಲಕ್ಷ್ಮಣ ದಾದಾನನ್ನು ಒಕ್ಕಲತನಕ್ಕೆ ಹಚ್ಚಬಹುದೆಂಬ ಭೀತಿ ಅವನ ಸಂಗಾತಿಗಳಿಗೆ. ಜತ್ತಿಯ ಮೈದಾನದಲ್ಲಿ ವಿಕ್ರಮ ಸ್ಥಾಪಿಸಿದ ದಾದಾ ಎತ್ತಿನ ಬೆನ್ನೊ ಹತ್ತಿ ಸಾಗಬೇಕೇ? ಲಕ್ಷ್ಮಣನ ದನಕರ ಈಗ ಬೀಗರ ಮನೆಯಲ್ಲಿದ್ದವು. ಅವನ್ನು ನೋಡಿಕೊಳ್ಳಬೇಕಾದರೆ ದಾದಾ ಊರು ಬಿಡುವದು ಖಂಡಿತ.

ಅದೂ ಅಲ್ಲದೆ ಇನ್ನೊಂದು ಮಾತೂ ಈ ಸಂಗಡಿಗರನ್ನು ಬಾಧಿಸುತ್ತಿತ್ತು. ಚಿಮಣಾಳ ಕತೆ ದಾದಾನಿಗೆ ಇನ್ನೂ ಗೊತ್ತಾಗಿಲ್ಲ. ಅವನ ಕಿವಿಗೆ ಈ ಸುದ್ದಿ ಬೀಳಬೇಕೆಂದು ಕೆಲವರ ಆಸೆ. ಬಿದ್ದರೆ ಅನರ್ಥವಾದೀತೆಂದು ಇನ್ನುಳಿದವರ ಭೀತಿ. ಹೀಗಾಗಿ ಅವನಿಗೆ ಹೇಳಬೇಕೋ ಹೇಳಬಾರದೋ ಎಂಬ ಸಂಶಯದಲ್ಲಿಯೇ ಅವರಿದ್ದರು.

ಈ ಗರಡಿ ಮನೆಯ ಗಡಿಗಳ ಸಮಸ್ಯೆ ಪರಿಹಾರವಾಗುವ ಮುಹೂರ್ತ ಯಶವಂತರಾಯರ ಆಗಮನದಿಂದ ಅನಾಯಾಸವಾಗಿ ಬಂದೊದಗಿತು. ಬಾಪೂಸಾಹೇಬರ ಪತ್ರವನ್ನು ಓದಿಸಿದ ನಂತರ, ತಮ್ಮ ಮಗಳು– ಬಾಪೂಸಾಹೇಬನ ಹೆಂಡತಿ- ರತ್ನಾನನ್ನು ಕರೆದುಕೊಂಡು ಹೋಗಲು ಅವರು ಬಂದಿದ್ದರು. ಪಾದಳ್ಳಿಗೆ ಬಂದೊಡನೆಯೇ ಅವರಿಗೆ ಎಳ್ಳಅಮಾಸೆಯ ದಿನ ನಾನಾ ಒಮ್ಮೆಲೆ ಮರಣ ಹೊಂದಿದ ವಾರ್ತೆ ತಿಳಿದುಬಂತು. ಆ ಸುದ್ದಿಯನ್ನು ಮೊದಲೇ ತಿಳಿಸಿ ಏಕೆ ಗಾಬರಿಗೊಳಿಸಬೇಕೆಂದು, ರತ್ನಾಳನ್ನು ಕರೆದುಕೊಂಡು ಹೋಗುವ ನೆವವನ್ನು ಮುಂದೆ ಮಾಡಿ ತಾನು ಕಾಗದ ಬರೆದೆನೆಂದು ಬಾಪೂಸಾಹೇಬ ಹೇಳಿದ. ಅದೂ ಅಲ್ಲದೆ ನಾನಾನ ಮರಣದ ಕಾರಣದಿಂದ ಊರ ದೈವದವರು ತನ್ನ ಬಗ್ಗೆ ತಪ್ಪು ತಿಳಿದುಕೊಂಡು ತನಗೆ ಪ್ರತಿಕೂಲರಾಗಿರುವದಾಗಿಯೂ ತಿಳಿಸಿದ. ಆದರೆ ಚಿಮಣಾಳ ವಿಷಯವಾಗಿ ಮಾತ್ರ ತಪ್ಪಿಕೂಡ ಒಂದು ಮಾತನ್ನೂ ಆಡಿರಲಿಲ್ಲ.

ಶಿಲೇದಾರ ನಾನಾ ಸತ್ತ ಸುದ್ದಿಯನ್ನು ಕೇಳಿದಾಗ ಯಶವಂತರಾಯರಿಗೆ ತೀರ ಕೆಡುಕೆನಿಸಿತ್ತು. ಜಾಗೀರದಾರರ ವಾಡೆಯ ಅಭಿಮಾನದ ವಸ್ತುವೊಂದು

ಹೋಯಿತೆಂದು ಅವರು ಹಳಹಳಿಸಿದರು. ಶಿಲೇದಾರ ಲಕ್ಷ್ಮಣ ಹಾಗೂ ದಾದಾ ಇವರಿಬ್ಬರನ್ನೂ ಕಂಡು ಸಮಾಧಾನ ಹೇಳುವದು ಅವರ ಮೊದಲ ಕರ್ತವ್ಯ ವಾಗಿತ್ತು. ಆದ್ದರಿಂದ ಬೆಳಿಗ್ಗೆ ಎದ್ದೊಡನೆಯೇ ಮೊದಲು ಲಕ್ಷ್ಮಣನ ಮನೆಗೇ ಹೋದರು.

ಅವರು ಮನೆಗೆ ಬಂದಾಗ ದಾದಾ ಪಡಸಾಲೆಯಲ್ಲಿ ಹಗ್ಗಹೊಸೆಯುತ್ತ ಕುಳಿತಿದ್ದ. ಪಾಟೀಲರನ್ನು ಕಂಡಕೂಡಲೆ ಅವನಿಗೆ ದುಃಖ ಉಕ್ಕಿಬಂತು. ಯಶ ವಂತರಾಯರಾದರೂ ಏನು ಸಮಾಧಾನ ಹೇಳಬೇಕು? ಈ ಕಾಲದಲ್ಲಿ ಮೌನವೇ ಹೆಚ್ಚು ಪ್ರಶಸ್ತವಾಗಿತ್ತು. ಸ್ವಲ್ಪಹೊತ್ತಾದ ನಂತರ ಎಲ್ಲ ವಿವರಗಳನ್ನೂ ಕೇಳಿ ಕೊಂಡರು. ದಾದಾ "ಕಾಕಾನ ದಿನಕರ್ಮ ಮುಗಿಸಿಕೊಂಡs ಹೋಗರಿ ಗೌಡರs" ಎಂದು ಆಗ್ರಹಪಡಿಸಿದ.

ಯಶವಂತರಾಯರಿಗೂ ಅದನ್ನು ನಿರಾಕರಿಸುವ ಮನಸ್ಸಿರಲಿಲ್ಲ. "ಇರಲಿ ನ್ನೇನು, ಬಂದೀತು ಬಿಡು ತಮ್ಮಾ" ಎಂದು ಸಮಾಧಾನ ಪಡಿಸಿದರು.

ಅಜರಾಣಿಯ ಪಾಟೀಲ ಯಶವಂತರಾಯರು ಲಕ್ಷ್ಮಣನ ಮನೆಗೆ ಹೋಗಿ ರುವ ಸುದ್ದಿಯನ್ನು ಕೇಳಿ ಪಾವಳ್ಳಿಯ ಶಂಕರಗೌಡರುಅಲ್ಲಿಗೇ ಧಾವಿಸಿ ಬಂದರು. ಒಂದಕ್ಕೆ ಪುತಳಾಬಾಯಿ ವಾಡೇದ ಕಬಜಾ ಪಡೆಯಲು ಬಂದಾಗ ಯಶವಂತ ರಾಯರು ಶಂಕರಗೌಡರ ಸಹಾಯವನ್ನಪೇಕ್ಷಿಸಿದ್ದರು. ಇಬ್ಬರಲ್ಲಿಯೂ ಅಂದೇ ಕೃತ್ರಿಮ ಸ್ನೇಹ ಮೂಡಿತ್ತು. ಶಂಕರಗೌಡರ ಊರ ಅಭಿಮಾನ ಯಶವಂತ ರಾಯರಿಗೆ ಪ್ರಿಯವಾಗಿದ್ದರೆ, ಪಾಟೀಲರ ಸೌಜನ್ಯ ಗೌರವಗಳು ಶಂಕರಗೌಡರನ್ನು ಸೆಳೆದಿದ್ದವು. ಬಾಪೂಸಾಹೇಬ ಅವರ ಅಳಿಯನಾದ್ದರಿಂದ ಊರಿಗೆ ಕಲ್ಯಾಣ ಮಾಡುವನೆಂಬ ನಂಬಿಕೆ ಗೌಡರಿಗಿತ್ತು. ಆದರೆ ಈಗ ಕತೆ ಬೇರೆಯಾಗಿತ್ತು. ಬಾಪೂ ಸಾಹೇಬ ಪಡದಯ್ಯನವರ ಜಾಲ ಪಡೆದು ಊರಿಗೇ ವಿನಾಶದ ಶಕ್ತಿಯಾಗಿದ್ದ. ಗೌಡರಿಗೆ ಈಗ ಪಡಯ್ಯ ಸ್ವಾಮಿಗಳ ಮೇಲೆ ಮೊದಲಿನ ಭಕ್ತಿಯಿರಲಿಲ್ಲ. ಊರಿನ ಬಾಳುವೆ ಹದಗೆಟ್ಟು ಹೋದುದರ ಬಗ್ಗೆ ಅವರ ಮನಸ್ಸು ರೋಸಿ ಹೋಗಿತ್ತು. ಇದೆಲ್ಲವನ್ನು ಗೌಡರು ಯಶವಂತರಾಯರೆದು ತೋಡಿಕೊಳ್ಳಬೇಕಾ ಗಿತ್ತು.

ದಾದಾನನ್ನು ತಂಬಾಕು ತರಲು ಅಂಗಡಿಗೆ ಕಳಿಸಿ ಗೌಡರು ಮಾತಿಗೆ ತೊಡಗಲು ಮಾಡಿದರು.

"ಊರಾಗ ಇಂದಿನ ತೆನಾ ಒಂದ ಮುಷ್ಟಿ ಇತ್ತು ಪಾಟೀಲರೇ. ನಿಮ್ಮ ಅಳಿಯಾ ಅದನ್ನು ಬಿಚ್ಚಿ ಐದ ಬಟ್ಟ ಮಾಡಾಕ ಹತ್ಯಾನ. ಹೊಟ್ಟೆಗಿಲ್ಲದ ಬಡ ಜನಾ ಇಂದ ನನ್ನ ಹಗೇ ಲೂಟಿ ಮಾಡಿದರ ನಾಳೆ ವಾಡೇದ ಹಗೇ ಬಿಡತಾರೇನು ?" ಶಂಕರಗೌಡರು ಆವೇಶಗೊಂಡು ಹೇಳಿದರು.

ನದಿಗೆ ನೀರಿಗೆ ಹೋಗಿದ್ದ ಲಕ್ಷ್ಮಣ ಕೊಡ ಹೊತ್ತು ಬರುವದು ಬಾಗಿಲಲ್ಲಿ ಕಾಣಿಸಿದ್ದರಿಂದ ಗೌಡರು ಮಾತು ಬದಲಿಸಿದರು "ಅಂದ ಹಾಗೇ ನಿಮ್ಮ ಕಡೆ ಮಳಿ ಬೆಳಿ ಐತಿ. ಈ ಕಾಟ ನಿಮಗಿಲ್ಲ" ಎಂದರು.

"ಇಲ್ಲ ಅನ್ರಿ. ಆದರ ಕಳ್ಳರು ಹಾದೀ ಬಡೀಲಾಕ ಹತ್ಯಾರು. ಎಳ್ಳಾಮಾಸಿ ರಾತ್ರಿ ನನ್ನ ಗಾಡಿ ದಾದಾನ ಪುಣ್ಯೆದಿಂದ ಕಳ್ಳರ ಕೈಯಾಗಿಂದ ಪಾರಾತು" ಎಂದು ಯಶವಂತರಾಯರು ತಮ್ಮ ಇತ್ತೀಚಿನ ಹೊಸ ಅನುಭವವನ್ನು ವಿವರಿಸಿದರು.

"ಹಾಂ ಹೌದೇಳ್ರಿ. ಅವೂ ನಿಮ್ಮ ಬಾಪೂಸಾಬನ ಹುಲಿಬ್ಯಾಟಿ ತಂಡದವರೇ. ಅಂದ ಕುಸ್ತಿ ನೋಡಾಕ ಜತ್ತಿಗೆ ಹೋಗಿದ್ವರು. ಸುತ್ತ ಹತ್ತಹರದಾರ್‍ಯಾಗ ಎಲ್ಲಿ ಹಾದೀ ಬಡದರೂ ಅದು ನಮ್ಮೂರವರದೇ ದಗದ" ಎಂದು ಚಿಲುಮಿಯ ಝುರಿಕೆ ಜಗ್ಗಿದರು ಗೌಡರು.

ಪಾಟೀಲರಿಗೆ ದಿಗ್ಭ್ರಮೆಯಾಯಿತು. ಬಾಪೂಸಾಹೇಬನ ಇಸಮುಗಳೇ ! ಪಾಟೀಲರಿಗೆ ಈ ಅಪಮಾನ ಅಸಹನೀಯವೆನಿಸಿತು. ಯಶಂತರಾಯರ ವಂಶದ ಇತಿಹಾಸ ಖಂಡೋಬಲ್ಲಾಳನ ವರೆಗೆ ಹೋಗಿತ್ತು. ಅವರಿಗೆ ತಮ್ಮ ವಂಶದ ಬಗ್ಗೆ ಬಹಳ ಅಭಿಮಾನ. ಬಂದವರೆದುರು ಆ ಕತೆಯನ್ನು ಹೇಳಿ, ಖಂಡೋಬಲ್ಲಾಳನು ಹಿಡಿಯುತ್ತಿದ್ದ ಖಡ್ಗವೆಂದು ಹೇಳಿ ಒಂದು ಕತ್ತಿಯನ್ನು ತೋರಿಸುತ್ತಿದ್ದರು. ಅಂತಲೇ ಉಚ್ಚವಂಶೀಯನೆಂದು ಕನಕೇರಿಯ ಗೌಡನಾದ ಬಾಪೂಸಾಹೇಬನಿಗೆ ಮಗಳನ್ನು ಕೊಟ್ಟಿದ್ದರು. ಆ ಮನೆತನಕ್ಕೇ ಕಲಂಕ ಹತ್ತುವ ಇಂಥ ನೀಚಕೃತಿಗಳಿಗೆ ಬಾಪೂಸಾಹೇಬ ಇಳಿದನೇ ಎಂದು ಅವರಿಗೆ ವ್ಯಸನವಾಯಿತು. ಇದಕ್ಕೆ ಪ್ರಮಾಣವೇನು ಎಂದು ಅವರ ಮನಸ್ಸು ಪ್ರಶ್ನೆ ಹಾಕಿತು. "ನಮ್ಮ ಜಾವಯೀ ಅಂಥಾವಲ್ಲ ತಗೀರಿ" ಎಂದು ಎದುರಾಡಿದರು.

" ಜಾಗೀರದಾರರು ಎಂಥಾವರ ಸಂಗತಿಗೆ ಬಿದ್ದಾರ ಅನೂದು, ಬೇಕಾರ ಈ ಲಕ್ಷ್ಮಣನ್ನ ಕೇಳಿರಿ " ಗೌಡರು ಹೀಗೆ ಹೇಳುತ್ತಲೆ ಮತ್ತೊಮ್ಮೆ ಚಿಲುಮೆಯನ್ನು ಜಗ್ಗಿದರು.

"ಗೌಡರ ಮಾತು ಕೇಳಿದೇನ ಲಕ್ಷ್ಮಣಾ?" ಎಂದು ಪಾಟೀಲರು ಅವನನ್ನೇ ಪ್ರಶ್ನೆ ಮಾಡಿದರು. ಲಕ್ಷ್ಮಣ ಅಳುಮೋರೆ ಮಾಡಿಕೊಂಡೇ ಹೇಳಿದ.

"ಬಡವರ ಮರ್ಯಾದಿ ನಿಮ್ಮ ಅಳಿಯಾನ ಕೈಯಾಗ ಉಳೂದುಲ್ಲ ಪಾಟೀಲರ. ಬೇಕಾರ ನಿಮ್ಮ ಮಗಳು ರತ್ನಕ್ಕನ್ನ ಕೇಳಿರಿ" ಎಂದ.

ಲಕ್ಷ್ಮಣ ಒಲಿ ಹೊತ್ತಿಸುವ ಗಡಬಡಿ ನಡೆಸಿದ್ದನ್ನು ನೋಡಿ ಯಶವಂತ ರಾಯ "ಅಡಿಗಿ ಮಾಡಿಕೊಳ್ಳೂ ಉಸಾಬರಿ ಬ್ಯಾಡ ಲಕ್ಷ್ಮಣ,, ನೀನೂ ದಾದಾ ಇಬ್ಬರೂ ವಾಡೇಕ್ಕ ಊಟಕ್ಕೆ ಬರ್ರಿ" ಎಂದು ಹೇಳಿ ತಾವು ವಾಡೆಯ ದಾರಿ ಹಿಡಿದರು. ಮತ್ತೊಮ್ಮೆ ಕಾಣುತ್ತೇವೆಂದು ಹೇಳಿ ಗೌಡರೂ ಹೊರಟರು. ದಾರಿಯಲ್ಲಿಯೇ ದಾದಾ ಅವರಿಗೆ ಭೆಟ್ಟಿಯಾಗಿ ತಂಬಾಕು ಕೊಟ್ಟ. ಮತ್ತೊಮ್ಮೆ ಅವನಿಗೆ ವಾಡೆಗೆ ಬರಲು ತಿಳಿಸಿ, ಯಶವಂತರಾಯರು ವಾಡೆಯ ಕುಲಪುರೋಹಿತರಾದ ಬಾಳಾಚಾರ್ಯರ ದರ್ಶನ ಪಡೆಯುವದಗತ್ಯವೆಂದು ಅಲ್ಲಿ ನಡೆದರು. ಬಾಳಾಚಾರ್ಯರು ಪಾಟೀಲರನ್ನು ಆದರದಿಂದ ಬರಮಾಡಿಕೊಂಡರು. ಕುಶಲಪ್ರಶ್ನೆಗಳಾದ ಮೇಲೆ ಮತ್ತೆ ಮಾತು ಅದೇ ವಿಷಯಕ್ಕೆ ಬಂತು.

"ನಿಮ್ಮ ಬಾಪೂಸಾಹೇಬ ಜೆಂಕೀ ಜೋಡಿ ಆಟಾ ನಡಸ್ಯಾನ ಪಾಟೀಲರಃ. ಪಡದಯ್ಯಾನ ಸಹವಾಸ ಒಳ್ಳೇದು ಮಾಡಲಿಲ್ಲ" ಎಂದು ಗಂಭೀರವಾಗಿ ಆಚಾರ್ಯರು ಹೇಳಲು, ಸಾದ್ಯಂತತಾಗಿ ಹೇಳಬೇಕೆಂದು ಪಾಟೀಲರು ಬಿನ್ನವಿಸಿಕೊಂಡರು.

"ಪಡದಯ್ಯಾನ ಗೆಳೆತನ ವಾಡೇದ ಮರ್ಯಾದಿಗೇ ಮುಳವಾಗೇದ. ವಾಡೇ ಅಂದರ ಊರ ಅಭಿಮಾನ ಪಾಟೀಲರಃ. ಅದನ್ನ ಇವರಿಬ್ಬರಿಗೂ ಕೂಡಿ ಕಳೀತಾರ ಅಂತ ಅನಸತದ. ವಾಡೇ ಮತ್ತು ಮಠ ಇವೆರಡೂ ಹೀಂಗ ಹಾಳಾದರ, ಪಾದಳ್ಳಿ ಜೀಚಿರಾಕ ಆದ್ಹಾಂಗಃ" ಬಾಳಾಚಾರ್ಯರ ಕಂಗಳಲ್ಲಿ ದುಃಖದ ನೆರಳು ಕವಿಯಿತು. ಗತಕಾಲದ ವೈಭವವೆಲ್ಲ ಅವರಿಗೆ ಸ್ಮರಣೆಯಾಗಿರಬೇಕು.

"ಎಂಥಾ ಮಠ! ಎಂಥಾ ಗುರುಗಳ ಸ್ಥಾನಕ್ಕ ಈ ಕಲಿ ಬಂದು ಕೂತಾನ! ಗುರುಪಾದಯ್ಯಾ ಸ್ವಾಮಿಗೋಳು ಇದ್ದಾಗ ಶ್ರಾವಣಮಾಸದೊಳಗ ಮಠದಾಗ ಅಖಂಡ ಶಿವಭಜನಿ, ಪುರಾಣ ನಡೀತಿದ್ದವು. ನಾ ಸಣ್ಣಾವ ಇದ್ದಾಗಿನ ಮಾತು ಪಾಟೀಲರಃ. ನಮ್ಮ ಹಿರೇರು ಹೋಗದ ಮಠದೊಳಗ ಪುರಾಣ ಸುರೂ ಆಗತಿದ್ದಿಲ್ಲ. ನಮ್ಮ ಹಿರೇರು ಆಗ ಗೋಪಾಲಕೃಷ್ಣನ ಗುಡಿಯೊಳಗ ಪುರಾಣ ಹೇಳತಿದ್ದರು. ಅಲ್ಲೆ ಸ್ವಾಮಿಗೋಳು ತಪ್ಪದ್ಹ ಬರತಿದ್ದರು. ಅವರು ಬರದಿದ್ದರ 'ಇಂದು

ಅಣ್ಣಾ ಬರಲಿಲ್ಲ, ಪುರಾಣ ಇಲ್ಲ' ಅಂತ ನಮ್ಮ ಹಿರೇರು ಪಾಲೀ ಕಟ್ಟಿ ಮಂಗಳಾರತಿ ಮಾಡಿ ಬಿಡತಿದ್ದರು. ಇಂಥವರ ಸ್ಥಾನಕ್ಕ ಈ ಮಹಾರಾಯ ಬಂದದ್ದು ನಿಮ್ಮ ಪುಣ್ಯಾದಿಂದ ಅಂತಽ ನಿಮ್ಮ ಮುಂದ ಇದೆಲ್ಲ ಹೇಳಬೇಕಾಗೇದ.

ಬಾಳಾಚಾರ್ಯರ ಮನಸ್ಸು ನೆನಪಿನ ಬೆನ್ನು ಹತ್ತಿ ಹಿಂದೆ ಹಿಂದ ಸಾಗಿತ್ತು. ಯಶವಂತರಾಯರೂ ಗಲ್ಲದ ಮೇಲೆ ಕೈಯಿಟ್ಟು ಕೇಳುತ್ತಿದ್ದರು.

"ಈ ಪಡದಯ್ಯ- ಗುರುಪಾದಸ್ವಾಮಿಗೋಳ ಅಕ್ಕನ ಮಗ- ಓದಿಕೊಂಡವ, ಅವರ ಪರಂಪರೆ ಕಾಯ್ದುಕೊಂಡು ಹೋಗತಾನಽ ಅಂತ ನಿಮ್ಮೂರವರು ಹಿಂಡ ಜನಾ ಅವನ್ನ ಕರಕೊಂಡು ಬರಲಿಲ್ಲಽ? ಸ್ವಾಮಿಗೋಳ ಖಾಸ ಅಣ್ಣನ ಮಗಾ ಅಕ್ಷರಶತ್ರು ಅಂತ ಅವನ್ನ ಬಿಟ್ಟು, ನಿಮ್ಮೆಲ್ಲಾರ ಮಾತಿಗೆ ಮರ್ಯಾದಿ ಕೊಟ್ಟು ಇವನ್ನ ಮರಿ ಮಾಡಿಕೊಂಡ್ರು. ನಿಮ್ಮೂರ ಹುಡಿಗಿ, ಯಾರು-ಆಕಿ ಹೆಸರು– ಹಂ ದಾನವ್ವನ್ನ ಕರಕೊಂಡು ಬಂದು ಮಠದಾಗ ಇಟ್ಟ. ಗಂಡ ಸತ್ತ ಹುಡುಗಿ ಆಶ್ರಯ ಕೊಟ್ಟರಬಹುದು ಅಂತ ಜನರ ತಿಳವಳಿಕಿ ಆಗಿತ್ತು. ಆದರ ಅಂದಿನಿಂದಽ ಮಠದ ಕಥೀನಽ ಬ್ಯಾರೆ ಆತು. ಪುರಾಣ, ಭಜನಿ ಎಲ್ಲಾ ನಿಂತ ಬಿಟ್ಟವು. ಬೆಳ್ಳಿಬೆಳ್ಳಿಗೂ ಕುಡದು ಇಸ್ಪೇಟಾಡೂದು ನಡದದ. ಕೆಲಸ ಇಲ್ಲದ ಉಂಡಾಡಿ ಜನರಿಗೆ ಆಶ್ರಯ ಸಿಕ್ಹಾಂಗಾತು. ಹಸಿದು ಬಂದವರಿಗೆ ತುಣುಕು ರೊಟ್ಟಿ, ಥಾಲಿ ನೀರು ಸಿಗೋದು ನಿಂತು ಹೋತು. ಮರ್ಯಾದೆವಂತರಿಗೆ ಅಲ್ಲಿ ಕಾಲಿಡದ್ಹಾಂಗ ಆತು. ಊರ ಕಿತಬೀ ಮಾಡುವರು ಮಾತ್ರ, ಪಡದಯ್ಯ ಹಾಕಿದ ಉಗಳು ದಾಟೂದುಲ್ಲ. ನಿಮ್ಮ ಬಾಪೂಸಾಹೇಬ ಅವರ ಬಲಗೈ ಆಗ್ಯಾನ. ಅವರ ಮಾಡಿದ್ದಽ ಮುಟ್ಟ ಕಟ್ಟಿದ್ದಽ ಪಟ್ಟ ಆಗೇದ. ಅದೇನ ಆಗಲಿ ಅವರ ಪಾಪದ ಫಲ ಊರವರು ಅನುಭೋಗಸಬೇಕಾಗೇದ" ಬಾಳಾಚಾರ್ಯರು ಇಷ್ಟು ಹೇಳಿ ನಿಟ್ಟುಸಿರು ಗರೆದರು.

"ಅಲ್ಲ ಆಚಾರ ಸ್ವಾಮಿೂ, ಮಾಡಿದವರು ಉಣತಾರ ಮಣಿಯಂಥ ಕಡಬು ಊರವರು ಯಾಕ ಅನುಭೋಗಸಬೇಕು" ಪಾಟೀಲರ ಸರಳ ಅಂತಃಕರಣದ ಪ್ರಶ್ನೆ ಅದು.

"ಊರಿಗೆ ಅರಿಷ್ಟ ಬಡೀತದ ಗೌಡರಽ ನೋಡೀರಂತ. ಚಿಮಣಾ, ಪುತಳಾ ಬಾಯಿ ಆಶ್ರಯದಾಗ ಇದ್ದಾಕಿ, ಬಾಪೂಸಾಹೇಬನ ತಂಗೀ ಸಮಾನ ಹೌದಲ್ಲೋ? ಆಕಿ ಸ್ಥಿತಿ ಈಗ ಏನಾಗೇದ? ನಾನಾ ಯಾಕ, ಹ್ಯಾಂಗ ಸತ್ತ? ಅದರ ಪರಿಣಾಮ

ಈಗ ಊರೊಳಗ ಹಗೇ ಲೂಟಿ ಮಾಡಿಸೋತನಕಾ ಬಂದದ. ಪಡದಯ್ಯಾಗ ನೂರು ಸೋಟರ ಬೆಯಲ ಅದ. ಬಾಪೂಸಾಹೇಬ ಇವರ ಸಹಾಯದಿಂದ ಗೌಡರ ಹಗೇ ಲೂಟಿ, ಮಾಡಿಸುವ ತಯಾರಿ ನಡಸ್ಯಾನ. ಇವೆಲ್ಲ ವರ್ತಿ ಜೆಳದು ಊರೊಳಗ ಒಂದಕ್ಕ ಹತ್ತಾದರ, ಯಾರು ನಿಶ್ಚಿಂತಿಯಿಂದ ಬಾಳ್ವಿ ಮಾಡತಾರ ಹೇಳ್ರಿ" ಬಾಳಾಚಾರ್ಯರು ವ್ಯಥಿತ ಹೃದಯದಿಂದ ಹೇಳಿದರು.

ಯಶವಂತರಾಯರಿಗೆ ಈಗ ಎಲ್ಲ ಅರ್ಥವಾಯಿತು. ಬಾಳಾಚಾರ್ಯರ ಬಂದೊಂದೇ ಮಾತು ಇದ್ದ ಕತೆಯನ್ನು ಬಿಚ್ಚಿ ತೋರಿದವು. ನಾನಾ ಮರಣ ಹೊಂದಿದ ಕೂಡಲೆ, ಬಾಪೂಸಾಹೇಬ ಆ ಸುದ್ದಿ ತಿಳಿಸದೆ ಕುಟುಂಬದವರನ್ನು ಕರೆದುಕೊಂಡು ಹೋಗಲು ಬರಬೇಕು, ಅಂತಾ ಪತ್ರಾ ಕಳಿಸಿದ್ದರ ರಹಸ್ಯ ಈಗ ತಿಳಿಯಿತು. ನಾನಾನ ಮರಣದಿಂದ ಹುಟ್ಟಿದ ಕಿಡಿ, ದ್ವೇಷದ ದಾವಾನಲವಾಗಿ ಪ್ರಜ್ವಲಿಸುವ ಮೊದಲೇ, ತನ್ನ ಕುಟುಂಬದವರ ರಕ್ಷಣೆಯನ್ನು ಬಾಪೂಸಾಹೇಬ ಮಾಡಬೇಕಾಗಿತ್ತು. ಆ ದಾವಾನಲದ ಪ್ರೇರಕನಾಗಿ, ಅವರ ಮಧ್ಯದಲ್ಲಿ ಪಡದಪ್ಪ ಯಮನಂತೆ ನಿಂತಿದ್ದ. ಅಪಮಾನಿತರ ಹೃದಯ ಸೇಡನ್ನು ಬಯಸಿತ್ತು; ಒಳಗಿಂದೊಳಗೇ ಅಸಂತೋಷ ಹೊಗೆಯಾಡುತ್ತಿತ್ತು. ಪಾಪ ತನ್ನ ಫಲಕ್ಕಾಗಿ ಕಾದು ಕುಳಿತಿತ್ತು. ಇವೇ ವಿಚಾರಗಳಿಂದ ತ್ರಸ್ತರಾಗಿ ಯಶವಂತರಾಯರು ವಾಡೆಯ ದಾರಿ ಹಿಡಿದರು.

ಬಾಳಾಚಾರ್ಯರ ಮನೆಯಿಂದ ಯಶವಂತರಾಯರು ವಾಡೆಯನ್ನು ಪ್ರವೇಶಿಸಿದಾಗ ಆಗಲೇ ಹನ್ನೆರಡು ಹೊಡೆದಿತ್ತು. ಬಾಪೂಸಾಹೇಬ ಸ್ನಾನಕ್ಕೆಂದು ಒಳಗೆ ಹೋಗಿದ್ದ. ಯಶವಂತರಾಯರು ಹೊರಗಿನ ಕೋಣೆಯಲ್ಲಿ ಲೋಡಿಗಾತುಕೊಂಡು ಕುಳಿತು ಎಲೆಯಡಿಕೆಯ ಚಂಚಿಯನ್ನು ಬಿಚ್ಚಿದರು. ಅವರ ಮನಸ್ಸು ಸ್ವಸ್ಥವಾಗಿರಲಿಲ್ಲ; ಮಗಳು ರತ್ನಾಳ ಭವಿಷ್ಯದ ಬಗ್ಗೆ ಚಿಂತಿಸುತ್ತಿತ್ತು. ಇವರು ವಾಡೆಗೆ ಬಂದ ಸುದ್ದಿಯನ್ನು ಮನೆಯಾಳು ಒಳಗೆ ಮುಟ್ಟಿಸಿರಬೇಕು. ಮುಂದೆ ಐದು ನಿಮಿಷಗಳಲ್ಲಿ ಪ್ರತಿಭಾಬಾಯಿಯೇ ಅಲ್ಲಿಗೆ ಬಂದಳು. ಯಶವಂತರಾಯರು ಲೋಡಿಗಾತು ಕಾಲು ಚಾಚಿ ಮಲಗಿದ್ದವರು ಅವಳನ್ನು ನೋಡಿ ಎದ್ದು ಕುಳಿತರು.

ಯಶವಂತರಾಯರು ಪ್ರತಿಭಾಬಾಯಿಗೆ ಊರ ಸ್ಥಿತಿಯ ಬಗ್ಗೆ ತಮ್ಮ ಕಿವಿಗೆ ಬಿದ್ದ ಮಾತುಗಳನ್ನು ತಿಳಿಸಬೇಕಾಗಿತ್ತು. "ಎಲ್ಲಿ ಹೋದರೂ ಊರಾಗ ಬಾಪೂನ ಬಗ್ಗೆ ಜನರು ಆಡಿಕೊಳ್ಳೋದು ಕಾಣತೈತಿ. ಹೀಂಗ ಯಾಕ ಆಗೇತಿ?" ಎಂದು ಪ್ರಶ್ನೆ ಹಾಕಿದರು.

ಅದಕ್ಕೆ ಪುತಳಾಬಾಯಿ ನೇರವಾಗಿ ಉತ್ತರ ಕೊಡಲಿಲ್ಲ. "ರತ್ನಾಳ ಕರ ಕೊಂಡು ಹೋಗಲಾಕ ತಾಬಡತೋಬ ಬರ್ರಿ ಅಂತ ಬಾಪೂ ನಿಮಗ ಪತ್ರಾ ಬರ ದಾನ ಅನ್ನೋ ಮಾತು ನೀವು ಬಂದ ಹೇಳಿದ ಮ್ಯಾಗ ಠಾವಿಕಿ ಆತು. ಇನ್ನ ಮ್ಯಾಗ ಬಾಪೂ ಊರಾಗ ಇರೂದs ಜಡಾ ಕಾಣತೇತಿ" ಹೇಳಲಾರದೆ ಹೇಳಿದಂತಿತ್ತು ಮಾತಿನ ಧ್ವನಿ.

"ಊರಾಗ ಬಾಪೂನ ವಜನ ನೆಟ್ಟಗಿತ್ತಲ್ಲಾ? ಒಮ್ಮಿಗಿಲೇ ಹೀಗ್ಯಾಕ ಬದ ಲಾಗಿದ್ದೀತು?" ಸಮಸ್ಯೆಯ ನಿಗೂಢತೆಗೆ ಬೇಸತ್ತವರಂತೆ ಯಶವಂತರಾಯರು ಕೇಳಿದರು.

ಪುತಳಾಬಾಯಿ ಸುತ್ತಲೂ ನೋಡಿ "ನಾನಾಮಾಮಾ ಸತ್ತದ್ದೇ ಇದಕ್ಕೆಲ್ಲಾ ಕಾರಣಾಗೇತಿ. ಹಾಗ ನೋಡಿದರ ನಮ್ಮ ಬಾಪೂ ಚಿಮಣಾಳ ಮ್ಯಾಗ ಮನಸ್ಸು ಮಾಡಿ ಈಟಿಲ್ಲಾ ಗೊಂದಲಾ ಹಾಕಿಟ್ಟ" ಎಂದು ಹೇಳಿದಳು.

"ಪಡದಯ್ಯಾನ ಗೆಣೆತನಾ ಮಾಡಿ ಬಾಪೂ ಊರಾಗ ಕಿಮ್ಮತ್ತು ಕಳಕೊಂಡಾ ಅಂತ ನಾನೂ ಕೇಳೀನಿ" ಯಶವಂತರಾಯರೂ ತಮಗೆ ಗೊತ್ತಿದ್ದದ್ದನ್ನು ಹೇಳಿ ದರು.

"ಎಷ್ಟ ಹೇಳಿದರೂ ಕಡಿಮೀನs ಐತಿ. ಸದ್ಯಕ್ಕ ರತ್ನಾ, ಚಿಮಣಾ ಎಲ್ಲಾರೂ ಊರ ಬಿಟ್ಟ ಹೋಗೂದs ಪಾಡ. ಬಾಪೂ ಇರೂದು ನೆಟ್ಟಗಲ್ಲ. ಇಲ್ಲಾಂದರ ತನ್ನ ಮಾನಾ ಕಳದಿಟ್ಟಾ ಅಂತ ಗೌಡನ ಹಗೇ ಲೂಟಿ ಮಾಡಿಸಿ ಬಾಪೂ ಇಲ್ಲದ ಪೇಚಿಗೆ ಬಿದ್ದಾಗಿದ್ದಾನು."

ಪುತಳಾಬಾಯಿಯ ಈ ಸೂಚನೆ ಯಶವಂತರಾಯರಿಗೆ ನಿರೀಕ್ಷಿತವಾಗಿತ್ತು. ಅಳಿಯ ಮನೆಗೆ ಬರಬಾರದೆಂದಲ್ಲ. ಆದರೆ ಪುತಳಾಬಾಯಿಯ ದನಿಯಲ್ಲಿಯ ಗಾಂಭೀರ್ಯ, ಪರಿಸ್ಥಿತಿ ತಾವು ತಿಳಿದುಕೊಂಡಿದ್ದಕ್ಕಿಂತ ಹೆಚ್ಚು ತೊಡಕಾಗಿದೆ ಯೆಂದೆನಿಸಿತು. ಸ್ವಲ್ಪ ಹೊತ್ತು ಬಿಟ್ಟು ಪುತಳಾಬಾಯಿ ಮುಂದುವರಿಸಿದಳು. "ಇಲ್ಲೀ ಹಕೀಕತ ಎಲ್ಲಾ ನಿಮಗ ಗೊತ್ತಾಗಿಲ್ಲ. ಈಗ ಬಾಪೂ ಚಿಮಣಾನ್ನ ಲಗ್ನ ಆಗಾಕs ಬೇಕು. ರತ್ನಾನ ಎದೀ ಮ್ಯಾಲs ಇನ್ನೊಬ್ಬಾಕಿನ್ನ ತರೂದು ಹ್ಯಾಂಗs ಅಂತ ನಿಮಗ ತ್ರಾಸಾಗತೇತಿ. ಬಾಪೂ ನನ್ನ ತಮ್ಮಾ ಅಂತ ನಾ ಏನು ಒಪ್ಪ ಇಟ ಗೋಳೂದಿಲ್ಲ; ಆದರ ಕನಕೇರಿ ಗೌಡರ ಮನೆತನದಾಗ ಹುಟ್ಟಿ ಮಾಡಬಾರದ ಕೆಲಸಾ ಮಾಡ್ಯಾನ. ಈಗ ಚಿಮಣಾನ್ನ ಮದಿವ್ಯಾಗೂದಿಲ್ಲ ಅಂತ ಹಟಾ ಹಿಡ

ದಾನ ಅವರ ಚಿಮಣಾನ್ನ ಮಗಳ್ಹಾಂಗ ನೋಡತೇನಿ ಅಂತ ನಾನಾಗ ವಚನ ಕೊಟ್ಟೇನು, ಈಗ ಒಲ್ಲೆನೂದ? ಚಿಮಣಾಳ ಬಾಳೀಗೇಡು ಮಾಡಿದ್ದಕ್ಕ ಜವಾಬು ಯಾರ ಕೊಡತಾರ ಹೇಳ್ರಿ? ಈಗ ಬಾಪೂ ಒಲ್ಲೆ ಅನ್ನೂದಕ್ಕ ಆ ಪಡದಯ್ಯನ ಗೆಣೆತನ ಕಾರಣ. ಅದು ಹಾಂಗs ಬೆಳಕೋತs ಹೋಗಲಿ ಜಾಗೀರಿನ ಹೆಸರಿಗೆ ಬಟ್ಟಾ ಬರದಿದ್ದರ, ನನ್ನ ಹೆಸರು ತಗೀಬಾಡ್ರಿ." ಪುತಳಾನ ದನಿಯಲ್ಲಿ ಆವೇಶ ವಿತ್ತು; ನಿಷ್ಠುರ ಸತ್ಯವಿತ್ತು.

ಯಶವಂತರಾಯರಿಗೆ ಅಳಿಯನ ಬಗ್ಗೆ ನಾಚಿಕೆ ಎನಿಸಿತು; ಮಗಳ ಬಗ್ಗೆ ಸಂಕಟವಾಯಿತು. ಆದರೆ ಪುತಳಾನ ಮಾತು ಅಲ್ಲವೆನ್ನುವಂತಿರಲಿಲ್ಲ. ಬೆಳಗಿನಿಂದ ಯಾರನ್ನು ಕಂಡರೂ, ಬಾಪೂಸಾಹೇಬನ ಬಗ್ಗೆ ಒಂದಿಲ್ಲೊಂದು ದೂರು ಹೇಳಿದ್ದರು. ಪಾಟೀಲರ ಅಭಿಮಾನಕ್ಕೆ ಇದರಿಂದ ಮಾಯಲಾರದ ಗಾಯ ಉಂಟಾಗಿತ್ತು. ಒಳಗಿಂದೊಳಗೇ ಅವರ ರಕ್ತ ಕುದಿಯಿತು.

ಇಷ್ಟು ಮಾತಾಡಿ ಪುತಳಾಬಾಯಿ ಒಳಗೆ ಹೋದಳು. ಯಶವಂತರಾಯರು ಮತ್ತೆ ಲೋಡಿಗಾತುಕೊಂಡು ವಿಚಾರಮಗ್ನರಾದರು. ಮುಂದೆ ಕೆಲ ನಿಮಿಷಗಳ ನಂತರ ಬಾಪೂಸಾಹೇಬ ಸ್ನಾನ ಮುಗಿಸಿಕೊಂಡು ಬಂದು ಮಾವನನ್ನು ಕಂಡ. ಊರಲ್ಲಿ ಯಾರಾರು ಭೆಟ್ಟಿಯಾದರು ಎಂಬುದನ್ನು ಕೇಳಿಕೊಂಡ. ಯಶವಂತ ರಾಯರು ಅಪೂರ್ವ ಸಂಯಮದಿಂದ ಉತ್ತರವಿತ್ತರು.

ಮಧ್ಯಾಹ್ನದ ಊಟಕ್ಕೆ ದಾದಾ-ಲಕ್ಷ್ಮಣರನ್ನು ಕರೆಕಳಿಸಲು ಯಶವಂತ ರಾಯರು ಬಾಪೂಸಾಹೇಬನಿಗೆ ತಿಳಿಸಿದರು. ಇದನ್ನು ಕೇಳಿದಾಗ ಬಾಪೂಸಾಹೇ-ಬನ ಹುಬ್ಬು ಗಂಟಿಕ್ಕಿದವು. ಅಷ್ಟರಲ್ಲಿ ಪುತಳಾಬಾಯಿ "ಅವರಿಬ್ಬರಿಗೂ ಬರಾಕ ಆಗೂದುಲ್ಲ ಅಂತ ಹೇಳಿ ಕಳಿಸ್ಯಾರ ಮಾಮಾ. ನೀವಿಬ್ಬರs ಊಟಕ್ಕ ಬರ್ರಿ" ಎಂದು ಹೇಳಿದಳು.

"ಅದ್ಹ್ಯಾಂಗ ಬರುದುಲ್ಲ ಅಂತಾರ? ನನ್ನಿದರಿಗೆ ಬರತೀನಿ ಅಂತ ಹೇಳಿದವರು ಈಗ ತಪ್ಪಸತಾರು? ಆತು, ನಾನs ಹೋಗಿ ಇನ್ನೊಮ್ಮೆ ಕರದ ಬರತೀನಿ" ಎಂದು ಯಶವಂತರಾಯರು ಹಟದಿಂದಲೇ ಹೊರಟು ನಿಂತರು. ಅದನ್ನು ನೋಡಿದ ಬಾಪೂಸಾಹೇಬ,

"ಅವರಿಬ್ಬರೂ ವಾಡೇದಾಗ ಕಾಲಿಡಲಿಕ್ಕೆ ಲಾಯಕ ಇಲ್ಲ ಮಾಮಾ. ನೀವು ಹೋಗಬ್ಯಾಡ್ರಿ" ಎಂದ ದರ್ಪದಿಂದ.

ಆದರೆ ಅಳಿಯನ ದರ್ಪಕ್ಕೆ ಮಾವನ ಅಭಿಮಾನ ಸೊಪ್ಪು ಹಾಕುವಂತಿರಲಿಲ್ಲ. ಇಂದು ಪಾದಳ್ಳಿಯಲ್ಲಾದ ಮುಖಭಂಗದಿಂದ ಯಶವಂತರಾಯರು ಕೋಪದಿಂದ ಬೆಂಕಿಯಾಗಿದ್ದರು. ಅದರ ಜೊತೆಗೆ ಮಧ್ಯಾಹ್ನದ ಈ ಅಸಭ್ಯಪ್ರಸಂಗದಿಂದ ಅವರ ಸಹನೆ ಮೀರಿತು. ಊಟದ ಹೊತ್ತಿಗೆ ಆಜನ್ಮ ವೈರಿ ಮನೆಗೆ ಬಂದರೂ ಪ್ರೀತಿಯಿಂದ ಉಣಬಡಿಸುವ ಸಂಸ್ಕೃತಿ ಯಶವಂತರಾಯರದಾಗಿತ್ತು. ಒಮ್ಮೆ ಹಟ ಹೊಕ್ಕಿತೆಂದರೆ ಪ್ರಾಣ ಹೋದರೂ ಚಿಂತೆಯಿಲ್ಲ ಹಟ ನಡೆಸುವದು ಅವರ ಸ್ವಭಾವವಾಗಿತ್ತು. ಅಂತಲೇ ಬಾಪೂಸಾಹೇಬನ ದರ್ಪಕ್ಕಿಂತ ಹತ್ತುಪಟ್ಟು ದರ್ಪದಿಂದ "ಹಾಂಗಿದ್ದರ ನಂದೂ ವಾಡೇದಾಗ ಊಟ ಇಲ್ಲ ಇಂದ" ಎಂದು ನುಡಿದರು.

ಬಾಪೂಸಾಹೇಬ ಏನೂ ಮಾತಾಡಲಿಲ್ಲ. ಯಶವಂತರಾಯರು ಹೊರಟೇ ನಿಂತರು. ತುಂಬಿದೆಲೆಯನ್ನು ಬಿಟ್ಟು ಹೋಗಬಾರದೆಂದು ಪುತಳಾಬಾಯಿ ಆಗ್ರಹಪಡಿಸಿದಳು.

ರತ್ನಾ ಅಳುತ್ತ ತಂದೆಯ ಕಾಲು ಹಿಡಿದು "ಬಾಬಾ ಹಂಗ ಊಟದ ಹೊತ್ತಿಗೆ ಬಿಟ್ಟು ಹೋಗಬ್ಯಾಡ್ರಿ" ಎಂದು ಅಂಗಲಾಚಿದಳು.

ಆದರೆ ಯಶವಂತರಾಯರು, ಕಣ್ಣೀರೊರೆಸಿಕೊಳ್ಳುತ್ತ "ಬಿಡ ತಂಗೀ. ಇವೊತ್ತ ಈ ಮನ್ಯಾಗ ಅನ್ನದ ಋಣ ಬೇಡಿ ಬಂದಿಲ್ಲ" ಎನ್ನುತ್ತ ಹೊರಟೇ ಬಿಟ್ಟರು.

ಈ ಸುದ್ದಿ ಲಕ್ಷ್ಮಣ ದಾದಾ ಇವರಿಗೆ ತಿಳಿದ ಕೂಡಲೆ, ದಾದಾ ಓಡುತ್ತ ಬಂದು, ಮಾರುತಿಯ ಗುಡಿಯ ಹತ್ತರ ಹೊರಟಿದ್ದ ಗಾಡಿಯನ್ನು ತರುಬಿದ. "ಎಜ್ಜಾ ಹಂಗ ಊಟ ಮಾಡದ ಪಾದಳ್ಳಿ ಬಿಟ್ಟು ನೀವು ಹೋಗಲಾಕ ಬಿಡೂದುಲ್ಲ ನಾ. ನಡೀರಿ ಮನೆಗೆ. ನಮ್ಮಲ್ಲೇ ಊಟಾ ಮಾಡಿ ಆಮ್ಯಾಲೆ ಕೊಳ್ಳ ಕಟ್ಟರಿ" ಎಂದು ಹೇಳಿದ.

ಕ್ರೋಧಸಂತಪ್ತರಾಗಿದ್ದ ಯಶವಂತರಾಯರ ಕಣ್ಣಲ್ಲಿ ನೀರೂರಿತು. "ದಾದಾ ನೀನು ಒಂದು ವಚನಾ ಕೊಟ್ಟರ ನಿಮ್ಮ ಮನೀಗೆ ಬರತೀನಿ ನೋಡು" ಎಂದು ಯಶವಂತರಾಯರು ಹೇಳಿದರು.

"ಹೇಳ್ರಿ ಎಜ್ಜಾ,ನೀವು ಅಂದದ್ದನ್ನ ನಡೆಸಿಕೊಡಾಕ ನಾ ತಯಾರ ಅದೀನು." ದಾದಾ ಮಾತು ಕೊಟ್ಟ.

"ನನ್ನ ಮಗಳು– ರತ್ನಾ– ಆಕಿ ಸಂಸಾರ ಆಗಡು ಆಗದ್ಹಾಂಗ ನೋಡಿ

ಕೋತೀನಿ ಅಂತ ಆಣೀ ಮಾಡು ತಮ್ಮಾ. ಪಡದಯ್ಯನ ಗೆಣೆತನಾ ನಮ್ಮ ಬಾಪೂ ಬಿಡೂ ಹಾಗ ಮಾಡತೀನಿ ಅಂತ ವಚನ ಕೊಡು" ಯಶವಂತರಾಯರ ಪ್ರತಿಶಬ್ದ ದಲ್ಲಿಯೂ ಉತ್ಕಟತೆಯಿತ್ತು.

"ಈ ಮಾತು ನಡಸಿಕೊಡೂದು ದೇವರ ಮನಿಸಿನ್ಯಾಗಿದ್ದರ ಆದೀತು ಎಜ್ಜಾ. ನನ್ನಿಂದೇನಾದರೂ ಆಗೂದಿದ್ರ ಹೇಳ್ರಿ ಮಾಡತೀನು. ಈಗನಕಾ ಮನೀಗೆ ನಡೀರಿ." ಎಂದು ಹೇಳಿ ದಾದಾ ಯಶವಂತರಾಯರ ಗಾಡಿಯನ್ನು ಹಿಂದಿರುಗಿಸಿದ.

ಗಾಡಿಯಿಂದಿಳಿದು ಯಶವಂತರಾಯರು ದಾದಾನ ಜೊತೆಗೆ ಸಾಗಿದರು. ಬಾಪೂಸಾಹೇಬ ದಾದಾನ ಬಗ್ಗೆ ಇಷ್ಟೇಕೆ ಕಿಡಿಕಿಡಿಯಾಗಿರುವನೆಂಬುದನ್ನು ಅವರು ತಿಳಿದುಕೊಳ್ಳಬೇಕಾಗಿತ್ತು. "ದಾದಾ ನಾನಾಮಾಮಾ ಸತ್ತ ಬಗ್ಗೆ ಜನ ರಾಡಿಕೊಳೂದನ್ನ ಕೇಳಿ ನಮ್ಮ ಬಾಪೂನ ಜೋಡಿ ಏನರ ಜಗಳಾತೇನು ತಮ್ಮಾ?" ಎಂದು ಕೇಳಿದರು.

ದಾದಾನಿಗೆ ಈ ಪ್ರಶ್ನೆ ಅನಿರೀಕ್ಷಿತವಾಗಿತ್ತು. "ನಾ ಊರಿಗೆ ಬಂದ ಎರಡ ದಿನಾ ಆದರೂ ಹೊರಗ ಬಿದ್ದಿಲ್ಲ; ಚಿಮಣಾನ ಮಾತಾಡಸಾಕ ಸೈತ ವಾಡೇಕ ಹೋಗಿಲ್ಲ. ಜನರು ಏನ ಆಡಿಕೊಂತಾರ ಎಜ್ಜಾ ?" ಎಂದು ಮುಗ್ಧನಾಗಿ ದಾದಾ ಕೇಳಿದ.

"ಎಲುವಿಲ್ಲದ ನಾಲಿಗಿ, ಏನರ ಆಡಿಕೊಂತಿರತಾರು. ಅದನ ತಲ್ಯಾಗ ಹಾಕ್ಕೊಳ್ಳೊಬ್ಯಾಡ. ಚಿಮಣಾನ ಬಗ್ಗೆ ಜನರು ಹುಟ್ಟಿಸಿದ ಸುದ್ದಿ ಕೇಳಿ ತಲಿ ಕೆಡಿಸಿ ಗೋಬ್ಯಾಡ" ಎಂದು ಯಶವಂತರಾಯರು ಎಚ್ಚರಿಕೆ ಹೇಳಿದರು.

ದಾದಾ ಸುಮ್ಮನೆ ಇದ್ದ; ವಿಚಾರಮೂಢನಾದಂತಿದ್ದ.

ಯಶವಂತರಾಯರಿಗೆ ಮಾತಿನ ದಿಕ್ಕನ್ನು ಬದಲಿಸಬೇಕಾಗಿತ್ತು. ಅಂತೆಯೇ ಬಾಪೂಸಾಹೇಬ ಪಡದಯ್ಯನವರ ವಿಷಮ-ಸ್ನೇಹ, ಗೌಡರ ತೀವ್ರ ವಿರೋಧ ಇವುಗಳನ್ನು ಕುರಿತು ಹೇಳತೊಡಗಿದರು. ಈಗ ಪಡದಯ್ಯ ಬಾಪೂಸಾಹೇಬ ರಿಬ್ಬರೂ ಗೌಡರ ಹಗೆಗಳನ್ನು ಲೂಟಿ ಮಾಡಿಸುವ ಪ್ರಯತ್ನದಲ್ಲಿದ್ದಾರೆ. ಅದು ವಿಫಲವಾದರೆ ಮಾತ್ರ ಇವರಿಬ್ಬರ ಸ್ನೇಹಕ್ಕೆ ಚ್ಯುತಿ ಬರಬಹುದೆಂದು ಸೂಚಿಸಿದರು.

ಆದರೆ ದಾದಾನ ಲಕ್ಷ್ಯ ಆ ಕಡೆಗಿರಲಿಲ್ಲವೆಂಬುದನ್ನರಿತರು. ನಾನಾಕಾಕಾನ ಮರಣದ ಬಗ್ಗೆ ಜನರು ಆಡಿಕೊಳ್ಳುವದಾದರೂ ಏನು ಎಂಬುವದನ್ನು ತಿಳಿಸುವದು ಅನಿವಾರ್ಯವಾಯಿತು. ಕೊನೆಗೂ ಮನಸ್ಸಿಲ್ಲದ ಮನಸ್ಸಿನಿಂದ ಬಾಪೂಸಾಹೇಬ

ಹಾಗೂ ಚಿಮಣಾರ ಅನೈತಿಕ ಸಂಬಂಧವಾಗಿಯೂ ತಿಳಿಸಬೇಕಾಯಿತು. ನಾನಾ ಸತ್ತದ್ದು ವಿಷಪ್ರಯೋಗದಿಂದಲೇ ಎಂದು ಜನರಲ್ಲಿ ದಟ್ಟವಾದ ವಾರ್ತೆಯಿತ್ತು. ಅದನ್ನೂ ಹೇಳಿ, "ನೋಡು ದಾದಾ, ಆದ ಮಾತಿಗೆ ಸಿಟ್ಟಿಗೆದ್ದು ಉಪಯೋಗ ಇಲ್ಲ. ನೀ ಈಗ ದುಡುಕಬಾರದು. ಬಾಪೂ ಚಿಮಣಾನ್ನ ಲಗ್ನ ಆದರ ಎಲ್ಲಾ ಪಾಡಾಗತೇತಿ. ಆ ಕೆಲಸಾ ಮಾಡೂ ಜವಾಬ್ದಾರಿ ನನ್ನ ಮ್ಯಾಗ ಬಿಡು. ಇದಕ ಯಾರ ಒಗತನಾನೂ ಕೆಡಸೂ ಜರೂರಿ ಇಲ್ಲ." ಎಂದು ಪರ್ಯಾಯವಾಗಿಯೇ ಉಪದೇಶವಿತ್ತರು. ಅವರ ಮನಸ್ಸು ಈ ಸಂಗತಿಯ ವಿಪರೀತ ಪರಿಣಾಮಗಳನ್ನೆಲ್ಲ ಮೊದಲೇ ಊಹಿಸಿದಂತಿತ್ತು. ಪರಿಸ್ಥಿತಿ ವಿಷಮವಾಗಿದ್ದರಿಂದ ಎಚ್ಚರಿಕೆಯಿಂದಲೇ ಸಾಗಬೇಕಾಗಿತ್ತು.

ಈ ಸಂಗತಿಯೆಲ್ಲ ದಾದಾನಿಗೆ ಹೊಸದಾಗಿತ್ತು; ಅನಿರೀಕ್ಷಿತವಾಗಿತ್ತು. ಆದರೆ ವಾತಾವರಣದ ಮೇಲಿಂದ ಇಲ್ಲವೆನ್ನಲೂ ಬರುವಂತಿರಲಿಲ್ಲ. ನಾನಾಕಾಕಾ ಸತ್ತಂದಿನಿಂದ, ಇಂಥದೇನಾದರೂ ಘಟನೆ ಆ ಮರಣಕ್ಕೆ ಕಾರಣವಾಗಿರಬೇಕೆಂಬ ಸಂಶಯ ಮಾತ್ರ ಅವನಿಗೆ ಬಂದಿತ್ತು. ಈಗ ಯಶವಂತರಾಯರ ಬಾಯಿಂದ ಈ ಸಂಗತಿಗಳನ್ನೆಲ್ಲ ಕೇಳಿದ ಮೇಲೆ ಅವನ ಮೈಯೆಲ್ಲ ಉರಿಯಲಾರಂಭಿಸಿತು. ಆದರೆ ಪಾಟೀಲರು ಅತಿಥಿಯಾಗಿ ಮನೆಗೆ ಬಂದಾಗ ತನ್ನ ಉದ್ದೇಶವನ್ನು ತೋರಗೊಡಬಾರದು; ಅವರನ್ನು ಉಪಚರಿಸಿ ಕಳಿಸುವದು ತನ್ನ ಧರ್ಮವೆಂದು ತಿಳಿದು, ಮನಸ್ಸಿಗಾದ ಗಾಯವನ್ನು ಸಹಿಸಿಕೊಂಡ. ಊಟ ಮುಗಿದ ಕೂಡಲೆ ಹೊರಟೇ ಬಿಡುವೆನೆಂದು ಹಟಹಿಡಿದದ್ದರಿಂದ, ದಾದಾ ಅವರನ್ನು ಕಳಿಸಿ ಬರಲು, ಮತ್ತೆ ಮಾರುತಿಯ ಗುಡಿಯ ವರೆಗೆ ಗಾಡಿಯ ಹಿಂದೆ ನಡೆದ. ಆಗ ಕೂಡ ಯಶವಂತರಾಯರು ದಾದಾನಿಗೆ ಉಪದೇಶ ಮಾಡುತ್ತಲೇ ಇದ್ದರು.

ಅವರನ್ನು ಕಳಿಸಿ ತಿರುಗಿದಾಗ ಆಗಲೇ ಮಧ್ಯಾಹ್ನದ ಮೂರು ಗಂಟೆಯಾಗಿತ್ತು. ಸಂಜೆಯ ವರೆಗೆ ಹೊತ್ತು ಕಳೆಯುವ ತಾಳ್ಮೆ ಅವನಿಗಿರಲಿಲ್ಲ. ದಾದಾ ಗರಡೀ ಮನೆಗೆ ಧಾವಿಸಿ ಬಂದ. ತನ್ನ ಗೆಳೆಯರೆದುರು ಮನಸ್ಸಿನ ಎಲ್ಲ ವಿಚಾರಗಳನ್ನು ತೋಡಿಕೊಂಡು, ಸೇಡು ತೀರಿಸಲು, ಅವರ ಸಹಕಾರವನ್ನು ಪಡೆಯಬೇಕಾಗಿತ್ತು. ಆದರೆ ಅಲ್ಲಿ ಅವನಿಗೆ ತನ್ನ ನಚ್ಚಿನ ಗೆಳೆಯರಾರೂ ಕಾಣಿಸಲಿಲ್ಲ. ಇದ್ದ ಒಬ್ಬಿಬ್ಬರು, ದಾದಾನ ಉರಿಯುವ ಮುಖ ನೋಡಿಯೇ ತಣ್ಣಗಾದರು. ಕಿಡಿಕಾರುವಂತೆ ಕೆಂಪಗಾದ ಕಣ್ಣು, ಕೆಂಜಿಗ ಕಡಿದಂತೆ ಉಬ್ಬಿದ ಮುಖ, ದೀರ್ಘ

ವಾಗಿ ಉಸಿರು ಬಿಡುತ್ತಿದ್ದ ಮೂಲಕ ಹೊಯ್ದಾಡುವ ಹೊರಳೆಗಳು- ಈ ಲಕ್ಷಣ ಗಳಲ್ಲಿಯೇ ಅನಾಹುತದ ಸಂಜ್ಞೆಯಿತ್ತು. ದಾದಾ ಸ್ವಲ್ಪ ಹೊತ್ತು ಅತ್ತಿತ್ತ ನೋಡಿ "ಎಲ್ಲಿ ಹೋಗ್ಯಾರಲೇ ಉಳದವರು ?" ಎಂದು ಗುಡುಗಿದ.

"ಪಡದಯ್ಯ ಸ್ವಾಮೇರ ಮಟಕ್ಕ ಹೋಗ್ಯಾರೋ ಏನೊಪಾ" ಎಂಬ ಉತ್ತರ ಕಿವಿಗೆ ಬಿತ್ತು.

"ಅಲ್ಲೇನ ಇವರ ದಗದ?" ಎಂದು ದಾದಾ ಗುಡುಗಿದ.

"ಬಡವರು ಕಾಳಿಲ್ಲದೆ ಕೂತಾಗ ಗೌಡರ ಹಗೇ ತಗದು ಕಾಳು ಕೊಡಿಸುವ ಬಗ್ಗೆ ಮಟದಾಗ ಬಾಪೂಸಾಬರು ಪಡದಪ್ಪನವರು ಬಡ ಜನರನ್ನು ಕರೆಸ್ಯಾರು. ಅಂಬಿಗೇರ ಬಸ್ಯಾ, ಪಿಂಜಾರ ಲಾಡ, ಇವರಿಗೂ ಕರೆಸಿದ್ದರಂತ ಹೋಗ್ಯಾರು. ಗೌಡರ ಹಗೇ ಇಂದ ಲೂಟಿ ಆಗೂದು, ಬಡವರಿಗೆ ಕಾಳು ಹಂಚಿಕೊಡೂದು. ಮಠದಾಗ ಬಾಪೂಸಾಹೇಬರು ಕುಂತ ಟರಾಯಿಸತಾತರಂತ' ಎಂದು ಅವರು ತಮಗೆ ತಿಳಿದ ಸಂಗತಿಯನ್ನೆಲ್ಲ ಹರಕುಮುರುಕಾಗಿ ತಿಳಿಸಿದರು.

ದಾದಾ ಗರಡೀ ಮನೆಯಲ್ಲಿಯ ಒಂದು ಲೋಡನ್ನೇ ಗದೆಯಂತೆ ಎತ್ತಿ ಹಿಡಿದುಕೊಂಡು ಹೊರಹೊರಟ.

"ಲೋಡ ಯಾಕೋ ದಾದಾ ?" ಎಂದು ಸಂಗಡಿಗರು ಕೇಳಿದಾಗ ದಾದಾ "ಬಾಪೂಸಾಹೇಬನ ತಲೆ. ಒಡಿಲಾಕ" ಎಂದಿಷ್ಟೇ ಹೇಳಿದವನೇ ಮಠದತ್ತ ಓಡಿದ.

ವಾಡೆಯ ಹತ್ತರ ಅವನನ್ನು ಸಂಧಿಸಿದ ವಾಲೀಕಾರ ಮಲಪ್ಪ ದಾದಾನ ರಾವು ನೋಡಿ "ಹೀಂಗ್ಯಾಕ ಹೊಂಟೇದಿ ದಾದಾ ?" ಎಂದು ಕೇಳಿದ.

ದಾದಾ "ಕೊಲಿ ಮಾಡಿದವನ ತಲಿ ಹೊಡೀಲಾಕ, ತಂದಲ್ಲದ ಹೆಣ್ಣಿನ್ನ ಮುಟ್ಟಿದ ಕೈಕಿತ್ತರ ಸಾಕ, ಹೀಂಗಲ್ಲದ ಇನ್ಹ್ಯಾಂಗ ಹೋಗೂದು?" ಎಂದು ನಿಲ್ಲದೆ ತನ್ನ ರಭಸದಲ್ಲಿಯೇ ಹೇಳಿ ಮುಂದೆ ಧಾವಿಸಿದ.

:: ೭ ::

ಮಠಕ್ಕೆ ಹೋಗುವ ದಾರಿ ಜಾಗೀರದಾರರ ವಾಡೆಯ ಮುಂದೆಯೇ ಹಾಯು ತ್ತಿತ್ತು. ವಾಡೆಯ ಮಹಾದ್ವಾರದ ಎರಡೂ ಬದಿಗೂ ಎತ್ತರವಾದ ವಿಶಾಲವಾದ ಕಟ್ಟೆಗಳಿದ್ದದ್ದರಿಂದ ಆ ದಾರಿ ಇಕ್ಕಟ್ಟಿನದಾಗಿತ್ತು. ದಾದಾ ಲೋಡು ಹಿಡಿದು ಕೊಂಡು ಮಠದ ಕಡೆಗೆ ಧಾವಿಸಿ ಹೊರಟದ್ದನ್ನು ವಾಡೆಯ ಸದರಿನಲ್ಲಿ ಚಿಲುಮೆ ಯನ್ನು ಸೇದುತ್ತ ಕುಳಿತಿದ್ದ ಹುಲಿಬಾಟಿ–ಹಳಬರು ನೋಡಿದರು. ವಾಲೀಕಾರ ಮಲ್ಲನಿಗೆ ದಾದಾ ಕೊಟ್ಟ ಉತ್ತರವು ಅವರ ಕಿವಿಗೂ ಬಿದ್ದಿತ್ತು. ಬಾಪೂಸಾಹೇಬ ಆಗ ವಾಡೆಯಲ್ಲಿರಲಿಲ್ಲ.

ವಾಡೆಯ ನಡುಮನೆಯಲ್ಲಿ ಕಟ್ಟಿದ ತೂಗುಮಂಚದ ಮೇಲೆ ಕುಳಿತು ಪುತ ಳಾಬಾಯಿ ಚಿಮಣಾಳೊಡನೆ ಮಾತು-ಕತೆ ನಡೆಸಿದ್ದಳು. ಅಷ್ಟರಲ್ಲಿಯೇ "ಯವ್ವಾ ಗಾತ ಆತು. ಚಿಮಣಾತಾಯಿ ಸುದ್ದಿ ದಾದಾಗ ತಿಳದೈತೊ ಏನೋ ? ಅವಾ ಮಟದ ಕಡೆ ಲೋಡ ಹಿಡಕೊಂಡು ಓಡಿದ. ಮಕಾ ರಾವು ರಾವು ಬಡೀತಿತ್ತು" ಎಂದು ದಳವಾಯಿ ಗಾಬರಿಯಿಂದ ತೇಕುತ್ತ ಒಳಗೆ ಬಂದು ಪುತಳಾಬಾಯಿಗೆ ಹೇಳಿದ. ಮೂಲೆಯಲ್ಲಿ ಕುಳಿತ ಚಿಮಣಾಳನ್ನು ಅವನು ನೋಡಿರಲೇ ಇಲ್ಲ. ಈಗ ಅವಳನ್ನು ನೋಡಿದೊಡನೆ ಅವನ ಮುಖ ಮತ್ತಿಷ್ಟು ಹುಚ್ಚು ಸುರಿಯಿತು.

ಪುತಳಾಬಾಯಿ ಗಾಬರಿಗೊಂಡಳು. ಆದರೂ ಪ್ರಸಂಗಾವಧಾನದಿಂದ ದಳ ವಾಯಿಗೆ ಹೋಗಲು ಸನ್ನೆ ಮಾಡಿ "ರತ್ನಾ, ರತ್ನಾ!" ಎಂದು ಕೂಗಿದಳು.

ಒಳಗಿನ ಕೋಣೆಯಲ್ಲಿ ಹೆರಳು ಹಾಕಿಕೊಳ್ಳುತ್ತಿದ್ದ ರತ್ನಾ ಈ ದನಿಗೆ ಗಾಬರಿಯಾಗಿ ಓಡಿ ಬಂದಳು.

"ರತ್ನಾ ನಿನ್ನ ಕುಂಕುಮ ಪುಣ್ಯೇದಿಂದ ಇವೊತ್ತ ಬಾಪೂ ದಾದಾನ ಕೈಯಾ ಗಿಂದ ಪಾರಾಗಬೇಕು. ಏನ ಮಾಡೊದೈತಿ ಈಗs" ಎಂದು ಅಳಹತ್ತಿದಳು.

ಇದನ್ನೆಲ್ಲ ಕೇಳಿ ತನ್ನ ಅಂತ್ಯಕಾಲವೂ ಸಮೀಪಿಸಿತೆಂದು ಚಿಮಣಾಳ ರಕ್ತ ತಣ್ಣಗಾಯಿತು. ಗಾಬರಿಯಿಂದ ಅವಳ ಬಾಯಿಂದ ಮಾತುಗಳೇ ಹೊರಡಲಿಲ್ಲ.

ಸುಮ್ಮನೆ ಬೇಟೆಗಾರನ ನೋಟದಿಂದ ಬೆದರಿದ ಎರಳೆಯಂತೆ ದೊಡ್ಡ ಕಣ್ಣುಗಳನ್ನು ತೆರೆದು ಭಯದಿಂದ ನೋಡಹತ್ತಿಳು.

ರತ್ನಾಳಿಗೆ ಮೊದಲೇನೂ ತಿಳಿಯಲಿಲ್ಲ. ಪುತಳಾಬಾಯಿ ದಾದಾ ಮಠಕ್ಕೆ ಓಡಿ ಹೋದ ಸಂಗತಿಯನ್ನು ಹೇಳಬೇಕಾಯಿತು. ಆದರೆ ರತ್ನಾ ಎದೆಗುಂದಲಿಲ್ಲ. ಇನ್ನೂ ಅವಳ ಹೆರಳು ಮುಗಿದಿರಲಿಲ್ಲ. ಕೂದಲನ್ನೂ ಹಾಗೆಯೇ ಮುಡಿಕಟ್ಟಿ ಕೊಂಡಳು. ಒಳಗೆ ಹೋಗಿ ಹಣೆಯ ಮೇಲೆ ಅವಸರವಸರವಾಗಿ ಕುಂಕುಮದ ಬೊಟ್ಟನ್ನಿಟ್ಟುಕೊಂಡು, ಅಡ್ಡ ಸೆರಗು ಕಟ್ಟಿಕೊಂಡು ಹೊರಗೆ ಬಂದಳು. ಅವಳ ಕಣ್ಣುಗಳಲ್ಲಿ ಯಾವುದೊ ದೂರದ ನೋಟವನ್ನು ನೋಡುವಂತಿದ್ದವು; ತುಟಿಗಳು ಬಿಗಿದುಕೊಂಡಿದ್ದವು. ಅವಳ ಈ ಅವತಾರವನ್ನು ನೋಡಿದ ಪುತಳಾಬಾಯಿ "ಎಲ್ಲಿಗೆ ಹೊಂಟೀ ರತ್ನಾ?" ಎಂದು ಕೇಳಿದರೂ ಉತ್ತರಬರಲಿಲ್ಲ. ಜಾಗೀರದಾರರ ಮನೆಯ ರಿವಾಜಿನಂತೆ ಅವಳು ಘೋಷಾ ಪಾಲಿಸ ಬೇಕಾಗಿತ್ತು. ಆದರೆ ಅದನ್ನೂ ಧಿಕ್ಕರಿಸಿ ರತ್ನಾ ಹೊರಗೆ ಓಡಿದಳು.

"ರತ್ನಾ! ರತ್ನಾ!" ಎಂದು ಪುತಳಾಬಾಯಿ ಕೂಗಿಕೊಂಡದ್ದೂ, "ಬಾಯಿ ಸಾಹೇಬ! ಬಾಯಿ ಸಾಹೇಬ!" ಎಂದು ದಳವಾಯಿ ಕೂಗಿಕೊಂಡದ್ದೂ ಅವಳಿಗೆ ಕೇಳಿಸಲೇ ಇಲ್ಲ.

ಅಂದೇ ರಾತ್ರಿ ಗೌಡರ ಹಗೆಗಳನ್ನು ಲೂಟಿ ಮಾಡುವ ಯೋಜನೆಯ ವಿವರಗಳನ್ನು ಸಿದ್ಧಪಡಿಸುವ ಸಭೆಯು, ಪಡದಯ್ಯನವರ ಮಠದಲ್ಲಿ ಆಗ ಸೇರಿತ್ತು. ಮಾದಿಗರು, ತಳವಾರರು, ಕೊರಬು ಜನರು ಹಿಂಡುಹಿಂಡಾಗಿ ಕೂಡಿದ್ದರು. ಬಾಪೂಸಾಹೇಬನ ವಿಶ್ವಾಸಿಕರಾದ ಗರಡಿಯಾಳುಗಳೂ ಅಲ್ಲಿದ್ದರು.

"ನೀವೆಲ್ಲಾರೂ ಕೂಡಿ ಇಂದ ಗೌಡರ ಮನಿಗೆ ಹೋಗಿರಿ. ಹಗೇ ತಗದು ಕಾಳ ಕೊಡಾಕs ಬೇಕು ಅಂತ ಹಟಾ ಹಿಡೀರಿ. ಆರು ತಿಂಗಳ ಸಾಕಾಗುವಷ್ಟು ಕಾಳು ಅವರೊಬ್ಬರ ಹಗೇದಾಗ ಅದಾವ. ಪ್ರಸಂಗ ಬಂದಾಗ ವಾಡೇದಾಗಿನ ಎಲ್ಲಾ ಹಗೇನೂ ನಿಮ್ಮವs" ಎಂದು ಬಾಪೂಸಾಹೇಬ ಆವೇಶದಿಂದ ಹೇಳುತ್ತಿದ್ದ. ಪಡದಯ್ಯನವರು ಗೋಣು ಹಾಕುತ್ತಿದ್ದರು.

ಮಠದ ಪಾವಟಿಗೆಗಳನ್ನೇರಿ ಬಂದ ದಾದಾ "ಜಾಗೀರದಾರರು ಎಲ್ಲಿ ಅದಾರು?" ಎಂದು ಕೂಗುತ್ತಲೇ ಒಳಗೆ ಬಂದ.

ಬಾಪೂಸಾಹೇಬನ ಲಕ್ಷ್ಯ ಬಾಗಿಲ ಕಡೆಗಿರಲಿಲ್ಲ. ದಾದಾನ ದನಿ ಕೇಳು

ತ್ತಲೇ ಅತ್ತ ನೋಡಿದ. ದಾದಾನ ಅವಡುಗಚ್ಚಿದ ಮುಖವನ್ನು ನೋಡುತ್ತಲೇ ಅವನ ಅಂಗಾಂಗವೆಲ್ಲ ಬೆವರಿಟ್ಟಿತು. ಏನೋ ಹೇಳಬೇಕೆಂದವನು ತೊದಲುತ್ತ, ಕುಳಿತಲ್ಲಿಯೇ ನಡುಗಹತ್ತಿದ.ದಾದಾನ ನಿಲುವು, ಅವನಲ್ಲಿ ಸಾವಿನ ಭಯವನ್ನೇ ಬಿತ್ತಿತು. ಸ್ವಾಮಿಗಳ ಕಾಲು ಹಿಡಿದು "ಸ್ವಾಮೇರಃ ನನ್ನ ಕಾಪಾಡ್ರಿ" ಎಂದು ಅಂಗಲಾಚಿದ.

ಜನರೆಲ್ಲ ಉದ್ದೀಪಿತರಾದರು. ಕೆಲವರು ಅವನ ಕೈಯಲ್ಲಿಯ ಲೋಡು ಕಸಿದುಕೊಳ್ಳಬೇಕೆಂದು ಪ್ರಯತ್ನಿಸಿ, ಕಪಾಳಮೋಕ್ಷ ಪಡೆದು ತೆಪ್ಪಗಾದರು. ಇದೇ ಅವಸರದಲ್ಲಿ ಭಾಪೂಸಾಹೇಬ ಸ್ವಾಮಿಗಳ ಅಂತರಂಗದ ಕೋಣೆಯಲ್ಲಿ ನುಸುಳಿ ಬಾಗಿಲು ಹಾಕಿಕೊಂಡಿದ್ದ.

ಪಡದಯ್ಯನವರು ತಾವಾಗಿ ದಾದಾನನ್ನು ಎದುರಿಸುವ ಧೈರ್ಯವಿಲ್ಲದೆ "ಏ ಬಸಪ್ಪ, ಲಾಡಸಾಬ, ಆ ದಾದಾನ್ನ ತಡದಕುಂದಸ್ರ್ಯೇ! ಏನಂತಾ ನೇನ ಕೇಳ್ರಿ. ಇಚಾರ ಮಾಡಿ ನ್ಯಾಯ ಕೊಡತೀವಿ" ಎಂದು ಕೂಗಿ ಕೊಂಡರು.

ಬಸಪ್ಪ ಹಾಗೂ ಲಾಡಸಾಬ ಇವರಿಬ್ಬರೂ ದಾದಾನ ನಚ್ಚಿನ ಗೆಳೆಯರು. ಅವನ ಮುಖ ನೋಡುತ್ತಲೇ ದಾದಾನ ಸಿಟ್ಟಿನ ಕಾರಣವೇನಿರಬಹುದೆಂದು ಅವರು ತಟ್ಟನೆ ಊಹಿಸಿದರು. ಅವರಿಬ್ಬರೂ ಆವನ ಕಾಲಿಗೆ ಬಿದ್ದು, "ಸ್ವಲ್ಪ ದಮ್ಮ ಹಿಡಿಯೋ ದಾದಾ; ಹಾಗೆಲ್ಲ ಸಿಟ್ಟಿನ ಕೈಯಾಗ ಬುದ್ದೀ ಕೊಡಬ್ಯಾಡ. ಸ್ವಾಮೇರ ಏನ ಹೇಳತಾರ ಅಷ್ಟು ಕೇಳು" ಎಂದು ಹಲುಬಿದರು.

ದಾದಾ ಅವರನ್ನು ಬದಿಗೆ ನೂಕಿ ಪಡದಯ್ಯನವರ ಸಮ್ಮುಖದಲ್ಲಿ ಬಂದು ನಿಂತು "ಸ್ವಾಮೇರ, ಮೊದಲು ಆ ಹಾವಿನ್ನ ಹೊರಗ ಹಾಕ್ರಿ. ಅವನ ನೆತ್ತರ ಮಟದಾಗ ಬೀಳೂದು ಬ್ಯಾಡ" ಎಂದು ಗುಡುಗಿದ.

"ಜಾಗೀರದಾರರು ಅಂತಾದ ಏನ ಮಾಡ್ಯಾರೋ ದಾದಾ? ಯಾರ್‍ಯಾರದೋ ಮಾತ ಕೇಳಿಕೊಂಡು, ಏನರ ಮಾಡಬ್ಯಾಡ, ಹುಚ್ಚಪ್ಪ!" ಎಂದು ಪಡದಯ್ಯನ ವರು ಮಗುವನ್ನು ರಮಿಸುವಂತೆ ಹೇಳಿದರು.

"ಅಂವಾ ಏನ ಮಾಡ್ಯಾನನ್ನೂದು ಅವನ ಬಾಯಿಂದನಃ ಒಡನುಡಿಸತೀನಿ ಎಪ್ಪಾ. ಮೊದಲ ಹೊರಗ ಬಿಡ್ರಿ ಅವನ್ನ" ಎನ್ನುತ್ತ ದಾದಾ ಸ್ವಾಮಿಗಳ ಅಪ್ಪಣೆಗೂ ಕಾಯದೆ ಒಳಗೇ ಓಡಿಹೋದ.

ದಾದಾನಿಗೆ ಸಿಟ್ಟಿನ ಆವೇಶದಲ್ಲಿ ಬುದ್ಧಿಭ್ರಮಣೆಯಾಗಿತ್ತು. ಕೈಯಲ್ಲಿಯ

ಲೋಡಿನಿಂದ ಬಾಗಿಲಿಗೆ ಅಪ್ಪಳಿಸಿದ. ಕಾಲಿನಿಂದ ಒದೆದ. ಹಳೆಯ ಬಾಗಿಲು ಈ ಹೊಡೆತಕ್ಕೆ ಬಿರುಕು ಬಿಟ್ಟಿತು. ಇನ್ನೆರಡು ಹೊಡೆತಗಳಿಗೆ ಅದು ಮುರಿದು ಬಿದ್ದು, ಬಾಪೂಸಾಹೇಬ ದಾದಾನ ಕೈಯಲ್ಲಿ ಪುಡಿಪುಡಿಯಾಗಬಹುದೆಂದು, ಹೊರಗಿನ ಜನರೆಲ್ಲ ಹೆದರಿಕೆಯಿಂದ ಕಲ್ಲಾಗಿದ್ದರು.

"ಊರ ಥೋರಿ ಗತೀ ಹೀಗಾಗೂದನ್ನು ನೋಡಿಕೋತ ನಿಲ್ಲತೀರಾ?" ಎಂದು ಹೇಳಬೇಕೆಂದು ಎಷ್ಟು ಪ್ರಯತ್ನಿಸಿದರೂ ಸ್ವಾಮಿಗಳ ದನಿ ಕಂಠದಿಂದ ಹೊರಗೆ ಬರಲೇ ಇಲ್ಲ.

ಅಷ್ಟರಲ್ಲಿ ದಿಗ್ಗನೆ ಓಡಿ ಬಂದ ರತ್ನಾ ಬಾಗಿಲಿಗೆ ಬೆನ್ನುಕೊಟ್ಟು ನಿಂತಳು. ಅವಳ ತುಟಿ ಕಂಪಿಸುತ್ತಿದ್ದವು. ಕಣ್ಣು ನೀರಲ್ಲಿ ತೇಲುತ್ತಿದ್ದವು ಮಾತ್ರ; ಆದರೆ ಒಂದು ಹನಿಯೂ ಕೆಳಗೆ ಉರುಳಿರಲಿಲ್ಲ. "ದಾದಾ, ದಾದಾ! ಅವರಕಿಂತಾ ಮೊದಲ ನಿನ್ನ ಅಕ್ಕನ ಮ್ಯಾಲೆ ಪೆಟ್ಟು ಹಾಕಿ ಒಳಗ ಹೋಗು. ಮೊದಲ ನನ್ನ ತಲೀ ಮ್ಯಾಲೆ ಪೆಟ್ಟು ಹಾಕು" ಎಂದು ಆವೇಶದಿಂದ ನುಡಿದಳು.

ವೇಗವಾಗಿ ಎರಗಲೆಳಸುವ ಸಿಡಿಲಿನ ಗಮನವನ್ನು ಯಾರೋ ತಡೆದಂತಾಯಿತು. ಆದರೆ ಜನರಿಗೆ ಅದು ಗೊತ್ತಾಗಿರಲಿಲ್ಲ. ದಾದಾನ ಬೀಸಿದ ಲೋಡು ರತ್ನಾಳ ತಲೆಯ ಮೇಲೆಯೇ ಎಂದು ಅವರೆಲ್ಲ ಗಾಬರಿಯಾಗಿದ್ದರು. ಪ್ರಯತ್ನಪೂರ್ವಕವಾಗಿ ದಾದಾ ಬೀಸಿದ ಕೈಯನ್ನು ತಡೆದ; ಕೈ ಉಳುಕಿತು. "ಅಕ್ಕಾ, ಅಕ್ಕಾ ನೀವಿಲ್ಲಿ ಬರಬಾರದು. ವಾಡೇಕ್ಕ ಹೋಗ್ರಿ ಅಕ್ಕಾ. ನನ್ನ ಆಣೈತಿ" ಎಂದು ದಾದಾ ಅವಳಿಗೆ ಕೈಮುಗಿದು ಹೇಳಿಕೊಂಡ.

"ಅವರ ಸಾಯೂ ಮುಂದ ನಾ ವಾಡೇಕ್ಕ ಹೋಗಿ ಪಡಕಲೇನು ದಾದಾ? ಅಕ್ಕಾ ಅಂದಲ್ಲ, ಅಕ್ಕನ ಕುಂಕುಮಾ ಅಳಿಸಿ ಮುಂದ ಹೋಗು ದಾದಾ."

ದಾದಾನ ಕಣ್ಣುಗಳಿಂದ ನೀರು ಧಾರೆಯಾಗಿ ಸುರಿಯಿತು. "ಇದರಾಗ ಬಿಡಿಸಿ ಹೇಳೂದು ಏನೈತಿ ಅಕ್ಕಾ? ಎಲ್ಲಾ ನಿನಗ ಗೊತ್ತsಐತೆಲ್ಲಾ. ಜಮುನಾಳ ಮರ್ಯಾದಿ ಸಲುವಾಗಿ ಇದನ್ನ ಮಾಡಬೇಕಾತು" ಎಂದು ದಾದಾ ಸಮರ್ಥನೆ ಮಾಡಿಕೊಂಡ.

"ನನ್ನ ಕುಂಕುಮಾ ಅಳಿಸಿದರ ನಿನ್ನ ತಂಗೀ ಮಾನ ಉಳಿದ್ಹಾಂಗಾತೇನು ದಾದಾ? ಯಶವಂತಮಾಮಾನ ಮನೀಗೆ ಹಸರ ಹಚ್ಚೇಲಿ ಹೋದ್ರ ಮಾಫಾ ಆದೀತೇನ ನಿನಗ?" ಎಂದು ರತ್ನಾ ಅವನ ಅಂತಃಕರಣಕ್ಕೆ ತಿವಿದಳು.

'ರತ್ನಾಳ ಸಂಸಾರ ಅಗಡ ಮಾಡೂದುಲ್ಲ ಅಂತ ಆಣೀ ಮಾಡು ದಾದಾ' ಎಂಬ ಯಶವಂತರಾಯರ ಹಾರ್ದಿಕವಾದ ಬಿನ್ನಹ ನೆನಪಾಗಿ ದಾದಾನ ಕರುಳು ಕೊರೆದಂತಾದವು.

ದಾದಾ ನಿಂತಲ್ಲಿಯೇ ನೆಲಕ್ಕೆ ಕುಳಿತುಬಿಟ್ಟ. " ಹೋಗು ಅಕ್ಕಾ, ಸುಕದ್ಲೇ ಬಾಳೇ ಮಾಡು. ಗಂಡನ್ನ ಉಳಿಸಿಗೊಂಡಿ ಹೋಗು. ಆದರ ಎಕ್ಕಾ ಪಾಪಕ್ಕ ಶಿಕ್ಷಾ ಅನೂದು ಐತಿಲ್ಲೋ? ನ್ಯಾಯ ಕೊಟ್ಟು ಹೋಗು" ದಾದಾ ಈಗ ಸಿಟ್ಟಿಳಿದು ಮಗುವಿನಂತಾಗಿದ್ದ.

"ಚಿಮಣಾ ನನ್ನ ತಂಗಿ ದಾದಾ. ನನ್ನಂಗ ಸಂಸಾರ ಮಾಡಿಕೊಂಡು ಇರ ಬೇಕು ಆಕಿ. ಯಾರ ಪಾಪಾ ಮಾಡ್ಯಾರನ್ನೂದು ಆಕೀನ್ನs ಕೇಳು ದಾದಾ. ಅವಗ ಆಕಿನ್ನ ಒಪ್ಪಸು. ಸುಮ್ಮನ ಜೀವಾ ಹೊಡದು ಪಾಪದ ಹೊರಿ ಕಟಗೋ ಬಾರದು. ಯಾವದಕ್ಕೂ ದುಡಕಬಾರದು ತಮ್ಮಾ" ಎಂದು ಹೇಳಿ ರತ್ನಾ ದಾದಾ ನನ್ನು ಸಮಾಧಾನಗೊಳಿಸಿದಳು.

ರತ್ನಾಳ ಜೊತೆಯಲ್ಲಿಯೇ ಅವಳ ಅಂಗರಕ್ಷಕನಂತೆ ಲೋಡನ್ನೆತ್ತಿಕೊಂಡು ದಾದಾ ಹೊರಟ. ಮಠದತ್ತ ಕಾತರದಿಂದ ಹೋಗಬೇಕೆಂದಿದ್ದ ಪುತಳಾಬಾಯಿ ಇವರಿಬ್ಬರನ್ನೂ ಬಾಗಿಲಲ್ಲಿಯೇ ಸಂಧಿಸಿದಳು. ದಾದಾನ ಹೆಗಲಲ್ಲಿ ಇನ್ನೂ ಲೋಡು ಇರುವದನ್ನು ನೋಡಿ ಹೆದರಿಕೆಯಿಂದ ಅಲ್ಲಿಯೇ ಕುಸಿದು ಕುಳಿತು "ನಂದೇನೂ ತಪ್ಪಿಲ್ಲ ದಾದಾ. ಬಾಪೂಗ ಚಿಮಣಾನ್ನ ಮದಿವ್ಯಾಗೂ ಅಂತ ಮದಲಿನಿಂದನs ಹೇಳಕೋತ ಬಂದೀನು. ನನಗಿಂತ ಪಡದಯ್ಯನ ಮಾತs ಹೆಚ್ಚಿಂದಾತು ಅಂವಗ" ಎಂದು ಗೋಳಿಟ್ಟಳು. ಅಳುತ್ತಲೇ ತಮ್ಮನ ಪ್ರಾಣಭಿಕ್ಷೆ ಬೇಡಿದಳು.

ದಾದಾ ಅಲ್ಲಿ ನಿಲ್ಲದಲೇ ಒಳಗೆ ಓಡಿದ. ಚಿಮಣಾ ಇದನ್ನು ನಿರೀಕ್ಷಿಸಿದ್ದಳು. ಪ್ರೀತಿಯಿದ್ದರೆ ಪಕ್ಕೆಯಲ್ಲಿಟ್ಟು ಸಾಕುವ ಅಣ್ಣಾ, ಇಂಥ ಪ್ರಸಂಗದಲ್ಲಿ ಕಾಲರೂಪಿ ಯಾಗಿ ಬಂದಿದ್ದ. ತನ್ನ ಜೀವ ಅಣ್ಣನ ಕೈಯಲ್ಲಿ ಎಂದು ಮೊದಲೇ ಅವಳು ಊಹಿ ಸಿದ್ದಳು. ಮಾನ ಕಳೆದುಕೊಂಡ ಮೇಲೆ ತಾನು ಬದುಕಬೇಕೆಂದರೂ, ಅಣ್ಣ ಬದುಕಗೊಡಲಾರ ಎಂದು ಅವಳಿಗೆ ಗೊತ್ತಾಗಿತ್ತು.

"ಚಿಮಣಾ, ಈ ಪಾಪಾ ಯಾರು ಮಾಡಿದ್ದು ಹೇಳು?" ಎಂದು ಗುಡುಗಿದ ದಾದಾ.

"ನಾನs ಮಾಡಿದ್ನೋ ಎಣ್ಣಾ, ನನ್ನ ಉಳಸಬ್ಯಾಡ. ನನ್ನ ತಲಿ ಒಡಿ"

ಎಂದು ನುಡಿದವಳೇ ದಾದಾನ ಪಾದದ ಮೇಲೆ ಬಿದ್ದು ಹೊರಳಾಡಹತ್ತಿದಳು.

ನಾನಾಕಾಕಾ ಸತ್ತ ಮೇಲೆ, ದಾದಾ ತಂಗಿಯ ಮುಖ ನೋಡಿದ್ದು ಈಗಲೇ. ಒಂದು ಕ್ಷಣ ಅವಳನ್ನು ನೋಡಿದವನೇ "ನೀನು ಮಾಡಿದ್ದು ಹೌದಲ್ಲೋ?" ಎಂದು ಸಿಟ್ಟಿನಿಂದ ಕೆಳದುಟಿಯನ್ನು ರಕ್ತ ಬರುವಂತೆ ಕಚ್ಚಿದ.

"ಲಗ್ನ ಆಗಬೇಕನ್ನೂದು ಪಾಪ ಅಲ್ಲ ಚಿಮಣಾ. ನಿನ್ನ ಅಡ್ಡದಾರಿಗೆ ಯಾರ ಎಳೆದರು ಅದನ್ನ ಹೇಳು" ಎನ್ನುತ್ತ ರತ್ನಾ ಚಿಮಣಾಳ ತೋಳು ಹಿಡಿದು ಎಬ್ಬಿಸಿ ಕೂಡಿಸಿದಳು.

"ಯಾರ ಹೆಸರ ಹೇಳಿ ಏನ ಮಾಡೂದೈತಿ ರತ್ನಕ್ಕಾ? ಕಾಕಾನ ಜೀವಾ ಹಿಂಡಿ, ಮಾನಾ ಕಳಕೊಂಡು, ಯಾ ಮಾರಿ ಕಟಗೊಂಡು ಬದಕಲಿ? ಅಣ್ಣಾ, ಮಾಡಿದಾಕಿ ನಾನು, ನನ್ನ ಉಳಸಬ್ಯಾಡ ಅಣ್ಣಾ" ಚಿಮಣಾನಲ್ಲಿ ಈಗ ಎಲ್ಲಿಲ್ಲದ ಧೈರ್ಯ ಬಂದಿತ್ತು. ಸಾವನ್ನಪ್ಪಿ ಜಗತ್ತಿನ ದುಃಖಗಳಿಂದ ಒಮ್ಮೆ ಮುಕ್ತಳಾಗುವ ಆಸೆ ಈ ಮಾತನ್ನಾಡಿಸಿತ್ತು.

"ಹಾಗೆಲ್ಲಾ ಮಾತಾಡಬಾರದು. ಸತ್ತರ ಏನ ಮಾಡಿದ ಹಾಗಾತು ಚಿಮಣಾ? ನೀ ಒಬ್ಬಾಕೀನ ಸಾವೂದುಲ್ಲ. ಮುಂದ ಹುಟ್ಟೋ ಕೂಸಿನ ತಂದಿ ಯಾರು ಅಷ್ಟ ಹೇಳು?" ಮತ್ತೆ ರತ್ನಾ ಆಗ್ರಹಪಡಿಸಿದಳು.

"ಹೇಳದಿದ್ದರ ನಾ ಎಲ್ಲೆ ಬಿಡತೀನು. ಕೂಸಿನ ತಂದಿ ಯಾರು ಅನ್ನೂದು ಊರಿಗೆಲ್ಲ ಗೊತ್ತಾಗಲಿ. ಅವನ ಜೋಡಿ ಲಗ್ನಾ ಮಾಡಿ ನಿನ್ನ ಬಾಳೇಕ್ಕ ಹಚ್ಚದಿದ್ದರ ಅಣ್ಣಾ ಆಗಿ ಇರಬೇಕ ಯಾಕ ತಂಗೀ?" ದಾದಾ ಸಮಾಧಾನ ಮಾಡುವ ದನಿಯಲ್ಲಿ ಹೇಳಿ, "ಬಾಪೂಸಾಹೇಬನ ಸಂಬಂಧ ಅದ ಅಂತ ನನ್ನ ಕಿವಿಗೆ ಬಿದ್ದದ. ಇದು ಹೌದಲ್ಲೋ? ಹೇಳು?" ಎಂದು ಕೇಳಿದ.

"ಲಗ್ನ ಆಗೋ ಜಾತಿಗೆ ಅಂವಾ ಸೇರಿಲ್ಲ ಅಣ್ಣಾ. ಅಂವಾ ಒಬ್ಬ ದೇಶನಿಕಾಳಿ ಸನ್ಯಾಸಿ" ಚಿಮಣಾ ಉಸಿರು ಬಿಗಿಹಿಡಿದು ನಿರ್ವಾಹವಿಲ್ಲದೆ ಹೆದರಿ ಹೇಳಿದಳು.

ದಾದಾನಿಗೆ ಸಿಡಿಲು ಬಡಿದಂತಾಯಿತು. ಪುತಳಾಬಾಯಿ ಮೊದಲಿನಿಂದ ಎಲ್ಲ ಸಂಗತಿಯನ್ನೂ ಸಾದ್ಯಂತವಾಗಿ ಅವನಿಗೆ ವಿವರಿಸಿದಳು.

"ಇದೆಲ್ಲಾ ಖರೇ ಅಂತ ನಂಬಲ್ಯಾ ನಾ?" ದಾದಾ ಕೇಳಿದ.

"ನನ್ನಾಣೆಂದ್ರೂ ಖರೇ ದಾದಾ" ಚಿಮಣಾ ಆರ್ತಳಾಗಿ ನುಡಿದಳು.

ದಾದಾ ಸ್ವಲ್ಪಹೊತ್ತು ಆಳವಾಗಿ ಯೋಚಿಸಿದ. ಪ್ರಿಯಕರನಾದವನು

ಹೆಣ್ಣನ್ನು ಲಗ್ನವಾಗಿ ಸಾಕಲೇಬೇಕೆಂಬುದು ಅವನು ನಂಬಿದ ನೀತಿಯಾಗಿತ್ತು. ಅವನು ಸನ್ಯಾಸಿಯಾದರೂ ಅಷ್ಟೆ, ಗೃಹಸ್ಥನಾದರೂ ಅಷ್ಟೇ. ಏನೇ ಆದರೂ ತಂಗಿಯ ಬದುಕು ಮಾನಗೇಡಾಗಬಾರದು. ಇಲ್ಲದಿದ್ದರೆ ಸತ್ತ ನಾನಾಕಾಕಾನ ಆತ್ಮಕ್ಕೆ ಶಾಂತಿ ದೊರೆಯಲಾರದು. ಆದ್ದರಿಂದ ಚಿಮಣಾಳನ್ನು ಮಠದಲ್ಲಿ ಪಡ ದಯ್ಯನವರ ಆಶ್ರಯದಲ್ಲಿಯೇ ಬಿಡಬೇಕು. ಆ ಕಾಲಕ್ಕೆ ಅವನಿಗೆ ಹೊಳೆದ ಸೂಕ್ತ ಉಪಾಯ ಅದೇ ಆಗಿತ್ತು.

ಚಿಮಣಾಳನ್ನು ಕರೆದುಕೊಂಡು ದಾದಾ ಮಠಕ್ಕೆ ಬಂದ.

ಪಡದಯ್ಯನವರಿಗೆ ಇದೆಲ್ಲ ಅನಿರೀಕ್ಷಿತವಾಗಿತ್ತು. ಬಾಪೂಸಾಹೇಬನೇ ಚಿಮ ಣಾಳ ಪ್ರಿಯಕರ ಎಂದು ಜನರೆಲ್ಲ ನಂಬಿದ ಮೇಲೆ, ತಮ್ಮ ಹೊಣೆ ಹಾರಿತೆಂದು ಅವರು ನಿಶ್ಚಿಂತರಾಗಿದ್ದರು. ಈಗಲೂ ಕೂಡ ಅದೇ ಒಗರಿನಿಂದಲೇ "ಮುಗಿ ತೇನಪಾ ನಿನ್ನ ಪರಾಕ್ರಮ ದಾದಾ? ಆಗಾಳೆ ಬಾಪೂಸಾಬನ್ನ ಹೊಡ್ಯಾಕ ಬಂಟಾಗಿ ಬಂದಿದ್ದಿ. ಈಟರಾಗ ಇಚಾರ ಹೊಳ್ಳಿತನಬಾರದಽ? ರತ್ನಾನ ಬಾಳೇ ಅಗಡ ಆಗಬಾರದು, ಚಿಮಣಾಗ ಒಳ್ಳೇ ಗಂಡ ಸಿಗಬೇಕೂ ಅಂತ ಒಳೇ ಯುಕ್ತಿ ಹುಡುಕೀದೆಲೇ. ಜನಾ ನಿನ್ನ ಮಾತ ಕೇಳಿ ನಕ್ಕಾರು. ಊರ ಜನರಿಗೆಲ್ಲ ಗೊತ್ತಿದ್ದ ಮಾತು ಸುಳ್ಳಂತ ಸಾಧಿಸಿ, ಆ ಪಾಪದ ಹೊಣಿ ನನ್ನ ತಲೀ ಮ್ಯಾಗ ಕಟ್ಟಾಕ ಬಂದ್ಯಾ. ಚಿಮಣಾ ಹೇಳತಾಳಂತ ನಾ ಒಪ್ಪಬೇಕಽ?" ಎಂದು ವಾದಿ ಸಿದರು.

"ನೀ ಪಾಪಾ ಮಾಡಿದ್ದು ಅಲ್ಲ ಅಂದು, ಬರೇ ಚಿಮಣಾಳ ಮ್ಯಾಲೆ ಹಾಕ ಬೇಕಂತೀಯಾ? ನಿನ, ನಿನ...." ಎನ್ನುತ್ತ ದಾದಾ ಕೈಯಲ್ಲಿಯ ಲೋಡನ್ನೆತ್ತಿದ.

ಮಠದಲ್ಲಿ ಈಗಾಗಲೇ ಊರಲ್ಲಿಯ 'ಸದ್ಗೃಹಸ್ಥರು' ಬಂದು ಸೇರಿದ್ದರು. ತಮ್ಮ ಪೂಜ್ಯ ಗುರುಗಳು ಸ್ತ್ರೈಣರೆಂದು ಗೊತ್ತಿದ್ದರೂ, ಸಾರ್ವಜನಿಕವಾಗಿ ಒಪ್ಪಿ ಕೊಳ್ಳುವ ಪ್ರಸಂಗ ಈ ವರೆಗೆ ಬಂದಿರಲಿಲ್ಲ. ಗುರುಗಳ ಮೇಲಿನ ಅಭಿಮಾನದಿಂದ ಪ್ರೇರಿತರಾಗಿ, ದಾದಾನನ್ನು ಮುತ್ತಿ "ಪುಂಡಾಟಿಕೀ ನಡಿಸಿಗೊಂತ, ಮಠದ ಮರ್ಯಾ ದಿಗೆ ಮಸಿ ಹಚ್ಚಲಾಕ ಬಂದಿಯಾ?" ಎಂದು ತೆಗಳಹತ್ತಿದರು.

ಕುಲಕರ್ಣಿ ಶೇಷಪ್ಪ "ಏ ದಾದಾ, ಚಿಮಣಾ ಕೆಟ್ಟದ್ದು ಸ್ವಾಮಿಗೋಳಿಂದ, ಮತ್ತ ಆಕಿಗೆ ಬಾಪೂಸಾಹೇಬಗ ಏನೂ ಸಂಬಂಧ ಇಲ್ಲಾಂತ ನೀನು ಸಿದ್ಧ ಮಾಡಿ ಕೊಡಬೇಕಾಗತದ. ಅಷ್ಟು ಮಾಡು, ಸ್ವಾಮೇರ್‍ನ ಊರ ಬಿಟ್ಟು ಓಡಿಸಿ, ಬ್ಯಾರೆ

ಮರಿ ಮಠಕ್ಕ ಕೊಡಸತೇವಿ. ಅದನೆಲ್ಲಾ ಬಿಟ್ಟ ಬರೆ ದಾಂಡಗಾಯಿ ನಡೆಸಿವರ ಯಾರ ಕೇಳತಾರೋ?" ಎಂದು ಹೇಳಿ, ಕಾಯದೇಶೀರ ರೀತಿಯಿಂದ ಸಾಕ್ಷಿ ಪುರಾವೆ ತಂದು, ಸಿದ್ಧ ಮಾಡುವ ಹೊಣೆ ದಾದಾನದು ಎಂದು ಎಚ್ಚರಿಕೆ ಕೊಟ್ಟ.

"ಕತ್ತಲದಾಗ ಕಳವು ಮಾಡಾವ ಸಾಕ್ಷಿ ಪುರಾವೆ ಇಟ್ಟ ಮಾಡತಾನೇನ್ರಿ ಕುಲಕರ್ಣ್ಯಾರ? ರಾಜರೋಸ ನಡಿಯೋ ದಗದ ಇದಾಗಿದ್ದರ ಇಲ್ಲಿಗ್ಯಾಕ ಬರತಿತ್ತು ಪರಸಂಗ? ಚಿಮಣಾ,ನಿಮ್ಮಿಬ್ಬರ್ನೂ ಬಿಟ್ಟ ಮತ್ತ ಯಾರಿಗಾರೆ ಗೊತ್ತಿದ್ದರ ಹೇಳು" ಎಂದ ದಾದಾ.

"ದಾನಪ್ಪ ಒಬ್ಬಾಕಿ ಆಗ ಮಟದಾಗ ಇದ್ದಳು. ಆಕಿಗೆ ಎಲ್ಲಾ ಗೊತ್ತೈತಿ. ಬೇಕಾರ ಆಕಿನ್ನ ಕರೆಸಿ ಎಲ್ಲಾ ಕೇಳಿಕೋರಿ" ಚಿಮಣಾ ತಲೆ ತಗ್ಗಿಸಿ ನುಡಿದಳು. ಇಷ್ಟ ಜನರೆದುರು ಆದ ಅಪಮಾನ ಅವಳಿಗೆ ಮರಣಪ್ರಾಯವಾಗಿತ್ತು.

"ಓತೀಕಾಟಕ್ಕ ಬೇಲೀ ಸಾಕ್ಷಿ. ಆಕ್ಯೊಬ್ಬಾಕಿ ಊರ ಹಾದರಗಿತ್ತಿ. ಆಕಿನ್ನ ಕರಿಸಿ ಕೇಳಬೇಕಂತ, ಈಕಿ ಹೇಳತಾಳ" ಎಂದು ಪಡದಯ್ಯನವರು ತಿರಸ್ಕಾರದ ನಗೆ ನಕ್ಕರು.

ಗೌಡರಿಗೆ ಈ ಸುದ್ದಿ ಮುಟ್ಟಿತ್ತು. ಪಡದಯ್ಯನ ಮೇಲೆ ಸೇಡು ತೀರಿಸಿ ಕೊಳ್ಳಲು ಅವರಿಗೆ ಒಳ್ಳೆಯ ಸಂಧಿ ಸಿಕ್ಕಂತಾಗಿತ್ತು. ಅವರ ಧೂರ್ತ ಬುದ್ಧಿ ಈಗಾ ಗಲೇ ಈ ಯೋಜನೆಯ ಹಂಚಿಕೆ ಹಾಕಿತ್ತು. ಪ್ರಸಂಗ ಬಿದ್ದರೆ ಉಪಯೋಗಕ್ಕೆ ಬರಲಿ ಎಂದುಕೊಂಡು, ದಾನವ್ವನ ಶೋಧ ಹಚ್ಚಿ, ಯಾರಿಗೂ ತಿಳಿಯದಂತೆ ಅವ ಳನ್ನು ಮನೆಯಲ್ಲಿ ತಂಗಿರಿಸಿಕೊಂಡಿದ್ದರು. ಈ ಸುದ್ದಿ ಕಿವಿಗೆ ಬೀಳುವದೇ ತಡ, ದಾನವ್ವನನ್ನು ಕರೆದುಕೊಂಡು ಮಠಕ್ಕೆ ಬಂದೇ ಬಿಟ್ಟರು. ಅವರ ಹಿಂದೆ ಜನರ ದೊಂದು ದೊಡ್ಡ ಗುಂಪೂ ಇತ್ತು. ಸನ್ಯಾಸಿಯ ಈ ಪ್ರಣಯ-ಪ್ರಸಂಗ ಊರವರಿ ಗೆಲ್ಲ ಮೋಜಿನ ವಿಷಯವಾಗಿತ್ತು. "ಸ್ವಾಮೇರು, ತಾವು ಶುದ್ದ ಸನ್ಯಾಸಿ ಅದೀ ವಂತ ಮೊದಲು ಸಿದ್ದ ಮಾಡಿಕೊಡಲಿ, ಚಿಮಣಾ ಅವರ ವ್ಯಾಗ ಮಾಡಿದ ಆರೋಪ ಸಿದ್ದ ಮಾಡೋ ಜವಾಬ್ದಾರಿ ನಂದು" ಎಂದು ಗೌಡರು ಹಟದಿಂದ ಕುಳಿತರು.

"ಗುರುಪರಂಪರೆಯಿಂದ ನಡದ ಮಠ. ಆ ಸಿಂಹಾಸನಕ್ಕ ಅವರು ಬಂದಾ ರಂಬೂದು ಪ್ರಮಾಣ. ಗೊತ್ತಿಲ್ಲದ್ದನ್ನು ಸಿದ್ಧ ಹ್ಯಾಂಗ ಮಾಡತಾರ್ರು?" ಶೇಷಪ್ಪ ಅಡ್ಡ ಮಾತು ಹೂಡಿದ.

ಆದರೆ ದಾನವ್ವ ತಲೆಯ ಮೇಲೆ ಸೆರಗು ಹೊತ್ತುಕೊಂಡು, "ಯಪ್ಪಾ, ಕೂಡಿದ ಜನಾ ದೈವದ ಸಮಾ. ನಾ ಹೇಳೂದು ನಂಬಿದರ ನಂಬರಿ, ಬಿಟ್ಟರ ಬಿಡರಿ. ನಾ ನೋಡಿದ್ದ ಹೇಳತೀನು. ಚಿಮಣಾನ್ನ ಈ ಗತಿಗೆ ತಂದವರು ಸ್ವಾಮೇರಽ. ಆಕಿನ್ನ ಮಟಕ್ಕ ಕರಕೊಂಡು ಬಂದಾಕಿನಽ ನಾ. ನನ್ನೊಂದು ಈ ಗತೀಗೆ ಹಚ್ಚಿದ್ದ ಸಾಲದಽ, ಬಂಗಾರದಂತಾ ಹುಡುಗೀ ಬಾಳೇವು ಹದಗೆಡಸಿದರಂತ ನಾ ಜಗಳಾಡಿ ಮಟಾ ಬಿಟ್ಟು ಹೋದ್ನಿ. ಚಿಮಣಾನ ಲಗ್ನದ ತೊಡಕು ನಾನಾ-ಸಾಬರ ಜೀವಕ್ಕ ಮುಳವಾತೂ ಅಂತ ಸುದ್ದಿ ಹತ್ತಿತೆಪ್ಪಾ. ಚಿಮಣಾನ್ನ ನೋಡಿಕೊಂಡು ಸಮಾಧಾನ ಹೇಳಾಕ ಬರಬೇಕೂ ಅಂತ ಅನಿಸಿತ್ತು. ಗೌಡರ ಆಳ-ಮನಸ್ಯಾ ವಿಜಾಪುರಕ್ಕ ದನಾ ಮಾರಾಕ ಬಂದಿದ್ದ; ಅವನ ಸಂಗಾಟ ಮನ್ನೆ ಇಲ್ಲಿಗೆ ಬಂದಾಕಿ, ಗೌಡರ ಮನ್ಯಾಗಽ ಇದ್ನಿ. ಈ ಸ್ವಾಮೇರ ಒಂದ ಮಾಡಿಲ್ಲ ಎಪ್ಪಾ. ವಗತಾನ ಹರಕೊಂಡ ನನ್ಹಂಗ ದಿಕ್ಕೇಡಿ ಹೆಣ್ಣಗೋಳ ಮರಗು ಅವರಿಗೇನು ತಪ್ಪಿದ್ದಲ್ಲ" ಎಂದು ಹೇಳಿ ಅಕ್ಕಸದಿಂದ ದಾನವ್ವ ಚಿಟಿಕೆ ಮುರಿದಳು.

ದಾನವ್ವ ಸ್ವಾಮಿಗಳ ಅನಧಿಕೃತ, ಅವಿವಾಹಿತ ಪತ್ನಿಯಾಗಿದ್ದವಳು. ಮುಳ್ಳಿನಿಂದ ಮುಳ್ಳನ್ನು ತೆಗೆಯುವಂತೆ, ಪಾಪದಿಂದಲೇ ಪಾಪಕೃತ್ಯವನ್ನು ಬಯಲಿಗೆಳೆಯಬೇಕಾಗುತ್ತದೆ. ದಾನವ್ವನ ಮಾತನ್ನು ಜನರು ನಂಬಿದರು. ಚಿಮಣಾಳ ಕೌಮಾರ್ಯಭಂಗವನ್ನು ಸ್ವಾಮಿಗಳು ಮಾಡಿದ್ದು ನಿಜವೆಂದರು. ಆದರೆ ಮಠದ ಒಬ್ಬ ಸನ್ಯಾಸಿಗೆ ಚಿಮಣಾಳನ್ನು ಗಂಟು ಹಾಕಿ, ಮಠದಂಥ ಪವಿತ್ರಸ್ಥಾನದಲ್ಲಿ ಗೃಹಸ್ಥಾಶ್ರಮ ಸ್ಥಾಪಿಸುವದು ಅವರ ಮನಸ್ಸಿಗೆ ಬರಲಿಲ್ಲ.

"ಅಂದಮ್ಯಾಲೆ ಬಾಪೂಸಾಹೇಬನ ಪಾಪದ ಹೊರಿ ಸ್ವಾಮಿಗಳ ಮ್ಯಾಲೆ ಹೊರಸೂದು ಸರಿ ಏನ್ರೆಪಾ ದೈವಾ?" ಎಂದು ಶೇಷಪ್ಪನ ವಕೀಲಿವಾದ ಪ್ರಾರಂಭವಾಯಿತು.

ಇದನ್ನೆಲ್ಲ ಲಕ್ಷ್ಯವಿಟ್ಟು, ಅಡಗಿ ಕುಳಿತು, ಕೇಳುತ್ತಿದ್ದ ಬಾಪೂಸಾಹೇಬ, ಕೋಣೆಯ ಒಳಚಿಲಕ ತೆಗೆದು ಹೊರಗೆ ಬಂದು "ನಾ ಮಾಡಿದ ಪಾಪ ನನ್ನ ಪಾಲಿಗಿರಲಿ.ಆದರ ಮಾಡದ ಪಾಪದ ಹೊರೀನೂ ಹೊರಂದರ ಜೀವ ಹೋದರೂ ಸಾಧ್ಯ ಇಲ್ಲ. ಸ್ವಾಮೇರು ಇಂತಾ ಕೆಲಸಾ ಮಾಡಿದ ಮ್ಯಾಗ ನಾ ಚಿಮಣಾನ ಮ್ಯಾಲಿನ ಆಶಾ ಎಂದೋ ಬಿಟ್ಟೇನಿ. ನಮ್ಮ ಅಕ್ಕ ಆಕಿ ಮ್ಯಾಲ ಕಾವಲಿಟ್ಟು, ನಾ ಚಿಮಣಾನ ಸಮೀಪ ಹಾಯದ್ಹಾಂಗ ನೋಡಿಕೊಂಡಾಳ. ಸ್ವಾಮೇರಽ, ಕಾರಹುಣ್ಣಿ

ವ್ಯಾಗಿ ಈಗ ಏಸು ತಿಂಗಳಾದವು? ನೀವs ಲೆಕ್ಕ ಹೇಳ್ರಿ. ಮುಂದಿನ ಕೆಲಸಕ್ಕೆ ಅಂತ ಔಷಧ ತಂದು ಕೊಟ್ಟ ನಿಮಗs ಗೊತ್ತು ಅದೆಲ್ಲ" ಎಂದು ಹೇಳಿದಾಗ ಪಡದಯ್ಯನವರು ಕುಳಿತಲ್ಲಿಯೇ ಕುಸಿದರು.

"ನೆಲಾ ಎದ್ದು ಬಡದರ ಮಾಡೂದೇನೈತಿ? ಜೀವದ ಗೆಣ್ಯಾರs ನನ್ನ ವಿರುದ್ಧ ನಿಂತರ ಹೋಗಬೇಕೆಲ್ಲಿ? ಎಲ್ಲಾ ಶಿವನಾಟ!" ಎಂಬ ಉದ್ಗಾರಗಳು ಪಡದಯ್ಯನವರ ಬಾಯಿಂದ ಹೊರಬಿದ್ದವು.

"ಎಲ್ಲೀದ ಬಂದೀದಿ ಅಲ್ಲಿಗೇ ಇನ್ನ ಹೋಗೂದು" ಎಂದು ಕೂಡಿದವರಲ್ಲಿ ಒಬ್ಬ ಕಿಡಿಗೇಡಿ ಪಿಸುಗುಟ್ಟಿದ.

"ಸಣ್ಣಬಾಯಿ, ದೊಡ್ಡ ಮಾತು. ಹಂಗೆಲ್ಲಾ ಆಡಬಾರದು ತಮ್ಮಾ" ಎಂದು ಶೇಷಪ್ಪ ಬುದ್ಧಿ ಹೇಳುವ ಧಾಟಿಯಲ್ಲಿ ನುಡಿದ.

ಚಿಮಣಾಳ ಕಣ್ಣೀರು ಅಖಂಡ ವರ್ಷಧಾರೆಯಂತೆ ಸುರಿಯುತ್ತಲೇ ಇದ್ದವು. ಭವಿಷ್ಯದ ಭೀಕರ ಚಿತ್ರ ಅವಳನ್ನು ಕೈಕಾಲುಗೆಡಿಸಿತ್ತು. ನಾನಾನ ಮರಣದಿಂದ ಹತಾಶಳಾದ ಅವಳ ಹೃದಯ ಆಗಲೇ ಬರಡು-ಭೂಮಿಯಾಗಿತ್ತು. ಅಂಥವರಲ್ಲಿಯೂ, ಹೆದರಿದರೂ ದಾದಾನ ಬಗ್ಗೆ ಆಸೆಯಿಟ್ಟುಕೊಂಡಿದ್ದಳು. ಮೊದಲ ಗುಟುಕಿಗೇ ಜೀವನ ಅವಳ ಪಾಲಿಗೆ ಕಹಿ ವಿಷವಾಗಿತ್ತು. ನಾನಾನ ಪ್ರೀತಿಯ ರಕ್ಷೆಯಲ್ಲಿ ನಿಶ್ಚಿಂತಳಾಗಿದ್ದವಳು, ಹಳ್ಳಿಯಲ್ಲಿಯೇ ಎದ್ದುಕಾಣುವ ತನ್ನ ಚೆಲುವಿನ ಬಗ್ಗೆ ಮುಗ್ಧ ಅಭಿಮಾನವನ್ನಿಟ್ಟುಕೊಂಡ ಮುಗ್ಧ ಕನ್ನೆ, ಇಷ್ಟು ಜನ ಎದುರು ವಿಚಾರಣೆಗೆ ಗುರಿಯಾಗಬೇಕಾಗಿತ್ತು. ಅದೂ ಮಾನರಕ್ಷಣೆಗಾಗಿಯಲ್ಲ. ಮುಂದೆ ಹುಟ್ಟಬಹುದಾದ ನಿಷ್ಪಾಪ ಕೂಸಿನ ತಂದೆ ಯಾರು ಎಂಬ ಸತ್ಯವನ್ನು ಪ್ರಸ್ಥಾಪಿಸುವದಕ್ಕೆ! ಸತ್ಯವೇನೋ ಸ್ಥಾಪಿತವಾಯಿತು. ಆದರೇನು? ಹೆಣ್ಣಿನ ಮಲಿನವಾದ ಮಾನ ತಿಳಿಯಾಗಲು ಅದೇನು ಮಲಿತ ನೀರಲ್ಲ. ದೊರೆತ ಸತ್ಯದಿಂದ, ನಿರ್ಣಾಯಕರಿಗೇನೋ ಸಮಾಧಾನವಾಗಿತ್ತು. ಆದರೆ ಹೆಣ್ಣಿನ ಅಂತಃಕರಣದ ಕನ್ನಡಿ ಚೂರುಚೂರಾಗಿ, ಆ ಚೂರುಗಳಲ್ಲಿ ಆ ಸತ್ಯದ ವಿಕೃತ ಪ್ರತಿಬಿಂಬ ಮೂಡಿತ್ತು.

ಚಿಮಣಾ ಅಳುತ್ತಲೇ ಇದ್ದಳು. ಕೊನೆಗೆ ಗೌಡರೇ ಅವಳಿಗೆ ಸಮಾಧಾನ ಹೇಳಬೇಕಾಯಿತು. "ಒಳಗ ಹೋಗು ತಂಗಿ. ಇನ್ನ ಈ ಮಟದಾಗs ಬಾಳೇ ಮಾಡಬೇಕಾತು ನೀನು. ಶಿವನ ಇಚ್ಛಾ ಹಾಂಗಿದ್ದರ ಯಾರೇನ ಮಾಡಾಕ

ಆಗತೈತಿ? ಸ್ವಾಮೇರ, ನಾನಾ ಸತ್ತಮ್ಯಾಗ ಚಿಮಣಾ ಊರ ಮಗಳು. ಆಕಿಗೆ ತ್ರಾಸಾದರ ಊರಿಗೇ ತ್ರಾಸ ಆದ್ಹಾಂಗ. ಇದನ್ನ ತಿಳಿದು ನಡೆಸಿಗೋಳ್ರಿ" ಎಂದು ಪಡದಯ್ಯನವರಿಗೂ ಎಚ್ಚರಿಕೆ ಕೊಟ್ಟು, ಕೂಡಿದ ಜನರಿಗೆ ಮನೆಗೆ ಹೋಗಲು ಆಜ್ಞಾಪಿಸಿದರು.

"ನನ್ನ ತಂಗೀನ್ನs ನೀನಾಗಿ ಕದ್ದು, ನಿನ್ನ ಉಡ್ಯಾಗ ಬೆಂಕೀ ಕಟಿಗೊಂಡೀದಿ. ಆಕಿ ಜೀವಕ್ಕ ಏನಾರ ಆದರ...." ದಾದಾನ ಬಾಯಿಂದ ಮುಂದೆ ಮಾತೇ ಹೊರಡ ಲಿಲ್ಲ. ಸಿಟ್ಟು, ದುಃಖ ಎರಡೂ ಅವನ ಎದೆಯಲ್ಲಿ ಗುದುಮುರಿಗೆ ಹಾಕುತ್ತಿದ್ದವು. ನನ್ನಂಥ ಅಣ್ಣನಿದ್ದೂ ಚಿಮಣಾ ಅನಾಥಳಂತೆ ಮಠ ಸೇರಬೇಕಾಯಿತಲ್ಲ, ಎಂದು ಅವನಿಗೆ ಸಂಕಟವಾಗಿತ್ತು. ತುಂಬಿದ ಕಣ್ಣುಗಳಿಂದ ಒಮ್ಮೆ ಚಿಮಣಾಳನ್ನು ನೋಡಿ, ಎರಡೂ ಕೈಗಳಿಂದ ಮುಖ ಮುಚ್ಚಿಕೊಂಡು ಮಠದ ಪಾವಟಿಗೆಗಳನ್ನಿಳಿದು ಸಾವ ಕಾಶವಾಗಿ ನಡೆದ.

:: ೮ ::

ಇಲ್ಲಿಯ ವರೆಗೆ ದಾದಾನ ಜೀವನದಲ್ಲಿ ವಿಚಾರಮಾಡುವ ಪ್ರಸಂಗಗಳೇ ಬಂದಿರಲಿಲ್ಲ. ಹುಟ್ಟಿ ಇಪ್ಪತ್ತು ವರ್ಷಗಳಾಗಿದ್ದರೂ ಕೂಡ ಹಸುಮಗುವಿನಂತೆ ಅವನ ಮನಸ್ಸಿತ್ತು. ಅವನ ಜಗತ್ತು, ಗರಡೀಮನೆ ಹಾಗೂ ಕುಸ್ತಿಯ ಕಣ ಗಳನ್ನು ಬಿಟ್ಟರೆ ಹೆಚ್ಚಿನ ವಿಸ್ತಾರವನ್ನೇ ಪಡೆದಿರಲಿಲ್ಲ. ಇಲ್ಲಿಯ ವರೆಗೆ ನಾನಾ ಕಾಕಾ ಊರ ಕಾರಭಾರ ಮಾಡುತ್ತ ತಿರುಗಾಡುತ್ತಿದ್ದರೂ, ದಾದಾನಿಗೆ ಅದರ ಗಂಧ ಕೂಡ ಇರಲಿಲ್ಲ. ಹಾಲು ಕುಡಿದು ತಾಲೀಮು ಮಾಡುವದನ್ನು ಬಿಟ್ಟರೆ ಅವನಿಗೆ ಬೇರೆ ಹವ್ಯಾಸಗಳೂ ಇರಲಿಲ್ಲ. ಇದೂ ಅಲ್ಲದೆ ಅವನು ವಿಚಾರಮಾಡದೆ ಇರು ವದಕ್ಕೆ ಇನ್ನೂ ಒಂದು ಪ್ರಬಲವಾದ ಮಾನಸಿಕ ಕಾರಣವೂ ಇತ್ತು. ದಾದಾ ಹುಟ್ಟಿ ಇಪ್ಪತ್ತು ವರ್ಷಗಳಾದರೂ ಅವನು ವಿರೋಧವನ್ನೇ ಕಂಡಿರಲಿಲ್ಲ. ಕಂಡಿದ್ದರೆ ಅದು ಕುಸ್ತಿಯ ಕಣದಲ್ಲಿ ಮಾತ್ರ. ಆದರೆ ಎದುರಾಳಿಯ ಕಣ್ಣಲ್ಲಿ ಎಂದೂ ದ್ವೇಷ ಸುಳಿದಿರಲಿಲ್ಲ.

ಆದರೆ ಈಗ? ನಾನಾಕಾಕಾನ ಮರಣದ ದುಃಖದಿಂದ ಬಲವಾದ ಆಘಾತವಾದಂತಾಗಿ ಅವನ ಮನಸ್ಸಿನ ಹಿಡಿತ ತಪ್ಪಿತ್ತು. ತನ್ನ ಜಗತ್ತಿನ ಮೂಲಾಧಾರವೇ ನಾಶವಾದಂತೆನಿಸಿತ್ತು. ಯಶವಂತರಾಯರು ಅನೈತಿಕ ಸಂಬಂಧದಿಂದ ಚಿಮಣಾ ತಾಯಿಯಾಗಲಿರುವಳೆಂಬ ಸುದ್ದಿಯನ್ನು ಹೇಳಿದಾಗ ಅವನ ರಕ್ತ ಕುದಿದಿತ್ತು. ಅವನ ಸ್ವಭಾವದಲ್ಲಿಯೇ ಸಂಯಮವಿರಲಿಲ್ಲ. ತಂದೆಯಾದ ಲಕ್ಷ್ಮಣನ ಜಡಸ್ವಭಾವಕ್ಕೆ ತೀವ್ರ ಪ್ರತಿಕ್ರಿಯೆಯೆಂಬಂತೆ ದಾದಾ ಹುಟ್ಟಿದ್ದ. ಅದರಿಂದಾಗಿ ಪಾಪಿಗೆ ತಕ್ಕ ಪ್ರಾಯಶ್ಚಿತ್ತವಾಗಲೇಬೇಕೆಂಬ ತತ್ವದಲ್ಲಿ ನಂಬಿಗೆಯಿಟ್ಟು, ಆವೇಶ ತುಂಬಿ ಸೇಡು ತೀರಿಸಲು ನಡೆದಿದ್ದ. ಯಾರದೋ ಅಂತಃಕರಣದ ಎಳೆತ, ಅವನ ಗಮನವನ್ನು ತಡೆಯಿತು. ಆಗ ಕೋಪ ಶೋಕವಾಗಿತ್ತು. ಅಂಥ ಹಣ್ಣುಮನಸ್ಸನ್ನೇ ಗ್ರಾಮದ ಜನರ ವಿರೋಧ ಕ್ಷಣಕ್ಕೊಮ್ಮೆ ಚುಚ್ಚಿಚುಚ್ಚಿ ಗಾಸಿಗೊಳಿಸಿತು. ಮಠದಿಂದ ಮರಳಿ ಬರುವಾಗ ಅವನ ಆವೇಶವೆಲ್ಲ ಇಳಿದಿತ್ತು.

ನಾನಿದನ್ನೇನು ಮಾಡಿದೆ ಎಂದು ಮನಸ್ಸಿಗೆ ಪಶ್ಚಾತ್ತಾಪ ಉಂಟಾಗತೊಡಗಿತ್ತು. ಪಾಪ ಮಾಡಿದವನಿಗೆ ಶಿಕ್ಷೆ ವಿಧಿಸದೆ ಅನ್ಯಾಯವಾಗಿ ಚಿಮಣಾಳನ್ನು ಪಡದಯ್ಯನ ಪಾಲಿಗೆ ಒಪ್ಪಿಸುವದು ಮರ್ಯಾದೆಗೇಡಲ್ಲದೆ ಮತ್ತೇನು? ನಾನಾಕಾಕಾ ಬದುಕಿದ್ದರೆ ಇಂಥ ನಾಚಿಕೆಗೇಡಿತನಕ್ಕೆ ಎಂದಾದರೂ ಸಮ್ಮತಿಸಬಹುದಾಗಿತ್ತೇ? ಇದಕ್ಕೆ ಒಪ್ಪುವದಕ್ಕಿಂತ ಮಾನವನ್ನುಳಿಸಲು ಅವನು ವಿಷ ತಿಂದು ಆತ್ಮಹತ್ಯ ಮಾಡಿಕೊಂಡಿರಲಿಕ್ಕಿಲ್ಲವಷ್ಟೇ? ಚಿಮಣಾಳ ಮುಂದಿನ ಜೀವನ ಇದರಿಂದ ಸುಗಮವಾಗಬಹುದೇ? ಪಡದಯ್ಯ ಹೇಳಿ ಕೇಳಿ ಘಟಿಂಗ. ದಾನಪ್ಪನಂತೆಯೇ ಚಿಮಣಾಳನ್ನೂ ಹೊರದೂಡಿದರೆ? ಮುಂದೆ ಅವಳಿಗೆ ಯಾರು ಗತಿ? ಈಗ ಕಾಲು ಜಾರಿದ್ದರೂ ಚಿಮಣಾಳಲ್ಲಿ ಅಭಿಮಾನಕ್ಕೇನೂ ಕೊರತೆ ಇಲ್ಲ. ಅವಳೂ ನಾನಾಕಾಕಾನ ಹಾದಿಯನ್ನೇ ಹಿಡಿದರೆ? ಹಾಗಾದರೆ ನಾನೇ ಅವಳನ್ನು ಕೈಯಾರೆ ಕೊಂದಂತಾಗುವದಿಲ್ಲವೇ? ಆಮೇಲೆ ಊರಲ್ಲಿ ನನ್ನ ಪ್ರತಿಷ್ಠೆಯ ಗತಿ ಏನು?

ವಿಚಾರ ಮಾಡಿಮಾಡಿ ದಾದಾನ ತಲೆ ಕೆಟ್ಟಿತು. ಈ ಅನುಭವವೇ ಅವನಿಗೆ ಸಂಪೂರ್ಣ ಹೊಸದು. ಜೀವನದಲ್ಲಿಯ ಮೊಟ್ಟಮೊದಲನೆಯ ದುಃಖ ಅವನಿಗೆ ಹೊಸ ಪಾಠವೊಂದನ್ನು ಕಲಿಸಿತ್ತು. ಬದುಕಿನ ದಾರಿ ತಾನು ತಿಳಿದುಕೊಂಡಷ್ಟು ಸುಗಮವಾಗಿರಲಿಲ್ಲ. ಇಲ್ಲಿಯ ವರೆಗೆ ದಾದಾ ಊರಿಗೆ ಅಚ್ಚಿಯ ಮಗನಾಗಿದ್ದ; ಊರಿನ ಅಭಿಮಾನನಾಗಿದ್ದ. ಆದರೆ ಇಂದು ಏನೂ ತಪ್ಪಿಲ್ಲದೆಯೇ ಜನರ ಕಣ್ಣ

ನಲ್ಲಿ ತಪ್ಪುಗಾರನಾಗಿದ್ದ. ಆಕಸ್ಮಿಕವಾಗಿ ಜನರಲ್ಲಿ ಹುಟ್ಟಿದ ದ್ವೇಷ ಅವನನ್ನು ಗೊಂದಲಗೆಡಿಸಿತು. ಸಾವಿಗೂ ಹೆದರದ ದಾದಾ, ಈಗ ಜನರ ತಿರಸ್ಕಾರದ ನಗೆಗೆ ಹೆದರಬೇಕಾಯಿತು. ಇಂಥ ಕತ್ತಲಲ್ಲಿಯೂ ಕೂಡ, ಪಾದಳ್ಳಿಯ ಕಿರಿಯಗಲಾದ ಬೀದಿಗಳಲ್ಲಿಯೂ ಯಾರಾದರೂ ನೋಡಿ ನಕ್ಕರೆ ಎಂಬ ಭಯದಿಂದ ದಾದಾ ತಲೆ ಕೆಳಗೆ ಮಾಡಿಕೊಂಡು ನಡೆದ.

ಇನ್ನು ಊಟ ಮಾಡುವದಂತೂ ಸಾಧ್ಯವಿರಲಿಲ್ಲ. ಊಟದ ನೆನಪಾಗುವದು ಕೂಡ ಇಂಥ ಕಾಲದಲ್ಲಿ ನಾಚಿಕೆಗೇಡು. ದಾದಾ ನೆಟ್ಟಗೆ ಗರಡೀಮನೆಯ ಹಾದಿ ಹಿಡಿದ. ಗರಡೀಮನೆಯ ಗೋಡೆಯ ಮೇಲಿನ ವಿಷಮಪ್ರಮಾಣದ ಹನುಮಂತನ ಚಿತ್ರವನ್ನೇ ಶೂನ್ಯಮನಸ್ಕನಾಗಿ ನೋಡುತ್ತ ಒಳಗೆ ಹೊಕ್ಕ. ಒಳಗೆಲ್ಲ ಕತ್ತಲೆ ದಟ್ಟವಾಗಿ ಹಬ್ಬಿತ್ತು. ಒಂದು ಲೋಡನ್ನೇ ತಲೆಗಿಂಬು ಮಾಡಿಕೊಂಡು ದಾದಾ ನಿದ್ದೆ ಹೋದ.

ಯಶವಂತರಾಯರು ಬೆಳಿಗ್ಗೆ ಮನಗೆ ಬಂದು ಹೋದನಂತರ ಬಡೋದೆಗೆ ಹೋಗಲು ಗಾಡಿಯ ವೆಚ್ಚಕ್ಕೆ ಹಣ ತರಲು ನೆರೆಯೂರಿಗೆ ಹೋದ ಲಕ್ಷ್ಮಣ ರಾತ್ರಿ ಮನೆಗೆ ಬಂದ. ನೋಡಿದರೆ ಕೀಲಿ ಹಾಕಿದ್ದು ತೆಗೆದಿರಲೇ ಇಲ್ಲ. ಕೀಲಿಕೈ ತರಲು ಗರಡೀಮನೆಗೆ ಲಕ್ಷ್ಮಣ ಬಂದಾಗ ಬಾಗಿಲು ತೆರೆದಿದ್ದು ಕಂಡಿತು. ಒಳಗೆ ದೀಪ ವಿಲ್ಲ. ಯಾರ ಸುಳುವೂ ಇರಲಿಲ್ಲ. ಹೊರಗೆ ಬಾಗಿಲಲ್ಲಿ ನಿಂತುಕೊಂಡೇ "ಒಳಗ ಯಾರದೀರಪೋ ?" ಎಂದು ಕೂಗಿಕೊಂಡ,

ದಾದಾ ಒಮ್ಮೆಲೇ ಎಚ್ಚರಾದ. ಎದ್ದು ಬಂದವನೇ ತಂದೆಯ ಕಾಲಿಗೆ ಬಿದ್ದವನೇ ಬಿಕ್ಕಿ ಬಿಕ್ಕಿ ಅಳತೊಡಗಿದ. ಅವನು ಅಳುವ ಕಾರಣವನ್ನು ಕೂಡ ಕೇಳದೆ ಲಕ್ಷ್ಮಣ ತಾನೂ ಅತ್ತುಬಿಟ್ಟ. ದುಃಖದ ಆವೇಗ ಸ್ವಲ್ಪ ಕಡಿಮೆಯಾದ ಮೇಲೆ ದಾದಾ " ಮನೆತನದ ಮರ್ಯಾದೀ ಹೋಗೋ ಕೆಲಸಾ ಮಾಡಿದೆ. ಹೊಟ್ಯಾಗ ಹಾಕಿಕೋ ಯಪ್ಪಾ." ಎಂದ.

ಲಕ್ಷ್ಮಣ ಇನ್ನೂ ಮಾತನಾಡುವ ಸ್ಥಿತಿಯಲ್ಲಿರಲಿಲ್ಲ. " ಮನೆಗೆ ನಡಿ ತಮ್ಮಾ" ಎಂದು ಹೇಳಿ ಮಗನನ್ನು ತಬ್ಬಿಕೊಂಡು ನಡೆದ.

ತಂದೆ ಮಗ ಇಬ್ಬರೂ ಮನೆಗೆ ಬಂದರು. ನೆರೆಹೊರೆಯವರು ಬಹುಶಃ ಇದನ್ನೇ ದಾರಿ ನೋಡುತ್ತಿದ್ದರೋ ಏನೋ ! ಅಂದು ನೂರಾರು ಜನರ ಮಧ್ಯದಲ್ಲಿ ದಾದಾ ತೋರಿದ ಧೈರ್ಯ, ಕೆಟ್ಟದ್ದನ್ನು ಅಟ್ಟವನೇ ಜಾಣನೆಂಬಂತೆ, ಚಿಮಣಾಳ

ಭವಿತವ್ಯವನ್ನು ಒಮ್ಮೆ ನಿರ್ಧರಿಸಿದ ಬಗೆ ಇವುಗಳನ್ನು ಕುರಿತು ವಿವರಿಸಿ ನೆರೆಹೊರೆಯವರು ಲಕ್ಷ್ಮಣನಿಗೆ ಹೇಳಿದರು. ಲಕ್ಷ್ಮಣ ಆಗಿಂದಾಗ ಬಾಳಾಚಾರ್ಯರ ಮನೆಗೆ ನಡೆದ.

ಬಾಳಾಚಾರ್ಯರೂ ಅಂದು ಗೌಡರ ಮನೆಗೆ ಹೋದವರು ತಡವಾಗಿಯೇ ಮನೆಗೆ ಬಂದಿದ್ದರು. ಈಗ ಪಂಜೆಯುಟ್ಟು ಸಂಧ್ಯಾವಂದನೆಯಲ್ಲಿ ನಿರತರಾಗಿದ್ದರು. ಲಕ್ಷ್ಮಣ ಬಂದ ಸುದ್ದಿ ಕೇಳಿ ಸಂಕ್ಷಿಪ್ತವಾಗಿಯೇ ಅದನ್ನು ಮುಗಿಸಿ "ಈಗ ಬಂದ್ಯೇನು ಲಕ್ಷ್ಮಣಾ?" ಎಂದು ಕೇಳುತ್ತ ಹಾಸಿದ ಕೃಷ್ಣಾಜಿನದ ಮೇಲೆ ಬಂದು ಕುಳಿತರು.

"ದಾದಾ ಇಂದ ಏನೇನ ಮಾಡ್ಯಾನ ಕಿವಿಗೆ ಬಿದ್ದೈತೆಲ್ಲ ಆಚಾರೆಪ್ಪ?" ಎಂದು ಕಟ್ಟೆಯ ತುದಿಗೆ ಕುಳಿತ ಲಕ್ಷ್ಮಣ ಕೇಳಿದ.

"ಆದದ್ದೆಲ್ಲ ಶ್ರೀಹರಿ ಇಚ್ಛಾ" ಎಂದು ತಮ್ಮ ಅಭಿಪ್ರಾಯವನ್ನು ಒಂದೇ ಮಾತಿನಲ್ಲಿ ಆಚಾರ್ಯರು ಉಸುರಿದರು.

ಲಕ್ಷ್ಮಣನಿಗೆ ಆಚಾರ್ಯರ ಮಾತಿನಲ್ಲಿ ಅಚಲವಿಶ್ವಾಸ. ಅವರು ವ್ಯವಹಾರ ಕುಶಲ ಪರೋಪಕಾರಿಗಳು. ಎಂಥ ಬಿಕ್ಕಟ್ಟಿನಲ್ಲಿಯೂ ಸರಿಯಾದ ಮಾರ್ಗದರ್ಶನ ಮಾಡಲು ಸಮರ್ಥರಾದವರೆಂದು ಶಂಕರಪ್ಪಗೌಡರು ಕೂಡ ಅವರ ಸಲಹೆಯಂತೆಯೇ ವರ್ತಿಸುತ್ತಿರಲಿಲ್ಲವೇ? ಬಾಳಾಚಾರ್ಯರ ವ್ಯಕ್ತಿತ್ವ ಪಾದಳ್ಳಿಯ ಜನಸಾಮಾನ್ಯರಲ್ಲಿ ವಿಶ್ವಾಸವನ್ನು ಹುಟ್ಟಿಸುತ್ತಿತ್ತು. ತಮ್ಮ ಅರವತ್ತು ವರ್ಷದ ಜೀವನದಲ್ಲಿ ಅವರು ತಪ್ಪಿ ಕೂಡ ಯಾರ ಮುಖಭಂಗವನ್ನೂ ಮಾಡಿರಲಿಲ್ಲ. ಅಂತಲೇ ತೊಡಕಿನಲ್ಲಿದ್ದವರು ಓಡಿ ಅವರ ಹತ್ತಿರ ಬರುತ್ತಿದ್ದರು. ದಾದಾನ ಮೇಲೆ ಬಾಪೂಸಾಹೇಬ ಹಾಗೂ ಪಡದಯ್ಯನವರು ಕೂಡಿಕೊಂಡು, ಎಲ್ಲಿ ಅರ್ಜಿ ಮಾಡಿ ಮತ್ತೊಂದು ಪೇಚು ತಂದಿಡುವರೊ ಎಂದು ಲಕ್ಷ್ಮಣನಿಗೆ ಭಯ. ಹಾಗೇನಾದರೂ ಆದರೆ ಮುಂದೆ ಮಾಡಬೇಕಾದದ್ದೇನು? ಅದ್ದರಿಂದಲೇ ಲಕ್ಷ್ಮಣ ಧಾವಿಸಿ ಆಚಾರ್ಯರಲ್ಲಿಗೆ ಬಂದಿದ್ದ.

ಆಚಾರ್ಯರೂ ಅದೇ ವಿವಂಚನೆಗೊಳಗಾಗಿದ್ದರು. ಸಂಜೆಗೆ ಗೌಡರ ಮನೆಗೆ ಹೋದಾಗ ಅವರಿಗೆಲ್ಲ ಸುದ್ದಿ ತಿಳಿದಿತ್ತು. ಪಡದಯ್ಯ ಹಾಗೂ ಗೌಡ ಇವರಿಬ್ಬರು ಬಲಾಢ್ಯರು ಕತ್ತಿ ಹಿರಿದರೆ ಊರ ಜನರೆ ಮಾಡೇನು? ಹಾಗೆ ನೋಡಿದರೆ ಚಿಮ-ಣಾಳ ಪ್ರಸಂಗ ಒಂದು ವೈಯಕ್ತಿಕ ವಿಷಯ. ದಾದಾ ಅಣ್ಣನಾಗಿ ಕರುಳಿನ

ಸಂಕಟಕ್ಕೆ ತನಗೆ ತಿಳಿದದ್ದು ಮಾಡಿದ್ದ. ಆದರೆ ಉಳಿದವರು ಇಬ್ಬರಿಗೂ ಸಮಾಧಾನ ಮಾಡಿ ಪರಿಸ್ಥಿತಿಯನ್ನು ಹದಕ್ಕೆ ತರುವ ಬದಲು, ಅದನ್ನು ತಮ್ಮ ಪ್ರಶ್ನೆಯನ್ನಾಗಿ ಮಾಡಿಕೊಂಡು ಬಡಿದಾಡಿದ್ದೇಕೆ? ಬಾಳಾಚಾರ್ಯರ ದೀರ್ಘಜೀವನದಲ್ಲಿ ಇಂಥ ಅನುಭವವೇನೂ ಹೊಸದಲ್ಲ. ಎಲ್ಲ ಸಾರ್ವಜನಿಕ ಕಲಹಗಳಿಗೂ ಮೂಲವಾಗಿ ಒಂದು ವೈಯಕ್ತಿಕ ಸಮಸ್ಯೆಯಿರುತ್ತಿತ್ತು. ಈಗಲೂ ಅದೇ ಗತಿಯಾಗಿತ್ತು.

ಅಂತೆಯೇ ಗೌಡರಿಗೆ ನಾಳಿನ ದಿನವೇ ತಮ್ಮ ಹಗೆ ತೆಗೆಸಿ ಕಾಳು ಕೊಡಬೇಕೆಂದು ಹೇಳಿ ಬಂದಿದ್ದರು. ಪಡದಯ್ಯ ಬಡವರ ಹಸಿವೆಯ ದುರ್ಲಾಭ ಪಡೆದುಕೊಂಡು, ಬಡವರಿಗೆ ಹಗೆಗಳನ್ನು ಲೂಟಿ ಮಾಡಲು ಪ್ರೋತ್ಸಾಹ ನೀಡದಂತೆ ಮಾಡಬೇಕಲ್ಲವೇ? ಹಾಗೆಯೇ ಶೇಷಪ್ಪನನ್ನೂ ಕರೆಸಿ 'ನಿನ್ನ ಚಿನ್ನಾಟದಿಂದ ಊರು ಹಾಳಾಗದಂತೆ ನೋಡಿಕೋ' ಎಂದು ಉಪದೇಶ ಮಾಡಿ ಬಂದಿದ್ದರು. ಅಷ್ಟಾದರೂ ಬಾಪೂಸಾಹೇಬ ಊರು ಬಿಟ್ಟು ಹೋಗದ ಹೊರತು ಊರಲ್ಲಿ ಸುಖ ಶಾಂತಿ ನೆಲೆಸುವದು ಅಸಾಧ್ಯವೆಂದು ಅವರಿಗೆ ಮನವರಿಕೆಯಾಗಿ ಹೋಗಿತ್ತು.

"ಬಡೋದಾಕ್ಕೆ ಹೋಗೋ ವಿಚಾರ ಏನಾತೋ ಲಕ್ಷ್ಮಣಾ?" ಎಂದು ಒಮ್ಮೆಲೆ ಆ ಮಾತು ನೆನಪಾಗಿ ಕೇಳಿದರು.

"ಅದs ಕೇಳಲಾಕ ಬಂದ್ನಿರೀ. ಮತ್ತ ದಾದಾ ಇಂದ ಮಾಡಿದ ಕಾರಭಾರಕ್ಕ ಅವನ ಮ್ಯಾಗ ಅರ್ಜಿ ಮಾಡಿ ಬಾಪೂಸಾಬ ಪೇಚುಗೀಚು ತಂದರ ಹ್ಯಾಂಗರೀ?" ಎಂದ ಲಕ್ಷ್ಮಣ.

"ನೀ ಏನೂ ಗಾಬರಿ ಆಗಬ್ಯಾಡ ಲಕ್ಷ್ಮಣಾ. ದಾದಾ ಮಾಡಿದ ಕೆಲಸಾ ನೋಡಿ ಊರಿಗೂರೇ ಮೆಚ್ಚೇದ. ಹುಡುಗ ಸಣ್ಣಾವ ಆದರೂ ಅವನ ಧೈರ್ಯಾ ದೊಡ್ಡದು. ಏನ ಅಡ್ಡೀ ಇಲ್ಲಾ, ನಿನಗ ಕೀರ್ತಿ ತರತಾನ ದಾದಾ" ಎಂದು ಆಚಾರ್ಯರು ಹೃತ್ಪೂರ್ವಕವಾಗಿ ಹೊಗಳಿದರು.

"ಅದಾನರೀ ಹೀಗs, ಅಡವೀ ಮಿಕಾ ಇದ್ದಾಂಗ. ದೊಡ್ಡಾವ ಆದಾ, ನನಗೂ ಆಟಾಪಸಾಣಿಲ್ಲರೀ ಇನ್ನ. ಧೈರ್ಯಾ ಐತಿರೀ, ಆದರ ಪರಸಂಗ ನೋಡಿ ಮಾಡಬೇಕಲ್ಲರಿ ಎಲ್ಲಾ?" ಲಕ್ಷ್ಮಣನಿಗೆ ಆಂತರಿಕ ಭೀತಿಯಿಂದ ಮಗನ ಸಾಹಸದ ಬಗ್ಗೆ ತಿರಸ್ಕಾರ ಹುಟ್ಟಿತ್ತು.

"ಇರಲ್ಯೋ. ಅವನ ಧೈರ್ಯಾ ನೋಡಿ ಪಡದಯ್ಯನ ಪರಿವಾರ ಇಂದು ಗುದ್ದು ಹೊಕ್ಕತಿಲ್ಲೋ? ಇನ್ನು ಅವನ ಹೆಸರ ತಗ್ಯಾದಿಲ್ಲ; ಬಾಪೂ ಅವನ

ಉಸಾಬರಿಗೆ ಬರೂದಿಲ್ಲ. ಇನ್ನ ಅವರೆಲ್ಲ ಅವನ ನೆಳ್ಳಿಗೆ ಸೈತ ಅಂಜಿ ನಡೀಲೇ ಬೇಕಾಗತದ. ನೀ ಏನು ಕಾಳಜಿ ಮಾಡಬ್ಯಾಡೇನಪಾ. ದಾದಾನ್ನ ಪಾದಳ್ಳಿ ಯವರು ಅಂಗೈಯಾಗಿಟ್ಟು ಸಾಕತಾರ. ನೀ ಬಡೋದಾಕ್ಕ ಹೋಗಿ ಲಕ್ಷ್ಮೀ ಬಾಯಿನ್ನ ಕರಕೊಂಡು ಬರೂದು ಈಗ ಅಗತ್ಯ ಅದ. ಜನರ ಅನುಕೂಲ ಇದ್ದಾಗ ಆ ಬಾಪೂಸಾಹೇಬನ್ನ ಪಾಡೇ ಬಿಟ್ಟು ಓಡಿಸಿ ಊರ ಉಪದ್ರವ ಕಡಿಮಿ ಮಾಡ ಬೇಕಾಗೇದ. ಹೌದಲ್ಲೋ, ನೀ ಏನಂತೀ ಇದಕ್ಕ ?" ಬಾಳಾಚಾರ್ಯರು ಸಾವಕಾಶ ವಾಗಿ ನುಡಿದರು.

"ಆಗಲಿ. ನಾಡದು ಸೋಮವಾರ ಹೊಂಡತೀನ ಆಚಾರೆಪ್ಪ. ನೀವು ಅಷ್ಟು ದಾದಾನ್ನ ಕರೆಸಿ ತಿಳೀಹೇಳರಿ. ನನ್ನ ಮಾತೇನು ಅಂವಾ ಕೇಳೂ ಹಾಗ ಕಾಣೂ ದಿಲ್ಲ. ಮಳ್ಳಹುಡಗ. ನಾಕ ಜನರ ಭಲೇ ಅನ್ನಾಣಾ, ಇಲ್ಲದ್ದ ಮಾಡಿಕೊಂಡು ಮತ್ತ ಮೈಮ್ಯಾಲೆ ಪೇಚು ತಂದುಕೊಂಡೀತು" ಲಕ್ಷ್ಮಣ ರಾಗವೆಳೆದ.

ಅಷ್ಟರಲ್ಲಿ ಕುಲಕರ್ಣಿ ಶೇಷಪ್ಪ ಅಲ್ಲಿಗೆ ಬಂದ. ಮೊಚ್ಚೆಗಳನ್ನು ತಲೆ ಬಾಗಿಲಿಗೆ ಬಿಡುವಾಗಲೇ ಲಕ್ಷ್ಮಣನ ಕೊನೆಯ ವಾಕ್ಯ ಅವನ ಕಿವಿಗೆ ಬಿದ್ದಿತ್ತು.

"ಪೇಚಿನ್ಯಾಗ ಬೀಳೋ ಕೆಲಸಾ ಮಾಡಿದಮ್ಯಾಲೆ ಅಧ್ಯಾಂಗ ತಪ್ಪತದೋ ಲಕ್ಷ್ಮಣಾ ? ಹೌದಲ್ಲರೀ ಆಚಾರು ?" ಎನ್ನುತ್ತ ನಶ್ಯವೇರಿಸಿದ.

"ಎಷ್ಟೊತ್ತಾತೋ ಏನೋ, ಊಟಾ ಮಾಡಿಲ್ಲ ಕಾಣತದ. ಮನಿಗೆ ಹೋಗು ಇನ್ನ ಲಕ್ಷ್ಮಣಾ" ಎಂದು ಆಚಾರ್ಯರು ಮುಂಬರುವ ಆಪ್ತಾಲೋಚನೆಯಲ್ಲಿ ಲಕ್ಷ್ಮಣನ ಅಗತ್ಯವಿಲ್ಲವೆಂದು ಸೂಚಿಸಿದರು.

ಲಕ್ಷ್ಮಣ ಸನ್ನೆಯರಿತು ಹೊರಟುಹೋದ. ಶೇಷಪ್ಪ ಆಚಾರ್ಯರಲ್ಲಿ ದೀರ್ಘ ವಿಚಾರವಿನಿಮಯ ನಡೆದು, ಕೊನೆಗೆ ಆಚಾರ್ಯರು ಸ್ವಲ್ಪ ಸಿಟ್ಟನಿಂದಲೇ ಶೇಷಪ್ಪ ನಿಗೆ ಎಚ್ಚರಿಕೆ ಕೊಡಬೇಕಾಯಿತು.

"ಇಕಾ ಶೇಷಪ್ಪ, ನೀನು ಪಡದಯ್ಯನ ಬೆನ್ನುಕಟ್ಟಿ ಊರಾಗ ಬಣ ಬೆಳೆ ಸಿದರ ಅದರ ಝಳಾ ಊರಿಗೇ ತಾಕೀತು."

"ನಾ ಬಣ ಬೆಳೆಸಬೇಕಂತ ಹೇಳಿದೆನೇ ಆಚಾರು ? ಗೌಡ ಪಡದಯ್ಯನ ಮರ್ಯಾದೀ ಕಳದಾನ. ಅಂವಾ, ಗೌಡ ನಾನಾನ ಮರಣದ ಪ್ರಕರಣ ಲಂಚಾ ತಿಂದು ಛಪಾಯಿಸಿದ್ದನ್ನು ಜೈಲಿಗೇ ಬೇಕೂ ಅಂತ ಪ್ರತಿಜ್ಞಾ ಮಾಡಿ ಕೂತಾನ. ಊರಾಗ ನಾಕು ಜನಕ್ಕ ಬೇಕಾದಾವ, ಅವನ ಮರ್ಯಾದೀ ಗೌಡಾ ತಗೀ

ಬಾರದಿತ್ತು."

"ಅಲ್ಲೋ, ಗೌಡ ಬಂದು ಬಾಯಿ ಹಾಕಿದ್ದರಿಂದs ಪಡಪ್ಪ ಮಠದೊಳಗ ಇನ್ನೂ ಜೀವಂತ ಇದ್ದಾನ. ಇದನ್ಯಾಕ ನೀ ಅವಗ ತಿಳಿಸಿ ಹೇಳೂದುಲ್ಲ?"

"ಆದರ ಆಚಾರs, ಈ ಗೌಡನ ಬಲಾ ಬೆಳದರ ನಮ್ಮನ್ನ ಅಂವಾ ಕಸಕ್ಕಿಂತ ಕಡಿಯಾಗಿ ಕಾಣತಾನ. ಪಡದಯ್ಯನ ವಜನ ಕಾಯಂ ಉಳೀಬೇಕಾದರ ಅವನಿಂದ ಗೌಡನ ಫಜೀತಿ ಮಾಡಿಸಬೇಕಾಗತದ. ಮೂಕೀ ಅರ್ಜಿ ಮಾಡಿದಾ ಅಂದರ ಗೌಡ ಮೆತ್ತಗಾಗತಾನ. ಗೌಡನ ವರ್ಮಾ ಕಟಿಗೊಂಡ ಪಡದಪ್ಪಗ ನಮ್ಮ ಆಶ್ರಯ ಇಲ್ಲ‌ದs ನಡಿಯೂದುಲ್ಲ. ಬಲಾಬಲ ಸಮಾಕಾಯಲಿಕ್ಕೆ ಇದೊಂದು ಹಾದಿ ಆಚಾರs. ಅಂದರs ಊರು ಥಣ್ಣಗ ಇರತದ."

ಈ ಮಾತಿನಲ್ಲಿ ಶೇಷಪ್ಪನ ನೀಚತನವೆಲ್ಲ ವ್ಯಕ್ತವಾಗುವಂತಿತ್ತು. ಶೇಷಪ್ಪನ ನೀಚತನಕ್ಕೆ ಸ್ವಾರ್ಥವೇ ಕಾರಣ. ಗೌಡನಂತೆ, ಅವನಿಗೆ ನೂರು ಕೂರಿಗೆ ಹೊಲದ ಆಧಾರವಿರಲಿಲ್ಲ. ಗೌಡ ಸ್ವಸ್ಥಾನದಲ್ಲಿ ನಿಂತು, ಆನೆಯನ್ನೂ ಎಳೆದುಕೊಳ್ಳಬಲ್ಲ ಮೊಸಳೆ; ಶೇಷಪ್ಪ ಗೆದ್ದಲಿಯ ಹುತ್ತಿನಲ್ಲಿ ವಾಸಮಾಡುವ ಹಾವು. ಅಂತೆಯೇ ಬಣ ಕಟ್ಟಿಕೊಳ್ಳದೆ ಊರಲ್ಲಿ ಪ್ರಸ್ಥಬೆಳೆಸುವದು ಅವನಿಗೆ ಅಸಾಧ್ಯವಾಗಿತ್ತು.

ಶೇಷಪ್ಪ ಹೊರಟು ಹೋದ. ಆಗ ರಾತ್ರಿಯ ಹನ್ನೊಂದು ಗಂಟೆಯಾಗಿರಬೇಕು. ಆಚಾರ್ಯರ ಪತ್ನಿ ಅಡಿಗೆಮನೆಯಲ್ಲಿಯೇ ರಾತ್ರಿಯ ಉಪಹಾರಕ್ಕೆ ಕಾಯುತ್ತ ಅಲ್ಲಿಯೇ ಅಡ್ಡಾಗಿದ್ದರು. ಇದ್ದ ಒಬ್ಬ ಮಗ ತೀರಿಕೊಂಡ ಮೇಲೆ ಗಂಡ-ಹೆಂಡಿರಿಬ್ಬರೂ ರಾತ್ರಿಯ ಊಟವನ್ನೇ ಬಿಟ್ಟುಬಿಟ್ಟಿದ್ದರು. ಆಚಾರ್ಯರು ಪತ್ನಿಯನ್ನೆಬ್ಬಿಸಿ, ಉಪಾಹಾರವನ್ನು ಬೇಡವೆಂದು ಹೇಳಿ, ಮಲಗಲೆಂದು ಮತ್ತೆ ನಡುಮನೆಗೆ ಬಂದರು.

ಈಗೀಗ ಆಚಾರ್ಯರಿಗೆ ಮೊದಲಿನಂತೆ ನಿದ್ದೆ ಹತ್ತುತ್ತಿರಲಿಲ್ಲ. ಇತ್ತೀಚಿನ ಕೆಲ ಘಟನೆಗಳು ಆಚಾರ್ಯರ ಜೀವನಸತ್ವವನ್ನೇ ಹೀರಿದ್ದವು. ತಮ್ಮ ಹರೆಯದ ಕಾಲಕ್ಕೆ ಅವರು ಊರಲ್ಲಿ ನಡೆಸಿದ ಕುಚೇಷ್ಟೆಗಳಿಗೇನೂ ಮಿತಿ ಇರಲಿಲ್ಲ. ಆದರೆ ಮಗ ತೀರಿಕೊಂಡ ಮೇಲೆ ಆಚಾರ್ಯರು ಗಂಭೀರರಾಗಿದ್ದರು. ಮನೆ ಬರಿದಾದ ಮೇಲೆ ಅನಿವಾರ್ಯವಾಗಿ ಲೋಕಕ್ಕೆ ಅಂಟಿಕೊಂಡಿದ್ದರು. ಮನೆತನದ ವೈದಿಕ ಸಂಪ್ರದಾಯ ಅವರ ಧಾರ್ಮಿಕತೆಗೆ ಪುಟಕೊಟ್ಟಿತು. ಚಳಿಯಿರಲಿ, ಮಳೆಯಿರಲಿ

ನಸುಕಿನಲ್ಲೆದ್ದು ಗೋಪಾಲಕೃಷ್ಣನ ಗುಡಿಯಲ್ಲಿಯ ಪುರಾಣವನ್ನೆಂದೂ ಬಿಡುತ್ತಿರಲಿಲ್ಲ. ಅದರ ಜೊತೆಗೆ ಲೋಕಹಿತದ ಕಾರ್ಯಗಳೂ ನಡೆದಿದ್ದವು.

ಆಚಾರ್ಯರು ಕೃಷ್ಣಾಜಿನದ ಮೇಲೆಯೇ ಅಡ್ಡಾದರು. ಆದರೆ ನಿದ್ದೆ ಬರಲಿಲ್ಲ. ಶೇಷಪ್ಪನ ಮಾತಿನಿಂದ ಅವರ ಹೃದಯದಲ್ಲಿ ಕೋಲಾಹಲವೆದ್ದಿತ್ತು. ಆಕಳಿಸಿ ಎದ್ದು ಕುಳಿತರು. ಒಳ್ಳೆಣ್ಣೆಯ ಹಣತೆ ನಿಧಾನವಾಗಿ ಉರಿಯುತ್ತಿತ್ತು.

ಶೇಷಪ್ಪ ಬಣ ಕಟ್ಟುವ ಮಾತುಗಳನ್ನಾಡಿ ಹೋಗಿದ್ದ. ಆಚಾರ್ಯರಿಗೆ ಈ ಅನೈಕ್ಯದ ದಾರುಣ ಅನುಭವ ಬಂದು ಹೋಗಿತ್ತು. ತಮ್ಮ ಮನೆತನವೇ ಅದಕ್ಕೆ ಬಲಿಯಾಗಿರಲಿಲ್ಲವೇ? ತಾವು ಮೂರು ಮಂದಿ ಅಣ್ಣತಮ್ಮಂದಿರು ಕೂಡಿದಾಗ ಮನೆಗಿದ್ದ ಮಾಂಗಲ್ಯ ಈಗ ಇದೆಯೇ? ಮನೆತನ ಯಾವುದೋ ಕ್ಷುದ್ರ ಕಾರಣಕ್ಕಾಗಿ ಮುರಿಯಿತು. ತಮ್ಮ ಹಿರಿಯ ಅಣ್ಣನ ಮಗ– ಗೋಪಾಲಾಚಾರಿ – ಪಡದಯ್ಯನ ಮಠದಲ್ಲಿ ಆಶ್ರಯ ಪಡೆದು ಕುಡಿತ-ಜೂಜುಗಳಲ್ಲಿ ತಲ್ಲೀನನಾಗಿದ್ದ. ಮನೆಯಲ್ಲಿ ಮದುವೆಗಾದ ಹೆಣ್ಣುಮಗಳು ಲಗ್ನವಿಲ್ಲದೆ ಮೂಲೆಗುಂಪಾಗಿದ್ದಳು. ಇದ್ದದ್ದರಲ್ಲಿ ನಾರಾಯಣನೇ ಒಳ್ಳೆಯವ, ಅಪ್ಪನ ಹೆಸರು ಕೆಡದಂತೆ ಬಾಳುವೆ ಮಾಡುತ್ತಿದ್ದ. ಅದೂ ಯಾತರ ಬಾಳ್ವೆ? ಭೂಮಿ ಮಾರಿಕೊಂಡು ಹಿಡಿ ಅನ್ನಕ್ಕೆ ಗತಿಯಿಲ್ಲದೆ, ದೇಶಾವರಿಯ ಮೊರೆಹೊಕ್ಕಿದ್ದಾನೆ. ಅದೇ ಕೂಡಿ ಇದ್ದರೆ, ಗೋಪಾಲ ಒಕ್ಕಲತನ ಮಾಡಬಹುದಿತ್ತು. ನಾರಾಯಣ ನೌಕರಿ ಹಿಡಿಯಬಹುದಿತ್ತು. ಹುಡುಗರ ವಿದ್ಯಾಭ್ಯಾಸಕ್ಕೆ ಅನುಕೂಲವಾಗಬಹುದಿತ್ತು. ಪಾಲು ಮಾಡಿಕೊಂಡರೂ ಪ್ರೀತಿಯಿಂದ ನಡೆಸಿಕೊಳ್ಳಬಹುದಿತ್ತಲ್ಲ. ಗೋಪಾಲಾಚಾರಿ ತಳವಾರ ರಂಗಿಯ ನಾದಕ್ಕೆ ಬಿದ್ದ. ಪಡದಯ್ಯನ ಸ್ನೇಹದಲ್ಲಿ ಪಾಲುಗಾರನಾದ. ಅವನನ್ನು ಕೂಡಿಕೊಂಡು ತಮ್ಮನ್ನೇ ಬಗ್ಗುಬಡಿಯಲು ಹವಣಿಸಿದ. ಸೀಮೆಯ ನ್ಯಾಯವೇನು? ಆಳನ್ನು ಹೊಡೆಯುವದೇನು?

ನಾರಾಯಣನೂ ಹಾಗೆಯೇ! ಪಾಲಿನಲ್ಲಿ ಬಂಗಾರ ಕಡಿಮೆ ಕೊಟ್ಟರೆಂದು ಕೋರ್ಟಿಗೆ ಹೋಗಿ ಇದ್ದುಬಿದ್ದದ್ದನ್ನೆಲ್ಲ ಕಳೆದುಕೊಂಡಿದ್ದ. ಇಲ್ಲದಿದ್ದರೆ ಈ ದೇಶಾವರಿ ಮಾಡುವ ಪ್ರಸಂಗ ಎಲ್ಲಿ ಬರುತ್ತಿತ್ತು? ತಮ್ಮ ಮನೆತನ ಅವನತಿಗಿಳಿಯಲು ಅಪ್ರತ್ಯಕ್ಷನಾಗಿ ಪಡದಯ್ಯ ಕಾರಣನಾಗಿದ್ದ. ಅವನಿಗೇನು? ನಾಕು ಜನರು ತನ್ನ ಮಾತು ಕೇಳಬೇಕೆಂಬ ಹಂಬಲ. ಅದಕ್ಕಾಗಿ ಕುಡುಕರ ತಂಡ ಬೆಳೆಸಿ, ಬಣ ಕಟ್ಟಿ ಪುಂಡಾಟಿಕೆ ನಡೆಸಿದ್ದಾನೆ. ಶೇಷಪ್ಪನೂ ಅವನ ಬೆನ್ನಿಗೇ ಬಿದ್ದಿದ್ದಾನೆ.

ಶೇಷಪ್ಪ ಮದುವೆ ಮಾಡಿ ಹೋಳಿಗೆ ತಿನ್ನುವವನಲ್ಲ; ಒಣಿವೆ ಸುಟ್ಟು ಅರಳು ತಿನ್ನುವ ಸ್ವಭಾವದವ. ಊರಲ್ಲಿ ಬಡಿದಾಟಗಳಾಗುತ್ತಿರಬೇಕು; ಜನ ಕೋರ್ಟು ಕಚೇರಿ ಅಡ್ಡಾಡಬೇಕು, ಅಂದರೆ ನಾಲ್ಕು ದುಡ್ಡು ತನಗೆ ದಕ್ಕೀತೆಂದು ಅವನ ಹಂಚಿಕೆ. ಅದರಲ್ಲಿ ಶೇಷಪ್ಪ ಪಡದಯ್ಯ ಇವರ ಸ್ನೇಹ ಊರಿಗೇ ವಿನಾಶಕರ ವಾದದ್ದು. ಇವರಿಬ್ಬರೂ ಕೂಡಿ ಆದಷ್ಟು ಬೆಂಕಿ ಆರಗೊಡದಂತೆ ನೋಡಿಕೊಳ್ಳು ವವರು. ಪಡದಯ್ಯ, ಗೌಡ ಹಾಗೂ ಬಾಪೂಸಾಹೇಬರ ಮೇಲೆ ಸೇಡು ತೀರಿಸಿ ಕೊಳ್ಳಲು ಮೊಕದ್ದಮೆ ಅರ್ಜಿ ಮಾಡಬಹುದು. ಆಗ ಗೌಡ ಬಾಪೂಸಾಹೇಬರು ಒಂದಾಗುತ್ತಾರೆ. ನಾನಾನ ಕೊಲೆಯೇ ಆಗಿಲ್ಲವೆನ್ನುವದಕ್ಕೆ ಸಾಕ್ಷಿ-ಪುರಾವೆ ಹುಟ್ಟಿಸಬೇಕು. ಸಾಕ್ಷಿ ಹೇಳಿದವರ ಮನೆ ಲೂಟಿಯಾದೀತು ಎಂದು ಪಡದಪ್ಪ ಹೆದರಿಸಬಹುದು. ಬಾಪೂಸಾಹೇಬನಿಗೆ ಹುಲಿಬ್ಯಾಟಿ ಹಳಬರ ತಂಡವಿದೆ; ಗೌಡ ರಿಗೆ ಗರಡಿಯಾಳುಗಳ ಬೆಂಬಲವಿದೆ. ಪಡದಯ್ಯನ ಪರಿವಾರವೂ ಸಣ್ಣದಲ್ಲ. ಕಿಡಿ ಬೆಂಕಿಯಾಗಲು ಏನು ತಡ?

ಗೌಡ ಹಾಗೂ ಬಾಪೂಸಾಹೇಬ ಒಂದಾದರೆ, ಬಾಪೂಸಾಹೇಬನನ್ನು ಊರು ಬಿಟ್ಟು ಓಡಿಸುವ ತಮ್ಮ ಯೋಜನೆ ಹೇಗೆ ಸಫಲವಾಗಬೇಕು? ಗೌಡನನ್ನು ಪೂರ್ಣ ನಂಬುವದೂ ಅಸಾಧ್ಯ, ಬಿಡುವದೂ ಅಸಾಧ್ಯ. ಹಿಂದಕ್ಕೆ ಗುರುಪಾದ ಸ್ವಾಮಿಗಳ ಮನಸ್ಸಿಗೆ ವಿರುದ್ಧವಾಗಿ, ಅಜರಾಣಿಯ ಈ ಪಡದಯ್ಯನನ್ನು ತಂದು ಮರಿಮಾಡಿದವನೂ ಈ ಗೌಡನೇ! ಲಕ್ಷ್ಮೀಬಾಯಿಯನ್ನು ವಾಡೇ ಬಿಟ್ಟು ಓಡಿಸಿ ದವನೂ ಅವನೇ! ಆದರೆ ಈಗ ಅವನ ವಿಚಾರಗಳೇ ಬದಲಾಗಿವೆ. ಲಕ್ಷ್ಮೀಬಾಯಿ ಯನ್ನು ಕರೆಸಿಕೊಳ್ಳಬೇಕೆನ್ನುತ್ತಾನೆ. ಪಡದಯ್ಯನನ್ನೂ ಮಠ ಬಿಟ್ಟು ಓಡಿಸ ಬೇಕೆನ್ನುತ್ತಾನೆ. ಶೇಷಪ್ಪನಂತೆಯೇ ಗೌಡನೂ ಸರಕಾರಿ ಅಧಿಕಾರಿ. ಇಬ್ಬರೂ ಊರಲ್ಲಿ ಬಣ ಹುಟ್ಟಿಸುವ ಹವಣಿಕೆಯಲ್ಲಿದ್ದಾರೆ. ಇದ್ದದ್ದರಲ್ಲಿ ಗೌಡ ತನ್ನ ಬಣಕ್ಕೆ ತಾನೇ ಧುರೀಣನಾಗಿ ಹೊಣೆ ಹೊತ್ತು ನಿಲ್ಲಬಹುದು. ಆದರೆ ಶೇಷಪ್ಪ ಎರಡೂ ಬಣಗಳ ವೇಷ ಧರಿಸಬಲ್ಲ ತಂತ್ರಗಾರ. ಕುಲಕರ್ಣಿಕಿವೃತ್ತಿ ಅವರಿಗೆ ಈ ಕಾಮರೂಪವನ್ನು ಸಹಜವಾಗಿಯೇ ಕಲಿಸಿದೆ. ಕಾಯದೇ ಜ್ಞಾನವೇ ಅವನ ಸಂಪತ್ತು; ಅದರ ಬಲದಿಂದ ಪಾದಳ್ಳಿಯನ್ನೇ ಕುಣಿಸುವ ಶಕ್ತಿ ಅವನಲ್ಲಿದೆ. ಇವ ರಿಬ್ಬರಲ್ಲಿ ಯಾರು ಮೇಲು ಯಾರು ಕೀಳು?

ಬಾಳಾಚಾರ್ಯರ ಮನಸ್ಸು ತಮ್ಮ ಮನೆತನದ ಇತಿಹಾಸದಿಂದ, ಪಾದಳ್ಳಿಯ

ಜೀವನಕ್ರಮವೆಡೆಗೆ ತಿರುಗಿತ್ತು. ಯಾವ ದೈವ ಆ ಅನೈಕ್ಯದ ಮೂಲಕ ತನ್ನ ಸೂತ್ರಗಳನ್ನಾಡಿಸುತ್ತಿದೆಯೋ ಬಲ್ಲವರಾರು? ಅರುವತ್ತು ವರ್ಷಗಳ ಜೀವನಾನು-ಭವ, ಪರಂಪರಾಗತವಾದ ವಿದ್ಯೆ, ಜನ್ಮಜಾತವಾದ ಬುದ್ಧಿಶಕ್ತಿ ಒಂದೂ ಈ ಸಮಸ್ಯೆಯನ್ನು ಬಿಡಿಸಲು ಸಹಾಯ ಮಾಡಲಾರವೆಂದೆನಿಸಿತು. ಇಡೀ ಊರಲ್ಲಿ ಅವರ ಮಾತಿಗೆ ಬೆಲೆಯಿತ್ತು; ಅವರ ಧಾರ್ಮಿಕತೆಯ ಬಗ್ಗೆ ಶ್ರದ್ಧೆ ಇತ್ತು; ಅವರ ಕರ್ತೃತ್ವಶಕ್ತಿಯ ಬಗ್ಗೆ ಆದರವಿತ್ತು. ಆದರೆ ಅದರಿಂದ ಉಪಯೋಗವಾದದ್ದೇನು? ಜನ ತಮ್ಮ ಕಡೆಗೆ ಸಲಹೆ ಕೇಳಲು ಬರುತ್ತಾರೆಂದು ಒಳಗಿಂದೊಳಗೇ ಆಚಾರ್ಯರಿಗೆ ಹೆಮ್ಮೆಯಿತ್ತು. ಅದು ಈಗ ಕರಗಿ ನೀರಾಯಿತು. ಜನ ತಮ್ಮ ಮಾತು ಕೇಳುತ್ತಾರೆ, ಯಾವುದರ ಸಲುವಾಗಿ ? ಎಮ್ಮೆ ಕಳೆದು ಹೋದರೆ, ಭವಿಷ್ಯ ಕೇಳಲು ಬರುತ್ತಾರೆ. ಬಿತ್ತಿಗೆಗಾಗಿ ಮುಹೂರ್ತ ಕೇಳಲು ಬರುತ್ತಾರೆ. ಬಹಳವಾದರೆ ನನ್ನ ಪುರಾಣ ಕೇಳಲು ಬರುತ್ತಾರೆ. ಆದರೆ ಬಾಳುವೆಯ ತೊಡಕನ್ನು ಬಗೆಹರಿಸಿಕೊಳ್ಳಲು ಯಾರೂ ಬರುವದಿಲ್ಲ. ಅವರಿಗೆ ಏನೆನ್ನಬೇಕು? ಮನೆಯಲ್ಲಿ ಹುಟ್ಟಿದ ಮಕ್ಕಳು — ಗೋಪಾಲ, ನಾರಾಯಣ — ಇವರೇ ತಮ್ಮ ಮಾತು ಕೇಳದೆ ಅವಿವೇಕಿಗಳಾಗಲಿಲ್ಲವೇ? ಗೌಡ, ಶೇಷಪ್ಪ ಬಾಪೂಸಾಹೇಬ ಇವರೂ ಬರುತ್ತಾರೆ; ಆದರೆ ಸ್ವಾರ್ಥ ಸಾಧಿಸಿಕೊಂಡು ಊರ ಸ್ವಾಸ್ಥ್ಯವನ್ನು ಕಲಕಲಿಕ್ಕೆ. ಬಾಳಾಚಾರ್ಯರಿಗೆ ಸಂಕಟವಾಯಿತು. ಯಾವ ವ್ಯಕ್ತಿಯ ಮಾತನ್ನೂ ಕೇಳಿ ಬದುಕು ನಡೆಯುವದಿಲ್ಲ ಎಂಬ ಮಾತು ಅವರಿಗೆ ಮನದಟ್ಟಾಯಿತು.

ಬಾಳಾಚಾರ್ಯರ ಮನಸ್ಸು ಪಾದಳ್ಳಿಯ ಜೀವನಕ್ರಮವನ್ನು ಮತ್ತೊಮ್ಮೆ ಪುನರ್ರಚಿಸಿ ನೋಡಿಕೊಂಡಿತು. ಅರುವತ್ತು ವರ್ಷ ಅದೇ ಊರಲ್ಲಿಯೇ ಬಾಳು ಕಳೆದ ಅವರಿಗೆ, ಆ ಊರಿನ ಹಾದಿ-ಬೀದಿಗಳು, ಮನೆ-ಮಠಗಳು, ಜನರ ಮುಖಗಳು, ತಮ್ಮ ಪುರಾಣದ ಓಲೆಯ ಗರಿಗಳಷ್ಟು ಪರಿಚಿತವಾಗಿದ್ದವು. ಆ ಊರಿನಂತೆಯೇ ಅಲ್ಲಿಯ ಜೀವನವೂ ಅಷ್ಟೇ ಪರಿಚಿತವಾಗಿತ್ತು. ಅಂದಮೇಲೆ ಮೊದಲಿದ್ದ ಸುಖಸಮಾಧಾನಗಳು ಈಗ ಎಲ್ಲಿ ಹಾರಿ ಹೋದವು? ಬಾಳಾಚಾರ್ಯರ ಮನಸ್ಸು ಪ್ರಶ್ನೆ ಹಾಕಿತು. ಈ ಜನಕ್ಕೆ ಆಗಿರುವದಾದರೂ ಏನು ? ನಾನಾನ ಮರಣವಾಗಿ ಮೂರು ತಿಂಗಳಾದರೂ ಅದರ ಪರಿಣಾಮವಾಗಿ ಉಂಟಾದ ದ್ವೇಷಾಸೂಯೆಗಳು, ತೆರೆಗಳಂತೆ ಇನ್ನೂ ಅಪ್ಪಳಿಸುತ್ತಲೇ ಇವೆ. ಇದಕ್ಕೆಲ್ಲ ಏನು ಕಾರಣ ? ಅಥವಾ ಈ ಅಕಾಂಡತಾಂಡವದ ಅವ್ಯವಸ್ಥೆಯಲ್ಲಿಯೇ ಹೊಸಬಾಳಿನ ವ್ಯವಸ್ಥೆ

ರೂಪುಗೊಳ್ಳಲಿದೆಯೇ? ಇರಬೇಕು. ಜನರು ಮೊದಲಿನಂತೆ ತಮ್ಮ ನೆಲವನ್ನು ಪ್ರೀತಿಸುವದಿಲ್ಲ. ಈ ಗೌಡರು – ಪಾದಳ್ಳಿಯ ಪ್ರತಿಯೊಂದು ಕೇರಿಯನ್ನು ಅಭಿಮಾನದಿಂದ ನೋಡಿಕೊಳ್ಳುವ ಗೌಡರು – ಈಗ ಬಣ ಕಟ್ಟಲು ಹೊರಟಿದ್ದಾರೆ. ವಾಡೆಯ ವೈಭವ ಈಗ ಬರಿಯ ಕನಸಾಗಿದೆ. ಊರ ಅಭಿಮಾನವಾಗಿದ್ದ ಮಠ, ಕುಡುಕರಿಗೆ ಆಶ್ರಯವಿತ್ತು ಈಗ ಜೀರ್ಣವಾಗಿದೆ. ಬಹುಶಃ ಜನರಿಗೆ ತಮ್ಮ ಊರ ಮೇಲಿನ ಅಭಿಮಾನವೇ ಇಲ್ಲದಾಗಿರಬೇಕು. ತಮ್ಮ ಮನೆತನದ ಸ್ಥಿತಿ ಗತಿಯೇ ಊರಿನದಾಗಿರಬೇಕು. ತಲೆದಿಂಬಿನಂತೆ ಆಶ್ರಯಸ್ಥಾನವಾಗಿದ್ದ ಹೊಲಗಳನ್ನೇ ಮಾರಿ ಬಟ್ಟಬಯಲಿನಲ್ಲಿ ನಿಂತ ತಮ್ಮ ಮಕ್ಕಳ ಚಿತ್ರ ಆಚಾರ್ಯರ ಕಣ್ಣೆದುರು ಕಟ್ಟಿತು.

ಯಾವ ಪಾಪದ ಫಲ ಇದೆಲ್ಲ? ಈ ಪಾಪದ ಉಗಮವಾದರೂ ಎಲ್ಲಿದೆ? ಅಥವಾ ಜೀವನವನ್ನು ರೂಪಿಸುವ ಹೊಣೆಯೇ ನಮ್ಮದಲ್ಲವೇನೋ! ಹಾಗಿದ್ದರೆ ಅದನ್ನು ರೂಪಿಸುವ ಶಕ್ತಿ ಯಾವದು? ಬಾಳಾಚಾರ್ಯರ ಮನಸ್ಸು ಊರ್ಧ್ವಗಾಮಿಯಾಗಿ ಎಲ್ಲವನ್ನೂ ನೋಡಹತ್ತಿತು. ಪಾದಳ್ಳಿಯ ನೆಲದ ಸತ್ವ ತೀರಿ ಹೋಗಿರಬೇಕು. ಸಾಗುಮಾಡದ ಹೊಲದಲ್ಲಿ ಗಿಡಗಂಟಿ ಬೆಳೆದರೆ ತಪ್ಪೇನು? ಪಾದಳ್ಳಿಯ ನೆಲ ನಿತ್ರಾಣವಾಗಿದೆಯೇನೋ! ಇಲ್ಲದಿದ್ದರೆ ಈ ರೀತಿಯ ವಿಕೃತಿಯೇ? ಅಥವಾ ಜೀವನದಲ್ಲಿ ಪಾಪ ಅಪರಿಹಾರ್ಯವೇ? ಭಗವಂತ ಇಂಥ ವೇಳೆಯಲ್ಲಿಯೇ ಅವತಾರ ಮಾಡುತ್ತಾನೆ ಎಂದಿಲ್ಲವೇ? ಎಲ್ಲಿ? ಎಲ್ಲಿ? ಪ್ರಶ್ನೆ ಭೂತವಾಗಿ ಕಾಡಿತು.

ಬಾಳಾಚಾರ್ಯರಿಗೆ ಇನ್ನೂ ಒಂದು ವಿಚಾರ ಬಂತು. ತಾನೋ ಹೇಳಿಕೇಳಿ ವೈದಿಕಬ್ರಾಹ್ಮಣ; ಪುರಾಣದಲ್ಲಿ ಸಿಗುವ ಹಿಡಿಯಕ್ಕಿಯೇ ತನ್ನ ಸಾರಸರ್ವಸ್ವ. ಅಂದ ಮೇಲೆ ಇದನ್ನೆಲ್ಲ ಯಾಕೆ ಹಚ್ಚಿಕೊಳ್ಳಬೇಕು? ಮಗ ಇದ್ದರೆ ಮೋಹವಿರುತ್ತಿತ್ತು. ಅವನೂ ಸತ್ತು ಎಂದೋ ತನಗೆ ವೈರಾಗ್ಯದ ಮಾರ್ಗವನ್ನು ತೋರಿಸಿಬಿಟ್ಟಿದ್ದಾನೆ. ಈ ಲೌಕಿಕಕ್ಕೂ ತನಗೂ ಏನು ಸಂಬಂಧ?

ಆದರೆ ಮಾಡಿದ ಕರ್ಮ ಬೆನ್ನುಹತ್ತಿತ್ತು. ಹೆಜ್ಜೆ ಮೂಡಿ ಮೂಡಿ ಹಾದಿ ಹುಟ್ಟುವಂತೆ, ಕರ್ಮ ಮಾಡಿ ಮಾಡಿ ನಮ್ಮ ಜೀವನವನ್ನು ನಾವು ರೂಪಿಸುತ್ತೇವೆ. ಒಮ್ಮೆಲೇ ಅದನ್ನು ತನ್ನದಲ್ಲವೆನ್ನುವದು ಹೇಗೆ ಸಾಧ್ಯ? ಗೋಪಾಲಕೃಷ್ಣನ ಗುಡಿಯಲ್ಲಿ ಪುರಾಣ ಹೇಳಿ ಹೇಳಿ ತಾವು ಪುರಾಣಿಕರಾಗಿಲ್ಲವೇ? ನಾಳೆ ಅದನ್ನು ತಾವು ನಿಲ್ಲಿಸಿಬಿಟ್ಟರೂ ತಾವು ಪುರಾಣಿಕರೆನ್ನುವದನ್ನು ಹೇಗೆ ಅಲ್ಲ

ಗಳೆಯಬೇಕು? ಅದರಂತೆಯೇ ಹಿಂದಿನ ತಮ್ಮ ಎಲ್ಲ ಲೌಕಿಕ ವ್ಯವಹಾರಗಳ ಬಂಧನ ತಮಗಿಲ್ಲವೆಂದು ಹೇಗೆ ಹೇಳಬೇಕು? ಪಾದಳ್ಳಿಯ ಬಂಧನ ತಮಗಿಲ್ಲವೆಂದು ಹೇಗೆ ಹೇಳಬೇಕು? ಆಸಕ್ತಿ ಎಂದರೆ ಋಣ; ಋಣವೆಂದರೆ ಕರ್ತವ್ಯ. ಆ ಕರ್ತವ್ಯವನ್ನು ಮೀರುವದು ಅನೀತಿ. ಆಸಕ್ತಿಯಿಂದ ಮಾಡಿದ ಕರ್ಮ, ಮಾಡಿಕೊಂಡ ಹೆಂಡತಿಯಂತೆ, ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಂತೆ. ಬಿಟ್ಟು ಕಾಡಿಗೋಡಿದರೂ ಬಿಡಲಾರದ ಸಂಬಂಧ ಅದು. ಅದರ ಋಣ ತೀರಲೇಬೇಕು. ಹೌದು, ಪಾದಳ್ಳಿಯ ಋಣವನ್ನು ತೀರಿಸಲೇಬೇಕು. ತಮ್ಮ ಶೇಷಾಯುಷ್ಯವನ್ನೆಲ್ಲ ಅದರಲ್ಲಿಯೇ ಕಳೆಯಬೇಕು. ಪೂರ್ವಜೀವನದ ನೂರಾರು ಆಸಕ್ತಿಗಳಿಗೆ, ಹವ್ಯಾಸಗಳಿಗೆ ತೆರಬೇಕಾದ ದಂಡ ಇದು. ಅಲ್ಲಿಯ ವರೆಗೆ ಬಿಡುಗಡೆಯೆಂಬುದಿಲ್ಲ. ಅಷ್ಟು ಮಾಡಿದ ಮೇಲೆ ಕರೆ ಬಂದಾಗ ಸಿದ್ಧವಾಗಿರಬೇಕು. ಈ ದೇಹ ಪಾದಳ್ಳಿಯ ನೆಲದಲ್ಲಿ ಒಂದು ಭಾಗವಾಗಿ, ಅದರ ಬೂದಿ ಕೃಷ್ಣೆಯ ನೀರಿನಲ್ಲಿ ತೇಲಿಹೋಗಬೇಕು. ನೀರಿನ ಋಣವೂ ಇದೆಯಲ್ಲ! ಆಮೇಲೆ ಪುನರ್ಜನ್ಮವಿದ್ದರೆ ಹಿಂದಿನ ತೀವ್ರ ಆಸಕ್ತಿ ಉಳಿದಿದ್ದರೆ, ಗೋಪಾಲಕೃಷ್ಣನ ಗುಡಿಯ ವೃಂದಾವನದಲ್ಲಿ ತುಳಸಿಯ ಸಸಿಯಾಗಿ ಹುಟ್ಟಬೇಕು.

ಆಚಾರ್ಯರ ಮನಸ್ಸು ಒಂದು ಸ್ತಿಮಿತಕ್ಕೆ ಬಂದಿತು. ಆಗಲೇ ಬೆಳಗಿನ ನಾಲ್ಕು ಗಂಟೆಯಾಗಿತ್ತು. ಇನ್ನೊಂದು ತಾಸು ಕಳೆದರೆ ಅದು ಆಚಾರ್ಯರ ದಿನನಿತ್ಯದ ಏಳುವ ಹೊತ್ತು. ಆದ್ದರಿಂದ ಇನ್ನು ಮಲಗುವದರಲ್ಲಿ ಅರ್ಥವಿಲ್ಲವೆಂದೆನಿಸಿತು. ಹಣತೆಯ ದೀಪವನ್ನು ದೊಡ್ಡದು ಮಾಡಿದರು. ಬೆಳಕು ಹೆಚ್ಚಾಯಿತು. ನಾಗೊಂದಿಗೆಯ ಮೇಲಿಂದ ಪುರಾಣದ ಹೊತ್ತಿಗೆಯನ್ನು ತಂದು ಬಿಚ್ಚಿದರು. ಅದು ಅವರಿಗೆ ಅತ್ಯಂತ ಪ್ರಿಯವಾದ ಭಾಗವತ ಪುರಾಣಗ್ರಂಥ. ಇಲ್ಲಿಯ ವರೆಗೆ ಕೇವಲ ಪುರಾಣ ಹೇಳುವದಕ್ಕೆ ಮಾತ್ರ ಅದನ್ನು ಉಪಯೋಗಿಸಲಾಗುತ್ತಿತ್ತು. ಆದರೆ ಈಗ ಅದರಲ್ಲಿ ಬಾಳಾಚಾರ್ಯರಿಗೆ ಜೀವನದ ಅರ್ಥ ಕಾಣಹತ್ತಿತು.

ಒಂದು ತಾಸು ಹೀಗೆಯೇ ಓದು ನಡೆದಿರಬೇಕು. ಆಚಾರ್ಯರಿಗೆ ಅದರ ಪರಿವೆ ಇರಲಿಲ್ಲ. ಆದರೆ ಒಮ್ಮೆಲೆ ಅವರ ಕಿವಿಗೆ, ಬೆಳಗಿನ ಶಾಂತಿಯ ಕೈಹಿಡಿದುಕೊಂಡೇ,

‘ ಏಳು ನಾರಾಯಣಾ, ಏಳು ಲಕ್ಷ್ಮೀರಮಣ |
ಏಳು ಶ್ರೀಗಿರಿವಾಸ ಶ್ರೀವೆಂಕಟೇಶಾ | ಏಳಯ್ಯ ಬೆಳಗಾಯಿತು | ’

ಎಂಬ ಹಾಡು ಕೇಳಬಂತು. ಸಹಧರ್ಮಿಣಿಯ ದಿನನಿತ್ಯದ ಕಾರ್ಯಕ್ರಮ ಅದು. ಉದಯರಾಗ ಅವರಿಗೆ ಜಗತ್ತಿನ ಅರಿವನ್ನು ತಂದುಕೊಟ್ಟಿತು. ಆಚಾರ್ಯರು ಗ್ರಂಥವನ್ನು ಕಟ್ಟಿ, ಮತ್ತೆ ಅದರ ಸ್ಥಾನದಲ್ಲಿಟ್ಟರು. ಎರಡೂ ಅಂಗೈಗಳನ್ನು ಚಾಚಿ, 'ಕರಾಗ್ರೇ ವಸತೇ ಲಕ್ಷ್ಮೀಃ ಕರಮಧ್ಯೇ ಸರಸ್ವತೀ' ಎಂಬ ಮಂತ್ರವನ್ನು ಪುಟ-ಪುಟಿಸಿದರು. ಎದ್ದು ತಲೆಬಾಗಿಲು ತೆರೆದು ಹೊರಗೆ ಬಂದು ನೋಡಿದರು. ಇನ್ನೂ ಪೂರ್ಣವಾಗಿ ಬೆಳಗಾಗಿರಲಿಲ್ಲ. ನದಿಯ ದಿಕ್ಕಿನಿಂದ ತಂಪಾದ ಗಾಳಿ ಬೀಸಿ ಬಂತು. ಆಚಾರ್ಯರು ಆಕಾಶದತ್ತ ಕಣ್ಣು ಹರಿಯಿಸಿದರು. ಬೆಳ್ಳಿ ಮೂಡಿತ್ತು. ತಲೆಬಾಗಿಲಿನ ನೇರಕ್ಕೇ ಇರುವ ದಾರಿಯಗುಂಟ, ಉತ್ತರದ ಮುಗಿಲ ಕಡೆಗೆ ನೋಡಿದರು. ಸಪ್ತರ್ಷಿಮಂಡಲ ಕ್ಷಿತಿಜದಂಚನ್ನು ಮುಟ್ಟುವಂತೆ ಬಾಗಿತ್ತು. ಸ್ವಲ್ಪ ಹೊತ್ತು ಅದನ್ನೇ ನೋಡುತ್ತ, ಆಚಾರ್ಯರು ಆಕಳಿಗೆ ಮೇವು ಹಾಕಲು. ಒಳಗೆ ಬಂದರು.

ಇನ್ನೂ ಒಂದು ತಾಸು ಹೊತ್ತು ಸರಿಯಿತು. ನಸುಕಿನ ಮಬ್ಬುಬೆಳಕು ಎಲ್ಲೆಡೆಗೂ ಹರಡಿತ್ತು. ಆಚಾರ್ಯರ ಸಹಧರ್ಮಿಣಿ, ಗಜೇಂದ್ರಮೋಕ್ಷದ ಪದ್ಯ ಗಳನ್ನು ಗುಣುಗುಣಿಸುತ್ತ, ಹೊಸ್ತಿಲಕ್ಕೆ ರಂಗೋಲಿ ಹಾಕುತ್ತಿದ್ದರು. ಅಷ್ಟ ರಲ್ಲಿಯೇ, ಶಂಕರಪ್ಪ ಗೌಡರು, "ಆಚಾರೆಪ್ಪ, ಆಚಾರೆಪ್ಪ" ಎಂದು ಕೂಗುತ್ತ ಧಾವಿಸಿ ಬಂದರು.

ಇಷ್ಟು ದೊಡ್ಡನ ಸುಕಿನಲ್ಲಿಯೇ ಗೌಡರು ಮನೆಗೆ ಬರುವದು ಆಚಾರ್ಯರಿಗೆ ಅನಿರೀಕ್ಷಿತವಾಗಿತ್ತು. ಗೌಡರನ್ನು ಕರೆದು ಕಟ್ಟೆಯ ಮೇಲೆ ಹಾಸಿ ಕುಳ್ಳಿರಿಸಿದರು.

ಗೌಡರಿಗೆ ಅಂದು ಇಡೀ ರಾತ್ರಿ ನಿದ್ದೆ ಹತ್ತಿರಲಿಲ್ಲ. ದಾನವ್ವ ಅಂದು ಅವರಿಗೆ ಹೇಳಿದ್ದ ಒಂದು ಮಾತು ಮನವನ್ನು ಕೆಣಕಿದ್ದೇ ಕಾರಣವಾಗಿತ್ತು. ಅವಳು ಹೇಳಿದ್ದು ಅವರಿಗೇನೂ ಅಸಂಭವನೀಯವಾಗಿ ತೋರಿರಲಿಲ್ಲ. ಗೌಡರ ಮೊದಲ ಹೆಂಡತಿ, ಪಡದಯ್ಯನ ಜನ್ಮಸ್ಥಳವಾದ ಅಜರಾಣಿಯವಳೇ. ಮೂವತ್ತು ವರ್ಷದ ಹಿಂದೆ ಈ ಲಗ್ನವಾಗಿತ್ತು. ಆದರೆ ಅತ್ತೆಯ ಮನೆಗೆ ಬರುವ ಮೊದಲೇ ಅವಳು ಬಸಿರಾದ ಸುದ್ದಿ ಬಂದಿತ್ತು. ಗೌಡರ ತಂದೆ, ಇಂಥ ನೀತಿಭ್ರಷ್ಟ ಹುಡುಗೆಯನ್ನು ಸೊಸೆಯೆಂದು ತಂದುಕೊಳ್ಳಲು ಒಪ್ಪಿರಲಿಲ್ಲ. ಅಂತೇ ಮಗನಿಂದ ಅವಳಿಗೆ 'ಸೋಡಚೀಟಿ' ಕೊಡಿಸಿದ್ದರು. ಆಮೇಲೆ ಅವಳು ತನ್ನನ್ನು ಕೂಡಿದವನನ್ನೇ ಉಡಿಕೆಯಾಗಿದ್ದಳು. ಉಡಿಕೆಯಾದವನ ಹೆಸರೂ ಶಂಕರಪ್ಪನೆಂದೇ ಇತ್ತು.

ಆದ್ದರಿಂದ ಅವರಿಬ್ಬರಿಗೆ ಹುಟ್ಟಿದ ಮಗನು ಪಾದಳ್ಳಿಯ ಗೌಡನಾಗಿ ಬರುವಂತೆ, ಪಡದಯ್ಯನವರು ಹೊಂಚುಹಾಕಿದ್ದರು. ಸೋಡಚೀಟಿ ಕೊಟ್ಟ ತಾರೀಖಿನಿಂದ ಒಂಬೆರಡು ತಿಂಗಳಲ್ಲಿ ಹುಟ್ಟಿದ ಮಗು, ತನ್ನದಲ್ಲದಿದ್ದರೂ, ಕೋರ್ಟಿನಲ್ಲಿ ವ್ಯಾಜ್ಯ ಹೂಡಿದರೆ ನಿರ್ಣಯ ಹೇಗೆ ಆಗುವದೋ, ಹೇಳುವದು ಕಠಿಣ. ಪಡದಯ್ಯ ಕೋರ್ಟು-ಕಚೇರಿ, ವಕೀಲರ ಗೆಳೆತನ ಬೆಳೆಸಿದವ. ವಕೀಲರ ಸಲಹೆ ಕೂಡ ಅವನಿಗೆ ಅನುಕೂಲವಾಗಿಯೇ ಇತ್ತೆಂದು ದಾನವ್ವ ಹೇಳಿದ್ದಳು. ಅಂತಲೇ ಆತುರರಾಗಿ ಬಾಳಾಚಾರ್ಯರ ಸಲಹೆ ಪಡೆಯಲು ಗೌಡರು ಧಾವಿಸಿ ಬಂದಿದ್ದರು.

"ಈ ಪಡದಯ್ಯನ್ನ ಮಟಾ ಬಿಟ್ಟು ಹೊರಗ ಹಾಕಿ, ಇನ್ನೊಂದು ಮರಿ ತಂದು ಕುಂಡರಿಸಿದರ ಪಡದಯ್ಯ ನಮ್ಮ ಮನೆತನಾನs ಮುಣಗಸತಾನಂತ, ದಾನವ್ವ ಹೇಳಿದಳ್ರೀ. ಅದಕs ಓಡೋಡಿಕೊಂತ ಬಂದೆ" ಎಂದರು ಗೌಡರು.

ಆಚಾರ್ಯರಿಗೆ ಗೌಡರ ಪ್ರಥಮ ವಿವಾಹದ ಸುದ್ದಿ ಗೊತ್ತಿರಲಿಲ್ಲವೆಂದಲ್ಲ. ಆದರೆ ಮೂವತ್ತು ವರ್ಷಗಳ ಹಿಂದೆಯೇ ಪರಲು ಹರಿದುಕೊಂಡು, ಬೇರೊಬ್ಬ ನನ್ನು ಲಗ್ನವಾಗಿ ಹತ್ತೆಂಟು ಮಕ್ಕಳನ್ನು ಹಡೆದವಳು, ತನ್ನ ಚೊಚ್ಚಿಲ ಮಗ ನನ್ನು ಈ ಮನೆತನದ ಉತ್ತರಾಧಿಕಾರಿಯನ್ನಾಗಿ ಮಾಡುವದು ನೀಲಿಕೆಟ್ಟ ಮಾತು ಎಂದು ಅವರ ಅಭಿಪ್ರಾಯ.

"ವಾರಸಾ ಕೇಳೋವರು, ಆ ಹೆಂಗಸೂ ಅಲ್ಲ, ಆ ಹತ್ತೆಂಟು ಮಕ್ಕಳೂ ಅಲ್ಲರಿ. ಆಕಿ ಚೊಚ್ಚಲ ಮಗನs. ಅಂವಾ ಸೋಡಚೀಟಿ ಕೊಡಸೂವ ಚಕ್ಕಟ್ಟ ಹುಟ್ಟಿದಾಂವ ಅಂತ ಪಡದಯ್ಯ ಅವನ್ನ ಎಬ್ಬಿಸಿ ಕೂಡಸು ಹೊಂಚ ಹಾಕ್ಯಾ ನಂತರೀ" ಎಂದು ಗೌಡರು ವಿವರಿಸಿದರು.

"ಹೊಂಚು ಬೇಕಾದವರು ಹಾಕ್ಯಾರು ಗೌಡರs. ಆದರ ಈ ಮಾತಿಗೆ ಅವರ್ಯಾಕ ಒಪ್ಪತಾರ? ತನ್ನ ಹಡದ ತಂದೀ ಬಿಟ್ಟು ಇನ್ನೊಬ್ಬರಿಗೆ ಹುಟ್ಟಿದ ಮಗಾ ಅಂತ ಹೇಳಿಕೊಳ್ಳಿಕ್ಕೆ ಅವರು ತಮ್ಮ ಮರ್ಯಾದೀ ಬಿಟ್ಟs ನಿಂತಿರಬೇಕು. ಪಡದಯ್ಯನ ಮಾತು ಕಾಯದೆ ದೃಷ್ಟಿಯಿಂದ ನಿಲ್ಲುತದೋ ಇಲ್ಲೋ ಇದೂ ಸೀರಾಗಿನ ಖಬು. ಯಾರು ಈ ಮೂರ್ಖನ ಮಾತಿಗೆ ಕಿವಿಗೊಟ್ಟು, ಮನಿಮಾರು ಕಳಕೊಂಡು ಕೋರ್ಟ ಕಚೇರಿಗೆ ಹೋದಾರು? ಇವೆಲ್ಲಾ ಅವನ ಬೂಟಾಟಿಕಿ. ಯಶವಂತರಾಯ ಆ ಊರ ಗೌಡ. ಅವನ ಮಾತು ಮೀರಿ ಅದ್ಯಾರು ಈ ಸನ್ಯಾಸಿ ಬೆನ್ನುಹತ್ತ್ಯಾರು? ನನಗೇನು ವಿಶ್ವಾಸ ಅನಸೂದುಲ್ಲ ಬಿಡು. ಮತ್ತ

ನೀವೂ ಅವನ ಮಾತಿನಿಂದ ಇಷ್ಟ ತಲೀ ಕೆಡಿಸಿಗೊಳ್ಳೋ ಕಾರಣ ಇಲ್ಲ." ಬಾಳಾ ಚಾರ್ಯರು ಗೌಡರಿಗೆ ಸಮಾಧಾನ ಹೇಳಿದರೂ ಕೂಡ ಅವರ ಕಣ್ಣೆದರು ನಿನ್ನಿನ ಕರ್ಮಸಿದ್ಧಾಂತ ಮತ್ತೆ ಬಂದು ನಿಂತಿತು.

"ಹಂಗಲ್ಲರೀ. ಮಟಕ್ಕ ಗೌಡರ ಮನೆತನದವರು ಕೊಟ್ಟ ಜಮೀನು ನಡೆಸಾಕ ನಾ ತಯಾರಿಲ್ಲ. ಮಟದಾಗ 'ತೊಟ್ಟಿಲು ತೂಗಬೇಕೂ ಅಂತ ನಮ್ಮ ಹಿರೇರು ಜಮೀನು ಹಾಕಿಕೊಟ್ಟಿಲ್ಲ. ಧರ್ಮ ನಡೀಬೇಕೆಂತ ಹಾಕಿಕೊಟ್ಟಾರ ಆಚಾರೆಪ್ಪ. ಆದರ ನಾ ಜಮೀನು ಕಸಗೊಂಡsಬಿಡತೀನು. ಆದದ್ದಾಗಲಿ."

"ಗೌಡರs, ನೀವು ಮಠಕ್ಕ ಕೊಟ್ಟೀರಿ. ಮಠ ಅಂದರ ಮಠಪತಿ ಅಲ್ಲ; ಇದನ್ನ ನೆನಪಿನ್ಯಾಗ ಇಡ್ರಿ. ಇಂಥಾ ಅಯೋಗ್ಯ ಆ ಸ್ಥಾನದಾಗ ಇದ್ದಾನ ಅಂತ ಮಠದ ಮಾನಪಾನ, ಆಸ್ತಿಪಾಸ್ತಿ, ಕಸಗೊಂಡರ ಆ ಅಯೋಗ್ಯಗೇನೂ ಲುಕ್ಸಾನ ಆಗೂದುಲ್ಲ. ಮಠಕ್ಕ ಮಾತ್ರ ಆಗತದ. ಗುರುಪಾದಸ್ವಾಮಿಗೋಳಂಥ ಪುಣ್ಯಾತ್ಮರು ಪೀಠಕ್ಕ ಮತ್ತೆ ಬಂದಾಗ, ಮಠಕ್ಕ ಮತ್ತ ಜಮೀನು ಕೊಡವರ್ಯಾರು? ಕೊಟ್ಟ ದಾನ ತಿರುಗಿ ತೊಗೊಳ್ಳಿಕ್ಕೆ ಬರೂದುಲ್ಲ ಗೌಡರs. ತೊಗೊಂಡರ ಅದು ಪಾಪ ಆಗತದ. ನೀವು ಈ ವಿಚಾರ ಬಿಟ್ಟುಬಿಡ್ರಿ. ಧೈರ್ಯಾ ಇದ್ದರ, ಜನರ ಬೆಂಬಲ ಇದ್ದರ ಈ ಪಡದಯ್ಯನ್ನs ಹೊರಗ ಹಾಕಿ, ಇನ್ನೊಬ್ಬ ಯೋಗ್ಯ ಸ್ವಾಮಿ ತಂದು ಕೂಡಸರಿ. ನಾನೂ ಒಪ್ಪೇನು"

ಈ ತರ್ಕಶುದ್ಧ ಮಾತಿಗೆ ಗೌಡರೂ ಒಪ್ಪಬಹುದಾಗಿತ್ತು. ಆದರೆ ಪಡದಯ್ಯನನ್ನು ಪದಚ್ಯುತನನ್ನಾಗಿ ಮಾಡಿದರೆ, ಅವನು ಸಿಟ್ಟಿಗೆದ್ದು ತನ್ನ ಗೌಡಿಕೆಯ ವತನಕ್ಕೆ ಇನ್ನೊಬ್ಬ ಉತ್ತರಾಧಿಕಾರಿಯನ್ನೇ ತಂದರೆ? ಅಂತೆಯೇ ಮೊದಲಿನ ಆ ವಿಚಾರವನ್ನು ಗೌಡರು ಬಿಟ್ಟುಕೊಟ್ಟಿದ್ದರು.

"ಹಾಗಾರ ಮಟಕ್ಕಂತ ಕೊಟ್ಟ ಭೂಮಿ ಮಟಕ್ಕs ಉಪಯೋಗ ಮಾಡಬೇಕು ಅಂತ, ದೈವದವರ್ನ ಕೇಳಬೇಕು ಅಂತೀರಾ?"

"ದೈವದವರ್ನ ಕೂಡಸೂ ಪ್ರಶ್ನೀನು ಇಲ್ಲ ಗೌಡರs. ಎಷ್ಟಂದರೂ ಅವರು ನಿಮಗ ಗುರುಗಳು. ಅದಕ್ಕ ಆ ಪೀಠದ ಮಾನಾ ಕಳಿಯೋ ಈ ಹೊಸ ಪದ್ಧತಿ ನೀವ್ರು ಹಾಕಬಾರದು. ನೀವs ಹೋಗಿ ಪಡದಯ್ಯಗ ಒಂದ ಮಾತು ಹೇಳ್ರಿ."

"ಅವನ ಸಂಗಾಟ ಮಾತು? ಇನ್ನ ಕೈಲಾಸ ಕಂಡಾಗನs. ಮೂಕೀ ಅರ್ಜಿ ಮಾಡಿಸಿ ನನ್ನ ಜೇಲಿಗೆ ಕಳಸಬೇಕೂ ಅಂತ ಬೊಗಳತಾನಂತ. ಆಗಲಿ ನಾನೂ

ನೋಡಿಕೊಣ್ಣಾಕ ತಯಾರ ಇದ್ದೇನಿ.” ಗೌಡರು ಮೀಸೆ ತಿರುವಿದರು.

“ಗೌಡರ ಈರ್ಷಾ ಬಹಾಳ ಕೆಟ್ಟದು. ಬಣಾ ಏನೋ ಕಟ್ಟತೀರಿ. ನಾಕು ಪುಂಡರು ಮೊದಲೇನೋ ನೀವು ಹೇಳಿದ್ಹಾಂಗ ಕೇಳತಾರ. ಹಿಂದಿನಿಂದ ಅವರು ಹೇಳಿದ್ಹಾಂಗ ನೀವು ಕೇಳದಿದ್ದರ ನಿಮ್ಮ ಅವತಾರ ಮುಗಸತಾರ. ಬಣಾ ಕಟ್ಟೊ ಪಂಪರ ವೇತಾಳ ಸ್ವಾಧೀನ ಮಾಡಿಕೊಂಡ್ಹಾಂಗs ಅದ.” ಬಾಳಾಚಾರ್ಯರು ಮತ್ತೆ ಉಪದೇಶ ಮಾಡಿದರು.

ಗೌಡರಿಗೆ ಒಳಗಿಂದೊಳಗೇ ಸಿಟ್ಟು ಕುದಿಯುತ್ತಿತ್ತು. ಆದರೆ ಆಚಾರ್ಯರ ಮಾತಿಗೆ ಇಲ್ಲೆನ್ನಲಾರದೆ ಸುಮ್ಮನೆ ಎದ್ದು ಹೊರಟುಹೋದರು. ಬೆಳಗಾದೊಡನೆ ಲೋಕದ ಬಂಧನ ಮತ್ತೆ ಸುತ್ತಿಕೊಂಡಿತಲ್ಲ, ಎನ್ನುತ್ತ ಆಚಾರ್ಯರು ತಮ್ಮ ನಿತ್ಯಾಹ್ನಿಕಕ್ಕೆ ಒಳಗೆ ನಡೆದರು.

:: ೬ ::

ಗೌಡರ ಹಗೆ ಲೂಟಿ ಮಾಡುವ ನಿರ್ಣಯ ಸ್ವೀಕರಿಸಲು ಮಠದಲ್ಲಿ ಸೇರಿದ ಸಭೆ, ದಾದಾ ಎಬ್ಬಿಸಿದ ಗೊಂದಲದಲ್ಲಿ ಚದರಿ ಹೋಯಿತು. ಮರುದಿನ ಪುನಃ ಜನರು ಸಭೆ ಸೇರಬಹುದಿತ್ತು. ಯಾಕೆಂದರೆ ಬರಗಾಲದ ಮೂಲಕ ಜನ ಕೂಳಿಲ್ಲದೆ ಬಾಯಿ ಬಾಯಿ ಬಿಡುತ್ತಿದ್ದರು. ಆದರೆ ಮರುದಿನವೇ ಶಂಕರಪ್ಪಗೌಡರು ಧಾರಳವಾಗಿ ಬಡಜನರಿಗೆ ಕಾಳು ಕೊಡುವದಾಗಿ, ಮಾತಿನ ಮಂಟಪ ಕಟ್ಟದೆ, ಕೃತಿಯಲ್ಲಿಳಿಸಿದರು. ಸೋಮವಾರದ ವರೆಗೂ ಹಗೆ ತೆಗೆಯುವದನ್ನು ಅವರು ತಡೆಯಲಿಲ್ಲ. ಇದನ್ನು ಕಂಡು ಅವರ ಸ್ವಭಾವವನ್ನು ಅರಿತವರಿಗೆ ಅಚ್ಚರಿಯೆನಿಸಿತು. ಗೌಡರ ಕೀರ್ತಿ ಊರಲ್ಲಿ ಈ ರೀತಿ ಹಬ್ಬಿದ್ದನ್ನು ಕಂಡು, ಪಡದಪ್ಪನ ಪ್ರೇರಣೆಯಿಂದ ಬಾಪೂಸಾಹೇಬನೂ ವಾಡೆಯ ಗೌರವ ಉಳಿಸಲು ಅವರಿಗೆ ಪ್ರತಿಸ್ಪರ್ಧಿಯಾಗಿ ನಿಂತನು. ವಾಡೆಯ ಹಗೆಗಳಲ್ಲಿ ಸೂರ್ಯಪ್ರಕಾಶ ಕಾಣದೆ ಬಿದ್ದಿದ್ದ ಜೋಳ ಸೋಮವಾರ ದಿನ ಹೊರಗೆ ಬಂದಿತು. ಈ ಕಾಳಿನ ವಿನಿಯೋಗದ ಸಲಹೆಗಾರರಾಗಿ ನಿಂತ ಪಡದಯ್ಯನವರನ್ನು ಎಲ್ಲರೂ ಕೊಂಡಾಡುವವರೇ! ಇದಕ್ಕೆ ಕಾರಣವಿಲ್ಲದಿರಲಿಲ್ಲ.

ಗೌಡರಿಂದ ಬಂದ ಕಾಳು, ಕಡವೆಂದು ಕೊಡಬೇಕಾಗಿತ್ತು. ಸುಗ್ಗಿಯ ತಲೆಯ ಮೇಲೆ ಸವ್ವಾರಿ ಹಾಕಿ, ಕಾಳು ಮರಳಿಕೊಡುವದಾಗಿ ಜಾಮೀನು ಕೊಟ್ಟು ಒಯ್ಯ ಬೇಕಾಗಿತ್ತು. ಹಾಗೆ ಕೊಡಲಾಗದಿದ್ದವರು ಗೌಡರ ಮನೆಯಲ್ಲಿ ಜೀತ ಮಾಡಿ, ಹೊಲಗಳಲ್ಲಿ ನಟ್ಟು ಕಡಿದು ಮುಟ್ಟಿಸಬೇಕಾಗಿತ್ತು.

ಗೌಡರು ಕಾಳು ಹಂಚಲು ಪ್ರಾರಂಭಿಸಿದ್ದೇ ತಡ,ಮರುದಿನ ಪಡದಪ್ಪನವರು ಯಾವ ಕರಾರಿನ ಜಂಜಾಟವೂ ಇಲ್ಲದೆ ಬಾಪೂಸಾಹೇಬರು ಕಾಳು ಕೊಡುವ ರೆಂದು ಸಾರಿದರು. ತಿರುಗಿ ಕೊಡುವ ಕರಾರು ಇಲ್ಲದೆ ಕೊಡುವದು ಪುಕ್ಕಟೆ ಬಂದಂತೆಯೇ ಎಂದು ಜನರ ಭಾವನೆಯಾಗಿತ್ತು. ಆದ್ದರಿಂದ ಹೊಲೆಯರು, ತಳವಾ ರರು, ಕುರುಬರು, ಮತ್ತಿತರ ಕಾಟಕರು ಕಾಳಿಗಾಗಿ ಮಠದ ಮುಂದೆ ಹಿಂಡು ಹಿಂಡಾಗಿ ಸೇರಿದರು. ಹೊಲಮನೆಗಳನ್ನಿಟ್ಟುಕೊಂಡು ತಂದ ಸಾಲ ತೀರಿಸಬೇ ಕೆಂಬ ಭಾವನೆಯುಳ್ಳ ರೈತರು ಮಾತ್ರ ಗೌಡರೆಡೆಗೆ ಜೋಳಕ್ಕಾಗಿ ಹೋಗತೊಡ ಗಿದರು.

ಬಾಪೂಸಾಹೇಬರ ಜೋಳವನ್ನು ಒಯ್ದವರು ಅದನ್ನು ಮನೆಗೆ ಮುಟ್ಟಿಸಿದ ಮೇಲೆ ತಾವು ತಪ್ಪು ಮಾಡಿದೆವೆಂದು ಪಶ್ಚಾತ್ತಾಪಪಟ್ಟರು. ನಾಲ್ಕಾರು ವರ್ಷ ಹಗೆ ಬಿದ್ದ ಜೋಳಕ್ಕೆ ಕೆಟ್ಟ ವಾಸನೆ ಬರುತ್ತಿತ್ತು. ಅದು ಸಾಮಾನ್ಯವಾಗಿ ಮನುಷ್ಯರು ತಿನ್ನುವ ಸ್ಥಿತಿಯಲ್ಲಿರಲಿಲ್ಲ. ದನ ತಿನ್ನದಂಥ ಜೋಳ ಕೊಟ್ಟು ಗೌಡರ ಮನೆಯ ಕಟ್ಟೆ ಹತ್ತದಂತೆ ಮಾಡಿದ ಅವರ ತಂತ್ರಕ್ಕೆ ಒಳಗಾದದ್ದು ಪೆಚ್ಚುತನ ಎಂದು ಅನೇಕರು ತಮ್ಮನ್ನೇ ತಾವು ಹಳಿದುಕೊಂಡರು.

ಮಾದಿಗರ ಚನ್ನ ತಾನೊಯ್ದ ಜೋಳವನ್ನು ತಿರುಗಿ ಮಠಕ್ಕೆ ತಂದು, ಅಂಗಳದಲ್ಲಿ ಸುರಿವಿ "ಯಪ್ಪಾ, ಮನೀ ಮುಂದಿ ಗುಳೇ ಹೋಗತಾರಂತರೀ. ಈ ಜ್ವಾಳಾ ನಿಮ್ಮದು ನಿಮಗ ಮುಟ್ಟಲಿ ಅಂತ ತಂದೀನಿ" ಎಂದು ಹೇಳಿ ಧೋತರ ವನ್ನು ಜಾಡಿಸಿಕೊಂಡು ಹೊರಗೆ ನಡೆಯುವದರಲ್ಲಿದ್ದ.

ಪಡದಯ್ಯನವರಿಗೆ ಬ್ರಹ್ಮಾಂಡ ಸಿಟ್ಟು ಬಂತು. "ಯಾಕಲೇ ಚನ್ನಾ, ಗುಳೇ ಹೋಗಬಾರದಂತಹ ಕಾಳು ಕೊಟ್ಟೇತ್ತು. ಅಂತಾದ್ದೇನು ದೌಲತ್ತ ಸಿಗತೈತೆಪಾ ಮಗನಃ, ಗುಳೆ ಹ್ವಾದರ? ಕರೇ ಹೇಳು, ವಾಡೇದ ಜ್ವಾಳಾ ತಿರುಗಿ ಕೊಟ್ಟರ, ಗೌಡರು ಜ್ವಾಳಾ ಕೊಡತೀವಂತ ಹೇಳ್ಯಾರಿಲ್ಲಲೇ?" ಪಡದಯ್ಯನವರು ಚನ್ನ ನನ್ನು ಜಬರಿಸಿದರು.

ಗೌಡರು ಹಾಗೆ ಹೇಳಿದ್ದು ನಿಜವೂ ಇತ್ತು. ಚನ್ನ ಊರ ವತನದಾರ ಮಾದಿಗ. ಊರಲ್ಲಿ ಅರ್ಧಕ್ಕಿಂತ ಹೆಚ್ಚು ರೈತರ ಬಾಬು ಅವನದೇ. ಅವನು ಊರು ಬಿಟ್ಟು ಗುಳೇ ಹೋಗಿದ್ದರೆ ತಿರುಗಿ ಬಂದಾಗ ಅವನಿಗೆ ನಿಲ್ಲಲು ಊರಲ್ಲಿ ನೆಲೆಯೇ ಇರಲಿಲ್ಲ. ಆ ವರ್ಷದ ಆಯಾ ಬರುವದಕ್ಕೆಲ್ಲ ಅವನು ನೀರು ಬಿಡಬೇಕಾಗುತ್ತಿತ್ತು. ಗೌಡರ ಸೂಚನೆಯ ಮೇರೆಗೇ ವಾಡೆಯ ಜೋಳವನ್ನು ತಿರುಗಿ ಕೊಟ್ಟು, ಬೆಂಡೀ ಬೀಜದಂತಿರುವ ಗೌಡರ ಕಾಳು ಒಯ್ಯಲು ಅವನು ಧೈರ್ಯ ಮಾಡಿದ್ದು.

ಪಡದಯ್ಯ ತನ್ನ ಮನದಿಂಗಿತವನ್ನು ಅರಿತನಲ್ಲ, ಎಂದು ಒಂದು ಕ್ಷಣ ಚನ್ನ ಕಕ್ಕಾವಿಕ್ಕಿಯಾದ. ಆದರೆ ಚನ್ನ ನಾಟಕೀ ಮನುಷ್ಯ. ಅವನ ಮಾತಿನ ಬಣ್ಣಗಾರಿಕೆಗೆ ಮರುಳಾಗದವರೇ ಇರಲಿಲ್ಲ.

"ಯಪ್ಪಾ, ಕರೆ ಹೇಳಿದರೂ ಕೇಳತೀ, ಸುಳ್ಳು ಹೇಳಿದರೂ ಕೇಳತೀ. ದೇವರ ಮುಂದ ಸುಳ್ಳ ಹೇಳಲ್ಯಾ ಯಪ್ಪಾ? ಗುಳೇ ಹೋಗೂದು ಟರಾಯಿಸಿತರೀ. ಅದಕ ಕಾಳು ತಿರುಗಿ ಕೊಟ್ಟು, ರಿಣಾ ಮುಟ್ಟಿಸಿದರ ಪಾಡ ಆಗಾಕಿಲ್ಲರೇ? ಗೌಡರು ನಮ್ಮಂತವರ್ನ ಕಟ್ಟೀ ತೆಳಗ ನಿಲ್ಲಗೊಡೂದಿಲ್ಲ,ಇನ್ನ ಕಾಳ ಕೊಟ್ಟಾರ್ರೀ? ಹಾಗಿದ್ದರ ನಿನ್ನ ಮಗಾ, ಇಲ್ಲಿ ಬಂದು ಬೀಳತಿದ್ನs ಯಪ್ಪಾ?" ಎಂದು ಸುಳ್ಳಿನ ಕಂತೆಯನ್ನು ಬಿಚ್ಚಿದ.

"ಗೌಡರು ಕೊಡಲಿಲ್ಲ ಅಂತ ಇಲ್ಲಿ ಬಂದಿದ್ದಿ ಹೌದಲ್ಲೊ ಮಗನ!" ಪಡದಯ್ಯ ಗುಡುಗಿದರು.

"ಯಪ್ಪಾ, ನೀ ತಂದಿ, ನಾ ಮಗಾ; ನೀ ಕೆಸರ, ನಾ ನೀರ. ಕಳ್ಳ ಹ್ಯಾಗ ಬಿಟ್ಟೀತ ಯಪ್ಪಾ? ಇಂತಾ ಕೆಡಗಾಲದಾಗ ಅಪ್ಪನ ಪಾದಾ ಬಿಟ್ಟ ಅತ್ತಿತ್ತ ಹೋದಾನೇನೀ ಮಗಾ? ನೀ ಕೊಡಬೇಕು; ನಾ ಉಣಬೇಕು; ನೀ ಮುಂದ ಕರೀಬೇಕು; ನಾ ಬರಬೇಕು; ನೀ ಬಯ್ಯಬೇಕು, ನಾ ನಗಬೇಕು." ಚನ್ನನ ಮಾತಿನಲ್ಲಿ ಭಕ್ತಿಕಾವ್ಯದ ಸಲಿಗೆ ಇತ್ತು.

"ಕೊಟ್ಟದ್ದು ತಿರುಗಿ ತಂದು ಕೊಡಲಾಕ ನಾಚಿಕಿ ಬರಲಿಲ್ಲೇನಲೇ ಚನ್ನಾ? ತೊಗೊಂಡು ತಿರಗಿ ಹೋಗು." ಎಂದರು ಪಡದಯ್ಯನವರು.

"ಅಪ್ಪನ ಪಾದಕ್ಕ ಬೀಳಲಾಕ ನಾಚಿಕಿ ಯಾಕ ಯಪ್ಪಾ? ಹಸದಾಗ, ನಿಂದ ಬಿಟ್ಟು ನನಗ ಕೊಡೂ ಅಂತ ಒಯ್ಯತೀನಿ. ಇದ್ದಾಗ ಇಕಾ ನಿಂದು ನಿನಗ ಮುಟ್ಟಿಸ್ತು ಅಂತೀನಿ. ಒಯ್ದಿದ್ದು ತಿರುಗಿ ತಂದರ ತಪ್ಪ ಎಲ್ಲೇದು ತಂದೀ?" ಚನ್ನ

ರ್ಹಾಗವೆಳಿದ.

"ಲೇ, ನಿನ್ನ ಬಣ್ಣದ ಮಾತ ಇಲ್ಲಿ ಹೆಚ್ಚಬ್ಯಾಡೆ. ಇಲ್ಲೋ (ಡು. ಈ ಕಾಳು ತಿರುಗಿ ಒಯ್ಯಿ. ನಿನಗ ಬ್ಯಾಡಾಗಿದ್ದರ ನಿನ್ನ ಕೇರ್ಯಾಗಿನ ಬಡವರಿಗೆ ಕೊಟ್ಟು ಬಿಡು. ಕೊಟ್ಟಿದ್ದು ಅಪನೋರು ತಿರುಗಿ ತಗೊಂಡರೂ ಅಂತ ಕೆಟ್ಟ ಹೆಸರ ಬ್ಯಾಡ ನನಗ. ಅಂದ್ಹಾಂಗ ಚನ್ಯಾ, ನಿಮ್ಮ ಲಕ್ಷ್ಮ್ಯಾ ಆ ಗೌಡರ ಕಡಿಂದ ಜ್ವಾಳಾ ಕಡಾ ತಂದಾನಂತ ಹೌದೇನಲೇ?" ಎಂದು ಪಡದಯ್ಯನವರು ಮೆಲ್ಲಗೆ ಸತ್ಯವನ್ನು ಹೊರಗೆಡಹಲು ಕೇಳಿದರು.

"ಛೀ ಬಿಡ ಯಪ್ಪಾ, ಅದೇನ ತಂದೀತು? ಒಳ್ಳೊಳ್ಳೆಯವರಿಗೇ ಇಂಗ ಹಚ್ಚೊ ಗೌಡರು ಲಕ್ಷ್ಮ್ಯಾನಂತಾ ಬಾಯಿ ಸತ್ತದ್ದಕ್ಕ ಕಾಳ ಕೊಟ್ಟಾರ್ರೇ? ನಮ್ಮ ಕೇರ್ಯಾಗನಕಾ, ಯಪ್ಪಾ, ಮಸಿಮನಿಗೆ ಅಪನೋರ ಹೆಸರs ಹಾಡಿ ಹರಸೂದು. ಯಪ್ಪಾ, ಕರೇ ಹೇಳಿದರೂ ಕೇಳತೀ, ಸುಳ್ಳು ಹೇಳಿದರೂ ಕೇಳತೀ, ಕೇರ್ಯಂತ ಕೇರೆಲ್ಲ ನಿಮ್ಮ ಜ್ವಾಳದ ಗಬ್ಬ ನಾತs ಹೊಡೂತತಿ." ಚನ್ನ ಈ ಸಾರೆ ಸಾಭಿನಯ ವಾಗಿ ಹೇಳಿದ.

ಪಡದಯ್ಯನವರಿಗೆ ಅಪಮಾನವೆನಿಸಿತು; ಸಿಟ್ಟೂ ಬಂತು. "ಹುಚ್ಚನನ ಮಗನs, ದಾನಾ ಕೊಟ್ಟ ಎತ್ತಿನ ಹಲ್ಲ ನೋಡಿದರಂತ. ಸಾಯಾಕ ಬಂದವರು, ಕಾಳ ಕೊಟ್ಟ ಬದಕಿಸಿದರ, ಗಬ್ಬ ನಾತ ಹೊಡೂತ್ತೈತೆಲ್ಲs?" ಎಂದು ಕೇಳಿ ಅವ ನನ್ನು ಜಬರಿಸಿದರು.

"ಇಲ್ಲ ಯಪ್ಪಾ, ಬೇಕಾರ ಬಂದ ನೀನs ನೋಡು." ಎಂದು ಚನ್ನ ಅವರ ಮಾತು ತನಗೇನೂ ಅರ್ಥವಾಗಿಲ್ಲವೆಂಬಂತೆ ಹೇಳಿದ. ಹುಚ್ಚುನಗೆ ಬೀರಿ ಜೋಳ ವನ್ನು ಧೋತರದಲ್ಲಿ ತುಂಬಿಕೊಂಡು ನಡೆದ.

ಅವನು ನೇರವಾಗಿ ಅಲ್ಲಿಂದ ಗೌಡರ ಮನೆಗೆ ಬಂದು ಗೌಡರ ಎಮ್ಮೆಗೆ ಆ ಕಾಳು ಉಪಯೋಗ ಬಿದ್ದರೆ ಬೀಳಲೆಂದು, ಅದನ್ನು ತಿರುಗಿ ಕೊಡದೆ ತಂದೆನೆಂದು ಹೇಳಿ, ಗೌಡರಿಂದ ಕಾಳು ಪಡೆದು, ಹೊರಡಲನುವಾದನು. ಆಗ ಗೌಡರಿಗೆ ಮಠ ದಲ್ಲಿ ನಡೆದ ಸಂಗತಿಯನ್ನೆಲ್ಲ ಒಂದಕ್ಷರವೂ ತಪ್ಪದಂತೆ ಹೇಳಲು ಮರೆಯಲಿಲ್ಲ.

ಗೌಡರಿಗೆ ತಮ್ಮ ಲೋಕಪ್ರಿಯತೆಯ ಬಗ್ಗೆ ತಮಗೇ ಅಭಿಮಾನವೆನಿಸಿತು. ತಾವು ಕೊಟ್ಟ ಜೋಳದ ನೆವದಿಂದ ಮಾದಿಗರ ಕೇರಿಯನ್ನೇ ತಮ್ಮ ಪಕ್ಷಕ್ಕೆ ಒಲಿಸಿಕೊಳ್ಳುವ ಲವಲವಿಕೆ ಹೆಚ್ಚಿತು. ಮೇಲಾಗಿ ಪಡದಪ್ಪನ ವಿರುದ್ಧ ಅಪ

ಪ್ರಚಾರ ನಡೆಸಲು ಇದು ಅನುಕೂಲ ವೇಳೆಯೆನಿಸಿತು. ಆದ್ದರಿಂದ ಚನ್ನನಿಗೆ
'ನೋಡೋಣಲೇ, ಆ ಅಪನೋರ ಎದರು ನಿಲ್ಲಾಕ ಎದಿ ಇದ್ದವರು ಹೊರಗೆ
ಬರಲಿ " ಎಂದು ಹೇಳಿಕಳಿಸಿದರು.

ಅಂದು ಹೊತ್ತು ಮುಳುಗುತ್ತಲೇ ಹೊಲೆಯರಲ್ಲಿ ಕೆಲವರು ಚಾವಡಿಗೆ
ಬಂದು, ತಾವು ವಾಡೆಯ ಜೋಳ ಒಯ್ದದ್ದು ತಪ್ಪಾಯಿತೆಂದು ಗೌಡರಿಗೆ ಹೇಳಿ
ಕೊಂಡರು. ಅವರೆಲ್ಲ ಪಡದಯ್ಯನವರಲ್ಲಿ ಶ್ರದ್ಧೆಯಿಟ್ಟುಕೊಂಡವರು. ಆದ್ದರಿಂದ
ಗೌಡರು ಅವರಿಗೆ ಏನನ್ನೂ ಹೇಳದೆ " ನಾ ಕೊಟ್ಟರೂ ಅಟs, ಬಾಪೂಸಾಬರು
ಕೊಟ್ಟರೂ ಅಟs. ಒಟ್ಟ ನಿಮಗ ಕಾಳ ಸಿಕ್ಕರಾತು. " ಎಂದು ಸಮಾಧಾನ
ಮಾಡಿ ಕಳಿಸಿದರು.

ಚಾವಡಿಯಿಂದ ಗೌಡರು ತಿರುಗಿ ಮನೆಗೆ ಬಂದಾಗ ಅಲ್ಲಿ ಅವರ ಅನು
ಯಾಯಿಗಳಲ್ಲಿಯೇ ನಂಬಿಗಸ್ತನಾದ ಓಲೇಕಾರ ಮಲ್ಲಪ್ಪ ದಾರಿ ಕಾಯುತ್ತ
ಕುಳಿತುಕೊಂಡಿದ್ದನು. ಗೌಡರನ್ನು ಕಾಣುತ್ತಲೇ ವಿನಯದಿಂದ ಎದ್ದು ಗೌಡರಿಗೆ
ಮುಜುರೆ ಮಾಡಿದ. ಗೌಡರು ಮುಗುಳುನಗೆಯಿಂದಲೇ ಅದನ್ನು ಸ್ವೀಕರಿಸಿದರು.
" ಯಾಕಪಾ ಮಲ್ಲಪ್ಪ, ಮತ್ತೇನು ಹೊಸಾ ಸುದ್ದಿ ತಂದೀ ?" ಎಂದು ಕೇಳಿದರು.

ಓಲೇಕಾರ ಮಲ್ಲಪ್ಪನು ಗೌಡರ ಸ್ವಂತ ಬೇಹುಗಾರ. ವಿಶೇಷ ಸುದ್ದಿ
ಯಿಲ್ಲದೆ ಅವನು ಮನೆಗೆ ಬರುತ್ತಿರಲಿಲ್ಲವೆಂಬುದು ಗೊತ್ತಿದ್ದೇ ಗೌಡರು ಈಪ್ರಶ್ನೆ
ಕೇಳಿದರು. ಮಲ್ಲಪ್ಪ ಮುಂದೆ ಬಂದು ತಾನು ತಯಾರಿಸಿದ ಎಕ್ಕೆ ಎಲೆಯ ಬತ್ತಿ
ಯನ್ನು ಗೌಡರ ಕೈಗಿತ್ತು, ಅದರ ಮೇಲೆ ಕಟ್ಟಿಯ ಕೆಳಗಿದ್ದ ಮಾಡದಲ್ಲಿಯ
ಕುಳ್ಳಿನ ಬೆಂಕಿಯನ್ನು ತಂದಿಡುತ್ತ "ಅಮಲದಾರಸಾಹೇಬರು ಊರಿಗೆ ಬರತಾ-
ರಂತಲ್ಲರೀ? ನಿಮಗೇನಾರ ಕಾಗದ ಬರದ ಬಂದೈತೇನರೀ ಯಪ್ಪಾ?" ಎಂದು ಮೆಲ್ಲ
ಗಿನ ದನಿಯಲ್ಲಿ ಕೇಳಿದ. ಮಲ್ಲಪ್ಪ ಊರ ತುಂಬ ತನ್ನ ಗೂಢಚಾರ-ಪಡೆಯ
ಜನರ ಕಡೆಯಿಂದ ಸುದ್ದಿಯನ್ನು ಸಂಗ್ರಹಿಸುತ್ತಿದ್ದ. ಅವನ ಮಾತಿನಲ್ಲಿ ಸತ್ಯಾಂಶ
ಇರಲೇಬೇಕೆಂದು ಗೌಡರಿಗೆ ಆಗಲೇ ವಿಶ್ವಾಸ ಹುಟ್ಟಿತ್ತು.

"ಯಾರು ಹೇಳಿದರು ? ಯಾರು ಬರತಾರಂತಲೇ?" ಎನ್ನುತ್ತ ಗೌಡರು ಬತ್ತಿ
ಯಲ್ಲಿಯ ತಂಬಾಕದ ಹೊಗೆಯನ್ನು ಜಗ್ಗಿ ಬಿಡುತ್ತ ಪ್ರಶ್ನೆ ಮಾಡಿದರು.

ಮಲ್ಲಪ್ಪ ತನಗೆ ಸಿಕ್ಕ ಸಮಾಚಾರವನ್ನು ಸಂದರ್ಭದೊಂದಿಗೆ ವಿವರಿಸಿದನು:
"ಯಪ್ಪಾ, ಸೂರ್ಯಾ ತಾಯಿ ಹೊಟ್ಟ್ಯಾಗ ಹೋಗಾಕ ಇನ್ನೂ ಒಂದು

ಕೈಮೂರ ಹೊತ್ತ ಇದ್ದೀತರೀ. ನಾ ಮಟದ ಮುಂದ ಹಾದು ಚಾವಡಿಗೆ ಬರ ಬೇಕಂತಣ ಹೊಂಟಿದ್ನಿರೀ.ಮಾದರ ಚನ್ನ್ಯಾ ದೋತರದಾಗ ಜ್ವಾಳಾ ಕಟ್ಟಿಗೊಂಡು ಇದರಿಗೇ ಬಂದನರಿ. ಇವಗೆಲ್ಲೆ ಈಟ ಜ್ವಾಳ ಸಿಕ್ಕಿದ್ದಾವು ಅನಕೊಂತ ನಾನೂ ಅಲ್ಲೇ ನಿಂತಿದ್ದಿನರಿ. ಮಟದಾಗಿಂದ ಆ ಗಿಡ್ಡ ಶಂಕರ್ಯಾ ಹೊರಬಿದ್ದ ಬಂದವನಽ 'ಲೇ ಚನ್ನ್ಯಾ, ಕಡೀಕೆ ನಿಮ್ಮ ಜಾತೀ ರಿವಾಜ ನೀ ಬಿಡಲಿಲ್ಲ' ಅಂತ ಬೈಯಾಕಽ ಸುರುಮಾಡಿದನರಿ. ಇದೇನ ಈ ಗಿಡ್ಡ ಶಂಕರ್ಯಾನ ಯಮಕು, ಅಂತ ಎಡ್ಡು ಹೆಜ್ಜಿ ಮುಂದ ಹೋದೆನರಿ. ಶಂಕರ್ಯಾ ಅವನ ಹೆಗಲ ಮ್ಯಾಗಿನ ಜ್ವಾಳದ ಗಂಟ ಕಸಗೊಂಡ ಮಟಾ ಸೇರಿದನ್ರಿ. ಚನ್ನ್ಯಾ ಅವನ ಹಿಂದಿಂದ ಮಟದಾಗ ಹೊಕ್ಕನರಿ. ಪಡದಪ್ಪನವರು ಅನೂದೇನು ಕಸರ ಉಳಸಲಿಲ್ಲ ಬಿಡರಿ. ನನಗೂ ಕೇಳೂ ಮಟಾ ಒದರಿ ಮಾತಾಡಾಕ ಹತ್ತಿದರರಿ. 'ಲೇ ಚನ್ನ್ಯಾ, ಸತ್ತ ನಾನಾನ ದೆವ್ವ ಗೌಡರಿಗೆ ಜೇಲಿನ ರೊಟ್ಟೇ ತಿನಸೂ ಮುಂದ, ಅವರ ಸಂಗಾಟ ಕೂತು ನೀನೂ ರೊಟ್ಟಿ ತಿಂದೀಯಂತ' ಅಂದು ಆ ಒಡವನ ಜ್ವಾಳಾ ಕಸಗೊಂಡು ಹೊರಗ ದಬ್ಬಿದರರಿ. ಪಡದಯ್ಯನೋರು ದಾದಾನ ಪ್ಯಾಗ ಅರ್ಜಿ ಬರಿಸಿ ಅಮಲದಾರರ ಕಡೆ ಆಳ ಕಳಿಸ್ಯಾರಂತರಿ. ಅವರು ಬರೋವರದಾರಂತ ಮಾತು ಹೊಂಟೆತ್ತರಿ." ಎಂದು ಹೇಳಿ ಮಲ್ಲಪ್ಪ ಮಾತು ಮುಗಿಸಿದ.

ನಿಧಾನವಾಗಿ ತಂಬಾಕದ ಹೊಗೆ ಬಿಡುತ್ತ ಕುಳಿತ ಗೌಡರ ಮುಖದಲ್ಲಿ ಯಾವ ಬದಲಾವಣೆಯೂ ಆಗಲಿಲ್ಲ. ಸುಮ್ಮನೆ ಸುದ್ದಿಯನ್ನು ಕೇಳುತ್ತ ಯಾವುದೋ ವಿಚಾರವನ್ನು ಮೆಲುಕು ಹಾಕುತ್ತಿದ್ದರು. ಇದರಿಂದ ತಾನು ತಂದ ಸುದ್ದಿ ಅಷ್ಟು ಮಹತ್ವದ್ದಿರಲಿಕ್ಕಿಲ್ಲವೆಂದು ಮಲ್ಲಪ್ಪ ನಿಗನಿಸಿತು. ಅದಕ್ಕೆ ನಿರಾಶೆಯೂ ಆಯಿತು. ಅದನ್ನು ಮರೆಮಾಚಲು "ಗೌಡರಽ, ಮತ್ತ ಅಮಲದಾರಸಾಬರು ಬಂದರ ಸರಬರಾಯಿ ಎವಸ್ತಾ ಮಾಡಾಕಬೇಕಾದೀತಲ್ಲರಿ ?" ಎಂದು ಗೌಡರ ಆಜ್ಞೆಗಾಗಿ ಕಾದು ನಿಂತಿರುವದನ್ನು ಸೂಚಿಸಿದನು.

"ಪಡದಯ್ಯನ ಮಾತಿನ್ಹಂಗ ನಡಿಯಾಕ ಅವ ಏನು ಕಣೀ ಹೇಳತಾ ನೇನೋ ಮಲ್ಲಪ್ಪಾ ? ಅದು ಬರೇ ಜೆದರಿಕಿ. ಆ ಮಾತು ನಂಬಾಣಿಲ್ಲ ತಗಿ. ಆದರೂ ನಾಕು ಕೋಳಿ, ಒಂದು ಕುರಿ ನೋಡಿಟ್ಟಿರು. ಅಮಲದಾರರು ಬಂದರ ಪಟ್ಟನಽ ಹಿಡಕೊಂಡು ಬರಾಕ ಆಗತೇತಿ" ಎಂದು ಹೇಳಿ "ಆ ಮಾದರ ಚನ್ನ್ಯಾನ್ನ ಹಿಡಿಕೊಂಡು ಬಾ." ಎಂದು ಆಜ್ಞಾಪಿಸಿದರು.

ರಾತ್ರಿ ಊಟ ಮುಗಿಸಿ ಗೌಡರು ಮಾದಿಗರ ಚನ್ನನಿಗಾಗಿ ಕಾದು ಕಾದು ಬೇಸತ್ತರು. ಅವನ ಮುಖದಿಂದ ಮಠದಲ್ಲಿ ನಡೆದ ಮಾತುಕತೆಯ ವಿವರಗಳನ್ನು ಅವರು ಕೇಳಬೇಕಾಗಿತ್ತು. ಬತ್ತಿಗಳನ್ನು ಒಂದರ ಮೇಲೊಂದರಂತೆ ಸುಡುತ್ತ ವಿಚಾರಮಾಡಹತ್ತಿದರು. ಅಷ್ಟರಲ್ಲಿ ಚನ್ನ ಬಂದ. ಗೌಡರು ಅವನೊಡನೆ ಧಾಬೆಯ ಕಡೆಗೆ ಹೊರಟು ಹೋಗಿ ಏಕಾಂತದಲ್ಲಿ ಎಲ್ಲವನ್ನೂ ಕೇಳಿಕೊಳ್ಳುವವ ರಿದ್ದರು. ಆದರೆ ಧಾಬೆಯಲ್ಲಿ ಅದೇ ಕಾಲಕ್ಕೆ ಗೌಡರ ಎಮ್ಮೆಯ ಪ್ರಸೂತಿ ಸಮಯ ಒದಗಿಬಂದದ್ದರಿಂದ, ಅಲ್ಲಿ ಆಳು-ಹೋಳುಗಳ ಗೊಂದಲವೇ ನಡೆದಿತ್ತು. ಗೌಡರು, ಎಮ್ಮೆ ಸುಸೂತ್ರವಾಗಿ ಈಯುವದನ್ನು ನೋಡುವದಕ್ಕೆ ಬಂದವರಂತೆ ಬಂದು, ಎಮ್ಮೆಯನ್ನು ನೋಡಿಕೊಂಡು, ಮುರುವು ಇಡಲಿಕ್ಕೆ ಆಳುಗಳಿಗೆ ಹೇಳಿ, ಮರಳಿ ಪಡಸಾಲೆಗೆ ಬಂದು ಡಿಂಬಿಗೊರಗಿ ಕುಳಿತುಕೊಂಡರು.

ಚನ್ನ ಅವರ ಹಿಂದಿನಿಂದ ಧಾಬೆಯ ವರೆಗೆ ಹೋಗಿ ಬಂದು, ಈಗ ಅವರ ಸಮ್ಮುಖದಲ್ಲಿ ನಿಂತುಕೊಂಡಿದ್ದನು. ಗೌಡರು ಅವನನ್ನುದ್ದೇಶಿಸಿ "ಮತ್ತೇನಲೇ ಚನ್ನ್ಯಾ? ನೋಡಿದಿಲ್ಲೋ ನೀ ಕೊಟ್ಟ ಜ್ವಾಳಾ ಎಮ್ಮಿ ಸೈತ ಮೂಸಿ ನೋಡ ವಲ್ಲಾದೈತಿ." ಎಂದು ನುಡಿದು ತಮ್ಮ ಚೇಷ್ಟೆಗೆ ತಾವೇ ನಕ್ಕರು.

"ಯಪ್ಪಾ, ಬಡವರ ನಶೀಬನ್ನ ಕೆಟ್ಟದರೀ ಯಪ್ಪಾ; ಕರೇ ಹೇಳಿದರೂ ಕೇಳತೀರಿ, ಸುಳ್ಳ ಹೇಳಿದರೂ ಕೇಳತೀರಿ; ಯಪ್ಪಾ ನೀವು ಕೊಟ್ಟ ಜ್ವಾಳಾ ಗಾಳ್ಯಾಗ ಬಂತು, ಧೂಳ್ಯಾಗ ಹೋತು, ಹಾಗ ಆತರಿ" ಎಂದು ಕಣ್ಣೀರೊರೆಸಿ ಕೊಂಡ ಚನ್ನ.

"ಆದದ್ದೇನ ಹೇಳಬಾರದs? ಹೆಣ್ಣರಂಡೀ ಹಾಗ ಮುಳುಮುಳು ಅತ ಗೊಂತ ನಿಂತರ ಏನ ಮಾಡಿದ್ಹಾಂಗಾತಲೇ ಪ್ಯಾಲಿ? ಗೌಡ ಇದ್ದೂ ಮಟಾ ನೀವ್ಯಾಕ ಹೆದರತೀರಿ? ಹೇಳಬಾರದs ಗಡಾಗಡಾ?" ಗೌಡರು ಒಂದೇ ಮಾತಿನಲ್ಲಿ ತಿರಸ್ಕಾರ, ದ್ವೇಷ, ಅಭಿಮಾನ, ಅಭಯ, ಕಾತರ ಮೊದಲಾದ ಭಾವಪರಂಪರೆಯನ್ನೆ ವ್ಯಕ್ತಪಡಿಸಿದರು. ಈ ಆತುರದಿಂದ ಅವರ ಕಾರ್ಯಾಸಕ್ತಿ ಒಮ್ಮೆಲೇ ಜಾಗೃತ ವಾಗಿತ್ತು.

"ಏನ ಹೇಳೂದೈತಿ ಯಪ್ಪಾ? ಬಡವನ ಹೊಟ್ಟಿ ತುಂಬಲಿ ಅಂತ ಜ್ವಾಳಾ ಕೊಟ್ಟದ್ದಿಲ್ಲ ಯಪ್ಪಾ, ಮಟದ ಮುಂದ ಹೋಗುವಾಗ, ದಾರ್‍ಯಾಗs ಬಡದು ಕಸ ಗೊಂಡು ಬಿಟ್ಟರಲ್ಲರಿ. ಊರಾಗs ದಾರೀ ಬಡೂದು ಸುರು ಆದ್ಹಾಂಗ ಆತಲ್ಲರಿ!"

ಚನ್ನನ ಹೇಳಿಕೆ ಧ್ವನಿಪೂರ್ಣವಾಗಿತ್ತು.

" ಈಗ ಕರೆಸಿದ ವ್ಯಾಗ, ಅತಗೊಂತ ಈ ಮಾತ ಹೇಳಾಕ ಸವಡು ಆತೇನ ಮಗನs? ಆಗs ಬಂದು ಹೀಗಿನ ಮಾತ ಹೀಗs ಅಂತ ಹೇಳಾಕ ನಾಲಿಗ್ಗೇನ ಮುಳ್ಳ ಮುರದಿತ್ತs?" ಎಂದು ಗೌಡರು ಸಿಟ್ಟನಿಂದ ಗದ್ದರಿಸಿದರು.

ಚನ್ನ ಅವರ ಕಾಲಿಗೆ ಬಿದ್ದ. "ಯಪ್ಪಾ, ಮಗನ ಬುದ್ಧಿ ಹಳ್ಳಾ ಹಿಡದು ಹೋಗಿತ್ರೆಪ್ಪಾ. ಈ ಮಾತು ಹೊಟ್ಟ್ಯಾಗ ಹಕ್ಕೊಣ್ಣಾಕsಬೇಕು. ಪಡದಪ್ಪನೋರು 'ಅಮಲದಾರರು ಬರತಾರು, ನಿಮಗೆಲ್ಲ ಬೇಡಿ ಹಾಕಿಸೇನು' ಅಂತ ಹೆದರಿಸಿದರರಿ. ಅದಕs ಅಂಜಿ, ಹಲ್ಲಾಗ ನಾಲಗಿ ಇಟಗೊಂಡು ಹಾದೀ ಹಿಡಿದಿನೆರಿ. ಎಂತಾ ಜನರ್ನ ತಂದ ಇಟ್ಟಿ ಶಿವನs ಅಂದು, ದ್ಯಾನಾ ಮಾಡಿಕೊಂತs, ಕೋರಿ-ಮುಸುಕು ಹಕ್ಕೊಂಡು ದಿಕ್ಕ ಸಮ್ಮಸದ ಕುಂತುಬಿಟ್ಟಿ" ಎಂದು ಕರುಣ ಪೂರ್ಣವಾಗಿ ಬಿನ್ನವಿಸಿಕೊಂಡ.

"ಅಲ್ಲಲೇ ಚನ್ನ್ಯಾ, ಇಷ್ಟು ಅಂಜಾಕ ಆ ಪಡದಪ್ಪ ಅಂದದ್ದರs ಏನು ಅsಟ ಹೇಳಬಾರದs?" ಗೌಡರು ಕುತೂಹಲ ತಡೆಯದಾಗಿ ಕೇಳಿದರು.

"ಯಪ್ಪಾ, ಕರೇ ಹೇಳಿದರೂ ಕೇಳತೀ, ಸುಳ್ಳ ಹೇಳಿದರೂ ಕೇಳತೀ, ನಾಳೆ ಬೆಳಗಾಗೂದರಾಗ ಅಮಲದಾರ ಬರಾಣಾ, ಊರಾಗ ಕಾಣಬರೂ ಮಂದೀ ಕೈಯಾಗೆಲ್ಲ ಸಾಲಬೇಡಿ ಹಾಕಿಸಿಬಿಡತಾರಂತೂ ಅಂದರರಿ. ಈ ಮ್ಮಾತ ನಿಮ್ಮ ಮುಂದ ಹೇಳಿದರ 'ನಿನ್ನ ಕೈಗೂ ಬೇಡಿ ಬಿದ್ದಾವಂತ ತಿಳಿ ಮಗನs' ಅಂತೂ ಅಂದರರಿ." ಎಂದು ಹೇಳಿದವನೇ ಚನ್ನ ನೆಲಕ್ಕೇ ಕುಳಿತ.

"ಅಂವಾ ಅಂದ ಮಾತ ಕರೇ ಆಗಾಕ ಅಂವಾ ಏನು ದೇವರಂತ ತಿಳದೀ ರೇನಲೇ? ಹೊತ್ತು ಹೋಗದ್ದಕ್ಕ ಬೊಗಳತಾನ; ಸಾಲಬೇಡಿ ಹಾಕಸತೇನಿ ಅನ್ನಾಕ ನಾವೆಲ್ಲ ಕೈಯಾಗ ಬಳೀ ಇಟ್ಟೇವೇನಲೆ, ನೀವು ಹೆದರಾಕ? ಅವ ಏನು ಅಮಲದಾರಾ ಅಂತ ಹೆದರಿ ಜ್ವಾಳಾ ಕೊಟ್ಟು ಮನಿಗೆ ಹೋದ್ಯೋ ಪ್ಯಾಲಿ?" ಎಂದು ಸಮಾಧಾನ ಹೇಳಿದರು. "ಅಮಲದಾರರು ಬಂದ ಯಾಳೇ ಬಂದರೂ ಹೆದರಬ್ಯಾಡ. ಕಡಾ ತಂದ ಕಾಳು ಮಟದವರು ಕಸಗೊಂಡ್ರು ಅಂತ ಅಮಲ ದಾರರ ಮುಂದ ಅಡ್ಡಬಿದ್ದ ಹೇಳಿಕೋ. ಮುಂದಿನದೆಲ್ಲ ನೋಡಿಕೊಂತೀನಿ. ಈಗ ಮನ್ಯಾಗ ಕಾಳ ಅದಾವಿಲ್ಲೋ? ಇಲದಿರಕ ಮನ್ಯಾಗ ಹೇಳಿ ನಾಲ್ಕು ಸೇರು ಒಯ್ಯಿ" ಎಂದು ಚನ್ನನಿಗೆ ಆಶ್ವಾಸನವಿತ್ತರು.

• ಅಮಲದಾರರು ಬಸನವಕ್ಕೆ ಪಡದಪ್ಪ ಕೊಟ್ಟ ಅರ್ಜಿಯ ವಿಷಯವನ್ನು ಮುಖ್ಯವಾಗಿ ತಿಳಿದುಕೊಳ್ಳಬೇಕಾಗಿತ್ತು. ಅದನ್ನೇ ಚನ್ನ ತನ್ನ ರಸಾವೇಶದಲ್ಲಿ ಮುಳುಗಿಸಿಬಿಟ್ಟಿದ್ದ. ಅದನ್ನು ಹೊರಗೆಡವಲು ಅವನನ್ನು ರಮಿಸಬೇಕಾಗಿತ್ತಲ್ಲ. ಆದ್ದರಿಂದ "ಊಟಾ ಮಾಡಿಲ್ಲ ಕಾಣತೈತಲೇ ಚನ್ನ್ಯಾ? ಎರಡು ರೊಟ್ಟಿ ಹಾಕಸತೈತಿ. ಆಚ್ಯಾಕ ಕೂತು ತಿನ್ನು." ಎಂದು ಆಳಿಗೆ, ಚನ್ನನಿಗೆ ರೊಟ್ಟಿ ತಂದು ಕೊಡಲು ಹೇಳಿದರು.

ಚನ್ನ ರೊಟ್ಟಿ ತಿಂದು, ನೀರು ಹಾಕಿಸಿಗೊಂಡು ಕುಡಿದನಂತರ, ಗೌಡರು ಚನ್ನನಿಂದ ಮುಖ್ಯ ವಿಷಯವನ್ನು ಹೊರಡಿಸಲು "ಅಮಲದಾರರು ನಾಳೇ ಬರೋವರದಾಂಕ ಪಡದಯ್ಯನಾರs ಹೇಳಿದರೇನಲೇ ಚನ್ನ್ಯಾ?" ಎಂದು ಕೇಳಿದರು.

"ನಾಳೆ ಯಾಕರೀ ಯಪ್ಪಾ, ಇಂದ ರಾತರ್ಯಾಗs ಬರತಾರಂತರಿ" ಚನ್ನ ಹೇಳಿದ.

"ಅದೇನೋ ಅವರಿಗೆ ಟಪಾಲs ಬಂದ್ಹಾಗ ಹೇಳತೀಯಲ್ಲಲೇ?"

"ಟಪಾಲಿಂದೇನು ಮಾಡತೀರಿ ತಗೀರಿ. ನಿನ್ನೆ ಆ ಗಿಡ್ಡ ಶಂಕರೆಪ್ಪದಾನಲ್ಲರೀ ಅಂವನ್ನ ಕುದರಿಮ್ಯಾಗ ಅಮಲದಾರರ ಕಡೆ ಕಳಿಸಿದ್ದರಂತರೀ. ಶಂಕರೆಪ್ಪನs ಈ ಸುದ್ದಿ ತಂದಾನಂತ ಮಟದಾಗ ಜನಾ ಹೇಳತಿತ್ತರಿ."

"ಊರಾಗ ಕಾಣಬರೂ ಮಂದಿಗೆಲ್ಲಾ ಸಾಲಬೇಡಿ ಹಾಕಲಾಕ ಊರಾಗ ಆಗೇತಂತರೆ ಏನಲೆ?" ಗೌಡರು ಎಳೆ ಜಗ್ಗಿದರು.

"ಅದೆಲ್ಲ ನಮ್ಮಂತಾ ಜನಕ್ಕ ಹ್ಯಾಗ ಗೊಂತಾದೀತರಿ ಯಪ್ಪಾ? ಊರ ಆಳೂ ಧೊರೀ ನಿಮಗs ಗೊಂದಲ ಬೀಳತೇತಿ, ಅಂದಮ್ಯಾಗ ನಮ್ಮ ಪಾಡೇನರಿ? ಅದೇನೋ ಸತ್ತ ನಾನಾಸಾಬನ ದೆವ್ವ ಎದ್ದುಕುಂತೈತೆಂತ. ಪಡಪ್ಪನೋದು ಆಡಿದ ಮಾತು ಯಪ್ಪಾ. ಏಟ ಕದ್ದೋ, ಏಟ ಸುಳ್ಳೋ ಶಿವಗs ಗೊತ್ತರಿ" ಎಂದು ಚನ್ನ ಸುದ್ದಿಯ ಹೊಣೆಯನ್ನೆಲ್ಲ ಶಿವನ ಮೇಲೆ ಹೊರಿಸಿ ತಣ್ಣಗಾದ.

"ಅವನ ದೆವ್ವ ಮಟಕ್ಕ ಬಡಕೊಂಡsತಿ. ಮೊನ್ನಿನ ದಿನ ಜೀವಾ ಉಳಿಸಿಕೊಂಡದ್ದಕ್ಕ ಇಷ್ಟ ಉದ್ದ ನೀರಿಗೆ ಇಳದನ್ನಲ್ಲs ಪಡಪ್ಪ?" ಎಂದು ಗೌಡರು ತಮ್ಮೊಳಗೆ ತಾವೆ ಒಟಗುಟ್ಟಿದರು.

ಈ ಅರ್ಥ ಚನ್ನನಿಗಾಯಿತೋ ಇಲ್ಲೋ ದೇವರೇ ಬಲ್ಲ. ಕುಳಿತಲ್ಲಿಯೇ ಒಮ್ಮೆ

ಆಕಳಿಸಿ ಚಿಟಿಕೆ ಮುರಿದು "ಬಂದ ಕೆಲಸ ಆದ್ಹಾಂಗಾತಲ್ಲರಿ; ಹೊಕ್ಕೀನಿ ಇನ್ನ ನಾ. ಶರಣರಿ ಯಪ್ಪಾ"ಎನ್ನುತ್ತ ಮುಜರೆ ಮಾಡಿ ಹೊರಟ.ಗೌಡರ ಆಳು ಅವನ ಧೋತರದಲ್ಲಿ ನಾಲ್ಕು ಸೇರು ಜೋಳ ತಂದು ಹಾಕಿದ.

"ಚನ್ನ್ಯಾ, ನಾಳೆ ಅಮಲದಾರರು ಬಂದಾಗ, ನಿನ್ನ ಬೆದರಿಸಿ ಜ್ವಾಳಾ ಕಸಗೊಂಡದ್ದನ್ನು ಹೇಳಬೇಕಲೇ ಮತ್ತ." ಎಂದು ಗೌಡರು ಆಜ್ಞಾಪಿಸಿದರು.

"ಅಂತೂ ಪುಕಟ ಸಿಕ್ಕ ಜ್ವಾಳದ ರಿಣಾ ಇನ್ನೂ ಏನೇನು ಮಾಡಾಕ ಹಚ್ಚತೈತೋ" ಎಂದು ಗುಣಗುಟ್ಟುತ್ತ, ತನ್ನ ತಲೆತುರಿಸಿಕೊಳ್ಳುತ್ತ ಮನೆಯ ದಾರಿ ಹಿಡಿದ.

ಅಂದು ರಾತ್ರಿ ಗೌಡರ ಎಮ್ಮೆ ಕೋಣವನ್ನು ಈಯಿತೆಂದು, ಆಳು ಬಂದು ಗೌಡರಿಗೆ ಅರಿಕೆ ಮಾಡಿಕೊಂಡ. ಯಾಕೋ ಗೌಡರಿಗೆ ಇದನ್ನು ಕೇಳಿ ಅಸಮಾಧಾನವಾಯಿತು. "ಆ ಬೇಬರಸಿಗೆ ಕ್ವಾಣಾ ಈಯೂದು ಚಟಾನಽ ಬಿದ್ದೈತಿ ಕಾಣತೇತಿ" ಎಂದು ಒಟಗುಟ್ಟಿದರು. ಆದರೆ ಈ ಚಿಂತೆಯನ್ನೂ ಮರೆಸಬಲ್ಲ ನೂರಾರು ಚಿಂತೆಗಳು ಗೌಡರ ತಲೆಯಲ್ಲಿ ಗೊಂದಲ ನಡೆಸಿದ್ದವು. ಆಗಲೇ ರಾತ್ರಿಯ ಹತ್ತು ಗಂಟೆಯಾಗಿತ್ತು. ಆದರೂ ಆಳೊಂದನ್ನು ಕರೆದುಕೊಂಡು ವಿಚಾರವಿನಿಮಯಕ್ಕಾಗಿ ಬಾಳಾಚಾರ್ಯರ ಮನೆಗೆ ನಡೆದರು.

ಅಪರಾತ್ರಿಯಲ್ಲಿ ಗೌಡರು ಬಂದುದಕ್ಕೆ ವಿಶೇಷ ಕಾರಣವಿರಲೇಬೇಕೆಂಬುದು ಬಾಳಾಚಾರ್ಯರ ಧೂರ್ತಬುದ್ಧಿಗೆ, ಗೌಡರು ತಲೆಯ ಮೇಲೆ ಪಾವುಡ ಧರಿಸದೆ ಅವಸರದಿಂದ ಬಂದಾಗಲೆ ಹೊಳೆದುಹೋಗಿತ್ತು. ಗೌಡರು ಬಂದ ಕೂಡಲೆ ಪಡದಯ್ಯನು ಬೀಸಿದ ಜಾಲದ ಬಗ್ಗೆ ತಮಗೆ ಗೊತ್ತಿದ್ದಷ್ಟನ್ನು ವಿವರಿಸಿ "ಅಮಲದಾರರು ಬರೋವರದಾರಂತ ನಾ ಏನು ಹೆದರಿಲ್ಲರೀ. ಆದರ ಹೀಗೆಲ್ಲ ಪುಂಡಾಟ ಮಾಡಿದ್ದಕ್ಕ ಆ ಪಡದಯ್ಯಾಗ ಶಾಸನಾ ಮಾಡಾಕಽಬೇಕಲ್ಲರಿ?" ಎಂದು ತಮ್ಮ ಮನಸ್ಸಿನಲ್ಲಿದ್ದ ವ್ಯಥೆಯ ವಿಷಯವೊಂದನ್ನು ಪ್ರಸ್ತಾಪಿಸಿದರು.

"ಅಲ್ಲ ಗೌಡರ, ಇಷ್ಟೆಲ್ಲ ಅವರಿಬ್ಬರೂ ಕೂಡಿ ಖೊಟ್ಟಿ ಸಾಕ್ಷಿ ಈಗ ಬೇಕಂದರ ಹುಟ್ಟಿಸಲಿಕ್ಕೆ ತಯಾರಾದಾಗ, ನಾನಾನ ಮರಣ ಹೃದಯವಿಕಾರದಿಂದ ಅಂತ ಖಾತ್ರಿ ಹ್ಯಾಂಗ ಮಾಡಿಕೊಡೂದು ?" ಎಂದು ಬಾಳಾಚಾರ್ಯರು ಸಾಶಂಕರಾಗಿಯೇ ಕೇಳಿದರು.

"ಸತ್ತಾವ ಸತ್ತು ಹೋಗ್ಯಾನ ಆಚಾರೆಪ್ಪ. ತನ್ನ ಪಾಲಿನ ದುಡ್ಡು ಸಿಗ

ಬೇಕೂ ಅಂತ, ಅಮಲದಾರ ಇದರ ಪಂಚೇತಿ ಮಾಡಾವ. ಅದರ ಯವಸ್ತಾ ಮುಕ್ಕಟ್ಟ ಮಾಡಿದ್ದು ಶ್ಯಾಣೇತನ ಆತಿಲ್ಲೊ ಆಚಾರೆಪ್ಪ? ಈ ಅಮಲದಾರರ ನೀರ ಗೊತ್ತಿಲ್ಲಽ ನನಗ?" ಗೌಡರು ಧೈರ್ಯದಿಂದ ಸಮರ್ಥನೆ ಮಾಡಿಕೊಂಡರು.

ಗೌಡರಿಗೆ ಆ ಪ್ರಕರಣ ಮತ್ತೊಮ್ಮೆ ಏಳುವದೂ ಬೇಕಾಗಿತ್ತು. ತಾವು ಮಾಡಿದ ಪಂಚನಾಮೆ ಖೊಟ್ಟಿಯಾಗುವದಿದ್ದರೆ, ಅದರ ಜೊತೆಗೆ ಕೊಲೆಯ ಆರೋಪಿಯಾಗಿ ಬಾಪೂಸಾಹೇಬನೂ ಜೇಲು ಕಾಣುವಂತಾಗುತ್ತಿತ್ತು. ಅಂತೆಯೇ ಪಡಪ್ಪ ಕೊಟ್ಟ ಅರ್ಜಿ ನಾನಾನ ಪ್ರಕರಣದ ಬಗ್ಗೆ ಇರದೆ ದಾದಾ ತನ್ನಮೇಲೆ ಏರಿ ಬಂದು ದಾಂಡಗಾಯಿ ಮಾಡಿದ ಬಗ್ಗೆ ಇರಬೇಕು ಎಂದು ಅವರಿಗನಿಸಿತ್ತು.

"ಈಗ ಬಂದಿರೂದೆಲ್ಲ ದಾದಾನ ಮ್ಯಾಗ ಇರಬೇಕು. ದಾದಾ ಪಡದಪ್ಪನ ಮ್ಯಾಗ ಏರಿ ಹ್ವಾದಾ, ಅದಕ್ಕ ನಾವೂ ನೀವೂ ನೆರವಾದವರು ಅಂತ ಫಿರ್ಯಾದಿ ಕೊಟ್ಟಿರಬೇಕು." ಎಂದು ಗೌಡರು ವಸ್ತುಸ್ಥಿತಿಯನ್ನು ವಿವರಿಸಿದರು.

"ಪಡಪ್ಪ ದಾದಾನ ಮ್ಯಾಲೆ ಫಿರ್ಯಾದೀನಽ ಮಾಡಿದ್ದರ ಅವನ್ನ ಉಳಸ ಲಿಕ್ಕೆ ದಾರಿ ಏನೂ ಇಲ್ಲೇನು ಗೌಡರಽ?" ಬಾಳಾಚಾರ್ಯರು ಕೇಳಿದರು.

"ದಾದಾ ಅಮಲದಾರರ ಕಣ್ಣಿಗೆ ಬಿದ್ದಿರಬಾರದು ನೋಡಿರಿ. ಅವಾ ಊರ ಬಿಟ್ಟು ಹೋಗೂದಽ ನೆಟ್ಟಗ. ಆ ಲಕ್ಷ್ಮಣನ ಕರೆಸಿ, ದಾದಾನ್ನ ದನಾಕರಾ ನೋಡಿಕೊಣ್ಣಾಕ ಅಂತ ಊರಿಗೆ ಕಳಿಸಿಬಿಡು ಅಂತ ಹೇಳಿದರಾತು" ಗೌಡರು ಸಲಹೆಯಿತ್ತರು.

ಕೊನೆಗೆ ದಾದಾನನ್ನು ಊರು ಬಿಟ್ಟು ಕಳಿಸುವದೇ ವಿಹಿತವೆಂದು ಇಬ್ಬರೂ ಕೂಡಿ ನಿರ್ಣಯಿಸಿದ ಮೇಲೆ ಗೌಡರು ಮನೆಗೆ ಹೊರಟರು. ಅವರು ಮನೆ ಮುಟ್ಟುತ್ತಲೇ, ಮಲ್ಲಪ್ಪ ಅವರಿಗಾಗಿ ಕಾಯುತ್ತಿದ್ದ. ಅಮಲದಾರರು ಊರಿಗೆ ಬಂದಿರುವರೆಂದು ಗೌಡರಿಗೆ ವರದಿ ಮಾಡಿದ. ಗೌಡರ ಕರ್ತವ್ಯಪ್ರಜ್ಞೆ ಒಮ್ಮೆಲೆ ಜಾಗೃತವಾಯಿತು. ಗೌಡರು ಪಾವುಡವನ್ನು ಧರಿಸಿಕೊಂಡು, ಕೈಯಲ್ಲಿ ಒನಕೆಗಿಂತ ಸ್ವಲ್ಪ ತೆಳ್ಳಗಾದ, ಬೆಳ್ಳಿ ಕಟ್ಟಿನ ಬಡಿಗೆಯನ್ನು ಹಿಡಿದುಕೊಂಡು, ಅವಸರದಿಂದ ಚಾವಡಿಗೆ ಧಾವಿಸಿದರು. ಹಾದಳ್ಳಿಯ ಅರಸನಂತೆ ಮೀಸೆ ತಿರುವುತ್ತ ದರ್ಪದಿಂದ ತಿರುಗಾಡುವ ಗೌಡರು, ಈಗ ಚಾವಡಿ ಕಟ್ಟೆಗೆ ಮೊಚ್ಚೆಗಳನ್ನು ಬಿಟ್ಟು, ಬಹು ವಿನಯದಿಂದ ಅಮಲದಾರರನ್ನು ಕಾಣಲು ಬಂದದ್ದು ನೋಡಿ ಮಲ್ಲಪ್ಪನಿಗೆ ಒಳಗೊಳಗೇ ನಗೆ ಕಡಿದಂತಾಯಿತು.

"ಕ್ಯಾ ಬಾತ್ ಪಟೇಲ?" ಚಾವಡಿಯ ಒಳಗಿನಿಂದ ಗುಡುಗು ಕೇಳಿ ಬಂತು. ಸೆರೆ ಕುಡಿದದ್ದರಿಂದ ಉಗ್ರವಾಗಿ ತೇಲುಗಣ್ಣು ಮೇಲುಗಣ್ಣು ಹಾಕುತ್ತ, ಎದೆಯ ವರೆಗೆ ಇಳಿಬಿದ್ದ ಗಡ್ಡದ ಮೇಲೆ ಕೈಯಾಡಿಸುತ್ತ ಅಮಲದಾರ ಫಕರುದ್ದೀನಸಾಹೇಬರು ದಪ್ಪ ದನಿಯಲ್ಲಿ ಕೇಳಿದರು. ಗೌಡರಂಥ ಗೌಡರ ದರ್ಪವೂ ಉಡುಗಿಹೋಯಿತು. "ಗಾಂವಮೇ ಗರೀಬಲೋಕ ಜಿಂದಾ ನಹೀ ರಹಸಕತಾ, ಔರ ತುಮ 'ಜುಲುಮ' ಚಲಾತೇಹೋ? ಕಂಹಾ ಹೈ ರಿಪೋರ್ಟ?" ಮದ್ಯದ ಅಮಲಿನಲ್ಲಿ ಅಮಲದಾರರಿಗೆ ಮಾತೃಭಾಷೆಯ ಮೇಲಿನ ಮೋಹ ಉಕ್ಕಿ ಬಂದಿತ್ತು. ಮತ್ತು ದರ್ಪ ನಡೆಸಬೇಕಾದರೆ ಉರ್ದುವಿನಂಥ ಭಾಷೆಯಿಲ್ಲ ಎನ್ನುವದು ಅವರ ದೃಢ ಸಿದ್ಧಾಂತಗಳಲ್ಲೊಂದಾಗಿತ್ತು.

"ಇಲ್ಲ ರಾವಸಾಬ, ಅಂತಾದ್ದೇನು ಗಡಬಡಿ ಆಗಿಲ್ಲ ತಗೋರಿ" ಗೌಡರು ಹಲ್ಲು ಕಿರಿದು ವಿನಯದಿಂದ ಹೇಳುತ್ತಿರುವಾಗಲೇ "ಚುಪ್ ರಹೋಜೀ, ಹಮ್‌ಕು ಸಬ್‌ಕುಛ್ ಮಾಲೂಮ್ ಹೈ" ಎಂದು ಮತ್ತೊಮ್ಮೆ ಗುಡುಗು ಕೇಳಿಬಂತು.

ಪ್ರಸಂಗಾವಧಾನಿ ಮಲ್ಲಪ್ಪನು ಅಷ್ಟರಲ್ಲಿ, ಚಾವಡಿಯಲ್ಲಿ ಗುಡಾರ ಕಟ್ಟಿ, ಸಾಹೇಬರ ಶಯನೋತ್ಸವದ ಏರ್ಪಾಡು ಮಾಡಿದ್ದನು.

"ರಾವಸಾಬ, ದಣದು ಬಂದೀರಿ ಕಾಣತಸತಿ, ಓಟು ದಣವಾರಿಸಿಗೋಬೇಕು. ಬೆಳಗಾದ ಮ್ಯಾಗ ಇಲ್ಲೆ ಬರತೀನು" ಎಂದು ಗೌಡರು ತಡವರಿಸುತ್ತ ಅಸಂಬದ್ಧವಾಗಿಯೇ ಹೇಳಿಕೊಂಡರು.

ಸೆರೆ ಕುಡಿದರೂ ಅಮಲದಾರರಿಗೆ ಎಚ್ಚರ ತಪ್ಪಿರಲಿಲ್ಲ. ಗೌಡರ ಈ ಸುಳ್ಳು ವಿನಯದಿಂದ ಸಿಟ್ಟು ಬಂದು "ಸಬ್ ಮಾಲೂಮ್ ಹೋಗಯಾ ಹೈಜೀ ಪಟೇಲ್" ಎಂದು ಜಬರಿಸಿ "ಆರ್ಡ್ಲೀ, ಓ ಪಟೇಲಕು ಸಬ್ ಬಾತ್ ಸಮಜಾಯಿಷ ಕರೋ" ಎಂದು ಗುಡುಗಿದರು.

ಅಮಲದಾರರ ಸ್ವಾರಿ ಆಗಿನ ಪ್ರಸಂಗಕ್ಕಂತೂ ತೆರೆಯ ಹಿಂದೆ ಸರಿದು ಗಾದಿಯ ಮೇಲೆ ಪವಡಿಸಿತು. ಗೌಡರಿಗೆ ರುದ್ರನಾಟಕದ ಒಂದು ದೃಶ್ಯ ಮುಗಿದಂತಾಯಿತು. ಒಂದು ದೊಡ್ಡ ಕುತ್ತಿನಿಂದ ಪಾರಾದ ಸಮಾಧಾನವೆನಿಸಿತು.

ಆರ್ಡ್ಲೀ (Orderly) ಕೇಶವರಾಯ ಗೌಡರ ಹಳೆಯ ಸ್ನೇಹಿತ. ಕೇಶವರಾಯ ಊಟ-ಉಡಿಗೆ, ವೇಷ-ಭೂಷಣಗಳಲ್ಲೆಲ್ಲ ಮಹಾ ಷೋಕಿ ಸ್ವಭಾವದವನೆಂದು ವಿಖ್ಯಾತಿಯನ್ನು ಪಡೆದಿದ್ದ. ಅವನುಟ್ಟ 'ಜಾನ್ ಸಿಲ್' ಧೋತರ ಯಾವಾ

ಗಲೂ ಶುಭ್ರವಾಗಿರುತ್ತಿತ್ತು; ಕರಿಯ ಅಲ್ಪಾಕನ್ನು ಬಿಟ್ಟರೆ ಬೇರೆ ಕೋಟು ಅವನು ಧರಿಸುತ್ತಿರಲಿಲ್ಲ. ಅವನು ಹಾಕಿಕೊಂಡ ಪುಣೇರಿ ಮೊಚ್ಚೆಯು ಕೆಂಪು ಬಣ್ಣ ಎಂದೂ ಮಾಸಿರುತ್ತಿರಲಿಲ್ಲ. ಈ ಕಾರಣಕ್ಕಾಗಿಯೇ ಅವನ ಪರಿವಾರದವರೆಲ್ಲ ಅವನನ್ನು ' ಬೆಳ್ಳಕ್ಕಿಮರಿ ' ಎಂದೇ ಕರೆಯುತ್ತಿದ್ದರು. ವೇಷದಂತೆಯೇ ಊಟದ ವಿಷಯದಲ್ಲಿಯೂ ಹಾಗೆಯೇ. ಪಾದಳ್ಳಿಯಿಂದ ಬೆಣ್ಣೆ ಬರದೆ ಕೇಶವರಾಯನ ಊಟವಾಗುತ್ತಿರಲಿಲ್ಲ. ಈ ಬೆಣ್ಣೆಯ ಸ್ನಿಗ್ಧತೆಯೇ ಕೇಶವರಾಯನ ವಿಶೇಷ ಕೃಪೆಗೆ ಪಾದ-ಳ್ಳಿಯ ಗೌಡರು ಪಾತ್ರರಾಗುವಂತೆ ಮಾಡಿತ್ತು.

ಕೇಶವರಾಯ ಆ ಹೊತ್ತಿಗೆ ಚಾವಡಿಯ ಕಟ್ಟಿಗೆ ಕುಳಿತುಕೊಂಡು ಎಲೆ ಅಡಿಕೆಯ ಸೇವನೆಯಲ್ಲಿ ತೊಡಗಿದ್ದನು. ಬೈಸಿಕೊಂಡು ತಿರುಗಿ ಬಂದ ಗೌಡರನ್ನು ನೋಡಿ, " ಮತ್ತೇನು ಗೌಡಪ್ಪ, ಎಲ್ಲಾ ನೆಟ್ಟಗss ? ಮನ್ನೆ ನೀ ಕಳಿಸಿದ ಬೆಣ್ಣೆಗೆ ತುಪ್ಪಾನss ಇಳೀಲಿಲ್ಲಲ್ಲೋ ?" ಎಂದು ಕುಶಲಪ್ರಶ್ನೆಯಿಂದ ಮಾತಿಗಾರಂಭಿಸಿದ. ಇಬ್ಬರೂ ಅಮಲದಾರರ ಕಿವಿಯಳತೆಯಿಂದ ದೂರ ಹೋಗಿ ನಿಂತರು.

" ಅಲ್ಲೋ ಗೌಡಪ್ಪ, ಇದss ಧಂಪೇದಾಗss ಮುಪ್ಪಾದಿ. ಇನ್ನೂ ತಿಳೀಲಿಲ್ಲಲ್ಲೋ? ಅಲ್ಲಾ ರಾವಸಾಹೇಬರು ಬಿಳಿಕುದರಿ ಹತ್ತಿದಾಗೇನಪಾ ಭೆಟ್ಟಿಗೆ ಬರೂದು ? ಈಗ ಇಡೀ ಪ್ರಕರಣದ ಮೂಲ ನೀ ಆಗಿ ಕೂತೀದಿ. ಊರಾಗ ಒಂದು ಖೂನಿ ಆದದ್ದು, ಹೃದಯವಿಕಾರದಿಂದ ಸತ್ತದ್ದು ಅಂತ ಪಂಚನಾಮೆ ಮಾಡಿ ಗುನ್ಹೆ ಮುಳಗಿಸೀದಿ ಅಂತ ಮೂಕಿ-ಅರ್ಜಿ ಬಂದದ ನಿನ್ನ ಮ್ಯಾಲೆ. ಮತ್ತ ಆ ಅರ್ಜಿಯೊಳಗ ಏನೇನ ಕಾಣಸ್ಯಾರ ಗೊತ್ತದs ಏನು ? ಈ ಖೂನಿ ಬೇಪತ್ತಾ ಆದದ್ದರಿಂದ ಊರಾಗ ಪುಂಡರು ಹಗಲೂ ಹಾಡೇ ಮನೀ ಹೊಕ್ಕು ಜನರ್ನ ಹೊಡಿಯೂದು ಬಡಿಯೂದು ನಡಸ್ಯದ. ಬಡವರು ಸುಸೂತ್ರ ಬಾಳ್ವೆ ಮಾಡೂದು ದುಸ್ತರ ಆಗೇದ ಅಂತ ಬರದಾರ. " ಕೇಶವರಾಯ ಈ ಮಾತು ಮುಗಿಸಿ, ಇಷ್ಟೊತ್ತು ಕೈಯಲ್ಲಿಯೇ ಹಿಡಿದಿದ್ದ ಚಿಟಿಕೆ ತಂಬಾಕನ್ನು ಬಾಯೊಳಗೆ ಹಾಕಿಕೊಂಡ.

ಗೌಡರು ನಿರ್ವಿಣ್ಣರಾಗಿದ್ದರು; ತಾವೇ ಆರೋಪಿಯಾಗುವ ಪ್ರಸಂಗ ಬಂದಿತಲ್ಲ ಎಂದು ಹಣ್ಣಾಗಿದ್ದರು. ಏನು ಹೇಳಬೇಕೆಂಬುದು ತಿಳಿಯದೆ " ಅದರ ಚೌಕಸಿಗೇ ಈಟ ಸರರಾತ್ರ್ಯಾಗ ಬಂದಾರೇನ್ರಿ ರಾವಸಾಬರು?" ಎಂದರು.

"ಅದೊಂದಕ್ಕ ಆಗಿದ್ದರ ಇಷ್ಟ ತರಾತುರಿಯಿಂದ ಏನ ಬರತಿದ್ದಿಲ್ಲ ಬಿಡು. ಮತ್ತೊಂದು ಪ್ರಕರಣ ಅದ. ಈ ಊರಾಗ ದಾದಾ ಅಂತ ಏನೋ ಒಬ್ಬಾವ

ಪುಂಡ ಇದ್ದಾನಂತಲ್ಲಾ ? ಅಂವಾ ಇಲ್ಲೀ ಪಡದಯ್ಯನ ವ್ಯಾಲೆ ಏರಿ ಹೋಗಿ, ಹೊಡದು, ಅಬರೂ ತೊಗೊಂಡಾನಂತ ಅವನ ವ್ಯಾಲೆ ಫಿರ್ಯಾದಿ ಕೊಟ್ಟಾರ. ಮತ್ತ ಆ ದಾದಾಗೇನೋ ಊರಾಗಿನ ಪ್ರತಿಷ್ಠಿತ ಬ್ರಾಹ್ಮಣರ ಬೆಂಬಲ ಅದ ಅಂತನೂ ಆ ಫಿರ್ಯಾದಿಯೊಳಗ ಕಾಣಿಸಿದ್ದದ. ಈ ಪ್ರಕರಣ ಮಾತ್ರ ದೀರ್ಘಕ್ಕ ಹೋಗೋ ಸಂಭವ ಅದ. ಮತ್ತ ಇಷ್ಟೆಲ್ಲಾ ಆಗೋ ಮುಂದ ನೀವೆಲ್ಲಿದ್ರಿ ಗೌಡರು? ಏನ್ ಬಂದೋಬಸ್ತಿ ಅನಬೇಕೂ ಪಾದಳ್ಳೀದss ಅಂತ ಜಂಬಾ ಕೊಚಿಕೋತಿದ್ದ ರೆಲ್ಲೋ?" ಎನ್ನುತ್ತ ಕೇಶವರಾಯ ಬಿದ್ದ ಆಳಿಗೆ ತನ್ನದೊಂಪು ಕಲ್ಲು ಎತ್ತಿದ.

ಸ್ವಲ್ಪ ಹೊತ್ತು ಗೌಡರು ಸುಮ್ಮನಿದ್ದರು. ಆದರೂ ಕೊನೆಗೆ ಕೇಶವ ರಾಯನೇ ಗತಿ ಎಂಬ ನಿರ್ಣಯಕ್ಕೆ ಬಂದು "ಎಲ್ಲಾ ಬೇಲಿ ಎದ್ದು ಹೊಲಾ ಮೇದಾಂಗ ಐತಿರಿ ಕತೀ, ಕೇಶಪ್ಪನೋರss. ಈ ಪಡದಯ್ಯನss ಮೂಕಿ ಅರ್ಜಿ ಮಾಡೋ ಬೆದರಿಕಿ ಹಾಕಿ,ಬಾಪೂಸಾಬರಿಂದ ಹಣಾ ಸುಲಕೊಂಡಾನ್ರಿ. ಮತ್ತ ಅದss ಬೆದರಿಕಿ ಹಾಕಿ ವಾಡೇದಾಗಿನ ಹಗೇ ತಗಿಸಿ, ಜ್ವಾಳಾ ಹಂಚಿ ತಾ ಬಿರದು ಹಚಿಗೊಂಡು ಮೆರೀತಾನರೀ. ನಮ್ಮ ಮಾದರ ಚನ್ನ್ಯಾ, ನನ್ನ ಮನ್ಯಾಗಿನ ಜ್ವಾಳಾ ಓದರ ಅವನ್ನ ಕಸಗೊಂಡು ಮಟಕ್ಕ ಹಾಕಸ್ಯಾನ್ರಿ. ಒಂದಂತ ಹೇಳೂದss ಅವನ ಆಟ! ಅದೆಲ್ಲಾ ಹೋಗಲ್ರಿ, ಈಗ ನನಗೇನು ಮಾಡಂತೀರಿ?" ಎಂದು ಕೇಶವರಾಯನನ್ನೇ ಸಲಹೆ ಕೇಳಿದರು.

"ಅದೆಲ್ಲಾ ಖರೇ ಇದ್ದೀತೋ ಗೌಡಪ್ಪಾ. ಆದರ ಪ್ರಕರಣ ತೊಡಕಿನದಾಗಿ ಕೂತದಲ್ಲ? ನೀ ನಾಳೆ ಹ್ಯಾಂಗಾದರೂ ಬರತೀಯಲ್ಲ. ರಾವಸಾಹೇಬರಿಗೆ ಒಂದಿಷ್ಟು ಹೇಳಿಕೋ. ಮರ್ಜಿ ಹಿಡಿದು ಕೇಳಿದರ ಏನರ ಕೆಲಸ ಆದಾವು. ಮತ್ತ ಉಳಿದ ದ್ದೆಲ್ಲಾ ನಿನಗೇನ ಹೇಳಬೇಕು ?" ಕೇಶವರಾಯ ಮೋಘಮ್ ಮಾತಾಡಿ ಕೈಬಿಟ್ಟ.

ಗೌಡರು ಮನೆ ಮುಟ್ಟಿದಾಗ ರಾತ್ರಿ ಹನ್ನೆರಡರ ಮೇಲಾಗಿತ್ತು. ಸಂಜೆಯಿಂದ ಇದರ ಬಗ್ಗೆಯೇ ವಿಚಾರ ಮಾಡಿಮಾಡಿ ಬೇಸತ್ತಿದ್ದರು. ಚಾವಡಿಗೂ ಮನೆಗೂ ಎಡತಾಕಿ ದಣಿದಿದ್ದರು. ಇಷ್ಟಾದರೂ ವಿಚಾರ ಬಗೆಹರಿದಿರಲಿಲ್ಲ. ಬೆಳಗಿನ ವಿಪ-ತ್ತೊಂದು ಕಾದು ಕುಳಿತಿತ್ತು. ಮನೆ ಮುಟ್ಟುವಷ್ಟರಲ್ಲಿಯೇ ಶಿಲೇದಾರ ಲಕ್ಷ್ಮಣ ತಮ್ಮನ್ನು ಕಾಣಲು ಬಂದಿರುವದಾಗಿ ತಿಳಿಯಿತು. ಗೌಡರು ಬೇಸರದಿಂದಲೇ "ಇಗಾ ನೋಡು ಲಕ್ಷ್ಮಣಾ ದಾದಾನ ವ್ಯಾಗ ಅರ್ಜಿ ಬಂದೈತಂತ, ಹುಶಾರಿ. ಅಮಲ

ದಾರ ದೇಶದಾಗಿಲ್ಲದ ಸಿಟ್ಟಿನವ ಅದಾನ. ಈ ಖಟ್ಲಿ ಅವನ ಬಾಯಾಗಿಂದ ಪಾರಾ ಗೂದ: ಕಠಿಣ ಐತಿ. ದಾದಾಗ ಆವನ ಕಣ್ಣಿಗೆ ಬೀಳಬ್ಯಾಡಂತ ಹೇಳು. ಊರಿಗೆ ಈಗಿಂದೀಗs ಆವನ್ನ ಕಳಿಸಿಬಿಡು" ಎಂದು ಉಪದೇಶ ಮಾಡಿದರು.

ಲಕ್ಷ್ಮಣ ಮತ್ತೆ ಅಳುಮೋರೆ ಮಾಡಿದ. ಧೋತರದ ಚುಂಗಿನಿಂದ ಮೂಗ ನ್ನೊರೆಸಿಕೊಳ್ಳುತ್ತ, "ಹೋಗಂದರೂ ಹೋಗೂ ಲಗಸಣ ಕಾಣವಲ್ಲವು ಯಪ್ಪಾ. ರಾವಸಾಹೇಬರು ಹ್ವಾದ ಮ್ಯಾಗs ಊರ ಬಿಟ್ಟು ಹೊಕ್ಕೀನಿ ಅಂತಾನ." ಎಂದು ಹೇಳಿದ.

"ಏನ ಎಡವಟ್ಟ ಅದಾನಲೇ ಅಂವಾ! ಸುಮಾಕ ಹೋಗಂತ ಹೇಳಬಾರದs. ಹುಲಿ ಕೂಡ ಆಡಬಹುದು,ಈ ಸರಕಾರದ ಮಂದೀ ಕೈಯಾಗ ಸಿಗಲಾಸಲ್ಲ. ಊರು ಬಿಟ್ಟು ಹೋಗನ್ನು. ಒಲ್ಲೀ ಅಂದರ ಗರಡೀಮನಿಯಾಗ, ಇಲದಿರಕ ನಮ್ಮ ಬಾಳಾಚಾರ ಮನ್ಯಾಗರs ಇರನ್ನು. ಅದಕ್ಕೂ ಒಲ್ಲೆ ಅಂದರ ಹಾಳಭಾವಿ ಬೀಳನ್ನು, ನಮ್ಮನ್ನೂ ಕೆಡವನ್ನು." ಸಿಟ್ಟಿನಿಂದ ಅವಡುಗಚ್ಚಿ ನುಡಿದರು ಗೌಡರು.

ಗೌಡರ ಅವತಾರ ನೋಡಿಯೇ ನಡುಗಿದ್ದ ಲಕ್ಷ್ಮಣ, ಭಯದಿಂದ ಅಳುವ ದನ್ನು ಕೂಡ ಮರೆತು ಅಲ್ಲಿಂದ ಕಾಲು ಕಿತ್ತಿದ. ರಾತ್ರಿಯೇ ದಾದಾನಿಗೆ ಹೇಳ ಬೇಕೆಂದರೆ ಅವನು ಮನೆಯಲ್ಲಿರಲಿಲ್ಲ.

ಬೆಳಗಾಯಿತು. ದಾದಾ ನಿತ್ಯದ ರೂಢಿಯಂತೆ, ಗರಡೀಮನೆಯಲ್ಲಿ ಚಡ್ಡಿ ಏರಿಸಿ, ತಾಲೀಮಿಗೆ ತೊಡಗುವ ಸಿದ್ಧತೆಯಲ್ಲಿದ್ದ. ಆಗ ಆವನನ್ನು ಹುಡುಕುತ್ತ ಲಕ್ಷ್ಮಣ ಅಲ್ಲಿಗೇ ಬಂದ. ಗೌಡರು, ಬಾಳಾಚಾರ್ಯರು ಇಬ್ಬರೂ ಉಪದೇಶಿಸಿದ್ದನ್ನು ಮಗನಿಗೆ ಹೇಳಿದ. ಬಾಳಾಚಾರ್ಯರ ಮನೆಯಲ್ಲಾದರೂ ಹೋಗಿ ಇರು ಎಂದು ಕಳಕಳಿಯಿಂದ ಉಪದೇಶಿಸಿದ. ಆದರೆ ದಾದಾನ ಮನಸ್ಸಿಗದು ನಾಟುವಂತಿರಲಿಲ್ಲ.

"ಏನು ತುಡುಗು ಮಾಡಿಲ್ಲಾ, ಕಳವು ಮಾಡಿಲ್ಲಾ, ತಲೀ ತಪ್ಪಿಸಿಗೊಂಡು ಕೂಡಲಾಕ. ಇವೆಲ್ಲ ನನಗ ಸರೀನs ಬರಾಣಿಲ್ಲ. ಚಿಮಣಾನ ಬಾಳೀವು ಹಾಳ ಗೆಡವಿದವನ್ನ ಜೀವದಿಂದ ಬಿಟ್ಟು, ಅದ್ಯಾವ ಫೌಜದಾರ ಅಂವಾ, ನನ್ನ ತಡವ ಬೇಕಾದಾವ? ನೋಡೆರ ನೋಡತೀನಿ" ಎಂದು ರಭಸದಿಂದ ನುಡಿದು ದಾದಾ ತಾಲೀಮಿನಲ್ಲಿಯೇ ಮಗ್ನನಾದ.

"ತಿಳದದ್ದು ಮಾಡಿಕೋ. ಹೇಳಂದ್ದೂ ಹೇಳೀನಿ. ನಿನ್ನ ಫಲಭೋಗ ನಿನ ಗೈತಿ" ಎಂದು ಗೊಣಗುಟ್ಟುತ್ತ ಲಕ್ಷ್ಮಣ ಹೊರಟು ಹೋದ.

:: ೧೦ ::

ಫಕರುದ್ದೀನ ಫೌಜದಾರರು ಆಗಿನ ಕಾಲದ ಎಲ್ಲ ಅಮುಲದಾರರಂತೆಯೇ ಆರೋಪಿಗಳಿಗೆ ಯಮಸದೃಶರಾಗಿದ್ದರು. ದರ್ಪವಿಲ್ಲದವನು ಅಧಿಕಾರಿಯೇ ಅಲ್ಲ ಎಂಬ ಭಾವನೆ ದೃಢವಾಗಿ ಸಾಮಾನ್ಯರಲ್ಲಿಯೂ ಆಗ ಬೇರೂರಿತ್ತು. ಯಮದೂತ ರಂತೆ ಭೀಕರರಾದ ಪೋಲೀಸ ಕಾನ್‌ಸ್ಟೇಬಲ್ಲರೊಂದಿಗೆ ಫಕರುದ್ದೀನರ ಪರಿವಾರ ಬಂದಿತೆಂದರೆ, ಗಜನಿಮಹಮೂದನ ದಾಳಿ ಬಿದ್ದಂತೆ ಜನ ಅಂಜಿ ನಡುಗುತ್ತಿದ್ದರು. ಆ ಪರಿವಾರ ಊರು ಬಿಡುವ ವರೆಗೆ ಊರಲ್ಲಿ ಯಾರಿಗೂ ನಿದ್ದೆ ಹತ್ತುತ್ತಿರಲಿಲ್ಲ. ಫಕರುದ್ದೀನರು ಹಗಲು ಹೊತ್ತು ಸಾಮಾನ್ಯ ಪೋಲೀಸ ಅಧಿಕಾರಿಯಂತೆಯೇ ಕಂಡುಬರುತ್ತಿದ್ದರು. ಸರಬರಾಯಿಯ ವ್ಯವಸ್ಥೆ ಅಚ್ಚುಕಟ್ಟಾಗಿದೆಯೋ ಇಲ್ಲವೋ ಎಂಬುದರ ಮೇಲೆ ಅವರ ಕಾಕದೃಷ್ಟಿ ಇದ್ದದ್ದೇ. ಓಲೆಕಾರ ತಂದ ಬೆಣ್ಣೆಯ ಪಾತ್ರೆ, ಅವರ ಕಣ್ಣು ಮೂಗಿನ ಪರೀಕ್ಷೆಯಾದನಂತರವೇ ಅಡಿಗೆಮನೆಯನ್ನು ಸೇರತಕ್ಕ ದ್ದೆಂದು ಸಕ್ತ ಆಜ್ಞೆಯಾಗಿತ್ತು. ಕೋಳಿಗಳಿಗೆ ಚೂರಿ ಬೀಳುವ ಮೊದಲು, ಅವರು ಅವುಗಳನ್ನು ಎತ್ತಿ ನೋಡಿ, ಕೊಕ್‌ಕೊಕ್‌ಕೊಕ್ ಎಂದು ಅವು ಚಡಪಡಿಸುವ ದನ್ನು ನೋಡಿ ದೊಡ್ಡದಾಗಿ ನಕ್ಕು ನೆಲಕ್ಕೆ ಅಪ್ಪಳಿಸುತ್ತಿದ್ದರು. ರೋಗಿಷ್ಟ ಕೋಳಿ ಎಂದು ಕಂಡುಬಂದರೆ ಅವರ ಕಿಡಿಗಣ್ಣುಗಳಿಂದಲೇ ತಂದವನ ಅವತಾರ ಸಮಾಪ್ತಿ ಯಾಗುತ್ತಿತ್ತೆಂಬ ಹೆದರಿಕೆ ಎಲ್ಲ ಗೌಡರಿಗೂ ಓಲೆಕಾರರಿಗೂ ಗೊತ್ತಿತ್ತು.

ಪಾದಳ್ಳಿಯ ಗೌಡರು ಸರಬರಾಯಿ ಬಹಾದ್ದೂರರೆಂಬ ಕೀರ್ತಿ ತಾಲೂಕಿ ನಲ್ಲೆಲ್ಲ ಹರಡಿತ್ತು. ಫಕರುದ್ದೀನಸಾಹೇಬರು ಈ ತಾಲೂಕಿಗೆ ವರ್ಗವಾಗಿ ಬಂದ ವರ್ಷ ಪಾದಳ್ಳಿಯನ್ನು ತಮ್ಮ ಪಾದಧೂಳಿಯಿಂದ ಪಾವನಗೊಳಿಸಿದ್ದರು; ಗೌಡರ ಮೇಜವಾನಿಯಿಂದ ಸಂಪ್ರೀತರಾಗಿದ್ದರು. ಊರು ಬಿಟ್ಟು ಹೋಗುವಾಗ “ಜರೂರು ಪಡೇ ತೋ ಹಮಾರೆ ಪಾಸ ಆನಾಜೀ ಪಾಟೀಲ್” ಎಂದು ಹೇಳಿದ್ದನ್ನು ಗೌಡರ ಅನೇಕ ತಿಂಗಳುಗಳ ವರೆಗೆ ಅಭಿಮಾನದಿಂದ ಹೇಳಿಕೊಳ್ಳುತ್ತಿದ್ದರು.

ಒಮ್ಮೆ ಫಕರುದ್ದಿನಸಾಹೇಬರ ಎಮ್ಮೆ ಬರಡು ಬಿದ್ದ ಸುದ್ದಿ ಪೋಲೀಸ

ಜಾತೆಯು ಗೂಢಚಾರರಿಂದ ಗೌಡರಿಗೆ ಮುಟ್ಟಿತು. ಊರಲ್ಲಿ ಹೆಸರಾದ ತಳಿಯು ಈಯಲಾದ ಎಮ್ಮೆಯೊಂದನ್ನ ಗೌಡರು ಸಾಹೇಬರ ಮನೆಗೆ ಮುಟ್ಟಿಸಿ, ಅವರ ಬರಡೆಮ್ಮೆಯನ್ನ ಬಡ ಸಂಗಪ್ಪನ ಮನೆಯಲ್ಲಿ ಕಟ್ಟಿಸಿದರು. ಸಂಗಪ್ಪ ಅದನ್ನೇ ಕಷ್ಟಪಟ್ಟು ಆರೈಕೆ ಮಾಡಿದ್ದನು. ಅದು ಮತ್ತೆ ತುಂಬಿ ಈಯಲಾದದ್ದು ಸಾಹೇಬರಿಗೆ ತಿಳಿದರೆ, ಅದು ಸಾಹೇಬರ ಮನೆಗೆ ಮರಳಿ ಹೋಗಬಹುದೆಂದು ಹೆದರಿ, ಸಂಗಪ್ಪ ಆ ಎಮ್ಮೆ ಸತ್ತುಹೋಯಿತೆಂದು ಕೆಲ ತಿಂಗಳುಗಳ ಹಿಂದೆ ವರದಿ ಮಾಡಿದ್ದನು.

ಬೆಳಕು ಹರಿಯುತ್ತಲೇ ಸಾಹೇಬರು ಎದ್ದು ಬಹಿರ್ದಿಸೆಗೆ ಹೋಗುವದು ವಾಡಿಕೆ. ಈ ದಿನವೂ ಹಾಗೆ ಹೋದಾಗ ಸಂಗಪ್ಪನ ಮನೆಯಿಂದ ಸರಗಾಡಲು ಬಿಟ್ಟ ಎಮ್ಮೆ ತನ್ನ ಮಣಕದೊಂದಿಗೆ ಸಾಹೇಬರ ಹತ್ತಿರವೇ ಬಂದಿತು. ಸಾಹೇಬರ ತೀಕ್ಷ್ಣದೃಷ್ಟಿಗೆ ಅದು ತಮ್ಮ ಎಮ್ಮೆಯೆಂದು ಕೂಡಲೆ ಗೊತ್ತಾಯಿತು. ಆಗಲೇ ಅವರ ಪಿತ್ತ ನೆತ್ತಿಗೇರಿತ್ತು. ತಿರುಗಿ ಚಾವಡಿಗೆ ಬಂದಾಗ ವಂದನೆ ಸಲ್ಲಿಸಲು ಬಂದ ಗೌಡರೇ ಮತ್ತೆ ಅವರ ಸಿಟ್ಟಿಗೆ ಆಹುತಿಯಾದರು. “ ಹಂ ಪಾಟೀಲ, ನಮ್ದು ಎಮ್ಮಿ ಎಲ್ಲೈತಿ?” ಎಂದು ಗುಡುಗಿದರು. [ಮದ್ಯದ ಅಮಲು ಇಳಿದದ್ದರಿಂದ ಸಾಹೇಬರು ಕನ್ನಡ ಮಾತನಾಡುವ ಸ್ಥಿತಿಗೆ ಬಂದಿದ್ದರು.]

ಗೌಡರು ಕೈಮುಗಿದು “ ಸಂಗಪ್ಪನ ಮನ್ಯಾಗ ಬಿಟ್ಟಿದ್ದೆನರಿ. ಅದು ಈದು ಸತ್ತುಹ್ವಾತಂತ. ಮಣಕಾ ಜ್ವಾಪಾನ ಮಾಡಿ ಈಯಲಿಕ್ಕ ಆಗಾಣಾ ನಿಮಗ ಮುಟ್ಟಿಸೂ ಅಂತ ಹೇಳೀನ್ರಿ” ಎಂದು ಬಿನ್ನವಿಸಿದರು.

ಸಾಹೇಬರ ಅವತಾರಕ್ಕೆ ಕಳೆಯೇರಿತು. “ಹರಾಮುಖೋರ, ಯಾರ ಹೇಳತಾರು? ನಾ ಇದs ಈಗ ನೋಡಿ ಬಂದೇನಿ” ಎಂದು ಚಾವಡಿಯೆಲ್ಲ ಪ್ರತಿಧ್ವನಿಸುವಂತೆ ಕೂಗಿದರು. ಸಂಗಪ್ಪನಿಗೆ ಆಗಲೇ ಕರೆ ಹೋಯಿತು. ಅವನನ್ನು ಕರೆಸಿ ಆರೋಪಿಯಂತೆ ಮಧ್ಯಾಹ್ನದವರೆಗೆ ಚಾವಡಿಯಲ್ಲೇ ಕೂಡಿಸಿದರು.ಅಡ್ಡಿ ಕೇಶವರಾಯ ಅವನಿಗೆ “ಊಟಾ ಮಾಡಿ ಬಾ ಹೋಗು” ಎಂದು ಆಜ್ಞೆ ವಿಧಿಸಿ, ತಾನೂ ಊಟ ಮಾಡಲು ಬಾಳಾಚಾರ್ಯರ ಮನೆಗೆ ಹೋದ.

ಸಂಗಪ್ಪ ಹೌಹಾರಿದ್ದ. ಎಮ್ಮೆ ಸತ್ತಿತೆಂದು ಸುಳ್ಳು ಹೇಳಿದ ಬಗ್ಗೆ ಎಷ್ಟು ದಂಡ ತೆತ್ತಬೇಕಾಗುವದೋ ಎಂದು ಅವನ ಅಣ್ಣ-ತಮ್ಮಂದಿರು ಗಾಬರಿಯಾಗಿದ್ದರು. ಸಂಗಪ್ಪ ಊಟಕ್ಕೆ ಮನೆಗೆ ಹೋಗದೆ, ನೆಟ್ಟಗೆ ಬಾಳಾಚಾರ್ಯರ ಮನೆಗೆ

ಬಂದು ಅಡ್ಡಿ ಕೇಶವರಾಯರ ಪಾದಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಅಳುತ್ತ ಕುಳಿತನು.

"ಏಳು ಸಂಗಪ್ಪಾ. ದೊಡ್ಡವರ ಜೋಡಿ ವ್ಯವಹಾರ. ದೆವ್ವನ ಹೊಟ್ಟ್ಯಾಗ ನಾವು ಹೋದರೂ ತ್ರಾಸ, ನಮ್ಮ ಹೊಟ್ಟ್ಯಾಗ ದೆವ್ವ ಹೊಕ್ಕರೂ ತ್ರಾಸ. ಮಾತೇನೋ ಸಣ್ಣದು. ಆದರ ಸಾಹೇಬರ ಹಟಾ ದೊಡ್ಡದೋ! ಕೇಶವರಾಯರು ನಮ್ಮವರು. ಏನಾದರೂ ಮಾಡಿ ತಪ್ಪು ಕ್ಷಮಾ ಮಾಡೂಹಂಗ ಮಾಡತಾರ. ನೀ ಹೋಗಿ ಊಟಾ ಮಾಡಿ ಬಾ" ಎಂದು ಬಾಳಾಚಾರ್ಯರು ಅವನನ್ನು ಸಮಾಧಾನ ಮಾಡಿ ಕಳಿಸಿದರು. ಆದರೆ ಅವನು ಹೋದ ಕೂಡಲೆ ಆವನ ಹೆಂಡಿರುಮಕ್ಕಳು ಅಳುತ್ತ ಅಲ್ಲಿಗೇ ಬಂದರು.

"ಎಮ್ಮಿ ಕಿಮ್ಮತ್ತಿನ ಎರಡು ಪಟ್ಟು ದಂಡಾ ಕೊಡಬೇಕಾದೀತು" ಎಂದು ಕೇಶವರಾಯರು, ದಂಡದಿಂದ ಪ್ರಕರಣ ಬಗೆಹರಿಯುವ ಆಸೆ ಇದೆಯೆಂದರು.

ಸಂಗಪ್ಪನ ಹತ್ತರ ಒಡಕು ಕಾಸೂ ಇರಲಿಲ್ಲ. ಎಮ್ಮೆಯ ಬೆಲೆ ಐವತ್ತು ರೂಪಾಯಿ ನೂರು ರೂಪಾಯಿ ದಂಡ ಕೊಡಲು ಇದು ಸುಗ್ಗಿಯ ಕಾಲವೂ ಅಲ್ಲ. ಸಂಗಪ್ಪನ ಹೆಂಡಿರು-ಮಕ್ಕಳು ನಿರಾಶರಾಗಿ ಹೊರಟುಹೋದರು. ಸಂಗಪ್ಪನಿಗೆ ಚಾವಡಿಯ ಸೆರೆ ತಪ್ಪಲಿಲ್ಲ. ಸಂಗಪ್ಪನ ತಮ್ಮ ರಾಯಣ್ಣ, ಮಾರವಾಡಿ ಬಾಳಾ ರಾಮನ ಕಡೆಯಿಂದ ಜಮೀನನ್ನು ಅಡವಿಟ್ಟು ನೂರು ರೂಪಾಯಿ ಸಾಲ ಪಡೆದು ಕೊಂಡು ಚಾವಡಿಗೆ ಬಂದ. ಆಗ ರಾತ್ರಿಯ ಹತ್ತು ಗಂಟೆಯಾಗಿತ್ತು. ನೂರು ರೂಪಾಯಿ ಹಣ ಕೇಶವರಾಯನ ಕೈಗೆ ಬಿತ್ತು. ಕೇಶವರಾಯ ಮುಗುಳುನಗೆ ಯಿಂದ ಸ್ವೀಕರಿಸಿದ. ಆಮೇಲೆ ಚಾವಡಿಯಿಂದ ಸಂಗಪ್ಪನಿಗೆ ಬಿಡುಗಡೆಯಾಯಿತು.

ಎಮ್ಮೆ ಸತ್ತಿತೆಂದು ಸುಳ್ಳು ಹೇಳಿದ ಒಂದು ಸಣ್ಣ ತಪ್ಪಿಗೆ ಬಡ ಸಂಗಪ್ಪ ನೂರು ರೂಪಾಯಿ ದಂಡ ತೆತ್ತಬೇಕಾಯಿತೆಂಬ ಸುದ್ದಿ ಪಾದಳ್ಳಿಯಲ್ಲಿ ಹಬ್ಬಲು ತಡವಾಗಲಿಲ್ಲ. ಈ ಪ್ರಕರಣ ಊರ ಜನರಲ್ಲಿ ಭಯವನ್ನು ಬಿತ್ತಿತು. ಚಾವಡಿಯ ಮುಂದೆ ಹಾಯಲೂ ಕೂಡ ಜನರು ಅಂಜಹತ್ತಿದರು. ಬಿರುಗಾಳಿ ಬೀಸುವ ಮೊದಲು ವಾತಾವರಣ ಸ್ತಬ್ಧವಾಗಿರುವಂತೆ, ಫಕರುದ್ದೀನಸಾಹೇಬರು ಶಾಂತ ರಾಗಿ ಕಂಡರೂ ಕೂಡ ಅವರ ಕಿಡಿಗಣ್ಣುಗಳಲ್ಲಿಯೇ ಮುಂಬರುವ ಅನಾಹುತ ಗಳನ್ನು ಗುರುತಿಸಬಹುದಾಗಿತ್ತು. ರಾತ್ರಿಯಲ್ಲಿ ಚಾವಡಿಗೆ ಯಾರ‍್ಯಾರಿಗೆ ಬಕಾ- ಸುರನ ಆಮಂತ್ರಣ ಬರುವದೋ ಎಂದು ಜನರು ಭಯಗ್ರಸ್ತರಾದರು. ಫಿರ್ಯಾದಿ

ಮಾಡಿ, ಪಡದಯ್ಯನವರು ಊರಿಗೆ ಬರಲು ಮಾರಿಗೌತಣವನ್ನೇ ಕೊಟ್ಟರು ಎಂದು ಅಲ್ಲಲ್ಲಿ ಗುಜುಗುಜು ಮಾತು ಕೇಳಿ ಬಂದವು. ನಿನ್ನಿನ ದಿನ ಜನರ ಅಭಿಪ್ರಾಯದ ಮೇರೆಗೆ ಜನರಕ್ಷಕರೆಂದು ಹೆಸರಾಗಿದ್ದ ಪಡದಯ್ಯನವರ ಬೆಲೆ ಇಂದು ಅರ್ಧಕ್ಕರ್ಧ ಇಳಿಯಿತು. ದನ ತಿನ್ನದಂಥ ಕಾಳು ಹಂಚಿದ್ದು, ದಾದಾನ ಮೇಲೆ ಮೂಕಿ ಅರ್ಜಿ ಮಾಡಿದ್ದು, ಕೊನೆಗೆ ಅದರ ಚೌಕಶಿಗಾಗಿ ಯಮನಂಥ ಇಂಥ ಅಧಿಕಾರಿಯನ್ನು ಕರೆಸಿದ್ದು ಇವೆಲ್ಲ ನಿನ್ನೆ ಅವರ ಪರಾಕ್ರಮಕ್ಕೆ, ಧೈರ್ಯಕ್ಕೆ ಸಾಕ್ಷಿಯಾಗಿದ್ದವು. ಅವೇ ಇಂದು ವಿಪರೀತ ದೃಷ್ಟಿಯ ಬೆಳಕಿನಲ್ಲಿ ದ್ರೋಹದ ಕೃತಿಗಳಾಗಿ ಕಂಡವು.

ಆದರೆ ಕುಲಕರ್ಣಿ ಶೇಷಪ್ಪನಿಗೆ ಮಾತ್ರ ಹಾಗನ್ನಿಸಿರಲಿಲ್ಲ. ಅವನಿಗೆ ಊರಲ್ಲಿ ಎದ್ದ ಇಂಥ ಗೊಂದಲದಿಂದ ಉತ್ಸಾಹವೇರಿತ್ತು. ಅವನ ಸ್ವಾರ್ಥದ ನಾಲಿಗೆ ಉಪ್ಪಿನಕಾಯಿಯನ್ನು ಕಂಡಂತೆ ಲೊಚಗುಡಹತ್ತಿತು. ಅಂತೆಯೇ ಪಡದಯ್ಯ ಅವನ ಕಣ್ಣಿಗೆ ಬಹಾದ್ದೂರನಾಗಿ ಕಂಡ. "ಖರೇ ಗಂಡಸ ಅನಬೇಕು ಅವನಸ. ಅಂಥಾವ ಒಬ್ಬಾವ ಊರಾಗ ಇದ್ದರ ಇಂಥಾ ಗೌಡರ ಸೊಕ್ಕು ಮುರೀತದ" ಎಂದು ಹೇಳುತ್ತ ತಿರುಗಾಡಹತ್ತಿದ.

ರಾತ್ರಿ ಹನ್ನೊಂದು ಹೊಡೆಯುತ್ತಲೇ ಫಕರುದ್ದೀನಸಾಹೇಬರ ಕಣ್ಣು ಕೆಂಪಗಾದವು. ಚಾವಡಿಯು ತುಂಬ ಗಂಡದ ಕಂಪು ಇಡುಗಿತು. ಸಾಹೇಬರು ಅಮಲೇರುತ್ತಿದ್ದಂತೆಯೇ "ಪಡದಯ್ಯಾಕೊ ಬುಲಾವ್, ಓ ದಾದಾಕೊ ಬುಲಾವ್" ಎಂದು ಆರ್ಭಟಿಸಹತ್ತಿದರು.

ಪೋಲೀಸಸಿಪಾಯಿಯೊಬ್ಬ ಓಲೆಕಾರ ಮಲ್ಲನೊಂದಿಗೆ ಗರಡಿಮನೆಗೆ ಹೋಗಿ "ರಾವಸಾಹೇಬರು ಕರದಾರ ಬಾ" ಎಂದು ದಾದಾನನ್ನು ಕರೆದು ತಂದನು.

ಅಂದೇ ಸಂಜೆ ಸಂಗಪ್ಪನ ತಮ್ಮನ ಮಗ ಬಸಪ್ಪ ದಾದಾನನ್ನು ಕಂಡಿದ್ದ. ಮನೆಯ ಜವೀನನ್ನು ಪತ್ತಿಹಾಕಿ ೧೨೦ ರೂಪಾಯಿ ತಂದು ಕೊಟ್ಟ ಸುದ್ದಿಯನ್ನು ಅವನೆದುರು ಹೇಳಿದ್ದ.

"ಒಡವೆರು ಬಾಳೀ ಮಾಡೂದಕ ತೆಗವ ಆಗಿ ಕುಂತೈತಿ ನೋಡು ದಾದಾ. ನಮ್ಮ ಎಮ್ಮಿ ದಿನಕ್ಕ ಮೂರು ಸೇರು ಬೆಣ್ಣಿ ಬರೂದು -- ಅದನ್ನು ತೊಗೊಂಡು ಒಂದು ಒಡ್ಡ ಎಮ್ಮಿ ಕೊಟ್ಟ. ಅದರ ಆಸ್ಥೆಕಿ ಮಾಡಬಾಕ ಜೀತಿಲ್ದ ಆಳಂತ ಮಾಡ್ಯಾನ ನಮ್ಮನ್ನ. ಅದೂ ಒಂದು ಸಾಗತ್ಯ ಮಾಡಿ ಸಾಕಿದಿವಿ. ಅದರ ಮ್ಯಾಗ

ಕಣ್ಣಿಬಿದ್ದೀತು ಇವಂದು ಅಂತ ಕಾಕಾ 'ನಿವ್ಮ ಎವ್ಮ ಸತ್ತೈತಿ' ಅಂತ ಹೇಳಿದ್ದ.
ಅದಕ್ಕ ನೂರುರೂಪಾಯಿ ದಂಡಾ ವಸೂಲ ಮಾಡಬೇಕೇನಪಾ?" ಬಸಪ್ಪನೆಂದಿದ್ದ.

ದಾದಾನ ಪಿತ್ತ ಆಗಲೇ ನೆತ್ತಿಗೇರಿತ್ತು. ಇಂಥ ಬರಗಾಲದಲ್ಲಿ ಹೀಗೆ ಬಡವರನ್ನು ಸುಲಿಯುವ ಅನ್ಯಾಯ ಅಕ್ಷಮ್ಯವೆಂದೆನಿಸಿತು. ಫೌಜದಾರನ ದರ್ಪವನ್ನಿಳಿಸಿ ಬಿಡಬೇಕೆಂಬ ಯೋಚನೆಯೂ ಸುಳಿದು ಹೋಯಿತು. ಆ ವಿಚಾರದ ಭರದಲ್ಲಿಯೇ ಪೋಲೀಸನ ಬೆನ್ನುಹತ್ತಿ ದಾದಾ ಚಾವಡಿಯ ಕಟ್ಟೆಯನ್ನೇರಿದನು.

ಚಾವಡಿಯಲ್ಲಿ ಜನರ ಗದ್ದಲವಿತ್ತು. ಆಡ್ಲಿ ಕೇಶವರಾಯ ಗಡಿಬಿಡಿಯಿಂದಲೇ ಓಡಾಡುತ್ತಿದ್ದವನು, ಈಗ ಒಬ್ಬ ಓಲೆಕಾರನಿಗೆ ಗಟ್ಟಿಯಾಗಿ ಏನೋ ಮಾತುಗಳನ್ನು ಹೇಳುತ್ತಿದ್ದ. ಲೋಡಿಗಾತುಕೊಂಡು ಕುಳಿತ ಫೌಜದಾರರೆದುರು ಪಡದಯ್ಯನವರು, ಮಠದ ಸ್ವಾಮಿಗಳಿಗೊಪ್ಪುವ ಠೀವಿಯಲ್ಲಿ ಕಾಲ ಮೇಲೆ ಕಾಲು ಹಾಕಿಕೊಂಡು ಗಂಭೀರಮುದ್ರೆಯಿಂದ ಕುಳಿತಿದ್ದರು. ಒಂದಿಬ್ಬರು ಪೋಲೀಸರು ಅಡಿಗೆಯ ಸಾಮಾನು ಹೊತ್ತು ಒಳಗಿಡುವದರಲ್ಲಿ ನಿರತರಾಗಿದ್ದರು.

ದಾದಾ ಕಟ್ಟೆಯ ತುದಿಗೆ ಕೆರವುಗಳನ್ನು ಬಿಟ್ಟು ಒಳಗೆ ಬಂದು ನಿಂತ. ತಮ್ಮ ಮುಂದೆ ತಲೆವಾಗಿ ಮುಜುರೆ ಸಹ ಮಾಡದೆ ಎದೆ ಸೆಟೆಸಿ ನಿಂತ ಈ ಹುಡುಗ ಉದ್ಧಟನೆಂದು ತಿಳಿದು, ಫೌಜದಾರರ ಸಿಟ್ಟು ಇನ್ನೂ ಹೆಚ್ಚಿತು. ಅವರ ಸಮ್ಮುಖದಲ್ಲಿ ಫಿರ್ಯಾದಿ ಪಡದಪ್ಪನು ಕುಳಿತಿರದಿದ್ದರೆ ಅವನ ಕೆನ್ನೆಗೆ ಎರಡೇಟು ಕೊಟ್ಟು, ರಾವಸಾಹೇಬರ ಮುಂದೆ ಯಾವ ರೀತಿ ವರ್ತಿಸಬೇಕೆಯಿದರ ಬಗ್ಗೆ ಮರೆಯಲಾಗದ ಪಾಠವನ್ನು ಕಲಿಸಬಹುದಾಗಿತ್ತು. ಆದರೆ ಇವನನ್ನು ಹೆಡಮುರಿಗೆ ಕಟ್ಟಿ ಜೇಲಿಗೆ ಅಟ್ಟುವಂಥ ಆರೋಪಗಳನ್ನು ಸಿದ್ಧಮಾಡಿಕೊಡುವ ಫಿರ್ಯಾದಿ ಇರುವಾಗ ಸದ್ಯಕ್ಕೆ ತಾಳ್ಮೆ ವಹಿಸುವದೇ ಉತ್ತಮ ಉಪಾಯವೆಂದು ಫಕರುದ್ದೀನರು ಎಣಿಕೆ ಹಾಕಿದರು. ಅವನನ್ನು ಸ್ವಲ್ಪ ಹೊತ್ತು ಕ್ರೂರವಾಗಿ ದಿಟ್ಟಿಸಿ ನೋಡಿ, "ಆಡ್ಲೀ, ದಾದಾ ಅನ್ನೋ ಹುಡುಗ ಇವನೇ ಏನು?" ಎಂದು ಪ್ರಶ್ನೆ ಮಾಡಿದರು. ಕೇಶವರಾಯ ಹೌದೆಂದು ಉತ್ತರಿಸಿದ.

"ಯಾಕೋ, ಯಾರ ಮುಂದ ನಿಂತೀ ಗೊತ್ತೈತೋ ಇಲ್ಲೋ?" ಎಂದು ಫೌಜದಾರರು ಹೆದರಿಸುವ ರೀತಿಯಲ್ಲಿ ದಾದಾನನ್ನೇ ಕೇಳಿದರು.

"ಗೊತ್ತೈತಲ್ಲರಿ." ಎಂದು ದಾದಾ ನಿರ್ಲಕ್ಷ್ಯದಿಂದ ಹೇಳಿದ.

"ಇಲ್ಲಿ ಯಾಕ ಕರಕೊಂಡು ಬಂದಾರ ನಿನ್ನ ಅನ್ನೂದು ಗೊತ್ತದನೋ

ಇಲ್ಲೋ ?"

"ಗೊತ್ತಿಲ್ಲರಿ." ಅದೇ ನಿರ್ಲಕ್ಷ್ಯತನದಿಂದ ದಾದಾ ಉತ್ತರಿಸಿದ.

"ಅರೇ ಇಸ್ಮಾಯಿಲ್, ಇಸಕೊ ಸಮಜಾವ್" ಎಂದು ಫಕರುದ್ದೀನರು ಪೋಲೀಸನೊಬ್ಬನಿಗೆ ಆಜ್ಞೆ ಮಾಡಿದರು.

ಇದೇ ಸಂಧಿಯನ್ನು ಸಾಧಿಸಿ ಪಡದಯ್ಯನವರು "ನೋಡ್ರಿ ರಾವಸಾಬ, ಎಟು ಉದ್ಧಟ ಆದಾನ ಇಂವಾ! ಇವನ ಮಗರೂರಿ ಏಟ ಇದ್ದೀತು!" ಎಂದು ಬೆಂಕಿ ಊದಿದರು.

ದಾದಾ ಕೆರಳಿದ ಹುಲಿಯಂತೆ ಪಡದಯ್ಯನವರನ್ನು ನೋಡಿದ. "ಸುಮಾಕ ಮಾತಬಾರದಿ, ಹಲ್ಲಾಗ ನಾಲಗಿ ಇಟಗೊಂಡು. ಸಾಹೇಬರದಾರು ನಾ ಅದೀನಿ; ನಿಂದೇನೋ ನಡಕ?" ಎಂದು ಅವರನ್ನು ಜಬರಿಸಿದ. ಅಷ್ಟರಲ್ಲಿ ಕಾನ್‌ಸ್ಟೆಬಲ್ ಇಸ್ಮಾಯಿಲ್ ಬಂದು ದಾದಾನನ್ನು ಆಚೆಗೆ ಕರೆದೊಯ್ದನು.

"ನೋಡಿದಿರಿಲ್ಲೊ ಸಾಹೇಬರ, ಏಟ ಅವನ ಟಬರು! ಕಣ್ಣಿ ಕೆಪೋಗ ಹ್ಯಾಗ ಮಾಡತಾನ? ಕಂಡಕಂಡವರ್‍ನ ಬೆದರಸತಾನ ಹ್ಯಾಗ? ನನ್ನ ಹೊಡದು ಬಡದು ಜೀವಾ ತೊಗೊಂತೀನಿ ಅಂತ ಬೆದರಿಸಿ, ನನ್ನಂತಾ ವಿರಕ್ತನ ಮಟಕ್ಕ ಬಟ್ಟಾ ತರಬೇಕಂತ, ತನ್ನ ತಂಗಿನ್ನs ತಂದು ಮಟದಾಗ ಸೇರಿಸಿಬಿಟ್ಟ. ಕುಸ್ತಿಗಡಿ ಟೋಳಿ ಕಟಿಗೊಂಡು ಊರಾಗ ರೈತರನ್ನ ಬೆದರಿಸಿ ಹಗೇ ಲೂಟಿ ಮಾಡತೀವಿ ಅಂತ ಧಮಕೀ ಕೊಟ್ಟ. ಅದರ ಸಲುವಾಗಿ ಬಾಪೂಸಾಹೇಬರು, ರಾತೋರಾತ್ರಿ ಹಗೇ ತಗಿಸಿ, ಕಾಳು ಹಂಚಿ, ಪಾರಾಗಬೇಕಾದರ ಮಸ್ತಾತು!" ಎಂದು ಪಡದಯ್ಯನವರು ಮಾತಿನ ಸುರುಳಿಯನ್ನು ಬಿಚ್ಚಿದರು.

ಪಡದಯ್ಯನವರು ಆದಷ್ಟು ದಾದಾನ ಮೇಲಿನ ಆರೋಪವನ್ನು ಉಗ್ರವಾಗುವಂತೆ ಮಾಡಲು ಬಣ್ಣ ಹಾಕಬೇಕಾಗಿತ್ತು. ಅಂತಲೇ ಸಿಕ್ಕ ಸಂಧಿ ಸಾಧಿಸಿ ಫೌಜದಾರರು ಅವನ ಮೇಲೆ ಸಿಟ್ಟಿಗೇಳುವಂತೆ ಮಾಡಲು ಅವರ ಪ್ರಯತ್ನವಿತ್ತು. ಈಗ ಅಭಿಮಾನದಿಂದ ಸೆಟೆದು ನಿಂತ ದಾದಾ, ಸಾಹೇಬರ ದೃಷ್ಟಿಯಲ್ಲಿ ನಿಜವಾಗಿ ಆರೋಪಿಯಾಗಿದ್ದ. ಅಧಿಕಾರದ ಕಣ್ಣಿಗೆ ಧೈರ್ಯ, ಅಭಿಮಾನಗಳು ಅಧಿಕಪ್ರಸಂಗವಾಗಿಯೇ ತೋರುತ್ತವೆ. ಈಗ ಪಡದಯ್ಯನವರು ಹೇಳಿದಂತೆ, ಹಗೇ ಲೂಟಿ ಮಾಡುವ ಹೆದರಿಕೆ ಹಾಕಿದ ಬಗ್ಗೆ ಬಾಪೂಸಾಹೇಬನಿಂದ ಫಿರ್ಯಾದಿ ಬರೆಸಿಕೊಳ್ಳುವದು ಅಗತ್ಯವಿತ್ತು. ಫೌಜದಾರರು ಕೂಡಲೇ "ಅರೇ, ಜಾಗಿರದಾರ

ಸಾಬಕೊ ಬುಲಾವ್ !" ಎಂದು ಕೂಗಿದರು.

ಮಲ್ಲಿನ ಅಂಗಿಯೊಂದನ್ನು ಮಾತ್ರ ಧರಿಸಿಕೊಂಡು, ಹತ್ತೆಜಣ್ಣದಲ್ಲಿದ್ದ ಬಾಪೂಸಾಹೇಬ ದೇಶಾವರಿ ನಗೆ ಬೀರುತ್ತ ಸಾಹೇಬರಿಗೆ ವಿನಯದಿಂದ ಮುಜುರೆ ಮಾಡಿ ಒಳಗೆ ಬಂದ.

"ರಾವಸಾಹೇಬ, ಜಾಗೀರದಾರರು ಬಂದರು ನೋಡ್ರಿ. ಬರ್ರಿ, ಬರ್ರಿ ಜಾಗೀರ ದಾರಸಾಹೇಬ !" ಎನ್ನುತ್ತ ಪಡದಯ್ಯನವರು ಬಾಪೂಸಾಹೇಬನನ್ನು ತಾವೇ ಸ್ವಾಗತಿಸಿದರು.

"ಜಾಗೀರದಾರಸಾಹೇಬ, ನೀವು ಹಗೇ ತಗಿಸಿ ಗರೀಬ ಜನರಿಗೆ ಕಾಳು ಕೊಟ್ಟರಿ ಅಂತ ಕೇಳಿದಿವಿ. ಏ ಬಾತ ಸಚ್ಚಾ ಹೈ ಕ್ಯಾ?" ಎಂದು ಸಾಹೇಬರು ಕೇಳಿದರು.

ಎರಡು ದೊಡ್ಡ ವಜ್ರದುಂಗುರಗಳಿನ್ನಿಟ್ಟಿದ್ದ ಎರಡೂ ಕೈಗಳನ್ನು ಹಿಚು ಕುತ್ತ ಬಾಪೂಸಾಹೇಬ "ಗರೀಬರು ಉಪಾಸ ಬಿದ್ದು ಸಾಯಾಕ ಹತ್ಯಾರ ಅಂತ ಕೇಳಿದ್ನಿ. ಅದಕ ಅವರಿಗೆಲ್ಲಾ ಥೋಡಾಥೋಡಾ ಕಾಳು ಹಂಚಿಬಿಟ್ಟಾಗೇತಿ" ಎಂದ. ಪಾಪ, ಅವನಿಗೆ ಪ್ರಶ್ನೆಯ ಒಳಗುಟ್ಟು ತಿಳಿದಿರಲಿಲ್ಲ; ತನ್ನ ಔದಾರ್ಯ ವನ್ನು ಮೆರೆಸುವ ಉತ್ತರದಿಂದ ಪೇಚು ಬರಬಹುದೆಂಬೂ ತಿಳಿದಿರಲಿಲ್ಲ.

ಪಡದಯ್ಯನವರು ಧೈರ್ಯ ಹೇಳುವವರಂತೆ, "ಜಾಗೀರದಾರಸಾಹೇಬ, ನೀವೇನೂ ಅಂಜಬ್ಯಾಡ್ರಿ. ರಾವಸಾಹೇಬರಿಗೆ ಹೇಳೂದೆಲ್ಲ ಈ ಮುಕ್ಕಟ್ಟs ಹೇಳಿ ಬಿಟ್ಟೈತಿ. ದಾದಾನ ಟೋಳಿ ಬಂದು ಹಗೇ ಲೂಟಿ ಮಾಡಿ ಪುಂಡಾಟ ನಡೆಸ ಲಿಕ್ಕೆ ಅವಕಾಶಾನs ಕೊಡಬಾರದು ಅಂತ ನಾ ಹೇಳಿದ್ದ ಕೇಳಿ, ಹಗೇ ತಗಿಸಿ ಜ್ವಾಳಾ ಕೊಟ್ಟದ್ದು ಮುಚ್ಚಿಡೋ ಕಾರಣ ಇಲ್ಲ." ಎಂದರು.

"ಹೌದ್ಹೌದು, ನಮ್ಮ ಪಾಟೀಲರ ಹಗೇ ಲೂಟಿ ಮಾಡಲಿಕ್ಕೆ ಜನ ಸೇರಿತ್ತು." ಎಂದು ಗೊಂದಲಗೆಟ್ಟು ಪೂರ್ವಾಪರ ತಿಳಿಯದೆ ಬಾಪೂಸಾಹೇಬ ನುಡಿದ.

ಇನ್ನು ಆಸಾಮಿ ಕೈಬಿಡುವದೆಂದೆನಿಸಿದ್ದರಿಂದ ಪಡದಯ್ಯನವರು ಸಂಪೂರ್ಣ ಗಾಬರಿಯಾಗಿ ಬಾಪೂಸಾಹೇಬನನ್ನು ಅರ್ಧಕ್ಕೇ ತಡೆದು, ತಾವು ಮಾತಿನ ಸೂತ್ರ ವನ್ನು ಕೈಗೆತ್ತಿಕೊಂಡರು :

"ಅಂದವ್ಯಾಗ ನೋಡ್ರಿ; ಗೌಡರಂತಾ ಗೌಡರ ಹಗೇನs ಲೂಟಿ ಮಾಡಾಕ ಈ ದಾದಾ ಪುಂಡರ ಹಿಂಡೆಲ್ಲಾ ಕೂಡಿಸಿ ಧಾಂದಲೆ ಹಾಕಾಕ ಹತ್ತಿದ

ಮ್ಯಾಗ, ಅದಕ ಪುಂಡರು, ಇಂದಿಲ್ಲ ನಾಳಿ ಮಾಡೇದ ಹಗೇಕ್ಕೂ ಕೈಹಚ್ಚವರ ದಾರು ಅನೂ ಸುದ್ದಿ ಕರೀ ಅನಸಾಕುಬೇಕಲ್ರಿ. ಲೂಟಿ ಮಾಡೂ ಗಾಳೀನ ಬೀಸಿತ್ತು. ಅಂಪಮ್ಯಾಗ ಕೇಳೂದೇನು? ಹುಲಿಗೆ ಊರೇನು, ಕಾಡೇನು? ಜಾಗೀರ ದಾರಸಾಹೇಬ, ದಾದಾ ನಿಮ್ಮ ಹಗೇನೂ ಲೂಟಿ ಮಾಡಸಾವ ಅಂತ ಊರಾಗೆಲ್ಲ ಸಾರಿದ್ದು ಹೇಕ್ರಿ. ದಾದಾ ಈಗ ಪೋಲಿಸರ ತಾಜೇದಾಗ ಅದಾನ. ಇನ್ನ ಅವನ ಹೆದರಿಕಿ ಬಿಡ್ರಿ." ಎಂದು ನಿಧಾನವಾಗಿ ಹೇಳುತ್ತ ಪಡದಯ್ಯನವರು ಬಾಪೂ ಸಾಹೇಬ ಹೇಳಬೇಕಾಗಿದ್ದ ಹೇಳಿಕೆಯನ್ನು ಪೂರ್ತಿಗೊಳಿಸಿದರು.

ದಾದಾನ ಈ ನಾಟಕ ರಂಗಿಗೇಳಬೇಕಾಗಿದ್ದರೆ ಇನ್ನೊಂದು ಅವಶ್ಯಕತೆ ಯಿತ್ತು. ದಾದಾ ಜಾಗೀರದಾರರ ಹಗೆಗಳನ್ನು ಲೂಟಿ ಮಾಡಿಸುವ ಹೆದರಿಕೆ ಹಾಕಿದ ಬಗ್ಗೆ ಬಾಪೂಸಾಹೇಬನಿಂದ ಒಂದು ಫಿರ್ಯಾದಿಯನ್ನು ಈಗಿಂದೀಗ ಬರೆಸಿ ಕೊಳ್ಳಬೇಕಾಗಿತ್ತು.

ಅದರೆ ಇದೇ ಸಮಯಕ್ಕೆ ಅಡ್ಡಿ ಕೇಶವರಾಯ ನಡುವೆ ಬಾಯಿ ಹಾಕಿ ಈ ಪ್ರಸಂಗದ ಗತಿಯನ್ನೇ ಬದಲಿಸಿದ. ಮೂಕಿ ಅರ್ಜಿಯಲ್ಲಿ ವಿಷಪ್ರಯೋಗ ಮಾಡಿ ನಾನಾನ ಕೊಲೆ ಮಾಡಿದ ಆರೋಪವನ್ನು ಬಾಪೂಸಾಹೇಬರ ಮೇಲೆ ಹೊರಿಸ ಲಾಗಿದೆ ಎಂಬ ಮಾತನ್ನು ಫೌಜದಾರಸಾಹೇಬರ ಗಮನಕ್ಕೆ ತಂದುಕೊಟ್ಟ.

"ಎದೀ ಬಡಕೊಂಡು ನಾನಾ ಫೋತಿ ಆದಾ ಅಂತ ಶಪ್ಪತ್ ಮಾಡಿ ಹೇಳ ತೀನಿ ರಾವಸಾಹೇಬ. ವಿಷಾ ಹಾಕೂವಂಥಾ ಪಾಪಾ ಅಂಥಾ ಏನೂ ಮಾಡಿಲ್ಲ. ಅವನಂಥ ಸಂಭಾವಿತರು ಲಾಖ ಮಂದ್ಯಾಗ ಒಬ್ಬಾವ ಇದ್ದರ ಇರಬೇಕು." ಎಂದು ಜಾಗೀರದಾರರಿಗೊಪ್ಪುವ ಅಜ್ಞಾನದಿಂದ ತುಂಬಿ ಬಾಪೂಸಾಹೇಬ ಸಾಧಿಸಿದ.

"ಹಾಂಗಾರ ಅರ್ಜಿಯೊಳಗಿನ ಮಜಕೂರು ಪೂರಾ ಸುಳ್ಳು ಅಂತ ಹೇಳ ತೀರೇನು?" ಎಂದು ಕೇಶವರಾಯ ಅಡ್ಡ ಪ್ರಶ್ನೆ ಹಾಕಿದ. ಇಂಥ ಸಾವಿರ ಪ್ರಸಂಗ ಗಳನ್ನು ನೋಡಿದ ಅನುಭವವಿದ್ದ ಕೇಶವರಾಯನಿಗೆ ಈ ಪ್ರಕರಣದ ಅಂತರಂಗ ಏನೋ ತಿಳಿದುಹೋಗಿತ್ತು. ಜಾಗೀರದಾರರ ಹುಚ್ಚುತನದಿಂದ ಅವನಿಗೆ ಮೋಜೆನಿಸಿತು.

"ನನಗೊಂದೂ ತಾಪಿಕಿ ಇಲ್ಲ. ಆದಾವತಿ ಜನಾ ನನ್ನ ವಿರುದ್ಧ ಆರೋಪ ಮಾಡ್ಯಾರ. ಖರೇ ಸಂಗತಿ ಇದ್ದರ ಸಹೀ ಮಾಡಿ ಅರ್ಜಿ ಕೊಡತಿದ್ದರು." ಎಂದು ಒಂದು ಬಗೆಯ ನಿಶ್ಚಿಂತತನದಿಂದ ಬಾಪೂಸಾಹೇಬ ಮೂಕಿ ಅರ್ಜಿಯಲ್ಲಿಯ

ಎಲ್ಲ ಮಜಕೂರು ಸುಳ್ಳು ಎಂದು ಹೇಳುವ ಧೈರ್ಯವಾಗದೆ, ತನ್ನ ಮೇಲಿನ ಆರೋಪಗಳು ಮಾತ್ರ ನಿರಾಧಾರ ಎಂದು ವಾದಿಸಿದನು.

ಪಡದಯ್ಯನವರು ಈಗ ನಡುವೆ ಬಾಯಿ ಹಾಕಲೇಬೇಕಾಯಿತು. ಇಲ್ಲದಿದ್ದರೆ ಆಟ ತಮ್ಮ ಮೇಲೆಯೇ ತಿರುಗಬಹುದಾಗಿತ್ತು. ಪಡದಯ್ಯನವರು ಕುಳಿತ ಆಸನವನ್ನು ಬದಲಿಸಿದರು. ಮುಗುಳುನಗೆಯನ್ನು ಮುಖದ ಮೇಲೆ ತಂದುಕೊಂಡು, ಒಮ್ಮೆ ಕೆಮ್ಮಿ, ಎಲ್ಲ ಶ್ರೋತೃಗಳ ಗಮನವನ್ನೂ ತಮ್ಮ ಕಡೆಗೆ ಸೆಳೆದುಕೊಂಡರು. ಹೊಸ ಕತೆಗೆ, ಹೊಸ ವೇಷ, ಹೊಸ ಆವಿರ್ಭಾವ ಬೇಕೆನ್ನುವದು ಅವರಿಗೆ ಸಂಪೂರ್ಣ ಮನದಟ್ಟಾಗಿತ್ತು.

“ರಾವಸಾಹೇಬ, ಇಲ್ಲಿ ಕೇಳ್ರಿ. ಆ ಸತ್ತ ನಾನಾ ಈ ದಾದಾನ ಕಾಕಾ. ಅಂವಾ ಮೊದಲಿನಿಂದನೂ ಶಿಲೇದಾರ. ಜಾಗಿರದಾರರ ಭೂಮಿ ಲಾವಣಿಗೆ ಹಿಡಿದು ಸಾಗುಮಾಡತಿದ್ದ. ಧಣಿ ಸತ್ತಮ್ಯಾಗ, ಈ ನಾನಾ ತನ್ನ ಮಗಳ್ನ ಕರಕೊಂಡು ಬಂದು ವಾಡೇದಾಗ ಇರಾಕ ಹತ್ತಿದ. ಅವನ ಆಸ್ತಿ, ಅವನ ಹೆಸರಲೆ ಇದ್ದ ಭೂಮಿ-ಸೀಮಿ, ಇನ್ನ ತನ್ನ ಕೈಬಿಡತಾವು ಅಂತ ಈ ದಾದಾಗ ಅನಿಸಿತೋ ಏನೋ ಆ ಶಿವಗ ಗೊತ್ತು, ದಾದಾ ಅವಗ ವಿಷಾ ಹಾಕಸೂ ಯವಸ್ತಾ ಮಾಡಿ ಊರು ಬಿಟ್ಟು ಹೋಗಿರಬೇಕು. ತಾ ಮಾಡಿದ ಪಾಪ ಇನ್ನೊಬ್ಬರ ಮ್ಯಾಗ ಹಾಕಿ ಪಾರಾಗಾಕ ಈ ಮೂಕಿ ಅರ್ಜಿ ಸರಕಾರಕ್ಕ ಮಾಡಿ, ದಿಶಾಭೂಲ ಮಾಡಿದ್ದಾಂಗ ನಮಗ ಕಾಣತೈತಿ. ಆದರ ಮಾಡಿದ ಕರ್ಮ ಬೆನ್ನು ಹತಿಗೊಂಡು ಬರಾಕಬೇಕಲ್ರಿ? ಅದಕ ತಾ ಮಾಡಿದ ಪೇಚಿನ್ಯಾಗ ತಾನs ಸಿಕ್ಕೊಂಡು ಕುಂತಾನ.” ಪಡದಯ್ಯ ಇಷ್ಟು ಮಾತಾಡಿ, ದಾದಾನೇ ನಾನಾನ ಕೊಲೆಯ ಆರೋಪಿ ಇರಬಹುದೆಂಬ ಸಂಶಯದ ನೆರಳು ಕವಿಸುತ್ತ ಈ ಕತೆಯನ್ನು ಹೇಳಿದ.

ದಾದಾನ ಮೈಸೊಕ್ಕು ಇಳಿಸುವದು ಫಕರುದ್ದೀನಸಾಹೇಬರಿಗೂ ಬೇಕಾಗಿತ್ತು. ಆದ್ದರಿಂದ ನಾನಾನ ಕೊಲೆಯ ಒಳಸಂಚಿನ ಆರೋಪವನ್ನಿಡಲು ಅವರ ಅಂತರಂಗ ಯಾವ ರೀತಿಯ ತಕರಾರೂ ಮಾಡಲಿಲ್ಲ. ಮೇಲಾಗಿ ಬೇಪತ್ತೆ ಆದ ಒಂದು ಕೊಲೆಯ ಪ್ರಕರಣದ ಶೋಧ ಮಾಡಿದ ಶಿಫಾರಸು ಸಿಗುವ ಸಂಭವವೂ ಇತ್ತು. ನಿರ್ಣಯವಾದರೆ ಶಿಫಾರಸು; ಇಲ್ಲದಿದ್ದರೆ ಆರೋಪಿಗಳ ಕಡೆಯಿಂದ ಕೈ ತುಂಬ ರೊಕ್ಕ. ಫಕರುದ್ದೀನರಿಗೆ ಈ ಸುವರ್ಣಸಂಧಿಯನ್ನು ವ್ಯರ್ಥವಾಗಿ ಹೋಗಗೊಡಭಾರದೆಂದೆನಿಸಿತು. ಅಂತಲೇ ಸ್ವಲ್ಪ ಹೊತ್ತು ಗಡ್ಡದ ಮೇಲೆ ಕೈಯಾಡಿಸಿ,

ಏನೋ ಯುಕ್ತಿ ಹೊಳೆದವರಂತೆ ಕಣ್ಣು ಮಿಟುಕಿಸಿ, ವಿಚಿತ್ರ ನಗೆಯೊಂದನ್ನು ನಕ್ಕರು. ಆಮೇಲೆ ಬಾಪೂಸಾಹೇಬನ ಬೆನ್ನು ತಟ್ಟಿ " ಐಸಾ ಕರೋ ಜಾಗಿರ ದಾರಸಾಬ, ನಾನಾಗ ವಿಷ ಹಾಕಿದಾವ ದಾದಾ ಅಂತ ಸಾಧಿಸರಿ. ಅದಕ್ಕ ನಾಲ್ಕು ಸಾಕ್ಷೀ ತಯಾರಿಸಿ ಕೊಡ್ರಿ. ಆ ದಾದಾನ ಮುಗರೂರಿ ಇಳಿಸಿ, ಅಂವಗ ಫಾಶೀ ಶಿಕ್ಷಾ ಮಾಡಿಸಿ ಕಳಿಸತೀವಿ" ಎಂದು ಹೇಳಿದರು.

ಅಷ್ಟರಲ್ಲಿ ಆಡ್ಲಿ ಕೇಶವರಾಯ ಸಾಹೇಬರ ಮಲಗುವ ಹೊತ್ತಾಯಿತೆಂದು ಸೂಚಿಸಿದ. ಸಾಹೇಬರು ಎದ್ದು ಒಳಗೆ ನಡೆದರು. ಬಾಪೂಸಾಹೇಬ ಮತ್ತೊಮ್ಮೆ ಸಾಹೇಬರಿಗೆ ಬಗ್ಗಿ ಮುಜುರೆ ಮಾಡಿ ಹೊರಡಲನುವಾದ. ಪಡದಯ್ಯನವರೂ ಎದ್ದು ನಿಂತು ಗಂಭೀರವಾಗಿ ಸಾಹೇಬರಿಗೆ ವಂದನೆ ಸಲ್ಲಿಸಿದರು. ಇಬ್ಬರೂ ಅವರ ಅಪ್ಪಣೆ ಪಡೆದುಕೊಂಡು ಚಾವಡಿಯಿಂದ ಹೊರಗೆ ನಡೆದರು.

ಆಗಲೇ ಮಧ್ಯರಾತ್ರಿಯು ಮೀರಾಗಿತ್ತು. ಅಲ್ಲಲ್ಲಿ ನಾಯಿಗಳು ಬೊಗಳುವ ಸಪ್ಪಳ ಬಿಟ್ಟರೆ ಊರು ಶಾಂತವಾಗಿ ಮಲಗಿತ್ತು. ಬಾಪೂಸಾಹೇಬ ತನ್ನ ಮೇಲಿನ ಆರೋಪ ದಾದಾನ ಮೇಲೆ ಹೋದದ್ದರಿಂದ ಹರ್ಷಾತಿರೇಕದಲ್ಲಿ ಉಬ್ಬಿಹೋಗಿದ್ದ. ಈಗ ಸಾಹೇಬರು ಹೇಳಿದ ಕೆಲಸ ಮಾಡುವದು ಅಗತ್ಯವಾಗಿತ್ತು. ಅದಕ್ಕೆ ಪಡದಯ್ಯನವರ ಸಲಹೆಯೂ ಅಷ್ಟೇ ಅವಶ್ಯವಾಗಿತ್ತು.

ಬಾಪೂಸಾಹೇಬ ಆಗಿನ ಕಾಲದ ಎಲ್ಲ ಸುಖವಸ್ತು ವತನದಾರರಂತೆ ಕೇವಲ ವೈಯಿಷ್ಟೇ ಬೆಳೆದ ಹುಡುಗನಾಗಿದ್ದ. ಜೀವನದ ವಿಲಾಸದ ಮುಖವಷ್ಟೇ ಅವನಿಗೆ ಪರಿಚಿತವಾಗಿತ್ತು. ರಾಜಕಾರಣ ಅವನಿಗೆ ಕೇವಲ ಹುಡುಗಾಟಿಕೆಯಾಗಿತ್ತು. ಅವನ ನೀಚತನದಲ್ಲಿಯೂ ಕೂಡ ಹುಡುಗತನವಿತ್ತು. ಕೈಯಲ್ಲಿ ಸಿಕ್ಕ ಇನ್ನೊಂದು ಜೀವವನ್ನು ಗೋಳಾಡಿಸಿ, ಅದು ಒದ್ದಾಡುವದನ್ನು ನೋಡಿದರೆ ಅವನಿಗೆ ತೃಪ್ತಿ ಎನಿಸುತ್ತಿತ್ತು. ಹುಟ್ಟಿದಂದಿನಿಂದ ದುಃಖವನ್ನೇ ಕಾಣದೆ, ಕೇವಲ ಸುಖವನ್ನಷ್ಟೇ ಅನುಭವಿಸಿದ ಅವನಿಗೆ ಸುಖದ ರುಚಿ ಹೇಸಿಕೆಯಾಗಿತ್ತು. ಇನ್ನೊಬ್ಬರ ದುಃಖದಿಂದ ಆ ಸುಖಕ್ಕೆ ಹೊಸ ರುಚಿ ಬರಬಹುದಾಗಿತ್ತು. ಜಾಗೀರಿಯ ಒಡೆಯರೆಲ್ಲ ಇನ್ನೊಬ್ಬರನ್ನು ಪೀಡಿಸುವದಕ್ಕೂ ಇದೇ ಕಾರಣವಾಗಿರಬಹುದೇನೋ!

ಈಗ ಸಾಕ್ಷಿಗಳನ್ನು ಹುಟ್ಟಿಸಬೇಕಾಗಿತ್ತು. ವಾಡೆಯ ಅಡಿಗೆಯವಳಾದ ಯಮುನಾಳನ್ನು ಸಾಕ್ಷೀದಾರಳನ್ನಾಗಿ ಮಾಡಬೇಕು. ದಾದಾ ತಂದು ಕೊಟ್ಟ ವಿಷವನ್ನು ನಾನಾನ ಆಹಾರದಲ್ಲಿ ಬೆರೆಸಿದ್ದಾಗಿ ಅವಳು ಹೇಳುವಂತೆ ಮಾಡಬೇಕೆಂಬು

ಪಡದಯ್ಯನವರ ಸೂಚನೆಯಾಗಿತ್ತು. ಅವರ ಬುದ್ಧಿಮತ್ತೆಗೆ ಬಾಪೂಸಾಹೇಬ ತಲೆ ದೂಗಿದ. "ಎಂಥಾ ಲಾಯಖ್ ವಿಚಾರ ಸ್ವಾಮೇರ!" ಎಂದು ಅವರನ್ನು ಬಾಯಿ ತುಂಬ ಹೊಗಳಿ ಬಾಪೂಸಾಹೇಬ ವಾಡೆಯ ದಾರಿಯನ್ನು ಹಿಡಿದ.

:: ೧೧ ::

ಚಾವಡಿಯಿಂದ ಎದ್ದು ಬಾಪೂಸಾಹೇಬ ವಾಡೆಯನ್ನು ಮುಟ್ಟಿದಾಗ ರಾತ್ರಿ ಹನ್ನೆರಡರ ಮೇಲಾಗಿತ್ತು. ಅವನು ಚಾವಡಿಗೆ ಹೋದಾಗಿನಿಂದ ಪುತಳಾ ಬಾಯಿ ಚಿಂತಾತುರಳಾಗಿ ಅವನ ದಾರಿ ಕಾಯುತ್ತ ನಡುಮನೆಯಲ್ಲಿ ತೂಗು ಮಂಚದ ಮೇಲೆ ಅಸ್ವಸ್ಥಳಾಗಿ ಕುಳಿತುಕೊಂಡಿದ್ದಳು. ತನ್ನ ಅರಳಿದ ಮುಖ ದಿಂದ ತಿರುಗಿ ಬಂದದ್ದು ನೋಡಿ ಅವಳಿಗೆ ಸಮಾಧಾನವೆನಿಸಿತು. ನಡುಮನೆ ಯನ್ನು ಬಿಟ್ಟು ಹೊರಗೆ ಬಂದಳು.

"ಬಾಪು, ಫೌಜದಾರಸಾಹೇಬರು ಯಾಕ ಕರಸಿದ್ರಂತ ನಿನ್ನ?" ಎಂದು ಆತುರಳಾಗಿ ಕೇಳಿದಳು. ಅವಳಿಗೆ ಅಲ್ಲಿ ನಡೆದ ಸಮಾಚಾರವನ್ನೆಲ್ಲ ತಿಳಿದುಕೊಳ್ಳ ಬೇಕಾಗಿತ್ತು.

"ನಾನಾಮಾಮಾಗ ವಿಷ ಹಾಕಿ ನಾನss ಖೂನ ಮಾಡಿಸಿದಾವಾ ಅಂತ, ಯಾರೋ ನಮಗ ಆಗದವರು ಮೂಕಿ ಅರ್ಜಿ ಕೊಟ್ಟಾರಂತ. ಅದರ ಚೌಕಶಿ ಮಾಡಲಿಕ್ಕೆ ಕರೆಸಿದ್ದರು" ಬಾಪೂಸಾಹೇಬ ಅರಿವೆ ಬದಲಿಸುತ್ತ ಹೇಳಿದ.

ಪುತಳಾಬಾಯಿಯ ಎದೆ ಧಸ್ಸೆಂದಿತು. ಆ ಪ್ರಕರಣ ಅಲ್ಲಿಗೇ ಮುಗಿದಿತ್ತೆಂದು ಅವಳು ತಿಳಿದಿದ್ದಳು. ರಹಸ್ಯವಾಗಿಯೇ ನಡೆಯುತ್ತಿದ್ದ ಈ ವಿಷಯಗಳೆಲ್ಲ ಅವಳಿಗೆ ಗೊತ್ತಾಗುವ ಸಂಭವವೂ ಇರಲಿಲ್ಲ. ಉಸಿರು ಬಿಗಿಹಿಡಿದುಕೊಂಡೇ ಕೇಳಿದಳು:

"ಹಂಗಾರ ನೀ ಏನೇನು ಹೇಳಿ ಬಂದಿ?"

"ನಾ ಹೇಳೋದೇನು, ಖರೇ ಸಂಗತಿ ಬೈಲಿಗೆ ಬಿತ್ತು."

ಪುತಳಾಬಾಯಿಯ ಕಣ್ಣಿಗೆ ಕತ್ತಲೆ ಬಂದಾಂತಾಯಿತು. ನಿಲ್ಲಲೂ ಕೂಡ ಆಗದೆ ಜಮುಖಾನೆಯ ಮೇಲೆಯೆ ಕುಳಿತುಬಿಟ್ಟಳು. "ಅಂದರ ವಿಷಾ ಹಾಕಿ

ಕೊಂಪದ್ದು ಖರೇ ಅಂತ ಹೇಳಿ ಬಂದೇನು ?" ಕೆಲ ಕ್ಷಣಗಳ ನಂತರ ಗಾಬರಿಯಿಂದ ಕೇಳಿದಳು.

ಬಾಪೂಸಾಹೇಬ ಗಟ್ಟಿಯಾಗಿ ನಕ್ಕುಬಿಟ್ಟ. ಮಧ್ಯರಾತ್ರಿಯ ನಿಶ್ಶಬ್ದತೆಯಲ್ಲಿ ವಾಡೆಯ ದಿವಾಣಖಾನೆಯಲ್ಲಿ ಅದು ಪ್ರತಿಧ್ವನಿಸಿದ್ದರಿಂದ ವಾಡೆಯೇ ನಕ್ಕಂತಾಯಿತು. ಪುತಳಾಬಾಯಿ ನಡುಗಿದಳು.

"ನಾ ಹೇಳೋ ಪ್ರಸಂಗಾನಽ ಬರಲಿಲ್ಲ ಅಕ್ಕಾ. ಖರೇ ಆರೋಪಿ ಯಾರು ಅನ್ನೂದು ಈಗಾಗಲೇ ಫೌಜದಾರರಿಗೆ ಗೊತ್ತಾಗೇತಿ." ಬಾಪೂಸಾಹೇಬ ಹೇಳಿದ.

"ಮುಂಪೇನು?" ಏನೂ ತಿಳಿಯದೆ ಪುತಳಾಬಾಯಿ ಕೇಳಿದಳು.

"ಮುಂಪೇನು ? ವಿಷಾ ಯಾರು ಕೊಟ್ಟರ್‍ಲೂ ಅನೂದನ್ನ ಯಮುನಾ ಸಾಕ್ಷಿ ಹೇಳ್ತಾಳ. ಹೆಣ ಹಸರೇರಿತ್ತು, ನಾಲಿಗಿ ಸೇದಿತ್ತು ಇದರ ಬಗ್ಗೆ ನೋಡಿದ ನಾಕು ಜನರ ಸಾಕ್ಷಿ ತೊಗೋತಾರ. ಆರೋಪಿಗೆ ಫಾಶಿ ಶಿಕ್ಷಾ ಕಾಯಮ ಆಗತೈತಿ. ಇದಕ ತಪ್ಪಿದರ ಫೌಜದಾರಕಿಗೇ ರಾಜೀನಾಮೆ ಕೊಡತೀನಿ ಅಂತ ಫಕರುದ್ದೀನ ಕುಂತಬಿಟ್ಟಾನ."

"ಬಾಪೂ, ಆರೋಪಿ ಯಾರು ಅಂತ ಗೊತ್ತಾತು ?"

"ಯಾರಿಗೆ ನಾನಾಮಾಮಾ ಸಾಯೂದು ಬೇಕಾಗಿತ್ತೋ ಅವರು ವಿಷಾ ಹಾಕಿಸ್ಯಾರ ಅಂತ ಫೌಜದಾರಸಾಹೇಬರ ಠಾಮ ಮತಾ ಆಗಿಬಿಟ್ಟೈತಿ."

"ಬಾಪೂ, ನಿನ್ನ ಮ್ಯಾಲೆ ಸಂಶೇ ಇಲ್ಲ ಹೌದಲ್ಲೋ?"

"ಏನ ಹುಚ್ಚಿ ಅದೀ ನೀನು ಅಕ್ಕಾ. ಅಂದ, ಗೌಡ ದುಡ್ಡ ಕಿತಿಗೋಬೇಕೂ ಅಂತ ನನ್ನ ಮ್ಯಾಗ ವಿಷಾ ಹಾಕಿದ ಆರೋಪ ಹೊರಿಸಿದಾ ಅಂತ ನೀನೂ ನಂಬತೀಯಾ ? ಚಿಮಣಾನ ಸಂಬಂಧ ನನಗ ಜೋಡಿಸಿ ಊರ ಪಂಚರು ವಾದಿಸ್ಯಾಡಿದರು. ನನಗ ಅಂದ ಮಾತಾಡಾಕ ಬಾಯಿ ಇರಲಿಲ್ಲ. ನಿನ್ನ ಶಪಥ ಮಾಡಿ ಹೇಳತೀನಿ ಅಕ್ಕಾ, ನಾ ವಿಷಾ ಹಾಕಿಲ್ಲ. ನನ್ನ ಮ್ಯಾಗ ಫೌಜದಾರನ ಸಂಶೇನೂ ಇಲ್ಲ. ಈಗ ನಾನು ಫಿರ್ಯಾದಿ, ತಿಳೀತಽ?" ಬಾಪೂಸಾಹೇಬ ತಾನು ಆರೋಪಿಯಲ್ಲವೆಂಪು ಮನಗಾಣಿಸಲು ನುಡಿದ.

"ಅಂಪರ ವಿಷಾ ಹಾಕಿಸಿದವರಿಗೆ ಫಾಶೀ ಶಿಕ್ಷಾ ಮಾಡಸೂ ಯಜಮಾನ ನೀನಽ ಅನ್ನು."

"ಅಲಬತ್."

"ಬಾಪ್ಯೂ, ಫಿರ್ಯಾದಿ ಏನ ಅಂತ ಕೊಟ್ಟ ಬಂದಿ? ಯಾರ ಮ್ಯಾಗ ಸಂಶೇ ಬಂನೈತಂತ ಹೇಳಿದಿ ?" ಪುತಳಾಬಾಯಿ ಸಾಶಂಕಳಾಗಿ ಕೇಳಿದಳು.

"ಮತ್ತ್ಯಾರ ಮ್ಯಾಗ? ಕಾಕಾ ಲಾವಣಿ ಹಿಡದ ಹೊಲದ ಕಬಜಾ ತನಗ ಬರಬೇಕೂ ಅಂತ ದಾದಾ ವಿಷಾಹಾಕಿಸಿರಬೇಕು. ಈ ಸಂಶೇ ಫೌಜದಾರಸಾಹೇ ಬರಿಗೇ ಬಂನೈತಿ."

"ಅಂದರ ದಾದಾಗ ಫಾಶೀ ಶಿಕ್ಷಾ ಆಗತೈತಿ ?"

"ಆಗದ ಹ್ಯಾಗ ಬಿಡತೈತಿ ಅಕ್ಕಾ ?"

ಪುತಳಾಬಾಯಿಗೆ ತಡೆಯಲಾಗಲಿಲ್ಲ. ಗಾಬರಿಯಿಂದ ಅವಳ ಮುಖ ಬೆಳ್ಳ ಗಾಗಿ ಹೋಗಿತ್ತು.

ಪುತಳಾಬಾಯಿ ಅಲ್ಲಿ ನಿಲ್ಲಲಿಲ್ಲ. ಮುಖಕ್ಕೆ ಸೆರಗು ಹಾಕಿಕೊಂಡು ನೆಟ್ಟಗೆ ತನ್ನ ಕೋಣೆಗೆ ನಡೆದಳು. ಹಾಸಿಗೆಯ ಮೇಲೆ ಹೊರಳಾಡುತ್ತ ಮನಸ್ಸು ದಣಿಯುವ ವರೆಗೆ ಅತ್ತಳು. ತುಂಬಿ ಬಂದ ದುಃಖದ ಆವೇಗವನ್ನು ಹಗುರಗೊಳಿಸಲು ಪ್ರಯತ್ನಿಸಿದಳು.

ರಾತ್ರಿ ಎರಡು ಹೊಡೆದರೂ ನಿದ್ರಿಸದೆ, ಪುತಳಾಬಾಯಿ ಹೊರಳಾಡುತ್ತಿರುವದನ್ನು ನಡುವೆಯೇ ಎದ್ದು ಬಂದ ಯಮುನಾ ನೋಡಿದಳು. ಕೋಣೆಯೊಳಗೇ ಬಂದಳು.

"ಯಾಕ ಯವ್ವಾ, ನಿದ್ದಿ ಹತ್ತಿಲ್ಲ? ಯಾವ ಚಿಂತಿ ಹಿಡದೈತಿ?" ಎಂದು ಪ್ರೀತಿಯಿಂದ ಕೇಳಿದಳು.

"ತಲಿನೋವು ಎದ್ದೈತಿ ಯಮುನಾ. ಈಗ ಹತ್ತೀತು. ಮತ್ತ ನಸಕಿನ್ಯಾಗ ಬಂದ ಎಬ್ಬಿಸಬ್ಯಾಡ."

"ನೀವು ಎದ್ದಾಗ ಏಳ್ರಿ ಯವ್ವಾ. ನಾ ಯಾಕ ಎಬ್ಬಿಸಲಿ? ಆದರ ಯವ್ವಾ, ನಿಮ್ಮ ಮಕಾ ನೋಡಿದರ ಏನೋ ಚಿಂತಿ ಹಿಡದ್ಹಂಗ ಕಾಣತೇತಿ."

"ಯಮುನಾ, ನೀ ನನ್ನ ಅಕ್ಕನ ಸಮಾನ. ನಾನಾಮಾಮಾಗ ವಿಷಾ ಹಾಕಿ ಕೊಂದ ಮಾತು ಈಗ ಜಗತ್ತಿಗೆಲ್ಲಾ ಡಂಗರಾ ಹೊಡಿತೇತಿ." ಪುತಳಾಬಾಯಿಯ ದನಿ ದುಃಖದಿಂದ ಭಾರವಾಗಿತ್ತು.

"ಛೀ ಬಿಡ ಯವ್ವಾ, ಎಂಥಾ ಮಾತಾಡತೀದಿ? ನನಗ, ನಿನಗ ಇಬ್ಬರಿಗೇ ಗೊತ್ತು ಆ ಗುಟ್ಟು. ಮೂರನೇದವರ ಕಿವಿಗೆ ಬಿದ್ದಿದ್ದರ ನನ್ನ ನಾಲಿಗಿ ಸೀಳಿ

ಕೊಟ್ಟೇನು."

"ಅದs ಬಂದದ್ದು ಸಂಕಟ. ನಾಳೆ ಫೌಜದಾರರು ಕರೆಸಿ ಕೇಳಿದಾಗ ನೀ ಹೇಳದs ಇರತೀಯಾ ಯಮುನಾ?"

"ಯವ್ವಾ, ಐದೂ ಬಟ್ಟು ಹೊಟ್ಟ್ಯಾಗ ಹಾಕಿ ಸಲವೀದಿ; ನಿನ್ನ ಮರ್ಯಾದೀ ಉಳಸಾಕ ಜೀವಾ ಕೊಟ್ಟೇನು. ಆದರ ಇಂತಾ ಗುಟ್ಟಿನ ಮಾತು ಹೇಳಾಣ ಆಗಾಕಿಲ್ಲ."

"ನೀನೂ ಕರೇ ಹೇಳದಿದ್ದರ ಬಾಪೂಸಾಹೇಬ ಜೇಲಿಗೆ ಹೋಗಬೇಕಾಗತೇತಿ."

"ಅದ್ಯಾಕs ಯವ್ವಾ?"

"ನಾನಾಮಾಮಾಗ ವಿಷಾ ಹಾಕಿದಾಕಿ ನೀನು ಅಂತ, ಫೌಜದಾರರ ಮುಂದ ಹೇಳಿ ಬಂದಾನ."

"ಯವ್ವಾ, ಈ ಮಾತು ಬಾಪೂಸಾಬರಿಗೆ ನೀನs ಹೇಳಿ ಗಾತಾ ಮಾಡಿ ಕೊಂಡೇನು?"

"ನಿನ್ನಾಣಿ ಯಮುನಾ, ನಾ ಹೇಳಿಲ್ಲ. ದಾದಾ ವಿಷಾ ತಂದು ನಿನ್ನ ಕೈ-ಯಿಂದ ನಾನಾಮಾಮಾಗ ಹಾಕಿಸಿರಬೇಕು ಅಂತ ಫಿರ್ಯಾದಿ ಕೊಡು ಅಂತ ಫೌಜದಾರರು ಹೇಳಿದರಂತ. ಬಾಪೂ ಫಿರ್ಯಾದಿ ಕೊಟ್ಟ ಕೂತಾನ. ಫಿರ್ಯಾದಿ ಕೊಡದಿದ್ದರ ಬಾಪೂನ್ನs ಹಿಡದು ಜೇಲಿಗೆ ಕಳಿಸತಿದ್ದರಂತ."

"ಶಿವ ಶಿವಾ! ಅತ್ತ ಕೆರಿ, ಇತ್ತ ಹೊಳಿ. ಏನ ಪರಸಂಗ ಬಂತs ಯವ್ವಾ! ಇದರಾಗಿಂದ ನೀನs ದಾರಿ ಹೇಳು ಯವ್ವಾ?" ಯಮುನಾ ಭಯದಿಂದ ಬೆಚ್ಚಿದಳು.

"ಖರೇ ನಿನಗ ಗೊತ್ತಿದ್ದಷ್ಟು ಹೇಳಿಬಿಡು."

"ಕಡದರೂ ಈ ಮಾತು ನನ್ನಿಂದ ಆಗಾಕಿಲ್ಲ. ನಿನ್ನ ಹೆಸರು ನಾಕ ಮಂದ್ಯಾಗ ಹರ್ಲಿಮಾಡಿದರ ನನಗೇನ ಸಿಗತೈತೇ ಯವ್ವಾ?"

"ಯಮುನಾ, ತಿಳದೋ ತಿಳೀದನೋ ತಪ್ಪನಕಾ ಆಗೇತಿ. ಈಗ ನನ್ನ ಮಾತು ಕೇಳಿ ಒಂದು ಜೀವಾ ಹೊಡದದ್ದs ಸಾಕು. ಇನ್ನೊಂದು ಜೀವಾ ದಾದಾ ನದು; ಅದನ್ನೂ ಒಂದು ನುಂಗಿ ನೀರ ಹಿಡದರ ದೇವರ ಮುಂದ ಏನ ಜವಾಬ ಕೊಡೂದೈತಿ? ಯಮುನಾ, ದಾದಾನ ಹೆಸರ ಎತ್ತಿ ಸಾಕ್ಷಿ ಹೇಳಿದರ ನನ್ನ ಕೊಯ್ದು ತಿಂದಂಗ ಆದೀತು.!"

"ಯವ್ವಾ, ನಿನ್ನ ಧೈರಿಯಾ ದೊಡ್ಡದು; ಮನಸ್ಸು ದೊಡ್ಡದು. ನಮಗೆಲ್ಲ

ಏನ ತಿಳೀತೇತಿ ಯವ್ವಾ? ನೀ ಹೇಳಿದ್ಹಾಂಗs ನಡಕೊಂತೀನಿ ಯವ್ವಾ. ಚಿಂತಿ ಬ್ಯಾಡ."

"ಖರೇ ಇದ್ದದ್ದು ಹೇಳು ಯಮುನಾ. ಯಾವದೂ ಮುಚ್ಚೂದು ಬ್ಯಾಡ."

ಪುತಳಾಬಾಯಿ ಇನ್ನು ಮಾತನಾಡಲಾರೆನೆನ್ನುವಂತೆ ಇನ್ನೊಂದು ಮಗ್ಗುಲಿಗೆ ಹೊರಳಿ ಬಿಕ್ಕಿದಳು. ಯಮುನಾ ಈ ಪ್ರಸಂಗದಿಂದ ಬೆಚ್ಚಿಹೋಗಿದ್ದಳು. ಯಾವ ಉಪಾಯದಿಂದಲಾದರೂ ಪುತಳಾಬಾಯಿಯನ್ನು ಉಳಿಸಿಕೊಳ್ಳಲು ಸಾಧ್ಯವಿಲ್ಲವೇ, ಎಂದು ಅವಳ ಮನಸ್ಸು ಚಿಂತಿಸಹತ್ತಿತು. ಪ್ರಕರಣ ಇಷ್ಟು ತೊಡಕಿನದಾಗಬಹುದೆಂದು ಅವಳು ಊಹಿಸಿರಲಿಲ್ಲ. ಮುಂದುಗಾಣದೆ ತನ್ನ ಹಾಸಿಗೆಯಿದ್ದಲ್ಲಿಗೆ ನಡೆದಳು.

ಪುತಳಾಬಾಯಿಯ ಮನಸ್ಸು ಒಂದೇ ಸವನೆ ಪರಿತಪಿಸುತ್ತಿತ್ತು. ಮಾಡಿದ ಪಾಪ ಅವಳಿಗೆ ಅಸಹ್ಯವಾಗತೊಡಗಿತ್ತು. ಇಲ್ಲಿಯ ತನಕ ಆ ಪಾಪವನ್ನು ಹುದುಗಿರಿಸಿಕೊಂಡು ಬಾಳುವದು ಸಾಧ್ಯವಾಗಿತ್ತು. ಆದರೆ ಈಗ ಇನ್ನೊಂದು ಜೀವ ಆ ಪಾಪಕ್ಕೆ ಬಲಿಯಾಗಬೇಕೆಂದಾಗ ಮನಸ್ಸು ಒಪ್ಪಲಿಲ್ಲ. ನಾನಾನ ಕೊಲೆಯ ನೆನಪು ತನಗಿಲ್ಲವೇ? ಅದರಿಂದುಂಟಾದ ದುಃಖ ಅವಳನ್ನು ನೆರಳಿನಂತೆ ಹಿಂಬಾಲಿಸಿತ್ತು. ಅದನ್ನು ಮರೆಯುವದಾದರೂ ಹೇಗೆ?

ನಾನಾನ ಕೊಲೆ ಅನಿವಾರ್ಯವಾಗಿತ್ತೇ? ಅನಿವಾರ್ಯವಾಗಿತ್ತೆಂದು ನಿರ್ಧರಿಸಿದಾಗಿನ ಮನಸ್ಥಿತಿಯನ್ನು ಈ ಪಶ್ಚಾತ್ತಾಪದ ಮೋಡಗವಿದ ಹಿನ್ನೆಲೆಯಲ್ಲಿ ತಾನೇ ವಿಮರ್ಶಿಸತೊಡಗಿದಳು.

ಹೌದು, ಒಂದು ದೃಷ್ಟಿಯಿಂದ ಅನಿವಾರ್ಯವಾಗಿತ್ತು. ಆ ಕಾರಣಪರಂಪರೆ ಎಷ್ಟು ದೂರ ಹೋಗಿತ್ತೆಂದರೆ ಅದನ್ನು ನೆನೆದರೂ ಆಶ್ಚರ್ಯವಾಗಬಹುದಿತ್ತು. ಚಿಮಣಾಳ ಯೌವನ, ಅವಳ ಮನಸೆಳೆಯುವ ರೂಪ, ನಾನಾನ ಕೊಲೆಯ ಮೂಲವೆಂದರೆ ಯಾರಾದರೂ ನಂಬಬಹುದೇ? ಈ ನಾಟಕದಲ್ಲಿ ಬಾಪೂಸಾಹೇಬ ಕೀಚಕನ ಪಾತ್ರ ವಹಿಸಿದ್ದ. ಚಿಮಣಾಳನ್ನು ತನಗೆ ಮದುವೆಯಾಗಲು ಪ್ರೇರೇಪಿಸಬೇಕೆಂದು ಅಕ್ಕನನ್ನು ಕಾಡಿದ್ದ. ಅವಳು ಅದಕ್ಕೊಪ್ಪಲಿಲ್ಲ. ಅನಾಯಾಸವಾಗಿ ಈ ನಾಟಕದಲ್ಲಿ ಇನ್ನೊಂದು ಪಾತ್ರದ ಪ್ರವೇಶವಾಯಿತು. ಪಡದಯ್ಯ ಸಲಹೆಗಾರನಾಗಿ ಬಂದವನು ತಾನೇ ಪಾತ್ರಧಾರಿಯಾದ. ಚಿಮಣಾ ಅವನಿಗೆ ಬಲಿಯಾದಳು. ರಕ್ಷಣೆಗಾಗಿ ಅವಳೀಗ ಬಾಪೂಸಾಹೇಬನನ್ನೇ ಮೊರೆಹೋಗಬೇಕಾಯಿತು.

ಆದರೆ ಬಾಪೂಸಾಹೇಬ ಈಗ ಒಪ್ಪಲಿಲ್ಲ. ಚಿಮಣಾ ದಿಕ್ಕು ತೋಚದೆ ನಿಂತಳು. ಆವಳೆಷ್ಟು ಕಣ್ಣೀರು ಸುರಿಸಿದರೂ ಪುತಳಾಬಾಯಿಗೆ ಸಹಾಯ ಮಾಡಲಾಗಿರಲಿಲ್ಲ.

ಊರಿಗೆ ಹೋಗಿದ್ದ ನಾನಾ ತಿರುಗಿ ಬಂದ. ಮೊದಲು ಅವನಿಗೇನೂ ಗೊತ್ತಾಗಿರಲಿಲ್ಲ. ಆದರೆ ನಿಸರ್ಗ ತಾನಾಗಿಯೇ ಅದನ್ನು ಹೊರಗೆಡವಿತು. ಪಡದಯ್ಯನ ಹೆಸರನ್ನು ನಾನಾನೆಮರು ಹೇಳುವಂತಿರಲಿಲ್ಲ. ಆದರೆ ನಾನಾನ ಸಿಟ್ಟು ಶಿಖರಕ್ಕೇರಲು ಅದೂ ಕಾರಣ ಬೇಕಾಗಿರಲಿಲ್ಲ. ಅವನ ಸಂಶಯವಿದ್ದದ್ದೇ ಬಾಪೂಸಾಹೇಬನ ಮೇಲೆ. ಈಗ ಅವರು ಚಿಮಣಾಳನ್ನು ಮದುವೆಯಾಗಲೇಬೇಕೆಂದು ನಾನಾನ ಹಟ. ದಿನವೂ ಇದೇ ಮಾತು ಪುತಳಾಬಾಯಿಯ ಎದುರು ಆಡುತ್ತಿದ್ದ; ಸಿಟ್ಟಿಗೇಳುತ್ತಿದ್ದ. ಪುತಳಾಬಾಯಿ ಯಾವುದನ್ನೂ ಮಾತಾಡಲಾರದೆ ಎಲ್ಲವನ್ನೂ ನುಂಗಿಕೊಂಡು ಸುಮ್ಮನಿದ್ದಳು.

ಆದರೆ ಅಂದಿನ ಪ್ರಸಂಗ ವಿಕೋಪಕ್ಕೆ ಹೋಗಲೇಬೇಕಾಗಿತ್ತು. ನಾನಾ ಅಂಮುಕೃತನಿಶ್ಚಯನಾಗಿದ್ದ. ಈ ವಾಡೆಯ ನೌಕರಿಯಿಂದ ತನ್ನ ಜೀವನವೇ ಹಾಳಾಯಿತು; ತನ್ನ ಮರ್ಯಾದೆ ಮಣ್ಣುಗೂಡಿತು. ಇನ್ನು ತಾನಿದ್ದರೂ ಅಷ್ಟೇ, ಸತ್ತರೂ ಅಷ್ಟೇ. ಆದರೆ ಸಾಯುವ ಮುನ್ನ ವಾಡೆ ಹಾಳಾದರೂ ಅಡ್ಡಿಯಿಲ್ಲ, ಸೇಡು ತಿರಿಸಿಕೊಳ್ಳಲೇಬೇಕೆಂಬ ಹಟ ಅವನಲ್ಲಿ ಹೊಕ್ಕಿತ್ತು. ಬಾಪೂಸಾಹೇಬನನ್ನು ಒಪ್ಪಿಸುತ್ತೀಯೋ ಇಲ್ಲವೋ ಎಂದು ಪುತಳಾನಿಗೆ ಕೊನೆಯ ಮಾತು ಕೇಳಿದ. ತಾನು ಉಸಿರು ಬಿಗಿಹಿಡಿದುಕೊಂಡು ಸಾಧ್ಯವಿಲ್ಲವೆಂದಳು. ತಲೆ ತಿರುಗಿತೋ, ಕಣ್ಣು ಕತ್ತಲೆಗವಿಯಿತೋ, ಸಿಟ್ಟಿನ ಆವೇಗ ನೆತ್ತಿಗೇರಿತೋ, ಥರಥರ ನಡುಗುತ್ತ ಮುದುಕ ನೆಲಕ್ಕೇ ಕುಳಿತ. ತಾನು ಹಿಡಿಯ ಹೋದಳು. ಮುಟ್ಟಬೇಡವೆಂದು ಚೀರಿಕೊಂಡ. ಇದನ್ನೆಲ್ಲಾ ನೋಡಿ ಚಿಮಣಾ ಮೂಲೆಯಲ್ಲಿ ಕುಳಿತವಳು ಹಳ್ಳ ಬಂದಂತೆ ಅಳತೊಡಗಿದಳು. ನಾನಾ ಶಾಪವಚನವನ್ನು ನುಡಿಯುವವನಂತೆ ಹುದುಗಿಟ್ಟ ಕೋಪವೆಲ್ಲಾ ಮಾತಿನ ಕಿಡಿಯಾಗಿ ನುಡಿದಿದ್ದ.

"ಹೇಳತೇನಿ ಕೇಳ ಪುತಳಾ. ಚಿಮಣಾನ ಬಾಳೇವೆಲ್ಲ ಹಾಳಾತು. ಇನ್ನ ನಾ ಯಾರದೂ ಪರಕಾರ ಮಾಡೂದುಲ್ಲ. ನನ್ನ ನಿನ್ನ ಸಂಬಂಧ ಏನೈತಿಲ್ಲ, ಅದನ್ನ ಊರ ತುಂಬ ಹೇಳಿಕೊಂತ ತಿರಿಗ್ಯಾಡತೇನಿ." ಪುತಳಾ ಮರ್ಮಾಹತಳಾದಳು. ವಾಡೆಯು ತುಂಬೆಲ್ಲ ನಾನಾನ ಮಾತು ಪ್ರತಿಧ್ವನಿಸುವಂತೆ ಕೇಳಹತ್ತಿದವು. ಹೂಳಿಟ್ಟಿದ್ದ ಪಾಪ ಈಗ ಮತ್ತೊಮ್ಮೆ ಜೀವ ಪಡೆದು ಹೆದರಿಸಹತ್ತಿತು. ನಾನಾನ

ಸಿಟ್ಟೇ ಅಂತಹದು. ಮರಾಠಾ ಸರದಾರರ ರಕ್ತ ಇನ್ನೂ ಅವನಲ್ಲಿ ಹರಿಯುತ್ತಿತ್ತು. "ಮುರಿಯಬಹುದು, ತುಂಡಾಗಬಹುದು, ಆದರೆ ಬಾಗಲಿಕ್ಕಿಲ್ಲ." ಈ ಮಾತು ಅವನ ಜೀವನ ಸಿದ್ಧಾಂತವಾಗಿತ್ತು.

ಪುತಳಾಬಾಯಿ ಹೆದರಿ ಹಾಸಿಗೆಯಲ್ಲಿ ಎದ್ದು ಕುಳಿತಳು. ಮೈಯೆಲ್ಲ ನಡುಗುತ್ತಿತ್ತು. ಜೋರನೆ ಬಿಟ್ಟ ಬೆವರಿನಿಂದ ಸೀರೆಯೆಲ್ಲ ತೊಯ್ದು ಹೋಗಿತ್ತು. ಕಣ್ಣೀರಿನಿಂದ ತಲೆದಿಂಬು ಒದ್ದೆಯಾಗಿತ್ತು. ಎಲ್ಲವನ್ನೂ ಮರೆತುಬಿಡಬೇಕೆಂದಳು. ಹೇಗೆ ಸಾಧ್ಯ? ಅಂಥ ಕತ್ತಲೆಯಲ್ಲೂ ಹಿಂದಿನ ನೂರಾರು ಚಿತ್ರಗಳು ನಿಚ್ಚಳವಾಗಿ ಕಂಡವು. ಮಾಡಿದ ಪಾಪವನ್ನು ಮಾಡಿಲ್ಲವೆನ್ನುವದು ಹೇಗೆ? ನಾನಾನ ಕೊಲೆಯ ಕಾರಣ ಪರಂಪರೆಯ ಕತೆ ಇಲ್ಲಿಗೇ ಮುಗಿದಿರಲಿಲ್ಲ. ಇನ್ನೂ ದೂರ ಹೋಗಿತ್ತು. ಪ್ರತಿಯೊಂದೂ ವಾಸ್ತವವಾದ, ಅನಿವಾರ್ಯವಾದ, ಅವಿನಾಶಿಯಾದ ಸತ್ಯವಾಗಿತ್ತು. ಆ ಪಾಪದ ಅನುಭವ ಅಚ್ಚಳಿಯದೆ ಇರುವಾಗ ಅದರ ಹೊಣೆಯನ್ನು ಹೇಗೆ ನಿರಾಕರಿಸಬೇಕು? ಬರೆದು ಅಳಿಸಲಿಕ್ಕೆ ಪಾಪವೇನು ಪಾಟಿಯ ಮೇಲೆ ಬರೆದ ಅಕ್ಷರವೇ? ತನ್ನ ಹೃದಯದಲ್ಲಿ ಪಾಪ ಶಾಸನವನ್ನೇ ಕೊರೆದಿಟ್ಟಿದೆ.

ನೆನಪು ಕೈಹಿಡಿದು ಜಗ್ಗಿತು. ದಣಿದ ಪ್ರಯಾಣಿಕನಂತೆ ಮನಸ್ಸಿಲ್ಲದ ಮನಸ್ಸಿನಿಂದ ಪುತಳಾ ಹಿಂಬಾಲಿಸಿದಳು. ಅಲ್ಲಿ ಏನು ಕಾಣಬಹುದೆಂಬುದು ಅವಳಿಗೆ ಗೊತ್ತಿಲ್ಲವೇ?

ಪಾದಳ್ಳಿಯ ಜಾಗೀರದಾರ ರಾಣೋಜಿರಾಯರನ್ನು ಮದುವೆಯಾದಾಗ ತನಗಿನ್ನೂ ಹದಿನಾರು ವರ್ಷ. ಗಂಡಸುಮಕ್ಕಳಾಗಲಿಲ್ಲವೆಂಬ ನೆವದಿಂದ ರಾಣೋಜಿರಾಯ ತನ್ನನ್ನು ಮದುವೆಯಾದದ್ದು. ಹಿರಿಯ ಹೆಂಡತಿ ಲಕ್ಷ್ಮೀಬಾಯಿ ಅತ್ತು ರಂಭಾಟ ಮಾಡಿದ್ದರೂ ಮದುವೆ ನಡೆದೇ ಹೋಯಿತು.

ತಾನು ಹೊಸಮೊದಲಗಿತ್ತಿಯಾಗಿ ಪಾದಳ್ಳಿಗೆ ಬಂದಾಗ, ಮೆರವಣಿಗೆಯಲ್ಲಿ ಕರೆದುಕೊಂಡು ಬಂದರು. ರಾತ್ರಿಯ ಹತ್ತು ಗಂಟೆಯಾಗಿತ್ತು ಆಗ. ಊರ ಸನಿಹಕ್ಕೆ ಬಂದಾಗ ಸ್ವಾಗತಿಸಲು ಜಾಗೀರದಾರರ ಪರಿವಾರ ಮಾರುತಿಯ ಗುಡಿಯ ಹತ್ತಿರ ಬಂದು ನಿಂತಿತ್ತು. ಸಹಜ ಕುತೂಹಲವೋ, ಹುಡುಗತನದ ಕೌತುಕವೋ, ಅಥವಾ ದೈವಪ್ರೇರಣೆಯೋ ಗೊತ್ತಿಲ್ಲ. ಮುಖದ ಮುಸುಕು ಸರಿಸಿ ತಾನು ನೋಡಿದ್ದಳು. ಹಿಲಾಲಿನ ಬೆಳಕಿನಲ್ಲಿ ಕಂಡದ್ದೇನು? ಬೆಟ್ಟದಷ್ಟು ಎತ್ತರವಾದ ಅಬಲಖ ಕುದುರೆಯ ಮೇಲೆ, ಜಾಗೀರದಾರರ ಶಿಲೇದಾರ ನಾನಾ, ಕೈಯಲ್ಲಿ ಬಿಚ್ಚುಗತ್ತಿ

ಯನ್ನು ಹಿಡಿದು ಕುಳಿತಿದ್ದ. ಮುಗಿಲು-ಬಣ್ಣದ ಜರದ ಪೇಟಾ, ಶುಭ್ರವಾದ ಕಂಠಿ ಕಮಾಸಿನ ಅಂಗಿ, ಕಿವಿಯ ತನಕ ವಕ್ರವಾಗಿ ಬಾಗಿದ ಹುರಿಮೀಸೆ – ಇತಿಹಾಸದ ಕ್ರಮವನ್ನು ತಪ್ಪಿಸಿ ಪ್ರಾಚೀನ ಕಾಲದ ಸರದಾರನೊಬ್ಬ ಮೆರವಣಿಗೆಯನ್ನು ನೋಡಬಂದಂತಿತ್ತು.

ಆ ಒಂದು ನೋಟವೇ ತನ್ನ ಜೀವಮಾನವನ್ನೆಲ್ಲ ಸೆಳೆದುಕೊಂಡಿತ್ತು. ನಾನಾನಿಗೆ ಆಗಿನ್ನೂ ಮೂವತ್ತು ವರ್ಷವಿರಬೇಕು. ಸಹಜವಾಗಿಯೇ ತನ್ನ ರೂಪು ಕೂಡ ಅವನನ್ನು ಆಕರ್ಷಿಸಿರಬೇಕು. ಮೆರವಣಿಗೆಯಲ್ಲಿ ಕಂಡ ನಾನಾನ ಚಿತ್ರ ಇನ್ನೂ ಹೃದಯವನ್ನು ಅಲುಗಾಡಿಸುತ್ತಿತ್ತು. ವಾಡೆಯಲ್ಲಿ ನಾನಾ ಅನೇಕ ಸಂದರ್ಭಗಳಲ್ಲಿ ಭೆಟ್ಟಿಯಾಗುತ್ತಿದ್ದ. ನೋಡಿದಾಗೊಮ್ಮೆ ಮನಸ್ಸು ನವಿರೇರುತ್ತಿತ್ತು.

ಆ ದಿನದ ಪ್ರಸಂಗವನ್ನಂತೂ ಮರೆಯುವದಾದರೂ ಹೇಗೆ? ಒಮ್ಮೆ ಕನಕೇರಿಯಿಂದ ತಂದೆಗೆ ಜಡ್ಡಾದ ಸುದ್ದಿ ಬಂದಿತ್ತು. ತಾನು ಊರಿಗೆ ಹೋಗುವ ಹಟ ಹಿಡಿದಳು. ಆಗ ರಾಣೋಜಿರಾಯರು ನಾನಾನನ್ನು ಕರೆದು ತನ್ನನ್ನು ಊರಿಗೆ ಕಳಿಸಿಬರಲು ಹೇಳಿದರು. ಗಾಡಿಯಲ್ಲಿ ತಾನು, ಯಮುನಾ, ನಾನಾ ಮೂವರೂ ಕುಳಿತು ಹೊರಟರು. ಬಿಸಿಲು ತಟ್ಟಬಾರದೆಂದು ಗಾಡಿಗೆ ಗುಡಾರದ ಸವಾರಿಯನ್ನು ಹಾಕಲಾಗಿತ್ತು. ನಡುದಾರಿಗೆ ಗಾಡಿ ಬಂದಿರಬೇಕು; ನಡುಮಧ್ಯಾಹ್ನದ ಬಿಸಿಲು ಮತ್ತೇರಿಸುವಂತಿತ್ತು. ಸುತ್ತಲಿನ ಬಯಲೆಲ್ಲ ಬಿಸಿಲಿಗೆ ಮೂರ್ಛೆ ಹೋದಂತಿತ್ತು. ಗಾಡಿಯಲ್ಲಿ ಯಮುನಾ ತೂಕಡಿಸುತ್ತಿದ್ದಳು. ಗಾಡಿಯ ಧಡಕಿಗೆ ತಾನು ನಾನಾನ ತೀರ ಮಗ್ಗಲಿಗೇ ಬಂದಿದ್ದಳು. ಅದೇನು ಹುಚ್ಚು ವಿಚಾರ ಮೂಡಿತೋ ತಲೆಯಲ್ಲಿ! ಯಮುನಾನಿಗೆ ಮಲಗೆಂದು ಹೇಳಿದಳು. ಯಮುನಾನಿಗೆ ಮಲಗಲು ಇಂಬಾಗಲೆಂದು ಇನ್ನೂ ನಾನಾನ ಹತ್ತಿರ ಸರಿದಳು. ಕಾಲು ಚಾಚುವಾಗ, ಸೆರಗು ಸರಿಪಡಿಸಿಕೊಳ್ಳುವಾಗ, ಗಾಡಿಯ ಧಡಕಿಗೆ ಮಗ್ಗುಲ ಬದಲಿಸುವಾಗ ಅನಿವಾರ್ಯವಾಗಿ ನಾನಾನ ಮೈ ಸೋಕುತ್ತಿತ್ತು, ಆಸೆಯ ಜೆಂಕಿ ತಂತಾನೆ ಹುಟ್ಟುತ್ತಿತ್ತು. ಒಮ್ಮೆ ನಾನಾನನ್ನು ಆಸೆಗಣ್ಣುಗಳಿಂದ ದಿಟ್ಟಿಸಿದಳು. ಕಣ್ಣು ತುಂಬ ಆ ರೂಪವನ್ನು ತುಂಬಿಕೊಳ್ಳಬೇಕೆನಿಸಿತು.

ನಾನಾನಿಗೂ ಆ ನೋಟ ಅರ್ಥವಾಗಿರಬೇಕು. ಇಲ್ಲದಿದ್ದರೆ ಎಂದೂ ಕಾಣದ ವಿಚಾರಮಗ್ನತೆ ಅವನ ಮುಖದಲ್ಲೇಕೆ ಬಂದಿರಬೇಕು? ಇಬ್ಬರ ಮನಸ್ಸೂ

ಒಂದೇ ವಿಷಯವನ್ನು ಕುರಿತು ಚಿಂತಿಸುತ್ತಿದ್ದವು. ಸುಮ್ಮನಿರಲಾರದೆ ಮಾತಾಡ ಬೇಕಾಯಿತು. ಆದರೆ ಆ ಮಾತುಗಳಲ್ಲಿ ಏನೂ ಅರ್ಥವಿರಲಿಲ್ಲ. ಒಳಗಿನ ಅರ್ಥ ವನ್ನು ಮಾತಿನಲ್ಲಿ ಪ್ರಕಟಗೊಳಿಸುವಂತಿರಲಿಲ್ಲ. ಆ ಕೆಲಸ ಬೇರೆ ಮಾರ್ಗದಿಂದ ನಡೆಯಬೇಕಾಗಿತ್ತು. ಭುಜ ಒಂದನ್ನೊಂದು ತಟ್ಟುತ್ತಿದ್ದವು. ಆ ತಾಕಲಾಟದಲ್ಲಿ ಏನೇನೋ ಹುಟ್ಟಿಕೊಂಡಿತು.

ಕೊನೆಗೆ ನಡುದಾರಿಗೆ ಹಳ್ಳ ಕಟ್ಟಿ ಸರಿರಾತ್ರಿಯ ವರೆಗೆ ಅಲ್ಲಿಯೇ ನಿಲ್ಲ ಬೇಕಾಯಿತು. ಹಳ್ಳ ಕ್ಷಣಕ್ಷಣಕ್ಕೂ ಏರುತ್ತಿತ್ತೇ ಹೊರತು ಇಳಿಯುತ್ತಿರಲಿಲ್ಲ. ರಾತ್ರಿಯ ತಂಪುಗಾಳಿಗೂ ಬೆಂದ ಮನಸ್ಸು ಸಮಾಧಾನಗೊಳ್ಳಲಿಲ್ಲ. ನಾನಾನು ಚಡಪಡಿಸುತ್ತ ವ್ಯರ್ಥವಾಗಿ ಅತ್ತಿಂದಿತ್ತ ತಿರುಗಾಡುತ್ತಿದ್ದ. ಮನಸ್ಸಿನಲ್ಲಿ ಆಸೆಯ ಕಿಡಿಯನ್ನು ಹೊತ್ತಿಸಿ ದೈವ ಕಾಯುತ್ತಿತ್ತು. ತಾನೇ ಯಮುನಾನಿಗೆ ಹಳ್ಳ ಇಳಿ ದಿದೆಯೋ ಇಲ್ಲವೋ ನೋಡಿಕೊಂಡು ಬರಲು ಹೇಳಿದಳು. ಗಾಡಿಯವನು ಹಳ್ಳದ ದಂಡೆಯ ಮೇಲೆಯೇ ಇದ್ದ. ಯಮುನಾ ಹೊರಟುಹೋದಳು.

ಹೌದು, ಅವಳು ಹೋಗಬಾರದಾಗಿತ್ತು. ಆದರೇನು? ಆಗಬೇಕಾದ ಸಂಗತಿ ದೂರ ಕಾಯುತ್ತಿರುವಾಗ ಅದನ್ನು ಮುಟ್ಟುವದಷ್ಟೇ ನಮ್ಮ ಕೆಲಸ. ಅಂದೊಂದು ಕ್ಷಣ ನಾನಾನ ಬದಲಾಗಿ ಇಡೀ ಜಗತ್ತನ್ನೇ ಕೊಟ್ಟರೂ ಬೇಡವಾಗಿತ್ತು. ಆ ಸುಖಸ್ಪರ್ಶ, ಆ ನೋಟ, ಆ ಅಪ್ಪುಗೆ ಈಗ ಹೇಯವೆನಿಸುತ್ತಿದ್ದರೂ ಆಗ ಅವೇ ಸರ್ವಸ್ವವಾಗಿದ್ದವು. ನಾನಾ ಅಂದು ತನ್ನವನಾಗಿದ್ದ. ಅಪ್ರಾಪ್ಯವಸ್ತುವೊಂದು ಅಂಗೈತಳದಲ್ಲಿಯೇ ದೊರೆತಿತ್ತು.

ಆದರೆ ಆ ಮತ್ತು ಇಳಿದ ಮೇಲೆ ತನಗೇ ಎಂಥ ಸಂಕಟವಾಗಿತ್ತು! ಪಾಪವೋ ಪುಣ್ಯವೋ, ಅಂತೂ ದುಃಖ ಕೂಡಲೇ ಆವರಿಸಿತ್ತು. ತಿರುಗಿ ಗಾಡಿ ಹೊರಟಾಗ ನಾನಾನನ್ನು ನೋಡುವದೂ ಅಸಾಧ್ಯವಾಗಿತ್ತು. ನಾನಾ ಕೂಡ ಗಾಡಿಯ ಹೊರಗೇ ಮುಖ ಹಾಕಿಕೊಂಡು ಏನೇನೋ ಚಿಂತಿಸುತ್ತಿದ್ದ.

ಮುಂದೆ ಕನಕೇರಿಯನ್ನು ಮುಟ್ಟುವಷ್ಟರಲ್ಲಿ ತಂದೆ ತೀರಿಕೊಂಡ ಸುದ್ದಿ ತಿಳಿದಿತ್ತು. ತನಗೆ ಎಂಥ ಆಘಾತವಾಗಿತ್ತು! ಮುಂದೆ ಕೆಲ ತಿಂಗಳಲ್ಲಿಯೇ ಬೇಟೆ ಯಾಡುವಾಗ ಕುದುರೆಯಿಂದ ಬಿದ್ದದ್ದೇ ನೆವವಾಗಿ ರಾಣೋಜಿರಾಯರೂ ತೀರಿ ಕೊಂಡಿದ್ದರು. ಅನರ್ಥಪರಂಪರೆ ಹಿಂಡುಗಟ್ಟಿಕೊಂಡೇ ಬಂದಂತಿತ್ತು. ಇದೆಲ್ಲ ತನ್ನದೇ ಪಾಪದ ಫಲವೆಂದು ಆಗ ಅನಿಸಲಿಲ್ಲವೇ? ಮಾಡಿದ ಪಾಪವನ್ನು ಮರೆವಿನಲ್ಲಿ

ಹೂಗಿದಿಟ್ಟು ಮುಂದೆ ಶುದ್ಧಜೀವನವನ್ನು ನಡೆಸುವ ಹಟ ತೊಟ್ಟು ಬಾಳಿರಲಿಲ್ಲವೇ?

ಹೌದು, ತನ್ನ ಮುಂದಿನ ಜೀವನ ಒಂದು ನಿಷ್ಠುರ ವ್ರತವಾಗಿತ್ತು. ನಾನಾನ ದಾಂಪತ್ಯಜೀವನವನ್ನು ಕಣ್ಣಾರೆ ನೋಡಿಯೂ ತಾನು ಸುಮ್ಮನಿದ್ದಳು. ಇಬ್ಬರೂ ಆ ವಿಷಯವನ್ನೇ ಮರೆತವರಂತೆ ವರ್ತಿಸಿದರು.

ನಾನಾ ವಾಡೆಯಲ್ಲಿಯೇ ಮನೆ ಹೂಡಿದ. ಅವನ ಜೊತೆಗೆ ಚಿಮಣಾ ಬಂದಳು. ತನ್ನ ಬಾಳು ತುಂಬಿದಂತೆನಿಸಿತು. ಆದರೆ ಇನ್ನೊಂದು ಅನರ್ಥ ಕಾದಿತ್ತು. ತನ್ನ ಸಂರಕ್ಷಣೆಯಲ್ಲಿ ಅವಳನ್ನು ಬಿಟ್ಟು ಹೋದಾಗಲೇ ಆ ದುರಂತ ನಡೆಯಬೇಕೇ? ತನ್ನ ದುಷ್ಟ ದೈವದ ನೆರಳು ಆವಳ ಮೇಲೂ ಬಿದ್ದಿತೇನೋ? ನಾನಾ ಬಂದನಂತರ ಮಗಳ ಅವಸ್ಥೆಯನ್ನು ನೋಡಿ ಸಿಟ್ಟುಬೆಂಕಿಯಾದ. ತಾನೂ ಹೊಣೆ ಹಾರಿಸಿಕೊಳ್ಳುವಂತಿರಲಿಲ್ಲ. ಆದರೆ ನಿಜವನ್ನೂ ಹೇಳುವಂತಿರಲಿಲ್ಲ. ಈ ನಡುವೆ ಅನವಶ್ಯವಾಗಿ ಬಾಪೂ ಬಲಿಯಾಗಬೇಕಾಯಿತು. ನಾನಾನಿಗೆ ಅವನ ಮೇಲೆಯೇ ಸಂಶಯ. ಚಿಮಣಾಳ ಕೌಮಾರ್ಯಭಂಗವನ್ನು ಮಾಡಿದ ತಪ್ಪಿಗೆ ಲಗ್ನವಾಗಲಿ ಎಂದು ಹಟ ಹಿಡಿದ. ಪ್ರಸಂಗ ವಿಪರೀತಕ್ಕೆ ಬಂದಾಗ ತಾನು ಮತ್ತೆ ನಾನಾನನ್ನು ಒಲಿಸಬೇಕಾಯಿತು.

ಪುತಳಾಬಾಯಿಗೆ ನೆನಪು ಅಸಹನೀಯವೆನಿಸಿತು; ಬೇಡವೆನಿಸಿತು. ಆದರೆ ನೆನಪು ಈಗ ಅವಳ ಅಂಕೆಯಲ್ಲಿರಲಿಲ್ಲ. ಮನಸ್ಸು, ಬುದ್ಧಿ, ಹೃದಯ ಎಲ್ಲವೂ ಹಿಡಿತ ತಪ್ಪಿದಂತೆ ವರ್ತಿಸಿದವು. ಬೇಡವೆನಿಸಿದ ಚಿತ್ರ ಮತ್ತೆ ಕಣ್ಣೆದಿರು ಕುಣಿಯತೊಡಗಿತು.

ಮಾಡಿದ ಪ್ರತಿಜ್ಞೆಯನ್ನು ತಾನು ಮುರಿಯಬೇಕಾಯಿತು. ನಾನಾ ಮತ್ತೊಮ್ಮೆ ತನ್ನವನಾದರೆ ಈ ಪ್ರಸಂಗದ ಕಹಿ ಅರ್ಧಕ್ಕರ್ಧ ಕಡಿಮೆಯಾದೀತೆಂದು ಒಳಗಿನ ಆಶೆ. ನಾನಾನ ಮನವನ್ನೊಲಿಸಬಹುದೆಂಬ ನಿರೀಕ್ಷೆ. ತನಗೆ ಜಡ್ಡಾಗಿದೆಯೆಂದು ಹೇಳಿ ಕಳಿಸಿದಳು. ನಾನಾ ಕೋಣೆಯೊಳಗೇ ಬಂದ. ರಾತ್ರಿಯಾಗಿತ್ತು. ನಿಜವಾಗಿಯೂ ಜಡ್ಡಾಗಿತ್ತೇ ತನಗೆ? ಹೌದು, ತಾನೆಷ್ಟು ನಿರ್ವಿಣ್ಣಳಾಗಿದ್ದಳು! ನಾನಾನ ಕರಸ್ಪರ್ಶ ಬೇಕಾಗಿತ್ತು ಆ ಬೇನೆಯನ್ನು ಗುಣಪಡಿಸಲು. ಅದೇ ರಾತ್ರಿ ನಾನಾ ಮತ್ತೊಮ್ಮೆ ತನ್ನವನಾದ!

ಆದರೆ ತಾನು ಎಣಿಸಿದ್ದಕ್ಕಿಂತ ಬೇರೆಯಾಗಿ ಎಲ್ಲವೂ ನಡೆಯಬೇಕೇ? ನಾನಾ ತನ್ನವನಾದ ನಿಜ. ಅದಕ್ಕೆಂದೇ ತನ್ನ ಮೇಲೆ ಅಷ್ಟು ಅಧಿಕಾರ ಆತ

ನಿಗೆ! ತಾನು ಯಾವ ಪ್ರಸಂಗದ ಲಾಭ ಪಡೆಯಬೇಕಾಗಿತ್ತೋ, ಆದರ ಲಾಭ ಸಿಕ್ಕದ್ದು ನಾನಾನಿಗೆ. ಅಂದಿನಿಂದ ಪ್ರತಿದಿನ ತನಗೆ ಪೀಡೆ ಪ್ರಾರಂಭವಾಯಿತು. ಚಿಮಣಾ ಬಸಿರಾದ ಸುದ್ದಿ ಬೈಲಿಗೆ ಬಂದಾಗ ಆವಳನ್ನು ಬಾಪೂಸಾಹೇಬ ಲಗ್ನ ವಾಗಲೇಬೇಕೆಂದು ನಾನಾ ಹಟ ಹಿಡಿದ. ತಾನೇನೋ ಸಮಾಧಾನ ಹೇಳಿದಳು. ನಾನಾನ ತಾಳ್ಮೆ ಮೀರಿತು.

ಈಗ ತನ್ನ ಮಗಳ ಬಾಳುವೆ ಹಾಳಾದದ್ದಕ್ಕೆ ಸಿಟ್ಟಿಗೆದ್ದ ನಾನಾ, ತಮ್ಮಿಬ್ಬರ ಸಂಬಂಧವನ್ನು ಬಯಲಿಗೆಳೆಯಬೇಕೆಂದಿದ್ದ. ಅವನಿಗೆ ಯಾರ ಲಕ್ಷ್ಯವೂ ಇರಲಿಲ್ಲ, ನಾಚಿಕೆಯೂ ಇರಲಿಲ್ಲ. ತಾನು, ತನ್ನ ಮಗಳು, ಇಬ್ಬರೇ ಏಕೆ ಹಾಳಾಗಬೇಕು? ಒಂದು ದೃಷ್ಟಿಯಿಂದ ಪುತಳಾ ಕೂಡ ಈ ಘೋರ ಪ್ರಕರಣಕ್ಕೆ ಕಾರಣಳಾಗಿ ದ್ದಳು. ಅವಳ ತಮ್ಮ ಒಪ್ಪಬೇಕು — ಅಲ್ಲ ಅವಳು ಅವನನ್ನು ಒಪ್ಪಿಸಬೇಕು; ಇಲ್ಲದಿದ್ದರೆ ಊರಲ್ಲೆಲ್ಲ ನಿರಂತರವಾದ ಮರ್ಯಾದೆಗೇಡನ್ನು ಅನುಭವಿಸಬೇಕು.

ಪುತಳಾಬಾಯಿಗೆ ಅದು ಅಸಹ್ಯವಾಗಿತ್ತು. ತಾನು ಪಾಪ ಮಾಡಿದ್ದೇನೋ ನಿಜ. ಆದರೆ ಇಲ್ಲಿಯ ವರೆಗೆ ಅದು ಮುಚ್ಚಿದ ಮುಷ್ಟಿಯಾಗಿತ್ತು. ಅದು ತೆರೆದರೆ ನೂರು ಅಪಮಾನ ಅವಳ ಬಾಗಿಲಿಗೆ ಬರುತ್ತಿದ್ದವು. ತಾನು ಇಲ್ಲಿಯ ವರೆಗೆ ಸಾಧ್ವಿ ಎನಿಸಿಕೊಂಡಿದ್ದಳು. ಜಾಗೀರಿನ ಪ್ರಜೆಗಳೆಲ್ಲ ಭಕ್ತಿಯಿಂದ ಬಾಗುತ್ತಿದ್ದರು. ಈ ರಹಸ್ಯ ಗೊತ್ತಾದರೆ ಪಾದಳ್ಳಿಯಲ್ಲಿ ಇರುವದೂ ಅಸಾಧ್ಯವಾದೀತು. ಪಾದಳ್ಳಿ ಯಲ್ಲಷ್ಟೇ ಏಕೆ, ಜಗತ್ತಿನಲ್ಲಿಯೇ ನಿಲ್ಲಲು ತನಗೆ ಎಡೆಯಿಲ್ಲ. ಪುತಳಾ ತಳಮಳಿ ಸಿದಳು. ಇದರಿಂದ ಪಾರಾಗಲು ಉಪಾಯವೇನು?

ನಾನಾನ ಪ್ರಾಣಹರಣ ಒಂದೇ ಉಪಾಯವೆನಿಸಿತು. ಅದೂ ಒಂದು ಪಾಪ ನಿಜ! ನಾಳೆ ಸತ್ತ ಮೇಲೆ ಘೋರವಾದ ನರಕಶಿಕ್ಷೆ ಕಾದಿದೆ, ಅದೂ ನಿಜ. ಆದರೆ ಪುತಳಾಬಾಯಿಗೆ ಈ ಮರ್ಯಾದೆಗೇಡಿನ, ಜನನಿಂದೆಯ ಜೀವಂತ ನರಕದೆದುರಿಗೆ ಅದು ಸಹ್ಯವೆನಿಸಿತು. ಇನ್ನೊಬ್ಬರ ಪಾಪದ ಬಗ್ಗೆ ಈ ಜನರೇಕೆ ಇಷ್ಟು ಆಸಕ್ತಿ ವಹಿಸುತ್ತಾರೆ? ಜೀವ ತಾನು ಮಾಡಿದ ಪಾಪವನ್ನು ಅನುಭವಿಸಿ, ತನಗೆ ತಾನೇ ಶಿಕ್ಷೆ ಮಾಡಿಕೊಂಡು ಅನುಭವಿಸುತ್ತದೆ. ಅಂದಮೇಲೆ ಇನ್ನೊಬ್ಬರಿಗೇಕೆ ಚಿಂತೆ? ಆದರೂ ಜನ ಕೇಳುವದಿಲ್ಲ.

ಅಂತಲೇ ಪುತಳಾಬಾಯಿ ಇನ್ನೊಂದು ಪಾಪಕ್ಕೂ ಸಿದ್ಧಳಾಗಿದ್ದಳು. ಅಂದು ರಾತ್ರಿ ನಾನಾನಿಗೆ ಊಟ ತಾನೇ ಕಳಿಸಿದಳು. ಬೆಳಗಾಗುವದರಲ್ಲಿ ನಾನಾ ಸತ್ತ.

ಅಲ್ಲಿಗೇ ಆ ಪ್ರಕರಣ ಮುಗಿದಿತ್ತು. ಬಾಳುವೆಗೇಡಾದರೂ ಚಿಮಣಾ ಪಡದಯ್ಯನ ಆಶ್ರಯದಲ್ಲಿದ್ದಳು. ಪುತಳಾಬಾಯಿಯ ಕಣ್ಣಿಗೆ ಕೂಡ ಬಿದ್ದಿರಲಿಲ್ಲ. ಈ ಕತೆಯ ಪ್ರತಿಯೊಂದು ವಿವರವೂ, ನಾನಾನ ದೇಹದೊಂದಿಗೇ ಉರಿದು ಬೂದಿಯಾಗಿತ್ತು. ಇನ್ನು ನಾಳೆ ತಾನು ಸತ್ತ ಮೇಲಲ್ಲವೇ ಅದಕ್ಕೆ ಉತ್ತರ ಕೊಡಬೇಕಾಗುವದು, ಎಂದು ನಿಶ್ಚಿಂತಳಾಗಿದ್ದಳು.

ಆದರೆ ಪಾಪ ರಕ್ತಬೀಜರಾಕ್ಷಸನಂತೆ; ಕೊಂದರೆ ಸಾಯಲಾರದ ವಸ್ತುವೆಂದರೆ ಅದೊಂದೇ. ನೂರು ನಾನಾಸಾಹೇಬರು ಸತ್ತರೂ ಪಾಪ ಸಾಯಲಾರದು. ತಾನು ಸಾಯುವತನಕ ಸಾಯಲಾರದು. ಈಗ ದಾದಾನ ಮೇಲಿನ ಆರೋಪದ ನೆವದಲ್ಲಿ ಮತ್ತೆ ಬದುಕಿ ಬಂದಿತು. ಪುತಳಾನ ಜೀವಕ್ಕೆ ಮತ್ತೊಂದು ಕೂಟಪ್ರಶ್ನೆ. ಉತ್ತರ ಹೇಳದೆ ಮುಂದೆ ಹೋಗುವಹಾಗಿಲ್ಲ. ಉತ್ತರ ಹೇಳಿದರೆ, ಹಿಂದಿನ ಪಾಪಕ್ಕೆ ಇನ್ನೊಂದು ಜೊತೆಯಾಗಿ ನಿಂತಿದೆ. ಒಂದಕ್ಕಿಂತ ಒಂದು ಘೋರವಾಗಿದೆ. ಆಗ ಕೇಳಿದಂತೆಯೇ ಈಗಲೂ ಕೇಳಬೇಕಾಗಿದೆ. ಇದಕ್ಕೇನು ಉಪಾಯ ? ಆಗ ನಾನಾನ ಮರಣ ಉಪಾಯವಾಗಿತ್ತು. ಈಗ?

ಹೌದು, ಈಗ ಅದೊಂದೇ ಉಪಾಯ ! ನಾನಾನ ದಾರಿಯೇ ತನ್ನ ದಾರಿಯಾಗಬೇಕಾಯಿತು. ಒಂದು ದೃಷ್ಟಿಯಿಂದ ಇಬ್ಬರ ಬಾಳಿನ ದೈವಗಳೂ ಒಂದಕ್ಕೊಂದು ತಳಕು ಹಾಕಿಕೊಂಡಿದ್ದವು; ಅವುಗಳಿಗೆ ಬಿಡುಗಡೆಯೇ ಇರಲಿಲ್ಲ. ಮೈ-ಮನಸ್ಸುಗಳು ಒಂದಕ್ಕೊಂದು ಗಾವುದ ದೂರದಲ್ಲಿದ್ದರೂ, ಜೀವ ಒಂದನ್ನೊಂದು ಕೂಡಿದ್ದವು. ಆ ಪಾಪದ ಸಂಗತಿ ಬೇಡವೆಂದು ತಾನು ಹಟ ತೊಟ್ಟಿದ್ದಳು. ಹಟ ನಿಂತಿತು. ಎಲ್ಲಿಯ ವರೆಗೆ? ಪುತಳಾನ ಜೀವದ ಕಾಮ ನಾನಾನ ಆಗು-ಹೋಗುಗಳನ್ನು ಕಣ್ಣಿಟ್ಟು ನೋಡುತ್ತಿತ್ತು. ಆ ದೃಷ್ಟಿ ತಾಕಿತೋ ಏನೋ, ರುಕಮಾಕಾಕೂ ಒಮ್ಮೆಲೆ ಸತ್ತಳು. ಅವಳು ಪುಣ್ಯವಂತಿ, ಅಂತೇ ತುಂಬಿದ ಮುತ್ತೈದೆಯಾಗಿ ಮರಣ ಹೊಂದಿದಳು. ನಾನಾ ಅನಾಥನಾದ. ತಾನು ವಾಡೆಯಲ್ಲಿ ಉಳಿದಿರಲು ಆಗ ಆಗ್ರಹ ಮಾಡಿದ್ದೇಕೆ? ನಾನಾ ಒಪ್ಪಲಿಲ್ಲ. ಮುಂದೆ ಮಗಳಿಗೆ ವರ ನೋಡಲೆಂದು ಹೋಗುವಾಗ ಚಿಮಣಾಳನ್ನು ತನ್ನೊಂದಿಗೆ ಬಿಟ್ಟು ಹೋದ.

ಚಿಮಣಾ ತನ್ನ ಮಗಳೆಂದೇ ತಾನು ಸ್ವೀಕರಿಸಿದಳು. ಉಳಿದವರಿಗೆ ಅದು ತನ್ನ ಔದಾರ್ಯದ ಹಾಗೂ ವಾತ್ಸಲ್ಯದ ಪರಮಾವಧಿಯೆಂದೆನಿಸಿತು. ಜಾಗೀರದಾರರ ಘನತೆಗೆ ತಕ್ಕಂತೆ ವರ್ತಿಸಿದಳೆಂದು ಕೀರ್ತಿ ಹಬ್ಬಿತು. ತನಗೇ ಗೊತ್ತು ಅದರ

ಅಂತರಂಗ. ನಾನಾನ ಮೇಲಿನ ಮೋಹವೇ ಅದಕ್ಕೆ ಕಾರಣವೆಂದು. ನಾನಾನ
ಮೇಲೆ ಉಪಕಾರದ ಹೊರೆಯನ್ನು ಹೊರಿಸಬೇಕಾಗಿತ್ತು; ತನಗೂ ವಾತ್ಸಲ್ಯವಿದೆ
ಎಂದು ತೋರಿಸಬೇಕಾಗಿತ್ತು; ರುಕಮಾಕಾಕೂ ಸತ್ತರೂ ತಾನಿದ್ದೇನಲ್ಲ ಎಂದು
ವ್ಯಂಗ್ಯವಾಗಿ ಸೂಚಿಸಬೇಕಾಗಿತ್ತು. ನಾನಾ ಮನೆಯಿಲ್ಲದೆ ಪರದೇಶಿಯಂತೆ ಅಡ್ಡಾಡ
ಬಾರದೆಂದು ಕರುಣೆಯನ್ನು ನೀಡಬೇಕಾಗಿತ್ತು. ಇನ್ನುಮೇಲೆ ಮಾತ್ರ ಸಂಸಾರ
ಒಂದುಗೂಡಿದಂತೆ ಎಂದು ಇನ್ನೊಮ್ಮೆ ಆಮಂತ್ರಿಸಬೇಕಾಗಿತ್ತು.

ವಾಡೆಯಲ್ಲಿ ಬಂದಿದ್ದರೂ ನಾನಾ ಹೊರಗಿನ ಕೋಣೆಯಲ್ಲಿಯೇ ಮಲಗು
ತ್ತಿದ್ದ. ಯಾವ ರೀತಿಯ ಸಲಿಗೆಗೂ ಅವಕಾಶವಿರಲಿಲ್ಲ. ನಾನಾ ಅನಾಸಕ್ತ
ನಾಗಿದ್ದ; ರುಕಮಾಕಾಕೂನ ಮರಣದಿಂದ ಸುಖಕ್ಕೆ ವಿಮುಖನಾಗಿದ್ದ. ಮೊದ
ಲಿನ ಆಸಕ್ತಿಯಾಗಲಿ ಉತ್ಸಾಹವಾಗಲಿ ಅವನಲ್ಲಿ ಈಗ ಉಳಿದಿರಲಿಲ್ಲ. ಆದರೆ
ಅದನ್ನು ನೋಡಿ ತನಗನಿಸಿದ್ದೇನು? ಈ ವೈರಾಗ್ಯವೆಲ್ಲ ಕ್ಷಣಿಕವೆಂದೇ ತನ್ನ ಭಾವನೆ.
ರಾಣೋಜಿರಾಯರು ಸತ್ತಮೇಲೆ ತನಗೂ ಈ ರೀತಿಯ ವೈರಾಗ್ಯ ಬಂದಿತ್ತಲ್ಲವೇ?
ಆ ವೈರಾಗ್ಯವೆಲ್ಲ ಎಲ್ಲಿ ಹಾರಿಹೋಯಿತು ? ನಾನಾನನ್ನು ನೋಡಿದಾಗೆಲ್ಲ
ಕರುಳಿಗೆ ಬರೆಯಿಟ್ಟಂತೆ ಏಕೆ ಅನುಭವವಾಗಬೇಕು ?

ಅದರ ಪರಿಣಾಮವೇ ಎರಡನೆಯ ಸಲದ ಪ್ರಸಂಗ. ಅದು ಇನ್ನೂ ಅನರ್ಥ
ಕಾರಿಯಾಯಿತು. ನಾನಾನನ್ನೇ ಬಲಿ ತೆಗೆದುಕೊಂಡಿತು. ಈಗ ಮಾಡಬೇಕಾದ
ದ್ದೇನು ?

ಪುತಳಾನ ಸ್ಮೃತಿಚಿತ್ರ ಇಲ್ಲಿಗೇ ನಿಂತಿತು. ತನ್ನ ಜೀವ ನಾನಾನ ಜೀವ
ವನ್ನು ತಬ್ಬಿಕೊಂಡಿದ್ದೇ ನಿಜವಾಗಿದ್ದರೆ, ತನ್ನ ಪ್ರೀತಿ ಹಾರ್ದಿಕವಾಗಿಯೇ ಇದ್ದರೆ
ನಾನಾನ ದಾರಿಯೇ ತನ್ನ ದಾರಿಯಾಗಬೇಕಲ್ಲವೇ ? ನಾನಾನನ್ನು ಬಲಿ ತೆಗೆದು
ಕೊಳ್ಳುವಾಗ ತನ್ನಲ್ಲಿ ಮೂಡಿದ ನಿಷ್ಠುರ ಸಂಕಲ್ಪಕ್ಕೆ ಈ ಅವ್ಯಾಜವಾದ ಪ್ರೀತಿಯೇ
ಕಾರಣವಾಗಿರಲಿಲ್ಲವೇ? ಉತ್ಕಟ ಪ್ರೀತಿಯ ದಾರುಣತೆಯೇ ಅಂಥದು. ತನ್ನನ್ನು
ಸ್ಥಿರವಾಗಿರಿಸಲು ಅದು ಜೀವನವನ್ನೇ ನುಂಗಬಲ್ಲದು. ಆದರೆ ಈ ಮಾತು ನಾನಾ
ನನ್ನು ಕೊಲ್ಲುವ ಮಟ್ಟಿಗೆ ಮಾತ್ರ ಸತ್ಯವಾಗಿರಲಾರದು. ದುರ್ಮರಣದ ಶಾಪ
ವನ್ನು ಹೊತ್ತುಕೊಂಡೇ ತಮ್ಮಿಬ್ಬರ ಜೀವಗಳೂ ಹುಟ್ಟಿದಾಗ ಇನ್ನು ಬೇರೆ
ವಿಚಾರಕ್ಕೆ ಆಸ್ಪದವೆಲ್ಲಿ? ಆ ಒಂದು ಕ್ಷಣದಲ್ಲಿ ಪುತಳಾನ ಕಣ್ಣಿಗೆ ತಮ್ಮಿಬ್ಬರ
ಜೀವಿತರಹಸ್ಯಗಳೂ ಗೋಚರವಾದವು. ಸಾವು ಈಗ ಭೀಕರವಾಗಿ ಕಾಣಲಿಲ್ಲ.

ಅದು ಹೊರಗಿನಿಂದ ಬಂದ ಒತ್ತಾಯವೂ ಆಗಿರಲಿಲ್ಲ. ಜೀವ ತನ್ನ ಉದ್ದೇಶವನ್ನು ಸಾವಿನಲ್ಲಿ ಸಫಲಗೊಳಿಸಲೇಬೇಕಾಗಿತ್ತು.

ಪುತಳಾ ಮೇಲೆದ್ದಳು. ನಸುಕಿನ ಐದು ಗಂಟೆಯಾಗಿರಬೇಕು. ಲೋಕವೆಲ್ಲ ಸುಖನಿದ್ರೆಯಲ್ಲಿತ್ತು. ಕೋಣೆಯ ಕಿಡಿಕಿ ತೆರೆದಾಗ ಮಂದಪ್ರಕಾಶ ಒಳಗೆ ಹರಡಿತು. ಗೋಡೆಯ ಮೇಲಿನ ರಾಹೋಜಿರಾಯರ ಚಿತ್ರಕ್ಕೆ ಕೈಮುಗಿದಳು. ಬೇಟೆಯಾಡಿದ ಒಂದು ದೊಡ್ಡ ಚಿರ್ಚನ್ನು ಅಡ್ಡ ಮಲಗಿಸಿ, ಕೈಯಲ್ಲಿ ಬಂದೂಕನ್ನು ಹಿಡಿದುಕೊಂಡು ರಾಹೋಜಿರಾಯರು ಫೋಟೋ ತೆಗೆಸಿಕೊಂಡಿದ್ದರು. ಅದನ್ನೇ ಕೆಲಹೊತ್ತು ಎವೆಯಿಕ್ಕದೆ ನೋಡಿದಳು.

ಸದ್ದು ಮಾಡದೆ ಪುತಳಾ ಹೊರಗೆ ಬಂದಳು. ಥಾಬೆಗೆ ಹೋಗಿ ಬಾಪೂ ಸಾಹೇಬನ ಕುದುರೆಯ ‘ಪಾಯಬಂದ ಕಾಡಣಿ’ಯನ್ನು ಬಿಚ್ಚಿಕೊಂಡು, ತಿರುಗಿ ಕೋಣೆಗೆ ಬಂದು ಬಾಗಿಲು ಹಾಕಿಕೊಂಡಳು.

ಕೋಳಿ ಕೂಗಿತು. ಗೋಪಾಲಕೃಷ್ಣನ ಗುಡಿಯಲ್ಲಿಯ ಗಂಟೆಗಳು ಬಾರಿಸಿದವು. ಬೀಸುವಕಲ್ಲಿನ ಮೇಲೆ ಹಾಡುವ ಗರತಿಯರ ದನಿ ಇಂಪಾಗಿ ಕೇಳಿಸಿತು. ಬದುಕು ಪ್ರಾರಂಭವಾಗಿತ್ತು. ಬೆಳಗಾಯಿತೆಂದರೆ ಯಾವ ಬದುಕು ನಿಲ್ಲುತ್ತದೆ? ಯಮುನಾ ಎದ್ದು, ಪುತಳಾಬಾಯಿ ಹೇಳಿದ್ದನ್ನೂ ಮರೆತು, ರೂಢಿವಶದಿಂದ ಪುತಳಾಬಾಯಿಯ ಕೋಣೆಯ ಬಾಗಿಲು ತಟ್ಟಿದಳು. “ನಸುಕು ಹರಿಯುತ್ತಲೇ ಬಂದು ಎಬ್ಬಿಸಬೇಡಾ” ಎಂದು ಅವಳು ಹೇಳಿದ ಮಾತು ನೆನಪಾಯಿತು. ಬಾಗಿಲು ತೆರೆಯದೆ ಹಾಗೇ ನೀರುಮನೆಗೆ ಸಾಗಿದಳು.

:: ೧೨ ::

ದಾದಾನ ವಿಷಯದಲ್ಲಿ ಫೌಜದಾರರು ತಳೆದ ತೀವ್ರವಾದ ದ್ವೇಷಪ್ರವೃತ್ತಿ ಯನ್ನು ಕಂಡು ಪಡದಯ್ಯನವರಿಗೆ ಹಿಗ್ಗೆನಿಸಿತ್ತು. ನಾನಾನ ಕೊಲೆಯ ಆರೋಪ ವನ್ನು ದಾದಾನ ಮೇಲೆ ಇಟ್ಟು ಅವನನ್ನು ಗಲ್ಲಿಗೇರಿಸುವಂತೆ ಪ್ರಕರಣವನ್ನು ರಂಗಾ ಯಿಸಲು ಸ್ವತಃ ಫೌಜದಾರರೇ ಆಸ್ಥೆ ವಹಿಸಿದ್ದರು. ದಾದಾ ತಂದು ಕೊಟ್ಟ ವಿಷ ವನ್ನು ತಾನು ಹಾಕಿದ್ದಾಗಿ ಮಾಫಿ ಸಾಕ್ಷಿದಾರಳಾದ ಯಮುನಾ ಸಾಕ್ಷಿ ಹೇಳು ತ್ತಾಳೆ. ನಾನಾ ವಿಷಪ್ರಯೋಗದಿಂದ ಮರಣ ಹೊಂದಿದ್ದರೂ, ದಾದಾನನ್ನು ಉಳಿ ಸಲು ಗೌಡರು ಮರಣರಜಿಸ್ಟರದಲ್ಲಿ ಮರಣದ ಕಾರಣ ಹೃದಯವಿಕಾರವೆಂದು ಖೊಟ್ಟಿ ಕಾರಣವನ್ನು ಬರೆದಿದ್ದಾರೆ; ಗುನ್ಹೆ ಮುಳುಗಿಸಿದ್ದಕ್ಕೆ ಅವರು ಜೇಲಿಗೆ ಹೋಗುವದು ನಿಶ್ಚಿತ. ಇದೇ ಉತ್ಸಾಹದಲ್ಲಿ ಪಡದಯ್ಯನವರು ವಾಡೆಯ ವರೆಗೆ ಬಂದು ಯಮುನಾ ಸಾಕ್ಷಿಹೇಳುವಂತೆ ಪ್ರೇರೇಪಿಸಲು ಪುತಳಾಬಾಯಿಗೆ ತಿಳಿಸಿಡಲು ಬಾಪೂಸಾಹೇಬನಿಗೆ ಹೇಳಿ ಮಠಕ್ಕೆ ಬಂದರು. ಆಗ ರಾತ್ರಿ ಹನ್ನೆರಡಾಗಿತ್ತು. ಅವರ ಶಿಷ್ಯಪರಿವಾರ ಮಠದಲ್ಲಿ ದಾರಿಕಾಯುತ್ತ ಕುಳಿತಿತ್ತು.

ಪಡದಯ್ಯನವರು ಅವರ ಮುಂದೆ ಉಬ್ಬಿನಲ್ಲಿ "ದಾದಾನ ಗಳಿಗಿ-ಬಟ್ಟಲ ತುಂಬಿತೆಂತ ತಿಳೀರೆಲೇ! ಫಕರುದ್ದೀನ ಫೌಜದಾರನ ಮುಂದ ಅದ್ಯಾವ ಮಗಾ ಎದಿ ಸೆಟಿಸಿ ಬದಕಾಂವ? ಇನ್ನ ತೊಗೋ, ಆ ಗೌಡ, ಆ ಪಂಚರು, ಆ ದಾದಾ, ಎಲ್ಲಾ ಮಕ್ಕಳು ಮಣ್ಣು ಮುಕ್ಕತಾರ. ನನ್ನ ಕರಾಮತಿ ನೋಡೀರಂತರಲೇ! ಮಕ್ಕಳ್ರ್ಯಾ" ಎಂದು ನಾಲಿಗೆ ಸಡಿಲುಬಿಟ್ಟರು.

ಮಠದ ಒಂದು ಮೂಲೆಯಲ್ಲಿ ಗಾಂಜೀ ಮಿದ್ದುತ್ತ ತಳವಾರ ಕೆಂಚ ಕುಳಿ ತಿದ್ದ. ಅವನೊಬ್ಬ ವಿಕೃತ ವಿರಾಗಿ, ವೇದಾಂತಿಯೂ ಎನ್ನಬಹುದು. ಇಪ್ಪತ್ತು- ನಾಲ್ಕು ತಾಸೂ ಮಠದ ಅದೇ ಮೂಲೆಯಲ್ಲಿ ಕೂಡುವದು ಅವನ ವಾಡಿಕೆ. ಅವನಿಗಿದ್ದ ಆಳವಾದ ಲೋಕಾನುಭವ ಆ ಊರಲ್ಲಿ ಬಾಳಾಚಾರ್ಯರಿಗೇ ಇರಲಿಲ್ಲ. ಹಗಲೂ ರಾತ್ರಿ ಗಾಂಜೀ ಮಿದ್ದುತ್ತ, ಕುಡಿಯುತ್ತ ಮಾತಿಗೆ ಮೊದಲು ಮಾಡಿದ

ಸೆಂಪರೆ ಅವನನ್ನು ತಡೆಯುವದೇ ಅಸಾಧ್ಯವಾಗುತ್ತಿತ್ತು. ಈಗ ದಾದಾನ ಪ್ಯೈ-ಮೇಲೆ ಗಂಡಾಂತರ ಬಂದದ್ದನ್ನು ಕೇಳಿ ಅವನಿಗೂ ಸಂಕಟವಾಗಿತ್ತು.

"ಕರೇವಂದ್ರೊ ದಾದಾನ ವ್ಯಾಗ ಖಟ್ಲಿ ಜಡೂತಾರೇನ್ರಿ ಬುದ್ಧೀ?" ಎಂದು ಕೇಳಿದ.

"ಸುಳ್ಳ ಹೇಳಾಕ ನಾ ಏನು ಸುಡಗಾಡಸಿದ್ಧ ಅಂತ ತಿಳದೀ ಏನಲೇ ಕೆಂಚಾ?" ಪಡದಯ್ಯನವರು ಚೇಷ್ಟೆಯ ದನಿಯಲ್ಲಿ ನುಡಿದರು.

"ಹೀಂಗ್ಯಾಕ ಅಂತೀರಿ ಬುದ್ಧೀ? ಅಬ್ಬರಲೆ ಬಂದದ್ದು ಮಳೀ ಅಲ್ಲಾ, ಗಬ್ಬ ಆಗಪ್ದು ದನಾ ಅಲ್ಲ, ಒಬ್ಬರ ಮುಂದ ಗುಟ್ಟ ಹೇಳಾವಾ ಅಮಲ್ದಾರ ಅಲ್ಲಾ ಅಂತಾರು. ಆ ಮಾತ ನೆಪ್ಪಾತ ಯಪ್ಪಾ. ಕೈ ಬೆಚ್ಚಗ ಆದರ ಬಾಯಿಗೆ ಕೀಲಿ ಬಿದ್ಹಾಂಗ ಈ ಅಪಗೋಳದು. ಮುಂಜಾನೆ ನೋಡಿದಿರಿಲ್ಲೋ, ಆ ಸಂಗ್ಯಾನ್ನ ಹಿಡ ದೇನ ಕುಂದರಿಸಿದಾ; ದುಡ್ಡು ಕೈಗೆ ಬರಾಣಾ ಹ್ಯಾಗ ಹೇಳದ ಕೇಳದ ಬಿಟ್ಟಾ. ನಾಲ್ಕು ದುಡ್ಡ ಹಿರೀಲಾಕ ಬಾಯಿ ಸಡ್ಲ ಬಿಟ್ಟರಾಕಿಲ್ಲ ಬುದ್ಧೀ?" ಕೆಂಚ ಮತ್ತೆ ವಾದಿಸಿದ.

ಕೆಂಚನ ಮಾತಿನಲ್ಲಿ ಹುರುಳಿಲ್ಲವೆಂದು ಹೇಳುವದು ಕಠಿಣವಿತ್ತು. ತಲೆ ಹಣ್ಣಾದ ಕೆಂಚನಿಗೆ ಬಂದಷ್ಟು ಅಧಿಕಾರಿಗಳ ಸಂಪರ್ಕ ಪಡದಪ್ಪನವರಿಗೇ ಇರಲಿಲ್ಲ. ಕಳ್ಳ ಭಟ್ಟಿಸೆರೆ ಹಿಡಿದ ಅಬಕಾರಿ ಇನ್‌ಸ್ಪೆಕ್ಟರರಿಗೆ ಮಾದರ ಗಂಗಿಯ ಸ್ನೇಹ ಮಾಡಿಸಿ ಕೊಟ್ಟು, ಅವನ ಮಾವನಾಗಿ ಸೆರೆಯ ಭಟ್ಟಿಯನ್ನು ನಿರಾತಂಕವಾಗಿ ನಡೆಸಿದ ಕತೆಯನ್ನು ಕೇಳಿ ನಗದವರೇ ಇರಲಿಲ್ಲ. ಇದಕ್ಕಿಂತ ಮೊದಲು ಫೌಜದಾರನಾಗಿದ್ದ ಮಾರುತಿರಾಯನಿಗೆ ಬ್ಯಾಲದ ತೊಗಟೆಯಿಂದ ತಯಾರಿಸಿದ ಸೆರೆ ಕೊಟ್ಟು ಕಳವಿನ ಮಾಲು ಜಪ್ತಮಾಡಿದ್ದು ಮರಳಿ ಕೊಡಲಿಕ್ಕೆಹಚ್ಚಿದ್ದು; ಕಳವಿನ ಮಾಲು ಕೊಂಡ ಆ ಹೊಲೆಯರ ಅಬುಡಮುತ್ತೈದೆ ಕಾಶಿಗೆ ಫೌಜದಾರರು ಸೀರೆ ಕೊಳ್ಳಲು ತಪ್ಪ ಟೊಂಕದಿಂದ ರೂಪಾಯಿ ಬಿಚ್ಚಿ ಕೊಟ್ಟದ್ದು ಕೇಳಿ, ಎಲ್ಲರೂ ಆಶ್ಚರ್ಯ ಪಟ್ಟಿದ್ದರು. ಒಂದು ದೃಷ್ಟಿಯಿಂದ ಕೆಂಚ ಸರಕಾರೀ ಅಧಿಕಾರಿಗಳ ಪಾಪಕೃತಿಗಳ ಚಿತ್ರಗುಪ್ತನಾಗಿದ್ದ. ಈ ಪಾಪದ ನಿಕಟ ಪರಿಚಯದಿಂದಲೇ ಅವನು ವೇದಾಂತಿಯಾಗಿದ್ದ.

ಫಕರುದ್ದೀನನು ದುಡ್ಡಿನ ಆಸೆಗೆ ಬಲಿಬೀಳದಂಥ ಕಾಯದೇಶೀರ ಅಧಿಕಾರಿಗಳೂ ಆಗಿರಲಿಲ್ಲ. ಕಾಯದೆಯು ಕತ್ತರಿಯಲ್ಲಿ ಸಿಕ್ಕುಬಿದ್ದರೆ ಗೌಡರು,

ಸಾಹೇಬರಿಗೆ ಕನಕಾಭಿಷೇಕ ಮಾಡಿಸಲೂ ಹಿಂಜರಿಯುವವರಲ್ಲ. ಹಾಗಾದರೆ ಫೌಜದಾರರಿಗೆ ಲಂಚಕೊಡುವ ವಾಸನೆ ಕೆಂಚನಿಗೇನಾದರೂ ಬಡಿದಿರಬಹುದೇ? ಇಲ್ಲದಿದ್ದರೆ ಕೆಂಚ ಹೀಗೆ ಮಾತಾಡುತ್ತಿದ್ದನೇ? ಪಡದಯ್ಯನವರಿಗೆ ಸಂಶಯ ಬಂತು. ಏನಾದರೂ ಮಾಡಿ ಇದನ್ನು ಹೊರಗೆಡವಲೇಬೇಕೆಂದು ಹಟಹಿಡಿದರು.

"ಹೆಣ್ಣು, ಹೊನ್ನು, ಮಣ್ಣು ಇವು ಮೂರೂ ಶಿವನ ಮಾಯ. ಅದಕ್ಕ ಸಿದ್ಧರೂ ಶರಣರೂ ನಾಯಿ ಆದ ಕತಿ ಕೇಳೂ ಮುಂದ, ದುಡ್ಡಿಗೆ ಫೌಜದಾರ ಬಾಯಿ ಬಿಡತಾನ ಅಂತ ಏನ ಹೇಳತಿ ಕೆಂಚಾ? ಆದರೂ, ದುಡ್ಡು ತಿಂದರೂ ಕಣ್ಣಿಟ್ಟ ಬ್ಯಾಟೆ ಬಲ್ಯಾಗ ಹಾಕದ್ದ ಬಿಡೂ ಮನಶ್ಯಾ ಈ ಫೌಜದಾರ ಅಲ್ಲ. ಅದಕ್ಕs ದಾದಾನ ಕತಿ ಮುಗಿಸಿಬಿಡತಾನಂತ ಹೇಳಿದ್ದು" ಪಡದಯ್ಯನವರು ಉಪದೇಶ ಮಾಡುವ ರೀತಿಯಲ್ಲಿ ನುಡಿದರು.

ಮಿದ್ದಿದ ಗಾಂಜಿಯನ್ನು ಚಿಲುಮೆಯಲ್ಲಿ ಹಾಕಿ ಮೇಲೆ ಒಣತಂಬಾಕಿನ ಪುಡಿಯನ್ನುದುರಿಸುತ್ತ ಸಜ್ಜುಗೊಳಿಸುವದರಲ್ಲಿ ತೊಡಗಿದ್ದ ಕೆಂಚನಿಗೆ ಪಡ ದಯ್ಯನವರ ಮಾತಿನ ಕಡೆಗೆ ಲಕ್ಷ್ಯವೇ ಇರಲಿಲ್ಲ. ಕೊನೆಯ ವಾಕ್ಯ ಮಾತ್ರ ಅವನ ಕಿವಿಗೆ ಬಿದ್ದಿತ್ತು. ಅದು ಸರಿಯಲ್ಲ ಎಂದು ಗೋಣು ಅಲ್ಲಾಡಿಸಿ "ಹಿಡಿದ ಹಟಾ ನಡಸೂದಕ್ಕೂ ಎದೀ ಬೇಕ ಬುದ್ಧೀ! ಇವು ಡಿರೇಸ್ ಹಾಕಿ ಟಿಸ್ ಪಿಸ್ ಅಂತ ಬೆದರಿಸಿಗೋತ ತಿರಗತಾವು. ಕೈಯಾಗ ಅಮಲ ಇರತೈತೆಂತ ನಾವು ಡೊಗ್ಗಿ ಸಲಾಮು ಹೊಡೀತೇವು. ಆದರ ಧೈರೆ ಇಂತಾ ಜನದಾಗ ನೀವು ಕೇಳಬ್ಯಾಡ್ರಿ. ನಿಮಗ ಹೇಳತೇನು, ಸೊಟ್ಟ ಮಾದರ ಚೆನ್ನಾ ಇಂತಾ ಫೌಜದಾರನ ನೀರ ಇಳಿಸಿ ಬಿಟ್ಟ ಇವತ್ತ." ಎಂದು ಮಾತನ್ನು ಅರ್ಧಕ್ಕೇ ನಿಲ್ಲಿಸಿ, ತೆಂಗಿನ ಜುಟ್ಟದ ಕೆಂಡ ವನ್ನು ಚಿಲುಮೆಯ ಮೇಲಿಡುವದರಲ್ಲಿ ಮಗ್ನನಾದ.

ಕೆಂಚನದೊಂದು ಕೆಟ್ಟ ಚಟ. ಯಾವುದಾದರೊಂದು ಕತೆಯನ್ನು ಪ್ರಾರಂ ಭಿಸಿ ಅರ್ಧಕ್ಕೇ ನಿಲ್ಲಿಸುವದು. ಜನರು ಆತುರದಿಂದ ಕುದಿಯುತ್ತಿದ್ದರೇ ಅವನಿಗೆ ತೃಪ್ತಿ. ಈಗಲೂ ಅದೇ ಹಾಡು. ಚಿಲುಮೆಯು ಒದ್ದೆಯ ಬಟ್ಟೆಯನ್ನು ಧರಿಸಿ ಪಡದಪ್ಪನವರ ಹಸ್ತವನ್ನು ಸೇರಿತು. ಅವರಿಗೆ ಮಾದರ ಚನ್ನನ ಕತೆಯನ್ನು ಕೇಳುವ ಆತುರ. ಅವರು ಚಿಲುಮೆಯ ಚುಂಬನವಿಧಿಯನ್ನು ಮುಗಿಸದೆ ಅದು ಶಿಷ್ಯಗಣದ ಕೈಸೇರುವಂತಿರಲಿಲ್ಲ. ಉಳಿದೆಲ್ಲ ಶಿಷ್ಯರು ಚಿಲುಮೆಗಾಗಿ ಆತುರದಿಂದ ನುಡುತ್ತಿದ್ದರು. ಪಡದಯ್ಯನವರು 'ಓಂ ಶಿವ' ಎಂದು ಚಿಲುಮೆಗೆ ನಮಸ್ಕರಿಸಿ,

ಅವರ ಸತ್ವವನ್ನು ಬಾಯಿಂದ ಹೀರಿದರು. ಚಿಲುಮೆಯ ಮೇಲೆ ಫಕ್ಕನೆ ಉರಿ ಯೆದ್ದಿತು. ಅವರು ಜಗ್ಗಿದ್ದು ಆ ಜ್ವಾಲೆಯನ್ನೋ, ಹೊಗೆಯನ್ನೋ ಅದನ್ನು ತಿಳಿ ಯುವ ಮಾರ್ಗವೇ ಇರಲಿಲ್ಲ. ಯಾಕಂದರೆ ಚಿಲುಮೆಯನ್ನು ಕೆಂಚನ ಕೈಗಿತ್ತು ಧ್ಯಾನಮುದ್ರೆಯಿಂದ ಕಣ್ಣುಮುಚ್ಚಿದರು. ಬಾಯಿಂದ ಹೊಗೆಯೇಕೆ, ಉಸಿರುಕೂಡ ಬರಲಿಲ್ಲ. ಈ ಧೂಮುಸ್ತಂಭನ ವಿದ್ಯೆ, ಈ ಶ್ವಾಸನಿರೋಧ ಅವರ ದಿನ ನಿತ್ಯದ ಲೀಲೆಗಳಲ್ಲೊಂದಾಗಿತ್ತು.

ಮುಂದೆ ನಾಲ್ಕೈದು ನಿಮಿಷಗಳಾದ ನಂತರ ಪಡದಯ್ಯನವರು, ತಮ್ಮ ಸುಷುಪ್ತಾವಸ್ಥೆಯಿಂದ ಜಾಗೃತಿಗೆ ಬಂದರು. ಉಸಿರು ಬಿಟ್ಟೊಡನೆಯೇ, ಅದನ್ನು ಅನುಸರಿಸಿ ನುಗ್ಗಿದ ಹೊಗೆ ದಿಙ್ಮಂಡಲವನ್ನೇ ವ್ಯಾಪಿಸಿತು. ಆ ಧೂಮವಲಯದಲ್ಲಿ, ಅವರ ಕೆಂಪುಕಣ್ಣು, ಉರಿಗಣ್ಣುಗಳಂತೆ ಕಂಡವು. ಆ ಪರಿವೇಷದಲ್ಲಿ ಪಡದಯ್ಯ ನವರು ಮನ್ಮಥನನ್ನು ಸುಡಲು ಕಣ್ಣುತೆರೆದ ಸಾಕ್ಷಾತ್ ವ್ಯೋಮಕೇಶನಂತೆ ಕಂಡರು.

"ಕೆಂಚಾ, ಮಾದರ ಚೆನ್ನ್ಯಾ ಫೌಜದಾರರ್ನ ಭೆಟ್ಟಿಯಾಗಿದ್ನೇನಲೇ?" ಧೂಮ್ರಾವರ್ತುಲದಿಂದ ಅಶರೀರವಾಣಿ ಕೇಳಬಂತು.

ಕೆಂಚನೂ ತಪೋಮಗ್ನನಾಗಿದ್ದ. ಈ ಮಾತಿಗೆ ಒಮ್ಮೆಲೇ ಅವನ ಸಮಾಧಿ ಭಂಗವಾದಂತಾಗಿ, "ಹೌಂದು ಬುದ್ಧೀ, ಭೆಟ್ಟಿಯಾಗಿದ್ದ. ಅವರ ನೀರಽ ಇಳಿಸಿ ಬಿಟ್ಟ." ಎಂದು ಉತ್ತರಿಸಿದ.

"ಅದೇನ್ ಹಕೀಕತ ಹೇಳಬಾರದಽ? ಸಿದ್ಧಪತ್ರೀ ಸೇವಾ ಮಾಡೀದಿ ಅಂತ ಕಣ್ಣುಮುಚ್ಚಬ್ಯಾಡ."

"ಕಣ್ಣುಮುಚ್ಚಲಾಕ ಹೊಸದಾಗಿ ಏನ್ ಬುದ್ಧೀ, ಈ ಚಿಮ್ಮಾತಾಯಿ ಸಂಗತೀ ಹಿಡದದ್ದು. ಈ ಯವ್ವನ ಸೇವಾಮಾಡಾಕ ಹತ್ತಿ ಯಾಡ್ಡಿಪ್ಪತ್ತು ವರ್ಷ ಮಿಕ್ಕಿದ್ದೀತು" ಕೆಂಚ ಪ್ರೀತಿಯ ಆವೇಗದಲ್ಲಿ ಚಿಲುಮೆಯ ತ್ರಾಣವನ್ನೇ ಹೀರು ವಂತೆ ಮುದ್ದುಕೊಟ್ಟ. ಮತ್ತೆ ಉರಿ, ಮತ್ತೆ ಹೊಗೆ. "ಇವೆಲ್ಲಾ ಕುಂತಾವು ನೋಡ್ರಿ ಬುದ್ಧೀ. ಯಂಕ್ಯಾ, ಸಿಂಗ್ಯಾ, ಯಲ್ಯಾ, ಚಿಲಮಿ ಕೈಯಾಗ ಹಿಡೂ ತಾವೋ ಇಲ್ಲೋ, ಕಣ್ಣಽ ಮುಚ್ಚತಾವು. ಇಲ್ಲಾಂದ್ರ ಬೇಸೂರ ಹಾಡಿಕೊಂತ ತೇಲ ಗಣ್ಣು, ಮೇಲಗಣ್ಣು ಹಾಕತಾವು. ಒಂದು ಜುರಿ ಸೇದಿದರ ಪರಪಂಚ ಎಲ್ಲಾ ಪಟಂಗಳ ಮಾಯಾಗಿ, ಪರಮಾತ್ಮ ಕಾಣಬೇಕು ಬುದ್ಧೀ. ಅದು ಸೇದಾಣಾ.

ಜೀವಮಾನೆಲ್ಲ ಇದರ ಸೇವಾದಾಗs ಕಳದೀನಿ ಬುದ್ಧಿ,ಅಂತ ಹತ್ತಿಲ್ಲ ಈ ಯವ್ವಂದು ನನಗ. ಇವರೆಲ್ಲಾರಂಪಾಗ, ಗಾಂಜೀ ಆಸೇಕ್ಕ ಬಾದು ಮಟಕ್ಕನs ಮನೀ ಸೇರೋ ಮನಸ್ಯಾ ಅಲ್ಲ ನಾ. ಮಟದಾಗ ಇದ್ದು, ಇಲ್ಲೇ ಬದಕಾವ್, ಇಲ್ಲೇ ಸಾಯಾವ" ಕೆಂಚನ ದನಿ ಕಾವೇರಿತ್ತು.

"ಮನೀ ಬಿಟ್ಟ ಮಟಾ ಸೇರಿದಮ್ಯಾಗ ಯಾರ ಉಪಕಾರಕ್ಕ ಇಲ್ಲಿ ಬೀಳ ತೀಲೇ ?" ರಡ್ಡೇರ ಯಂಕ ತಡೆಯಲಾರದೆ ನುಡಿದನು.

"ಒಂದು ಬಾಟ್ಲಿ ಬಡದು, ಒಂದೊಂದು ಪರಟಿ ತೀರ್ತಾ (ತೀರ್ಥ) ಹಾಕಿ ದರ, ಬಾಯಿಮುಚಿಗೊಂಡು ಬೀಳತಾವು ಬುದ್ಧೀ. ಮನೀ ಬಿಟ್ಟ ಮಟಾ ಸೇರಿದೆ, ಅಂತೀಯಲ್ಲಲೇ ಯಂಕ್ಯಾ? ಸೇರಬಾರದs, ನೋಡತೀನಿ ಧೈರೇ? ತೀರತಾ ಕುಡೂದು ಬಿಡೂ, ಅಂದ ಹೇಣತೀನ್ನ ತಲಿ ಒಡದು, ಆಕಿ ಅತಗೊಂತ ಮಂದೀನ ಕೂಡಿಸಿದರ, ಹಲ್ಲ ಮುರಿದೇನ ಅಂತ ಹೇಳಿ, ಹಲ್ಲ ಮುರದs ತೋರಿಸಿದ ಬಂಟ್ನ ನಾ. ಯಾರದೀರಲೆ ನನ್ನ ಸರಿಗಟ್ಟಾಂವಾ? ಸರಿದೊಡ್ಡ ಮಗಾ ಹೊಲಕ್ಕ ಹೋಗ ಹಿರ್‍ಯಾ ಅಂದರ ಹೊಲಾನs ಮಾರಿಬಿಟ್ಟಿ. ಕೈಯಾಗಿನ ಚಿಲುಮಿ ಬಿಡೂದು ಆಗೂ ದುಲ್ಲಾ, ಯಾಕ ಹೇಳತೀರಲೇ? ದನಾಕರಾ, ಕಾಳು ಕಡಿ ತುಂಬಿದ ಮನಿ ಬಿಟ ಗೊಟ್ಟ ಮಟಾ ಸೇರೂ ಧೈರೇ ಯಾರಿಗೈತಿ ಮುಂದೆ ಬರ್‍ರಿ. ಹೇಳಿ ಕೇಳಿ ವ್ಯಸನ ಬಾಜೀ ಜನಾ, ನಿಮಗೆಲ್ಲೆ ಧೈರೇ?" ಎಂದು ಲೋಕವನ್ನೇ ಮೂದಲಿಸಿದ ಕೆಂಚ.

ಕೆಂಚನ ಈ ಆವೇಶವನ್ನಿಳಿಸುವ ಗುಟ್ಟು ಪಡದಯ್ಯನವರಿಗೇ ಗೊತ್ತು. ಮೊದಲಾಗಿದ್ದರೆ ಈ ವಾದವಿವಾದಕ್ಕೆ ಪುಟ ಕೊಟ್ಟು ತಾಸುಗಟ್ಟಲೆ ಕೇಳಬಹು ದಾಗಿತ್ತು. ಆದರೆ ಚೆನ್ನನ ಕತೆಯನ್ನು ಕೇಳುವ ಆತುರದಲ್ಲಿ ಅವರಿದ್ದರು. ಒಳಗೆ ಹೋಗಿ 'ತೀರ್ಥ' ಕಾಯ್ದಿದ್ದರೆ, ತಂದು ಕೊಡಲು ಅವನಿಗೇ ಆಜ್ಞೆಮಾಡಿದರು.

ಕೆಂಚನ ಆವೇಶ ತಟ್ಟನೆ ಇಳಿಯಿತು. ಎದ್ದು ಒಳಗೆ ಹೋಗಿ ಎರಡು ಬಾಟ್ಲಿಗಳನ್ನು ತಂದು, ಒಂದನ್ನು ಪಡದಯ್ಯನವರೆದುರಿಗಿಟ್ಟು, ಇನ್ನೊಂದನ್ನು ಪರಟಿಗೆ ಸುರುವಿ "ಮಾದರ ಚನ್ನ್ಯಾನೂ ಬಲ ಬೆರಕಿ ನೋಡ ಬುದ್ಧೀ. ದನಾ ತಿಂದು ಶಗಣ್ಯಾಗ ಬಿಟ್ಟ ಜ್ವಾಳಾ ತಂದು ಫೌಜದಾರರ ಮುಂದಿಟ್ಟ ಮಜೇನ ಮಾಡಿದ." ಎಂದು ಹೇಳತೊಡಗಿದ.

ಸೆರೆತುಂಬಿದ ಪರಟಿಯನ್ನು ಕೈಚಾಚಿ ಎತ್ತಿದ ಬಾಳಾಚಾರ್ಯರ ಅಣ್ಣನ ಮಗ ಗೋಪಾಲಾಚಾರಿ "ಇಂಥಾ ಕೆಡಗಾಲದಾಗ, ಅದ್ಯಾರಪಾ ಸೆಗಣೀಯೊಳಗ್ಸ ಕಾಳ

ಬೀಳೋವಷ್ಟು ದನಕ್ಕ ಕಾಳು ಹಾಕಾವರು?" ಎಂದು ವ್ಯಂಗ್ಯವಾಗಿ ನುಡಿದ.

ತಾನು ಹೇಳಿದ್ದು ಸುಳ್ಳೆಂದು ವಾದಿಸಿದರೆ ಕೆಂಚನಿಗೆ ಬ್ರಹ್ಮಾಂಡ ಸಿಟ್ಟು ಬರುತ್ತಿತ್ತು. ಗೋಪಾಲಾಚಾರಿಯನ್ನು ಕಿಡಿಗಣ್ಣಿನಿಂದಲೇ ನೋಡುತ್ತ ನುಡಿದ:

"ಊರ ತುಂಬ ಹೊಲಾ ಇದ್ದರೂ, ಇನ್ನೊಬ್ಬರ ಕಡಿಂದ ಕಾಳು ಕಡಾ ತಂದು, ಒಲೀ ಹಚ್ಚೋ ಹಾರೂರ್ ಊರಾಗ ಇರೂದುಲ್ಲ ಆಚಾರೆಪ್ಪ. ಹಿಡದ ಬಡದರ ಮೂರುವರಸ ಸಾಲೂವೋಟು ಕಾಳು ಕೊಡತಾನ ರೈತ. ಭೂಮಿ ಇದ್ದರೂ ದುಡೀಲಾರದ ಉಪಾಧ್ಯೇರಟ್ ಭೂಮಿ ಕರಸಾಲ ಬಿದ್ದಾಗ ಒದ್ದಾಡ್ಯಡ ತಾವು. ಹಿಂಡೋ ಎಮ್ಮಿ, ಹೂಡೋ ಎತ್ತು ಕಾಳು ತಿನದಿದ್ದರ, ಮುಂದಿನ ವರಸ ಕೂರಿಗಿ ಮನಶ್ಯಾರ ಜಗ್ಗೂ ಪಾಳೀ ಬಂದೀತು." ಎಂದು ಬಡಬಡಿಸಿ, ಗೋಪಾಲಾಚಾರಿಯನ್ನು ಸುಮ್ಮಗಿರಿಸಿದ.

"ಮುಂಪೇನಾತು ಹೇಳಬಾರದ್ಯ? ಸುಮಾಕ್ ಮಂದೀ ಮಾತ ಕೇಳಿಕೊಂತ, ಇರಕಳದನದ್ದಾಂಗಅಡ್ಡಹಾಯತೀಯಲ್ಲಲೇ" ಪಡದಯ್ಯನವರು ಆಜ್ಞೆ ಮಾಡಿದರು.

"ಹೇಳತೀನ್ರಿ ಬುದ್ಧಿ, ಹೇಳತೀನಿ. ಫೌಜದಾರರು ಬೈಲಕಡೆಗೆ ಹೋಗಿ ಚಾವಡಿ ಕಟ್ಟಿಗೆ ಬರತಿದ್ದರರೀ. ದೇವರ ಪಾಲಕಿ ಹೊಂಟಾಗ ಬಗತರು ಅಡ್ಡ ಬೀಳತಾರಲ್ಲ್ರಿ, ಹಾಗ, ಚನ್ನ್ಯಾ ಬಂದು ಅಡ್ಡ ಬಿದ್ದ. ಅವನ ತಂಗಿ–ಆ ದೇವರಿಗೆ ಬಿಟ್ಟ ಗಯ್ಯಾಳಿ ಮಲ್ಲಿ — ಹಲ್ಲಾಗ ಶರಗು ಹಿಡಿದು ಒನಕೊಂತ್ ಚಾವಡೀ ವಾರಿಗೆ ನಿಂತಿದ್ದಳರಿ. ಫೌಜದಾರರದೂ ಬಲ ನಜರ. ಅಡ್ಡಬಿದ್ದ ಚನ್ನ್ಯಾ ಅವರ ಕಣ್ಣಾಗ ಕಾಣಲಿಲ್ಲೋ ಏನೋ, ಮಲ್ಲೀ ಮ್ಯಾಗ್ ನಜರ ಇಟ್ಟು ಆಚ್ಯಾಕಡೇನ್ ಹೊಂಟ. ಚನ್ನ್ಯಾ ಎದ್ದು 'ಯಪ್ಪಾ ನಿನ್ನ ಮಗಾ ಅಡ್ಡ ಬಿದ್ದದ್ದು ನೋಡಿ ಹಾಗ್ ಹೊಂಟಿ. ನಿನ್ನ ಮಗಾ ಹೊಟ್ಟಿಗಿಲ್ದ ಉಪಾಸ ಬಿದ್ದಾನ ಯಪ್ಪಾ' ಅಂತ ಬೇಡಿಕೊಂಡ. ಹೊಟ್ಟಿಗಿಲ್ದ ಇದ್ದರ ಗೌಡರ ಹಂತ್ಯಾಕ ಹೋಗು, ಕಾಳ ಕಡಾ ಕೊಡಸರಿ ಅಂತ ಹೇಳಿಕೋ, ಅಂತ ನಾಜಿಮಿ ಮಾತಾಡಿ ಹೊಂಟರಿ ಫೌಜದಾರ. ಮಾದರ ಚನ್ನ್ಯಾ ಬಿಡತಾನೆಲ್ರೀ, 'ಯಪ್ಪಾ ನೀ ಕೊಟ್ಟದ್ದು ಮಗಾ ತೊಗೊಳ್ಳಾಕ ಬಂದಾನು. ಒದಿಕಿ ಕೊಡಬೇಕನಿಸಿದರ ಅದನ್ನ ಕೊಡು, ಒನಿಕಿ ಕೊಡಬೇಕನಿಸಿದರ ಅದನ್ನರ್ ಕೊಡು' ಅಂತ ಬೇಡಿಕೊಂಡನರಿ. 'ಒನಕಿ ಬೇಕೋ ಒಂಕಿ ಬೇಕೋ? ನೀ ಯಾಕ ಬಂದಿಯೋ' ಅಂತ ಫೌಜದಾರ ಮಲ್ಲೀನ್ನ್ ಕೇಳಿದನಿ. ಅವಕ್ಕ ಮಲ್ಲಿ ಏನನಬೇಕರಿ? 'ಸರದಾರ, ಮರ್ಜಿ ಆದರ ಒಂಕೀನೂ

ಕೊಟ್ಟೇರಿ. ಅದೇನು ದೊಡ್ಡ ಮಾತಲ್ಲರೀ. ಇಂವಾ ನನ್ನ ಅಣ್ಣಾ, ಮಕ್ಳೊಂದಿಗ್ಯಾ. ಮನ್ಯಾಗ ಕಟ್ಟನ ಕಡದೇನಂದರ ಒಂದ ಕಾಳಿಲ್ಲರೀ. ಸರದಾರ ಬಂದಾರ, ದಾದ ನೂಡಾಕ ವರದೀ ಕೊಡು ಅಂತ ಹೇಳಾಣಾ ಬಂದಾನರಿ' ಅಂತ ಹೇಳಿದಳರಿ."

ಕೆಂಚನ ಕತೆ ರಂಗಿಗೇರಿತ್ತು. ಅಕಸ್ಮಾತ್ತಾಗಿ ಪ್ರವೇಶವಾಧ ಈ ಹೆಣ್ಣಿ ಸೋಗಿನಿಂದ ಕತೆಯ ಗತಿಯೇ ಬದಲಾಗಿತ್ತು. ಶ್ರೋತೃಗಳು ಮೂಕವಿಸ್ಮಿತರಾಗಿದ್ದರು. ಕೆಂಚ ಬೇಕೆಂತಲೇ ತಡೆದು ಒಂದು ಗುಟುಕು 'ತೀರ್ಥ' ಗುಟುಕರಿಸಿದ.

"ಆಕೀ ಚಮತ ಏನ, ಒಯ್ಯಾರ ಏನ, ಕೈತಿರುವೂದೇನ, ಛಿ, ಛೀ ಹೇಳೂ ಸೋಯ ಇಲ್ಲ ತಗೀರಿ. ಫೌಜದಾರ 'ನಿನ್ನ ಹೆಸರೇನು ?' ಅಂತ ಕೇಳಾಣಾ, ಆಟದಾಗ ಹೆಣಸೋಗು ಮಾಡತಾವಲ್ರಿ, ಹಾಗ ಉಗರಲೆ ನೆಲಾ ಕೆರಕೊಂತ, 'ಮಲ್ಲಿ' ಅಂತ ಈಟ ಹೇಳಾಕ ಒಂದ ತಾಸ ಬೇಕಾತರೀ. ಫೌಜದಾರ ಖಲ್ಯಾಗs ಬಿದ್ದ ಬುದ್ಧೀ. ಆಗಿಂದಾಗ ಗೌಡಗ, ಚನ್ನ್ಯಾಗ ಕಾಳ ಕೊಡೂ ಅಂತ ಹೇಳೇ ಬಿಟ್ಬಾ. ಗೌಡರಿಗೆ ದಿಗಿಲs ಬಿತ್ತರಿ. 'ನಿನ್ನೇ ಇಂವಾ ನಮ್ಮ ಮನ್ಯಾಗಿದ್ದs ಕಾಳು ಒಯ್ದಾನರಿ' ಅಂತ ಅವರು ಹೇಳಿದರರಿ. ಫೌಜದಾರ ಚನ್ನ್ಯಾನ ಮಾರೀ ನೋಡಿದಾ. ಆದರ ಚನ್ನ್ಯಾಗ ನಾಚಿಕಿ ಎಲ್ಲೈತರಿ ? ಮೊನಕ್ಕ ಈಸಾಕ ಕಲಸೂದೂ ಒಂದs, ಚನ್ನ್ಯಾಗ ಮಾತು ಕಲಸೂದು ಒಂದs. ಮತ್ತ ಫೌಜದಾರನ ಕಾಲಾಗ ಅಡ್ಡ ಬಿದ್ದನರಿ. 'ಯಪ್ಪಾ ಇಲ್ಲ ಅಂದರ ನಾಲಿಗ್ಯಾಗ ಹುಳಾ ಬಿದ್ದಾವರಿ. ಧನ್ಯಾರು ಕಾಳು ಕೊಟ್ಟದ್ದು ಕರೇ ಯಪ್ಪಾ. ಕಾಳು ಕಟಗೊಂಡು ಹೊಂಟರ ಪಡದಪ್ಪನವರ ಶಿಶಮಕ್ಕಳು ಬಂದು ಕಸಕೊಂಡರರಿ. ಪಡದಪ್ಪನವರು ಅವನ್ನ ಕಸಗೊಂಡು ತಮ್ಮ ಕಾಳು ಕೊಟ್ಬಾರ್ರೀ. ಈ ಕಾಳಿನ ಹಿಟ್ಟಲೇ ಮಾಡಿದ ರೊಟ್ಟೀ ತುಣಕು ತಿಂದು ಮಕ್ಕಳೆಲ್ಲಾ ಹಿಂದಕ ಮುಂದಕ ಮಾಡಿಕೊಂಡ ನೆಲಪಟ್ಟ ಬಿದ್ದಾವರಿ' ಅಂತ ಚನ್ನ್ಯಾ ಹೇಳಾಣಾ, ಫೌಜದಾರ ಆ ಕಾಳ ಮೂಸಿ ನೋಡಿದ್ದನೋ ಇಲ್ಲೋ, ಮಾರಿ ಖ್ಯೆ ಮಾಡಿ, ಕೈ ತೊಳಕೊಂಡನರಿ."

ಈ ಕತೆಯನ್ನು ಕೇಳಿದ ಪಡದಯ್ಯನವರ ಮುಖವೂ ಅಷ್ಟೇ ಕಹಿಯಾಗಿತ್ತು. ಮಾತು ತಮ್ಮ ಕಡೆಗೇ ತಿರುಗುವದೆಂದು ಅವರು ತಿಳಿದಿರಲಿಲ್ಲ. ಆದರೆ ಕೆಂಚನನ್ನು ತಡೆಯುವದು ಅಸಾಧ್ಯವಿತ್ತು. ಮುಂದೇನಾಯಿತೆಂದು ಕೇಳುವ ಕುತೂಹಲ ಪಡದಯ್ಯನವರಿಗೂ ಇತ್ತು.

"ಮಲ್ಲಿ ಅಲ್ಲೇ ನಿಂತಿದ್ದಳಲ್ಲರಿ, 'ಸರದಾರ, ಇಂತಾ ಕಾಳ ತಿಂದು ಬಡವರು

ಸಾಯಾಕ ಹತ್ಯಾರ್ರಿ' ಅಂತ ಬೇಡಿಕೊಂಡಳರೀ. ಅದಕ ಫೌಜದಾರ 'ಗೌಡರs ಇಕಿಗೇ ಅಚ್ಛಾ ಕಾಳ ಕೊಡಸರಿ, ಬಡವಿ, ಸತ್ತಗಿತ್ತಾಳು' ಅಂತ ನಾಚಿಗಿಲ್ದ ಅನಬೇಕರೇ? ಅದಕ ಮಲ್ಲಿ, ಮುರಕಾ ಮಾಡಕೊಂತ, 'ಸರದಾರ ದೇವರಿಗೆ ಬಿಟ್ಟಾಕಿ ನಾ,ಸತ್ತು ಶಿವನ ಮನಿ ಸೇರಿದರ ಏನಾಗಬೇಕಾಗೇತಿ? ನನ್ನ ಅಣ್ಣ ಬಡವ, ಮಕ್ಕಳೊಂದಿಗ್ಯಾ ಅವಗ ಕಾಳ ಕೊಡಸರಿ' ಅಂತ ಬೇಡಿಕೊಂಡಳ್ರೀ. 'ಯಪ್ಪಾ ಕಾಳ ಕಸಗೊಂತಾಯೋ ಈ ಊರಾಗ' ಅಂತ ಚನ್ನ್ಯಾ ಒದ್ದಾಡಾಕ ಹತ್ತಿದನ್ರೀ. 'ಫಿರ್ಯಾದಿ ಬರೆಸಿಕೊಂಡು ಬಾ ಹೋಗು' ಅಂತ ಫೌಜದಾರ ಚನ್ನ್ಯಾಗ ಹೇಳಿ ಮಲ್ಲೀ ಕಡೆ ತಿರಗಿದನ್ರೀ. ನಿಂದೇನ ಅರ್ಜಿ ಅಂದಾ. ಆಕಿ 'ಸರದಾರ, ನನ್ನ ಅರ್ಜೀ ಚೌಕಶಿ ಮಾಡೂದು ನಿಮ್ಮಿಂದ ಆಗಾಕಿಲ್ಲ, ಶಿವನs ಮಾಡಬೇಕು ಅದನ್ನ. ನಡಿ ನಡಿಯೋ ಝಣ್ಣಾ, ತೊಗಲಿನ ಮ್ಯಾಗ ಕಣ್ಣಿಟ್ಟು ತೊಗಲ ಮಾರಿ ತಿನ್ನೂ ಇವರು ನಮ್ಮ ಚೌಕಶಿ ಏನು ಮಾಡ್ಯಾರು' ಅಂತ ಅನಬೇಕರೇ? ಕೂಡಿದ ಜನಾ ಬೆಕ್ಕಸ ಬೆರಗಾತು ನೋಡ್ರಿ. ಈಟ ಅಂದಾಕೀನs ಆಕಿ ಹೊಂಟs ಬಿಟ್ಟಳ್ರೀ."

"ಫೌಜದಾರ ಬಿಟ್ಟಾನ್ರೇ ಆಕಿನ್ನs? ಸಿಪಾಯಿಗೆ ಹೇಳಿ ಕುಂದರಸೇ ಬಿಟ್ಟಾ. ಚನ್ನ್ಯಾ ಅತ್ತಾಗ ಕಣ್ಣ ಬೆಳ್ಳಗ ಮಾಡಿ ಖಬರ ಹಾರಿದವರ್ಹಾಂಗ ಬಿದ್ದು ಬಿಟ್ಟ-ನರಿ. ಎರಡು ಒದಿಕೀ ಬಿಟ್ಟರ ತಾನs ಏಳತಾನು ಅನಕೊಂತs, ಫೌಜದಾರ ಬೂಟಗಾಲಲೇ ಒದ್ದನರಿ. ಉಸುಲ ಬಂದ ಮಾಡಿ ಬಿದ್ದ ಚನ್ನ್ಯಾ ಮಿಟ್ಟಮಿಸ ಕ್ಯಾನರೇ? ಬುದ್ಧೀ, ಆಗ ನೋಡಬೇಕಾಗಿತ್ತರೀ ಈ ಫೌಜದಾರನ ಮಾರೀನs. ಬೆವರು ಸುರಿಸಿಗೊಂತs, 'ಗೌಡರs ಇವನ್ನ ಹೊರಿಸಿ ಮನೀಗೆ ಕಳಸರಿ' ಅಂದು ಉಪಚಾರ ಮಾಡಾಕ ಅಂತ ಚಣ್ಣದ ಕೀಸೇದಾಗಿಂದ ಐದು ರೂಪಾಯಿ ತಗದು ಕೊಟ್ಟನರಿ. ಚನ್ನ್ಯಾನ್ನ ಗೌಡರ ಆಳು ಹೊತ್ತವಲ್ರೀ,ಚಾವಡಿಯಿಂದ ತುಸು ದೂರ ಒಯ್ಯ್ಯಾಣಾ, 'ಇನ್ನ ಮನೀಗೆ ಹೋಗತೀನ ಬಿಡ್ರೆಲೇ' ಅನಕೊಂತs ಅಲ ಕ್ಕನs ಜಿಗದನಲ್ಲರೀ. ಫೌಜದಾರನ ಗಂಟ ಬಿಚ್ಚ್ಯಾಕ, ಚನ್ನ್ಯಾ ಹೂಡಿದ ಕಾಯಕ ಹ್ಯಾಗ ಐತಿ ಬುದ್ಧೀ? ಅದಕs ಹೇಳಿಜೆನರೀ, ಅಮಲದಾರರ ಟಬರು ಮ್ಯಾಗ ಮ್ಯಾಗs ಅಂತ" ಎಂದು ಹೇಳಿ ಮುಗಿಸಿ, ಕೆಂಚ, ಕುಡಿತದ ಅಮಲಿನಲ್ಲಿ ವಿಚಿತ್ರ ವಾದ ನಗೆ ನಕ್ಕ.

ಕೆಂಚ ಹೊರಳಿ ನೋಡಿದ. ಇನ್ನೂ ಮಾತು ಮುಗಿಸುವ ಇಚ್ಛೆ ಅವನಿಗಿರ ಲಿಲ್ಲ. ಆದರೆ ಅವನ ಕತೆ ಕೊನೆಯ ಹಂತಕ್ಕೆ ಬರುವ ಹೊತ್ತಿಗೆ ಶ್ರೋತೃಗಣದಲ್ಲಿ

ವಿಶೇಷ ಕ್ರಾಂತಿಯುಂಟಾಗಿತ್ತು. ರಾತ್ರಿ ಎರಡು ಹೊಡೆದದ್ದರಿಂದ ಕೆಲವರು ಸದ್ದುಮಾಡದೆ ಮನೆಸೇರಿದ್ದರು. ಕೆಲವರು ಕುಡಿತದ ಮಬ್ಬಿನಲ್ಲಿ, ಕುಳಿತಲ್ಲಿಯೇ ಅಡ್ಡಾಗಿದ್ದರು. ಕೆಂಚನಿಗೆ ಈ ಪ್ರಾಣಿಗಳನ್ನು ನೋಡಿ ಕಸಿಕರವೆನಿಸಿತು. ಬೆಳ ತನಕ ಕುಡಿದರೂ ಎಚ್ಚರ ತಪ್ಪದ ಗಟ್ಟಿಗ ಅವನು. ಹೆಂಡದ ಮಾಯೆಯ ಬಗ್ಗೆ ಕೌತುಕವೆನಿಸಿತು. ಒಂದು ಗುಟುಕಿಗೇ ಎಚ್ಚರ ತಪ್ಪಿಸುವ ಈ ಮಾಯೆ ದೊಡ್ಡದೋ, ಒಂದು ಗುಟುಕನ್ನು ತಡೆಯಲಾಗದ ಈ ಪ್ರಾಣಿಗಳ ದುರ್ಬಲತೆ ದೊಡ್ಡದೋ ಎಂಬ ಕೂಟಪ್ರಶ್ನೆ ಅವನಿಗೆ ಬಿದ್ದಿತ್ತು. ಪರಮಾತ್ಮನ ಮಾಯೆ ಶರಣನಿಗೊಬ್ಬನಿಗೇ ತಿಳಿಯುವಂತೆ ತನಗೊಬ್ಬನಿಗೇ ಈ ಮಾಯೆ ವಶವಾಗಿದೆ ಎಂದೆನಿಸಿತು.ಇಲ್ಲದಿದ್ದರೆ, ಎಲ್ಲರಿಗಿಂತ ಹೆಚ್ಚು ಕುಡಿದರೂ ಕೂಡ, ಈ ಕತೆಯನ್ನು ಒಂದು ವಿವರವೂ ತಪ್ಪದಂತೆ ಹೇಳುವ ಎದೆ ಯಾರಿಗಿದೆ ? ನಿಜವಾದ ಅನುಭಾವಿ ಯೆಂದರೆ ತಾನೇ ಎನಿಸಿತು. ಅವನಿಗೆ ಒಂದು ಮಾತಿನ ಬಗ್ಗೆ ಮಾತ್ರ ನಾಚಿಕೆಯೆ ನಿಸಿತು. ಇವರೆಲ್ಲ ಕುಡಿತದ ಮಬ್ಬಿನಲ್ಲಿ ಮುಳುಗಿದಾಗ ತಾನೊಬ್ಬನೇ ಕತೆ ಹೇಳಿ ವ್ಯರ್ಥ ದಣಿದಂತಾಯಿತಲ್ಲ ಎಂದು ವಿಷಾದವೆನಿಸಿತು.

ತಿರುಗಿ ನೋಡಿದರೆ ಪಡದಯ್ಯ ಸ್ವಾಮಿಗಳೂ ನಿದ್ರಾವಶರಾಗಿದ್ದರು. ಕತೆ ಹೇಳಲು ಪ್ರೇರೇಪಿಸಿದ ಅಪ್ಪನವರೇ ಅಪ್ಪಣೆ ತೆಗೆದುಕೊಂಡರೆ ಇನ್ನೇನು ಗತಿ? ಯಾವ ವಿಷಯಕ್ಕೆ ತಾನು ಬಂದಾಗ ನಿದ್ರೆಹೋದರೋ ಪಾಪ, ಎಂದು ಚಿಂತಿಸಿದ. ಪಡದಯ್ಯನವರ ಹತ್ತಿರವೇ ಇದ್ದ ಬಾಟಲಿಯಲ್ಲಿ ಇನ್ನೂ ತುಸು ಮದ್ಯ ಉಳಿದಿತ್ತು. ಅಯ್ಯೋ ಅಪ್ಪನ ಕೃಪೆಯೇ ಎಂದು ಹೃದಯ ಉಕ್ಕಿಬಂತು. 'ಅಪ್ಪನ ಪರಸಾದ' ಎನ್ನುತ್ತ ಅದನ್ನೂ ಗುಟಕರಿಸಿಬಿಟ್ಟ. ನಿದ್ದೆಹೋದರೂ ತನ್ನನ್ನು ಮರೆತಿಲ್ಲವಲ್ಲ, ಕತೆ ಹೇಳಿ ಹೇಳಿ ಮಗನ ಗಂಟಲಾರುವದೆಂದು 'ತೀರ್ಥ' ವನ್ನಿಟ್ಟು ಅಪ್ಪ ಮಲ ಗಿದನಲ್ಲ ಎಂದು ಕೆಂಚನ ಅಂತಃಕರಣ ಕರಗಿತು. ಸುಮ್ಮನೆ ತಾನು ಸಿಟ್ಟಿಗೆದ್ದನಲ್ಲ ಎಂದು ತೀವ್ರ ಪಶ್ಚಾತ್ತಾಪವಾಗಿ, ಕೆಂಚ ಮೊದಮೊದಲು ಬಿಕ್ಕಿಸುತ್ತ, ಮುಳು ಮುಳು ಅಳುತ್ತ ಕೊನೆಗೆ 'ಹೋ' ಎಂದು ದನಿತೆಗೆದು ಅಳಹತ್ತಿದ. ಮಧ್ಯರಾತ್ರಿ ಯಲ್ಲಿ, ಪಡುವಣಗಾಳಿ ಬೀಸಿ, ಮೋಡದ ಗುಡುಗು ಕೇಳಿಬಂದಾಗ ಹಾಳ್ಗರೆಯುವ ನಾಯಿಯಂತೆ, ಅವನ ಅಳುವ ದನಿ. ವಾಯುಮಂಡಲವನ್ನೇ ವ್ಯಾಪಿಸಿತ್ತು. ಅತ್ತು ಅತ್ತು, ಸಾಕಾಗಿ, ದಣಿದ ಕೆಂಚ ಕುಳಿತಲ್ಲಿಯೇ 'ಓಂ ನಮಃ ಶಿವಾಯ' ಎನ್ನುತ್ತ ಕಾಲುಚಾಚಿ ನಿದ್ರೆಹೋದ.

* * *

ಆದರೆ ಕೆಂಚ ಹೇಳುತ್ತಿದ್ದ ಕತೆಯನ್ನು ಕೊನೆಯ ವರೆಗೂ ಕೇಳಿದ ವ್ಯಕ್ತಿ ಇನ್ನೊಂದಿತ್ತು. ಪಡದಯ್ಯನವರ ಅಂತರಂಗದ ಕೋಣೆಯಲ್ಲಿ ಸೆರೆಯಲ್ಲಿದ್ದ ಚಿಮಣಾ. ನಿಟ್ಟುಸಿರು, ಕಣ್ಣೀರು ಅವಳ ಪಾಲಿಗೆ ನಿಸರ್ಗ ಕೊಟ್ಟ ಬಳುವಳಿಯಾಗಿದ್ದವು. ಇನ್ನು ಜೀವಮಾನವನ್ನೆಲ್ಲ ಅವಳು ಎಚ್ಚರದಲ್ಲಿಯೇ ಕಳೆಯಬೇಕು. ಈ ಎಚ್ಚರ ಮೊದಲೇ ಇದ್ದಿದ್ದರೆ, ಎಂದು ಒಂದು ಕ್ಷಣ ಅವಳಿಗನಿಸದಿರಲಿಲ್ಲ. ಇಂದು ಈ ದುಃಖವನ್ನು ಮರೆಯಬೇಕೆಂದು ಕೆಂಚನ ಕತೆಯನ್ನು ಸಂಪೂರ್ಣ ಲಕ್ಷ್ಯವಿಟ್ಟು ಕೇಳಿದ್ದಳು. ಚನ್ನ ಮೂರ್ಛಿತನಾದಾಗ ಉಪಚರಿಸದೆ ಇದ್ದ ಫೌಜದಾರನ ಚಿತ್ರ ಅವಳ ಕಣ್ಣು ಕಟ್ಟಿತು. ಈ ಕಾರ್ಯ ಗಂಡು ಜಾತಿಗೇ ಮೀಸಲೇನೋ ಎಂದೆನಿಸಿತು. ಹೊತ್ತ ವರ ಹೆಗಲನ್ನಿಳಿದು ಜಿಗಿದು ಹೋದ ಚನ್ನನ ಸಲುವಾಗಿ ನಗೆಬಂತು. ಮರು ಕ್ಷಣವೇ ಕನಿಕರವೆನಿಸಿತು. ಹಣದಾಸೆಗಾಗಿ, ಹೊಟ್ಟೆಯ ಪಾಡಿಗಾಗಿ ಮನುಷ್ಯ ಎಂಥೆಂಥ ಸೋಗುಗಳನ್ನು ಹಾಕಬೇಕಾದೀತು ಎಂದೆನಿಸಿತು.

ಮರುಕ್ಷಣವೇ ಹಲ್ಲಲ್ಲಿ ಸೆರಗು ಹಿಡಿದುಕೊಂಡು ಮರುಳು ಮಾಡಲು ಯತ್ನಿಸಿದ ಮಲ್ಲಿಯ ಚಿತ್ರ ಸುಳಿದುಹೋಯಿತು. ಕೆಂಚ ಎಷ್ಟು ರುಚಿಯಾಗಿ ಅದನ್ನು ಬಣ್ಣಿಸುತ್ತಿದ್ದ! ಉಳಿದವರು ಎಷ್ಟು ತಲ್ಲೀನರಾಗಿ ಕೇಳುತ್ತಿದ್ದರು. ಹೆಣ್ಣಿನ ಮುಖ ಕೂಡ ಗಂಡಿನ ಕಾಮವನ್ನು ಕೆರಳಿಸುವಾಗ, ಹೆಣ್ಣು ಅದೇ ವೃತ್ತಿಯನ್ನು ಕೈಕೊಂಡಾಗಲಂತೂ ಕೇಳುವದೇನು ? ಮಲ್ಲಿ ಹೇಳಿ ಕೇಳಿ ಬಸವಿ. ಹಾಗೆ ನೋಡಿ ದರೆ ತನಗೂ ಅವಳಿಗೂ ಇರುವ ಅಂತರವಾದರೂ ಏನು? ಮಲ್ಲಿ ದೇವರಿಗೆ ಬಿಟ್ಟ ಹೆಣ್ಣು. ದೇವರಿಗೆ ಹರಕೆ ಹೊತ್ತು ಮನುಷ್ಯನ ಕಾಮವನ್ನು ತೃಪ್ತಿಗೊಳಿಸ ಬೇಕು. ಅದರಿಂದ ದೇವರಿಗೆ ತೃಪ್ತಿಯಾಗಬೇಕು. ತಾನು ಪತಿತೆ, ಪತಿಯಿಲ್ಲದೆ ತಾಯ್ತನವನ್ನು ಹೊಂದಲಿರುವಳು. ಮಲ್ಲಿಯ ಜೀವನಕ್ಕೆ, ವೃತ್ತಿಗೆ, ಸಮಾಜದ ಮಾನ್ಯತೆಯಿದೆ, ಧರ್ಮದ ಮನ್ನಣೆಯಿದೆ. ತನಗಿಲ್ಲ.

ಕೆಂಚ ಹೇಳಿದ ಇನ್ನೊಂದು ಮಾತೂ ಅವಳನ್ನು ದೀರ್ಘವಿಚಾರಕ್ಕೀಡು ಮಾಡಿತ್ತು. ತನ್ನ ತಂದೆಯ ಕೊಲೆಯ ಆರೋಪ ದಾದಾನ ಮೇಲೆ ಬರಬಹು ದಾಗಿತ್ತು. ಎಷ್ಟು ಅನಾಹುತಗಳಿಗೆ ತಾನು ಕೇಂದ್ರವ್ಯಕ್ತಿಯಾಗಿದ್ದೇನಲ್ಲ ಎಂದೆನಿ ಸಿತು ಚಿಮಣಾಳಿಗೆ. ತನ್ನ ರೂಪ ಬಾಪೂಸಾಹೇಬನನ್ನು ಸೆಳೆದಿತ್ತು; ಪಡದಯ್ಯನ ಪ್ರವೇಶವೂ ಇದೇ ಕಾರಣಕ್ಕಾಗಿ ಆಯಿತು. ತಾನು ಕೌಮಾರ್ಯವನ್ನು ಕಳೆದು ಕೊಂಡಳು. ಅದಕ್ಕಾಗಿ ನವೆನವೆದು ತಂದೆ ಪ್ರಾಣ ಬಿಟ್ಟ. ಬಾಪೂಸಾಹೇಬನ

ಮೇಲೆ ಕೊಲೆಯ ಆರೋಪ ಬಂದು ಹೋಯಿತು. ಈಗ ತನ್ನ ಚಿಲುವಿಕೆ ನಡೆಸಿದ ಅನಾಹುತ ದಾದಾನ ಬಲಿಯನ್ನೂ ಕೇಳುತ್ತಿದೆ. ಕೆಟ್ಟು ಹೋದ ತಂಗಿಯ ಬಾಳುವೆಯನ್ನು ಹೇಗೋ ಸರಿಪಡಿಸೋಣವೆಂದು ಅಂತಃಕರಣದಿಂದ ಪ್ರಯತ್ನಿಸಿದ ದಾದಾ ಈ ದಂಡವನ್ನು ತೆರಬೇಕಾಯಿತು. ತಾನು ಜೀವಮಾನವೆಲ್ಲ ಈ ಕುಡುಕ ಸನ್ಯಾಸಿಯ ಜೊತೆಯಲ್ಲಿ ಬಾಳುವೆ ಮಾಡಬೇಕು. ಯಾರಿಗೆ ಸುಖವಾಗಿದೆ ತನ್ನಿಂದ? ಅಶುಭ ಮುಹೂರ್ತವನ್ನು ನೋಡಿಯೇ ಹುಟ್ಟಿರಬೇಕು ತಾನು. ಚಿಮಣಾ ತನ್ನ ಜನ್ಮವನ್ನೇ ಶಪಿಸಿಕೊಂಡು, ತಾಯಿಯ ಸಾವು, ತಂದೆಯ ಮರಣ, ಅಣ್ಣನ ಶಿಕ್ಷೆ, ಪುತಳಾಬಾಯಿಯ ದುಃಖ ಇವೆಲ್ಲಕ್ಕೂ ತಾನೇ ಮೂಲ ಕಾರಣ ಎಂದು ತಿಳಿದುಕೊಂಡು ಸಂಕಟಪಟ್ಟಳು.

ಅದಕ್ಕಿಂತ ತಾನೇ ಸತ್ತು ಹೋದರೆ ಹೇಗೆ ಎಂಬ ವಿಚಾರವೂ ಬಂತು. ಹೌದು ಸತ್ತರೆ ಏನು ಕೇಡು? ಇಷ್ಟು ದಿನವೂ ಬದುಕಿದ್ದದ್ದಕ್ಕೆ ಕಾರಣವಿರಲಿಲ್ಲ. ಜಗತ್ತಿನಲ್ಲಿ ಸಾಯಲು ತನ್ನಂಥವಳಿಗೂ ಮನಸ್ಸಿಲ್ಲವೇ? ಚನ್ನ ಉಪವಾಸ ಬಿದ್ದರೂ ಸಾಯಲು ಮನಸ್ಸು ಮಾಡಲಾರ. ಮರ್ಯಾದೆಗೇಡಾದರೂ ಮಲ್ಲಿ ಸಾಯಬಯಸುವದಿಲ್ಲ. ತಾನು ಹತ್ತು ಸಾವುಗಳಿಗೆ ಕಾರಣಳಾದರೂ ಸಾಯಬಯಸುವದಿಲ್ಲ. ಗರ್ಭದಲ್ಲಿ ಇನ್ನೂ ರೂಪುಗೊಳ್ಳದ ಪಿಂಡ, 'ಅವ್ವಾ ನನ್ನನ್ನು ಬಿಡಬೇಡ' ಎಂದು ಹಗಲು ರಾತ್ರಿ ಕೂಗಿಕೊಳ್ಳುತ್ತದೆ. ಅದೊಂದು ಕೂಗು ಎಂಥೆಂಥ ವಿಚಿತ್ರ ಆಸೆಗಳನ್ನು ಕೆರಳಿಸುತ್ತದೆ. ಕೂಸು ಹುಟ್ಟಿದ ಮೇಲೆ ಅದರ ಭಾಗ್ಯದಿಂದಲಾದರೂ ಒಳ್ಳೆಯ ದಿನಗಳನ್ನು ಕಾಣಬಹುದು. ನಾಳೆ ಪಡದಯ್ಯನ ಮನಸ್ಸು ಬದಲಾದರೆ ಈ ಪತಿತ ಜೀವನಕ್ಕೂ ಒಂದು ಶಾಶ್ವತ ದಾರಿ ಕಾಣಬಹುದು. ಈ ಆಶೆಯಲ್ಲಿ ಸತ್ಯವಿರದಿದ್ದರೆ, ಇಷ್ಟೆಲ್ಲ ದುಃಖದುಮ್ಮಾನಗಳನ್ನು ಸಹಿಸಿಕೊಳ್ಳುವ ಶಕ್ತಿ ತನಗೆ ಬರುತ್ತಿತ್ತೇ? ಇನ್ನೂ ಒಂದು ವಿಚಾರ ಅವಳ ಈ ಆಸೆಗೆ ಹೊಸ ಚೈತನ್ಯವನ್ನೊದಗಿಸಿತು. ಈಗ ಕಾಯದೆಯ ಬಲೆಯಲ್ಲಿ ಸಿಕ್ಕುಬಿದ್ದ ದಾದಾನನ್ನು ಉಳಿಸಿಕೊಳ್ಳಲಿಕ್ಕಾದರೂ ತಾನು ಬದುಕಿರಬೇಕಲ್ಲವೇ? ಈಗ ಮಾತ್ರ ಆತ್ಮಹತ್ಯೆ ಚಿಮಣಾಳಿಗೆ ಭಯಂಕರವೆನಿಸತು. ಬದುಕುವದಕ್ಕೆ ಅಂಜುವದು ಹೇಡಿತನವೆನಿಸಿತು. ಇನ್ನೊಬ್ಬರನ್ನು ಬದುಕಿಸಲಿಕ್ಕಾದರೂ ಉಳಿಯುವದು ಧೈರ್ಯದ ಹಾದಿ. ನಾನಾಕಾಕಾನ ಮಗಳಾಗಿ ಹೇಡಿಯಂತೆ ಆತ್ಮಹತ್ಯೆಗೆ ಅಣಿಯಾದರೆ, ನಾನಾಕಾಕಾನ ಆತ್ಮಕ್ಕೆ ತೃಪ್ತಿಯಾಗಲಾರದು. ಇವೇ ವಿಚಾರಗಳಿಂದ ದಣಿದ ಮನಸ್ಸಿಗೆ ನಿದ್ದೆ ಬೇಕೆನಿಸಿತು.

ಜೀವನದ ಆಸೆಗೆ ನಿದ್ದೆ ಬೇಕೆನಿಸಿತು. ಸಾವಕಾಶವಾಗಿ ನಿದ್ದೆಹೋದಳು ಚಿಮಣಾ.

*　　　*　　　*

ಅದೇ ರಾತ್ರಿ ನಿದ್ದೆಯಿಲ್ಲದೆ ವಿಚಾರವಶನಾಗಿದ್ದ ಇನ್ನೊಬ್ಬ ವ್ಯಕ್ತಿಯೆಂದರೆ ದಾದಾ. ಪೋಲೀಸರ ಕಾವಲಲ್ಲಿ, ಏಕಾಂಗಿಯಾಗಿ, ಚಾವಡಿಯ ಕೋಣೆಯಲ್ಲಿ ಸೆರೆಯಾದ ದಾದಾನಿಗೆ ಅನೇಕ ವಿಚಾರಗಳು. ಮೊದಲು ಚಿಮಣಾಳನ್ನು ಮಠಕ್ಕೆ ಕರೆದೊಯ್ಯುವಾಗ, ಅಪರಿಚಿತರ ಮಧ್ಯದಲ್ಲಿ, ಅಪಮಾನಕಾರಕ ಪರಿಸ್ಥಿತಿಯಲ್ಲಿ ಚಿಮಣಾ ಹೇಗೆ ಜೀವಿಸಬಹುದೆಂಬ ವಿಚಾರ ಅವನಿಗೆ ಹೊಳೆದಿರಲೇ ಇಲ್ಲ. ಆದರೆ ಏಕಾಕಿತನ ಆ ಯೋಚನೆಯನ್ನು ಪ್ರೇರೇಪಿಸಿತು. ಏಕಾಕಿತನ ಯೋಚನೆಗಳ ಬಿರುಗಾಳಿಯನ್ನೆಬ್ಬಿಸುವದೆಂಬ ಅನುಭವ ಅವನಿಗೆ ಹೊಸದು. ಅವನೆಂದೂ ಏಕಾಕಿಯಾಗಿದ್ದವನಲ್ಲ. ಗರಡೀಮನೆಯಲ್ಲೇ ಆಗಲಿ, ಮನೆಯಲ್ಲೇ ಆಗಲಿ ಹಗಲು ರಾತ್ರಿ ಅವನ ಜೊತೆಗೆ ಗೆಳೆಯರಿರುತ್ತಿದ್ದರು. ದಣಿದು ಕೊರಡಿನಂತೆ ಮಲಗಿದಾಗಲೇ ಅವರು ಬಿಟ್ಟು ಹೋಗುತ್ತಿದ್ದರು.

ಆದರೆ ಈಗ ಒಂಟಿಗತನ ತನ್ನನ್ನು ಚುಚ್ಚುತ್ತಿತ್ತು. ಗಂಡುಸಾದ ತನಗೇ, ಒಂದು ರಾತ್ರಿಯ ಏಕಾಕಿತನ ಇಷ್ಟು ಭಯವನ್ನುಂಟು ಮಾಡಿದರೆ, ಜೀವಮಾನವೆಲ್ಲ ಅಂಥ ಪರಿಸ್ಥಿತಿಯಲ್ಲಿಯೇ ಕಳೆಯಬೇಕಾದ ತನ್ನ ತಂಗಿಯ ಗತಿ ಏನು?

ಪರಕೀಯರ ಕಾವಲಿನಲ್ಲಿ ಸ್ವತಂತ್ರಜೀವ ಹೇಗೆ ಬದುಕಬೇಕು? ಅದನ್ನು ವಿಚಾರ ಮಾಡದೆ, ಸಿಟ್ಟಿನ ಭರದಲ್ಲಿ ಅವಳನ್ನು ಸಜೀವವಾಗಿ ಬೆಂಕಿಯಲ್ಲಿ ಸುಡುವಂತೆ ಮಾಡುವದು ಅವಿವೇಕವಲ್ಲದೆ ಮತ್ತೇನು? ತನ್ನ ತಪ್ಪಿನ ಫಲವನ್ನು ಚಿಮಣಾ ಸಾಯುವ ವರೆಗೆ ಅನುಭವಿಸುವಂತಾಯಿತು. ಈಗಲೂ ಅದೇ ಸಿಟ್ಟಿನ ಫಲವನ್ನೇ ತಾನೂ ಅನುಭವಿಸುತ್ತಿಲ್ಲವೇ? ಸಂಗಪ್ಪನ ಮೇಲಾದ ಅನ್ಯಾಯದಿಂದ ಸಿಟ್ಟಿಗೆದ್ದು ಫೌಜದಾರರೆದುರು ತೋರಿದ ಅವಿನಯದ ಫಲ, ಈ ಕತ್ತಲೆ ಕೋಣೆಯ ವಾಸ.

ಅನ್ಯಾಯದಿಂದ ತನ್ನನ್ನು ಈ ಕೋಣೆಯಲ್ಲಿ ಬಂಧಿಸಿಟ್ಟದ್ದಕ್ಕಾಗಿ, ಪ್ರತಿಭಟಿಸಿ ದಾದಾ ಅಂದು ಊಟ ಮಾಡಲು ನಿರಾಕರಿಸಿದ್ದ. ಆದರೆ ರಾತ್ರಿ ಹಸಿವು ಹೆಚ್ಚಾಯಿತು. ಪೋಲೀಸರನ್ನು ಕೂಗಿ ರೊಟ್ಟಿ [illegible] ಆದರೆ ಮರುಕ್ಷಣವೇ ನಾಚಿಕೆಯೆನಿಸಿತು. [illegible] ರೊಟ್ಟಿ ತಂದು [illegible] ಈ ಪೋಲೀಸನಿಗೆ

ಶರಣು ಹೋಗಬೇಕೇ? ಈ ವಿಚಾರದಲ್ಲಿಯೇ ಹಸಿವನ್ನು ತಡೆದುಕೊಂಡು ದಾದಾ ಹಾಸಿಗೆಯ ಮೇಲೆ ಬಿದ್ದು ನಿದ್ದೆ ಮಾಡಲು ಪ್ರಯತ್ನಿಸಿದ.

ಹೊರಗೆ ಯಾರೋ ಮಾತಾಡಿದ್ದು ಕೇಳಿಸಿತು. ಬಾಗಿಲು ಕೀಲಿ ತೆಗೆದ ಸದ್ದು ಕೇಳಿಸಿತು. ಬಾಗಿಲು ತೆರೆದು ಯಾರೋ ಒಳಗೆ ಬಂದರು. 'ದಾದಾ' ಎಂದು ಕರೆದಾಗಲೇ ಗುರುತು ಹತ್ತಿದ್ದು. ಬಂದವರು ಗೌಡರು. ಒಂದು ದೊಡ್ಡ ಬಾಳೇ ಹಣ್ಣಿನ ಹಣಿಗೆ, ಒಂದು ಹಾಲಿನ ತಂಬಿಗೆ ಅವನ ಮುಂದಿಟ್ಟು "ಇದನ್ನ ತೊಗೋ ದಾದಾ" ಎಂದು ನುಡಿದರು.

ಗೌಡರ ಅಂತಃಕರಣಕ್ಕೆ ದಾದಾನಿಗೆ ಅಳು ಬಂತು. ಮಾತಾಡಲಾರದೆ, ಹಣ್ಣು ತಿಂದು ಹಾಲು ಕುಡಿದ. ಗೌಡರು ಧೈರ್ಯ ಹೇಳಲು ಬಂದಿದ್ದರು. ನಾಳೆ ಫೌಜದಾರರು ಕರೆಸಿದಾಗ ಸಿಟ್ಟಿಗೇಳಬಾರದೆಂದೂ, ಹೆದರಿಸಿದರೆ ಅಂಜಬಾರ ದೆಂದೂ ಉಪದೇಶಿಸಿದರು. ನಾನಾನ ಕೊಲೆಯ ಆರೋಪ ಅವನ ಮೇಲೆ ಹಾಕಲು ಉಳಿದವರೆಲ್ಲ ಹೊಂಚು ಹಾಕಿದ ಸುದ್ದಿಯನ್ನು ಅವನಿಗೆ ಹೇಳಿ "ಕಾಯದೇಶೀರ ಮಾಡೂದೆಲ್ಲ ನಾ ಮಾಡತೀನು; ನೀ ಅಂಜಬ್ಯಾಡ" ಎಂದು ನುಡಿದರು.

ಇಷ್ಟು ದಾದಾನಿಗೆ ಉಪದೇಶ ಮಾಡಿ ಗೌಡರು ಹೊರಬಿದ್ದರು. ಅಂಜ ಬೇಡವೆಂದು ದಾದಾನಿಗೆ ಹೇಳಿದ್ದರೂ ಸ್ವತಃ ಅವರಿಗೇ ಧೈರ್ಯ ಉಳಿದಿರಲಿಲ್ಲ. ಈ ಹೊಂಚು ತಮ್ಮ ಕೈಮೀರಿ ಹೋಗಿತ್ತು. ಫೌಜದಾರರು ಸಂಪೂರ್ಣ ಬಾಪೂ ಸಾಹೇಬನ ಕೃಪಾಪೋಷಿತರಾಗಿದ್ದರು. ದಾದಾನ ಗರಡೀಮನೆಯ ಕೆಲವು ಗೆಳೆಯರ ಸಾಕ್ಷಿ ತೆಗೆದುಕೊಳ್ಳಲು ಫೌಜದಾರರು ಆಡ್ಲೀ ಕೇಶವರಾಯನಿಗೆ ಹೇಳಿದ್ದು ಕೇಳಿ ಗೌಡರ ಕೈಕಾಲು ಹೋಗಿದ್ದವು. ಈ ಪ್ರಕರಣ ಹೀಗೇ ಮುಂದುವರಿದರೆ ದಾದಾ ಉಳಿಯುವದಿಲ್ಲ. ದಾದಾ ಹೋಗಲಿ, ಸುಳ್ಳು ಕಾರಣ ತೋರಿಸಿದ ತಾವೂ ಉಳಿಯುವದಿಲ್ಲ. ಅದನ್ನು ಒಪ್ಪಿದ ದೈವದವರೂ ಉಳಿಯುವದಿಲ್ಲ. ಹಾಗಾದರೆ ಊರ ಹಿರಿಯರೆಲ್ಲ ಜೇಲಿನಲ್ಲಿರಬೇಕೆ? ಇಷ್ಟು ದಿನ ರೊಕ್ಕ ತಿಂದಿದ್ದರು. ಆದರೆ ಹಣ ಕೊಟ್ಟವರ ಕೂದಲು ಕೊಂಕಗೊಡದಂತೆ ಮಾಡುವ ಸಾಮರ್ಥ್ಯ ಅವ-ರಲ್ಲಿತ್ತು. ಈಗ ಆ ಪುಣ್ಯವೂ ತೀರಿಹೋದಂತೆನಿಸಿತ್ತು. ಆಗಲಿ, ಫೌಜದಾರರಿಗೆ ಮನಸ್ಸು ಕರಗುವಂತೆ ಹೇಳಿಕೊಳ್ಳುವದೊಂದೇ ಉಪಾಯ ಎನ್ನುತ್ತ ಗೌಡರು ಮನೆಯ ದಾರಿ ಹಿಡಿದರು.

ಪಾಡೆಯಲ್ಲಿ ಪುತಳಾ, ಚಾವಡಿಯಲ್ಲಿ ದಾದಾ, ಮಠದಲ್ಲಿ ಚಿಮಣಾ! ಮನೆ

ಯಲ್ಲಿ ಗೌಡರು ನಿದ್ದೆಯಿಲ್ಲದೆ ತಳಮಳಿಸುತ್ತಿದ್ದರು. ಪಾದಳ್ಳಿಯಲ್ಲಿ ಆ ರಾತ್ರಿ ನಿರ್ಣಾಯಕವಾಗಿತ್ತು. ಈ ನಾಲ್ಕು ವ್ಯಕ್ತಿಗಳ ಜೀವನಗಳು, ಬಾಳಿನ ಸೂತ್ರಗಳನ್ನೇ ಕೈಯಲ್ಲಿ ಹಿಡಿದುಕೊಂಡು ದೈವದೊಡನೆ ಜಿದ್ದು ಕಟ್ಟಿದ್ದವು. ಎಚ್ಚರಿಕೆಯಿಂದ ಆಟ ಸಾಗಬೇಕಾಗಿತ್ತು. ಇದಾವುದರ ಪರಿವೆಯಿಲ್ಲದೆ ನಿರ್ಲಕ್ಷ್ಯವಾಗಿ ರಾತ್ರಿ ಪಾದಳ್ಳಿಯ ಜೀವನವನ್ನು ನೋಡುತ್ತ ಬಿದ್ದುಕೊಂಡಿತ್ತು. ಬೆಳಗಾಗುವ ವರಲ್ಲಿ ಜೀವಿತದ ನಿರ್ಣಯವಾಗಲೇಬೇಕಿತ್ತು.

:: ೧೩ ::

ಮರುದಿನ ಬೆಳಗಾಗುತ್ತಲೇ ಚಾವಡಿಗೆ ಬರಲು ಫೌಜದಾರರಿಂದ ಗೌಡರಿಗೆ ಕರೆಬಂತು. ಪೋಲೀಸ ಅಧಿಕಾರಿ ಊರಲ್ಲಿರುವ ವರೆಗೆ ಗೌಡರಿಗೆ ಮಲಗಲು ಕೂಡ ಪುರುಸೊತ್ತಿರಲಿಲ್ಲ. ಅವರು ಅವಸರದಿಂದ ಚಾವಡಿಗೆ ಧಾವಿಸಿ ಬಂದರು. ಫೌಜದಾರರಲ್ಲಿ ನಿನ್ನಿನ ದರ್ಪ ಕಾಣಲಿಲ್ಲ. ವಿನಯದಿಂದ ಕರೆದು ಕೂಡಿಸಿಕೊಂಡರು. ಗೌಡರಿಗೆ ಈ ಸವಿಮಾತಿನಿಂದ ಸಂಶಯ ಬಂದಿತು. ಮತ್ತಾವ ಜಾಲ ತಮ್ಮ ಕಡೆಗೆ ಬೀಸಿದೆಯೋ ಗೊತ್ತಾಗಲಿಲ್ಲ.

ಫೌಜದಾರರು ಅವರಿಗೆ ಉಪದೇಶ ಮಾಡಿದ್ದು ಇಷ್ಟೇ. ಏನೇ ಮಾಡಿ ಪಡದಯ್ಯನವರೊಂದಿಗೆ ಆದ ಡೊಂಕನ್ನು ತಿದ್ದಿಕೊಳ್ಳಬೇಕು. ಫೌಜದಾರರ ಮಾವನ ಊರು ಅಜರಾಣಿಯಂತೆ. ಆದ್ದರಿಂದ ಅವರು ಚಿಕ್ಕಂದಿನಿಂದಲೇ ಪಡದಯ್ಯನ ಆಳವನ್ನು ಬಲ್ಲವರಾಗಿದ್ದರು. ಎಳಿಸಿಕ್ಕರೆ ಹೆಚ್ಚಡವನ್ನೇ ನುಂಗುವ ಉಪದ್ವ್ಯಾಪಿ ಪಡದಯ್ಯ. ಮೇಲಾಗಿ, ಮೇಲಿನ ಹುದ್ದೆಯ ಪೋಲೀಸ ಅಧಿಕಾರಿಗಳೆಲ್ಲ ಅವನ ಶಿಷ್ಯಕೋಟಿಯಲ್ಲಿದ್ದರು. ಮನಸ್ಸು ಮಾಡಿದರೆ ಪಾದಳ್ಳಿಯ ಪ್ರತಿಷ್ಠಿತರನ್ನೆಲ್ಲ ಜೇಲಿಗೆ ಕಳಿಸುವ ಸಾಮರ್ಥ್ಯ ಆತನಲ್ಲಿತ್ತು. ಆದ್ದರಿಂದ ಗೌಡರೂ ಪಡದಯ್ಯನೂ ಕೂಡಿಕೊಂಡು, ನಾನಾನ ಕೊಲೆಯ ಆರೋಪವನ್ನು ಸಿದ್ಧಗೊಳಿಸಲು ಯತ್ನಿಸಬೇಕು. ಆರೋಪಿಗೆ ಶಿಕ್ಷೆಮಾಡಿಸಲು ತಗಲುವ ವೆಚ್ಚವನ್ನು ಕೊಡಲು ಬಾಪೂಸಾಹೇಬ ತಯಾರಾಗಿದ್ದಾನೆ. ದಾದಾ ದೇಗೋ ಉದ್ಭಟ, ಪುಂಡುಗಾರ. ಒಂದು

ಲ್ಲೊಂದು ಆರೋಪದ ಮೇಲೆ ಅವನು ಜೇಲು ಕಾಣಬೇಕಾದವನೇ. ಆದ್ದರಿಂದ ಈಗಲೇ ಅವನನ್ನು ಜೇಲಿಗೆ ಕಳಿಸಿ, ಊರಿಗೆ ಒದಗಿದ ಗಂಡಾಂತರವನ್ನು ನಿವಾರಿಸಬೇಕು. ಇದೂ ಅಲ್ಲದೆ, ತಾವು ಕೇವಲ ಫೌಜದಾರರು. ಚಾರ್ಜಶೀಟ ತಯಾರಿಸುವದಷ್ಟೇ ತಮ್ಮ ಕೆಲಸ. ನ್ಯಾಯನಿರ್ಣಯ ಮಾಡುವದು ಮ್ಯಾಜಿಸ್ಟ್ರೇಟರಿಗೆ ಸೇರಿದ್ದು. ದಾದಾ ನಿರಪರಾಧಿಯೇ ಆಗಿದ್ದರೆ, ಅಲ್ಲಿ ಮುಂದೆ ಪಾರಾಗಿ ಬರಲಿ. ಒಟ್ಟು ಗೌಡರು ಈಗ ಹಿಂಜರಿಯಬಾರದು.

ಈ ಎಲ್ಲ ಮಾತುಗಳಿಂದ ನಾನಾನ ಕೊಲೆ ಆಗಿದೆ ಎಂಬ ಸಿದ್ಧಾಂತವನ್ನೆ ಫೌಜದಾರರು ತಮ್ಮ ತಲೆಯಲ್ಲಿ ತುಂಬಿಕೊಂಡಿರುವರು. ನಾನಾನ ಕೊಲೆಯಾಗಿದೆ ಎಂದು ಸಿದ್ಧವಾದರೆ ಕೊಲೆಯ ಗುನ್ಹೆ ಬಚ್ಚಿಟ್ಟ ಅಪರಾಧಿ ತಾನಾಗುವ ಪ್ರಸಂಗ ಬರುವದೆಂದು ಗೌಡರಿಗೆ ಒಳಗೇ ನಡಗು ಹುಟ್ಟಿತು. ನಾನಾನ ಕೊಲೆಯೇ ಆಗಿಲ್ಲವೆಂದ ಮೇಲೆ,ದಾದಾನಂಥ ನಿರಪರಾಧಿ ಹುಡುಗನ ಮೇಲೆ ಆರೋಪವಿಡುವದೇ? ದಾದಾ ಉದ್ಧಟನಿರಬಹುದು; ಅವಿನಯದಿಂದ ವರ್ತಿಸಿರಬಹುದು; ಪಡದಯ್ಯನ ಮೇಲೆ ಏರಿ ಹೋಗಿರಬಹುದು. ಆದರೆ ಇನ್ನೂ ಹುಡುಗ ಚಿಕ್ಕವನು; ಬಿಸಿ ನೆತ್ತರ ತಣ್ಣಗಾಗಿಲ್ಲ; ತಂಗಿಗಾದ ಅಪಮಾನ ಅವನ ತಲೆ ತಿರುಗಿಸಿದೆ. ದಾದಾನ ತಪ್ಪುಗಳೆಲ್ಲ ಸಣ್ಣವು.ಎಡವಿದ ಕಲ್ಲುಗಳನ್ನೆಲ್ಲ ಉಡಿಯಲ್ಲಿ ಹಾಕಿಕೊಳ್ಳುವದು ಫೌಜದಾರರಂಥ ದೊಡ್ಡವರಿಗೆ ಶೋಭಿಸುವಂಥದಲ್ಲ.ಇನ್ನು ಪಡದಯ್ಯನ ಸ್ನೇಹ. ಊರಲ್ಲಿ ಹುಟ್ಟಿದ ಸಕಲ ಅನರ್ಥಗಳಿಗೂ ಅವನೇ ಕಾರಣನಾಗಿದ್ದ. ಆದರೂ ಸಾಹೇಬರು ಹೇಳುತ್ತಾರೆಂದ ಮೇಲೆ ಅದರ ಬಗ್ಗೆ ವಿಚಾರ ಮಾಡಲಡ್ಡಿಯಿಲ್ಲ. ಯಾವುದಕ್ಕೂ ವೇಳೆ ಬೇಕು. ನಿಂತಕಾಲ ಮೇಲೆ ಇಂಥ ಪ್ರಶ್ನೆಗಳಿಗೆ ಉತ್ತರ ಕೊಡಲು ಸಾಧ್ಯವಾಗುವದಿಲ್ಲ. ಗೌಡರು ತಮ್ಮ ಮನದಾಶಯವನ್ನು ಹೀಗೆ ತಿಳಿಸಿದರು.

ಗೌಡರು ತಮ್ಮ ಮಾತನ್ನು ಕೇಳಿ ಕೆಲವೊಂದು ವಿಷಯಗಳನ್ನಾದರೂ ಒಪ್ಪಿಕೊಂಡರೆಂದು ಫೌಜದಾರರಿಗೆ ಸಮಾಧಾನವಾಗಿತ್ತು. ಇಷ್ಟು ಹೇಳಿ ಅವರು ಪ್ರಾತರ್ವಿಧಿಗಳನ್ನು ತೀರಿಸಲು ಎದ್ದರು.

ಗೌಡರೂ ಏಳಬೇಕಾಗಿತ್ತು. ಮಾಗಿಯ ಬಿಸಿಲು ಆಗಲೇ ಸುಡುತ್ತಿತ್ತು. ಇನ್ನೂ ಸ್ನಾನವಾಗಿರಲ್ಲಿಲ್ಲ, ಶಿವಪೂಜೆಯಾಗಿರಲಿಲ್ಲ. ಮನೆಯಲ್ಲಿ ದನಕರ, ಆಳುಹೋಳು ಇವುಗಳ ಬಗ್ಗೆ ಚಿಂತಿಸಲು ಕೂಡ ಬಿಡುವುದೊರೆತಿರಲಿಲ್ಲ, ಹಗಲು ರಾತ್ರಿ ಫೌಜದಾರಸಾಹೇಬರ ಮರ್ಜಿಕಾಯುವದರಲ್ಲೇ ಸಮಯ ಕಳೆದು ಹೋಗಿತ್ತು.

"ಇವೇನು ಹೊತ್ತು ತಂದೆ ಶಿವನೇ!" ಎಂದು ನಿಟ್ಟುಸಿರು ಬಿಟ್ಟು ಮೊಜ್ಜಿಗಳನ್ನು ಹಾಕಿಕೊಂಡು ಚಾವಡಿಯ ಕಟ್ಟೆಯನ್ನಿಳಿಯುತ್ತಿದ್ದರು.

ಅಷ್ಟರಲ್ಲಿ ಓಲೆಕಾರ ಮಲ್ಲನು ಓಡುತ್ತ ಅಲ್ಲಿಗೆ ಬಂದ. ಅವನು ದೆಸೆಬಾಯಿ ಬಿಡುವದನ್ನು ಕಂಡೇ ಗೌಡರು ಒಳಗಿಂದೊಳಗೇ ತತ್ತರಿಸಿದರು. "ಗೌಡರಃ, ಹೊಲಿಗೇರ್ಯಾಗ ಆ ಬಾಳ್ಯಾ ಇದ್ದನಲ್ಲರೀ,ಅವನ ಬಾಳೇವಃ ಹಾಳಾತರೀ ಯಪ್ಪಾ" ಎಂದು ವರದಿ ಮಾಡಿದ.

"ಒಟ್ಟನ ವ್ಯಾಗ ಇಂದ ಎದ್ದ ಯಾಳೇ ನೆಟ್ಟಗಿಲ್ಲಲೇ ! ಎಲ್ಲಿ ಕೇಳಿದರೂ ಬಾಳೇಗೇಡಿತನದ ಮಾತಃ ಕೇಳಾಕ ಹತ್ಯಾವು. ಏನರ ಆಗಿತ್ತಂತಲೇ? ಪೂರಾ ಹಕೀಕತ್ತರೇ ಏನು ಹೇಳಬಾರದಃ ಗಡಾಗಡಾ?" ಎಂದು ಅಸಹನೆಯಿಂದ ನುಡಿದರು. ಈ ಎರಡು ದಿನ ಅವರ ತಲೆ ಸ್ತಿಮಿತದಲ್ಲಿರಲಿಲ್ಲ.

"ಏನ ಹೇಳೂದೈತರಿ? ಎಲ್ಲಾ ಇಚಿತ್ರ ಕಾಣಾಕಃ ಹತ್ತೇತಿ. ಒಂದಃ ರಾತ್ರ್ಯಾಗ ಬಾಳ್ಯಾ, ಅವನ ಹೇಣ್ತೀ, ನಾಕು ಮಕ್ಕಳು ಸತ್ತು ಸುಡಗಾಡ ಕಂಡಾರ್ರೀ" ಎಂದು ಮಲ್ಲ ಗಾಬರಿತುಂಬಿ ಹೃದಯವಿದ್ರಾವಕವಾಗುವಂತೆ ಬಣ್ಣಿಸಿದ.

ಗೌಡರಿಗೆ ಅಲ್ಲಿ ನಿಲ್ಲಲಾಗಲಿಲ್ಲ. ಸ್ನಾನ, ಶಿವಪೂಜೆಯ ನೆನಪೂ ಆಗಲಿಲ್ಲ. ಆಗಿಂದಾಗ ಮಲ್ಲನೊಡನೆ ಓಡುತ್ತ ಹೊಲಗೇರಿಗೆ ಬಂದು ಮುಟ್ಟಿದರು. ಬಾಳ್ಯಾ ಇದ್ದ ಚಪ್ಪರದ ಹತ್ತಿರ, ಅವನ ಸಂಬಂಧಿಕರು,ನೆರೆಹೊರೆಯವರದೊಂದು ದೊಡ್ಡ ಗುಂಪು ಸೇರಿಬಿಟ್ಟಿತ್ತು. ಅವರೆಲ್ಲ ಎದೆಎದೆ ಬಡಿದುಕೊಂಡು ಅಳುವದೂ, ಬೊಬ್ಬೆ ಹೊಡೆಯುವದೂ ದೂರದಿಂದಲೇ ಕೇಳಿಸುತ್ತಿತ್ತು. ಗೌಡರು ಬರುವದನ್ನು ನೋಡಿದಾಗಲಂತೂ, ಅವರ ದುಃಖಕ್ಕೆ ಮಹಾಪೂರ ಬಂದಂತಾಯಿತು.

ಬಾಳ್ಯಾನ ಅಣ್ಣ ಕಾಶ್ಯಾ, ಓಡಿ ಬಂದು ಬಿಕ್ಕಿಬಿಕ್ಕಿ ಅಳುತ್ತ ಗೌಡರ ಕಾಲಿಗೆ ಬಿದ್ದ. "ಅತ್ತರ ಸತ್ತವರೇನು ಎದ್ದ ಬರತಾರೇನು ತಮ್ಮಾ? ಅಳಬ್ಯಾಡತಗಿ." ಎಂದು ಗೌಡರು ಔಪಚಾರಿಕವಾಗಿ ಸಮಾಧಾನ ಹೇಳಿದರು. ಆದರೂ ತಾವು ಹೇಳುವದೆಲ್ಲ ರೂಢಿ, ಸಂಪ್ರದಾಯ ಎಂದೆನಿಸಿತು. ಅದರಿಂದೇನು ಈ ಬಡವರಿಗೆ ಪ್ರಯೋಜನ, ಎಂದು ಅವರ ಕಂಠ ಬಿಗಿದು ಬಂದಿತು.

"ಊರ ಬಡವರ ತಂದಿ, ನಿನ್ನ ಕಣ್ಣ ಮುಂದಃ ನಿನ್ನ ಮಗಾ ಹ್ಯಾಗ ಸತ್ತ ಮಲಗ್ಯಾನ ನೋಡ ಯಪ್ಪಾ" ಎಂದು ಬಾಳ್ಯಾನ ಅಕ್ಕ ಆಕ್ರೋಶ ಮಾಡಿ ಹಾಡಿ

ಹಾಡಿಕೊಂಡು ಅಳಹತ್ತಿದಳು. "ಬಾಳ್ಯಾ, ನನ್ನ ಬಂಗಾರ ಏಳೋ, ಗೌಡರು ಬಂದಾರ ಏಳೋ" ಎಂದು ಅಳುತ್ತ ಹೆಣದ ಮೇಲೆ ಬಿದ್ದು ಹೊರಳಾಡಹತ್ತಿದಳು.

ಹೊಲಗೇರಿಯ ಜನರೆಲ್ಲ ಬಾಪೂಸಾಹೇಬನ ಪಕ್ಷಪಾತಿಗಳು. ಅವರು ಮೊದಲಿನಿಂದಲೂ ಜಾಗೀರದಾರರ ಒಕ್ಕಲು. ವಾಡೆಯಿಂದ ಅವರಿಗೆ ಕಾಳು ಸಿಕ್ಕೀ ಸಿಗುವದೆಂದು, ಗೌಡರು ಹೊಲಗೇರಿಯಲ್ಲಿ ತಮಗೆ ಬೇಕಾದವರಿಗೆ ಮಾತ್ರ ಕಾಳು ಕೊಟ್ಟಿದ್ದರು. ಈ ಬಾಳ್ಯಾ, ಹೋದ ವರ್ಷ ಗೌಡರ ಹೊಲದಲ್ಲಿ ಕಳವಿನಿಂದ ಬಾಟಿ ಕಿತ್ತಿದ್ದಕ್ಕಾಗಿ ಮೈಮುರಿಹೊಡೆತ ತಿಂದಿದ್ದ. ಆ ತಪ್ಪಿಗಾಗಿ ಎಮ್ಮೆಯನ್ನು ಮಾರಿ ದಂಡ ಕೊಡಬೇಕಾಗಿತ್ತು. ಅಂದಿನಿಂದ ಅವನ ಪ್ರಕೃತಿ ಸರಿಯಾಗಿರಲಿಲ್ಲ. ಮನೆಯಲ್ಲಿ ದುಡಿಯುವವನೆಂದರೆ ಅವನೊಬ್ಬನೇ. ಹೆಂಡತಿ ಹಸಿ ಬಾಣಂತಿ; ಮಕ್ಕಳು ತೀರ ಚಿಕ್ಕ ವಯಸ್ಸಿನವು. ಹೀಗಾಗಿ ಕೆಲ ದಿನ ಅರೆಹೊಟ್ಟೆಯುಂಡು, ಕೆಲದಿನ ಉಪವಾಸ ಬಿದ್ದು ಅವನು ಹಣ್ಣಾಗಿದ್ದ. ಹೊಲಗೇರಿಯಲ್ಲಿ ಅವನಿಗೆ ಕಾಳು ಕೊಟ್ಟು ಪೋಷಿಸುವ ತ್ರಾಣವಿದ್ದವರೂ ಯಾರೂ ಇರಲಿಲ್ಲ. ನಿನ್ನೆಯೇ ವಾಡೆಯಿಂದ ಹೊಲೆಯರಿಗೆಲ್ಲ ಕಾಳು ಹಂಚಿದ್ದರು. ಆದರೆ ಹಾಸಿಗೆ ಹಿಡಿದಿದ್ದರಿಂದ ಬಾಳ್ಯಾ ಅಲ್ಲಿಗೆ ಹೋಗಿರಲಿಲ್ಲ.

ಬಾಳ್ಯಾನ ಮನೆಗೆ ಸಾಲುವಷ್ಟು ಕಾಳನ್ನು, ಅವನ ವಿಭಕ್ತ ಅಣ್ಣ ತಾನೇ ಹೊತ್ತು ತಂದು ಬಾಳ್ಯಾನ ಗುಡಿಸಲಲ್ಲಿ ಸುರುವಿ ಹೋಗಿದ್ದ. ಬಾಳ್ಯಾನ ಕುಟುಂಬದವರು, ಅದೇ ಕಾಳನ್ನೇ—ಎಷ್ಟೇ ದುರ್ಗಂಧದಿಂದ ತುಂಬಿದ್ದರೂ—ಬೀಸಿ ರೊಟ್ಟಿ ಮಾಡಿ ತಿಂದಿದ್ದರು. ಹಸಿದ ಹೊಟ್ಟೆಗೆ ಮುಗ್ಗು ಜೋಳ ವಿಷವಾಗಿ ಪರಿಣಮಿಸಿತ್ತು. ಅದೇ ಕಾರಣವಾಗಿ ಕಾಲರಾ ಬಂದಂತೆ, ಹೊಟ್ಟೆ ಜಾಡಿಸಿ, ವಾಂತಿಯಾಗಿ, ಯಾರ ಉಪಚಾರವನ್ನೂ ಕಾಣದೆ, ಈ ಕುಟುಂಬ ಒಂದು ರಾತ್ರಿಯಲ್ಲಿ ಮರಣ ಹೊಂದಿತ್ತು.

ಈ ವಿವರಗಳನ್ನು ನೆರೆದ ಜನರ ಬಾಯಿಂದ ಕೇಳಿ ಗೌಡರು ಮರುಗಿದರು. ಹರಕು ತಟ್ಟಿನ ಮೇಲೆ ಬಿದ್ದಿದ್ದ ಆ ಮಕ್ಕಳು, ಆ ಬಾಣಂತಿ, ಎಲುಬಿನ ಹಂದರವಾಗಿದ್ದ ಆ ಬಾಳ್ಯಾ ಇವರ ಪ್ರೇತಗಳನ್ನು ನೋಡಿದಾಗ ಗೌಡರ ಕಣ್ಣನೀರು ತಡೆಯಲಿಲ್ಲ. ಪಾದಳ್ಳಿಗೆ ಯಾರ ಶಾಪ ಬಡೆದಿದೆ ಎಂದೆನಿಸಿತು. ಹೊತ್ತ ಧೋತರದ ಸೆರಗಿನಿಂದ ಕಣ್ಣೊರೆಸಿಕೊಳ್ಳುತ್ತ "ವಾಡೇದಿಂದ ತಂದ ಜ್ವಾಳಾ ಯಾರೂ ತಿನ ಬ್ಯಾಡ್ರಿ. ನಮ್ಮ ಮನೀಗೆ ಬಂದು, ನಿಮಗೊಂದ ತಿಂಗಳ ಸಾಲೂವ್ಹೋಟು ಕಾಳು

ಬಯ್ರಿ" ಎಂದು ನೆರೆದವರಿಗೆಲ್ಲ ಹೇಳಿದರು.

ಗೌಡರಿಗೆ ಕರ್ತವ್ಯಪ್ರಜ್ಞೆಯೊಂದು ಜೆನ್ನು ಹತ್ತಿತ್ತು. ಇನ್ನು ಚಾವಡಿಗೆ ಹೋಗಿ ಫೌಜದಾರರಿಗೆ ಈ ದುರ್ಮರಣದ ವರದಿಯನ್ನೊಪ್ಪಿಸಬೇಕು. ಇದೇ ವಿಚಾರದಿಂದ ಅತ್ತಕಡೆಗೆ ಹೊರಟಾಗ, ದಾರಿಯಲ್ಲಿ ಕಟಬೂರ ಕೇರಿಯಲ್ಲಿಯೂ ಬೊಬ್ಬೆ ಇಟ್ಟು ಅಳುವ ದನಿ ಕೇಳಿಸಿತು. ಅಲ್ಲಿ ಒಬ್ಬ ಮುದುಕಿ, ಒಂದು ಕೂಸು ಇದೇ ರೋಗದಿಂದ ಸತ್ತಿದ್ದರಲ್ಲದೆ, ವಾಡೆಯ ಜೋಳ ತಿಂದ ಹಲವರು ಕಾಲರಾಪೀಡಿತರಾಗಿರುವರೆಂದು ತಿಳಿದು ಬಂತು. ಗೌಡರು ತತ್ತರಿಸಿದರು. ಇನ್ನೂ ಏನೇನು ಕೇಳುವ, ಅಥವಾ ನೋಡುವ ದೈವವಿದೆಯೋ ಎಂದು ನೆನೆದರು.

ಮಲ್ಲನನ್ನು, ಡಂಗುರ ಹೊಡೆಯುವವನನ್ನು ಕರೆಯಲು ಕಳಿಸಿ, ಗೌಡರು ಚಾವಡಿಗೆ ಬಂದರು. ಪಡಮಯ್ಯ ಹಾಗೂ ಬಾಪೂಸಾಹೇಬರಿಗೆ ಹೇಳಿಕಳಿಸಿ ಅವರ ದಾರಿ ಕಾಯುತ್ತ ಫೌಜದಾರರು ಕುಳಿತುಕೊಂಡಿದ್ದರು. ಗೌಡರು ಈ ದುರ್ಮರಣದ ವರದಿಯನ್ನು ಅವರಿಗೊಪ್ಪಿಸಿ, ಈ ರೋಗ ವಾಡೆಯ ಜೋಳದಿಂದುಂಟಾಗಿದೆ ಯೆಂದು ಹೇಳಿದರು. ಇನ್ನಾದರೂ ಈ ಸಾಮೂಹಿಕ ವಿಷಪ್ರಯೋಗ ನಿಲ್ಲಬೇಕೆಂದು ಅವರ ಅಭಿಪ್ರಾಯ. ಮಾದರ ಚನ್ನ ತಂದ ಜೋಳವನ್ನು ನೋಡಿದ್ದ ಫೌಜದಾರ ರಿಗೂ ಈ ಮಾತು ಒಪ್ಪಿಗೆಯಾಯಿತು.

"ಏನ ಕಾಳರೀ? ಎರಡೆರಡು ಸರೆ ಕೈ ತೊಳಕೊಂಡರೂ ಕೈಯ ಘಾಣ ಹೋಗಲಿಲ್ಲ! ಅಂಥಾ ಕಾಳು ತಿಂದು ಸತ್ತರ ಏನೂ ಕಮಾಲ ಇಲ್ಲ." ಎಂದು ಫೌಜದಾರರು ತಮ್ಮ ಅನುಮತಿಯನ್ನು ವ್ಯಕ್ತಪಡಿಸಿದರು.

"ವಾಡೆಯಿಂದ ತಂದ ಜೋಳವನ್ನು ಯಾರೂ ತಿನ್ನಬಾರದು. ತಿಂದರೆ ಕಾಲ ರಾದ ಭಯವಿದೆ; ಜೋಳ ಒಯ್ದವರು ಅದನ್ನು ಚಾವಡಿಗೆ ತಿರುಗಿ ತಂದು ಮುಟ್ಟಿಸಬೇಕು. ಕಾಳಿಲ್ಲದವರು ಗೌಡರ ಮನೆಗೆ ಬಂದು ಕಾಳು ಒಯ್ಯಬೇಕು." ಎಂದು ಡಂಗುರ ಸಾರಲು ಗೌಡರು ಅಪ್ಪಣೆಯಿತ್ತರು.

ಬಿಸಿಲಿನಲ್ಲಿ ಚನ್ನಾಗಿ ಕಾಯ್ದ ಹಲಿಗೆಯ ಸಪ್ಪಳ, ಅದನ್ನೂ ಮೀರಿಸುವ ಡಂಗುರದವನ ಕಂಚಿನ ದನಿಯನ್ನು ಕೇಳಿ, ಸಿಡಿಲಿನ ಗುಡುಗನ್ನೇ ಕೇಳಿದಂತೆ ಜನ ರೆಲ್ಲ ಭಯಗ್ರಸ್ತರಾದರು. ನಾನಾನ ಮರಣವಾದಂದಿನಿಂದ, ಹಾದಳ್ಳಿಗೆ ವಿಪತ್ತು ಗಳು ಸಾಲಾಗಿ ಬಂದರ ಮೇಲೊಂದರಂತೆ ದಾಳಿಯಿಟ್ಟಿದ್ದವು. ಆ ಸಂಕಟಗಳ ಘೋರ ಅವತಾರವೆಂಬಂತೆ ಫೌಜದಾರ ಊರಲ್ಲಿ ಬೀಡುಬಿಟ್ಟಿದ್ದ. ಎಲ್ಲಕ್ಕೂ ಕಳಸ

ವಿಡುವಂತೆ, ಕಾಲರಾ ಪಿಡುಗು ದೂರದಿಂದಲೇ ಸನ್ನೆ ಮಾಡುತ್ತ ಊರನ್ನೇ ನುಂಗುತ್ತೇನೆಂದು ಹೆದರಿಸುತ್ತಿತ್ತು.

ಈ ಡಂಗುರವನ್ನು ಕೇಳಿ ಪಡದಯ್ಯನವರಿಗೆ ಸಿಟ್ಟು ತಡೆಯದಾಯಿತು. ವಾಡೆಯಿಂದ ಒಯ್ದ ಜೋಳವನ್ನು ತಿನ್ನಬಾರದೆಂದು ಹೇಳುವದು ಅಪಪ್ರಚಾರ ವಲ್ಲದೆ ಮತ್ತೇನು? ಬಡ ಜನರಲ್ಲಿ ತನ್ನ ವರ್ಚಸ್ಸನ್ನು ಸ್ಥಾಪಿಸಲು ಗೌಡ ಹೂಡಿದ ಹೊಸ ತಂತ್ರ ಇದು, ಎಂದು ಅವರ ವಿಚಾರ. ವಾಡೆಯ ಜೋಳ ಹಗೆ ಬಿದ್ದು ನಾಲ್ಕಾರು ವರುಷಗಳಾಗಿದ್ದರಿಂದ ಮುಗ್ಗಾಗಿರಬಹುದು. ಆದರೆ ಅಷ್ಟು ಸಣ್ಣ ಕಾರಣದಿಂದಲೇ ಕಾಲರಾ ಬರಬಹುದೇ? ವಾಡೆಯ ಜೋಳವನ್ನು ಚಾವಡಿಗೆ ತರಿಸಿ, ತಿರುಗಿ ಅದನ್ನೇ ಕಡವೆಂದು ಬಡವರಿಗೆ ಹಂಚುವ, ಗೌಡನ ಗತ್ತುಗಾರಿಕೆ ಇದೆಲ್ಲ. ಈ ಮಾತನ್ನು ಬಾಪೂಸಾಹೇಬನಿಗೆ ತಿಳಿಸಿ, ಫೌಜದಾರರಿಗೆ ಹೇಳಿಸಿ, ಈ ಡಂಗುರ ಖೊಟ್ಟಿ ಎಂದು ಬಯಲಿಗೆಳೆಯಬೇಕು. ಇದೇ ವಿಚಾರದಲ್ಲಿ, ಪಡದಯ್ಯ ನವರು ಬಾಪೂಸಾಹೇಬನನ್ನು ಕರೆದುಕೊಂಡು ಬರಲು ಕೆಂಚನನ್ನು ಕಳಿಸಿದರು.

ಕೆಂಚ ವಾಡೆಯಿಂದ ಬೇಗ ಮರಳಿ ಬರಲಿಲ್ಲ. ಅವನಿಗಿಂತ ಮೊದಲೇ ಬಾಪೂ ಸಾಹೇಬ ಮಠದ ಕಡೆಗೆ ಅವಸರದಿಂದ ಬಂದ. ಅವನ ಮುಖ ನೋಡಿ ಪಡದಪ್ಪ ನವರಿಗೆ, ಏನೋ ಸಂಕಟ ಪ್ರಾಪ್ತವಾಗಿದೆಯೆಂಬ ಸಂಶಯ ಬಂದಿತು. ಬಹುಶಃ ಯಾರೂ ಸಾಕ್ಷಿ ಹೇಳಲು ಒಪ್ಪಿರಲಿಕ್ಕಿಲ್ಲವೆಂದು ಅವರು ತರ್ಕಿಸಿದರು.

ಬಾಪೂಸಾಹೇಬ ಬರಿಗಾಲಿನಿಂದ, ತಲೆಯ ಮೇಲಿನ ಮುಂಡಾಸದ ಪರಿವೆ ಇಲ್ಲದೆ ಓಡುತ್ತ ಬಂದಿದ್ದ. ಮುಖ ಗಾಬರಿಯಿಂದ ಹುಚ್ಚು ಹುಚ್ಚು ಸುರಿಯು ತ್ತಿತ್ತು. ಓಡಿಬಂದಿದ್ದರಿಂದ ತೇಕು ಹತ್ತಿತ್ತು. ಪ್ರಯಾಸದಿಂದ ಪಡಸಾಲೆಯ ಕಟ್ಟೆಯನ್ನೇರಿ, ಪಡದಪ್ಪನವರನ್ನು ಕೈಸನ್ನೆಯಿಂದಲೇ ಅವರ ಅಂತರಂಗದ ಕೋಣೆಗೆ ಕರೆದನು.

ಪಡದಪ್ಪನವರು ಕೋಣೆಯಿಂದ ಹೊರಗೆ ಬರುವಷ್ಟರಲ್ಲಿಯೇ ಕೆಂಚ ತಲೆ ಬಾಗಿಲಿನಿಂದ ಓಡುತ್ತೋಡುತ್ತ ಬರುತ್ತಿದ್ದ. ಪಡದಯ್ಯನವರು ಏನೂ ಅರಿಯ ದವರಂತೆ "ಯಾಕಲೇ ಕೆಂಚಾ, ಬಾಪೂಸಾಬರ್ನ ಕರಕೊಂಡು ಬರಾಕ ಈಟೊತ್ತು ಹಿಡಿತೇನಲೇ? ಗೌಡರ ಡಂಗರಾ ಕೇಳಿಕೊಂತ ನಿಂತಿದ್ದೇನ ಮಗನ? ಮುದಕ ದರೂ ಹುಡುಗಾಟಿಗೆ ಹೋಗಲಿಲ್ಲಲೇ ನಿಂದು." ಎಂದು ಜಬರಿಸಿದರು.

ಆದರೆ ಕೆಂಚ ಗರಹೊಡೆದಂತೆ ನಿಂತಿದ್ದ. ಅವನಿಗೆ ದಿಗ್ಭ್ರಮೆಯಾದಂ

ತ್ತಿತ್ತು. ಅವನ ಬಾಯಿಂದ ಮಾತುಗಳೇ ಹೊರಡಲಿಲ್ಲ. ಪಡದಯ್ಯನವರ ಪ್ರಶ್ನೆ ಅವನ ತಲೆಯಲ್ಲಿ ಹೊಗಲೇ ಇಲ್ಲ. ಸ್ವಲ್ಪ ಹೊತ್ತು ತಡೆದು " ಗಾತ ಆಗೇತರಿ ಬುದ್ಧೀ, ಗಾತಾತು. ಪುತಳಾಬಾಯಿ! . . . . " ಅರ್ಧಕ್ಕೇ ತಡೆದ.

" ಏನಾಗೇತಿ ಹೇಳಲೇ? ಹಿಂಗ್ಯಾಕ ನಾಲಗಿ ಸವರ್ಯಾಡತಿ? " ಪಡದಯ್ಯನವರು ಸಿಟ್ಟಿಗೆದ್ದಂತೆ ನಟಿಸಿದರು.

"ಆಗೂದೆಲ್ಲಾ ಆಗಿ ಹೋಗೇತಿ ಬುದ್ಧೀ, ಪುತಳಾಬಾಯಿ ರಾಮ ಅಂದಾಳು" ಕೆಂಚ ಗಟ್ಟಿ ಮನಸ್ಸುಮಾಡಿ ಹೇಳಿದ. ಅರುವತ್ತು ವರ್ಷದ ಆ ವಿಕೃತ ವೇದಾಂತಿಗೂ ಕಣ್ಣೀರು ಉಕ್ಕಿಬಂದಿದ್ದವು.

"ಎಚ್ಚರ ಐತ್ಯೋ ಏನ್ ನಿಶೇದಾಗs ಮಾತಾಡತೀಯೋ? " ಪಡದಯ್ಯನವರು ಮತ್ತೆ ಜಬರಿಸಿದರು.

"ಉರ್ಲ ಹಾಕ್ಕೊಂಡು ಕೋಲ್ಯಾಗ ಜೋತಾಡೂದನ್ನು ನೋಡಿ ಬಂದೀನಿ ಬುದ್ಧೀ, ಅದನ್ನು ನೋಡಿದರ ನಿಶೇ ಇಳಿದು ಹೌಹಾರಿ ಹೋಗೂವಂತಾ ಬಯಂಕರ ಆಗೇತರೀ " ಕೆಂಚ ಹೌಹಾರಿ ಹೇಳುತ್ತಿದ್ದ.

"ಬಾಪೂಸಾಹೇಬರು ಇದs ಈಗ ವಾಡೇದಿಂದ ಬಂದಾರು. ಅವರಿಗೆ ಏನೂ ಗೊತ್ತಿಲ್ಲ. ನಿನಗ ಯಾರು ಹೇಳಿದರಲೇ?" ಗಾಬರಿಗೊಂಡಂತೆ ಪಡದಯ್ಯನವರು ಕೇಳಿದರು.

" ಯಾರು ಯಾಕ ಹೇಳಾಕ ಬೇಕರೀ ಬುದ್ಧೀ? ನಾ ಹೋದಾಗ ಯಮುನಾ ಕೋಲಿ ಬಾಕಲದಾಗ ನಿಂತಿದ್ದಳರೇ. ಬಾಪೂಸಾಬರು ಅಲ್ಲೇನೂ ಕಾಣಲಿಲ್ಲ. ಒಳಗ ಇದ್ದಾರಾದೀತು. ಬರಲಿ ಅಂತ ಅಲ್ಲೇ ನಿಂತಾಗ, ಒಮಾಕಲೆ ಏನಾತೋ ಏನೋ, ಯಮುನಾ ಬಿಕಿಬಿಕ್ಕಿಸಿ ಅತಗೊಂತ ಒಳಗ ಹೋದಳರಿ. ಯಾಕ ಯಮುನಾ, ಅಳತೀದಿ ಅಂತ ಕೇಳಾಣಾ, 'ನೋಡೋ ಯಣ್ಣಾ ಕೋಲಿ ಬಾಕಲ ಒಳಚಿಲಕ ಹಾಕೇತಿ. ಪುತಳಾಬಾಯಿ ಅಕ್ಕಾಅವರು ಎದ್ದೇ ಇಲ್ಲ' ಅಂದಳರಿ. ಹೋಗಿ ಬಾಕಲ ಸಂದಿನ್ಯಾಗಿಂದ ಹಣಿಕಿ ಹಾಕಿ ನೋಡಿದ್ನಿ. ನಮ್ಮವ್ವಾ ಉರ್ಲ ಹಕ್ಕೊಂಡು ಜೋತಾಡತಿದ್ದಳರಿ" ಎಂದು ಹೇಳಿದವನೇ ದುಃಖ ತಡೆಯಲಾರದೆ ಕೆಂಚನೂ ಬಿಕ್ಕಿಬಿಕ್ಕಿ ಅಳಹತ್ತಿದ.

ಕೆಂಚ ಇನ್ನೂ ಮಾತಾಡುತ್ತಿರುವಾಗಲೇ, ಬಾಪೂಸಾಹೇಬ ಹಾಗೂ ಪಡದಯ್ಯನವರು, ಆಗಲೇ ಬಾಗಿಲ ದಾಟಿ ವಾಡೇದತ್ತ ಓಡಿದ್ದರು. ಕೆಂಚನ ದುಃಖದ

ಆವೇಗ ಇನ್ನೂ ಇಳಿದಿರಲಿಲ್ಲ. ಧೋತರದ ಚುಂಗಿನಿಂದ ಕಣ್ಣೊರೆಸಿಕೊಳ್ಳುತ್ತ ಏನೇನೋ ವಿಚಾರದಲ್ಲಿ ಮಗ್ನನಾಗಿದ್ದ. ಅವನಿಗಿನ್ನೂ ಹೇಳಿಕೊಳ್ಳುವದಿತ್ತು. ಮದುವೆಯಾಗಿ ಬಂದಾಗಿನಿಂದ ಪುತಳಾಬಾಯಿಯನ್ನು ನೋಡಿದ್ದ ಅವನು. ತಾನು ಕಂಡದ್ದನ್ನೆಲ್ಲ ಇನ್ನೊಬ್ಬರ ಮುಂದೆ ಹೇಳಬೇಕಾಗಿತ್ತು. ಆದರೆ ಕೇಳಿ ಕೊಳ್ಳುವವರೇ ಅಲ್ಲಿರಲಿಲ್ಲ.

ಆಳುಗಳ ಸಹಾಯದಿಂದ ಕೋಣೆಯ ಬಾಗಿಲು ಮುರಿದು ಒಳಗೆ ಹೋಗ ಬೇಕಾಯಿತು. ಉರುಲಿನ ಹಗ್ಗವನ್ನು ಬಿಡಿಸಿ, ಹೆಣವನ್ನು ಇಳಿಸಿ ತಂದು ಹಾಸಿ ಗೆಯ ಮೇಲೆ ಮಲಗಿಸಿ ಹೊಚ್ಚಿದರು. ಬಾಪೂಸಾಹೇಬ ಮಗ್ಗುಲಲ್ಲಿ ಕುಳಿತು ಬಿಕ್ಕಿಬಿಕ್ಕಿಸಿ ಅಳಹತ್ತಿದ. ಆದರೆ ಅವನ ಅಳುದನಿಯಲ್ಲಿ ಎಲ್ಲಿಲ್ಲದ ಕೃತ್ರಿಮತೆ ಯಿತ್ತು. ನೆನಪು ಮಾಡಿಕೊಂಡು ಅಳಬೇಕಾಗುತ್ತಿತ್ತು ಅವನಿಗೆ.

ಪಡದಯ್ಯನವರು ಚಾವಡಿಗೆ ಬಂದರು. ಫೌಜದಾರರ ಮುಂದೆ ಕುಳಿತು, ದುಃಖದ ಆವಿರ್ಭಾವವನ್ನು ತಂದುಕೊಂಡು, “ರಾವಸಾಹೇಬ, ನಮ್ಮೂರ ಬಡ ವರ ತಾಯಿ, ಇಂವ ಕೈಲಾಸ ಕಂಡಳರಿ!” ಎಂದು ಹೇಳಿದರು.

ಕೆಟ್ಟ ಕಾಳು ತಿಂದು ಇನ್ನೊಂದು ಆಸಾಮಿ ಸತ್ತಿತೆಂದು ತರ್ಕಿಸಿದ ಫೌಜ ದಾರ ಸಾಹೇಬರು ಹುಬ್ಬುಗಂಟು ಹಾಕಿದರು. ಅವರು ಪಾದಳ್ಳಿಗೆ ಈ ಸತ್ತ ಸುದ್ದಿ ಗಳನ್ನು ಕೇಳಲಿಕ್ಕೆ ಬಂದಿರಲಿಲ್ಲ. ಯಾಕೆ ಈ ಜನ ಬಂದು ಸತ್ತ ಸುದ್ದಿಗಳನ್ನೆಲ್ಲ ತಮ್ಮ ಮುಂದೆ ಹೇಳುತ್ತಾರೋ! “ಏನು ಎದ್ದಾಗಿನಿಂದ ಇದೇ ಸುದ್ದಿ ಕೇಳೋ ದಾಗೇದಲ್ಲರೀ” ಎಂದು ಸ್ವಲ್ಪ ಅಸಹನೆಯಿಂದಲೇ ಕೇಳಿದರು.

“ಎಲ್ಲಾರಂತ ಮರಣ ಅಲ್ಲ ರಾವಸಾಹೇಬ ಇದು. ಹೊಟ್ಟೆಗೆ ಅನ್ನ ಇಲ್ಲದ ಬಡಮಂದಿ ಕೆಟ್ಟಕಾಳ ತಿನ್ನೂದನ್ನ ನೋಡಲಾರದೇ, ತಾನೂ ಕೆಟ್ಟ ಕಾಳ ತಿಂದು ಪುತಳಾಬಾಯಿ ಸತ್ತಳರೀ. ಬಾಪೂಸಾಹೇಬರು ಪರದೇಶಿಯಾದರು. ಊರಿಗೂರಽ ಪರದೇಶಿಯಾತು.” ಎಂದು ಪಡದಯ್ಯನವರು, ದುಃಖದ ಆವಿರ್ಭಾವದಿಂದಲೇ, ದುರ್ಮರಣದ ಮೇಲೆ ಭಾವನೆಯ ತೆರೆ ಎಳೆದರು.

ಆದರೆ ಯಾವಾಗಲೂ ಲೋಕದಲ್ಲಿ ಕೆಟ್ಟದ್ದರ ಜೊತೆಗೇ ಸಹವಾಸವನ್ನಿ ಟ್ಟುಕೊಂಡಿದ್ದ ಫೌಜದಾರಸಾಹೇಬರಿಗೆ ಈ ಮಾತು ನಂಬಿಕೆಯಾಗಲಿಲ್ಲ. ವಾಡೆಯ ಯಜಮಾನತಿ ಕೆಟ್ಟ ಕಾಳು ತಿಂದು ಸಾಯುವದೇ ಸಾಧ್ಯವಿಲ್ಲ ಎಂದು ಅವರಿಗೆ ಮನವರಿಕೆಯಾಗಿತ್ತು. “ಪಡದಯ್ಯನೋರಽ, ಈ ಕತ್ತಿಗೆ ಜರಾ ಬರೂ

ನಂತಾ ಮಾತು ನನ್ನ ಮುಂದ ಹೇಳಬ್ಯಾಡ್ರಿ. ಪುತಳಾಬಾಯೀ ಮರಣದ ಕಾರಣ ಹುಡುಕಿ ತಗಿಲಿಕ್ಕೇ ಬೇಕು. ಬಾಪೂಸಾಬ ಏನಂತಾನು?"

"ಏನನಬೇಕರಿ? ಪಾಪ, ತಂಪಃ ದುಕ್ಕ ಹಾಸಿ ಹೊತಗೊಂಡು ನಿಡಿಚಾಪಿ ಬಿದ್ದಾನರಿ. ಸರಕಾರ ಅದೀರಿ, ಏನ ಮಾಡತೀರ್ಸ್ಯೋ ಮಾಡರಿ." ಎಂದು ಪಡದಯ್ಯನವರು ಸುಮ್ಮಗಾದರು.

ಗೌಡರನ್ನು ಆಗಿಂದಾಗ ಮತ್ತೆ ಚಾವಡಿಗೆ ಕರೆಸಲಾಯಿತು. ಮನೆಗೆ ಹೋಗಿ ದನಕರಗಳ ವ್ಯವಸ್ಥೆಯನ್ನು ನೋಡಿಕೊಂಡು ಇನ್ನು ಮೇಲೆ ಸ್ನಾನ, ಶಿವಪೂಜೆ ಮುಗಿಸಬೇಕೆಂದಿದ್ದರು. ಮತ್ತೆ ಕರೆ ಬಂದೊಡನೆ ಅಸಹನೆಯಿಂದಲೇ ಬಂದರು. ಆದಷ್ಟು ಬೇಗ ಕೆಲಸ ಮುಗಿಸಿಕೊಂಡು ಹೋದರಾಯಿತೆಂದರು. ಆದರೆ ಬಂದ ಕೂಡಲೇ ಪುತಳಾಬಾಯಿಯ ಮರಣದ ಸುದ್ದಿಯನ್ನು ಕೇಳಿ ಅವರಿಗೂ ಸಿಡಿಲು ಬಡಿದಂತಾಯಿತು. ಫೌಜದಾರರೊಡನೆ ಅವರೂ ವಾಡೆಗೆ ಹೋಗಬೇಕಾಯಿತು.

ಅವರಿಬ್ಬರೂ ವಾಡೆಗೆ ಬಂದಾಗ ಅಲ್ಲಿ ದೊಡ್ಡ ಜನಸಮುದಾಯ ಸೇರಿತ್ತು. ಸುದ್ದಿಕೇಳಿದವರೆಲ್ಲ ಗುಂಪುಗುಂಪಾಗಿ ಬಂದು ಕೂಡಿದ್ದರು. ಹಗಲು ಹನ್ನೆರಡಾಗಲಿಕ್ಕೆ ಬಂದಿದ್ದರೂ ಒಬ್ಬರಿಗೂ ಮನೆ ಸೇರುವ ಆತುರವಿರಲಿಲ್ಲ. ಪ್ರತಿಯೊಬ್ಬರೂ ಮರಣದ ಕಾರಣ ಕೇಳುವವರೇ! ತಮಗೆ ತಿಳಿದ ರೀತಿಯಲ್ಲಿ ಕೆಲವರು ಕಾರಣ ಹೇಳುತ್ತಿದ್ದರು ವಾಡೆಯ ಭವಿತವ್ಯ ಮುಂದೇನು, ಎಂದು ಕೆಲವರ ಚಿಂತೆ. ಒಳಗೆ ಅಳುವದು ಚೀರುವದು ಅವ್ಯಾಹತವಾಗಿ ನಡೆದಿತ್ತು.

ಗೌಡರು ಹಾಗೂ ಫೌಜದಾರರು ಗದ್ದಲದಲ್ಲಿ ದಾರಿತೆರೆದು ಮುಂದೆ ಹೋದಾಗ ಅಳುಮೊಗದಿಂದ ಬಾಪೂಸಾಹೇಬ ಅವರನ್ನು ಸ್ವಾಗತಿಸಿದ. ಫೌಜದಾರರು ಅವನೊಡನೆ ಕೆಲ ಔಪಚಾರಿಕ ಮಾತುಗಳನ್ನಾಡಿ ಒಳಗೆ ನಡೆದರು. ಪುತಳಾಬಾಯಿ ಮಲಗಿದ್ದೆಲ್ಲಿ? ರಾತ್ರಿ ಅವಳ ಜೊತೆಗೆ ಯಾರಿದ್ದರು? ಈಗಿನ ಸ್ಥಳಕ್ಕೆ ಹೆಣವನ್ನು ಯಾವಾಗ ತಂದದ್ದು? ಈ ರೀತಿ ಒಬ್ಬೊಬ್ಬರಿಗೆ ಒಂದೊಂದು ಪ್ರಶ್ನೆಹಾಕಿ, ಅವರು ಹೇಳಿದ್ದರಲ್ಲಿ ತಾಳಮೇಳವಿಲ್ಲವೆಂದು ಕಂಡರು. ಪುತಳಾಬಾಯಿಯ ಮರಣ ವಿಷಪ್ರಯೋಗ ಇಲ್ಲವೆ ಆತ್ಮಹತ್ಯೆಯೆಂದು ಗೌಡರ ನಿಶ್ಚಿತವಾದ ಅಭಿಪ್ರಾಯವಾಗಿತ್ತು. ಹೆಣದ ಸುತ್ತಲೂ ವಾಡೆಯಲ್ಲಿಯ ಪರಿವಾರವೆಲ್ಲ ಘೇರಿಟ್ಟು, ಅಳುತ್ತಿರುವಾಗ ಹೆಣದ ಸೂಕ್ಷ್ಮ ಪರೀಕ್ಷಣೆ ಅಸಾಧ್ಯವೇ ಇತ್ತು, ಪಂಚ

ನಾಮೆಯಾಗಬೇಕೆಂದು ಗೌಡರು ತಿಳಿಸಿದಾಗ, ಬಲವಾದ ಕಾರಣಗಳಿವೆಯೆಂದು ಕಂಡು ಬಂದರೆ ಹಾಗೆ ಮಾಡಬಹುದೆಂದು ಹೇಳಿ ಫೌಜದಾರರು ಚಾವಡಿಗೆ ನಡೆದರು.

ವಾಡೆಯಲ್ಲಿ ಜರುಗುವ ಪ್ರತಿಯೊಂದು ಘಟನೆಯ ಹಿಂದೆಯೂ ಒಂದು ಕಾರಸ್ಥಾನದ ನೆರಳನ್ನು ಗುರುತಿಸುತ್ತಿದ್ದ ಗೌಡರು, ಪಂಚನಾಮೆ ನಡೆಸಿಯೇ ಬಿಟ್ಟರು. ಶವದ ಕೊರಳಿಗೆ ಹಗ್ಗ ನಟ್ಟ ಗುರುತು, ನಾಲಿಗೆ ಹೊರಗೆ ಚಾಚಿದ್ದು, ಉರುಲು ಹಾಕಿಕೊಂಡು ಜೀವಹೋದಾಗಿನ ಲಕ್ಷಣಗಳೆಲ್ಲ ಇರುವವೆಂದು ಗೌಡರು ಪಂಚನಾಮೆ ಬರೆಸಿದರು. ಇನ್ನೂ ಶವಪರೀಕ್ಷೆಗಾಗಿ ಹೆಣವನ್ನು ದವಾಖಾನೆಗೆ ಕಳಿಸಬೇಕೆಂದು ಗೌಡರ ವಿಚಾರವಿತ್ತು. ಆದರೆ ಫೌಜದಾರರು ಅದಕ್ಕೊಪ್ಪಲಿಲ್ಲ. ಅಂತ್ಯಸಂಸ್ಕಾರಕ್ಕಾಗಿ ಶವವನ್ನು ಬಾಪೂಸಾಹೇಬನಿಗೊಪ್ಪಿಸಬೇಕೆಂದು ನಿರ್ಣಯ ಕೊಟ್ಟರು.

ಆ ದಿನವೆಲ್ಲ ಇಡೀ ಪಾದಳ್ಳಿಯಲ್ಲಿ ಯಾರಿಗೂ ಉಂಡ ಊಟ ರುಚಿಸಲಿಲ್ಲ. ಅವರಿಗಿರುವ ಚಿಂತೆ ಒಂದೇ ಒಂದು – ವಾಡೆಯ ಮುಂದಿನ ಭವಿತವ್ಯವೇನು? ಇಲ್ಲಿಯ ವರೆಗೆ ಊರಿಗೆ ಒಂದೇ ಒಂದು ಆಶ್ರಯಸ್ಥಾನವಾದ ವಾಡೆ ಇಂದು ಬರಿದಾಗಿತ್ತು. ಲಕ್ಷ್ಮೀಬಾಯಿ ಹಿಂದಿರುಗಿ ಬರುವವರೆಗೆ ಅದು ಬರಿದಾಗಿಯೇ ಉಳಿಯುವದು. ಎಷ್ಟಾದರೂ ಬಾಪೂಸಾಹೇಬ ಪರಕೀಯ. ಪಾದಳ್ಳಿಯ ಆಸ್ತಿಯ ಮೋಹ ಅವನಿಗಿತ್ತೇ ಹೊರತು ಊರ ಅಭಿಮಾನವಿರಲಿಲ್ಲ. ಜಾಗೀರದಾರರ ವಾಡೆಯ ಪುಣ್ಯ ಇಂದು ತೀರಿದಂತಾಗಿತ್ತು. ಮರಣದ ಶೂನ್ಯತೆ ಅಲ್ಲಿ ಆವರಿಸಿತ್ತು. ಪುತಳಾಬಾಯಿಯ ಮರಣದ ದುಃಖಕ್ಕಿಂತ ಈ ಶೂನ್ಯತೆಯೇ ಅವರ ಜೀವಗಳನ್ನು ಹಿಂಡುತ್ತಿತ್ತು.

ನಿರ್ಜನವಾದ ಅರಣ್ಯದಲ್ಲಿ ನಡೆಯುವ ಒಂಟಿಗನಾದ ಪ್ರಯಾಣಿಕನಂತೆ ಹೊತ್ತು ಮೆಲ್ಲಗೆ ಸರಿಯುತ್ತಿತ್ತು. ವಾಡೆಯ ಸುತ್ತುಮುತ್ತಲೂ ಜನರು ಶೂನ್ಯ ಮನಸ್ಕರಾಗಿ ತಿರುಗಾಡುತ್ತಿದ್ದರು. ಶವದ ಅಂತ್ಯಸಂಸ್ಕಾರ ಇನ್ನೂ ಆಗಿರಲಿಲ್ಲ. ಬಾಪೂಸಾಹೇಬ ಕುದುರೆ ಸವಾರನೊಬ್ಬನನ್ನು ಅಜರಾಣಿಗೆ ಕಳಿಸಿ, ಯಶವಂತ ರಾಯರಿಗೆ ತೀವ್ರವಾಗಿ ಬರಲು ಹೇಳಿಕಳಿಸಿದ್ದ. ಅವರು ಬಂದ ನಂತರ ಶವದ ಅಂತ್ಯದರ್ಶನಕ್ಕೆ ಅವಕಾಶವಿರಲಿ ಎಂದುಕೊಂಡು, ಶವಸಂಸ್ಕಾರವನ್ನು ತಡೆ ಹಿಡಿಯಲಾಗಿತ್ತು. ವಾಡೆಯಲ್ಲಿ ಅಂದು ಒಲೆ ಹೊತ್ತಲಿಲ್ಲ. ಬಾಳಾಚಾರ್ಯರು ಇದ

ನ್ನರಿತುಕೊಂಡೇ ಬಾಪೂಸಾಹೇಬನನ್ನು ತಮ್ಮ ಮನೆಗೆ ಊಟಕ್ಕೆ ಕರೆದೊಯ್ದಿದ್ದರು. ಆಳು-ಹೋಳುಗಳಿಗೂ ಅಂದು ಕೆಲಸದಲ್ಲಿ ಮನಸ್ಸಿರಲಿಲ್ಲ. ಧಾಬೆಯ ದನಕರುಗಳನ್ನೆಲ್ಲ ಯಾರೋ ಮೇಯಲು ಹೊರಗೆ ಬಿಟ್ಟುಬಿಟ್ಟಿದ್ದರು. ಆಳುಗಳೆಲ್ಲ ಸುಮ್ಮನೆ ವಾಡೆಯ ಸದರಿನಲ್ಲಿ ಏನೇನೋ ಮಾತುಕತೆಗಳಲ್ಲಿ ತೊಡಗಿದ್ದರು. ಯಾರೋ ಬರುತ್ತಿದ್ದರು, ಹೋಗುತ್ತಿದ್ದರು. ಯಾರ ಲಕ್ಷ್ಯವೂ ಆ ಕಡೆಗಿರಲಿಲ್ಲ.

ಹೊತ್ತು ಮುಳುಗಿತು; ಪಾದಳ್ಳಿಯಲ್ಲಿ ಸಂಜೆ ಇಷ್ಟು ಉತ್ಸಾಹಹೀನವಾಗಿ ಎಂದೂ ತೋರಿರಲಿಲ್ಲ. ವಾಡೆಯ ದನಕರುಗಳು ಹಿಂದಿರುಗಿ ಬಂದವು. ಕಣ್ಣಿಗೆ ಬಿದ್ದ ಯಾರೋ ಪುಣ್ಯಾತ್ಮರು ಧಾಬೆಗೆ ಒಯ್ದು ಕಟ್ಟಿದರು. ವಾತಾವರಣದ ತುಂಬೆಲ್ಲ ಯಾಕೋ ದುಃಖ ನಿರಾಸೆಗಳೊಡನೆ ನಾಚಿಕೆಯೂ ಬೆರೆತಂತಿತ್ತು. ಎಲ್ಲರ ಮನಸ್ಸಿನಲ್ಲಿಯೂ, ಯಾವಾಗ ಹೊತ್ತು ಮುಳುಗಿ ಕತ್ತಲಾಗುವದೋ ಎಂಬ ನಿರೀಕ್ಷೆಯಿತ್ತು. ಹಗಲ ಬೆಳಕು ಯಾರಿಗೂ ಬೇಡವಾಗಿತ್ತು. ಒಳಗೆ ಬಾಪೂ ಸಾಹೇಬ ಅಪರಾಧಿಯಂತೆ ತಲೆತಗ್ಗಿಸಿಕೊಂಡೇ ಕುಳಿತಿದ್ದ. ಅವನ ಸುತ್ತಲೂ ಕುಳಿತ ಪರಿವಾರದವರೂ ಏನೇನೋ ಹರಟೆಯಲ್ಲಿ ಮಗ್ನರಾಗಿದ್ದರು.

ಚಾವಡಿಯಲ್ಲಿ ನೆರೆದ ಗದ್ದಲಕ್ಕೂ ಅಂದು ವಿಶೇಷ ಕಳೆಯಿರಲಿಲ್ಲ; ವಾಡಿಕೆಯಂತೆ ಇರಬೇಕಾದ ಉತ್ಸವದ ವಾತಾವರಣವಿರಲಿಲ್ಲ. ಅಲ್ಲಿ ಕೆಲಸ ಮಾಡುವ ಓಲೆಕಾರರೆಲ್ಲ ಅನ್ಯಮನಸ್ಕರಾಗಿದ್ದರು. ಆ ರಾತ್ರಿ ಫೌಜದಾರರು ಪಡದಯ್ಯನವರ ಮಠಕ್ಕೆ ಹೋಗಿ ಅಲ್ಲಿ ಬಹಳ ಹೊತ್ತು ಮಾತು ಕತೆ ನಡೆಸಿ ಸರಿರಾತ್ರಿಗೆ ಚಾವಡಿಗೆ ಬಂದರು. ರಾತ್ರಿ ನಡುಗು ಹುಟ್ಟುವಂಥ ಚಳಿ ಬಿದ್ದಿತ್ತು. ಅಂಥ ಚಳಿಯಲ್ಲಿ ಚಾವಡಿಯಲ್ಲಿ ಮಲಗುವದು ಫೌಜದಾರರಿಗೆ ಹಿತಕರವೆನಿಸಲಿಲ್ಲ. ಆದ್ದರಿಂದ ಓಲೆಕಾರ ಮಲ್ಲನಿಗೆ ಬೆಚ್ಚಗಿರುವ ಹಾಸಿಗೆಯನ್ನು ಸಿದ್ಧಗೊಳಿಸಲು ಹೇಳಿ, ತಾವು ಚಾವಡಿಯಲ್ಲಿ ವಿಚಾರಮಗ್ನರಾಗಿ ಕುಳಿತಿದ್ದರು.

ಮಲ್ಲನಿಗೆ ವಿಚಾರ ಬಿತ್ತು. ನಿನ್ನೆಯಿಂದ ಧರ್ಮಶಾಲೆಯ ಕೋಣೆಯಲ್ಲಿ ದಾದಾನನ್ನು ಸೆರೆಯಲ್ಲಿಡಲಾಗಿತ್ತು. ಬೆಚ್ಚಗಿನ ಸ್ಥಳದಲ್ಲಿ ಹಾಸಿಗೆ ಹಾಸುವದು ಎಂದಾಗ ಆ ಕೋಣೆಯಲ್ಲಿ ಹಾಸುವದು ವಾಡಿಕೆ. ಆದರೆ ಫೌಜದಾರರು ಹೇಳದೆ ಪೋಲೀಸರು ಕೋಣೆಯ ಬಾಗಿಲು ತೆರೆಯಲು ಸಿದ್ಧರಿರಲಿಲ್ಲ. ಬಹಳ ಹೊತ್ತು ಯೋಚಿಸಿ, ಮಲ್ಲ ಕೊನೆಗೆ ಫೌಜದಾರರ ಹತ್ತಿರ ಬಂದು ಮೆಲ್ಲಗಿನ ದನಿಯಲ್ಲಿ "ರಾವಸಾಬ, ಧರ್ಮಸಾಲೀ ಕಮರಾ ಖಾಲೀ ಮಾಡಸಬೇಕಾಗೇತಲ್ಲರೀ. ಮತ್ತ

ದಾದಾನ್ನ ಎಲ್ಲಿ ಇಡಬೇಕು?" ಎಂದು ಧೈರ್ಯ ಮಾಡಿ ಕೇಳಿದ.

ಫೌಜದಾರರೂ ಕ್ಷಣ ಹೊತ್ತು ಯೋಚಿಸಿದರು. "ಅವನ್ನ ಗೌಡರ ಹವಾಲೀ ಮಾಡಿ,ಅವರ ಮನಿಗೇ ಕಳಸಂತ ಹವಾಲ್ದಾರಗ ಹೇಳು."ಎಂದು ಆಜ್ಞಾಪಿಸಿದರು.

ಅಂತೂ ದಾದಾನಿಗೆ ತಾತ್ಪೂರ್ತಿಕವಾಗಿ ಬಿಡುಗಡೆಯಾಯಿತು. ಹವಾಲ್ದಾರ ಅವನನ್ನು ಗೌಡರ ಮನೆಗೆ ಮುಟ್ಟಿಸಿ "ಇವನ್ನ ನಿಮ್ಮ ಮನಿಗೆ ಈ ರಾತ್ರಿ ಕಳಸಂತ ಹೇಳ್ಯಾರ್ರಿ. ಮತ್ತ ನಜರ ಕೈದಿ, ನಿಮ್ಮ ತಾಬೇ ಮಾಡೇನ್ರಿ. ಮುಂಜಾನೆದ್ದು ಇವನ್ನ ಚಾವಡೀಗೆ ಮುಟ್ಟಸೂ ಜವಾಬ್ದಾರೀ ನಿಮ್ಮದ್ವರಿ" ಎಂದು ಹೇಳಿ ಹೊರಟ.

ಕೆಲ ಪೋಲೀಸರು, ಫೌಜದಾರರು ಇವರನ್ನು ಬಿಟ್ಟರೆ ಚಾವಡಿಯಲ್ಲಿ ಯಾರೂ ಇರಲಿಲ್ಲ. ಆಡ್ಲೀ ಕೇಶವರಾಯ ಬಾಳಾಚಾರ್ಯರ ಮನೆಯಲ್ಲಿಯೇ ಊಟ, ಮಲಗುವದು ಮಾಡುತ್ತಿದ್ದ. ಏನೋ ಧೇನಿಸುತ್ತ ಕುಳಿತ ಫೌಜದಾರರ ಕಿವಿಯಲ್ಲಿ ಗಾಂಜಿಬಡಕ ಕೆಂಚ ಬಂದು ಏನನ್ನೋ ಉಸುರಿದ. ಫೌಜದಾರರ ಮುಖ ಅರಳಿತು. ಗಡ್ಡದ ಮುಖ ರೋಮಾಂಚಗೊಂಡಿತು. ಉಕ್ಕಿ ಬಂದ ಹರ್ಷದಲ್ಲಿ ತಾರತಮ್ಯಜ್ಞಾನವನ್ನೂ ಮರೆತು ಕೆಂಚನ ಬೆನ್ನು ತಟ್ಟಿದರು. ಪುಣ್ಯಕ್ಕೆ ಕೆಂಚನೇ ಹಿಂದೆ ಸರಿದ. ಫೌಜದಾರರು ಅವಸರದಿಂದ ಎದ್ದು ಧರ್ಮಶಾಲೆಯ ಕೋಣೆಯನ್ನು ಪ್ರವೇಶಿಸಿದರು.

ಫೌಜದಾರರು ಆ ಕೋಣೆಯಲ್ಲಿ ಪರಿತಪಿಸುತ್ತ ಬಿದ್ದುಕೊಂಡರು. ಹದಿನೈದು ನಿಮಿಷಗಳು ಹದಿನೈದು ವರ್ಷಗಳಂತೆ ಕಂಡವು. ಫೌಜದಾರರು ತೀರ ಅಸ್ವಸ್ಥಚಿತ್ತರಾದರು. ಪಾದಳ್ಳಿಯ ಮೇಲೆ ಕೋಪ ಬಂತು ಅವರಿಗೆ. ಎಣಿಕೆಯಿಲ್ಲ ದಷ್ಟು ಸಲ ಬಾಗಿಲ ಹೊರಗೆ ಹಣಿಕಿಕ್ಕಿ ನೋಡಿ ತಿರುಗಿ ಬಂದರು. ನೀರು ಕುಡಿದರು. ಹೊರಳಾಡಿದರು. ಏಕಾಕಿತನ ಅಸಹನೀಯವೆನಿಸಿ ತಲೆ ಹಿಡಿದುಕೊಂಡರು.

ಅವರ ತಪಸ್ಸೂ ಹಣ್ಣಾಗುವ ಕಾಲ ಬಂದಿತು. ಕೆಂಚ ಮೆಲ್ಲಗೆ ಕೋಣೆಯ ಬಾಗಿಲು ತಟ್ಟಿದ. ಅದೇ ನಿರೀಕ್ಷೆಯಲ್ಲಿದ್ದ ಫೌಜದಾರರು ಎದ್ದು ಹೊರಗೆ ಬಂದು, "ಇಸಮು ಬಂತ್ಸ ?" ಎಂದು ಕೇಳಿದರು.

"ರಾವಸಾಹೇಬ, ಹೊರಗ ಪೋಲೀಸ ಕಾಯಾಕ ಹತ್ತ್ಯಾರ್ರಿ. ಅವನ, ಕಳಿಸರಿ" ಕೆಂಚ ಎಚ್ಚರಿಕೆ ಕೊಟ್ಟ.

"ಅರೇ ಇಸ್ಮಾಯಿಲ್ ಚಾವಡೀಮೆ ಕಾಗದ ಲಖೋಟಾ ಹೈ. ಇಸಕೆ

ಮಾರ್ಫತ ಭೇಜ" ಎಂದು ಇಸ್ಮಾಯಿಲನಿಗೆ ಆಜ್ಞೆ ಮಾಡಿದನು. ಇಸ್ಮಾಯಿಲನಿಗೆ ಈ ಆಜ್ಞೆ ಅಪರಿಚಿತವೇನೂ ಅಲ್ಲ. ಸಂಕೇತದ ಅರ್ಥ ಅವನಿಗಾಯಿತು. ಮುಗುಳು ನಗೆ ನಗುತ್ತ ಕೆಂಚನೊಡನೆ ಚಾವಡಿಗೆ ಹೊರಟ.

ಮಲ್ಲಿ ಕೋಣೆಯನ್ನು ಹೊಕ್ಕಳು. ಆದರೆ ಸಿನ್ನೆಯ ಬೆಡಗುಬಿನ್ನಾಣಗಳು ಅವಳಲ್ಲಿರಲಿಲ್ಲ. ಯಾಕೋ ಬಿಕ್ಕಿಬಿಕ್ಕಿ ಅಳುತ್ತಿದ್ದಳು. "ಸಾಹೇಬ್ರ ನನ್ನ ಇವ್ನೊತ್ತ ಬಿಡಿರಿ. ನನ್ನ ಅಣ್ಣನ ಹೆಂಡತಿ ವೈಯಾಗ ಕಸಾರಿಕಿ ಬಂದೈತರಿ. ದುರಗವ್ವನ ಬ್ಯಾನಿ ಬಂದಾಂಗ ಹಿಂದಕ ಮುಂದಕ ಆಗಾಕ ಹತ್ತೈತರಿ. ಬಾಳ್ಯಾ ಮನೀಯವರೆಲ್ಲ ಹೀಂಗಾಗೇ ಸತ್ತಾರ್ರೀ. ಇಕೀದೂ ನೇಮ ಇಲ್ಲರೀ. ನನ್ನ ಉಗಳಿ ಬಿಡ್ರಿ" ಎಂದು ಬೇಡಿಕೊಂಡಳು. ಬೆಳಗಿನಿಂದ ಸತ್ತ ಸುದ್ದಿಗಳನ್ನು ಕೇಳಿಕೇಳಿ ಫೌಜದಾರರಿಗೆ ಬೇಸರ ಬಂದಿತ್ತು. ಕೋಣೆಯ ಬಾಗಿಲು ಧಡಕ್ಕನೆ ಹಾಕಿದಾಗಲೇ ಅವರ ಸಿಟ್ಟು ವ್ಯಕ್ತವಾಯಿತು. ಮಲ್ಲಿ ಹೊರಬಿದ್ದಾಗ ಬೆಳಗಿನ ಆರು ಗಂಟೆಯಾಗಿತ್ತು.

:: ೧೪ ::

ಧರ್ಮಶಾಲೆಯ ಕೋಣೆಯಲ್ಲಿ ಸೆರೆಬಿದ್ದ ದಾದಾ, ಆ ರಾತ್ರಿ ತಾತ್ಪೂರ್ತಿಕವಾಗಿ ಬಿಡುಗಡೆ ಹೊಂದಿದ ಸುದ್ದಿಯನ್ನು ಯಾರೋ ತಂದು ಲಕ್ಷ್ಮಣನಿಗೆ ಮುಟ್ಟಿಸಿದ್ದರು. ಸರಳತೆಯಲ್ಲಿಯೇ ಜೀವನವನ್ನು ಕಳೆದ ಅವನಿಗೆ, ಯಾರನ್ನೂ ಲೆಕ್ಕಿಸದೆ ಬೆಳೆದ ಮಗ ಒಂದು ಭಾರವಾಗಿದ್ದ. ಅಪರಾಧಿಯಿರಲಿ, ಇಲ್ಲದಿರಲಿ ದಾದಾ ಸೆರೆಮನೆ ಸೇರಿದ್ದು, ಲಕ್ಷ್ಮಣನ ಮುಗ್ಧ ಮನಸ್ಸಿಗೆ ಅಪಮಾನಕರವೆಂದೆನಿಸಿತ್ತು. ಎಲ್ಲಿ ತನ್ನ ಮಗ ಹಿಂಸೆಗೀಡಾದನೋ ಎಂದು ಸಂಕಟವೂ ಆಗಿತ್ತು. ಅಂತಲೇ ಮಗನ ಮುಖ ನೋಡುವ ಆತುರದಿಂದ ಅವನು ಓಡುತ್ತೋಡುತ್ತ ಗೌಡರ ಮನೆಗೆ ಬಂದಾಗ, ದಾದಾ ಅದೇ ಬಂದು ಅಲ್ಲಿ ನಿಂತಿದ್ದ. ಅವನ ಜೊತೆ ಬಂದಿದ್ದ ಇಸ್ಮಾಯಿಲ ಗೌಡರಿಗೆ ವರದಿ ಮುಟ್ಟಿಸಲು ಒಳಗೆ ಹೋಗಿದ್ದ. ಅವನು ತಿರುಗಿ ಚಾವಡಿಯ ಕಡೆಗೆ ಹೋದ ಮೇಲೆ, ಲಕ್ಷ್ಮಣ ದಾದಾನನ್ನು ಅಪ್ಪಿಕೊಂಡು

ಅತ್ತುಬಿಟ್ಟ. ಒಂದು ದಿನದ ಮಗನ ಅಗಲಿಕೆಯಿಂದ ಅವನು ಹಣ್ಣಾಗಿದ್ದ. ಸೆರೆ ಮನೆಯ ವಾಸ ಮಗನಲ್ಲಿ ಏನಾದರೂ ಬದಲಾವಣೆಯನ್ನುಂಟುಮಾಡಿರಲೇ ಬೇಕೆಂದು, ಅವನ ಸರ್ವಾಂಗವನ್ನೆಲ್ಲ ವಾತ್ಸಲ್ಯದ ನೋಟದಿಂದ ಸವರಿದ. ಅಪ್ಪನ ಮುಗ್ಧತೆಯಿಂದ ದಾದಾನಲ್ಲಿ ಅಳು-ನಗು ಎರಡೂ ಉಕ್ಕಿಬಂದವು. ಮೆಲ್ಲಗೆ ಅವನ ಅಪ್ಪುಗೆಯಿಂದ ಬಿಡಿಸಿಕೊಂಡು, ಪಡಸಾಲೆಗೆ ಅವನನ್ನು ಕರೆದುಕೊಂಡು ಬಂದ.

ಗೌಡರು ಆಗ ಪಡಸಾಲೆಯಲ್ಲಿರಲಿಲ್ಲ. ಒಳಗಿನ ಕೋಣೆಯಲ್ಲಿ ತಮ್ಮ ಕೆಲ ಆಪ್ತಸಲಹೆಗಾರರೊಡನೆ ಗಂಭೀರವಾಗಿ ವಿಚಾರವಿನಿಮಯ ನಡೆಸಿದ್ದರು. ಈ ಮೂರು ದಿನಗಳಲ್ಲಿ ಪಾದಳ್ಳಿಯಲ್ಲಿ ನಡೆದ ಘಟನೆಗಳಿಂದ ಗೌಡರ ಮನಸ್ಸು ತ್ರಸ್ತವಾಗಿತ್ತು. ಪರಿಸ್ಥಿತಿಯನ್ನು ನೋಡಿದರೆ ಯಾವುದಾದರೊಂದು ನಿರ್ಣಯಕ್ಕೆ ಬರಲೇಬೇಕಾಗಿತ್ತು.

"ಪಡದಯ್ಯ ಸ್ವಾಮೇರು ಹೀಗ ಆಡಾತ್ತ ಸುಳ್ಳು ಹೇಳಬೇಕೆನ್ರೆಪಾ ದೈವಾ? ಪುತಳಾಬಾಯಿ ಅಕ್ಕಾವರು ಕೆಟ್ಟ ಜ್ವಾಳಾ ತಿಂದು ಸತ್ತರೂ ಅಂತ ಖಬರೀ ರಿಪೋರ್ಟು ಮಾಡೂದಃ? ಯಾರಿಗೆ ಗೊತ್ತಾಗಲಿಕ್ಕಿಲ್ಲ ಇಂತಾ ಗತ್ತು ? ಬಾಪೂ ಸಾಬನ್ನ ಉಳಿಸಿದವರು ತಾವು ಅಂತ ಜಂಬಾ ಕೊಚ್ಚಾಕ ಬೇಕಲ್ಲ! ಈಗ ನಾವೆಲ್ಲಾ ಸುಮಾಕಃ ಕುಂತರ ಮತ್ತ ಅವರದು ಪುಚ್ಚ ಹಾರ್ಯಾಡೂದು ಊರಾಗ. ಅಂತಾ ವರ ಕೂಡ ಮತ್ತ ಗೆಣೆತನಾ ಮಾಡಿಕೊಳ್ರಿ ಅಂತ ಫೌಜದಾರರು ನನಗ ಕೇಳಿ ದಾಗ, ನಮ್ಮ ಬಣದವರ್ನ ಕೇಳಿ ಹೇಳ್ತೇನಿ ಅಂತ ಪಾರಾದೆನೇನ್ರೆಪಾ. ನೀವೇನು ಅನ್ನೂದೈತಿ ಹೇಳ್ರಿ" ಎಂದು ಗೌಡರು ಸಭೆಗೆ ಆವೇಶದಿಂದ ಸವಾಲು ಹಾಕಿದರು. ದನಿಯಲ್ಲಿ ಇನ್ನೂ ಈರ್ಷೆಯ ಕಾವು ಇತ್ತು; ಪಕ್ಷಕಟ್ಟಿ ಎದುರಾಳಿಯನ್ನು ಬಗ್ಗು ಬಡಿಯಬೇಕೆಂಬ ಛಲವಿತ್ತು.

"ಊರಿಗೆ ಕಲ್ಯಾಣ ಆಗಿ, ಪಡದಯ್ಯನ ಪುಚ್ಚ ಹಾರತಿದ್ದರ ನಾವೂ ಏನು ಬ್ಯಾಡನ್ನೂದುಲ್ಲ. ಆದರ ಪಡದಯ್ಯನ ಸ್ವಭಾವನಃ ನೆಚ್ಚಿಗೀದಲ್ಲ. ಆ ಬಾಪೂ ಸಾಹೇಬ ಒಬ್ಬ ಹುಚ್ಚ, ಅವನ್ನ ಪಡದಪ್ಪ ತನ್ನ ಅಂಗೈಯಾಗಿಟ್ಟು ಕುಣಸತಾನ. ಅವನ ಕೂದಲಕ್ಕ ಕೊಂಕ ಆಗಗೊಡೂದುಲ್ಲ ಅಂತ ಬಾಯಿಲೇ ಹೇಳತಾನ; ಕೈಲೇ ಅವನ ಮ್ಯಾಲೇ ಮೂಕಿ ಅರ್ಜಿ ಮಾಡಿಸಿ ಫೌಜದಾರರನ್ನ ಕರಸತಾನ. ಪುತಳಾಬಾಯಿ ಪ್ರಕರಣದೊಳಗಿಂದ ಪಾರಾಗಬೇಕಾದರ ಎರಡು ಸಾವಿರ ರೂಪಾಯಿ ಫೌಜದಾರಗ ಕೊಡೂ ಅಂತ ಉಪದೇಶಾನೂ ಮಾಡತಾನ; ನಾನಾನ

ಮರಣದ ಪ್ರಕರಣದೊಳಗ ನಾವೆಲ್ಲಾ ಲಂಚಾ ತಿಂದು ಗಪ್ಪ ಮಾಡಿದಿವಿ ಅಂತ ಹೇಳತಾನ. ಈಗ ಪುತಳಾಬಾಯಿ ಸತ್ತಳು; ಗೌಡರು ಖೊಟ್ಟಿ ಪಂಚನಾಮಾ ಬರೆಸ ಬೇಕು ಅಂತೂ ಹೇಳತಾನ. ಒಟ್ಟೇನು, ಮಾತಿಗೆ ಕೃತಿಗೆ ಥಾಕಿಲ್ಲದ ಮನುಷ್ಯ. ಇಂಥಾವನ ಕಿಳ್ಳೀಕ್ಯಾತರಾಟಾ ಊರು ಎಷ್ಟಂತ ತಡಕೋಬೇಕೂ,ಮತ್ತ ಯಾಕ ತಡಕೋಬೇಕು? ಅವನ ಸಂಗತಿ, ಹಾವಿನ ಸಂಗತಿ ಎರಡೂ ಸಮಾ" ಎಂದು ಬಾಳಾಚಾರ್ಯರು ಗಂಭೀರವಾಗಿ ತಮ್ಮ ಅಭಿಪ್ರಾಯವನ್ನೂ ತಿಳಿಸಿದರು.

"ಆಚಾರೆಪ್ಪನೋರು ಅನ್ನೊದು ಅಗದೀ ಬರಾಬರಿ ಐತಿ. ಆದರೂ ಅಮಲ ದಾರರು ಕುಂತಗೊಂಡು ಖೊಟ್ಟಿ ಪಂಚನಾಮಾ ಬರೆಸಬೇಕೂ ಅಂದರ ಒಲ್ಲೆ ಅನ್ನಾಕ ಬಂದೀತೇನ ಗೌಡರು? ದಾದಾನ್ನ ಉಳಸಬೇಕಾರ ಫೌಜದಾರರ ಮರ್ಜಿ ಹಿಡಿಬೇಕಾಗತೈತಿ. ಒಟ್ಟು ನಾನಾನೂ ಸತ್ತ, ಪುತಳಾಬಾಯೇರೂ ಸತ್ತರು. ಒಬ್ಬಾವ ಹೊಟ್ಟಿಕಡತದಿಂದ ಸತ್ತ; ಇನ್ನೊಬ್ಬರು ಹೊಟ್ಟಿ ಕೆಟ್ಟು ಸತ್ತರು ಅಂತಂದು, ಒಟ್ಟು ಈ ದುರಮರಣದ ಮ್ಯಾಗ ಕೌದಿ ಹಾಕಿ ಬಿಡತಿದ್ದರ ಪಾಡಃ ಆದೀತ ಅನಸತೈತಿ." ಪಾವುಡದ ಚುಂಗಿನಿಂದ ಎಲೆಯಡಿಕೆಯ ಸಾಮಾನು ತೆಗೆ ಯುತ್ತ ಲಿಗಾಡಿ ಲಿಂಗಪ್ಪ ಹೇಳಿದ.

ಇನ್ನೂ ಮಾತು ರಂಗೇರುವದಿತ್ತು. ಗೌಡರು ಉತ್ತರವೀಯುವ ಪ್ರಯತ್ನ ದಲ್ಲಿ ತಲೆಯೆತ್ತಿದವರು, ಬಾಗಿಲಲ್ಲಿ ಹಣಿಕಿಕ್ಕಿದ ಓಲೆಕಾರ ಮಲ್ಲಪ್ಪನನ್ನು ಕಂಡರು. "ಯಾಕಪಾ ಮಲ್ಲಪ್ಪ ಮತ್ತೇನ ದಗದಾ?" ಎಂದು ಕೇಳಿದರು.

"ಅಂತಾದೇನಲ್ಲರಿ, ಆ ದಾದಾನ ಅಪ್ಪ ಲಕ್ಷ್ಮಣ ಅದಾನಲ್ಲರೀ, ಹೊರಗ ಬಂದ ಕುಂತಾನ. ಮತ್ತ ಬಾಯೀಸಾಬರ ಸತ್ತ ಸುದ್ದಿ– ಅದ ಹ್ಯಾಗ್ಹ್ಯಾಗ ಆತು, ಏನು– ಅಂತ ಎಲ್ಲಾ ಆ ದಾದಾನ ಇದರಿಗೇ ಹೇಳಾಕ ಹತ್ತ್ಯಾನರಿ" ಎಂದು ಮಲ್ಲಪ್ಪ ಸುದ್ದಿಮುಟ್ಟಿಸಿದ.

"ಹೀಗೇನು? ಹಗಾರ ಆ ಲಕ್ಷ್ಮಣನ್ನ ಇಲ್ಲೇ ಬಾ ಅಂತ ಹೇಳು. ಅವನ ಕಿವೀಮ್ಯಾಗ ಇಡದ ನಾವೇನೂ ಮಾಡಾಕು ಬರಾಣಿಲ್ಲ. ಗಡಾನ ಬಾ ಅಂತ ಹೇಳು" ಗೌಡರು ಮಲ್ಲಪ್ಪನಿಗೆ ಅಜ್ಞಾಪಿಸಿದರು.

ಗಾಬರಿಯಿಂದ ಅಗಲವಾಗಿ ತೆರೆದ ಕಣ್ಣುಗಳಿಂದ ನೋಡುತ್ತ ಲಕ್ಷ್ಮಣ, ಅನುಮಾನಿಸುತ್ತಲೇ ಒಳಗೆ ಬಂದ. ಊರಹಿರಿಯರೆಲ್ಲ ಅಲ್ಲಿ ಸೇರಿದ್ದನ್ನು ನೋಡಿ ಅವನು ಗೊಂದಲದಲ್ಲಿ ಬಿದ್ದ. ಏನು ಮಾಡಬೇಕೆಂಬುದು ತಿಳಿಯದೆ ಎಲ್ಲರಿಗೂ

ಸಾಷ್ಟಾಂಗ ನಮಸ್ಕಾರ ಹಾಕಿದ. ಆ ಮೇಲೆ ಎದ್ದು ಕಣ್ಣೊರೆಸಿಕೊಂಡು ಮೌನ ದಿಂದ ಒಂದು ಮೂಲೆಹಿಡಿದು ಕುಳಿತು ಬಿಟ್ಟನು. ಅವನ ಆಗಿನ ಮುಖದಲ್ಲಿ ಮೂಡಿದ ಅಪಮಾನ, ಅನ್ಯಾಯಕ್ಕೆ ಬಲಿಯಾದ ದುಃಖದ ಭಾವ, ಇವುಗಳನ್ನು ನೋಡಿ ಅವನನ್ನು ಮಾತನಾಡಿಸುವ ಧೈರ್ಯ ಗೌಡರಿಗೂ ಆಗಲಿಲ್ಲ.

ಬಾಳಾಚಾರ್ಯರು ನಶ್ಯ ಏರಿಸಿ, "ಏನ ಲಕ್ಷ್ಮಣಾ, ದಾದಾ ಏನಂತಾನ?" ಎಂದು ಮೌನದ ಹಿಂಡಿನಲ್ಲಿ ಮಾತಿಗೆ ದಾರಿ ಮಾಡಿಕೊಳ್ಳಲು ಪ್ರಯತ್ನಿಸಿದರು. ಲಕ್ಷ್ಮಣ ಒಂದು ಕ್ಷಣ ಮಿಕಿಮಿಕಿ ಎಲ್ಲರ ಮೋರೆ ನೋಡಿದ. ಆ ಮೇಲೆ ತನ್ನನ್ನು ಮಾತಾಡಿಸಿದವರು ಬಾಳಾಚಾರ್ಯರೆಂದು ತಿಳಿದು ಅವರ ಕಡೆಗೆ ಮುಖ ವೆತ್ತಿ ನೋಡಿದ. ಮತ್ತೆ ಮುಖ ಕೆಳಗೆ ಮಾಡಿಕೊಂಡು, ನೆಲ ಬರೆಯುತ್ತ ಮಾತ ನಾಡಲು ಪ್ರಾರಂಭಿಸಿದ :

" ದಾದಾನರೇ? ಏನನ್ನೂದ್ರಿ, ಹುಡುಗ ಬುದ್ಧಿ. ನಾನಾಕಾಕಾನ ಖೂನ ಮಾಡಿದ ಬಾಪೂಸಾಬ, ಪುತಳಾನ್ನ ಖೂನ ಮಾಡಿ, ಫೌಜದಾರನ್ನ ಒಳಗ ಹಾಕ್ಕೊಂಡು ಉಳಿಬೇಕಂತ ಖಟಪಟಿ ನಡಿಸಿದರ ಅವನ ಹೇಣ್ತೀ ಗುಳದಾಳಿ ಉಳ್ಯಾಕಿಲ್ಲ ಅಂತಾನು. ಖೊಟ್ಟಿ ಖಟ್ಲಿ ಹಾಕಿ ತನ್ನ ಗಲ್ಲಿಗೆ ಹಾಕಸೂದಾದರ, ಅವರ್ನ ಖೂನಿ ಮಾಡಿಯೇ ಗಲ್ಲಿಗೆ ಹೋದರೇನ ತಪ್ಪ? ಅಂತೈತ್ರಿ, ಮುಳ್ಳ ಖೋಡಿ." ಎಂದು ಹೇಳಿ ನಿಟ್ಟುಸಿರು ಬಿಟ್ಟನು.

ಉಳಿದವರಿಗೆ ಮಾತ್ರ ಈ ಮಾತಿನಿಂದ ಆಘಾತವಾದಂತಾಯಿತು. ಇಂಥ ಭಯಂಕರ ವಿಚಾರ ಮಾಡುವಷ್ಟು ಅವನ ತಲೆಕಾದಿದೆ ಎಂದು ಅವರಿಗನಿಸಿರಲಿಲ್ಲ. ಇನ್ನು ಪಡದಯ್ಯನ ಸೂತ್ರದಂತೆ ತಾವು ವರ್ತಿಸಿದ್ದಾದರೆ ಅನಿರೀಕ್ಷಿತವಾಗಿ ಪರಿ ಣಾಮ ಅನಿಷ್ಟವಾಗಬಹುದೆಂದು ಅವರೆಲ್ಲ ಅಂಜಿದರು.

"ಈ ಖೂನಿ ಖಟ್ಲಿಯಿಂದ ದಾದಾ ಪಾರಾಗಬೇಕು; ಆದರ ಊರ ಹಿತಾನೂ ಸಾಧಿಸಿರಬೇಕು. ಅಂಥಾ ಹೊತ್ತಿನ್ಯಾಗ ದಾದಾ ಇಂಥಾ ವಿಚಾರಮಾಡುವದು ಛಲೋ ಅಲ್ಲ. ಹೀಂಗ ಮಾತಾಡೂದು ಥರಾ ಅಲ್ಲಾ ಅಂತ ನೀ ಅಷ್ಟು ಬುದ್ಧೀ ಹೇಳಬೇಕು ಲಕ್ಷಣಾ" ಎಂದರು ಬಾಳಾಚಾರ್ಯರು.

" ಇದ್ದ ಒಬ್ಬ ಮಗ ಇಂತಾದ್ದೆಲ್ಲ ಮಾಡಿ ಗಲ್ಲಿಗೆ ಹೋಗಬೇಕಂತ ನನ್ನ ಕನಸಿನ್ಯಾಗರೇ ಬಂದೀತರೇ? ಫೌಜದಾರರು ಮನಸ್ಸಿಗೆ ಬಂದದ್ದ ಮಾಡಿಕೋಳಿ: ಕಡೀಕೆ ಹಾಲಿದ್ದದ್ದು ಹಾಲಾಗ್ತೈತಿ, ನೀರಿದ್ದದ್ದು ನೀರಾಗ್ತೈತಿ. ಖೊಟ್ಟಿ ಖಟ್ಲಿ

ಹಾಕಿದಾವ ನಿನ್ನ ಹೆಣೇಬಾರಾ ಏನು ಬರೆಯೂದಿಲ್ಲ, ಅಂತ ಹೇಳಿಕೋತಽ ಕುಂತಿ ದ್ನಿರಿ. ನೀವು ಕರಸಾಣಾ ಈಚಾಕ ಬಂದ್ನಿರಿ." ಎಂದು ಜೋಲು ಮೋರೆ ಮಾಡಿ ಕೊಂಡು ಲಕ್ಷ್ಮಣ ಉತ್ತರಿಸಿದ.

ಇದು ವರೆಗೆ ಮೌನದಿಂದ ಮಾತು ಕೇಳುತ್ತಿದ್ದ ಗೌಡರು ಏನೋ ಒಂದು ನಿರ್ಣಯಕ್ಕೆ ಬಂದವರಂತೆ ಒನ್ಮೆಲೆ ಎದ್ದರು. ನಡಿಗೆಯಲ್ಲಿದ್ದ ಅವಸರವನ್ನು ಕಂಡು, ಯಾರೂ ಯಾಕೆ ಎಂದು ಕೇಳುವ ಗೋಜಿಗೆ ಹೋಗಲಿಲ್ಲ. ಗೌಡರು ಹೊರಗೆ ಬಂದು ಧಾಬೆಗೇ ನಡೆದರು- ಅಲ್ಲಿ ದಾದಾನನ್ನು ಕರೆಸಿಕೊಂಡು, ಏನೇನೋ ಮಾತನಾಡಿಕೊಂಡು ಮರಳಿದರು.

"ಏನು ಗೌಡರಽ, ಇಂಥಾ ಕಠಿಣ ಪರಿಸ್ಥಿತಿಯೊಳಗ ಮುಂದಿನ ಹಾದಿ ಯಾವದು? ಇದಕ್ಕೇನರ್ರೆ ಒಂದು ಹಾದೀ ತಗೀಬೇಕಲ್ಲಾ?" ಎಂದರು ಬಾಳಾ ಚಾರ್ಯರು.

ಗೌಡರಿಗೆ ಎಲ್ಲಿಲ್ಲದ ಆವೇಶ ಬಂದಿತ್ತು. ತನ್ನ ಅರುವತ್ತರ ಸಮೀಪಕ್ಕೆ ಬಂದ ಪ್ರಾಯವನ್ನೂ ಮರೆತು, ಬಿಳೀಮೀಸೆಯ ಮೇಲೆ ಕೈಯಾಡಿಸುತ್ತ, "ನಾವೇನು ಬಳೀ ಇಟ್ಟಿಲ್ಲ ಆಚಾರೆಪ್ಪ. ಇದನ್ನ ಫೌಜದಾರರಿಗೆ ಖಾತ್ರೀಮಾಡಿ ಕೊಡೂದಽ ಮುಂದಿನ ಹಾದಿ. ನಾಳೆ ಫೌಜದಾರ ಯಾವ ಸೋಂಗ ತಗೀತಾನೋ, ಅದಕ್ಕ ಉತ್ತರಾ ಕೊಡುದನ್ನ ನನಗ ಬಿಡರಿ. ಆದರ ಇಗಾ, ಕೂಡಿದವರು ದೈವದ ಸನಾ. ನೀವೆಲ್ಲಾ ಒಂದ ಮಾತ ಕೈಮ್ಯಾಲೆ ಕೈಹಾಕಿ ನನಗ ವಚನಾ ಕೊಡಿರಿ. ನಾ ಇರಲಿ, ಶಿವನ್ನ ಸೇರಲಿ. ನನ್ನ ಮನೆತನದ ಮರ್ಯಾದಿ ಈಗ ಇದ್ಧಾಂಗ ಇಡೂ ಹೊಣೀ ನಿಮ್ಮದೂ ಅಂತ. ಇಲ್ಲೇ ಬಾಳಾಚಾರದಾರ; ಪಾದ ಳ್ಳಿಗೆ, ನಡದಾಡೂ ದೇವರು ಅವರು. ನೀವೆಲ್ಲ ಅದೀರಿ. ಪಾದಳ್ಳಿ ಗೌಡರ ಮನೆ ತನಾ, ನಾ ಇಲ್ಲದಿದ್ದರೂ ಮುಂದ ನಡ್ಯಾಕ ಬೇಕು. ಈಟು ನಡಿಸಿಕೊಡಿರಿ" ಗೌಡರ ದನಿಯಲ್ಲಿ ಆವೇಶವಿತ್ತು, ಈರ್ಷೆಯಿತ್ತು, ಊರ ಅಭಿಮಾನವಿತ್ತು, ಅಂತಃಕರಣದ ಎಳೆತವಿತ್ತು. ಕರ್ತವ್ಯದ ಪ್ರಜ್ಞೆಯಿತ್ತು. ಮುಗಿದ ಕೈ ನಡುಗು ತ್ತಿರಲಿಲ್ಲ, ಕಣ್ನೋಟ ನಿಶ್ಚಲವಾಗಿತ್ತು. ಆದರೆ ಅವರ ನಿರಿಗೆಗಟ್ಟಿದ ಗಲ್ಲಗಳ ಮೇಲೆ ಕಣ್ಣೀರು ಮಡುವುಗಟ್ಟಿತ್ತು.

ಗೌಡರ ಆಗಿನ ನಿಲುವು, ಅವರಾಡಿದ ಮಾತು ಎಲ್ಲರಲ್ಲಿಯೂ ಆದರ ಭಯ ಗಳನ್ನು ಹುಟ್ಟಿಸಿತ್ತು. ಇಲ್ಲಿಯುವರೆಗೆ ಗೌಡರು ನಡೆಸಿದ ಅಕೃತ್ಯಗಳು ಅವರಿಗೆ

ಗೊತ್ತಿರಲಿಲ್ಲವೆಂತಲ್ಲ. ಆದರೆ ಅಭಿಮಾನದಿಂದ ಗೌಡರು ಪಾದಳ್ಳಿಯನ್ನು ತಬ್ಬಿ ಕೊಂಡಂತೆ ಮತ್ತಾರೂ ತಬ್ಬಿಕೊಂಡಿರಲಿಲ್ಲ. ಕೋಟೆಯಾಗಿ ಊರನ್ನು ಕಾಯುತ್ತ, ಯಾವಾಗಲೂ ಜಾಗೃತರಾಗಿರುತ್ತಿದ್ದ, ಗೌಡರ ವರ್ಚಸ್ಸನ್ನು ಎಲ್ಲರೂ ಒಪ್ಪುತ್ತಿರು ವಾಗ ಅವರಿಂದ ಇಂಥ ಮಾತು ಬರಬೇಕೇ?

"ಇದೇನ ಮಾತ ಆಡತೀರೀ ಯಪ್ಪಾ? ನೀವು ಹಾಕಿದ ಉಗಳ ದಾಟಿ ನಾವು ಎಂದಾರ ಮುಂದ ಹೋದೇವೇ? ಊರ ಧನಿ, ಎಲ್ಲಾರ ಮರ್ಯಾದಿ ನಿನ್ನ ಉಡ್ಯಾಗ ಎಪ್ಪಾ! ನಿನ್ನ ಮನೆತನದ ಮರ್ಯಾದಿಗೆ, ಹಿರ್ಯಾರ ಪುಣ್ಯೇದಿಂದ ಎಂದೂ ಧಕ್ಕಿ ಬರಾ ಣಿಲ್ಲ. ಪಾದಳ್ಳಿಗೆ ಮರ್ಯಾದಿ ಬೇಕಾಗಿದ್ದರ ನಿನ್ನ ಮನೆತನಾ ಅಂಗೈಯಾಗ ಹಿಡದು ಸಾಕತೈತಿ. ವಚನಾ ಕೊಡಾಕ ನಾವೆಷ್ಟರವರು?" ಎಂದು ಲಿಗಾಡಿ ಲಿಂಗಪ್ಪ ಹೇಳಹೇಳುತ್ತ, ಎದೆ ಉಕ್ಕಿ ಬಂದು, ಗೌಡರ ಪಾದ ಮುಟ್ಟಿ ನಮಸ್ಕರಿಸಿದ.

ಆದರೆ ಮಾತು ಆಡಿ ಹೋಗಿತ್ತು. ಬಿಟ್ಟ ಬಾಣದಂತೆ ಅದನ್ನು ಹಿಂದಿರು ಗಿಸುವದು ಸಾಧ್ಯವಿರಲಿಲ್ಲ. ಬಾಳಾಚಾರ್ಯರು ಆ ಮಾತಿನ ಹಿಂದಿರುವ ಅರ್ಥ ಗಾಂಭೀರ್ಯವನ್ನು ತಟ್ಟನೆ ಗುರುತಿಸಿದರು. ಆ ಮಿಂಚಿನ ಬೆಳಕಿನಲ್ಲಿ ಪಾದಳ್ಳಿಯ ಭವಿತವ್ಯದ ಇತಿಹಾಸ ಅವರಿಗೆ ಗೋಚರವಾಗಿರಬೇಕು.

"ಏನ ಮಾತು ಇವೆಲ್ಲ ಗೌಡರs? ಗೌಡರ ಮನೆತನ ಮುಂದ ನಡಿಯೂದು ಪಾದಳ್ಳಿಗೆ ಬೇಕಾಗಿಲ್ಲ? ನಾವೂ ನೀವು, ಇಂದ ಬಂದು, ನಾಳೆ ಹೋಗಲಿಕ್ಕೆಬೇಕು ಗೌಡರs. ಆದರ ಊರಿಗೆ ಗೌಡರು ಬೇಕs ಬೇಕಲ್ಲ. ನಿಮ್ಮ ಹಿರೇರು ತೀರಿ ಕೊಂಡ ನ್ಯಾಲೆ, ನಿಮ್ಮನ್ನ ಗೌಡರು ಅಂತ ನಾವೆಲ್ಲಾ ತಿಳಕೊಂಡೆವೋ ಇಲ್ಲೋ? ನಿಮ್ಮ ಹಿರೇರು ಆಗ ಊರವರ ಕಡಿಂದ ಹೀಂಗs ವಚನಾ ತೊಗೊಂಡಿದ್ದರೇನು? ಇನ್ನು ನಿಮ್ಮ ಮಕ್ಕಳಿಂದ ಗೌಡರ ಮನೆತನಾ ಪಾದಳ್ಳಿಯವರು ಮುಂದ್ವರೀ ಗೊಡೂದಿಲ್ಲ ಅಂತ ನಿಮ್ಗ ಹೆದರಿಕಿ ಯಾಕ ಬಂತು?" ಬಾಳಾಚಾರ್ಯರು ಆಶ್ವಾ ಸನವೀಯುವ ದನಿಯಲ್ಲಿ ನುಡಿದರು.

"ಅಂತಾ ಪರಸಂಗ ಬಂದು, ಮನೆತನದ ಮರ್ಯಾದೀ ಕಳೆಯುವ ಹೊತ್ತು ಬಂದಾಗ ನಿಮಗೆಲ್ಲ ನೆನಪಿರಲಿ ಅಂತ ಹೇಳಿದೆ ಆಚಾರೆಪ್ಪಾ. ಮತ್ತೇನಿಲ್ಲ. ಈಗ ಬಾಪೂಸಾಬ ತನ್ನ ಫಲಭೋಗ ತಾ ಉಣಬೇಕು. ಅದನ್ನ ನಾವs ತಪ್ಪಿಸಿ ಹೊಂಟರ ಊರ ಜನಾ ನಮ್ಮ ಮಾರೀಮ್ಯಾಗ ಉಗಳ್ಯಾರು. ಫೌಜದಾರ, ಇಂದ ಇದ್ದಾನೂ, ನಾಳೆ ಹೋದಾನು- ಜನರ ಸಂಗಾಟ ಇರೋವರು ನಾವs

ಅಲ್ಲೇ? ಅವರ ಪಿರೂತಿ ಕಳಕೊಂಡ ಪ್ಯಾಗ ನಾವು ಇದ್ದರೂ ಸತ್ಹಾಂಗ. ಅದಕ್ಕ ಈಟೆಲ್ಲ ವಿಚಾರ ಮಾಡಿ, ಈಗ ಒಂದ ಮಾತ ಗಟ್ಯಾದ್ಹಾಂಗ ಆತು. ತೆಲೀ ಹೋದರೂ, ಖೊಟ್ಟಿ ಪಂಚನಾಮಾ ಬರೀತಕ್ಕದ್ದಲ್ಲ. ನಾವು ಬರದದ್ದಕ ಆದರ, ದಾದಾ ನಮ್ಮ ಮರ್ಯಾದೀ ಉಳಸೂದುಲ್ಲ. ಇನ್ನ ಮುಂದ ಏನಾದರೂ ಅನ್ಯಾಯ ಮಾಡಾಣಿಲ್ಲ" ಗೌಡರು ನಿಶ್ಚಯದ ಸ್ವರದಲ್ಲಿ ನುಡಿದರು.

"ಇಂದಿನತನಕಾ ನಿಮ್ಮ ಕೈಯಿಂದ ಅಂಥಾ ಅನ್ಯಾಯ ಆಗೇದೇನು ಗೌಡರ? ದೈವದವರ ಮಾತಿಗೆ ಮರ್ಯಾದಿ ಕೊಟ್ಟು ನಡಕೊಂಡೀರಿ. ಅದು ಅನ್ಯಾಯ ಅಂತ ಯಾರು ಹೇಳತಾರ?" ಬಾಳಾಚಾರ್ಯರು ಸಮಾಧಾನಮಾಡುವ ದಕ್ಕೆಂದೇ ಈ ಮಾತು ಆಡಿದರು.

"ಇದೆಲ್ಲಾ ಮನಸಿಗೆ ಸಮಮಂತ ಆಗೂ ಮಾತು ಆಚಾರೆಪ್ಪ, ದೇವರಿಗೆ ಸಮಮಂತ ಆಗೂದಲ್ಲ. ನಾನಾನ ದುರ್ಮರಣ ಆದಾಗ, ಅದನ್ನ ಮುಚ್ಚಿಟ್ಟಿದ್ದಕ ದೊಡ್ಡ ತೆಪ್ಪು ಆಗೇತಿ. ಊರ ಜನಾ ಬಂದು ಖೊಟ್ಟಿ ಪಂಚನಾಮಾ ಬರದಕ ತೀರಬೇಕು ಅಂತ ಹಟಾ ಮಾಡಲಿಲ್ಲ. ನಾವಕ ನಾಕು ಜನಾ ಸೇರಿ, ಊರಿನ ಮಾತೂ ನಮ್ಮದಕ ಅನ್ನಾವರ್ಹಾಂಗ ತೀರಿಸಿಗೊಂತ ಬಂದಿವಿ. ಇಗಾ, ಇಲ್ಲೇ ಲಕ್ಷ್ಮಣ ಅದಾನಲ್ಲ ಕೇಳರಿ, ಅವಗ ನಾವು ಮಾಡಿದ ಪಂಚನಾಮೆ ಮನಸಾ ಒಪ್ಪಿಗಿಲ್ಲ. ದಾದಾನ್ನ ಕೇಳರಿ. ನಾವು ಮಾಡಿದ್ದು ಅನ್ಯಾಯ ಅಂತಾನ. ಊರಾಗಿನ ಹೊಲಿಮಾದಿಗರನ್ನ ಕೇಳಿರಿ. ಮನಸ್ಸು ಬಿಚ್ಚಿ ಕರೇ ಮಾತು ಹೇಳಾ ಕಿಲ್ಲ. ನಾವು ದೊಡ್ಡವರು, ದುಡ್ಡ ತಿಂದು, ದೊಡ್ಡವರು ಮಾಡಿದ ತೆಪ್ಪು ಮುಚ್ಚಿದಿವಿ ಅಂತ ತಮ್ಮತಮ್ಮೊಳಗ ಆಡಿಕೊಂತಾರ. ಏಟ ಮುಚ್ಚಿಟ್ಟರೂ, ಅನ್ಯಾಯ ಬೈಲಿಗೆ ಬೀಳಾಕಕ ಬೇಕಲ್ಲ. ಆಗ ದೇವರಕ ಕಾಯಬೇಕ ನಮ್ಮನ್ನ. ಇಲದಿರಕ ಹಿರ್ಯಾರ ಪುಣ್ಯೇ ಕಾಯಬೇಕು. ಅವರ ಪುಣ್ಯೇ ಮನೆತನ ಮರ್ಯಾ ದ್ಯಾಗ ಇರತೈತಿ. ಅದಕಕ ಅದನ್ನು ಕಾಯ್ಕೊಂಡು ಹೋಗರಿ ಅಂತ ನಿಮಗೆಲ್ಲ ಹೇಳಿಕೊಂಡದ್ದು."

ಗೌಡರು ಆಡಿದ ಮಾತು ಸೂರ್ಯಪ್ರಕಾಶದಷ್ಟು ಸ್ವಚ್ಛವಾಗಿತ್ತು. ಅದನ್ನು ಇಲ್ಲವೆನ್ನುವ ಧೈರ್ಯ ಯಾರಿಗೂ ಇರಲಿಲ್ಲ. ಪಾದಳ್ಳಿಯ ಅಂತರಂಗ ಗೌಡರ ಮುಖದಿಂದ ಈ ಮಾತನ್ನು ಆಡಿಸಿತ್ತು. ಗೌಡರ ಹಟದ ಸ್ವಭಾವ ಎಲ್ಲರಿಗೂ ಗೊತ್ತಾಗಿತ್ತು. ಒಮ್ಮೆ ಕೃತನಿಶ್ಚಯರಾದರೆಂದರೆ ತೀರಿತು. ಪಾದಳ್ಳಿಯ ಗುಡ್ಡ

ಮುಂದೆ ಸರಿಯಬಹುದು, ಗೌಡರು ತಮ್ಮ ನಿಶ್ಚಯದಿಂದ ಸರಿಯಲಾರರು. ಗೌಡರ ಈ ಆಕಸ್ಮಿಕವಾದ ಹೃದಯಪರಿವರ್ತನೆಗೆ ಕಾರಣವೇನೋ ಯಾರಿಗೂ ತಿಳಿಯದಾಯಿತು. ಒಟ್ಟಿನಲ್ಲಿ ಅವರೆಲ್ಲ ಇನ್ನೊಂದು ಚಿಂತೆಯಲ್ಲಿ ಬಿದ್ದಂತಾಯಿತು. ಪಾದಳ್ಳಿಯ ವಿಪತ್ಪರಂಪರೆ ಇನ್ನೂ ಮುಗಿದಿಲ್ಲವೆನಿಸಿತು. ಇಲ್ಲಿಯ ವರೆಗೆ ಕೋಟೆಯಷ್ಟು ಭದ್ರವಾಗಿದ್ದ ಪಾದಳ್ಳಿಯ ಸಾರ್ವಜನಿಕ ಜೀವನದಲ್ಲಿ ಒಂದೊಂದೇ ಬಿರುಕುಗಳು ಕಾಣಲಾರಂಭಿಸಿದವು. ಪುತಳಾಬಾಯಿಯ ಮರಣದಿಂದ ಜಾಗೀರದಾರರ ಮನೆತನ ಅನಾಹುತಕ್ಕೀಡಾಯಿತು; ಪಡದಯ್ಯನ ಅವಿವೇಕದಿಂದ ಹಿರೇಮಠ ಹಾಳಾಗುವದರಲ್ಲಿತ್ತು. ಈಗ ಗೌಡರೂ ಇಂಥ ಮಾತುಗಳನ್ನಾಡತೊಡಗಿದ್ದಾರೆಂದ ಮೇಲೆ ಮತ್ತಾವ ವಿಪತ್ತು ಕಾದು ಕುಳಿತಿದೆಯೋ! ಬಾಳಾಚಾರ್ಯರ ಹುಬ್ಬು ಗಂಟಿಕ್ಕಿದವು.

ರಾತ್ರಿ ಬಹಳಾಯಿತೆಂದು ಗೌಡರು ಎಲ್ಲರನ್ನೂ ಬೀಳ್ಕೊಟ್ಟರು. ಬಂದವರೆಲ್ಲ ಸಾವಕಾಶವಾಗಿ, ಗೌಡರಿಗೆ ವಂದನೆ ಸಲ್ಲಿಸುತ್ತ ಹೊರಟುಹೋದರು. ಅವರನ್ನೆಲ್ಲ ಬಾಗಿಲವರೆಗೆ ಕಳಿಸಿ ಗೌಡರು ಮಲಗಲು ಹೋದರು.

ಗೌಡರ ಮನಸ್ಸು ಇನ್ನೂ ವಿಚಾರಗಳಿಂದ ಮುಕ್ತವಾಗಿರಲಿಲ್ಲ. ತಮ್ಮ ನಾಲ್ವತ್ತು ವರ್ಷ ಅವ್ಯಾಹತವಾಗಿ ನಡೆದ ಗೌಡಿಕೆಯಲ್ಲಿ ಇಂಥವೆಷ್ಟೋ ಪ್ರಕರಣಗಳು ಆಗಿಹೋಗಿದ್ದವು. ಒಂದು ಹುಂಬ ಧೈರ್ಯದಿಂದ ಗೌಡರು ಅವುಗಳನ್ನೆಲ್ಲ ಎದುರಿಸಿದ್ದರು. ಗೌಡರ ಮನೆತನಕ್ಕೆ ಮೀಸಲಾಗಿರುವ ದರ್ಪ ಇವರಲ್ಲಿ ಒಂದು ಜೀವಂತ ಶಕ್ತಿಯಾಗಿತ್ತು. ಅದರ ಬಲದಿಂದ, ಸಾವಿರ ಅನ್ಯಾಯಗಳಿಗೆ ಅವರು ಕಾರಣರಾಗಿದ್ದರು. ಆದರೆ ಅದರಿಂದ ಅವರು ತಮ್ಮ ಧೈರ್ಯವನ್ನು ಕಳೆದುಕೊಂಡಿರಲಿಲ್ಲ. ಅನ್ಯಾಯವೆಸಗುವದು ಅಧಿಕಾರದ ಒಂದು ಅವಶ್ಯಕ ಭಾಗವೆಂದು ಅವರಿಗೆ ಕಲ್ಪನೆಯಾಗಿತ್ತು.

. ಆದರೆ ಮೊನ್ನೆ ಹೊಲಗೇರಿಯಲ್ಲಿ ಬಾಳ್ಯಾನ ಕುಟುಂಬದ ಪ್ರೇತಚಿತ್ರವನ್ನು ನೋಡಿದಾಗ ಮಾತ್ರ ಗೌಡರು ಭಯದಿಂದ ನಡುಗಿದ್ದರು. ಗೌಡರೇ ಪಾಳೆಯಗಾರರಾಗಿದ್ದ ಕಾಲವದು. ಊರ ಜನರ ಮೇಲೆ ತಮ್ಮ ಪ್ರಜೆಗಳಷ್ಟೆ ಪ್ರೀತಿ ಅಧಿಕಾರಗಳನ್ನು ಗೌಡರು ಇಟ್ಟುಕೊಂಡಿದ್ದರು. ತಮ್ಮ ಕಣ್ಣುಮುಟ್ಟಿ ಹೆಣಗಳನ್ನು ನೋಡಿದಾಗ, ತಾವು ಕಾಳು ಹಂಚದಿದ್ದುದು ಅಪರಾಧವೆನಿಸಿತು. ಜಾಗೀರದಾರರ ಜೊತೆಗೆ ಸ್ಪರ್ಧೆಕಟ್ಟಿ ಬಡವರನ್ನು ಕೊಂದಂತಾಯಿತಲ್ಲ ಎನಿ

ಸಿತು. ಒಂದು ದೃಷ್ಟಿಯಿಂದ ಇಡೀ ಪಾದಳ್ಳಿ ತಮ್ಮದೇ. ಜಾಗೀರು ಖಾಲಸಾ ಆದ ಮೇಲೆ ಜಾಗೀರದಾರರದೇನು ಅಧಿಕಾರ?

ಆದರೆ ತಮ್ಮ ಅಧಿಕಾರದಲ್ಲಿದ್ದು ತಾವು ಮಾಡಿದ್ದೇನು? ಕಲಹವಿದ್ದಲ್ಲೆಲ್ಲ ತಮ್ಮದೇ ಮುಂದಾಳ್ತನ. ಗೌಡರಿಗೆ ಪಶ್ಚಾತ್ತಾಪದ ಭಾವನೆ ತೀವ್ರವಾಯಿತು. ಇನ್ನು ಮೇಲಾದರೂ ಅನ್ಯಾಯವಾಗದಂತೆ ನೋಡಿಕೊಳ್ಳಬೇಕು. ಇದರಲ್ಲಿ ತಮ್ಮ ತಲೆಹೋದರೂ ಚಿಂತೆಯಿಲ್ಲ. ಹೊಲಗೇರಿಯಲ್ಲಿ ಬಾಳ್ಯಾ ಹೆಣವಾಗಿ ಬಿದ್ದಿಲ್ಲವೇ? ಅವನ ಜೀವನಕ್ಕಿಂತ ತಮ್ಮದೇನು ಹೆಚ್ಚು? ತಮ್ಮ ಹಿರಿಯರು 'ಡೌಗಿಬರ'ದಲ್ಲಿ ದಿನನಿತ್ಯ ಬಡವರೆಲ್ಲರಿಗೂ ಕಾಳು ಹಂಚಿದ ಮೇಲೆ ತಾವು ಊಟಮಾಡುತ್ತಿದ್ದ ರಂತೆ. ತಾವೂ ಹಂಚಿದರು. ಆದರೆ ಅದರ ಹಿಂದೆ ಸ್ವಾರ್ಥದ ಭಾವನೆಯಿತ್ತು. ಜಾಗೀರದಾರರಿಗಿಂತ ತಾವೇನೂ ಕಡಿಮೆಯಲ್ಲ ಎಂದು ತೋರಿಸುವ ಹವ್ಯಾಸವಿತ್ತು.

ಅಂತಲೇ ಈಗ ನಡೆಯುವ ಘಟನೆ ನಿರ್ಣಾಯಕವಾಗಿದೆ. ತಮ್ಮ ಸತ್ವ ಪರೀಕ್ಷೆಯಾಗಬೇಕಾದದ್ದು ಈಗಲೇ! ಈಗ ನ್ಯಾಯದಿಂದಲೇ ವರ್ತಿಸಬೇಕು. ಈ ನ್ಯಾಯ ಹಿಂದಿನ ಸಾವಿರ ಅನ್ಯಾಯಗಳನ್ನು ಬಯಲಿಗೆಳೆದರೂ ಅಡ್ಡಿಯಿಲ್ಲ. ಅನ್ಯಾಯದಿಂದ ಅನ್ಯಾಯವನ್ನು ಮುಚ್ಚಿ ಸುಖವಾಗಿ ಬದುಕಬಹುದು. ಆದರೆ ಆ ಎರಡು ಅನ್ಯಾಯಗಳ ನಡುವೆ ಒಂದು ಮನುಷ್ಯಜೀವ ವಿಲಿವಿಲಿ ಒದ್ದಾಡುತ್ತಿರುತ್ತದೆ. ಮನುಷ್ಯತ್ವದ ಹಸಿದ ಕರುಳೊಂದು ನೋಯುತ್ತಿರುತ್ತದೆ. ಎಷ್ಟೇ ದುಃಖವಾದರೂ ಅಡ್ಡಿಯಿಲ್ಲ. ನ್ಯಾಯದಿಂದಲೇ ವರ್ತಿಸಬೇಕು.

ಗೌಡರ ಮನಸ್ಸು ನಿಶ್ಚಿಂತವಾಯಿತು. ಅಂತಲೇ ಮಧ್ಯರಾತ್ರಿ ಮೀರಿದಾಗ ಸುಖವಾಗಿ ನಿದ್ದೆಹತ್ತಿತು.

:: ೧೫ ::

ಪುತಳಾಬಾಯಿಯ ಶವವನ್ನು ಪರೀಕ್ಷೆಗಾಗಿ ದವಾಖಾನೆಗೆ ಕಳಿಸಲೇಬೇಕೆಂದು ಗೌಡರು ನಿರ್ಧರಿಸಿಬಿಟ್ಟರು. ಆ ರೀತಿ ವ್ಯವಸ್ಥೆಯನ್ನೂ ಮಾಡಿದರು. ಈ ಸುದ್ದಿಯನ್ನು ಕೇಳಿದಾಗ ಫೌಜದಾರರಿಗೆ ಸಿಟ್ಟು ತಡೆಯಲಾಗಲಿಲ್ಲ. ಅವರಿಗೆ ಇದರಿಂದ ಮರ್ಯಾದೆ ಹೋದಂತೆನಿಸಿತು. ಕೇವಲ,ಗೌಡ ತನ್ನ ಆಜ್ಞೆಯನ್ನು ಮೀರಿದನಲ್ಲ ಎಂಬ ಸಿಟ್ಟು ಅಷ್ಟೇ ಅಲ್ಲ! ಬಾಪೂಸಾಹೇಬನಿಂದ ಬರಬೇಕಾದ ಹಣದ ಥೈಲಿಯನ್ನು ಪಡದಪ್ಪನವರು ಈಗಾಗಲೇ ತಂದು ಮುಟ್ಟಿಸಿದ್ದರು. ಅದನ್ನೀಗ ಮರಳಿ ಕೊಡಬೇಕಾದೀತಲ್ಲ, ಎಂಬ ವ್ಯಥೆ, ಪ್ರಾಣವನ್ನೇ ಕೊಡುವಷ್ಟು ಅಪ್ರೀತಿಯ ವಿಷಯವಾಗಿತ್ತು. ಅದನ್ನು ಮಾಡಲು ಹಚ್ಚಿ, ತನ್ನ ಪ್ರತಿಷ್ಠೆ, ದರ್ಪ, ಮರ್ಯಾದೆ ಎಲ್ಲವನ್ನೂ ಈ ಗೌಡ ಮಣ್ಣುಗೆಡವಿದನಲ್ಲ! ಅವನಿಗೆ ತಕ್ಕ ಮಂಗಳಾರತಿ ಮಾಡಬೇಕೆಂದು, ಗೌಡರನ್ನು ಚಾವಡಿಗೆ ಕರೆಸಿದರು. ಪುತಳಾಬಾಯಿಯ ಹೆಣವನ್ನು ಚಕ್ಕಡಿಯಲ್ಲಿ ಹೇರಿಸಿ, ಊರು ದಾಟಿಸಿದ ಮೇಲೆಯೇ ಬರುವದಾಗಿ ಗೌಡರಿಂದ ಉತ್ತರ ಬಂದದ್ದರಿಂದಂತೂ ಫೌಜದಾರರ ಪಿತ್ತ ಇನ್ನೂ ನೆತ್ತಿಗೇರಿತು.

ಊರನ್ನೇ ಸುಟ್ಟುಬಿಡುವಷ್ಟು ಸಿಟ್ಟು ಬಂತು ಫೌಜದಾರರಿಗೆ. ಗೌಡನಿಗೂ ದಾದಾನಿಗೂ ಕೂಡಿಯೇ ಬೇಡಿ ಹಾಕಿಸಿ ಊರಲ್ಲಿ ಮೆರವಣಿಗೆ ಮಾಡಿಸಿದ ಮೇಲೆಯೇ ಊರು ಬಿಡುವ ನಿರ್ಧಾರ ಮಾಡಿದರು. ದಾದಾ ಅದೇ ಆಗ ಗೌಡರ ಮನೆಯಿಂದ ಪೋಲೀಸನ ಸಂಗಡ ಬಂದು ಚಾವಡಿಯಲ್ಲಿ ಒಂದು ಬದಿಗೆ ಕುಳಿತಿದ್ದ. ಅವನನ್ನು ನೋಡಿಯಂತೂ, ಫೌಜದಾರರ ಮನಸ್ಸಿನ ತೂಕವೇ ತಪ್ಪಿತು. " ಅರೇ ಏ ಖೂನೀ ಆರೋಪಿಕೋ ಬೇಡೀ ಡಾಲೋ " ಎಂದು ಕುಳಿತಲ್ಲಿಯೇ ಪೋಲೀಸನಿಗೆ ಆಜ್ಞೆ ಮಾಡಿದರು.

ಪೋಲೀಸ ಇನ್ನೇನು ಅವರ ಆಜ್ಞೆಯನ್ನು ನೆರವೇರಿಸುವದರಲ್ಲಿದ್ದ, ಅಷ್ಟರಲ್ಲಿ ಗೌಡರು ಚಾವಡಿಗೆ ಬಂದರು. ಅವರನ್ನು ನೋಡಿದ ಫೌಜದಾರರು ಬೇಟೆಯನ್ನು ಕಂಡ, ಹಸಿದ ಹುಲಿಯಂತಾದರು. ಕೆಂಗಣ್ಣುಗಳಿಂದ ಅವರನ್ನು

ನೋಡುತ್ತ, "ನಮ್ಮ ಹುಕುಂ ಅಂದರ ಏನಂತ ತಿಳಿದೀರಿ ಗೌಡರs ? ಖೊಟ್ಟಿ ಮರಣ ರಜಿಸ್ಟರ ಬರದು ಬರದು, ಯಾರೂ ಕೇಳಾವರಿಲ್ಲ ಅಂತ ತಿಳಕೊಂಡೀರೇನು? ತೋರಸತೀನಿ ನಿಮಗೂ ಒಂದ ಕೈ. ಅರೇ ಇಸ್ಮಾಯಿಲ್ ಪಾಟೀಲಕೋ ಅರೆಸ್ಟ್ ಕರೋ" ಎಂದು ನುಡಿದು ಮುಖ ತಿರುಗಿಸಿ ಗುಡಾರದ ಒಳಗೆ ಹೋದರು.

ಇಸ್ಮಾಯಿಲನಿಗೆ ಏನು ಮಾಡಬೇಕೆಂದು ತಿಳಿಯದೆ ಸುಮ್ಮನೆ ಗೌಡರ ಮುಂದೆ ಬಂದು ನಿಂತ.

"ನಾನೂ ಪೋಲೀಸ ಪಾಟೀಲ ಅದೀನಿ. ಸರಕಾರೀ ನೌಕರ. ನನ್ನ ಕೆಲಸ ದಿಂದ ಸಸ್ಪೆಂಡ ಮಾಡೂತನಾ ನಿಮ್ಮ ಅಪ್ಪ ಬಂದರೂ ಬೇಡೀ ಹಾಕಗೊಡಾಕಿಲ್ಲ" ಅಪಮಾನ ತಡೆಯದಾಗಿ ಗೌಡರು ಸಿಟ್ಟಿನಿಂದ ಗರ್ಜಿಸಿದರು.

ಫೌಜದಾರರು ಈ ಮಾತು ಕೇಳಿ ಕುಳಿತ ಸ್ಥಳದಿಂದಲೇ "ಉಸಕೂ ಸಸ್ಪೆಂಡ ಹವಾನೆ ಕಿಯಾ ಹೈ; ಬೇಡಿ ಡಾಲೋ ಉಸಕೂ" ಎಂದು ಚೀರಿಕೊಂಡರು.

ಗೌಡರು ಉರಿಯುತ್ತಲೇ ನಿಂತಿದ್ದರು. ಇಸ್ಮಾಯಿಲನು ಅವರ ಮೈಮೇಲೆ ಹೋಗಲು ಧೈರ್ಯವಾಗದೆ ಮಿಕಿಮಿಕಿ ನೋಡುತ್ತ ನಿಂತ. ಅವನ ಸಹಾಯಕ್ಕೆ ಇನ್ನಿಬ್ಬರು ಪೋಲೀಸರು ಧಾವಿಸಿ ಬಂದರು. ಗೌಡರಿಗೂ ಅವರಿಗೂ ಕೈಗೆ ಕೈಹತ್ತಿ ಆ ಗೊಂದಲದಲ್ಲಿ ಗೌಡರು ಕೆಳಗೆ ಬಿದ್ದರು. ಅಲ್ಲಿಯೇ ಇದನ್ನೆಲ್ಲ ನೋಡುತ್ತ ಕುಳಿತಿದ್ದ ದಾದಾ ಎದ್ದು ಗೌಡರ ಸಹಾಯಕ್ಕೆ ಬರುತ್ತಲೇ ಅವನ ಹಿಂದಿನಿಂದ ಇನ್ನೊಬ್ಬ ಪೋಲೀಸ ಬಂದು ಅವನ ಕೈಹಿಡಿದು ಜಗ್ಗಿದನು.

ದಾದಾ ಹೊರಳಿದವನೇ ಅವನ ಕೆನ್ನೆಗೊಂದು ಏಟು ಬಿಟ್ಟ. ಆ ರಭಸಕ್ಕೆ ಪೋಲೀಸ ಕಣ್ಣು ಮುಚ್ಚಿ ನೆಲಕ್ಕೇ ಕುಳಿತನು. ದಾದಾ ಅವನತ್ತ ನೋಡದೇ, ಗೌಡರಿಗೆ ತೆಕ್ಕೆ ಬಿದ್ದು ಹಿಡಿದ ಪೋಲೀಸನ ಟೊಂಕಕ್ಕೆ ಕೈಹಾಕಿ ಕ್ಷಣಾರ್ಧದಲ್ಲಿ ಎತ್ತಿ ನೆಲಕ್ಕೆ ಅಪ್ಪಳಿಸಿದನು. ಇನ್ನೊಬ್ಬ ಪೋಲೀಸ ಗಾಬರಿಯಾಗಿ ಗುಡಾರ ದೊಳಗೇ ನುಗ್ಗಿದನು. ಈ ಪ್ರಸಂಗದ ಅರಿವಾಗಿ ಫೌಜದಾರರು ಮೂಲೆಯಲ್ಲಿದ್ದ ಬಂದೂಕಿಗೆ ಕೈಹಾಕಿದರು. ಹೊರಗೆ ಗುದುಮುರಿಗೆ ಹಾಕುತ್ತಿದ್ದ ದಾದಾ ಈಗಾ ಗಲೆ ಗುಡಾರದ ಹತ್ತಿರ ಹತ್ತಿರಕ್ಕೆ ಬಂದವನು, ಎತ್ತಿದ ಬಂದೂಕನ್ನು ನೋಡಿ, ಫೌಜದಾರರ ಕೈಗೆ ಏಟು ಬಿಟ್ಟನು. ಬೀಸಿದ ಹೊಡತಕ್ಕೆ ಬಂದೂಕು ನೆಲಕ್ಕೆ ಬಿತ್ತು. ಹಾಗಿ ಅದನ್ನು ಎತ್ತಬೇಕೆಂಬ ಹವಣಿಕೆಯಲ್ಲಿ ಫೌಜದಾರರಿರುವಾಗ ದಾದಾ ಅವರಿಗೇ ತೆಕ್ಕೆಬಿದ್ದ. ಫೌಜದಾರರೂ ಗರಡಿಯಾಳು. ದಾದಾ ಎತ್ತಿ ಒಗೆದಾಗ,

ಪೆಟ್ಟು ಹತ್ತವಂತೆ ನೆಲಕ್ಕೆ ಕಾಲೂರಿ ಬಿದ್ದು ಮತ್ತೆ ಬಂದೂಕಿಗಾಗಿ ಕೈಚಾಚಿದರು. "ಅಮಲು ಏರೈತಿ ಅವಗ, ಬಿಡ ಆವನ್ನ ದಾದಾ. ನನಗೆ ಬೇಡಿ ಹಾಕೆರ ಹಾಕಲಿ" ಎಂದು ಗೌಡರು ಒದರಾಡುತ್ತಿದ್ದರು.

ಫೌಜದಾರರು ನೆಲಕ್ಕೆ ಬಿದ್ದ ಸ್ಥಳದಿಂದ ಸ್ವಲ್ಪ ಅಂತರದ ಮೇಲೆ, ಮೂಲೆಯಲ್ಲಿ ಇನ್ನೊಂದು ಬಂದೂಕಿದ್ದದ್ದು ದಾದಾನ ಕಣ್ಣಿಗೆ ಬಿತ್ತು. ದಾದಾ ಅದನ್ನೆತ್ತಿಕೊಂಡು, ಫೌಜದಾರರ ಬೆನ್ನಿಗೊಂದು ಏಟುಕೊಟ್ಟಾಗ " ಯಾ ಅಲ್ಲಾ!" ಎಂದು ಚೀರಿ ಫೌಜದಾರರು ಬೋರಲಾಗಿ ಬಿದ್ದರು.

ಗುಡಾರದ ಹೊರಗಿದ್ದ ಗೌಡರು ಒಳಗೆ ಬಂದರು. ಏನೂ ಮಾಡಲು ತಿಳಿಯದೆ ಗುಡಾರದ ಒಳಗೆ ಗಾಬರಿಯಿಂದ ನಿಂತಿದ್ದ ಪೋಲೀಸ ಈಗ ಗೌಡರ ಮೇಲೆ ಹಾರಿದ. ದಾದಾನ ಬಂದೂಕು ಅವನ ತಲೆಗೂ ತಾಕಿತು. ಆ ಹೊಡೆತಕ್ಕೆ ರಕ್ತ ಸುರಿಯಹತ್ತಿತು. ಅವನು ದನದಂತೆ ಚೀರುತ್ತ ಹೊರಗೋಡಿದ. ದಾದಾನಿಂದ ಹೊಡೆತ ತಿಂದ ಮೊದಲಿನ ಪೋಲೀಸ ಓಡಿಹೋಗಿದ್ದ. ಅವನೀಗ ವಾಡೆಯ ಕಡೆಯಿಂದ ಪಡದಯ್ಯ, ಬಾಪೂಸಾಹೇಬರೊಡನೆ ಓಡಿ ಬರುತ್ತಿದ್ದ. ಆದರೆ ತಲೆಯಿಂದ ರಕ್ತಸುರಿಯುತ್ತ ಬಂದ ಈ ಪೋಲೀಸನನ್ನು ನೋಡಿ ಅವರೆಲ್ಲ ಗಾಬರಿಗೊಂಡರು.

ಗುಡಾರದ ಒಳಗೆ ಫೌಜದಾರರೊಬ್ಬರೇ. ಅವರ ಸ್ಥಿತಿಯೋ ಶೋಚನೀಯವಾಗಿತ್ತು. ಬಾಯಿಗೆ ಬಂದ ಹೆಸರನ್ನುಚ್ಚರಿಸುತ್ತ ಅಸಂಬದ್ಧವಾಗಿ ಪೋಲೀಸರನ್ನು ಕರೆಯುತ್ತಿದದ್ದರು. ಬೆನ್ನಿಗೆ ಬಿದ್ದ ಪೆಟ್ಟನಿಂದ ಚೇತರಿಸಿಕೊಂಡು ಬಂದೂಕಿಗೆ ಕೈ ಚಾಚಬೇಕೆನ್ನುವಷ್ಟರಲ್ಲಿ,ದಾದಾ ಅವರ ಕೈಗೆ ಇನ್ನೊಂದು ಏಟು ಕೊಟ್ಟು, ಆ ಬಂದೂಕನ್ನೂ ತೆಗೆದುಕೊಂಡು ಚಾವಡಿಯ ಕಟ್ಟಿಗೆ ಹಾರಿ ಬಂದು ನಿಂತುಕೊಂಡ. ಕೈಯಲ್ಲಿ ಎರಡು ಬಂದೂಕುಗಳನ್ನು ಹಿಡಿದುಕೊಂಡು ಕೃತಾಂತನ ಆವೇಶದಲ್ಲಿ ನಿಂತ ಅವನನ್ನು ನೋಡಿದೊಡನೆಯೇ ಪಡದಪ್ಪನವರು ಹಿಂದಿರುಗಿ ಓಡಿಬಿಟ್ಟರು. ಬಾಪೂಸಾಹೇಬ ಅವನನ್ನು ನೋಡಿರಲಿಲ್ಲ. ಆದರೆ ಪೋಲೀಸರು ಓಡಿ ಬಂದ ಕೂಡಲೆ ದಿಕ್ಕು ತಿಳಿಯದೆ ನಿಂತಲ್ಲಿಯೇ ನಿಂತುಕೊಂಡಿದ್ದ. ಬಾಳಾಚಾರ್ಯರ ಮನೆಗೆ ಹೋದ ಆಡ್ಲೀ ಕೇಶವರಾಯ ಇದಾವುದೂ ಅರಿಯದೆ, ಚಾವಡಿಯ ಇನ್ನೊಂದು ಮಗ್ಗುಲಿನಿಂದ ಬರುತ್ತಿರುವದನ್ನು ನೋಡಿ, ಕೂಡಿದ ಜನರು " ಎಪ್ಪಾ ಮುಂದ ಹೋಗಬ್ಯಾಡ್ರಿ. ಸಾಯತೀರಿ" ಎಂದು ಚೀರಿದರು. ಕೇಶವರಾಯ ಇದನ್ನು ಕೇಳಿ

ಡಿಕ್ಕಿ ತಿಳಿಯದೆ ಅವರತ್ತ ಓಡಿದನು. ಚಾವಡಿಯ ಹೊರಗೆ ನೆರೆದ ಜನಸಮೂಹ ದಲ್ಲಿ ಕೋಲಾಹಲವೆದ್ದಿತು.

ನೆಲಕ್ಕೆ ಬಿದ್ದ ಫೌಜದಾರರನ್ನು ಉಪಚರಿಸಲು ಕೂಡ ಚಾವಡಿಯಲ್ಲಿ ಯಾರೂ ಉಳಿದಿರಲಿಲ್ಲ. ಅವರ ಪರಿಸ್ಥಿತಿಯನ್ನು ನೋಡಿ ಗೌಡರಿಗೆ ನಗೆ ಬಂದಿತು. ಆದರೂ ಅದನ್ನು ತೋರಗೊಡದೆ "ರಾವಸಾಬ ಪೆಟ್ಟು ಬಾಳ ಬಿದ್ದೈತೇನ್ರಿ?" ಎಂದು ಕೇಳಿದರು. ಫೌಜದಾರರು ಉತ್ತರ ಕೊಡಲೂ ತ್ರಾಣವಿಲ್ಲದೆ ಬರೀ ನರಳ ಹತ್ತಿದರು.

ದಾದಾನ ಗರಡಿಯಾಳುಗಳಿಗೆ ಇಷ್ಟರಲ್ಲಿ ಸುದ್ದಿ ಮುಟ್ಟಿ ಅವರೂ ಓಡಿ ಬಂದರು. ದಾದಾನನ್ನು ಪಾರು ಮಾಡಬೇಕೆಂದು "ನಮ್ಮ ಜೋಡಿ ನಡಿ. ಆದರ ಬಂದೂಕ ಮಾತ್ರ ಬಿಡಬ್ಯಾಡ" ಎಂದು ಅವರಲ್ಲೊಬ್ಬ ಕಿವಿಯಲ್ಲಿ ಹೇಳಿದ. ದಾದಾ ಅದನ್ನು ಕೇಳದೆ ಒಳಗೆ ಬಂದ.

"ಯಾಕ ಫೌಜದಾರಾ, ಖೊಟ್ಟಿ ಖಟ್ಲಿ ಹಾಕಿ ದುಡ್ಡು ತಿಂದರ ಏನಾಗ ತೇತಿ ತಿಳೀತಿಲ್ಲೋ?" ಎಂದು ಗಟ್ಟಿಸಿ ಕೇಳಿದ. ಫೌಜದಾರರು ಮಾತನಾಡ ಬೇಕೆಂದರೂ ನೋವು ಅವರನ್ನು ಬಿಡುತ್ತಿರಲಿಲ್ಲ. ದೈನ್ಯದಿಂದ ದಾದಾನನ್ನು ನೋಡಿದರು ಮಾತ್ರ.

"ಗೌಡರಿಗೆ ಬೇಡೀ ಹಾಕೂ ಅಂತಿದ್ದೆಲ್ಲ. ಹಾಕಸತೀಯೇನ ಬೇಡಿ ಇನ್ನ ವ್ಯಾಗ?" ಮತ್ತೆ ಕೇಳಿದ ದಾದಾ. ಫೌಜದಾರರು ಈಗ ಗೌಡರ ಕಡೆಗೆ ಕ್ಷಮಾ ಯಾಚನೆಗಾಗಿಯೆಂಬಂತೆ ನೋಡಿದರು.

ಇದೇ ಅವಕಾಶದಲ್ಲಿ ಸಂಗಪ್ಪನಿಂದ ಅನ್ಯಾಯವಾಗಿ ತಿಂದ ದುಡ್ಡನ್ನು ದಾದಾ ಕಕ್ಕಿಸಬೇಕಾಗಿತ್ತು. "ಸಂಗಪ್ಪನ ರೂಪಾಯಿ ಎಲ್ಲೆ ಅದಾವ ? ಕೊಡ ತೀಯಾ ಅವನ್ನ?" ಎಂದು ಕೇಳಿದ. ಫೌಜದಾರರು ನರಳುತ್ತಲೆ ಕೀಲಿಕೈಯನ್ನು ಅವನೆದುರಿಗೆ ಒಗೆದು ಪೆಟ್ಟಿಗೆಯತ್ತ ಕೈಮಾಡಿದರು.

ದಾದಾ ಪೆಟ್ಟಿಗೆಯಲ್ಲಿ ಕೈಹಾಕಿದಾಗ ಸಾವಿರ ರೂಪಾಯಿಗಳು ತುಂಬಿದ ಎರಡು ಚೀಲಗಳು ಕೈಗೆ ಸಿಕ್ಕವು. ಅದರ ಕೆಳಗೆ ಕಾಗದದಲ್ಲಿ ಪುಡಿಕೆ ಕಟ್ಟಿಟ್ಟ ನೂರು ರೂಪಾಯಿಗಳಿದ್ದವು. ಆ ಚೀಲಗಳನ್ನು ದಾದಾ ಎತ್ತಿದಾಗ, ಪ್ರಾಣ ಹೋಗುವವರಂತೆ ದೈನ್ಯದಿಂದ ಫೌಜದಾರರು "ದಾದಾ ಅವು ನನ್ನ ಖಾಸಗಿ ರೂಪಾಯಿ" ಎಂದು ಹೇಳಿದಾಗ, ದಾದಾ ಆ ಚೀಲಗಳನ್ನು ಹಾರಿಸಿ ಅವರತ್ತ ಒಗೆದನು.

ದಾದಾ ಸಂಗಪ್ಪನ ಹಣವನ್ನು ತೆಗೆದುಕೊಂಡು ಹೊರಡಲನುವಾದ. ಹೋಗುವ ಮುಂದೆ ಬಂದೂಕು ಎತ್ತಿ "ಇಲ್ಲಿ ನೋಡ ಫೌಜದಾರಾ. ಈ ಬಂದೂಕ ಹೋದರ ನಿನ್ನ ನೌಕರಿನೂ ಹೋಗತ್ತೈತಿ. ನೀನೂ ಮಕ್ಕಳೊಂದಿಗ್ಯಾ. ಅದರ ಸಲುವಾಗಿ, ಈ ಬಂದೂಕು ನಿನಗ ಕೊಡಬೇಕನಸತ್ತೈತಿ. ಆದರ ಬಂದೂಕ ಕೈಗೆ ಬರಾಣಾ ಮತ್ತ ಈದ ಹುಲಿ ಹಾಂಗ ಏರಿ ಬಂದು ಗೌಡರಿಗೆ ಏನಾದರೂ ತ್ರಾಸ ಕೊಟ್ಟೀ ಅಂದರ, ಜೀವಸ್ಹೈತ ನೀ ಊರು ಬಿಟ್ಟ ಹೋಗದಾಂಗ ಮಾಡತೇನಿ." ಎಂದು ಹೇಳಿದ. ಫೌಜದಾರರಿಗೆ ಏನೂ ಪ್ರತಿಕ್ರಿಯೆ ತೋರಿಸುವ ಶಕ್ತಿ ಉಳಿದಿರಲಿಲ್ಲ.

ದಾದಾ ಗೌಡರ ಕೈಗೆ ಎರಡೂ ಬಂದೂಕುಗಳನ್ನು ಕೊಟ್ಟು, ಫೌಜದಾರರು ಊರ ಸೀಮೆ ದಾಟಿದ ಮೇಲೆ ಅವನ್ನು ಅವರ ಕೈಗೆ ಕೊಡಬೇಕೆಂದು ಹೇಳಿದ. ಇನ್ನು ಚಾವಡಿಯ ಕಟ್ಟೆಯನ್ನಿಳಿಯುವವನಿದ್ದ,ಅಷ್ಟರಲ್ಲಿ ಚಾವಡಿಯ ಹತ್ತಿರವೇ ಗಾಡಿಯನ್ನು ತರುಬಿಸಿ, ಯಶವಂತರಾಯರು ಕೆಳಗಿಳಿದರು. ದಾದಾನನ್ನು ಕೂಡಿಕೊಂಡೇ ಚಾವಡಿಯ ಕಟ್ಟೆಯನ್ನೇರಿ ಒಳಗೆ ಬಂದರು.

ಆದರೆ ಚಾವಡಿಯಲ್ಲಿ ಕಂಡ ದೃಶ್ಯ ಅವರನ್ನು ದಂಗುಬಡಿಸಿತು. ಫೌಜದಾರರ ಮುಖ ಹುಚ್ಚುಹುಚ್ಚಾಗಿತ್ತು, ಅಲ್ಲದೆ ಆಗಾಗ ನೋವಿನಿಂದ ಆ ಮುಖವನ್ನು ಹಿಂಡುತ್ತಿದ್ದರು. ಗೌಡರು ಶಾಂತರಾಗಿದ್ದರೂ ವಾಡಿಕೆಯ ಗಾಂಭೀರ್ಯ ಅವರ ಮುಖದಲ್ಲಿರಲಿಲ್ಲ. ಎಂದೂ ಸಡಿಲವಾಗದ ರುಮಾಲ ಈಗ ಅಸ್ತವ್ಯಸ್ತವಾಗಿತ್ತು. ನಡಿಗೆಯಲ್ಲಿ ಆತುರ ಎದ್ದು ಕಾಣುವಂತಿತ್ತು. ಏನೋ ಅನಾಹುತವಾಗಿರಬೇಕೆಂದು ಯಶವಂತರಾಯರು ಕೂಡಲೆ ಊಹಿಸಿದರು.

'ಬರ್ರಿ ಬರ್ರಿ, ಈಗ ಬಂದಿರಾ?' ಎಂದು ಕೇಳುತ್ತ ಗೌಡರು ಅವರನ್ನು ಸ್ವಾಗತಿಸಿದರು. 'ಯಾವಾಗ ಬಂದಿರಿ ಪಾಟೀಲರ?' ಎಂದು ಔಪಚಾರಿಕವಾಗಿ ಮಾತ್ರ ಕೇಳಿ ಫೌಜದಾರರು ಅವರ ದೃಷ್ಟಿಯನ್ನು ತಪ್ಪಿಸಲೆಂದು ಮುಖ ತಿರುಗಿಸಿದರು. ಯಶವಂತರಾಯರು ಗುಡಾರದ ಮೇಲೆ ಬಂದು ಕುಳಿತುಕೊಂಡೊಡನೆ, ದಾದಾ, ತಾನು ಮನೆಗೆ ಹೋಗಿ ನ್ಯಾಹರಿಯ ವ್ಯವಸ್ಥೆ ಮಾಡುವದಾಗಿ ತಿಳಿಸಿದ. ಆದರೆ ಅಷ್ಟರಲ್ಲಿಯೇ ಗೌಡರು ಯಶವಂತರಾಯರಿಗೆ "ಪಾಟೀಲರs ನೀವು ವಾಡೆಕ್ಕ ಹೋದರs ಪಾಡಾಗಾಕಿಲ್ಲs? ಪುತಳಾಬಾಯಿ ಅಕ್ಕಾಅವರ ಹೆಣಾ ದವಾಖಾನೆಗೆ ಕಳಿಸಿ ಬಿಟ್ಟೇತಿ. ವಾಡೇದಾಗ ಬಾಪೂಸಾಬರು ದುಕ್ಕದಾಗs

ಕುಳಿತಾರು. ಅಲ್ಲೇ ತಾವು ಹೋದರ ಎಲ್ಲಾ ಹಕೀಕತ್ತು ತಿಳೀತೈತಿ." ಎಂದು ಸೂಚಿಸಿದರು.

"ಹೆಣಾ ದವಾಖಾನಿಗೆ ಯಾಕ ಕಳಿಸಿದಿರಿ? ದುರ್ಮರಣ ಆಗೈತೇನು?" ಯಶವಂತರಾಯರ ದನಿ ಈ ಪ್ರಶ್ನೆಯನ್ನು ಕೇಳುವಾಗ ಭಯದಿಂದ ನಡುಗುತ್ತಿತ್ತು.

"ಯಾಕ, ನಿಮಗ ಬಾಪೂಸಾಬರು ಏನೂ ತಿಳಿಸೇ ಇಲ್ಲೇನು? ಏನಂತ ಪತ್ರಾ ಬರದಾರ ಹಾಗಾರ?" ಗೌಡರು ಕೇಳಿದರು.

"ಊರಾಗ ಕಾಲರಾ ಪಿಡುಗು ಫೈಲಾಸೇತಿ. ಪುತಳಾಬಾಯಿ ಕಾಲರಾ ಬಂದs ಪೋತಿ ಆದಳು. ಮುಂದಿನವ್ಯವಸ್ಥಾ ಮಾಡಾಕ ಲಗೂನ ಬರಬೇಕು, ಅಂತ ಪತ್ರಾ ಕಳಿಸಿದ್ದ. ಆದರ ನಿಮ್ಮ ಮಾತು ಕೇಳಿದರ ಪ್ರಕರಣ ನಿರಾಳಾನs ಕಾಣತೈತಿ." ಯಶವಂತರಾಯರು ಏನೂ ತಿಳಿಯದವರಾಗಿ ನುಡಿದರು.

"ನಿರಾಳಾ ಇಲ್ಲ ಏನಿಲ್ಲ. ಈ ಗುನ್ಹೇದಾಗ ನಾವು ನಿರಂಬಳ ಇರಬೇಕೂ ಅಂತ ದವಾಖಾನೆಗೆ ಹೆಣಾ ಕಳಿಸಿತು. ಪುತಳಾಬಾಯಿ ಉರ್ಲಹಾಕಿಕೊಂಡು, ಆತ್ಮಹತ್ಯಾಮಾಡಿಕೊಂಡಿರಬೇಕೂ ಬಂದು, ಇಲ್ಲಾಂದ್ರ, ಉರ್ಲಹಾಕಿ ಇನ್ನೊಬ್ಬರು ಖೂನಿಅರ ಮಾಡಿರಬೇಕು ಅಂತ ಸಂಶೇ ಬಂದು, ಹಾಗ ಮಾಡಿದಿವಿ. ಆತ್ಮಹತ್ಯಾ ಮಾಡಿಕೊಂಡಿದ್ದs ಇದ್ದರ ಎಲ್ಲಾರಿಗೂ ನಿಶ್ಚಿಂತಿ." ಗೌಡರು ಆದ ಪ್ರಕರಣವನ್ನು ಸ್ವಲ್ಪದರಲ್ಲಿ ವಿವರಿಸಿದರು.

ಇದನ್ನೆಲ್ಲ ಕೇಳಿ ಮೊದಮೊದಲು ಗೊಂದಲದಲ್ಲಿ ಬಿದ್ದರೂ ಕೂಡ, ಆ ಮೇಲೆ ಅವರಿಗೆ ತಮ್ಮ ಕರ್ತವ್ಯದ ಅರಿವಾಗತೊಡಗಿತು. ಬಾಪೂಸಾಹೇಬ ಪತ್ರದಲ್ಲಿ ಬರೆದು ತಿಳಿಸಿದ್ದಕ್ಕೂ ಇಲ್ಲಿಯ ಪರಿಸ್ಥಿತಿಗೂ ಮಹದಂತರವಿತ್ತು. ಆದರೆ ಇದನ್ನೆಲ್ಲಾ ಪರಿಶೋಧಿಸಿ ಪರಿಸ್ಥಿತಿಯನ್ನು ಒಂದು ನೆಲೆಗೆ ತಂದು ಮುಟ್ಟಿಸುವದು, ಹಿರಿಯರಾದ ಅವರದೇ ಕರ್ತವ್ಯವಾಗಿತ್ತು. ಅಂತೆಯೇ "ಹೀಗs? ಆಗಲಿ, ವಾಡೆಕ್ಕ ಹೋಗಿ ಬರತನ ದಾದಾ, ನ್ಯಾಹರೀ ಏನು ಬ್ಯಾಡ, ನೀ ಅದರ ಉಸಾಬರಿಗೆ ಬೀಳಬ್ಯಾಡ," ಎಂದು ದಾದಾನಿಗೆ ಹೇಳಿ ಎದ್ದರು.

ಅಷ್ಟರಲ್ಲಿ, ಯಶವಂತರಾಯರು ಊರಿಗೆ ಬಂದ ಸುದ್ದಿ ಮುಟ್ಟಿ ಬಾಪೂಸಾಹೇಬ ಚಾವಡಿಯ ಕಡೆಗೇ ಅವರನ್ನು ಕಾಣಲು ಬಂದ. ಮಾವ ಅಳಿಯರಲ್ಲಿ ನಮಸ್ಕಾರ ಚಮತ್ಕಾರಗಳಾಗಿ ಪಿಸುದನಿಯಲ್ಲಿಯೇ ಮಾತುಕತೆಗಳು ನಡೆದವು.

ತಲೆ ಕೆಳಗೆಮಾಡಿ ಬಾಪೂಸಾಹೇಬ ಹೇಳಿದ್ದು ಯಶವಂತರಾಯರಿಗೆ ಕೇಳಿಸಿತೋ ಇಲ್ಲವೋ! ಸ್ವಲ್ಪ ಹೊತ್ತಾದ ಮೇಲೆ ಇಬ್ಬರು ವಾಡೆಯ ಕಡೆಗೆ ನಡೆದರು. ದಾದಾ ಗೌಡರ ಜೊತೆಯಲ್ಲಿ ಗೌಡರ ಮನೆಗೆ ನಡೆದ.ಇದನ್ನೆಲ್ಲ ನೋಡಿದ ಮೇಲೆ, ಚಾವಡಿಯ ಸಮೀಪದ ಸಂದಿಗೊಂದಿಗಳಲ್ಲಿ ಅಡಗಿಕೊಂಡು ನಿಂತಿದ್ದ, ಆಡ್ಲೀ ಕೇಶವರಾಯ, ಮತ್ತು ಇನ್ನುಳಿದ ಮೂವರೂ ಪೋಲಿಸರು ಧೈರ್ಯದಿಂದ ಚಾವಡಿಗೆ ಬಂದರು.

ತಾವು ಪಾದಳ್ಳಿಯನ್ನು ಬಿಟ್ಟು ಹೊರಟ ಮೇಲೆ, ಮೂರೇ ದಿನಗಳಲ್ಲಿ ನಡೆದ ಅದ್ಭುತ ಘಟನೆಗಳ ವಿವರಗಳು, ಯಶವಂತರಾಯರಿಗೆ ಒಂದೊಂದಾಗಿ, ಬಾಪೂ ಸಾಹೇಬನಿಂದ, ಯಮುನಾನಿಂದ, ವಾಡೆಯಲ್ಲಿಯ ಇನ್ನಿತರ ಆಳು ಹೋಳುಗಳಿಂದ ತಿಳಿದು ಬಂದವು. ದಾದಾನ ಮೇಲೆ ನಾನಾನ ಕೊಲೆಯ ಸುಳ್ಳುಆರೋಪ ಬಂದದ್ದೇ, ಪುತಳಾಬಾಯಿಯ ಆತ್ಮಹತ್ಯೆಗೆ ಕಾರಣವಾಯಿತು ಎಂಬ ಮಾತನ್ನು ಯಮುನಾ ತಿಳಿಸಿದಳು. ಆದರೆ ಬಾಪೂಸಾಹೇಬ ಮಾತ್ರ, ಚಿಮಣಾಳನ್ನು ಮಠಕ್ಕೆ ಅಟ್ಟಿದ್ದರಿಂದ ಪುತಳಾಬಾಯಿ ಮನಸ್ಸಿಗೆ ಹಚ್ಚಿಕೊಂಡು ಆತ್ಮಹತ್ಯೆಮಾಡಿ ಕೊಂಡಿರಬೇಕೆಂದು ಸೂಚಿಸಿದ. ಯಶವಂತರಾಯರಿಗೆ ಈ ವಿವರಗಳಿಂದ ಬಲ ವಾದ ಆಘಾತವಾದಂತಾಯಿತು. ಜಾಗೀರದಾರರಂಥ ಗೌರವಯುಕ್ತವಾದ ಮನೆ ತನದಲ್ಲಿ ಆತ್ಮಹತ್ಯೆಯಂಥ ಅಪಮಾನಕಾರಕ ಘಟನೆ ನಡೆದದ್ದರಿಂದ ಅವರಿಗೆ ಸಂಕಟವಾಯಿತು. ಅಪ್ರತ್ಯಕ್ಷವಾಗಿಯಾದರೂ ಆಗಲಿ, ತಮ್ಮ ಅಳಿಯ ಅದಕ್ಕೆ ಕಾರಣವಾದನಲ್ಲ ಎಂದು ನಾಚಿಕೆಯೂ ಆಯಿತು. ಅಂತೆಯೇ ಬಾಪೂಸಾಹೇಬ ಎಷ್ಟು ಹೇಳಿದರೂ ಊಟವನ್ನೇ ಮಾಡಲಿಲ್ಲ. ಅವರ ಮನಸ್ಸು ಈ ದುರ್ಘಟನೆ ಗಳ ಕಾರಣ ಪರಂಪರೆಯನ್ನು ಅಳೆಯುವದಕ್ಕೆ ತೊಡಗಿತ್ತು. ಚಿಮಣಾಳನ್ನು ಮಠದಿಂದ ಕರೆಸಿಕೊಳ್ಳುವ ಇಚ್ಛೆಯನ್ನು ಯಶವಂತರಾಯರು ವ್ಯಕ್ತಪಡಿಸಿದಾಗ ಬಾಪೂಸಾಹೇಬ "ಅದು ಬ್ಯಾಡ, ಆಕಿ ಇಲ್ಲೆ ಬರಲಿಕ್ಕೆ ಒಪ್ಪಲಿಕ್ಕಿಲ್ಲ. ಒಪ್ಪಿದರೂ ಈಗ, ಇಲ್ಲೆ ಆಕಿ ಕೆಲಸ ಏನದ?" ಎಂದು ಕಟುವಾಗಿ ಕೇಳಿದ.

"ಹಾಗಾದರ, ನಾನಃ ಮಠಕ್ಕ ಹೋಗಿ ಆಕೀಗೆ ಸಮಾಧಾನ ಮಾಡಬೇಕಾ ಗತದ. ಪರದೇಶಿ ಹುಡಿಗಿ; ಸತ್ತವರ ಮಕ್ಕಳು ಇದ್ದವರ ಕೈಯಾಗ. ನೀನಃ ಹೇಳಿದಿ, ಪುತಳಾ ಆಕೀದಶಿಂದ ಆತ್ಮಹತ್ಯಾ ಮಾಡಿಕೊಂಡಳು ಅಂತ. ಅದಕ್ಕೆ ನಾ ಹೋದರ ಪಡದಪ್ಪನವರದು ಹರಕತ್ತ ಇಲ್ಲ ಹೌದಲ್ಲೋ?" ಎಂದು ಯಶ

ವಂತರಾಯರೂ ಅಷ್ಟೇ ನಿರ್ಧಾರದಿಂದ ಉತ್ತರವಿತ್ತರು.

"ಪಡದಪ್ಪನವರ್ನ್ನ ಇಲ್ಲಿಗೆ ಕರೆಕಳಿಸಿದರ ನೆಟ್ಟಗಾಗಲಿಕ್ಕಿಲ್ಲ?" ಎಂದು ಬಾಪೂ ಸಾಹೇಬ, ಆಳಿನ ಸಂಗಡ ಪಡದಪ್ಪನವರಿಗೆ ಬರಲು ಹೇಳಿಕಳಿಸಿದ.

"ಆ ಪಡದಪ್ಪನ ಕಾಲಾಗs ಈ ವಾಡೇದೊಳಗ ಎರಡು ಜೀವ ಹೋದವು. ಆದರೂ ಅವನ ಗೆಳೆತನ ಬಿಟ್ಟಿಲ್ಲ ನೀನು. ಯಾಕದು ಅವನ ಸಲಿಗಿ?" ಯಶವಂತ ರಾಯರು ಮನಸ್ಸು ತಡೆಯಲಾರದೆ ಕೇಳಿದರು.

ಬಾಪೂಸಾಹೇಬನನ್ನೂ ಈ ಸಮಸ್ಯೆ ಕಾಡುತ್ತಿತ್ತು. ಈ ಪ್ರಶ್ನೆ ಸಾವಿರ ಸಲ ಅವನ ಮನಸ್ಸನ್ನು ಚುಚ್ಚಿತ್ತು. ಆ ಬಗ್ಗೆ ಸಾಕಷ್ಟು ವಿಚಾರ ಮಾಡಿ, ಕೊನೆಗೆ, ಪಡದಪ್ಪನ ಸ್ನೇಹವನ್ನು ಬಿಟ್ಟರೆ ತನಗೆ ಗತಿಯೇ ಇಲ್ಲ ಎಂಬ ನಿರ್ಣಯಕ್ಕೆ ಅವನು ಬಂದಿದ್ದ. ಪಾಪದ ಘಟನೆಗಳಲ್ಲಿ ಒಂಟಿಗತನ ಎಂದಿಗೂ ಸಲ್ಲದು. ಮೇಲಾಗಿ ಪಡದಪ್ಪನ ಸ್ನೇಹದಲ್ಲಿ ಸಾವಿರ ಲಾಭಗಳ ಆಸೆಯಿತ್ತು. ಆದರೆ ಈ ಮಾತನ್ನು ಮಾವನ ಮುಂದೆ ಒಪ್ಪಿಕೊಳ್ಳುವದು ಹೇಡಿತನವಾದೀತೆಂದು ಅವನಿಗೆ ಗಾಬರಿ. ಆದರೂ ಕೇಳಿದ ಪ್ರಶ್ನೆಗೆ ಒಂದು ಉತ್ತರವನ್ನು ಕೊಡಬೇಕೆಂದು "ಅವನ ಸಲಿಗಿ ಏನು ಸುಟ್ಟಿತು? ನಾಕು ಮಂದಿ ಸೋಟರು ಅವನ ಕೈಯಾಗ ಇದ್ದಾರ. ಅಮಲದಾರರೊಳಗ ವಜನ ಅದ. ಅವನ ಮರ್ಜಿ ಕಟಿಗೊಂಡರ, ನಾಳೆ ಈ ಊರಾಗ ನಿಂತು ನೀರ ಕುಡೀದ್ಹಾಂಗ ಮಾಡ್ಯಾನು ಅಂತ ಅವನ ಜೋಡೀ ಮಾರೀ ಕೆಡಿಸಿಗೊಂಡಿಲ್ಲ" ಎಂದು ಜಾಣತನದ ಉತ್ತರವನ್ನೇ ಕೊಟ್ಟ.

" ಅವನ ಜೋಡಿ ನೀ ಮಾರೀ ಕೆಡಿಸಿಗೊಂಡಿಲ್ಲ ಖರೆ, ಆದರ ಹೆಸರು ಕೆಡಿಸಿಗೊಂಡಿ. ಮೊದಲ ಊರಾಗ ನಾಕ ಜನರಿಗೆ ಬೇಕಾದವ ಆಗಿದ್ದಿ. ಈಗ ಪುತಳಾ ಕೈಬಿಟ್ಟು ಹೋದಳು. ಇನ್ನ ಇಲ್ಲೆ ನಿಂತ ನೀರ ಕುಡಿಯುದು ಸಾಧ್ಯ ಆದೀತs? ಊರವರು ಲಕ್ಷ್ಮೀಬಾಯಿನ್ನ ಕರಸೋ ವಿಚಾರ ನಡೆಸಿದ್ದರು. ಈಗಂತೂ ಆಕಿ ತಾನಾಗೇ ಬರುಬಹುದು." ಯಶವಂತರಾಯರು ಎಚ್ಚರಿಕೆ ಕೊಡುವ ದನಿಯಲ್ಲಿ ನುಡಿದರು.

" ಲಕ್ಷ್ಮೀಬಾಯಿ ಈಗ ಬಂದರೂ ಯಾರ ಕೇಳತಾರು ? ಪಡದಪ್ಪ ಇರೂತನಾ, ಈ ಊರಾಗ ಯಾರ ಆಟಾನೂ ನಡಿಯೂದುಲ್ಲ" ಬಾಪೂಸಾಹೇಬ ನಿರ್ಲಕ್ಷ್ಯದಿ ತನದಂಡಲೇ ಹೇಳಿದ.

ಯಶವಂತರಾಯರಿಗೆ ಈ ಮಾತು ರುಚಿಸಲಿಲ್ಲ. ಬಾಪೂಸಾಹೇಬ ಸಂಪ್ರದ್ಯ

ಹಾದಿಬಿಟ್ಟಿರುವನೆಂದು ಅವರಿಗೆ ಮನವರಿಕೆಯಾಯಿತು. ಪಡದಪ್ಪನ ಬಗ್ಗೆ ಅವ ನಿಗಿರುವ ಅವಾಸ್ತವ ಗೌರವವನ್ನು ಕಂಡು ಅವರಿಗೆ ಹೇಸಿಕೆಯೆನಿಸಿತು. ಪುತಳಾ ಬಾಯಿ ಸತ್ತಮೇಲೂ ಬಾಪೂಸಾಹೇಬ ತಾನೇ ಇನ್ನು ಜಾಗಿರದಾರ ಎಂಬಂತೆ ಮಾತಾಡುತ್ತಿರುವನಲ್ಲ! ಬರಬರುತ್ತ ಇಬ್ಬರಲ್ಲಿಯೂ ಮಾತು ಬಿರುಸಾದವು. ಅಳಿಯ ಮಾವರಲ್ಲಿ ಎಂದಿನಿಂದಲೂ ಸೌಹಾರ್ದ ಕಡಿಮೆಯೇ. ಅದರಲ್ಲಿ ಇತ್ತೀ ಚೆಗೆ ನಡೆದ ಬಾಪೂಸಾಹೇಬನ ಅವಿವೇಕಗಳನ್ನು ಕೇಳಿಕೇಳಿ ಯಶವಂತರಾಯರ ಮನ ರೋಸಿ ಹೋಗಿತ್ತು. ಮನೆತನದ ಗೌರವ ಅವರಿಗೆ ಪ್ರಾಣಕ್ಕಿಂತ ಅಮೌಲ್ಯ ವಾಗಿತ್ತು. ಬಾಪೂಸಾಹೇಬನಿಗೋ ಅದಾವುದರ ಲಕ್ಷ್ಯವೇ ಇಲ್ಲ. ಮೇಲಾಗಿ ತನ್ನ ವ್ಯವಹಾರದಲ್ಲಿ ಕೈಹಾಕುವದು ಅವನಿಗೆ ಸೇರುತ್ತಿರಲಿಲ್ಲ. ಈ ಎಲ್ಲ ಕಾರಣಗಳಿಂದ ಇಬ್ಬರಲ್ಲಿಯೂ ಹುದುಗಿದ್ದ ಕಹಿ ಈಗ ಮಾತಿನಲ್ಲಿ ವ್ಯಕ್ತವಾಗತೊಡಗಿತು. ಯಶ ವಂತರಾಯ ನಿಷ್ಠುರ ಮನುಷ್ಯ. ಚಿಮಣಾಳ ಅಪಮಾನ, ನಾನಾನ ಕೊಲೆ, ಫೌಜದಾರರ ಆಗಮನ, ದಾದಾನ ಮೇಲೆ ಸುಳ್ಳು ಆರೋಪ, ಗೌಡರು ಹಾಗೂ ಬಾಪುಸಾಹೇಬರಲ್ಲಾದ ವಿರಸ, ಪುತಳಾಬಾಯಿಯ ಆತ್ಮಹತ್ಯೆ ಇವೆಲ್ಲವುಗಳ ಬಗ್ಗೆಯೂ ನಿರ್ದಾಕ್ಷಿಣ್ಯವಾಗಿ ಪ್ರಶ್ನೆ ಕೇಳುತ್ತ ಬಾಪೂಸಾಹೇಬನ ಸತ್ವವನ್ನೇ ಒರೆಗೆ ಹಚ್ಚಿ ನೋಡತೊಡಗಿದರು. ಬಾಪೂಸಾಹೇಬ ತಾನಾಗಿಯೇ ಯಾವ ತಪ್ಪು ಮಾಡದಿದ್ದರೂ, ತಪ್ಪುಗಾರರ ಜೊತೆಗೆ ಸ್ನೇಹ ಮಾಡಿದ್ದೂ ತಪ್ಪೆಂದೇ ಅವರ ವಾದ. ಅಲ್ಲಿ ಇಲ್ಲಿ ಚುಚ್ಚಿ ಮತ್ತೆ ಪಡದಪ್ಪನ ಸ್ನೇಹದ ಮಾತಿಗೇ ಬಂತು.

" ನೀವು ಏನs ಹೆಳ್ರಿ. ಪಡದಪ್ಪನ ಸ್ನೇಹ ಇದ್ದರ, ನಾಳೆ ಪ್ರಸಂಗ ಬಿದ್ದಾಗ ನನಗ ಸಹಾಯ ಸಿಗೋ ಆಶಾ ಅದ." ಬಾಪೂಸಾಹೇಬನೂ ಹಟದಿಂದಲೇ ಹೇಳಿದ.

ಈ ಮಾತಿಗೂ ಯಶವಂತರಾಯರು ಒಪ್ಪಿಗೆ ಕೊಡಲಿಲ್ಲ. ಅವರ ಅಭಿ ಪ್ರಾಯ ಧೃಢವಾಗಿತ್ತು. ಪಡದಪ್ಪ ಎಷ್ಟೇ ಬಲಶಾಲಿಯಾಗಿದ್ದರೂ ಅವನ ಪಕ್ಷವೇ ಅನ್ಯಾಯದ್ದು. ಅವನ ಜೊತೆಗೆ ಸ್ನೇಹ ಮಾಡುವದೆಂದರೆ ವೇತಾಳವನ್ನು ವಶಪಡಿಸಿಕೊಂಡಂತೆ, ಮಂತ್ರಶಕ್ತಿ ಜೀವಂತವಾಗಿರುವ ವರೆಗೆ ಆಡಿದ ಮಾತನ್ನು ಈಡೇರಿಸಿ ಕೊಡುವ ವೇತಾಳ, ಮಂತ್ರದ ಬಲ ಕುಗ್ಗಿದೊಡನೆ ವಶಪಡಿಸಿಕೊಂಡ ವನನ್ನೇ ನಾಶಗೊಳಿಸುವಂತೆ ಪಾಪದ ಸಹವಾಸದ ಫಲ.

"ಪ್ರಸಂಗ ಬಂದಾಗ ಪಡದಪ್ಪನ ಸಹಾಯ ನಿನಗ ಇರತsದ ಅನ್ನೋ

ಪ್ರಮಾ ಬ್ಯಾಡ. ಅದು ನಿನ್ನ ಹಾಳ ಮಾಡಲಿಕ್ಕೆ ಮಾತ್ರ ಸಹಾಯ ಆದೀತು. ನನ್ನ ಮಾತು ಕೇಳೋ ಮನಸ್ಸಿಲ್ಲದಿದ್ದರ ಹೇಳೋ ಗರಜು ನನಗೂ ಇಲ್ಲ." ಎಂದು ಸಿಟ್ಟಿನಿಂದ ಹೇಳಿ, ಏನು ಮಾಡಲೂ ತಿಳಿಯದೆ ಕೆಳಗಿಟ್ಟ ರುಮಾಲನ್ನು ವೇಗ ವೇಗವಾಗಿ ತಲೆಗೆ ಸುತ್ತಿಕೊಳ್ಳಲಾರಂಭಿಸಿದರು. ಅವರ ದನಿ ಸಿಟ್ಟಿನಿಂದ ಸಂತಪ್ತ ವಾಗಿತ್ತು. ಮಾತು ಈ ಮಟ್ಟಕ್ಕೆ ಬರಬಹುದೆಂದು ಬಾಪೂಸಾಹೇಬನಿಗೂ ಅನಿಸಿರ ಲಿಲ್ಲ. ಪಡದಪ್ಪನ ಸ್ನೇಹವನ್ನು ಬಿಡುವ ವಚನ ಕೊಡುವವರೆಗೆ ಮಾವನ ಕೋಪವಿಳಿಯುವ ಲಕ್ಷಣಗಳಿರಲಿಲ್ಲ. ಅವರಿಗೆ ಯಾವ ಉತ್ತರವನ್ನು ಹೇಳಿ ದರೂ ಇರುಕಿನಲ್ಲಿ ಸಿಗುವ ಸಂಭವವಿತ್ತು. ಅಂತೆಯೇ ವಿಷಯವನ್ನು ಬದಲಿಸ ಬೇಂದು "ನಾಳೆ ತಿಳೀರಿ, ಲಕ್ಷ್ಮೀಬಾಯಿ ಅಕ್ಕಾಅವರು ಬಂದು ಆಸ್ತೀ ಕಬಜಾ ಕೇಳಿದರ, ನಮಗ ನಾಕು ಜನರ ಬೆಂಬಲ ಸಿಗೋ ಹಾಗ, ಊರಾಗ ಜನರನ ಕಾಯಕೊಳ್ಳಬೇಕಲ್ಲಾ?" ಎಂದು ತನ್ನ ಮುಂದಿರುವ ಸಮಸ್ಯೆಯನ್ನು ಪ್ರಸ್ತಾ ಪಿಸಿದ.

"ಈ ವಾಡೇ ಲಕ್ಷ್ಮೀಬಾಯಿಗೇ ಸಲ್ಲತಕ್ಕದ್ದು. ಆಕಿ ಮನೆತನದ ಆಸ್ತಿ, ಅವರು ಕೇಳೋ ಮೊದಲೇ ಕರೆಸಿ ಕೊಟ್ಟು, ಮರ್ಯಾದಿಯಿಂದ ನೀನು ನಿನ್ನ ಊರಿಗೆ ಹೋಗು ಅಂತ ನಾ ಹೇಳಾವಾ. ಇದು ನನ್ನ ಅಂತಃಕರಣದ ಮಾತು. ಪುತಳಾ ಜೀವಂತ ಇದ್ದಾಗಿನ ಮಾತು ಬ್ಯಾರೆ. ಆಕಿ ಪಾಲಿಗೆ ಈ ಮನೆತನದ ಅರ್ಧಾ ಆಸ್ತಿ ಬರತಿತ್ತು. ಆಗ ನಿನಗ ಈ ಆಸ್ತಿ ಉಪಭೋಗ ಮಾಡೋ ಹಕ್ಕು ಇತ್ತು. ಈಗ ಈ ಮಾತು ಕೇಳಬ್ಯಾಡಾ. ಸುಮ್ಮನ ಲಕ್ಷ್ಮೀಬಾಯಿಗೆ ಪತ್ರಾ ಬರಿ. ಇಲ್ಲಾ, ನನಗ ಹೇಳಿದರ ನಾನs ಬರೆಸಿ ಹಾಕತೇನಿ." ಎಂದು ಯಶವಂತರಾಯರು ನ್ಯಾಯ ನಿಷ್ಠುರತೆಯಿಂದ ನುಡಿದರು.

ಈ ಮಾತು ಬಾಪೂಸಾಹೇಬನಿಗೆ ಅನಿರೀಕ್ಷಿತವಾದ ಪೆಟ್ಟಾಗಿತ್ತು. ಅನಾ ಯಾಸವಾಗಿ ಕೈಗೆ ಬಂದ ದೊಡ್ಡ ಆಸ್ತಿಯನ್ನು ಬಿಟ್ಟುಬಿಡುವದೆಂದರೆ ಅವನ ಲೋಭಿಜೀವಕ್ಕೆ ಒಗ್ಗದ ವಿಷಯವಾಗಿತ್ತು. ಇಂಥ ಮಾತು ಹೇಳುವ ಮಾವನಿಗೆ ಏನು ಉತ್ತರಕೊಡಬೇಕೆಂಬ ವಿಚಾರದಲ್ಲಿ ಅವನಿರುವಾಗ ಪಡದಪ್ಪನವರು ಅಲ್ಲಿ ಕಾಲಿಟ್ಟರು.

"ಏನೋ ಅಪ್ಪಾ ಮಾವಂದಿರೊಳಗ ಮನೆತನದ ಮಾತು ಕತಿ ನಡದ್ದಾಂಗ ಕಾಣತಾವ್ರು. ಆವನಾಗ ನಮ್ಮದೇನು ಇಲ್ಲಿ ಕೆಲಸಾ? ಮತ್ತ ಬರತೇನಿ" ಎಂದು

ಔಪಚಾರಿಕವಾಗಿ ನುಡಿದರು.

"ಇದಽ ಮಾತುಕತಿಗಂತಽ ನಿಮ್ಮನ್ನ ಕರೆಸಿದ್ದು. ಬರ್ರಿ" ಎಂದು ಬಾಪೂ ಸಾಹೇಬ ಅವರನ್ನು ಕರೆದು, ಕುಳ್ಳಿರಹೇಳಿ ತಾನು ಒಳಗೆ ನಡೆದ. ಮಾವನ ನ್ಯಾಯನಿಷ್ಠುರತೆಯ ತೋಫಿನ ಬಾಯಿಗೆ ಬಲಿಯಾಗುವ ಮನಸ್ಸು ಅವನಿಗಿರಲಿಲ್ಲ.

ಪಡದಪ್ಪನವರು ದಿಂಬಿಗೆ ಆತು ಉಚ್ಚಾಸನದಲ್ಲಿ ಕುಳಿತು, ಶಾಟಿಯಿಂದ ಗಾಳಿ ಹಾಕಿಕೊಳುತ್ತ "ಅಂತೂ ನೀವು ಬಂದಿರಿ ಪಾಟೀಲರಽ, ನಮ್ಮ ಚಿಂತಿ ದೂರ ಆದ್ಹಾಂಗಾತು" ಎಂದು ಹೇಳಿದರು.

"ಸ್ವಾಮಿಗೋಳಿಗೆಲ್ಲಾ ಚಿಂತೀ ಕಾಟ ಎಲ್ಲೆತಿರಿ ? ಅದೆಲ್ಲ ನಮ್ಹಾಂಗ ಸಂಸಾರದಾಗ ಒದ್ದ್ಯಾಡೋ ನರಮನಸ್ಯಾರಿಗೆ" ಎಂದು ಯಶವಂತರಾಯರು ನುಡಿದಾಗ, ಅವರಿಗರಿಯದಂತೆಯೇ ಅವರ ದನಿಯಲ್ಲಿ ವ್ಯಂಗ್ಯ ಮೂಡಿತ್ತು.

"ಸ್ವಾಮಿ, ಸನ್ಯಾಸಿ, ಯಾರಾದರೇನು ಪಾಟೀಲರಽ, ಶಿವನ ಮಾಯಾ ಜಾಲದಿಂದ ಪಾರಾಗೂತನಾ ಚಿಂತಿ ಗಂಟ ಬಿದ್ದದ್ದಽ ಅಲ್ಲೇನ್ರೀ?" ಎಂದು ವೈರಾಗ್ಯದ ಔದಾಸೀನ್ಯದಿಂದ ಪಡದಪ್ಪನವರು ಗಂಭೀರವಾಗಿ ಉತ್ತರಿಸಿತ್ತರು.

"ಅದಿರಲಿ, ನಾ ಅಂದ ಊರಿಗೆ ಹೋದ ಮ್ಯಾಗ, ದಾದಾ ಭಾರೀಭಾರೀ ಗೊಂದಲ ಎಬ್ಬಿಸಿಬಿಟ್ಟನಂತಲ್ಲಾ?" ಯಶವಂತರಾಯರು ತಿಳಿದು ಕೊಳ್ಳುವ ಕುತೂಹಲದಿಂದಲೆಂಬಂತೆ ಕೇಳಿದರು.

ಪಡದಪ್ಪನವರು ಆಸನವನ್ನು ಬದಲಿಸಿದರು. ಹೊಸ ಮಾತಿಗೆ ಹೊಸ ಆವಿರ್ಭಾವ; ಹೊಸ ರೀತಿ ಎಂಬ ತತ್ವವನ್ನು ಅವರು ಮರೆತಿರಲಿಲ್ಲ.

"ಏನ ಹೇಳಿಬೇಕ್ರಿ ಅವನ ಪುಂಡಾಟಿಕಿ? ಚಿಮಣಾ ಸಣ್ಣ ಹುಡಿಗಿ. ತಿಳೀದಽ, ಎಲ್ಲೋ ಏನೋ ಕಾಲಜಾರಿ ಬಿದ್ದಿದ್ದಾಳಾದೀತು. ಆ ಪಾಪದ ಹೊರಿ ನನ್ನ ಮ್ಯಾಗ ಹೇರಲಾಕ ಬಂದಾ. ಶಿವನ ಆಟಽ, ಇದೂ ಒಂದು ನನ್ನ ಪರೀಕ್ಷಾ ಮಾಡತಾನ ಅಪ್ಪ ಅಂತ, ಆಗಲೆಪಾ ಅಂತ ಹೇಳಿದೆ. ತೆಲೀ ಕೆಟ್ಟು ಒದರ್ಯಾಡೋ ಮನಸ್ಯಾಗ ಸಾರಾಸಾರ ಬುದ್ಧಿ ಇದ್ದೀತರೆ? ಸಿಟ್ಟು ಅನ್ನೋದು ಮನಸ್ಯಾನ ಸುಟ್ಟು ಬೂದೀ ಮಾಡೂ ಕಿಡಿ. ಮಟದಾಗಽ ಚಿಮಣಾನ್ನ ಬಿಟ್ಟು ಹೋಗೂ ಅಂದೆ" ಸಾಭಿನಯವಾಗಿ ಸ್ವಾಮಿಗಳು ಹೇಳಿದರು.

"ಈಗ ಆಕಿ ನೆಟ್ಟಗ ಅದಾಳಲ್ಲಽ?"

"ಏನ ಹೇಳಲಿ ಯಶವಂತರಾಯರಽ? ಅದೊಂದು ಹುಚ್ಚಿ; ತಂಗೀ, ನಿನ್ನ

ಮನ್ಯಾಗನ ಅಡೀಯಂತೆ ಆರಾಮ ಇರು ಅಂತ ಹೇಳಿದೆ. ನಾಕ ಜನರ ಕಡೆಯಿಂದ ಹೇಳಿಸಿದೆ. ಮುಳು ಮುಳು ಅಂತ ಊಟಾ ಬಿಟ್ಟು ಮಲಗಿ ಬಿಟ್ಟಾಳ್ರಿ. ಪುತಳಾ ಬಾಯಿ ಸತ್ತ ಸುದ್ದಿ ಕೇಳಿದ ಮ್ಯಾಗಂತೂ ಆಕಿ ಸ್ಥಿತೀ ನೋಡಾಕ ಆಗಾಣಿಲ್ಲರಿ. ಮಾತಾಡಿಸಿದವರಿಗಂತೂ, ಕವಕ್ಕನನ ಏನರೆ ಬಾಯಿಗೆ ಬಂದ್ಹಾಗ ಅಂತಾಳು. ಇದೂ ಶಿವನ ಆಟ ಅಲ್ರಿ?" ಎಂದು ಸ್ವಾಮಿಗಳು ನುಡಿದು ನಿಟ್ಟುಸಿರು ಬಿಟ್ಟರು.

"ಬಸರ ಹೆಣಮಗಳು, ಹೀಗ ಊಟಾ ಬಿಟ್ಟ ಮಲಗಿದರ ಗತಿ ಏನು? ನಾನಽ ಮಠದ ತನಾ ಬಂದು ಆಕಿನ್ನ ಮಾತಾಡಿಸಿ ಸಮಾಧಾನ ಹೇಳಿದರ ನೆಟ್ಟಗಾಗಾಕಿಲ್ಲಽ?" ಯಶವಂತರಾಯರು ಅಂತಃಕರಣ ತುಂಬಿ ಕೇಳಿದಾಗ, ಪಡದಪ್ಪನವರಿಗೆ ಇಲ್ಲವೆನ್ನಲಾಗಲಿಲ್ಲ.

"ನಿಮ್ಮ ಇಚ್ಛಾ. ನಿಮ್ಮ ಹುಡಗಿ. ನೀವು ಬೇಕಾರ ಆಕಿನ್ನ ಕರಕೊಂಡು ಬಂದು ಆಕಿ ತಲಿಗೆ ಏರಿದ ದುಕ್ಕ ಇಳಿಯೂ ಹಾಗ ಉಪಾಯ ಮಾಡಸತಿದ್ದರ ಮಾಡಿಸರಿ. ನಾ ಈ ವಿಷಯದಾಗ ಏನ ಹೇಳೂದು ಜಡಾ ಆಗೈತಿ. ಒಂದ ಅಂದರ ಹೆಚ್ಚು, ಎರಡ ಅಂದರ ಕಮ್ಮಿ. ನೀವು ಹಿರ್‍ಯಾರು, ಏನ ಮಾತಾಡಿದರೂ ನಡೀತೈತಿ. ಮುಖ್ಯ ಪರದೇಶಿ ಹುಡಿಗಿ. ಎಲ್ಯಾದರೂ ನೆಟ್ಟಗ ನಕ್ಕೊಂತ ಇರಲಿ ಅಂತ ನಿಮಗ ಅನಸೂ ಹಾಗಽ ನಮಗೂ ಅನಸತೈತಿ. ಆದರ ಏನ ಮಾಡೂದು ಹೇಳ್ರಿ" ಸ್ವಾಮಿಗಳ ಕಂಠವೂ ತಾತ್ಪೂರ್ತಿಕವಾಗಿ ಗದ್ಗದಿತವಾಗಿತ್ತು.

"ಏನೂ ಮಾಡಬ್ಯಾಡ್ರಿ. ಆಕೀನೂ ನನ್ನ ಮಗಳಽ ಅಂತ ನಾ ತಿಳೀತೇನು. ನನ್ನ ಜೋಡೀ ನಮ್ಮ ಊರಿಗೇ ಕರಕೊಂಡು ಹೋಗಬೇಕಂತ ಮಾಡೀನು."

ಯಶವಂತರಾಯರ ಈ ಉತ್ತರದಿಂದ ಪಡದಪ್ಪನವರಿಗೆ ಅಲೌಕಿಕ ಸಮಾಧಾನವೆನಿಸಿತು. "ನಿಮ್ಮ ಅಂತಃಕರಣಾ ಸ್ವಲ್ಪ ದೊಡ್ಡದರೀ. ಕರೇ ಅಂದರೂ ಬಡವರ ತಂದಿ ನೀವಽ" ಎಂದು ಅವರನ್ನು ಹೊಗಳಲೂ ಅವರು ಹಿಂದು ಮುಂದು ನೋಡಲಿಲ್ಲ.

ಒಂದು ಸಮಸ್ಯೆ ಆಡುತ್ತಲೆ ಬಗೆಹರಿದಂತಾಗಿ ಇಬ್ಬರಿಗೂ ಸಮಾಧಾನ ವೆನಿಸಿದ್ದರಿಂದ ಕ್ಷಣಹೊತ್ತು ಇಬ್ಬರೂ ಸುಮ್ಮನಾದರು. ಆದರೆ ಯಶವಂತ ರಾಯರು ಸ್ವಭಾವತಃ ವಾಚಾಳಿಯಾಗಿದ್ದರಿಂದ ಬಹಳ ಹೊತ್ತು ಸುಮ್ಮನೆ ಕೂಡಲಾಗಲಿಲ್ಲ. ಮತ್ತೆ ಹರಟೆ ಪ್ರಾರಂಭವಾಯಿತು. ಮಾತು ಈಗ ಊರ ವಿಷಯಕ್ಕೆ ತಿರುಗಿತು. ಫೌಜದಾರರ ಆಗಮನದಿಂದ ಪಾದಳ್ಳಿಯಲ್ಲಿ ಉಂಟಾದ

ಕೋಲಾಹಲವನ್ನು, ಗೌಡರ ಅನ್ಯಾಯಗಳನ್ನು ಪಡದಪ್ಪನವರು ರಸವತ್ತಾಗಿ ಬಣ್ಣಿಸತೊಡಗಿದರು. ಮುಖ್ಯವಾಗಿ ಗೌಡರ ಬಗ್ಗೆ ದೂಷಿತವಾರ್ತೆಗಳನ್ನು ಅವರು ಹರಡಬೇಕಾಗಿತ್ತು. ದಾದಾನಂಥ ಪುಂಡರನ್ನು ಕೂಡಿಕೊಂಡು ಗೌಡರು ದರ್ಪದ ಆಳಿಕೆಯನ್ನೇ ನಡೆಸುತ್ತಿರುವರೆಂದು ಅವರ ಅಭಿಪ್ರಾಯವಾಗಿತ್ತು. ಪುತಳಾಬಾಯಿಯ ಮರಣದ ನಂತರ ಬಾಪೂಸಾಹೇಬನನ್ನು ಊರು ಬಿಟ್ಟು ಓಡಿಸುವ ಹಂಚಿಕೆಯಲ್ಲಿ ಅವರಿದ್ದಾರೆಂದು ಸೂಚಿಸಲು ಮರೆಯಲಿಲ್ಲ.

"ಇಲ್ಲಿ ನೋಡ್ರಿ ಪಾಟೀಲರs. ನಾ ಜೀವಂತ ಇರೂತನಾ, ಇವರು ತಿಪ್ಪರಲಾಗಾ ಒಗೀಲಿ,ಬಾಪೂಸಾಬರು ಊರು ಬಿಟ್ಟು ನಾಯೇನು ಹೋಗಗೊಡಾಣಿಲ್ಲ" ಎಂದು ಪ್ರತಿಜ್ಞೆಗೈಯುವವರಂತೆ ಜೋರಿನಿಂದಲೇ ಹೇಳಿದರು.

"ಹೌದು ಸ್ವಾಮೇರ, ಗೆಳೆತನದಾಗ ನೀವು ಹೀಗನ್ನೂದs ವಾಜಿಮಿ. ಆದರ ಬಿಳೀಗಡ್ಡದ ನಮಗೆಲ್ಲಾ, ಇವಾ ತನ್ನ ಊರಾಗ ಮರ್‍ಯಾದಿಯಿಂದ ಬಾಳೇ ಮಾಡಲಿ ಅಂತ ಅನಸತ್ತೈತಿ. ಬಡವರ ತಂದೀನs ಆಗಬೇಕಾಗಿದ್ದರ ತನ್ನ ಊರಾಗ ಆಗಲಿ. ಇಲ್ಲೀ ಬಡವರ ಕಲ್ಯಾಣ ನೋಡಕೊಳ್ಳಲಾಕ ನೀವದೀರಲ್ಲಾ" ಎಂದು ಯಶವಂತರಾಯರು ಅದೇ ನಿರ್ಧಾರದಿಂದ ಹೇಳಿದರು.

ಪಡದಪ್ಪನವರು ಒಳಗಿಂದೊಳಗೇ ಗಾಬರಿಯಾದರು. ಮುದುಕನ ಹಟ ಮಾರಿತನ ಅವರಿಗೂ ಸಿಟ್ಟು ತರಿಸಿತ್ತು. ಆದರೆ ಅದನ್ನು ಅದುಮಿಟ್ಟುಕೊಂಡು ಮೃದುವಾಗಿಯೇ ಮನವೊಲಿಸಲು ಪ್ರಯತ್ನಿಸಿದರು.

"ನೀವು ಹೆಚ್ಚಿದ ಗಿಡಾ ನೀವs ಕಿತ್ತೂದು ನೆಟ್ಟಗರೇ? ಈ ಜಾಗೀರಿ ಭೂಮಿ ಕಬಜಾ ತೊಗೊಂಡವರೂ ನೀವs ಬಾಪೂಸಾಬರನ್ನ ತಂದು ಇಲ್ಲಿ ಇಟ್ಟಾವರೂ ನೀವs. ಈಗ ನಡಕs ನಮ್ಮನ್ನೆಲ್ಲ ಕೈಬಿಟ್ಟು ಹೋಗೂ ಅಂತ ಹೇಳತೀರೆಲ್ಲ? ಪುತಳಾಬಾಯೇರು ಹೋದರೂ ವಾಡೇ ಹೋಗಿಲ್ಲ; ನಾವೂ, ನೀವೂ, ರೈತರು ಹೋಗಿಲ್ಲ. ಲಕ್ಷ್ಮೀಬಾಯಿ ಬಂದರ ಯಾವ ರೈತ ಮಾತಾಡಸತಾನಂತಿರಿ? ಬಾಪೂ ಸಾಬರು ಮನಸು ಮಾಡಿದರ, ಇಂದs ಈ ಊರ ರಾಜಾ ಆಗಬಹುದು, ಬಡಜನ ರೆಲ್ಲಾ ಅವರ ಬೆನ್ನಮ್ಯಾಗs ಅದಾರ. ಆಗಲಾರದ ನಾಕು ಜನಾ ಚಿಟಕಿ ಮುರಕೊಂತ ಕೂತಿದ್ದಾವು. ಅವರಿಗ್ಯಾಕ ಒಳಗಾಗಬೇಕು?"

ಯಶವಂತರಾಯರಿಗೆ ಈ ಮಾತು ಬೆಳೆಸುವ ಇಚ್ಛೆ ಇರಲಿಲ್ಲ. ಪಡದಪ್ಪ ನವರ ಬಗ್ಗೆ ಅವರು ಹೇಳಿದ ಮಾತುಗಳು, ಪ್ರತ್ಯಕ್ಷ ದರ್ಶನದಿಂದ ಹೆಚ್ಚು ನಿಜ

ವಾಗುವಂತಿತ್ತು. ಅಂತಲೇ ವಿಷಯ ಬದಲಿಸಿ "ಅದೆಲ್ಲಾ ಬಾಪೂಸಾಹೇಬಗ ಸಂಬಂಧಿಸಿದ ಮಾತು. ಅವರಾಗ ನಾವ್ಯಾಕ ತಲೀ ಹಾಕಬೇಕು. ಈಗ ಚಿಮಣಾನ್ನ ಪಾಡೇಕ ಕೊಟ್ಟ ಕಳಸತೀರ್‍ಯೋ, ಇಲ್ಲಾ ನಾನs ಮಠದ ತನಕಾ ಬಂದು ಕರಕೊಂಡ ಹೋಗಬೇಕಾಗತದೋ?" ಎಂದು ಕೇಳಿದರು. ಪಡದಪ್ಪನವರಿಗೆ ಈ ವಿಷಯಾಂತರದ ಅರ್ಥವಾಯಿತು, ಮುದುಕ ಒಳಗಂಟಿನವನೆಂಬುದೂ ತಿಳಿಯಿತು. "ನಾ ಹೋಗಿ ಆಕೀಗೆ ನೀವು ಹೇಳಿದ ಮಾತು ತಿಳಿಸಿತೀನಿ. ಒಪ್ಪಿ ಬಂದರ ನೆಟ್ಟಗಾತು. ಇಲ್ಲಾಂದ್ರ ನೀವsಬರಬೇಕಾದೀತು." ಎಂದು ನುಡಿದರು.

ಅಷ್ಟರಲ್ಲಿ ಬಾಪೂಸಾಹೇಬ ಸ್ನಾನ ಮುಗಿಸಿ ಹೊರಗೆ ಬಂದ. ಪಡದಪ್ಪನವರು ಆಗ ಹೊರಟು ನಿಂತಿದ್ದರು. ಆದರೂ ಬಾಪೂಸಾಹೇಬನನ್ನು ಕಾಣದೆ ಹೊರಡುವಂತಿರಲಿಲ್ಲ. ಯಶವಂತರಾಯರು ಸ್ನಾನಕ್ಕೆ ಒಳಗೆ ಹೋಗುವ ತನಕ ದಾರಿ ಕಾಯಬೇಕಾಯಿತು. ಅವರು ಒಳಗೆ ಹೋದ ಮೇಲೆ ಇಬ್ಬರಲ್ಲಿಯೂ ಆಪ್ತಾಲೋಚನೆ ನಡೆಯಿತು.

ಯಶವಂತರಾಯರು ಚಿಮಣಾಳನ್ನು ಕಾಣುವದು ಪಡದಪ್ಪನವರಿಗೆ ಸರಿಬಂದಿರಲಿಲ್ಲ. ಅವಳ ಸ್ಥಿತಿ ನೋಡಿ ಕನಿಕರ ಉಕ್ಕಿ ಬಂದು ಆ ಮುದುಕ ತಮ್ಮ ಗತ್ತುಗಾರಿಕೆಗಳನ್ನೆಲ್ಲ ಹೊರಗೆಳೆಯಬಹುದೆಂಬ ಭೀತಿ. ಆದ್ದರಿಂದ ಅವರ ಕಣ್ಣಿಗೆ ಚಿಮಣಾ ಬೀಳದಂತೆ ಎಲ್ಲಿಯಾದರೂ ಕಳಿಸಿಬಿಡಬೇಕೆಂದು ಇಬ್ಬರಲ್ಲಿಯೂ ಒಪ್ಪಂದವಾಯಿತು. ಕೆಂಚನಿಗೆ ಈ ಮಾತು ತಿಳಿಸಿ, ಯಶವಂತರಾಯರು ಬರುವದರಲ್ಲಿಯೇ ಕೆಲಸ ಮುಗಿಸಿ ಬಿಡಬೇಕೆಂದು, ಪಡದಪ್ಪನವರು ಮಠದತ್ತ ಆತುರದಿಂದ ಹೆಜ್ಜೆ ಹಾಕಿದರು.

:: ೧೬ ::

ಫೌಜದಾರರು ಕ್ಯಾಂಪು ಕಿತ್ತಿದರೂ ಪಾದಳ್ಳಿ ಶಾಂತವಾಗುವ ಲಕ್ಷಣ ಗಳೇನೂ ತೋರಲಿಲ್ಲ. ಎರಡು ದಿನಗಳ ಹಿಂದೆ ಹುಟ್ಟಿದ ಕಾಲರಾ ಬೇನೆ ಈಗ ಉಗ್ರ ಸ್ವರೂಪವನ್ನು ತಾಳಿತು. ಪ್ರಾರಂಭದಲ್ಲಿ ವಾಡೆಯ ಜೋಳ ತಿಂದ ನೆವ ದಿಂದ ಕೆಲ ಜನರು ಮರಣಹೊಂದಿದರು. ಆದರೆ ಮುಂದೆ ಕಾಲರಾ ಒಳ್ಳೆಯ ಸ್ಥಿತಿವಂತ ಮನೆತನದವರನ್ನೂ ಬೆನ್ನಟ್ಟಿತು. ಬೆಳಗಾದೊಡನೆಯೆ ಎಲ್ಲರೂ ಯಾವುದೋ ಭಯಾನಕ ವಾರ್ತೆಯನ್ನೂ ಕೇಳುವದಕ್ಕೆ ಆತುರರಾಗಿರುತ್ತಿದ್ದರು. ಇರುಳಿನಲ್ಲಿ ಕಾಲರಾ ಯಾರಾರನ್ನು ಸೆಳೆದುಕೊಂಡು ಹೋಗಿರುವದೋ ಬಲ್ಲವ ರಾರು? ಇಂದು ಅವರಿಗೆ, ನಾಳೆ ಮತ್ತೊಬ್ಬರಿಗೆ, ನಮ್ಮ ಸರದಿ ಯಾವಾಗಲೋ ಏನೋ ಎಂದು ಜನರೆಲ್ಲ ಹೌಹಾರಿದರು. ಕಾಲರಾ ಮರಣಗಳ ವರದಿಯನ್ನು ಮೇಲಧಿಕಾರಿಗಳಿಗೆ ಕಳಿಸುತ್ತ, ಕಾಲರಾದಿಂದ ನಿಧನ ಹೊಂದಿದವರ ಮನೆಗಳಿಗೆ ಹೋಗಿ ಸಮಾಧಾನಕ್ಕಾಗಿ ಅದೇ ಅದೇ ಮಾತುಗಳನ್ನು ಹೇಳುತ್ತ ಗೌಡರು ಹಣ್ಣಾದರು. ಸತ್ತವರ ವಾರಸದಾರರನ್ನು ಕರೆಸಿ, ವಾರಸಾ ಮಾಡುವ ಬಗ್ಗೆ ವರದಿ ಕೊಡಲು ತಪ್ಪಿದರೆ ದಂಡ ಬೀಳುವದೆಂದು, ಅವರ ಕರ್ತವ್ಯದ ನೆನಪು ಮಾಡಿಕೊಡುವದು ಕುಲಕರ್ಣಿ ಶೇಷಪ್ಪನಿಗೆ ಬಿಡಲಾರದ ಕರ್ತವ್ಯವೆನಿಸಿತು. ಸತ್ತವರಿಗಾಗಿ ಗೋರಿಗಳನ್ನು ಅಗಿಯುವದು ಗರಡಿಮನೆಯ ಗಡಿಗಳ ಕೆಲಸ ವಾಯಿತು. ಸುತ್ತಲಿನ ದೇವರುಗಳೆಲ್ಲರಿಗೆ ನೀರು ಹಾಕಿಸಿ, ಕುರಿ ಕಡಿದು ದೇವಿಯ ಕ್ರೋಧವನ್ನು ಶಾಂತಗೊಳಿಸುವದು ಅಗತ್ಯವೆಂದು ಅದಕ್ಕಾಗಿ ಅಂಬಲಿಗೆ ಜೋಳ ಎತ್ತುವ ಕೆಲಸದಲ್ಲಿ ಬಾಪೂಸಾಹೇಬನ ಹುಲಿಬ್ಯಾಟೆ ಹಳಬರ ಮುಖ್ಯಸ್ಥ ದಳ ವಾಯಿ ತಿಪ್ಪ, ಹಾಗೂ ಆವನ ಸಂಗಡಿಗರು ನಿರತರಾಗಿದ್ದರು.

ಅಂತೂ ಊರಲ್ಲಿ ಹಬ್ಬಿದ ಕಾಲರಾ ಎಲ್ಲರನ್ನೂ ಒಂದಿಲ್ಲೊಂದು ರೀತಿಯಿಂದ ದುಡಿಯುವದರಲ್ಲಿ ತೊಡಗುವಂತೆ ಮಾಡಿತ್ತು. ಉತ್ಸವವೇ ಇರಲಿ, ಯುದ್ಧವೇ ಇರಲಿ, ಪಿಡುಗೇ ಇರಲಿ ಒಂದು ಸಾರ್ವಜನಿಕ ಕಾರಣ ಜನರಲ್ಲಿ ಅದ್ಭುತ ಕಾರ್ಯ

ಶಕ್ತಿಯನ್ನುಂಟು ಮಾಡುತ್ತದೆ. ಈಗಲೂ ಅದೇ ಸ್ಥಿತಿಯಾಗಿತ್ತು. ಪಡದಪ್ಪನವರು ಊರಲ್ಲಿದ್ದಿದ್ದರೆ ತಮ್ಮ ಅನುಯಾಯಿಗಳನ್ನು ಸಾವಿನ ದವಡೆಯಿಂದ ಪಾರು ಮಾಡಲು ಅವರು ಅದ್ಭುತ ಪ್ರಯತ್ನವನ್ನು ಮಾಡುತ್ತಿದ್ದರು. ಸರಕಾರಿ ಡಾಕ್ಟರ ರನ್ನು ಕರೆತರಲು ಊರು ಬಿಟ್ಟು ಹೋದವರು ಮರಳಿ ಬಂದಿರಲಿಲ್ಲ. ಚಿಮಣಾ ಳನ್ನು ಬೇರೆ ತಮ್ಮ ಸಂಗಡ ಕರೆದೊಯ್ದಿದ್ದರು. ಅವಳನ್ನು ತಮ್ಮ ಶಿಷ್ಯಮಗ ನೊಬ್ಬನಲ್ಲಿ ಇಟ್ಟು, ಡಾಕ್ಟರರನ್ನು ಕರೆದುಕೊಂಡು ಬರುತ್ತೇನೆಂದು ಹೋದವರು ಇನ್ನೂ ಯಾಕೆ ಬಂದಿರಲಿಕ್ಕಿಲ್ಲ ಎಂದು ಕೆಂಚನಿಗೆ ಒಡೆಯಲಾರದ ಒಗಟಾಯಿತು. ಮಠಕ್ಕೆ ಗೋಳಿಡುತ್ತ ಬರುವ ಜನರಿಗೆಲ್ಲ, "ಅಪ್ಪಾ ಅವರು ಇಂದ ಬರತಾರು; ಡಾಗದಾರನ್ನ ಕರತರತಾರು" ಎಂದು ಹೇಳಿಹೇಳಿ ಅವನಿಗೇ ಆ ಮಾತು ಬಾಯಿ ಪಾಠವಾಗಿತ್ತು. ಕಾಲರಾ ಹೆಚ್ಚಾದಂತೆಲ್ಲ, ಮಠದಲ್ಲಿ ದಿನನಿತ್ಯ ಸೇರುವ ತೀರ್ಥದ ಭಕ್ತರು ಈಗ ಬರದಂತಾಗಿದ್ದರು. ಅವರೆಲ್ಲ ಮನೆಹಿಡಿದದ್ದರಿಂದ ಕೆಂಚನೊಬ್ಬನೇ ಮಠದಲ್ಲಿರುವದು ಈಗ ಅನಿವಾರ್ಯವಾಗಿತ್ತು. ಗಾಂಜಾಭಕ್ತರು ಮಠದತ್ತ ಸುಳಿಯದಂತಾದದ್ದು ಅವನಿಗೆ ಇನ್ನೂ ಹೆಚ್ಚಿನ ಬೇಸರವನ್ನುಂಟುಮಾಡಿತ್ತು. 'ತೀರ್ಥದ'ದ ಸಲುವಾಗಿ ಮನೆಮಾರು ತೊರೆದು ಸನ್ಯಾಸಿಯಾದ ಈ ವೀರ ವೈರಾಗ್ಯಶಾಲಿಗೂ ಈ ಏಕಾಕಿತನ ಬೇಸರವನ್ನು ತಂದಿತ್ತು. ದಿನದಿನವೂ ಪಡ ದಪ್ಪನವರ ದಾರಿಕಾಯುತ್ತ, ಕಾಲರಾದಿಂದ ಮರಣಹೊಂದಿದವರ ಲೆಕ್ಕ ಹಾಕುತ್ತ ಕೆಂಚ ವೇಳೆ ಕಳೆಯಹತ್ತಿದ.

ಎರಡು ವಾರಗಳು ಗತಿಸಿದರೂ ಪಡದಪ್ಪನವರ ಸುದ್ದಿಯೂ ಇಲ್ಲ, ಅವರು ಕರೆದುಕೊಂಡು ಬರಬೇಕಾದ ಡಾಕ್ಟರರ ಸುಳುವೂ ಇಲ್ಲ. ಈ ಅವಧಿಯಲ್ಲಿ ಸಾವಿರ ಜನಸಂಖ್ಯೆಯಲ್ಲಿ ಒಂದು ನೂರು ಜನ ಆಗಲೆ ಶಿವನ ಪಾದ ಸೇರಿ ಮುಕ್ತ ರಾಗಿದ್ದರು. ವಾರಕ್ಕೊಮ್ಮೆ ವಾಡೆಯಿಂದ, ಕುರಿಕಡಸಿ ಗ್ರಾಮದೇವತೆಗಳಿಗೆಲ್ಲ ಅಂಬಲಿಬಾನದ ಎಡೆ ತೋರಿಸಿದ್ದರೂ, ದುರಗವ್ವನ ಕೋಪಶಾಂತವಾದ ಲಕ್ಷಣ ಗಳು ಕಂಡು ಬರಲಿಲ್ಲ. ಯಾವದೋ ಹಿಂದಿನ ಸಾಲವನ್ನು ಒಮ್ಮೆಲೆ ತೀರಿಸಿ ಕೊಳ್ಳಬೇಕೆಂಬ ಹಟದಿಂದಲೋ ಏನೋ ಸಾವು ಪ್ರತಿಯೊಬ್ಬರ ಮನೆಯ ಹೊಸ್ತಿಲ ಮೇಲೆಯೂ ಕುಳಿತು ತನ್ನ ಬಲಿಯನ್ನು ಕೇಳುತ್ತಿತ್ತು. ಬಾಳಾಚಾರ್ಯರ ಮನೆ ಯಲ್ಲಿ ಅವರ ತಮ್ಮನ ಮಗ ಗೋಪಾಲಾಚಾರಿ ಮಠದಿಂದ ಮನೆಗೆ ಹೋದವನು ತಿರುಗಿ ಮಠದ ಕಟ್ಟೆಯನ್ನು ಹತ್ತಲಿಲ್ಲ. ಒಂದೇ ದಿನದಲ್ಲಿ ವೈಕುಂಠಕ್ಕೆ ನಡೆದನು.

ಅದೇ ಸಂಜೆಗೆ ಅವರ ಕಕ್ಕ ಮುಪ್ಪಿನ ಮುದುಕರಾದ ಹಣಮಂತಾಚಾರಿ ಕಾಲರಾ ಬೇನೆಗೆ ತುತ್ತಾಗಿದ್ದರು.

ಈ ಪಿಡುಗಿನ ಉತ್ಸವದಲ್ಲಿ ಬಾಳಾಚಾರ್ಯರಿಗೂ ಕೆಲಸವಿತ್ತು; ಮೈತುಂಬ ಮನತುಂಬ ಕೆಲಸವಿತ್ತು. ನೀರು ಕಾಯಿಸಿ ಕುಡಿಯಿರಿ, ಚಕ್ರಾಣಿ ಬೇರನ್ನು ತೇಯ್ದು ಮಜ್ಜಿಗೆಯಲ್ಲಿ ಕೂಡಿಸಿ ಕುಡಿಸಿರಿ ಎಂದು ಸಲಹೆ ಹೇಳುತ್ತ ಅವರು ವೈದ್ಯರಾಗಿದ್ದರು. ಸತ್ತವರ ಮನೆಗಳಿಗೆಲ್ಲ ಹೋಗಿ ಧೈರ್ಯ ಹೇಳುವ ಕೆಲಸವೂ ಅವರ ಪಾಲಿಗೇ ಬಿದ್ದಿತ್ತು. ಈಗ ಮನೆಯಲ್ಲಿ ಕಾಲರಾ ಪೀಡಿತ ಮಗನನ್ನು ಉಳಿಸಿಕೊಡದ ಚಕ್ರಾಣಿ ಬೇರನ್ನು ಊರ ಜನರಿಗೆ ತೇಯ್ದು ಕುಡಿಸುವ ಕೆಲಸ ವನ್ನು ಅವರು ಬಿಡಲಿಲ್ಲ. ಆ ಬೇರಿನ ಅಂತಃಶಕ್ತಿಯಲ್ಲಿಯ ಅವರ ವಿಶ್ವಾಸ ಹಾರಿ ಹೋಗಲಿಲ್ಲ. ತಮ್ಮ ಪ್ರಯತ್ನಗಳೆಲ್ಲ ವಿಫಲವಾಗುವವೆಂದು ಅವರಿಗೆ ಗೊತ್ತಿತ್ತು. ಬ್ರಹ್ಮಲಿಖಿತದ ಮುಂದೆ ಯಾರ ಆಟವೂ ನಡೆಯಲಾರದು, ಕರ್ಮಫಲದಂತೆ ವಿಧಿ ನಡೆಸುವ ಸತ್ವಪರೀಕ್ಷೆ ಯಾರಿಗೂ ಬಿಟ್ಟದ್ದಲ್ಲ ಎಂಬ ಸತ್ಯ ಅವರಿಗೆ ಮನವರಿಕೆ ಯಾಗಿತ್ತು. ತಾವು ಧನ್ವಂತರಿಯೂ ಅಲ್ಲ, ತಮ್ಮ ಚಕ್ರಾಣಿ ಬೇರು ಸಂಜೀವನಿಯೂ ಅಲ್ಲ ಎಂಬ ಮಾತೂ ಅವರಿಗೆ ತಿಳಿದಿತ್ತು. ಆದರೆ ಇದರಲ್ಲಿಯೂ ಉಳಿಯಬೇಕಾದ ಜೀವಗಳಿದ್ದರೆ? ತಮ್ಮ ಪ್ರಯತ್ನಗಳಲ್ಲಿ ಒಂದಾದರೂ ಸಫಲವಾಗುವಂತಿದ್ದರೆ? ಅಂದ ಮೇಲೆ ಪ್ರಯತ್ನವನ್ನೇಕೆ ಬಿಡಬೇಕು? ಸಾವು ಎಲ್ಲವನ್ನೂ ನುಂಗಲು ಬಾಯಿ ತೆರೆದಿದ್ದರೂ, ಉಳಿಯಲೆಳಸುವ ಅದಮ್ಯವಾದ ಜೀವನದಾಸೆಯಂತೆ ಆ ಬೇರು ಅವರಿಗೆ ಕಂಡಿತ್ತು. ಅಂತೇ ಮನೆಯಲ್ಲಿಯ ಸಾಣೆಕಲ್ಲು ಸವೆದು ಹೋಗುವವ ರಿಗೆ, ಆ ಬೇರನ್ನು ತಿಕ್ಕಿಯೇ ತಿಕ್ಕಿದರು.

ಈಗ ಸಾವು ಅವರ ಮನೆಯಲ್ಲಿಯೂ ತನ್ನ ಬಲಿಯನ್ನು ಕೇಳಿತ್ತು. ಚಕ್ರಾಣಿ ಬೇರಿನ ಬೇಡಿಕೆಯನ್ನು ಅದು ಮನ್ನಿಸಿರಲಿಲ್ಲ. ಅವರ ತಮ್ಮನ ಮಗ ಸಾವಿಗೀಡಾಗಲೇಬೇಕಾಯಿತು. ಆಚಾರ್ಯರಿಗೆ ಅದು ತಮ್ಮ ಸತ್ವಪರೀಕ್ಷೆಯೇ ಎಂದೆನಿಸಿತು. ಸಾವು ನೋವಿನ ಅನುಭವ ತನಗಾಗದೆ ಇನ್ನೊಬ್ಬರ ನೋವಿಗೆ ತಮ್ಮ ಹೃದಯ ಹೇಗೆ ಸ್ಪಂದಿಸಬೇಕು ಎಂದೆನಿಸಿತು. ಮಗನ ಹೆಣವನ್ನು ನೋಡಿ ಆಚಾರ್ಯರ ಪತ್ನಿ ಮೌನವಾಗಿಯೇ ಕಣ್ಣೀರು ಸುರಿಸಿದರು. ಗಂಡನ ನಿಷ್ಠುರ ಮೌನವನ್ನು ನೋಡಿ ದನಿ ತೆಗೆಯುವ ಧೈರ್ಯ ಅವರಿಗಾಗಲಿಲ್ಲ. ಆಚಾರ್ಯರಿಗೆ ಈ ಸೂಕ್ಷ್ಮದ ಅರಿವಾಯಿತು. ಊರ ಜನರಿಗೆ ಹೇಳುವ ಸಮಾಧಾನದ ನಾಲ್ಕು

ಮಾತುಗಳನ್ನೇ ತಮ್ಮ ಪತ್ನಿಗೂ ಹೇಳಿ, ಆಚಾರ್ಯರು ಅಂತ್ಯಸಂಸ್ಕಾರಕ್ಕೆ ಸ್ವತಃ ತಾವು ಹೋಗದೆ, ಚಕ್ರಾಣಿಬೇರನ್ನು ತೇಯುತ್ತ ಕುಳಿತುಬಿಟ್ಟರು. ಬೇರು ಕಣ ಕಣವಾಗಿ ಸವೆಯುತ್ತ, ನೀರಿನಲ್ಲಿ ಕರಗುತ್ತ ಪ್ರತಿಕ್ಷಣದ ಸಾವನ್ನು ಅನುಭವಿಸು ತ್ತಿತ್ತು. ಅದೇ ಜೀವನವೇನೋ ಎಂದು ಆಚಾರ್ಯರಿಗೆ ಆ ಕ್ಷಣಕ್ಕೆ ಅನಿಸದಿರಲಿಲ್ಲ.

"ಕಲ್ಲೆದೆ ಹಾರುವ" ಎಂದು ಆಚಾರ್ಯರ ಈ ವರ್ತನವನ್ನು ಕೆಲವರು ತೆಗಳಿದರು. ಆದರೆ ಆಚಾರ್ಯರ ಕಿವಿಗೆ ಅದು ಮುಟ್ಟಿರಲೇ ಇಲ್ಲ. ಗೋಪಾಲಕೃಷ್ಣನ ಗುಡಿಯಲ್ಲಿ ಕುಳಿತು ಬೇರನ್ನು ತೇಯುತ್ತ ನಿರಂತರವಾಗಿ ಔಷಧ ಹಂಚುವ ಮೊಂದೇ ಈಗ ಅವರಿಗೆ ಕೆಲಸವಾಯಿತು. ಕಲ್ಲೆದೆಯೋ, ನೊಂದೆದೆಯೋ, ಜನರು ಅವರು ಕೊಡುವ ಔಷಧವನ್ನು ಸ್ವೀಕರಿಸುವದನ್ನೇನೂ ಬಿಡಲಿಲ್ಲ. ಆಚಾರ್ಯರ ಸಹಾನುಭೂತಿ ಔಷಧವಾಗಿ ಹರಿಯುತ್ತಿತ್ತು. ಅವರ ಮಗ ತೀರಿಕೊಂಡ ಸಂಜೆಯೂ ಆಚಾರ್ಯರು ಗುಡಿಯ ಕಟ್ಟೆಯ ಮೇಲೆಯೇ ಇದ್ದರು. ಊದು ಉರಿಯುತ್ತಿರುವಾಗ ಸತ್ತವರಿಗಿಂತ ಇದ್ದವರಿಗಾಗಿ ದುಡಿಯುವವ ನಿಜವಾಗಿ ದೊಡ್ಡ ಮನುಷ್ಯ ಎಂದು ಜನರು ಚಕ್ರಾಣಿಬೇರಿನ ಮಜ್ಜಿಗೆ ತೆಗೆದುಕೊಂಡು ಅವರ ಉಪಕಾರ ಸ್ಮರಿಸುತ್ತ ಹೋದರು. ಆಚಾರ್ಯರ ಬೇರು ಕರಗಹತ್ತಿತು. ಹೊತ್ತು ಮುಳುಗಿತು. ಔಷಧಕ್ಕಾಗಿ ನೆರೆದ ಜನಸಮೂಹವೂ ಕರಗಿತು. ಆಚಾರ್ಯರು ಎದ್ದು ಗುಡಿಯ ಕಟ್ಟೆಯನ್ನಿಳಿದರು. ಸಾಣೀಕಲ್ಲನ್ನು ಬಗಲಲ್ಲಿ ಹಿಡಿದುಕೊಂಡು ಹೊದ್ದ ಧೋತರವನ್ನು ಸಾವರಿಸಿಕೊಂಡು ಆಚಾರ್ಯರು ಮನೆಯತ್ತ ಹೊರಳಿದರು. ಗುಡಿಯಿಂದ ಸ್ವಲ್ಪ ದೂರದಲ್ಲಿ ಮಾದಿಗರ ಮಲ್ಲಿ ದುಃಖಿಸುತ್ತಲೇ ನಿಂತಿದ್ದಳು. ಕಾರಣ ಯಾರೂ ಕೇಳಬೇಕಾಗಿರಲಿಲ್ಲ. ಆಚಾರ್ಯರು ಕಣ್ಣುಸನ್ನೆಯಿಂದಲೇ ಅವಳನ್ನು ಮಾತಾಡಿಸಿದರು.

" ಯಪ್ಪಾ ಚನ್ನ್ಯಾಗ ಹಿಂದಕ ಮುಂದಕ ಆಗಾಕ ಹತ್ತೇತರಿ. ಬೇರ ಉಳಿದ್ದರ ಜರಾ ಕೊಡರಿ " ಎಂದು ಅಂಗಲಾಚಿ ಬೇಡಿಕೊಂಡಳು.

" ಬೇರಿ? ಇಕಾ ಒಬ್ಬರಿಗೆ ಸಾಲೂವಷ್ಟು ಮಾತ್ರ ಉಳದದ ನೋಡವಾ. ತೊಗೋ" ಎಂದು ಹೇಳಿ ಅವಳ ಕೈಯಲ್ಲಿ ಬೇರನ್ನಿತ್ತು ಆಚಾರ್ಯರು ಮುಂದೆ ಸಾಗಿದರು. ತಮ್ಮಲ್ಲಿಯ ಚಕ್ರಾಣಿ ಬೇರಿನ ಸಂಗ್ರಹ ತೀರಿ ಹೋದದ್ದರಿಂದ ಮುಂದೆ ಏನು ಮಾಡಬೇಕೆಂದು ಅವರಿಗೆ ಯೋಚನೆಯಾಗಿತ್ತು. ಯಾವ ಉಪಾಯವೂ ಅವರಿಗೀಗ ಹೊಳೆಯಲಿಲ್ಲ. ಆಚಾರ್ಯರಿಗೆ ತಡೆಯಲಾರದ ನೋವುಂಟಾಗಿತ್ತು.

ಅಷ್ಟರಲ್ಲಿ ಅವರ ಕಡೆಗೇ ವಾಲೀಕಾರ ನಿಂಗ ಧಾವಿಸಿ ಬಂದನು. ಅವನ ಮುಖ ಹೌಹಾರಿ ಹೋಗಿತ್ತು. "ಎಪ್ಪಾ, ಆಚಾರೆಪ್ಪ. ಗಾತ ಆತೋ ಎಪ್ಪಾ. ಗೌಡರ್ರೀ ...." ಎಂದವನೇ ನಿಂಗ ದನಿ ತೆಗೆದು ಅಳಲಾರಂಭಿಸಿದ.

"ಈಗ ಆಗೋದೆಲ್ಲ ಘಾತಪಾತನs. ಹೇಳು ನಿಂಗಾ ಏನಾಗೇದ ಹೇಳು ಗೌಡರಿಗೆ?" ಎಂದು ಘೋರ ಭವಿಷ್ಯವನ್ನು ಊಹಿಸಿಯೇ ಆಚಾರ್ಯರು ಕೇಳಿದರು.

"ಆಗೋದೇನರಿ, ಹಿಂದಕ ಮುಂದಕ" ಎಂದಿಷ್ಟು ಹೇಳಿ ಮುಂದೆ ಮಾತ ನಾಡಲಾಗದೆ, ಬಿಕ್ಕಿಬಿಕ್ಕಿ ಅಳುತ್ತ ನಿಂಗ ಒಲ್ಲಿಯ ಸೆರಗಿನಿಂದ ಕಣ್ಣೊರೆಸಿಕೊಳ್ಳ ಹತ್ತಿದ.

ಆಚಾರ್ಯರು ಅವನಿಗೇನೂ ಉತ್ತರ ಕೊಡಲಿಲ್ಲ. ಅಂತೂ ಸಾವು ಈಗ ಗೌಡರ ಮನೆಬಾಗಿಲಿಗೆ ಬಂದಿತ್ತು. ಊರಿನ ಸತ್ತ್ವಪರೀಕ್ಷೆಯ ಕಾಲ ಇನ್ನೂ ಮುಗಿದಿಲ್ಲವೇ? ಆಚಾರ್ಯರಿಗೆ ಗೌಡರು ಅಂದು ರಾತ್ರಿ ತಮ್ಮ ಮನೆತನದ ಮರ್ಯಾದೆಯನ್ನುಳಿಸಬೇಕೆಂದು ಕೇಳಿಕೊಂಡ ಮಾತು ದೈವವಾಣಿಯಂತೆ ಅರ್ಥಪೂರ್ಣ ವಾದದ್ದೆಂದೆನಿಸಿತು. ಕಾಲರಾದಿಂದ ಈ ಮೊದಲು ಸತ್ತ ಹೊಲಗೇರಿಯ ಬಾಳ್ಯಾನನ್ನು ಗೌಡರೇ ಮೊದಲು ನೋಡಿದವರು. ಅಂದಿನಿಂದ ಅವರ ನಡೆವಳಿಕೆಯೇ ಬದಲಾಗಿತ್ತು. ಸಾವು ಆಗಲೇ ತನ್ನ ನೆರಳನ್ನು ಅವರ ಮೇಲೆ ಬೀಸಿರಬೇಕು. ಇಲ್ಲದಿದ್ದರೆ ಮೂರು ದಿನಗಳಲ್ಲಿ ಅಂಥ ಬದಲಾವಣೆ ಸಾಧ್ಯವೇ? ವಜ್ರಕ್ಕಿಂತ ಕಠೋರರಾಗಿ ದರ್ಪದಿಂದ ಮೀಸೆ ತಿರುವುತ್ತ ಊರಲ್ಲೆಲ್ಲ ತಿರುಗಾಡುತ್ತಿದ್ದ ಗೌಡರು ಅಂದು ರಾತ್ರಿ ಬೆಣ್ಣೆಗಿಂತ ಮೃದುವಾಗಿದ್ದರು; ಪಾದಳ್ಳಿಯ ಇಡೀ ಜೀವನಕ್ರಮವೇ ಬದಲಾಗಬೇಕೆಂದು ದೈವಸಂಕಲ್ಪವಿರಬೇಕು.

ಬಾಳಾಚಾರ್ಯರಿಗೂ ಗೌಡರಿಗೂ ಸುಮಸುಮಾರು ಒಂದೇ ವಯಸ್ಸು. ಹುಡುಗತನದಿಂದಲೂ ಒಂದೇ ಕಡೆಗೆ ಬೆಳೆದು ಇಬ್ಬರೂ ತೀರ ಪರಿಚಿತರಾಗಿದ್ದರು, ಊರ ಕಾರಣಕ್ಕಾಗಿ ಕೆಲವು ಸಾರೆ ಇಬ್ಬರಲ್ಲಿಯೂ ತೀವ್ರ ದ್ವೇಷಕೂಡ ಹುಟ್ಟಿತ್ತು. ಒಮ್ಮೆ ಯಾವುದೋ ಕಲಹದಲ್ಲಿ ಗೌಡರು ತಮ್ಮ ಅಪಮಾನ ಮಾಡಿದರೆಂದು ಆಚಾರ್ಯರು ಗೌಡರ ಮನೆಯಿದ್ದ ಓಣಿಯಲ್ಲಾಗಲಿ; ಚಾವಡಿಯ ಮುಂದಿನ ಬೀದಿಯಲ್ಲಾಗಲಿ, ಇಡೀ ಒಂದು ವರ್ಷ ತಪ್ಪಿಕೂಡ ಹಾಯ್ದಿರಲಿಲ್ಲ. ಆದರೆ ಇಂಥ ತೀವ್ರವಾದ ದ್ವೇಷ ಕೂಡ ಇಬ್ಬರಲ್ಲಿಯ ಪರಿಚಯವನ್ನು ಹೆಚ್ಚು ಆಳವಾಗಿಸಿತ್ತು.

ಅಂಥ ಗೌಡರು ಈಗ ಆಸನ್ನ ಮರಣರಾಗಿದ್ದಾರೆ. ಅರುವತ್ತು ವರ್ಷಗಳ

ಜೀವನಾನುಭವದಲ್ಲಿ, ತಪ್ಪಿಕೂಡ ಅವರ ಬಾಯಿಂದ ಸಾವಿನ ಮಾತನ್ನು ಆಚಾರ್ಯರು ಕೇಳಿರಲಿಲ್ಲ. ಗೌಡರ ದೇಹ ವಜ್ರದೇಹ. ಅವರು ಊರಲ್ಲಿ ನಡೆಯುತ್ತಿದ್ದರೆ ಪಾದಳ್ಳಿಯ ಕೋಟೆಯೇ ನಡೆದಂತಾಗುತ್ತಿತ್ತು. ಇಂಥವರಿಗೆ ಕೊನೆ ಇರಬಹುದೆಂಬ ಕಲ್ಪನೆ ಕೂಡ ಬರುವದು ಯಾರಿಗೂ ಶಕ್ಯವಿರಲಿಲ್ಲ. ಹೊಳೆ,ದೇವಾಲಯ,ಅಗಸೆ, ಚಾವಡಿಗಳಂತೆಯೇ ಗೌಡರೂ ನಿತ್ಯ ಕಾಣುವ ವಸ್ತುಗಳಲ್ಲೊಬ್ಬರಾಗಿದ್ದರು. ಚಾವಡಿಯ ಕಟ್ಟೆಯ ಮೇಲೋ, ಊರ ಮುಂದಿನ ತೋಟದಲ್ಲೋ, ದೇವಾಲಯದಲ್ಲೋ ದಿನ ನಿತ್ಯ ಎಲ್ಲರಿಗೂ ಅವರ ಗುಡುಗಿನಂತಹ ದನಿ ಕೇಳಲೇಬೇಕು.

ಅಂಥ ಗೌಡರಿಗೂ ಈಗ ಕೊನೆಗಾಲ ಬಂದಿತ್ತು. ಆದರೆ ಈಗ ತಾವೇನೂ ಮಾಡುವಂತಿರಲಿಲ್ಲ. ದೈವ ಪರೀಕ್ಷೆಯೆಂಬಂತೆ ಇದ್ದ ಬೇರೂ ತೀರಿಹೋಗಿತ್ತು. ಅದೊಂದು ಕೊನೆಯ ಚೂರಾದರೂ ಉಳಿದಿದ್ದರೆ ಗೌಡರನ್ನು ಉಳಿಸಿಕೊಳ್ಳಬಹುದಾಗಿತ್ತೇನೋ! ಇವೇ ನೋವಿನ ವಿಚಾರಗಳಲ್ಲಿಯೇ ಮುಳುಗಿ ಆಚಾರ್ಯರು ಗೌಡರ ಮನೆಯತ್ತ ಸಾಗಿದರು.

ಗೌಡರ ಮನೆಯ ಸುತ್ತಲೂ ಊರಿಗೂರೇ ಕೂಡಿದ್ದರೂ ಮನೆ ಸ್ಮಶಾನದಷ್ಟು ಶಾಂತವಾಗಿತ್ತು. ಯಾರೊಬ್ಬರ ಮುಖದ ಮೇಲೆಯೂ ಕಳೆ ಇರಲಿಲ್ಲ. ಆಚಾರ್ಯರು ಬರುತ್ತಲೇ ಅಲ್ಲಿ ಕೂಡಿದೆಲ್ಲರಿಗೂ ದುಃಖ ಉಕ್ಕಿತೇನೋ, ಅಲ್ಲಲ್ಲಿ ಬಿಕ್ಕಿದ ದನಿ ಕೇಳಬಂದಿತು. ಮೌನವಾಗಿಯೇ ಆಚಾರ್ಯರಿಗೆ ಜನರು ದಾರಿ ಬಿಟ್ಟರು. ದೇವರನ್ನು ನೆನೆಯುತ್ತ ಆಚಾರ್ಯರರು ಒಳಗೆ ಸಾಗಿದರು.

ಗೌಡರಿಗೆ ಅದೇ ವಾಂತಿಯಾಗಿತ್ತು. ನಿಶ್ಶಕ್ತಿಯಿಂದ ಮುಖ ಹಿಂಡಿ ಒಗೆದ ಒಪ್ದೆಯಂತಾಗಿತ್ತು. ಹಣೆಯ ಮೇಲೆ ಬೆವರು ಹನಿಗಳ ಸಾಲುಗಟ್ಟಿತ್ತು. ಕಣ್ಣುಗಳು ಹತ್ತಿಕಾಳಿನಂತೆ ನಿಸ್ತೇಜವಾಗಿದ್ದವು. ಆಚಾರ್ಯರನ್ನು ನೋಡಿದೊಡನೆಯೇ ಅವರ ಗಂಟಲುಬ್ಬಿ, ಕಣ್ಣೀರು ತುಳುಕಿದವು. ಮಲಗಿದಲ್ಲಿಯೇ ಎರಡೂ ಕೈಯೆತ್ತಿ ಆಚಾರ್ಯರಿಗೆ ವಂದನೆಗಳನ್ನು ಸಲ್ಲಿಸಿದರು. "ಆಚಾರೆಪ್ಪಾ ಇದಃ ನನ್ನ ಕಡೀ ನಮಸ್ಕಾರ, ಕೊಂಡತೇನು" ಇಷ್ಟು ದುರ್ಬಲವಾದ ದನಿಯಲ್ಲಿ ಹೇಳಬೇಕಾದರೆ ಅವರಿಗೆ ಸಾಕುಬೇಕಾಯಿತು. ಅವರ ಮನಸ್ಸಿನಲ್ಲಿ ಇನ್ನೂ ಬಹಳಷ್ಟು ಮಾತಾಡುವದಿತ್ತು. [illegible] ಪೀಸದಲ್ಲಿ ಕೂತು ಮಾತಾಡುವಷ್ಟು ತ್ರಾಣ ಉಳಿದಿರಲಿಲ್ಲ.

ಆಚಾರ್ಯರು ಕಂಬಕ್ಕಾತು ಕೂತು ಸುತ್ತಲೂ ಕಣ್ಣಾಡಿಸಿದರು. ಗೌಡರ

ಹಾಸಿಗೆಯ ಹತ್ತಿರ ಗೌಡರ ಪತ್ನಿ ಪಾರ್ವತೆವ್ವ ತನ್ನ ಇಬ್ಬರು ಮಕ್ಕಳನ್ನೂ ತಬ್ಬಿ ಕೊಂಡು ಕುಳಿತಿದ್ದಳು. ಹಿರಿಯ ಮಗ ಹದಿನಾಲ್ಕು ವರ್ಷದವ, ಚಿಕ್ಕವನು ಎಂಟು ವರ್ಷದವ. ಗೌಡರ ಹನ್ನೆರಡು ಮಕ್ಕಳಲ್ಲಿ ಬದುಕಿ ಉಳಿದವರು ಇವರಿಬ್ಬರೇ. ಗೌಡರ ಮರಣ ವಾರ್ತೆ ಮನೆಯಲ್ಲೆಲ್ಲ ವ್ಯಾಪಿಸಿದಂತಿತ್ತು. ಧಾಬೆಯಲ್ಲಿಯ ದನ ಗಳು ಕೂಡ ಮೆಲುಕಾಡಿಸುವದನ್ನು ಬಿಟ್ಟು ತಮ್ಮ ಸಂಕಟವನ್ನು ತೋಡಿಕೊಳ್ಳು ತ್ತವೆಯೋ ಏನೋ ಎಂಬಂತೆ ಮುಸುಗರೆಯುತ್ತ ಕಿವಿಚಾಚಿ, ಕಣ್ಣು ಹೊರಳಿಸಿ ನೆರೆದ ಜನರತ್ತ ನೋಡುತ್ತ ನಿಂತಿದ್ದವು.

ಸ್ವಲ್ಪ ಹೊತ್ತು ಮೌನವೇ ರಾಜ್ಯವಾಳಿತು. ಗೌಡರು ಮಕ್ಕಳ ಕಡೆಗೊಮ್ಮೆ ದೃಷ್ಟಿ ಬೀರಿದರು. "ಆಚಾರೆಪ್ಪ ಈ ಮಕ್ಕಳು ಪರದೇಶಿ ಆಕ್ಕಾವಂತ ಕಾಳಜಿ ಏನು ಇಲ್ಲ. ಸತ್ತವರ ಮಕ್ಕಳು ಇದ್ದವರ ಕೈಯಾಗಲ್ಲs?" ಎಂದು ಏನೋ ಹೇಳಬೇಕೆಂ ದಿದ್ದರು. ಆದರೆ ಪಾರ್ವತೆವ್ವ ಗಾಬರಿಯಿಂದ, ಅವರ ಬಾಯಿಗೆ ಕೈಹಿಡಿದು, ಆಚಾ ರ್ಯರ ಕಡೆಗೆ ತಿರುಗಿ "ಹೀಗs ಮಾತಾಡಾಕ ಹತ್ಯಾರ ನೋಡ್ರಿ.ದುರಗವ್ವನ ಬ್ಯಾನಿ ಬಂದವರು ಉಳೂದುಲ್ಲ ಅಂತ ಗಾಬರಿ ಆಗ್ಯಾರರಿ, ಆಚಾರೆಪ್ಪಾ, ಊರಿಗೇ ಬೇರು ತೇದು ಕೊಟ್ಟು ನೂರಾರು ಮಂದಿನ್ನ ಉಳಿಸೀರಿ. ಜೀವಾ ಉಳಸರಿ ಅಂತ ಹೇಳೂದು ಬಿಟಗೊಟ್ಟು, ಈಗ ಅಂದರಲ್ಲಾ, ಅಂತಾ ವಾಗತ್ಯದ ಮಾತಾಡಿ ನನ್ನ ಎದೀ ಒಡೀತಾರೋ ಎಪ್ಪಾ"ಎನ್ನುತ್ತ ಗೌಡರು ಹೇಳದಿದ್ದ ಮಾತನ್ನು ತಾನು ಹೇಳಿ, ದುಃಖ ಉಕ್ಕಿ ಬಂದು ಅತ್ತುಬಿಟ್ಟಳು.

ಆಚಾರ್ಯರಿಗೆ ಎಲ್ಲ ಅರ್ಥವಾಯಿತು. ಈ ಸಮಸ್ಯೆಯನ್ನು ಅವರು ಈ ಮೊದಲೇ ನಿರೀಕ್ಷಿಸಿದ್ದರು. ಈ ರೀತಿಯ ಅಂತಃಕರಣದ ಸಂಕಟಕ್ಕೆ ಅವರೆಂದೂ ಸಿಕ್ಕಿಬಿದ್ದಿರಲಿಲ್ಲ. ಗೌಡಿತಿ ಪಾರ್ವತೆವ್ವನ ಮಾತಿಗೆ ಉತ್ತರ ಕೊಡಲು ಅವರಿಗೆ ಬಾಯಿ ಬರಲಿಲ್ಲ. ತಮ್ಮಲ್ಲಿದ್ದ ಚಕ್ರಾಣಿ ಬೇರಿನ ಸಂಗ್ರಹವೆಲ್ಲ ತೀರಿಹೋಗಿ, ಸವೆಯುತ್ತ ಬಂದ ಕೊನೆಯ ಚೂರನ್ನು ಮಾದರ ಚೆನ್ನನಿಗೆಂದು ಮಲ್ಲಿಯ ಕೈಯಲ್ಲಿ ಕೊಟ್ಟು ಬಂದಿದ್ದರು. ಸಂಜೀವಿನಿ ಶಕ್ತಿಯೆಲ್ಲ ಆ ಕೊನೆಯ ಚೂರಿ ನಲ್ಲಿಯೇ ಇರಬೇಕು. ಸ್ವಲ್ಪ ಹೊತ್ತು ಮುಂಚೆಯೇ ತಿಳಿದಿದ್ದರೆ ಅದರಿಂದ ಗೌಡರ ಪ್ರಾಣ ಉಳಿಯಬಹುದಾಗಿತ್ತೇನೋ ! ಈಗ ಗೌಡರ ಪ್ರಾಣವನ್ನು ಉಳಿ ಸಬೇಕಾಗಿದ್ದರೆ ಕೊಟ್ಟ ಔಷಧವನ್ನು ಮರಳಿ ತರಿಸಬೇಕು. ಆದರೆ ಚನ್ನ ಔಷಧ ವಿಲ್ಲದೆ ಸತ್ತರೆ? ಆ ಪಾಪ ತಮ್ಮನ್ನು ಸುತ್ತಿಕೊಳ್ಳದಿರದು. ಈಗೋ ಗೌಡತಿ

ಆಲ್ಪರಿದು ಜೀವ ಉಳಿಸಿರೆಂದು ಕೇಳಿಕೊಳ್ಳುತ್ತಿದ್ದಾಳೆ. ಗೌಡರು ತಮಗೆ ಆಪ್ತ ಸ್ನೇಹಿತರು. ಅವರ ಕೊನೆಗಾಲದಲ್ಲಿ ನೆರವಾಗದಿದ್ದರೆ ಹೇಗೆ ? ಈ ಧರ್ಮ ಸಂಕಟ ಆಚಾರ್ಯರನ್ನು ನೂರು ಪರಿಯಾಗಿ ಹಿಂಸಿಸಿತು. ಸುಮ್ಮನೆ ಶೂನ್ಯ ದೃಷ್ಟಿಯಿಂದ ಸುತ್ತುಮುತ್ತು ನೋಡುತ್ತ ಕುಳಿತುಬಿಟ್ಟರು.

ಗೌಡರು ಕಾಣಲೆಂದು ಕೆಲಜನರು ಒಳಗೇ ಬಂದರು. ಅವರನ್ನು ನೋಡಿದ ಆಚಾರ್ಯರು "ಇಲ್ಲಿ ನೋಡ್ರಿ. ಗೌಡರ ಸ್ಥಿತಿ ನೋಡಿದಿರೆಲ್ಲ, ಇನ್ನು ಮನೀ ದಾರಿ ಹಿಡೀರಿ. ಇದು ಅಸಾಧ್ಯ ಸುಂಕರೋಗ. ಭಾಳೊತ್ತು ನಿಲ್ಲಬ್ಯಾಡ್ರಿ" ಎಂದು ಬಂದವರಿಗೆಲ್ಲ ಹೇಳಹತ್ತಿದರು. ಆದರೆ ಇದು ಪಾರ್ವತೆವ್ವನಿಗೆ ಸಹನವಾಗಲಿಲ್ಲ.

"ಆಚಾರೆಪ್ಪ, ನೀನs ಹೀಗ ಜನರ ಕಾಲಾಗ ಹಾವು ಬಿಟ್ಟರ ಜನಾ ಬದಕು ಬಗಿ ಹ್ಯಾಗs ? ಗೌಡರಿಗೆ ಅಗಸುದ್ದೆ ತರಸೂ ಹಾದೀ ಹೇಳಬಾರದs " ಎಂದು ಆಕ್ಕಸದಿಂದಲೇ ನುಡಿದಳು.

"ತಂಗೀ, ಕಾಯೂವನೂ ಅವನs, ಕೊಲ್ಲಾವನೂ ಅವನs. ಅವನ ಕೃಪಾ ಒಂದಿದ್ದರ ಬೆಂಕಿಯೊಳಗs ನಿಂತರೂ ಭಯಾ ಇಲ್ಲ. ಯಾವ ಧನ್ವಂತರಿ ಬಂದರೂ ದೇವರ ಸಂಕಲ್ಪದ ವಿರುದ್ಧ ಅವನ ಆಟೀನು ನಡಿಯೂದಿಲ್ಲ. ನೀನೂ ತಿಳಿದಾಕೀನs ಇದ್ದೀದಿ. ಔಷಧದ ಬೇರು ಇದ್ದರ, ಅದನ್ನು ತೇದು ಹಾಕದ ಹೀಂಗ ಮಬ್ಬು ಹಿಡದು ಕೂಡತಿದ್ದೆನೇ ನಾನು ? " ಎಂದು ಹೇಳಿ ಆಚಾರ್ಯರು ನಿಟ್ಟುಸಿರು ಬಿಟ್ಟರು.

"ಬೇರು ಇದ್ದದ್ದು ಈಗೆಲ್ಲಿ ಮಟಾಮಾಯ ಆತು ಆಚಾರೆಪ್ಪ ? " ಗೌಡತಿ ಸಂಶಯದಿಂದಲೇ ಕೇಳಿದಳು. ಇಡೀ ದಿನವೆಲ್ಲ ಗೋಪಾಲಕೃಷ್ಣನ ಗುಡಿಯಲ್ಲಿ ಆಚಾರ್ಯರು ಔಷಧ ಹಂಚಿದ ವಿಷಯ ಅವಳಿಗೂ ತಿಳಿದಿತ್ತು.

" ಒಬ್ಬರಿಗೆ ಹಾಕುವಷ್ಟೇ ಉಳಿದಿತ್ತು. ಇದs ಈಗ ಮಾದರ ಚನ್ನಗ ಮಾರಿಬ್ಯಾನಿ ಬಂತು ಅಂತ ಸುದ್ದಿ ಕೇಳಿದೆ. ಅದನ್ನ ಅಂವಗ ಕೊಟ್ಟು ಕಳಿಸಿ ಒರಿಗ್ಗೈಯಿಂದ ಸಿಂತಮ್ಯಾಲ ಇಲ್ಲೀ ಸುದ್ದಿ ತಿಳೀತು " ಆಚಾರ್ಯರು ನಡೆದ ಸಂಗತಿ ಯನ್ನೆಲ್ಲ ವಿವರಿಸಿದರು.

"ಹೋಗೋ ಮಲ್ಲಾ, ಮಾದರ ಕೇರಿಗೆ ಹೋಗಿ, ಚನ್ನ್ಯಾನ ಮನ್ಯಾಗ ಆ ಬೇರು ಇಸಗೊಂಡು ಬಾ. ಗೌಡರಿಗೆ ಬೇಕಾಗೇತೆಂತ ಹೇಳು" ಎಂದು ಪಾರ್ವ-ತೆವ್ವ ಆತುರದಿಂದ ಆಜ್ಞೆ ಮಾಡಿದಳು. ಅದನ್ನು ಕೇಳಿದವರೇ ಗೌಡರು ಕ್ಷೀಣ

ಸ್ವರದಿಂದ, " ಹೋಗಬ್ಯಾಡಲೇ ಮಲ್ಲಾ. ನನಗೇನು ಬದಕೋ ಆಸೇವಿಲ್ಲ. ಸಾಯೋಕಿನ್ನಾ ಮೊದಲ, ಆ ಬಡವನ್ನ ಜೀವಾ ಹೊಡೆದು ತರೋ ಬೇರು ನನಗ ಬ್ಯಾಡ. ಅದೊಂದು ಪಾಪಾ ಮಾಡಿ ಮತ್ತ ಯಾವ ನರಕಕ್ಕ ಹೋಗಲಿ ! " ಎಂದು ಕೂಗಿಕೊಂಡರು. ಇಷ್ಟು ಮಾತಾಡಿದ್ದೇ ದಣಿವಾಯಿತೇನೋ, ಕೈಕಾಲಿಗೆ ಬಲವಾದ ಒರಟು ಬಂದು ಮತ್ತೊಮ್ಮೆ ವಾಂತಿ ಮಾಡಿಕೊಂಡರು.

ಮಲ್ಲ ಹೋಗುತ್ತಿದ್ದವನು ತಡೆದು ನಿಂತ. ಅವನಿಗೆ ಇನ್ನೊಮ್ಮೆ ಹೇಳ ಬೇಕೆಂದಿದ್ದ ಪಾರ್ವತೆವ್ವ, ಗೌಡರು ವಾಂತಿಮಾಡಿಕೊಂಡಿದ್ದನ್ನು ನೋಡಿ, ಅತ್ತ ಕಡೆಗೆ ಲಕ್ಷ್ಯಹಾಕಬೇಕಾಯಿತು. ಆಚಾರ್ಯರು ಮೂಕಶೋಕದಿಂದ ಮರಗಟ್ಟಿ ದಂತಾಗಿದ್ದರು. ಅದೇ ಕಾಲಕ್ಕೆ ವಾಡೆಯಿಂದ ಯಶವಂತರಾಯ ಪಾಟೀಲರು ಗೌಡರನ್ನು ಕಾಣಲು ಆತುರದಿಂದ ಧಾವಿಸಿಬಂದರು. ಇನ್ನೂ ಕುಳಿತುಕೊಳ್ಳುವ ಮೊದಲೇ, ಬಗಲಬಂಡಿಯ ಕಿಸೆಯೊಳಗಿಂದ ಒಂದು ಕಪ್ಪುರದ ತುಣುಕನ್ನು ಹೊರತೆಗೆದು "ಇದನ್ನು ಬಿಸಿನೀರಾಗ ಹಾಕಿ ಕುಡಿಸರಿ." ಎಂದು ಹೇಳುತ್ತ ಪಾರ್ವ ತೆವ್ವನ ಕೈಗಿತ್ತರು.

ಪಾರ್ವತೆವ್ವನಿಗೆ ಆ ತುಣುಕು ಸಂಜೀವನಿಯಂತೆ ಕಂಡಿತು. ಆಳಿಗೆ ಹೇಳಿ ಬಿಸಿ ನೀರು ತರಿಸುವಷ್ಟೂ ಅವಕಾಶ ಅವಳ ಆತುರಮನಸ್ಸಿಗಿರಲಿಲ್ಲ. ತಾನೇ ಓಡಿ ಹೋಗಿ, ನೀರು ತಂದು ಕುಡಿಸುವದಾಗಿ ನಿರ್ಧರಿಸಿ ಒಮ್ಮೆಲೇ ಮೇಲೆದ್ದಳು.

"ಯಶವಂತರಾವ, ನೀವು ಬಂದಿರಿ ನೆಟ್ಟಗಾತು. ಸಾಯೋ ಮುಕ್ಕಟ, ಎಲ್ಲಾರ ಕ್ಷಮಾ ಕೇಳಿಕೋಬೇಕಂತ ಹೇಳಿಕಳಿಸಿದ್ದೆ. ಬಾಪೂಸಾಬರು ಎಲ್ಯದಾರು? ಶೇಷಪ್ಪ ಬರಲಿಲ್ಲ." ಎಂದು ದೀನವಾಗಿ ಕೇಳಿದರು ಗೌಡರು.

"ಆಯಾಸ ಮಾಡಿಕೋಬ್ಯಾಡ್ರಿ. ಎಲ್ಲಾರೂ ಬರತಾರ." ಪಾಟೀಲರು ನುಡಿದರು.

"ಬರತಾರ, ನಾ ಸತ್ತ ಮ್ಯಾಗ. ಬಾಯಿ ಹೋಗೂದರಾಗ ಬಂದಿದ್ದರ ಈಟು ಮಾತರs ಹೇಳಿಕೋತಿದ್ದೆ. ಎಲ್ಲಾರ ಕ್ಷಮಾ ಕೇಳಿಕೊಂತಿದ್ದೆ."

"ಅಂಥಾ ತಪ್ಪು ನಿಮ್ಮಿಂದೇನೂ ಆಗಿಲ್ಲ. ತಿರಗಿ ಕೇಳಿದರ, ಅವರ- ನಿಮ್ಮ ಕ್ಷಮಾ ಕೇಳಿಕೊಳ್ಳೋದು ರಾಸ್ತ." ಯಶವಂತರಾಯರು ಸಮಾಧಾನ ಮಾಡಲು ಪ್ರಯತ್ನಿಸಿದರು.

"ಯಶವಂತರಾವ, ಮಾತು ಬೆಳಿಸಬ್ಯಾಡ್ರಿ. ಅವರಿಗೆ ವಿಶ್ರಾಂತಿಯು ಅಗತ್ಯ

ಭಾಳ ಅದ." ಎಂದು ಬಾಳಾಚಾರ್ಯರು ಯಶವಂತರಾಯರಿಗೆ ಬಿನ್ನವಿಸಿಕೊಂಡರು.

ಆ ಮಾತು ಗೌಡರ ಕಿವಿಗೂ ಬಿತ್ತು. ಗೌಡರು ವಿಚಿತ್ರವಾದ ನಗೆಯೊಂದನ್ನು ಬೀರಿ ಆಚಾರ್ಯರ ಕಡೆಗೆ ಕಣ್ಣು ಹೊರಳಿಸಿ, ಸಾವಕಾಶವಾಗಿಯೇ "ಆಚಾರೆಪ್ಪಾ, ಮುತ್ತಿನಂತಾ ಮಾತು ಹೇಳಿದಿ ನೋಡು. ಇನ್ನೂ ಕಾಯಮ್ ಆರಾಮು ತೊಗೊಂತೀನಿ. ನಾಯೇನು ಬಾಳ ಹೊತ್ತು ಮಾತಾಡಾಕ ಉಳೊದುಲ್ಲ. ಇಗಾ, ಇವು ನನ್ನ ಮಕ್ಕಳು. ನಿಮ್ಮೆಲ್ಲಾರ ಉಡ್ಯಾಗ ಹಾಕೀನಿ. ಅಂದಃ ಹೇಳಿದ್ದೆ, ಗೌಡರ ಮನೆತನದ ಮಾನಾ ಮರ್ಯಾದಿ ಎಲ್ಲಾ ನಿಮ್ಮೂ್ಮವಃ; ಅವನ್ನ ಕಾಯಬೇಕು. ನನ್ನ ತಪ್ಪೆಲ್ಲಾ ಮಾಫ್ ಮಾಡಬೇಕು." ಇಷ್ಟು ಹೇಳಿ ಗೌಡರು ಮತ್ತೊಮ್ಮೆ ಕೈಮುಗಿದರು. ಆದರೆ ದಣಿವಿನಿಂದ ಮುಗಿದಂತೆಯೇ ಕೈಗೆ ಒರಟು ಬಂದು, ಮೈಯೆಲ್ಲ ಹಿಂಡಿದಂತಾಗಿ ನರಳಿದರು. ಮಲಗಿದಲ್ಲಿಯೇ ಮತ್ತೆ ವಾಂತಿ-ಭ್ರಾಂತಿಗಾರಂಭವಾಯಿತು.

ಅಷ್ಟರಲ್ಲಿ ಪಾರ್ವತೆವ್ವ ಒಳಗಿನಿಂದ ಧಾವಿಸಿ ಬಂದು, ಕಪ್ಪುರದ ನೀರು ಹಾಕಬೇಕೆಂದು, ಬಾಯಿ ತೆರೆಯಲು ಕೇಳಿಕೊಂಡಾಗ, ಗೌಡರು ಹಲ್ಲುಕಚ್ಚಿದ್ದರು. ಅವರು ಬಾಯಿತೆರೆಯಲಿಲ್ಲ. ಪಾರ್ವತೆವ್ವನಿಗೆ ಪರಿಸ್ಥಿತಿಯ ಅರಿವಾಗಿ, ಎದೆ ಎದೆ ಬಡಿದುಕೊಳುತ್ತ, " ಅಯ್ಯೋ ನನ್ನ ಕುಂಕುಮ ಧೊರೀ, ಕೈಬಳೀ ಒಡದು ಕೈಬಿಟ್ಟು ಹೋದ್ಯಾ? " ಎಂದು ದನಿ ತೆಗೆದು ಜೋರಾಗಿ ಅಳಲಾರಂಭಿಸಿದಳು. ಈ ರಂಭಾಟಕ್ಕೆ ಹೆದರಿ ಗೌಡರ ಚಿಕ್ಕಮಗ ಚಿಳ್ಳನೆ ಚೀರಿ ಒಳಗೋಡಿ ಹೋದ.

ಬಾಳಾಚಾರ್ಯರು ಎದ್ದುಬಂದು ಗೌಡರ ನಾಡೀ ಹಿಡಿದು ನೋಡಿದರು. ಇನ್ನೂ ಏನೋ ಮಾತನಾಡಬೇಕೆನ್ನುತ್ತಿರುವಾಗಲೇ ಗೌಡರ ಜೀವ ಹಾರಿ ಹೋಗಿತ್ತು. ಬಾಳಾಚಾರ್ಯರು ಗೌಡಿತಿಯಕಡೆಗೆ ತಿರುಗಿ " ತಂಗೀ ಅತ್ತರೇನು ಸತ್ತವರು ಬರೂದುಲ್ಲ. ನಿನ್ನ ಹತ್ತು ಮಕ್ಕಳು ನಿನ್ನ ಕಣ್ಣೆದರs ಸತ್ತಾಗ, ಹೀಂಗs ಅತ್ತು ಅವರನ್ನ ಬದುಕಿಸಿಕೊಂಡಿದ್ದೇನು. ಇಂದು ಗೌಡರು, ನಾಳೆ ನಾವು. ನಿನ್ನಂಥಾ ತಿಳುವಳಿಕಿದ್ದ ಹೆಣಮಗಳು ಹೀಂಗ ಅಳಬಾರದು, ಊರ ಗೌಡತಿ, ಊರಿಗೆ ಸಮಾಧಾನ ಹೇಳೋದು ಬಿಟ್ಟು ಹೀಂಗ ಅಳಬಾರದು " ಧೈರ್ಯದ, ಸಮಾಧಾನದ ನಾಲ್ಕು ಮಾತು ಹೇಳಿ, ಅಲ್ಲಿಂದ ಯಶವಂತರಾಯರೊಡನೆ ಹೊರಬಿದ್ದರು.

ಆಚಾರ್ಯರು ಹೊರಗೆ ಕಾಲಿಟ್ಟಾಗ, ಗೌಡರ ಅಂತ್ಯದರ್ಶನಕ್ಕಾಗಿ ಗುಂಪು

ಗುಂಪಾಗಿ ಕೂಡಿದ ಜನಸಮೂಹವನ್ನು ಅವರು ಎದುರಿಸಬೇಕಾಯಿತು. ಪಾದ ಳ್ಳಿಯ ಊರಿಗೂರೇ ಅಲ್ಲಿ ನೆರೆದಿತ್ತು. ಆಚಾರ್ಯರಿಗೆ ಅವರನ್ನು ನೋಡಿ ಅಂತಃ ಕರಣ ಉಕ್ಕಿಬಂದರೂ, ಅವರೊಂದಿಗೆ ಏನೂ ಮಾತನಾಡಲಾಗಲಿಲ್ಲ. ಸಮಾ ಧಾನದ ಗಿಳಿಪಾಠವನ್ನು ಅವರೆದುರು ಉಚ್ಚರಿಸಲು ಮನಸ್ಸು ಬರಲಿಲ್ಲ. ಪಿಡುಗು ಸಾವಿನ ಮೆರವಣಿಗೆಯನ್ನೇ ಹೊರಡಿಸಿದ್ದಾಗ ಯಾರಿಗೆ ಯಾರು ಸಮಾಧಾನ ಹೇಳಬೇಕು ? ಆಚಾರ್ಯರ, ಕಣ್ಣಿಗೆ ಪ್ರತಿಯೊಬ್ಬರೂ ಸಾವಿನ ಮುದ್ರೆಯನ್ನು ಧರಿಸಿದವರಂತೆಯೇ ಕಾಣುತ್ತಿದ್ದರು. ಅಲ್ಲಿ ನಿಲ್ಲಲೂ ಕೂಡ ಆಗದೆ, ತಲೆ ತಗ್ಗಿಸಿಕೊಂಡು ಆಚಾರ್ಯರು ಮುಂದೆ ಸಾಗಿದರು. ಅವರಿಗಾಗಿ ಕ್ಷಣಹೊತ್ತು ತಡೆದು ನಿಂತ ಜನ, ನುಗ್ಗಿಬರುವ ಪ್ರವಾಹದಂತೆ ಗೋಳಿಡುತ್ತ ಗೌಡರ ಮನೆ ಯನ್ನು ಹೊಕ್ಕಿತು.

ಗೌಡರು ತೀರಿಕೊಂಡ ದಿನ ಇಪ್ಪತ್ತೆರಡು ಜನರು ಕಾಲರಾ ಬೇನೆಯಿಂದ ಮರಣ ಹೊಂದಿದ್ದರು. ಗರಡೀ ಮನೆಯ ಗಡಿಗಳಿಗೆ, ಇಷ್ಟು ಹೊಸ ಗೋರಿ ಗಳನ್ನು ಒಮ್ಮೆಲೇ ಅಗೆಯುವದು ಅಸಾಧ್ಯವಾಗಿ, ಹಳೆಯ ಗೋರಿಗಳನ್ನೆ ಅಗಿದು, ಒಳಗಿನ ಅಸ್ಥಿಪಂಜರವನ್ನು ಹೊರಗೆ ಬೀಸಾಡಿ, ಅದರಲ್ಲಿ ಹೆಣವನ್ನಿಟ್ಟು ಮಣ್ಣುಕೊಡುವ ಒಳದಾರಿಯನ್ನು ಅವಲಂಬಿಸಬೇಕಾಯಿತು. ರಾತ್ರಿ ಎಂಟು ಗಂಟೆಯ ಹೊತ್ತಿಗೆ ಮಠದಲ್ಲಿ ನೋಡುವವರಿಲ್ಲದೆ ಸತ್ತುಬಿದ್ದಿದ್ದ ಕೆಂಚನ ಹೆಣ ವನ್ನು ಹೊತ್ತು ತಂದಾಗ ಗೌಡರು ತೀರಿಕೊಂಡ ಸುದ್ದಿ ಬಂತು. ಇನ್ನು ಗೌಡರಿ ಗಾಗಿ ಗರಸಿನ ನೆಲದಲ್ಲಿ ಹೊಸ ಗೋರಿಯೊಂದನ್ನು ಅಗಿಯುವ ಕೆಲಸ ಗಂಟು ಬಿದ್ದಿತಲ್ಲ, ಎಂದು ಕೆಲವು ಗರಡಿಯಾಳುಗಳು ಅಸಮಾಧಾನಪಟ್ಟುಕೊಂಡರು.

"ಮಾರಾಯ ಗೌಡ,ಇದ್ದಾಗೂ ಕಾಡಿದಾ ಸತ್ತಾಗೂ ಕಾಡಿದ"ಎಂದು ಹಿರೇ ಕುರುಬ ನಿಂಗನಾಡಿದ ಮಾತು, ಕೆಂಚನ ಹೆಣವನ್ನು ಗೋರಿಯಲ್ಲಿ ಕೂಡಿಸುತ್ತಿದ್ದ ದಾದಾನ ಕಿವಿಗೆಬಿತ್ತು. "ಸತ್ತರೂ ಕಾಡೂದನ್ನ ಬಿಡದ ಅದ್ಯಾವಗೌಡ ಸತ್ತ ವಂತಲೇ?" ಎಂದು ಅವನು ಕೇಳಿದ. ಹೆಣಕ್ಕೆ ಮಣ್ಣು ಮುಚ್ಚುತ್ತ ನಿಂತ ನಿಂಗನೇ ಮತ್ತೆ ಹೇಳಬೇಕಾಯಿತು.

ಶಂಕರಪ್ಪಗೌಡರು ಸತ್ತರೆಂಬ ಸುದ್ದಿಯನ್ನು ಕೇಳಿದೊಡನೇ ದಾದಾ ಬಿಟ್ಟ ಕೆಲಸವನ್ನು ಬಿಟ್ಟು, ಕುಣಿಯ ಮೇಲೆ ಬಂದು ಕುಳಿತ. ಆವನ ಅಂತಃಕರ ಣಕ್ಕೇ ಬರೆಯಿಟ್ಟಂತಾಗಿತ್ತು. ನಾನಾಕಾಕಾ ಸತ್ತದುಃಖಕ್ಕಿಂತ ಈ ದುಃಖ ಅವ

ಸಿಗೆ ಹೆಚ್ಚಿನದಾಗಿ ಪರಿಣಮಿಸಿತು. ಕುಳಿತಲ್ಲಿಯೇ ನಿಟ್ಟುಸಿರು ಬಿಟ್ಟು ಬಿಕ್ಕಿಬಿಕ್ಕಿ ಅಳಹತ್ತಿದ.

"ಮಕಮೀಸಿ ಬಂದರೂ ಸಣ್ಣ ಹುಡುಗರಾಂಗ ಅಳತೀಯೇನಲೇ ಪ್ಯಾಲಿ? ಆ ಗೌಡೇನ ನಿನ್ನ ಕಾಕಾನs, ಮಾಮಾನs, ಹಿರಿಚಿಗಪ್ಪನ ಮಮ್ಮಗನ? ಅಳಾಕೇನಾತಲೇ?" ಎಂದು ನಿಂಗ ಕೆಣಕಿದ ಮಾತು ಕೂಡ ದಾದಾನಿಗೆ ಕೇಳಿಸಿರಲಿಲ್ಲ. ಅವನು ಸುಮ್ಮನೆ ಶೂನ್ಯಮನಸ್ಕನಾಗಿ ಕುಳಿತುಬಿಟ್ಟ.

ದಾದಾನ ದುಃಖದ ಕಾರಣ ಕೇಳುವದಕ್ಕಾಗಲಿ, ಅವನಿಗೆ ಸಮಾಧಾನದ ನಾಲ್ಕು ಮಾತು ಹೇಳುವದಕ್ಕಾಗಲಿ ಅವನ ಗೆಳೆಯರಿಗೆ ಅವಕಾಶವೇ ಇರಲಿಲ್ಲ. ಇನ್ನೂ ಎರಡು ಹೆಣಗಳಿಗೆ ಮಣ್ಣು ಕೊಡುವ ಕೆಲಸ ಅವರಿಗಾಗಿ ಕಾದಿತ್ತು. ಅವರಲ್ಲಿ ನಾಲ್ವರು ತಟ್ಟನೇ ಇನ್ನೊಂದು ಹೆಣ ತರಲು ಹೊರಟರು. ಉಳಿದ ಮೂವರು ಹಳೆಯ ಗೋರಿಯೊಂದನ್ನು ಅಗಿಯಲು ಪ್ರಾರಂಭಿಸಿದರು.

ಮಲ-ಕಾರಿಕೆಗಳ ಮಡುವಿನಲ್ಲಿ ಹೊರಳಾಡುತ್ತಿದ್ದ ಕೆಂಚನ ಹೆಣವನ್ನು ಹೊತ್ತು ತರುವದು ಅತಿ ಪ್ರಯಾಸದ್ದಾಗಿ ಪರಿಣಮಿಸಿತ್ತು. ಅಂತೆಯೇ ಆಗ ಹೆಣವನ್ನು ತರಲು ಹೋದವರು, ಈಗ ಆ ಕೆಲಸಕ್ಕೆ ಬೇರೆಯವರನ್ನು ಹಚ್ಚಿ ತಾವೀಗ ಗೋರಿಯನ್ನು ಅಗಿಯುವ ಕೆಲಸಕ್ಕೆ ಕೈ ಹಾಕಿದ್ದರು. ಗುದ್ದಲಿಏಟು ಒಂದೇ ಸವನೆ ಬೀಳುತ್ತಿತ್ತು. ಕಲ್ಲೋ, ಲೋಹದ ಚೂರೋ, ಅಸ್ಥಿಪಂಜರವೋ ತಾಕಿದಾಗಷ್ಟು ವಿಚಿತ್ರ ರೀತಿಯ ಸಪ್ಪಳವಾಗುತ್ತಿತ್ತು. ಇಲ್ಲದಿದ್ದರೆ ತಾಳಬದ್ಧವಾಗಿ ಮಂದವಾದ ಗುದ್ದಲಿಯ ಹೊಡೆತವಷ್ಟೇ ಕೇಳಿಸಬೇಕು. ಗೋರಿಯನ್ನು ಅಗಿಯುತ್ತ ಅವರು ಕೆಂಚನ ಬದಲಾಗಿ ಪಡದಪ್ಪನೇ ಸತ್ತಿದ್ದರೆ ಏನಾಗಬಹುದಿತ್ತೆಂಬುದರ ಬಗ್ಗೆ ಊಹಾವಿಲಾಸದಲ್ಲಿ ತೊಡಗಿದ್ದರು. ಪಡದಪ್ಪ ಸತ್ತಿದ್ದರೆ ಊರಿಗೂರೇ ಅಂತ್ಯದರ್ಶನಕ್ಕೆ ಬರಬಹುದಾಗಿತ್ತು. ಆದರೆ ಕೆಂಚ ದಿಕ್ಕಿಲ್ಲದ ಬಡವ, ಮನೆ-ಮಾರು ತೊರೆದ ಬಿಕನಾಶಿ. ಅಂತೆಯೇ ಹೊರುವವಕ್ಕೂ ದಿಕ್ಕುಕಾಣದೆ ಅವನ ಹೆಣ ಸಂಜೆಯ ವರೆಗೆ ಕೊಳೆಯುತ್ತ ಬಿದ್ದಿತ್ತು. ಬಡವರೇನು, ಶ್ರೀಮಂತರೇನು, ಸತ್ತರೆ ಅವರ ಮಣ್ಣಿಗೆ ಎಲ್ಲರೂ ಬರಬೇಕೆಂಬುದು ನಿಂಗನ ವಾದ. ಅದಕ್ಕೆ ಅವನ ಗೆಳೆಯ ರಾಮ, "ಯಾರ ಮುಂದ ಹೇಳತೀಲೇ ಮಾತು? ಈಗ ಹಳೇ ಗೋರಿ ಅಗದು, ಒಂದೇನು, ಎರಡೇನು ಹೆಣಾ ಇಟ್ಟು ಮುಚ್ಚತೀವಿ. ಗೌಡನ ಹೆಣಕ್ಕ ಮಾತ್ರ, ಹೊಸಾ ಗೋರಿ ಅಗದು ತಗೀತಿವಿಲ್ಲೊ? ದೊಡ್ಡವರು, ಸತ್ತರೂ

ದೊಡ್ಡವರು" ಎಂದು ಹೇಳಿ ನಿಂಗನ ಬಾಯಿ ಮುಚ್ಚಿಸಿದ. ದಾದಾನ ಕಿವಿಗೂ ಈ ಮಾತು ಬಿದ್ದು, ಆ ಕ್ಷಣಕ್ಕೆ ಅವನಿಗೆ ಅದು ಸರಿಯೆನಿಸಿತು. ಶಂಕರಪ್ಪಗೌಡರ ದೊಡ್ಡತನದ ಚಿತ್ರ ಅವನ ಕಣ್ಣಿಗೆ ಕಟ್ಟಿತು.

ಹಿಲಾಲಿನ ಬೆಳಕಿನಲ್ಲಿ ಗೋರಿಗಳನ್ನು ಅಗಿಯುವ ಕೆಲಸ ಒಂದೇ ಸವನೆ ನಡೆದಿತ್ತು. ಅಸ್ಥಿಪಂಜರದ ಬಿಡಿ ಬಿಡಿ ಭಾಗಗಳನ್ನು ಹೊರಗೆ ಎಸೆಯುತ್ತಿರುವಾಗ ರಾಮುನ ಕೈಗೆ ಒಂದು ತಲೆಬುರುಡೆ ಸಿಕ್ಕಿತು.

"ಎಲೇ ನಿಂಗಾ, ಇದು ನೋಡಲೇ. ಒಳೇ ದೊಡ್ಡ ಮನಶ್ಯಾನ ತಲೆಬುರುಡಿ ಕಾಣತೈತಿ." ಎಂದು ಒದರಿಕೊಂಡ.

"ದೊಡಮನಸ್ಯಾಂದು ಅಂತ ಅದರ ಮ್ಯಾಗ ಬರದುಗಿರದೈತೇನಲೇ ಮಳ್ಳ? ಸತ್ತ ತಲಿ ಬುರಡಿ ಮ್ಯಾಗಿಂದ ಮನಸ್ಯಾನ ಅಳಿಯಾವ ಕಾಣತೀದಿ ನೀನು" ಎಂದು ನಿಂಗ ಉತ್ತರವಿತ್ತ.

"ನೋಡೆಲ ನೋಡಲೇ ತಲಿ ಬುರಡಿ ಅಳತೀನs. ಇಂಪಾ ಬದಕಿದ್ದಾಗ ಹಮಚೌಕ ಹದನಾರ ಮಳದ ರುಮಾಲಾ ಸುತ್ತತಿರಬೇಕು. ಈಟು ದೊಡ್ಡ ತೆಲೀ ಇದ್ದವರು ಈಗ ಯಾರು ಇದ್ದಾರಾದೀತಪಾ?" ಎಂದು ರಾಮ ಆಶ್ಚರ್ಯವನ್ನು ವ್ಯಕ್ತಗೊಳಿಸಿದ.

"ಹೊರಾಕ ನಾಕ ಮಂದೇನು ಸಾತಿರಾಕಿಲ್ಲ. ಈಗಿನಂಪಾಗs ಆಗೂ ಯಾವದರ ಬ್ಯಾನಿ ಗೀನಿ ಬಂದಿದ್ದರ ಇವನ್ನ ಹೊತ್ತವರ ನಡಾನs ಮುರದಿತ್ತೋ ಏನೋ!" ಎಂದು ನಿಂಗ ನಗೆಯಾಡಿ ಕೈಯೊಳಗಿದ್ದ ಎಲುಬುಗಳನ್ನು ಬಿಸಾಡಿದ.

ಈ ಅಗೆಯುವ ಸಪ್ಪಳದ ಹಿನ್ನೆಲೆಯಲ್ಲಿಯೇ ದಾದಾನ ವಿಚಾರ ಚಕ್ರ ಸಾಗಿತು. ಗೌಡರ ಮರಣದ ವಾರ್ತೆಯನ್ನು ಕೇಳಿ ಅವನ ಕಾರ್ಯೋತ್ಸಾಹವೇ ಅಡಗಿಹೋಗಿತ್ತು.

ಸರಿರಾತ್ರಿಯ ಹೊತ್ತಿಗೆ ಗೌಡರ ಹೆಣವೊಂದು ಬಿಟ್ಟು ಉಳಿದ ಹೆಣಗಳು ಮಣ್ಣು ಕಂಡವು. ಬೆಳಗಿನಿಂದ ಒಂದೇ ಸವನೇ ಗೋರಿಗಳನ್ನು ಅಗೆದಗೆದು, ದಣಿದು ಹೆಣವಾಗಿದ್ದ ಗರಡಿಮನೆಯ ಗಡಿಗಳು ಒಮ್ಮೆ ಉಶ್ಯೆಂದು ನಿಟ್ಟುಸಿರು ಬಿಟ್ಟರು. ಇನ್ನು ಮೇಲೆ ಮನೆಗೆ ಹೋಗಿ ಮಲಗಿಕೊಳ್ಳುವಷ್ಟು ತಾಳ್ಮೆಯೂ ಅವರಲ್ಲಿ ಇರಲಿಲ್ಲ. ಗುದ್ದಲಿಗಳನ್ನೇ ತಲೆದಿಂಬಿಗಿಟ್ಟುಕೊಂಡು, ಗೋರ‍್ಯಾಳದಲ್ಲಿಯೇ ಸುಖನಿದ್ರೆಯಲ್ಲಿ ಪವಡಿಸಿದರು. ಮಧ್ಯರಾತ್ರಿಯ ತಂಗಾಳಿಯ ಚಳಿ ತೀಕ್ಷ್ಣವಾಗಿದ್ದರೂ

ಅವರ ನಿದ್ದೆಗೇನು ಆತಂಕವಾಗಲಿಲ್ಲ. ಸಾವಿನ ದುಃಖವೆಲ್ಲ ಮರೆಗೆ ಸೇರಿದಂತಾಗಿತ್ತು. ರಾತ್ರಿ ಸಮಾಧಾನದಂತೆ ತಂಪಾಗಿತ್ತು. ಉಳಿದವರು ಮಲಗಿದರೂ ದಾದಾನಿಗೆ ನಿದ್ದೆಬರಲಿಲ್ಲ. ಮತ್ತೆಮತ್ತೆ ಶಂಕರೆಪ್ಪಗೌಡರ ದನಿ, ರೂಪ ಅವನ ನೆನಪಿನಲ್ಲಿ ತೇಲಿಬರುತ್ತಿದ್ದವು. ವ್ಯಕ್ತಪಡಿಸಲಾಗದ ವೇದನೆಯೊಂದು ಅವನ ಮೈಮನಸ್ಸುಗಳನ್ನು ಒಂದೇ ಸವನೆ ಗಾಸಿಗೊಳಿಸುತ್ತಿತ್ತು. ತನ್ನ ಸಂಗಡಿಗರೆಲ್ಲ ನಿದ್ದೆಹೋದ ಮೇಲೆ, ಅವನೆದ್ದು ಊರೊಳಗೆ ಗೌಡರ ಮನೆಯಕಡೆಗೆ ನಡೆದ. ಆದರೆ ಅಲ್ಲಿಯೋ ದುಃಖ ಆಕ್ರೋಶಗಳು ಮಹಾಪೂರವಾಗಿ ಹರಿಯುತ್ತಿದ್ದವು. ದೂರದಿಂದಲೇ ಅದನ್ನು ಕಂಡು ಊಹಿಸಿದ ಅವನಿಗೆ ಒಳಗೆ ಅಡಿಯಿಡಲು ಧೈರ್ಯವಾಗಲಿಲ್ಲ. ಹಾಗೆಯೇ ತಿರುಗಿ ಗೋರ್ಯಾಳಕ್ಕೆ ಬಂದು, ಮನಸ್ಸಿನ ದುಃಖವನ್ನೆಲ್ಲ ಮರೆತು ಬಿಡಲು, ಗೌಡರಿಗಾಗಿ ಹೊಸ ಗೋರಿಯನ್ನು ಅಗೆಯತೊಡಗಿದ. ದಾದಾನಿಗೆ ಮೈಮೇಲೆ ಆವೇಶ ಬಂದಂತಾಗಿತ್ತು. ಶಂಕರೆಪ್ಪಗೌಡರಿಗೆ ತಾನು ಮಾಡಬಹುದಾದ ಪ್ರತ್ಯುಪಕಾರವೆಂದರೆ ಇದೇ ಒಂದು, ಎಂದು ಅವನಿಗನಿಸಿತ್ತು. ಅಂತಲೇ ಯಾವ ದಣಿವನ್ನೂ ಲೆಕ್ಕಿಸದೆ ಭೂಮಿಯನ್ನು ಅಗೆಯಹತ್ತಿದ. ಗರಸಿನ ಕಠಿಣ ನೆಲ ಗುದ್ದಲಿಯೇಟಿಗೆ ಒಮ್ಮೆಲೇ ಹಣಿಯುತ್ತಿರಲಿಲ್ಲ. ಆದರೆ ದಾದಾನ ಹಟ ನೆಲದ ಬಿರುಸಿಗಿಂತ ಹೆಚ್ಚು ಬಿರುಸಾಗಿತ್ತು. ಅವನು ಅಗೆಯುವದನ್ನು ಮುಗಿಸಿದಾಗ ಆಗಲೆ ಬೆಳಕು ಹರಿದಿತ್ತು.

ಮರುದಿನ ಅಪರಾಹ್ನದ ವೇಳೆಗೆ ಗೌಡರ ದೇಹ, ಪಾದಳ್ಳಿಯ ಜನರೆಲ್ಲರ ಸಹಾನುಭೂತಿಗಳೊಡನೆ ಅಂತ್ಯ ಸಂಸ್ಕಾರವನ್ನು ಕಂಡಿತು.

* * *

ಪಾದಳ್ಳಿಯಲ್ಲಿ ಕಾಲರಾ ಬೇನೆಯಿಂದ ತೀರಿಕೊಂಡವರಲ್ಲಿ ಗೌಡರದೇ ಕೊನೆಯ ನಂಬರು. ಮರುದಿನ ಹೊಸದಾಗಿ ಊರಲ್ಲಿ ಯಾರಿಗೂ ಕಾಲರಾ ಬರಲಿಲ್ಲ. ಮೊದಲು ಬಂದವರಾರೂ ಸಾಯಲಿಲ್ಲ. ಬಾಳಾಚಾರ್ಯರ ಬೇರಿನ ಮಹಾತ್ಮೆಯೇ ಇರಬೇಕೆಂದು ಕೆಲವರು ಆಡಿಕೊಂಡರು.ಅಂತೂ ಕಾಲರಾ ತನ್ನ ವಿರಾಟದರ್ಶನವನ್ನು ತೋರಿಸಿ ಊರು ಬಿಟ್ಟಿತು. ಆದರೆ ಪಾದಳ್ಳಿಯ ಜೀವನವೆಲ್ಲ ಏನೇನಾಗಿತ್ತೆಂಬುದರ ಅರಿವೇ ಒಬ್ಬರಿಗೂ ಇರಲಿಲ್ಲ. ಪಿಡುಗು ಹೊರಟು ಹೋಗಿ ಊರು ಶಾಂತವಾದ ಮೇಲೆ ನೋಡಿದಾಗ ಅಲ್ಲಿ ಉಳಿದದ್ದೇನು? ದಾಡುಹೊಕ್ಕ ತಾಂಡವನಾಡಿದಂತೆ ಊರಿನ ಜೀವನವೆಲ್ಲ ಉಧ್ವಸ್ತವಾಗಿತ್ತು.

ಊರಿಗೇ ಕೋಟೆಯಾಗಿ ಕಾಯುತ್ತಿದ್ದ ಗೌಡರು ಇಲ್ಲದಂತಾಗಿದ್ದರು. ಕೆಲವು ಜನರೊಡನೆ ಕೆಲವು ಸಮಸ್ಯೆಗಳೂ ಸತ್ತು ಹೋಗಿದ್ದವು ನಿಜ. ಆದರೆ ಈ ಪ್ರಳಯದಲ್ಲಿಯೇ ಕೆಲ ಹೊಸ ಸಮಸ್ಯೆಗಳೂ ಹುಟ್ಟಿಕೊಂಡಿದ್ದವು. ಇನ್ನು ಅವುಗಳ ವಿಚಾರಕ್ಕಾಗಿ ಮತ್ತೆ ಬದುಕಿನ ನಿರಂತರವಾದ ಕಲಹ ಪ್ರಾರಂಭವಾಗಬೇಕಾಗಿತ್ತು.

---

:: ೧೭ ::

ಕಾಲರಾ ಪಿಡುಗಿನಿಂದ ಪಾದಳ್ಳಿಯ ಸಾರ್ವಜನಿಕ ಜೀವನಕ್ಕೆ ಬಲವಾದ ಆಘಾತ ಉಂಟಾಗಿತ್ತು. ಪುತಳಾಬಾಯಿಯ ಮರಣದಿಂದ ಜಾಗೀರದಾರರ ವಾಡೆ ಯಜಮಾನರಿಲ್ಲದಂತಾಗಿತ್ತು; ಗೌಡರ ಮರಣದಿಂದ ಅವರ ಮನೆತನ ನಡು-ನೀರಿನಲ್ಲಿ ಕೈಬಿಟ್ಟಂತಾಗಿತ್ತು. ಈ ಎರಡೂ ಮರಣಗಳ ಫಲವಾಗಿಯೇ ಹೊಸ-ಸಾದ ಮಹತ್ವದ ಸಮಸ್ಯೆಗಳು ಹುಟ್ಟಿಕೊಂಡವು. ಅವುಗಳನ್ನು ಬಗೆಹರಿಸದೆ ಪಾದಳ್ಳಿಯ ಜೀವನ ಮುಂದೆ ಸಾಗುವಂತಿರಲಿಲ್ಲ. ಬಾಳಾಚಾರ್ಯರ ತಲೆಯಮೇಲೆ ಮತ್ತೊಂದು ದೊಡ್ಡ ಜವಾಬ್ದಾರಿ ಬಂದು ಬಿದ್ದಂತಾಗಿತ್ತು. ಮೊಟ್ಟ ಮೊದಲು ಜಾಗೀರದಾರರ ಮನೆತನದ ವ್ಯವಸ್ಥೆಯಾಗಬೇಕಾಗಿತ್ತು. ಲಕ್ಷ್ಮೀಬಾಯಿಯನ್ನು ಕರೆಸಿ ವಾಡೆಯನ್ನು ಅವರ ಪಾಲಿಗೆ ಒಪ್ಪಿಸಿಕೊಟ್ಟು, ಬಾಪೂಸಾಹೇಬನನ್ನು ಊರುಬಿಟ್ಟು ಕಳಿಸಬೇಕಾಗಿತ್ತು. ಆದರೆ ಈ ಅವಧಿಯಲ್ಲಿಯೇ ಎಲ್ಲಿ ಗೌಡರ ಮನೆತನದ ವಾರಸಾ ಪ್ರಕರಣವೂ ತಲೆಯೆತ್ತುವದೋ ಎಂದು ಅವರಿಗೆ ದೊಡ್ಡ ಚಿಂತೆಯುಂಟಾಗಿತ್ತು. ಸಾಯುವಾಗ ಗೌಡರು ಹೇಳಿದ ಮಾತನ್ನು ಅವರು ನಡೆಸಲೇಬೇಕಾಗಿತ್ತು. ಆ ಪ್ರಕಾರ ಗೌಡರ ರೈತರೆಲ್ಲರಿಗೂ ಅವರು ಗೌಡರ ಕೊನೆಯ ಸಂದೇಶವನ್ನು ಮುಟ್ಟಿಸಿದ್ದರು. ಗೌಡರ ಮನೆತನದ ಮರ್ಯಾದೆ-ಯನ್ನು ಪಾದಳ್ಳಿಯ ಮರ್ಯಾದೆಯಂತೆ, ಗೌರವದಿಂದ ನಡೆಸಿಕೊಂಡು ಬರುತ್ತೇ ವೆಂದು ಅವರೂ ಪ್ರತಿಜ್ಞೆ ಮಾಡಿದ್ದರು. ಆದರೆ ದುಷ್ಟಶಕ್ತಿಗಳು ಮರೆಯಲ್ಲಿಯೇ ಸೂತ್ರಗಳನ್ನಾಡಿಸುತ್ತಿದ್ದರೆ?

ಬಾಳಾಚಾರ್ಯರ ಸಂಶಯ ಬಹು ಬೇಗನೇ ನಿಜವಾಯಿತು. ಗೌಡರು ಸತ್ತು ಒಂದು ವಾರವಾಗಿರಬೇಕು. ಒಂದು ದಿನ ಪಡದಯ್ಯನವರು, ಲಿಂಗಪ್ಪನನ್ನು ಕರೆದುಕೊಂಡೇ ಪಾದಳ್ಳಿಗೆ ಕಾಲಿಟ್ಟರು. ಪುತಳಾಬಾಯಿ ಸತ್ತು ಅಂದಿಗೆ ಒಂದು ತಿಂಗಳಾಗಿತ್ತು. ಬಾಪೂಸಾಹೇಬ ಇವರಿಬ್ಬರನ್ನೂ ಎದುರುಗೊಂಡು, ಮೆರವಣಿಗೆ ಯಲ್ಲಿ ಕರೆದುಕೊಂಡು ಬಂದ. ಊರಿಗೆಲ್ಲ ಈ ಸುದ್ದಿ ತಿಳಿಯಬೇಕೆಂದೇ ಆತನು

ಮುಸಲತ್ತು ಮಾಡಿದ್ದರು. ಆ ಮೆರವಣಿಗೆಯ ವಿಶೇಷವೆಂದರೆ ಕುಲಕರ್ಣಿ ಶೇಷಪ್ಪನೂ ಅದರಲ್ಲಿ ಭಾಗವಹಿಸಿದ್ದ. ಬಾಪೂಸಾಹೇಬ ಲಿಂಗಪ್ಪನನ್ನು ತನ್ನ ವಾಡೆಯಲ್ಲಿ ಇಳಿಸಿಕೊಳ್ಳಬೇಕೆಂದು ಆಗ್ರಹಪಟ್ಟರೂ ಸ್ವಾಮಿಗಳು ಕೇಳಲಿಲ್ಲ. ಅವನು ಮಠದಲ್ಲಿಯೇ ಇರುವದು ಯೋಗ್ಯವೆಂದು ಅವರ ಖಂಡಿತವಾದ ಅಭಿಪ್ರಾಯವಾಗಿತ್ತು.

ಬಾಳಾಚಾರ್ಯರ ಕಣ್ಣಿಗೆ ಈ ದೃಶ್ಯವೆಲ್ಲ ಬಿದ್ದು, ಅವರಿಗೆ ಈ ಎಲ್ಲ ಪರಿಸ್ಥಿತಿಯ ಅರ್ಥವಾಯಿತು. ಲಿಂಗಪ್ಪನನ್ನು ಬಾಪೂಸಾಹೇಬ ಸ್ವಾಗತಿಸಿದ ಸಂಗತಿ ಅವರ ದೃಷ್ಟಿಯಲ್ಲಿ ಅರ್ಥಪೂರ್ಣವಾಗಿತ್ತು, ಅನರ್ಥಪೂರ್ಣವೂ ಆಗಿತ್ತು. ಹೆಣದ ಮೇಲೆ ಹೊಂಚುಹಾಕಿ ಕೂಡುವ ಹದ್ದುಕಾಗೆಗಳಂತೆ,ಬಾಪೂಸಾಹೇಬ,ಪಡದಯ್ಯನವರ ಚಲ್ಲಾಟ ಅವರಿಗೆ ಕಂಡಿತು. ಇನ್ನು ತಡಮಾಡಿದರೆ ಕೆಲಸ ಕೈಮೀರುವದೆಂದೆಣಿಸಿ, ಅಂದೇ ರಾತ್ರಿ, ಲಕ್ಷ್ಮೀಬಾಯಿಯನ್ನು ಕರೆತರಲು ಲಕ್ಷ್ಮಣನನ್ನು ಪತ್ರಕೊಟ್ಟು ಇಂದುಪುರಿಗೆ ಅಟ್ಟಿದರು.

ಲಕ್ಷ್ಮೀಬಾಯಿಗೆ ಪಾದಳ್ಳಿಗೆ ಬರಲು ಮೊದಮೊದಲು ಅನುಮಾನವಾಯಿತು. ಹಿಂದಿನ ಅನುಭವವನ್ನು ಅವಳೆಂದೂ ಮರೆಯುವಂತಿರಲಿಲ್ಲ. ಈಗಲೂ ಅದೇ ರೀತಿಯ ಅಪಮಾನ ತನಗಾಗಿ ಸಿದ್ಧವಾಗಿದ್ದರೆ, ಎಂದು ಹೆದರಿಕೆ ಉಂಟಾಯಿತು. ಆದರೆ ರಾಜಪುರೋಹಿತರಿಂದ ಕರೆಬಂದದ್ದರಿಂದ ಇಂಥ ಅನುಮಾನಕ್ಕೆ ಆಸ್ಪದ ಉಳಿಯಲಿಲ್ಲ. ಮರುದಿನ ಸಾಯಂಕಾಲವೇ ಲಕ್ಷ್ಮೀಬಾಯಿ ಪಾದಳ್ಳಿಗೆ ಬಂದಳು. ಅವಳು ತನ್ನ ಪರಿವಾರದೊಡನೆ ನದಿಯ ಆಚೆಯ ದಂಡೆಗೆ ಬಂದಿರುವಳೆಂಬ ಸುದ್ದಿ ಮುಟ್ಟಿತು. ಕೂಡಲೆ ಬಾಳಾಚಾರ್ಯರು, ದಾದಾ ಹಾಗೂ ಇನ್ನಿತರ ಗರಡೀಮನೆಯ ಆಳುಗಳೊಡನೆ ಹೋಗಿ ಲಕ್ಷ್ಮೀಬಾಯಿಯನ್ನು ಸ್ವಾಗತಿಸಿ ಕರೆತಂದರು.

ಈ ಸುದ್ದಿ ಪಾದಳ್ಳಿಯ ತುಂಬ ವ್ಯಾಪಿಸಲು ತಡವೇನೂ ಆಗಲಿಲ್ಲ. ಜಾಗೀರದಾರರ ಮನೆತನ ಮತ್ತೊಮ್ಮೆ ಜನರ ಕುತೂಹಲ ಕೇಂದ್ರವಾಯಿತು. ಲಕ್ಷ್ಮೀಬಾಯಿ ವಾಡೆಗೆ ಹೊರಡಬೇಕೆಂದಾಗ ಮತ್ತೆ ಮೊದಲಿನ ಪರಿಸ್ಥಿತಿಯೇ ಪ್ರಾಪ್ತವಾಯಿತು. ಬಾಪೂಸಾಹೇಬ ಅವರನ್ನು ವಾಡೆಯಲ್ಲಿ ಕಾಲಿಡಗೊಡಲಿಲ್ಲ. ವಾಡೆಯ ತಲೆಬಾಗಿಲು ಮುಚ್ಚಿದ್ದು ತೆರೆಯಲೇ ಇಲ್ಲ, ಅಪಮಾನದಿಂದ ಕುದಿಯುತ್ತ ಲಕ್ಷ್ಮೀಬಾಯಿ ತಿರುಗಬೇಕಾಯಿತು. ಆದರೆ ರಾತ್ರಿಯಾಗಿದ್ದರಿಂದ ತಿರುಗಿ ಇಂದುಪುರಿಗೆ ಅವರು ಹೋಗುವಂತಿರಲಿಲ್ಲ. ಅದಕ್ಕಾಗಿ ಲಕ್ಷ್ಮೀಬಾಯಿಗೆ ಉಳಿದುಕೊಳ್ಳಲು

ಜಾಡಾಚಾರ್ಯರು ತಮ್ಮ ಮನೆಯ ಒಂದು ಭಾಗದಲ್ಲಿ ವ್ಯವಸ್ಥೆ ಮಾಡಿಕೊಡಬೇಕಾ ಯಿತು.

ಜಾಗೀರದಾರರ ಆಸ್ತಿಗೆ ಸೇರಿದ ಭೂಮಿಯೆಲ್ಲ ಇನ್ನೂ ಲಕ್ಷ್ಮೀಬಾಯಿಯ ಖಾತೆಗೆ ಇದ್ದಂತೆ ಸರಕಾರಿ ಲೆಕ್ಕದಿಂದ ಕಂಡುಬರುತ್ತಿತ್ತು. ಆದರೂ ಬಾಪೂ ಸಾಹೇಬ ಜಾಗೀರದಾರರ ಎಲ್ಲ ಭೂಮಿಯನ್ನೂ ಇಪ್ಪತ್ತು ವರ್ಷಗಳ ಕೌಲು ಕರಾರಿನಿಂದ ಹಿಡಿದಿರುವನು ಎಂಬುದಾಗಿ, ಕುಲಕರ್ಣಿ ಶೇಷಪ್ಪನ ಸಹಾಯದಿಂದ ಸರಕಾರಿ ಕಾಗದಪತ್ರಗಳಲ್ಲಿ ಉಲ್ಲೇಖಿಸಿದ್ದು ಬೆಳಕಿಗೆ ಬರಲು ಬಹಳ ದಿನ ಹಿಡಿಯಲಿಲ್ಲ. ಲಕ್ಷ್ಮೀಬಾಯಿ ಬಂದ ದಾರಿಯಿಂದ ನಿರಾಶಳಾಗಿ ತಿರುಗಿ ಹೋಗ ಬೇಕಾಯಿತು.

ಅದರಂತೆಯೇ ಇನ್ನೂ ಒಂದು ರಹಸ್ಯ ಬಯಲಿಗೆ ಬಂದಿತು. ಶಂಕರಪ್ಪ ಗೌಡರ ವಾರಸಾ, ಅವರ ಹಿರಿಯ ಮಗ ಲಿಂಗಪ್ಪ ಶಂಕರಪ್ಪ ಪಾಟೀಲ ಇವರ ಹೆಸರಿನಲ್ಲಿ ಮಾಡಿದ್ದೂ ಕಂಡುಬಂತು. ಗೌಡರ ಮನೆತನಕ್ಕಿದ್ದ ಐನೂರು ಎಕರೆ ಭೂಮಿಯಲ್ಲಿ, ಇನ್ನೂರು ಎಕರೆ ಸ್ವಂತ ಸಾಗುವಳಿಗೆಂದು ಇದ್ದು, ಉಳಿದ ಭೂಮಿ ಯನ್ನು ರೈತರು ಪಾಲಿನಿಂದ ಸಾಗಿಸಿದ್ದರು. ಈ ರೈತರು ಶಂಕರಪ್ಪಗೌಡರ ಒಕ್ಕ ಲಾಗಿ ಇಪ್ಪತ್ತೈದು ವರ್ಷಗಳ ವರೆಗೆ ಭೂಮಿಯನ್ನು ಸಾಗುಮಾಡುತ್ತ ಬಂದವ ರಾಗಿದ್ದರು. ಪಡದಪ್ಪ, ಶೇಷಪ್ಪ ಹಾಗೂ ಬಾಪೂಸಾಹೇಬರು ಈ ರೈತರನ್ನು ಕರೆಸಿ, ಲಿಂಗಪ್ಪನ ಹೆಸರಿನಲ್ಲಿ ಕಬುಲಾಯತಿ ಬರೆದುಕೊಡಲು ಮನವೊಲಿಸಿದರು. ಇಲ್ಲದಿದ್ದರೆ ಭೂಮಿಯನ್ನು ಅವರಿಂದ ಕಿತ್ತುಕೊಳ್ಳುವದಾಗಿ ಗದರಿಸಿದರು. ಆದರೆ ರೈತರು ಅದಕ್ಕೆ ಹೆಣಿಯಲಿಲ್ಲ. ಅವರಿಗಿನ್ನೂ ಗೌಡರ ಮನೆತನದ ಮೇಲಿನ ನಿಷ್ಠೆ ಕಡಿಮೆಯಾಗಿರಲಿಲ್ಲ. ಸಿಡಿಲಿಗೆ ತುತ್ತಾಗಿ ಮರಣಹೊಂದಿದ ಗೌಡರ ಮನೆ ಯವರ ಬಗ್ಗೆ ಅವರಿಗೆ ಅಪಾರವಾದ ಸಹಾನುಭೂತಿಯಿತ್ತು. ಮೇಲಾಗಿ ಸಾಯುವ ದಕ್ಕಿಂತ ಮೊದಲು ಗೌಡರು ಹೇಳಿದ ಮಾತು ಇನ್ನೂ ಅವರ ಹೃದಯದಲ್ಲಿ ನಿನ ದಿಸುತ್ತಿದ್ದವು. ತಮ್ಮಿಂದ ಇಂಥ ಕೆಲಸ ಸಾಧ್ಯವಿಲ್ಲೆಂದು ಅವರು ನಿಷ್ಠುರರಾಗಿ ಹೇಳಿಬಿಟ್ಟರು.

ಗೌಡರು ಸ್ವಂತ ಸಾಗುವಳಿಗೆಂದು ಇಟ್ಟುಕೊಂಡಿದ್ದ ಭೂಮಿಯಲ್ಲಿ, ನದಿ ಸಮೀಪದ ಭಾಗದಲ್ಲಿ ಬೆಳೆ ಚೆನ್ನಾಗಿ ಬಂದಿತ್ತು. ಆ ಭೂಮಿಗಳಲ್ಲಿಯ ಬೆಳೆಯ ಕಬಜಾ ಪಡೆಯಲು, ಪಡದಪ್ಪ, ಬಾಪೂಸಾಹೇಬರ ಸಂಯುಕ್ತದಳವು ಸನ್ನದ್ಧ

ನಾಯಿತು. ರಾಜಕಾರಣದಿಂದ ಕಾರ್ಯ ಸಾಧಿಸದಂತಾಗಲು, ಸುಪ್ತವಾಗಿದ್ದ ಪಶುತ್ವ ಪ್ರಕಟವಾಯಿತು. ಕೆಲವೇ ವಾರಗಳ ಹಿಂದೆ ದಾಳಿಯಿಟ್ಟಿದ್ದ ಕಾಲರಾ ಪಿಡುಗಿನಲ್ಲಿ, ತಂದೆ-ತಾಯಿ- ಅಣ್ಣ-ತಮ್ಮ-ಹೆಂಡತಿ ಹೀಗೆ ಒಬ್ಬರಿಲ್ಲ ಒಬ್ಬರನ್ನು ಕಳೆದುಕೊಂಡು ಮನೆತನವೇ ಮುರಿದು ಹೋದ ದುಃಖದಿಂದ ಶೂನ್ಯಮನಸ್ಕತೆ ಉಂಟಾಗಿತ್ತು. ಯಾರೊಬ್ಬರಿಗೂ ತಾತ್ಪೂರ್ತಿಕವಾಗಿ ಜೀವನದಲ್ಲಿಯ ಉತ್ಸಾಹ ಉಳಿದಿರಲಿಲ್ಲ, ಮರಣದ ದುಃಖ ಎಲ್ಲರಲ್ಲಿಯೂ ಒಂದು ಬೇಸರವನ್ನು ಹುಟ್ಟಿಸಿತ್ತು. ಆ ಬೇಸರವನ್ನು ಕಳೆದುಕೊಳ್ಳಲು, ಲೂಟಿ ಮಾಡಿ, ಬೆಳೆದು ನಿಂತ ಬೆಳೆಯನ್ನು ಕೊಯ್ದು ತರುವ ಉಬ್ಬಿನಲ್ಲಿ ಕಾಟಕರು–ಹೊಲೆಯರು ಕುಡುಗೋಲು ಮಸೆಯ ಹತ್ತಿದರು. ಪಿಡುಗಿನ ದುಃಖ ಜನರಲ್ಲಿಯ ಮನುಷ್ಯತ್ವದ ಬೇರನ್ನೇ ಕೊಯ್ದಿತ್ತು. ಈಗ ಉಳಿದದ್ದು ಹಚ್ಚಹಸಿಯ ಪಶುತ್ವ ಮಾತ್ರ. ಎಲ್ಲವನ್ನೂ ಕಳೆದುಕೊಂಡು ಬರಿದಾದ ಹೃದಯ ಉರಿದೆದ್ದಿತ್ತು. ಪಡದಪ್ಪನಂಥವರು ಅದಕ್ಕೆ ತುಪ್ಪಸುರಿಯಲು ಸಿದ್ಧರಾಗಿ ನಿಂತಿದ್ದರು.

ಬಾಳಾಚಾರ್ಯರು ವಾತಾವರಣದ ಹಿಂದೆ ಹರಡುತ್ತಿದ್ದ ಈ ದಾವಾಗ್ನಿಯನ್ನು ಊಹಿಸಿದರು· ಸೂಕ್ಷ್ಮವಾಗಿ ಆಡುತ್ತಿದ್ದ ಹೊಗೆ ಅವರ ಮೂಗಿಗೆ ತಾಕದೆ ಇರಲಿಲ್ಲ. ಇಂಥ ಹೊತ್ತಿನಲ್ಲಿ ಸುಮ್ಮನಿರುವದು ಅವರಿಗೆ ಸರಿಯೆನಿಸಲಿಲ್ಲ. ಈ ಎಲ್ಲ ಅನರ್ಥಗಳಿಗೂ ಶೇಷಪ್ಪ ಕಾರಣಪುರುಷನೆಂದು ಅವರಿಗೆ ಗೊತ್ತಿತ್ತು. ಅಂತೆಯೇ ತಡಮಾಡದೆ ಅವನ ಮನೆಗೆ ಹೋಗಿ ಅವನನ್ನು ಕಾಣಬಯಸಿದರು. ಶೇಷಪ್ಪ ಮನೆಯಲ್ಲಿಯೇ ಇದ್ದ. ಬಾಳಾಚಾರ್ಯರನ್ನು ಕಂಡೊಡನೆ ಅವರನ್ನು ಸ್ವಾಗತಿಸಿ ಕರೆದು "ಓಹೋ ಏನು ಆಚಾರ್ಯರು ಈಗ ದಯಮಾಡಿಸಿದಿರಿ?" ಎಂದು ಕುಶಲ ಪ್ರಶ್ನೆಯನ್ನೂ ಮಾಡಿದ.

"ಹೀಂಗs, ಊರಗಾರಿಕಿ ಕೆಲಸ ಮೈಮ್ಯಾಲೆ ಬಂದಾಗ, ಊರ ಕುಲಕರ್ಣಿ ನಿನ್ನ ಕಡೆಗೆ ಬರದs ಹ್ಯಾಂಗ ನಡದೀತಪಾ? ಮತ್ತೇನೋ ಕಾಯಕಾ ನಡೆಸೀದೆಲ್ಲಾ!" ಆಚಾರ್ಯರು ಬಂದ ಕಾರಣವನ್ನು ಸಾಕಷ್ಟು ನೇರವಾಗಿಯೇ ಹೇಳಿದರು.

ಶೇಷಪ್ಪ ಇದನ್ನು ಊಹಿಸಿಯೇ ಇದ್ದ. ಆದ್ದರಿಂದಲೇ ಸ್ವಲ್ಪವೂ ವಿಚಲಿತನಾಗದೆ, ನಶ್ಯದ ಚಿಟಿಕೆಯನ್ನೇರಿಸಿ, "ಎಲ್ಲೀ ಕಾಯಕ ಆಚಾರ‍್ರ. ಊರ ಪಂಚರು ನೀವು ಇರೋಮುಂದ ನಮ್ಮ ಹಿರೇತನಕ್ಕ ಬೆಂಕೀ ಹಚ್ಚಿದರsಸೈ. ಇನ್ನೇನರೆಪಾ,

ತಂದೀ ವಾರಸಾ ಮಗಗ ಆಗಬೇಕಾದದ್ದು ನ್ಯಾಯ ಅಂತ ಕಾಯದೇನs ಹೇಳ ತದ. ತಂದೀ ಆಸ್ತಿ ಮಗನದು. ಅದನ್ನ ಅವಾ ತೊಗೋತೀನಿ ಅಂತ ಹೇಳಿದರ ಕಾಯದೇ ಪ್ರಕಾರ ಅವನಗೆಷ್ಟು ಬರಬೇಕೂ ಅಷ್ಟು ಕೊಡಸೋದು ನಮ್ಮ ಧರ್ಮ. ರೀತೀ ಪ್ರಕಾರ ಪಾರ್ವತೆವ್ವ ತನ್ನ ಭೂಮಿಯೊಳಗ ೩ ಪಾಲು ಲಿಂಗಪ್ಪಗ ಕೊಡಬೇಕು. ಖರೇವಂದ್ರ ನೀವs ಆಕೀಗೆ ಈ ಮಾತು ತಿಳಿಸಿ ಹೇಳಬೇಕು. ನನ್ನ ಮಾತು ಆಕಿ ಕೇಳತಿದ್ದರ, ಇದs ಮಾತು ಸ್ಪಷ್ಟವಾಗಿ ಆಕೀಗೆ ಹೇಳಿಬಿಡತಿದ್ದೆ. ಇದರಾಗ ಅಂಥಾ ಅನ್ಯಾಯ ನಿಮಗೇನು ಕಂಡಿತರೆಪಾ?" ಎಂದು ಸಾಕಷ್ಟು ಕೊಂಕು ಬೆರೆಸಿಯೇ ಕೇಳಿದ.

"ಮಾತು ಕಲೀಬೇಕು ನೋಡೋ ನಿನ್ನಿಂದನs ! ಅಲ್ಲೋ ಶೇಷಪ್ಪ, ಆ ಲಿಂಗಪ್ಪ, ಶಂಕರಪ್ಪನ ಮಗನs ಅಂಬೋವರ್ಹಾಂಗ ಮಾತಾಡತೀಯಲ್ಲಾ ? ಗೌಡ ತನ್ನ ಹೇಣತಿಗೆ ಸೋಡಚೀಟಿ ಕೊಟ್ಟ ಎಷ್ಟೋ ದಿನದ ಮ್ಯಾಲೆ ಈ ಲಿಂಗಪ್ಪ ಹುಟ್ಟಿದ. ಇದು ಗೊತ್ತಿದ್ದೂ, ಗೊತ್ತಿಲ್ಲದವನ್ಹಾಂಗ ನನಗs ತಿಳಿಸಿ ಹೇಳತೀಯಲಾ ?"

"ಅದೂ ಖರೇ ಅನ್ರಿ ಆಚಾರs ! ಆದರ ಕಾಯದೇದ್ದೊಂದು ಗೊಂದಲ ಇರತದ ನೋಡ್ರಿ. ಜನನ ರಜಿಸ್ಟರದ ಉತಾರ ತಂದು ಹಾಜರ ಮಾಡಿ, ವಾರಸಾ ಮಾಡಿಕೊಳ್ಳಲಿಕ್ಕೆ ವರದಿಕೊಟ್ಟಾಗ ನನ್ನ ಬಾಯಿ ಕಟ್ಟತದ ನೋಡ್ರಿ" ಎಂದು ಶೇಷಪ್ಪ ಮತ್ತೆ ವಾದಿಸಿದ.

"ಜನನ ರಜಿಸ್ಟರದ ಉತಾರ ನಿನ್ನ ಬಾಯಿ ಕಟ್ಟಿಲ್ಲ. ಅವನ ಸಲುವಾಗಿ ಬಾಪೂಸಾಹೇಬ ಕೊಟ್ಟ ದುಡ್ಡು ನಿನ್ನ ಬಾಯಿ ಕಟ್ಟೀದ. ಇಕಾ, ನೀ ನಮ್ಮಾವ ಅಂತ ಒಂದು ಮಾತು ಹೇಳಲಿಕ್ಕೆ ಬಂದೀನಿ. ಈಗ ಹುಟ್ಟಿದ ನ್ಯಾಯಾನs ಸಾಕಾಗೇದ. ಈಗ ಮತ್ತೊಂದು ಕಿತಬೀ ಎಬ್ಬಿಸಬ್ಯಾಡಾ. ಗೌಡರ ಮನೆತನಾ ಈಗ ಆಧಾರ ತಪ್ಪಿತೂ ಅಂತ, ಸುಡೂ ಮನೀ ಗಳಾ ಹಿರಿಯೋ ಕೆಲಸ ಒಳ್ಳೇದಲ್ಲ" ಬಾಳಾಚಾರ್ಯರ ಮಾತಿನಲ್ಲಿ ಅಂತಃಕರಣದ ವೇದನೆಯಿತ್ತು.

ಬಾಳಾಚಾರ್ಯರ ವಾಗ್ಬಾಣಗಳಿಂದ ಕುಲಕರ್ಣಿ ಶೇಷಪ್ಪ ನಿರುತ್ತರನಾದ. ಅವನಿಗೇನು ಹಾವಳ್ಳಿಯಲ್ಲಿ ಅರಾಜಕತೆ ಹುಟ್ಟಬಹುದೆಂಬುದರ ಬಗ್ಗೆ ನೋವಾಗಿರಲಿಲ್ಲ. ಆದರೆ ತಾನು ಬಾಪೂಸಾಹೇಬನಿಂದ ದುಡ್ಡು ತಿಂದಿರುವ ಮಾತನ್ನು ಕೇಳಿ ನಿರುತ್ತರನಾದ. ಈ ರಹಸ್ಯಸ್ಫೋಟ ಅನಿರೀಕ್ಷಿತವಾಗಿತ್ತು. ಆದ್ದರಿಂದಲೇ

ಅವನು ಅಸಾಕ್ಷ್ಯಾದ. ಆದರೆ ತಾನು ಇದಕ್ಕೆ ಸುಮ್ಮನಿದ್ದರೆ, ಆಚಾರ್ಯರು ಆ ಮೌನಕ್ಕೆ ವಿಪರೀತ ಅರ್ಥ ಕಲ್ಪಿಸಿ, ಅದನ್ನು ನಿಜವೆಂದೇ ಎಲ್ಲಿ ಸಾಧಿಸುವರೋ ಎಂದು ಹೆದರಿದ. ಅಂತಲೇ ಹುಚ್ಚುನಗೆ ತಂದುಕೊಂಡು "ಆಚಾರ್ರ ಈಗ ಆ ಬಾಪೂಸಾಹೇಬ ನಾನಾನ ದುರ್ಮರಣ ಆದಾಗಿನ ಬಾಪೂಸಾಹೇಬ ಅಲ್ಲ. ಅಂವಾ ಈಗ, ಫೌಜದಾರ-ಮಾಮಲೇದಾರರನ್ನ ಕಿಸೇದೊಳಗ ಇಟಗೊಂಡ ಪಡ ದಪ್ಪನ ಶಿಷ್ಯಾ. ಇಂಥಾವಾ ನನ್ನಂಥ ಒಕ್ಕ್ಯಾಡೋ ಕುಲಕರ್ಣೀಗೆ ಕೈ ಸಡಲು ಬಿಡತಾನಂತ ತಿಳಿದೀರೇನು? ಅಲ್ಲಾ, ಕಾಣಾಕಾಣಾ ನನ್ನ ಮ್ಯಾಲೆ ಅಪವಾದಾ ಹೊರಸಲಿಕ್ಕೆ ಬರತೀರೆಲ್ಲ?" ಎಂದು ಹೇಳಿ ಪ್ರಶ್ನಾರ್ಥಕ ದೃಷ್ಟಿಯಿಂದ ಆಚಾರ್ಯ ರನ್ನು ನೋಡಿದನು.

"ಇದೆಲ್ಲಾ ಫಂಟತನದ ಮಾತು ಬಿಟ್ಟುಬಿಡು ಶೇಷಪ್ಪ. ಪಡದಪ್ಪ ಹಾರ್‍ಯಾಡುದು ನೀ ಅವನ ಬಾಲಾಗಸಿ ಆಗಿದ್ದರಿಂದ. ಬಾಪೂಸಾಹೇಬ ಅವನ ಶಿಷ್ಯಾ ಆದದ್ದು, ನಿನ್ನ ಬೆಂಬಲ ಪಡದಪ್ಪಗ ಅದಕ ಅಂತ. ಲಿಂಗಪ್ಪಗ ಗೌಡಕಿ ಕೊಡಿಸಿ, ನೀ ಸ್ವತಂತ್ರ ಆಗಬೇಕೂ ಅಂತ ಈ ಆಟಾ ನೀ ಹೂಡಿದಿ. ನೋಡು ವಿಚಾರ ಮಾಡು. ಬಾಪೂಸಾಹೇಬನ ರೊಕ್ಕ, ಈ ಪಡದಪ್ಪನ ಲೆಕ್ಕ ಎಲ್ಲಾ ವ್ಯರ್ಥ ಆಗೋ ಕಾಲ ಬಂದೀತು."

ಬಾಳಾಚಾರ್ಯರು ಎಚ್ಚರಿಕೆಯನ್ನು ಉಸುರಿದರು. ಆದರೆ ಶೇಷಪ್ಪ ತುಟಿ ಬಿಗಿದುಕೊಂಡು ಹಟದಿಂದಲೇ ಸುಮ್ಮನೆ ಕುಳಿತ. ಮಾತು ಬೆಳಿಸಿದರೆ ಆಚಾ ರ್ಯರ ವಾದಕ್ಕೀಡಾಗಿ ಸೋಲುವಂತಾಗುತ್ತಿತ್ತು. ತನ್ನ ರಾಜಕಾರಣದ ಪ್ರಯತ್ನ ಗಳೆಲ್ಲ ಫಲವಾಗಲು ಈಗ ಒಳ್ಳೆಯ ಸಂಧಿ ದೊರಕಿದಂತಾಗಿತ್ತು. ಅಂಥದರಲ್ಲಿ ಆಚಾರ್ಯರ ಮಾತು ಕೇಳಿಕೊಂಡು ಸುಮ್ಮನಿರುವದು ಅವನ ಮನಸ್ಸಿಗೆ ಬಂದಿರಲಿಲ್ಲ.

ಆಚಾರ್ಯರಿಗೆ ಈ ಮೌನದ, ಈ ಬಿಗುಮಾನದ ಅರ್ಥವಾಯಿತು. ಶೇಷಪ್ಪನ ಮಾತಿನಲ್ಲಿ 'ನನ್ನ ದಾರಿಗೆ ನೀವು ಬರಬಾರದು' ಎಂಬ ಮಾತಿನ ಅರ್ಥವನ್ನು ಅವರು ಕಂಡುಕೊಂಡಿದ್ದರು. ಆದ್ದರಿಂದಲೇ ಹೆಚ್ಚು ಮಾತಾಡಲು ಬಯಸದೆ, "ಬರತೀನಿ ಶೇಷಪ್ಪಾ" ಎಂದಿಷ್ಟೇ ಹೇಳಿ ಅಲ್ಲಿಂದ ಹೊರಬಿದ್ದರು.

## :: ೧೮ ::

ಭಾರತಹುಣ್ಣಿವೆಯ ತುಂಬಿದ ಬೆಳುದಿಂಗಳಿನ ರಾತ್ರಿ. ದಾದಾ ಹೊಲದಲ್ಲಿ ಜೋಳದ ಇಕ್ಕಲ, ಗೋದಿಯ ಹುಲ್ಲು, ಕಡಲೆಯ ಚಟ್ಟ ಇವುಗಳ ಸಮೀಪದಲ್ಲಿ ಕುಳಿತು ಆಕಾಶವನ್ನು ನೋಡುತ್ತಿದ್ದ. ಅವನು ಹೊತ್ತ ದಪ್ಪವಾದ ಕಂಬಳಿಯ ಮುಸುಕಿನೊಳಗಿಂದಲೂ ಚಳಿಗಾಲದ ಗಾಳಿ ಮೈನಡುಗಿಸುತ್ತಿತ್ತು. ರಾತ್ರಿಯ ಹೊತ್ತು ನಿದ್ದೆಯನ್ನು ಬಿಟ್ಟು ಹೊಲವನ್ನು ಕಾಯಬೇಕಾದ್ದರಿಂದ ಅವನ ಮನಸ್ಸು ಅನೇಕ ವಿಚಾರಗಳಲ್ಲಿ ದಂಗಾಗಿತ್ತು. ಒಮ್ಮೆ ತುಂಬಿದ ಚಂದ್ರಾಮನನ್ನು ನೋಡುತ್ತಿದ್ದ; ಒಮ್ಮೆ ದಿಗಂತವನ್ನೆಲ್ಲ ವ್ಯಾಪಿಸಿ, ತುಳುಕಿ ಹೊಲದ ಮೈಪಡವುತ್ತಿದ್ದ ಬೆಳದಿಂಗಳನ್ನು ಸಾವಕಾಶವಾಗಿ ಪರೀಕ್ಷಿಸುತ್ತಿದ್ದ. ನೆಲಕ್ಕೆ ನೆಲವೇ ಬೆಳುದಿಂಗಳ ಮಾಯೆಯಲ್ಲಿ ನಿದ್ದೆ ಹೋದಂತಿತ್ತು. ಕಾರಣವಿಲ್ಲದೆ ಅವನ ಮನಸ್ಸು ಅಂದು ನಾನಾಕಾಕಾ ಸತ್ತದಿನ ತಾನೂ ಅಜರಾಣಿಯ ಹನುಮಂತ ದೇವರ ಗುಡಿಯಲ್ಲಿ ಏಕಾಕಿಯಾಗಿ ನಸುಕಿನ ಮುಗಿಲನ್ನು ನೋಡಿದ್ದನ್ನು ನೆನೆಯಿತು. ಅಂದು ಆಕಾಶದಲ್ಲಿ ಅಸಂಖ್ಯ ನಕ್ಷತ್ರಗಳು ಹೊಳೆಯುತ್ತಿದ್ದವು. ಆದರೆ ಅವೆಲ್ಲ ಇಂದು ಬೆಳುದಿಂಗಳ ಕಡಲಿನಲ್ಲಿ ಮುಳುಗಿ ಹೋಗಿದ್ದವು. ಕೂತು ಕೂತು ದಾದಾನಿಗೆ ಬೇಸರಾಯಿತು. ಒಂದು ದೊಡ್ಡಾಟದ ಹಾಡನ್ನು ತುಟಿಯಲ್ಲಿಯೇ ಗುಣಗುಣಿಸುತ್ತ ಜೋಳದ ಇಕ್ಕಲದ ಕಡೆಗೆ ಹೋದ. ಬೆಳ್ಳಗೆ ನೀರು ತುಂಬಿದ ಮಡುವಿನಲ್ಲಿ ಕಪ್ಪುಬಣ್ಣದ ಎಮ್ಮೆಯೊಂದು ಮಲಗಿದಂತೆ, ಆ ಇಕ್ಕಲದ ನೆರಳು ಬಿದ್ದ ಭಾಗ ಅವನಿಗೆ ಕಂಡಿತು. ಅಲ್ಲಿ ಹೋಗಿ ಸುಮ್ಮನೆ ನಿಂತುಬಿಟ್ಟ.

ಈ ಅನುಭವವೆಲ್ಲ ಅವನಿಗೆ ತೀರ ಹೊಸತು. ಗರಡೀ ಮನೆಬಿಟ್ಟು ರಾತ್ರಿಯಲ್ಲಿ ಏಕಾಕಿಯಾಗಿ ಹೊಲದಲ್ಲಿ ನಿಲ್ಲುವ ಪ್ರಸಂಗ ಹಿಂದೆ ಎಂದೂ ಅವನಿಗೆ ಬಂದಿರಲಿಲ್ಲ. ಸುಗ್ಗಿಯ ಕಾಲದಲ್ಲಿ ನಾನಾಕಾಕಾ, ಅವನಿಲ್ಲದಿದ್ದರೆ ಲಕ್ಷ್ಮಣ ಹೊಲದ ಕಾವಲಿಗಾಗಿ ನಿಲ್ಲುತ್ತಿದ್ದರು. ಲಕ್ಷ್ಮೀಬಾಯಿಯನ್ನು ಕಳಿಸಿದಾಗಲು

ಲಕ್ಷ್ಮಣ ಇಂದುಪುರಕ್ಕೆ ಹೋದನೆಂದು, ಆ ಕೆಲಸ ಈಗ ದಾದಾನ ಪಾಲಿಗೆ ಬಿದ್ದಿತ್ತು. ಈ ಹೊಲ ಬಾಪೂಸಾಹೇಬನಿಂದ ನಾನಾ ಲಾವಣಿಗೆ ಹಿಡಿದಿದ್ದ.ಅನನು ತೀರಿಕೊಂಡನಂತರ ಲಕ್ಷ್ಮಣನಿಗೆ ಪಂಚರು ಈ ಹೊಲವನ್ನು ಒಪ್ಪಿಸಿದ್ದರು. ಸುಗ್ಗಿಯ ತಲೆಯ ಮೇಲೆ, ಚಿಮಣಾಳನ್ನು ಮುಂದೆ ಮಾಡಿ, ಬಾಪೂಸಾಹೇಬ ಹೊಲದಲ್ಲಿಯ ಪೀಕನ್ನೆಲ್ಲ ತಾನೇ ಒಯ್ಯಲು ಹೊಂಚು ಹಾಕಿದ ಸುದ್ದಿ ಲಕ್ಷ್ಮಣನಿಗೆ ತಿಳಿದಿತ್ತು. ತಾನು ಊರಲ್ಲಿಲ್ಲದಾಗ, ನದಿಯ ಬುಡದ ಹೊಲದಲ್ಲಿ ಬೆಳೆದ ವರ್ಷದ ಗಂಜಿ, ಬಾಪೂಸಾಹೇಬನ ಪಾಲಾಗಬಾರದೆಂಬ ಮುಂದಾಲೋಚನೆ ಯಿಂದ ಲಕ್ಷ್ಮಣ ಜೋಳವನ್ನು ಕಿತ್ತಿ ಇಕ್ಕಲು ಹಾಕಿದ್ದನು. ಅದರಂತೆ ಬೇರೆ ಹೊಲಗಳಲ್ಲಿ ಬೆಳೆದ ಗೋದಿ, ಕಡಲೆಗಳು ಒತ್ತಟ್ಟಿಗಿದ್ದರೆ ಕಾವಲಿಗೆ ಒಳ್ಳೆಯ ದೆಂದು, ಇದೇ ಹೊಲದಲ್ಲಿ ಕಣ ಮಾಡುವ ಸ್ಥಳದಲ್ಲಿ ತಂದು ಒಟ್ಟಿದ್ದನು. ಊರಿಗೆ ಹೊರಡುವಾಗ "ದಾದಾ ಹೊಲದ ನ್ಯಾಗ ನಜರ ಇರಲಿ. ನಾ ತಿರುಗಿ ಬರೂ ಮಟ ಗರಡೀಮನೀಗೆ ಹೋಗಬ್ಯಾಡ. ಹೊತ್ತುಮುಳುಗಿ ಹೊತ್ತು ಹೊಂಡೂ ತನಾ, ಹೊಲಾ ಬಿಟ್ಟು ಎಲ್ಲ್ಯೂ ಹೋಗಬ್ಯಾಡ" ಎಂದು ತಾಕೀತು ಮಾಡಿದ್ದನು. ಆದರೆ ಈ ರೀತಿ ಕಾವಲು ನಿಲ್ಲುವ ಕಾರಣವನ್ನು ಮಾತ್ರ ಬೇಕೆಂತಲೇ ದಾದಾನಿಗೆ ತಿಳಿಸಿರಲಿಲ್ಲ. ದಾದಾನಿಗೂ ಆಗ ಕಾರಣವನ್ನು ಕೇಳಬೇಕೆಂದು ಹೊಳೆದಿರಲಿಲ್ಲ. ತಂದೆಯ ಮಾತಿನಂತೆ ಹೊಲದಲ್ಲಿ ಬಂದು ಕಾವಲು ನಿಂತಿದ್ದ ಅಷ್ಟೇ.

ದಾದಾ ಜೋಳದ ಇಕ್ಕಲುಗಳನ್ನೆಲ್ಲ ಸುತ್ತುಹಾಕಿ, ಕಣ ಮಾಡುವ ಸ್ಥಳದ ಹತ್ತಿರ ಬಂದು ಕಡಲೆಯ ಚಟ್ಟದ ಬದಿಗೆ ಬಂದು ಕೂತನು. ಒಲೆಯಲ್ಲಿ ಹೊತ್ತಿದ್ದ ಕುಳ್ಳಿಗೆ ಗಾಳಿಯಾಡಿ ಬೆಂಕಿ ಹತ್ತಿದ್ದು ಕಂಡು ಬಂತು. ಸುಮ್ಮನೆ ಕುಳಿತು ಮಾಡುವದಾದರೂ ಏನು? ಕಡಲೆಯ ಚಟ್ಟದಲ್ಲಿ ಒಂದು ಹಿಡಿ ಸುಟ್ಟು ಹುರಿ ಬುಡ್ಡಿ ತಿನ್ನುತ್ತ ಕುಳಿತರಾಯಿತೆಂದು, ಚಟ್ಟವನ್ನು ಸುಟ್ಟು ಒಂದೊಂದೇ ಬುಡ್ಡಿ ಯನ್ನು ಸುಲಿದು ಕಡಲೆಯ ಕಾಳನ್ನು ಮೆಲುಕಾಡಿಸುತ್ತ ಕುಳಿತುಕೊಂಡನು. ಚಂದ್ರ ಆಗಲೇ ನೆತ್ತಿಯ ಮೇಲೇರಿದ್ದನು. ದಾದಾನ ಮನಸ್ಸೂ ಈ ತಿನ್ನುವ ಕೆಲಸದಿಂದ ಅರ್ಧ ತನ್ನ ಬೇಸರವನ್ನು ಕಳೆದುಕೊಂಡಿತ್ತು. ಅಷ್ಟರಲ್ಲಿ ಒಮ್ಮೆಲೇ ಹಿಂತಿರುಗಿ ನೋಡಿದ. ದೂರದಲ್ಲಿ ಯಾರೋ ಗುಜುಗುಜು ಮಾತಾಡಿದಂತೆ ಕೇಳಿಸಿತು. ಆದರೆ ಗಾಳಿಯ ದಿಕ್ಕು ಒಮ್ಮೆಲೇ ಬದಲಾದ್ದರಿಂದಲೋ ಏನೋ, ಅದು ಕೇಳಿ ಮತ್ತೆ ಅಡಗಿತು. ಕಣ್ಣಿಗೆ ಯಾರೂ ಕಾಣಲಿಲ್ಲ. ಇಂಥ ಸರಿರಾತ್ರಿ

ಯಲ್ಲಿ, ಊರು ಬಿಟ್ಟು ಎರಡು ಮೈಲು ಅಂತರವಿರುವ ಈ ಸ್ಥಳಕ್ಕೆ ಯಾರು ಬಾದಾರು ಎಂದು ನಕ್ಕು ಮತ್ತೆ ಕಡಲೆಯ ಬುಡ್ಡಿಯನ್ನು ಸುಲಿದು ತಿನ್ನುವದರಲ್ಲಿ ಮಗ್ನನಾದನು.

ಮುಂದೆ ಕೆಲನಿಮಿಷಗಳು ಕಳೆದಿರಬಹುದು. ಮತ್ತೆ ಅದೇ ಸಪ್ಪಳ. ಈ ಸಾರೆ ಕಾಲಹೆಜ್ಜೆಯ ಸಪ್ಪಳದೊಂದಿಗೆ ಕೂಡಿಕೊಂಡು ದಕ್ಷಿಣ ದಿಕ್ಕಿಗಿರುವ ಹಳ್ಳದಿಂದ ಕೇಳಿ ಬಂತು. ದಾದಾ ಆ ಕಡೆಗೇ ನಿಟ್ಟಿಸಿ ನೋಡಹತ್ತಿದ. ಕಾವಲುಗಾರನ ಭಯ ಅವನಲ್ಲಿಯೂ ತುಂಬಿತ್ತು. ಮೂವರು ಆ ಹಳ್ಳದಿಂದ ತಾನು ಕುಳಿತಲ್ಲಿಗೆ ಬರುತ್ತಿದ್ದುದು, ಚಂದ್ರನ ಬೆಳಕಿನಲ್ಲಿ ಅವರು ಹೊತ್ತ ಕಂಬಳಿಗಳಿಂದ ಕಂಡುಬಂದಿತು. ಕಡಲೆಯ ಚಟ್ಟವನ್ನು ಕದ್ದುಕೊಂಡು ಹೋಗಲು ಯಾರಾದರೂ ಬಂದಿರುವರೆಂದೇ ಅವನ ತರ್ಕ. ಬರಲಿ, ತನ್ನ ಚಪಗೊಡ್ಡಿಯ ಸವಿಯನ್ನು ಅವರಿಗೆ ತೋರಿಸುವೆನೆಂದುಕೊಂಡು, ದಾದಾ ಚಪಗೊಡ್ಡಿಯನ್ನು ಕೈಯಿಂದ ಸವರಿ ಅವರು ಬರುವದನ್ನೇ ಕಾಯುತ್ತ ಕುಳಿತುಕೊಂಡ. ತಾನು ಅವರ ಕಣ್ಣಿಗೆ ಬೀಳದಿರಲಿ ಎಂದುಕೊಂಡು ಗೋದಿಯ ಹುಲ್ಲಿನ ಮರೆಗೆ ಅಡಗಿಕೊಂಡ. ಆಗಂತುಕತ್ರಯರು ನೇರವಾಗಿ ಅಲ್ಲಿಗೇ ಬಂದರು. ಅಲ್ಲಿ ನಿಂತು ಅತ್ತಿತ್ತ ನೋಡಿದರು. "ದಾದಾ ಇಲ್ಲಿ ಇಲ್ಲ ಕಾಣತತಿ" ಎಂದೊಬ್ಬ ನುಡಿದ.

"ಹಾಗಾರ ನೆಟ್ಟಗಾತಲೇ" ಇನ್ನೊಬ್ಬನು ಧ್ವನಿ ತೆಗೆದ.

"ಇರದs ಎಲ್ಲೆ ಹೋಗತಾನೋ? ಇಕ್ಕಲದ ಹತ್ತರ ಮನಕೊಂಡಿರಬೇಕು?" ಎಂದು ಇನ್ನೊಬ್ಬ ಎಚ್ಚರಿಕೆ ಕೊಟ್ಟ.

ಉಸಿರಾಡಿಸಿದರೆ ತಾನು ಅಲ್ಲಿದ್ದದ್ದು ಅವರಿಗೆ ತಿಳಿಯಬಹುದೆಂದು, ದಾದಾ ಉಸಿರು ಬಿಗಿ ಹಿಡಿದು, ಬೇಟೆಗಾಗಿ ಜಪ್ಪಿಸಿ ಕುಳಿತ ಹುಲಿಯಂತೆ ಕಣ್ಣು ಪಿಳುಕಿಸದೆ ಅವರನ್ನು ನೋಡುತ್ತ ಕುಳಿತಿದ್ದ.

ಆ ಮೂವರಲ್ಲಿ ಒಬ್ಬನು ಗೋದಿಯ ಹುಲ್ಲಿನ ಗುಂಪಿಯ ಸುತ್ತುಹಾಯ್ದು, ದಾದಾನ ಹಿಂದೆ ಬಂದು ನಿಂತಾಗ ದಾದಾ ಹೊರಳಿದವನೇ ಅವನಿಗೆ "ಯಾರ ನೀನು?" ಎಂದು ಗುಡುಗು ಹಾಕಿ ಕೇಳಿದ.

ಆ ವ್ಯಕ್ತಿ ಚಪ್ಪಾಳೆ ಹೊಡೆದು, ಬಯಲೆಲ್ಲ ವ್ಯಾಪಿಸುವಂತೆ ಗಟ್ಟಿಯಾಗಿ ನಗುತ್ತ. "ಬಾರಾ ಇಲ್ಲೆ ಕುಂತೈತಿ ಬರ್‍ರ್ರೋ" ಎಂದು ಕೂಗಿಕೊಂಡ. ಅವನ ಸಂಗಡಿಗರೂ ಅಲ್ಲಿಗೆ ಬಂದರು. ಅವನು ಗಟ್ಟಿಯಾಗಿ ಕೂಗಿದಾಗಲೇ ದಾದಾ

ನಿಗೆ ಅವನ ದನಿಯು ಗುರುತು ಹತ್ತಿತು. ಆಗ ತಾನೂ ನಗುತ್ತ ಎದ್ದು ನಿಂತು, "ಈ ಕಂಬಳಿ ಮುಸುಕು ಹಾಕ್ಕೊಂಡು ತುಡುಗಿಗೆ ಹೊಂಟವರ್ಹಾಂಗ ಹೀಗ್ಯಾಕ ಹೊಂಟೀರಲೇ ಮಕ್ಕಳ್ರ್ಯಾ?" ಎಂದು ಕೇಳಿದ.

"ತುಡುಗಿಗೆ ಹೊಂಟವರ ಸಂಗಾಟ ನಾವು ಸೇರಿ ಹೊಂಟೆವೆಂತಃ, ಅವರ ಹಾಗಃ ಗೊಂಗಡೀ ಹೊತ್ತೀವು. ತಿಳೀತೇನ್ ದಾದಾ ?" ಎಂದು ಹಿರೇ ಕುರುಬ ನಿಂಗ ದಾದಾನ ಬೆನ್ನು ತಟ್ಟಿ ಹೇಳಿದ.

ದಾದಾನಿಗೆ ಏನೂ ತಿಳಿದಿರಲಿಲ್ಲ. ಆದರೆ ಇವರ ಚೇಷ್ಟೆ, ಸರಿ ರಾತ್ರಿಯಲ್ಲಿ ಇವರು ಹೊರಟದ್ದು, ಅವರ ಕಂಬಳಿ ಮುಸುಕಿನ ವೇಷ, ಇವರಾಡಿದ ತುಡುಗಿನ ಸುದ್ದಿ ಅವನಲ್ಲಿಯೂ ಕುತೂಹಲವನ್ನು ಕೆರಳಿಸಿದವು. "ಏನ ಹೇಳಬಾರದಃ ಗಡಾನಃ ?" ಎಂದು ಆತುರದಿಂದ ಕೇಳಿದ.

"ನೋಡ ದಾದಾ, ಇಂದ ಊರಿಗೆ ಊರ್ಃ ಗೌಡರ ಹೊಲಾ ಲೂಟಿ ಮಾಡಲಾಕ ಹೊಂಟೈತಿ: ಪಡದಪ್ಪನೋರು ಈಟೆಲ್ಲ ಮಂದಿನ್ನ ಗೋಳೇ ಹಾಕಿ, ಹೊಲದಾಗಿನ ಬದಕ ಕಳವ ಮಾಡಲಾಕ ಕಳಿಸ್ಯಾರು" ಎಂದು ನಿಂಗ ಪರಿಸ್ಥಿತಿ ಯನ್ನು ನಿವೇದಿಸಿದ.

ಅಂದಿನ ಸಂಜೆಯೇ ಪಡದಪ್ಪನವರು ಹುಲಿಬ್ಯಾಟಿ ಹಳಬರನ್ನು ಮನೆ ಮನೆಗೆ ಕಳಿಸಿ ಜನರನ್ನೆಲ್ಲ ವಾಡೆಗೆ ಕರೆಸಿಕೊಂಡಿದ್ದರು. ಅವರಿಗೆಲ್ಲ "ಲಿಂಗಪ್ಪ ಗೌಡರು ಇನ್ನ ಮ್ಯಾಗ ಊರ ಗೌಡರಾಕ್ಕಾರು. ಅವರ ಬೂಮ್ಯಾಗ ಬೆಳದ ಬದುಕು ಅವರದು. ಅದನ ಪಾರ್ವತೆವ್ವನೋರು ಸೂಸೂತ್ರ ಕೊಡಾಣಿಲ್ಲ. ಅಂತಃ, ನೀವೆಲ್ಲ ಹೋಗಿ ಆ ಬದಕ ತಂದು ಲಿಂಗಪ್ಪಗೌಡರಿಗೆ ಮುಟ್ಟಸಬೇಕು. " ಎಂದು ಹೇಳಿದ್ದರು.

" ನಮ್ಮನ್ನೂ ವಾಡೇಕ್ಕ ಕರೆಸಿದ್ದರೇನಪಾ " ನಿಂಗ ಮುಂದುವರಿಸಿದ. " ಇಂತಾ ದಗದ ನಮ್ಮ ಕೈಲೆ ಆಗಾಣಿಲ್ಲ ಅಂತ ನಾವು ಹೇಳಿದರ ಬಾಪೂಸಾಬರು ಏನಂದರಂದೀ. 'ಎಲೇ ಮಕ್ಕಳ್ರ್ಯಾ, ತಾಲೀಮಖಾನೆ ಕಟ್ಟಿಸಿಕೊಟ್ಟ ಉಪಕಾರ ಹೀಗ ತೀರಸತೀರ್ಯಾ? ದಾದಾನ ಮಾತ ಕೇಳಿ ನೀವೆಲ್ಲ ಕುಣದರ ಕೇಳೂದಿಲ್ಲ. ಊರ ಜನಾನ್ಃ ನಮ್ಮ ಹಿಂದ ಇರೋವಾಗ ನೀವು ಅಡ್ಡ ಜಗ್ಗತೀರ್ಯಾ ?' ಅನ್ನಾಣಾ ವಾಡಿಸ್ಯಾಟ ಯಾಕ ಅಂತಾ ಆಗಲಿ ಧನ್ಯಾರ ಅಂತ ಹೇಳಿ,ಗೊಂಗಡೀ ತಲೀಗೆ ಹಾಕಿ ಊರ ಹಿಂಡ ಜನರ ಸಂಗಾಟ ನಾವೂ ಹೊಂಟವೇನಪಾ. ದಾರ್‍ಯಾಗ

ಹಳ್ಳದ ಹೆಂತ್ಯಾಕ ಒಬ್ಬೊಬ್ಬರs ಜಾರಿಕೊಂಡು ಹಳ್ಳಗುಂಟ ಇಲ್ಲೀತನಾ ಬಂದೀವು. ನಿನಗ ಈ ಮಜಕೂರ ತಿಳಿಸಬೇಕಂತ ಬಂದರ ನೀನು ಮಿಕಾ ಅಡಗಿಕೊಂಡು ಕುಂತ ಹಾಗ ಕುಂತು, ನಮ್ಮನ್ನ ಜಡೀಬೇಕಂತ ಮಾಡಿದ್ದಿ" ಇಷ್ಟು ಹೇಳಿ ನಗುತ್ತ ನಿಂತ.

ಈ ಸುದ್ದಿಯನ್ನು ಕೇಳಿಯೇ ದಾದಾನಿಗೆ ಸಿಡಿಲು ಬಡಿದಂತಾಗಿತ್ತು. ಒಮ್ಮೆಲೇ ಭಾವನೆಗಳ ಗೊಂದಲದಲ್ಲಿ ಏನು ಮಾಡಬೇಕೆಂಬುದೂ ತಿಳಿಯದಂತಾಯಿತು. ಈ ಮಾತನ್ನು ನಂಬುವದೂ ಕೂಡ ಕಠಿಣವೆನಿಸಿತು. ಅಂತೆಯೇ ಇನ್ನೊಮ್ಮೆ ಖಾತ್ರಿ ಮಾಡಿಕೊಳ್ಳಬೇಕೆಂದು ನಿಂಗನಿಗೆ "ಅಲ್ಲೋ ನಿಂಗಾ, ಊರ ಜನಾ ಗೌಡರ ಹೊಲಾ ಲೂಟಿ ಮಾಡಲಾಕ ಕರೇನs ಹೊಂಟಾರs?" ಎಂದು ವಿಸ್ಮಯ, ಕಾತರ ಬೆರೆತ ದನಿಯಲ್ಲಿ ಕೇಳಿದ.

"ಈಗ ಗೌಡರ ಹೊಲಕ್ಕ ಹೋಗಿ ನೋಡಿದರ ಎಲ್ಲಾ ತಾನs ತಿಳೀತತಲ್ಲ" ಎಂದು ನಿಂಗ ಉತ್ತರವಿತ್ತ.

ದಾದಾನ ಮುಖ ಸಿಟ್ಟಿನಿಂದ ಕೆಂಪಾದದ್ದು ಆ ಬೆಳದಿಂಗಳಿನಲ್ಲಿ ಸ್ಪಷ್ಟವಾಗಿ ಕಾಣುತ್ತಿತ್ತು. ಮೂಗಿನ ಹೊರಳೆಗಳನ್ನು ಬೇಯಿಸುವಷ್ಟು ಉಸಿರು ಬಿಸಿಯಾಗಿತ್ತು. ತುಟಿಗಳು ನಡುಗುತ್ತಿದ್ದವು.

"ಈಗ ನಾನು ಅಲ್ಲಿಗೇ ಹೊಂಟೆ. ಹ್ಯಾಗ ಲೂಟೀ ಮಾಡತಾರೋ ಒಂದ ಕೈ ನೋಡೇ ಬಿಡತೇನಿ. ನಿಂಗಾ, ನಾ ಬರೂ ಮುಟಾ ಈ ಹೊಲದ ಕಾವಲ ನಿನ್ನ ತಲೀ ಮ್ಯಾಗ" ಎಂದವನೇ ದಾದಾ ಚಪಗೊಡ್ಲಿಯನ್ನು ತೆಗೆದುಕೊಂಡು ರಭಸದಿಂದ ಹೊರಟ.

"ಲೇ ದಾದಾ, ಅಲ್ಲೆ ಮುನ್ನೂರು ನಾನೂರು ಜನಾ ಕೂಡೈತೆಲೇ. ಕಾಟಕರು, ಹೊಲ್ಯಾರು, ಕುರುಬರು, ಕುಲಕ್ಕೊಂದು ಜಾತೀ ಜನಾ–ಮನೀಗೊಂದು ಇಸಮಿನ್ಹಾಂಗ ಬಂದು ಸೇರ್ಯಾರಲೇ. ನೀ ಏನು ಮಾಡಾವ ಮಗನs ಆ ಜನವ ಹಿಂಡಿನ್ಯಾಗ ಹೊಕ್ಕು? ನೀ ಇಲ್ಲೀದ ಹೋದದ್ದು ನೋಡಿ, ಆ ಜನಾ ನಿನ್ನ ಹೊಲಾ ಹೊಕ್ಕರಂದರ, ಈ ನಿನ್ನ ಇಕ್ಕಲ,ಚಟ್ಟಾ, ಹುಲ್ಲು ಮನಸ್ಯಾಗ ಒಂದೊಂದು ಹಿಡೀ ಸೈತ ಉಳಿಯಾಕಿಲ್ಲ. ನಿನ್ನ ಹೊಲಾ ಸುಸೂತ್ರ ಉಳದರ ಸಾಕೂ ಅಂತ ನಿನಗ ಹೇಳಾಕ ಬಂದರ, ನೀನs ಹೊಲಾ ಬಿಟ್ಟು ಹೊಂಡತೀಯಲ್ಲ? ಮಳ್ಳs ಸುಮಾಕ ಕೂಡು" ಎಂದು ನಿಂಗ ಹಿರಿತನದ ಗಾಂಭೀರ್ಯದಿಂದ ದಾದಾನಿಗೆ ಉಪದೇಶಿಸಿದ.

ಅವನ ಕೈಹಿಡಿದು ಜಗ್ಗಿದ.

ಆದರೆ ದಾದಾ ಉಪದೇಶ ಕೇಳುವ ಸ್ಥಿತಿಯಲ್ಲಿರಲಿಲ್ಲ. ಅವನ ರಕ್ತ ಸಿಟ್ಟಿನಿಂದ ಕುದಿಯುತಿತ್ತು. ಆತುರದಿಂದ ಅವನ ಕಾಲಿಗೆ ರೆಕ್ಕೆ ಬಂದಂತಾಗಿದ್ದವು.

"ನಿಂಗಾ ಬಿಡ ಕೈ. ಸುಮಾಕ ತಡೀಬ್ಯಾಡ. ನನ್ನ ಹೊಲಾ ಹಾಳ ಮಾಡತಾರ‍್ಸ? ನೋಡೀಯಂತ, ಏನ ಮಾಡತೀನನ್ನೂದು. ಹೇಣತೀ ಗುಳದಾಳಿ ಹರಕೊಂಡ ಬರೂ ಭಂಟರ‍್ಯಾರದೀರಿ, ಅವರು ನನ್ನ ಹೊಲದಾಗ ಕಾಲ ಹಾಕರಿ ಅಂತ ಸಾರಿ ಹೇಳಿಬರಾಕ ಹೊಂಟೇನು. ನನ್ನ ತಡೀಬ್ಯಾಡ" ಎಂದು ಚೀರಿಕೊಂಡವನೇ ದಾದಾ ಗೌಡರ ಹೊಲದ ಕಡೆಗೆ ಓಟ ಬಿಟ್ಟ.

ಒಂದೇ ಓಟಕ್ಕೆ ದಾದಾ ಗೌಡರ ಹೊಲಕ್ಕೇ ಬಂದು ಮುಟ್ಟಿದ್ದ. ನದಿ ಮುಳುಗುತ್ತಿದ್ದ ಈ ಭೂಮಿ ಅಂದರೆ ಶಂಕರಪ್ಪಗೌಡರಿಗೆ ಬಹಳ ಜೀವ. ತಮ್ಮ ಎಲ್ಲ ಶ್ರಮವನ್ನೂ ಅದಕ್ಕೇ ಮೀಸಲಿಡುತ್ತಿದ್ದರು. ಗೊಬ್ಬರ ಗುಡೆ ಹಾಕಿ, ಭೂಮಿ ಕಸುವು ಮಾಡಿ ಸಾಗುವಳಿ ಮಾಡಿದ್ದರಿಂದ ತೆಂಗಿನಕಾಯಷ್ಟು ದೊಡ್ಡದಾದ ತೆನೆಗಳನ್ನು ಹೊತ್ತು, ಜೋಳದ ಬೆಳೆ ಬಿಗಿದು ನಿಂತಿತ್ತು. ದೀರ್ಘಪ್ರಯತ್ನದಲ್ಲಿ ಫಲವನ್ನು ಕಂಡು ಹಣ್ಣಾದ ಮನಸ್ಸು, ಆತ್ಮತೃಪ್ತಿಯಲ್ಲಿ ತೂಗುವಂತೆ, ತೆನೆಯ ಭಾರದಿಂದ ಬೆಳೆ ಗಾಳಿಯಲ್ಲಿ ತೂಗಾಡುತ್ತಿತ್ತು. ಬೆಳುದಿಂಗಳ ಮಾಯೆಯಲ್ಲಿ, ಗಾಳಿಯ ಉಯ್ಯಾಲೆಯಲ್ಲಿ ಹೊಲದ ಬೆಳೆ ಜೀವಂತವಾಗಿ ಕಾಣುತ್ತಿತ್ತು. ಬೀಜದಿಂದ ಹಿಡಿದು ತೆನೆಯ ವರೆಗೆ ಮನುಷ್ಯನ ಪ್ರಿಯವಾದ ಕರಸ್ಪರ್ಶ ತಾಗಿದ್ದರಿಂದಲೋ ಏನೋ, ಮನುಷ್ಯನ ಸಹಾನುಭೂತಿಯನ್ನು ಬಯಸುವಂತಿತ್ತು ಆ ಬೆಳೆ. ವಾರಸಾ ತಂಟೆಯ ಮೂಲಕ ಜೋಳವನ್ನು ಕೊಯ್ಯಲು ಆಳುಗಳು ಬಾರದೆ, ದಿನ ಮೀರಿದ್ದರಿಂದ ಬೆಳೆ ಇನ್ನೂ ಸೊಕ್ಕಿ ಬಲಿತಿತ್ತು. ಆದರೆ ದಿನ ಮುಗಿದದ್ದರಿಂದಲೇ ಕೆಲವು ಕಡೆಗೆ ದಂಟು ಮುರಿದು ತೆನೆಗಳು ನೆಲಕ್ಕೆ ಬಾಗಿದ್ದವು. ದಾದಾನಿಗೆ ಯಾಕೋ ಏನೋ ಈ ದೃಶ್ಯವನ್ನು ನೋಡಿ ಕಣ್ಣಲ್ಲಿ ನೀರು ತುಳುಕಿತು.

ಗೊಂಗಡಿ ಹೊತ್ತ ಜನರು, ಹೊಲದ ಆಚೆಯ ಬದಿಯಿಂದ ನುಗ್ಗಿ ಕೈಗೆ ಸಿಕ್ಕ ತೆನೆಗಳನ್ನು ಮುರಿದು, ಗೊಂಗಡಿಯ ಮೂಲೆಗಳಲ್ಲಿ ತುಂಬುವದರಲ್ಲಿ ನಿರತರಾಗಿದ್ದರು. ಈ ರೀತಿ ಬಳುಕುವ ತೆನೆಗಳನ್ನು ಮುರಿಯುವದು, ಜನರ ಗೋಣು ಮುರಿದು ಚಲ್ಲುವ ದೃಶ್ಯದಂತೆ ದಾದಾನಿಗೆ ದ್ವೇಷ ಹುಟ್ಟಿಸಿತು. ನೋಡುತ್ತ ನಿಲ್ಲುವ ತಾಳ್ಮೆಯೂ ದಾದಾನಿಗೆ ಉಳಿಯಲಿಲ್ಲ. ವೇಗವಾಗಿ ಜೋಳದ ನಿಲುವಿ

ನಲ್ಲಿ ನುಗ್ಗಿ, ತೆನೆಗಳ ಚಂಡಿಯಾಡುತ್ತಿದ್ದವರಲ್ಲಿ ಒಬ್ಬನ ಹಿಂದೆ ಹೋಗಿ, ತನ್ನ ಚಪಗೊಡ್ಲಿಯಿಂದ ಅವನ ಮೇಲೆ ಪ್ರಹಾರ ಮಾಡಿದ. ಕೊಡಲಿಯ ಗಾಯದಿಂದ ಅವನೋ ಚಟ್ಟನೇ ಚೀರಿದ. ಅದನ್ನು ಕೇಳಿ ಸಮೀಪದ ಜನರು ಓಡಿ ಬಂದು, ಅವನ ಗಾಯ್ನ, ಹರಿಯುವ ರಕ್ತ ಇವನ್ನೆಲ್ಲ ನೋಡಿ, ಮೈಮೇಲಿನ ಗೊಂಗಡಿಯ ಪರಿವೆಯಿಲ್ಲದೆ ದಾರಿ ಸಿಕ್ಕತ್ತ ಓಡಿದರು. ಅವರು ದೆಸೆಬಾಯಿ ಬಿಡುತ್ತ 'ಗಾತಾತ ರೆಲೇ' ಎಂದು ಚೀರುತ್ತ ಓಡುವದನ್ನು ನೋಡಿ ಇನ್ನು ಕೆಲವರು ಗಾಬರಿಯಿಂದ ಅವರ ಹಿಂದೆಯೇ ಓಡಿದರು. ಆ ಮೇಲೆ ದಾದಾ ಅಲ್ಲಿ ನಿಲ್ಲದೆ, ಹೊಲದ ಇನ್ನೊಂದು ಭಾಗಕ್ಕೆ ಓಡಿ ಬಂದು, ಅಲ್ಲಿಯ ನಾಲ್ಕಾರು ಜನರನ್ನು ಹಿಡಿದು 'ಹಾಂ' ಎಂದು ಗರ್ಜಿಸಿದ. ಅನಿರೀಕ್ಷಿತವಾಗಿ ಬಂದ ವಿಪತ್ತಿನಿಂದ ಅವರು ಸ್ತಂಭೀಭೂತರಾಗಿರುವಾಗಲೆ, ಅವರಲ್ಲೊಬ್ಬನ ಮೇಲೆ ದಾದಾನ ಚಪಗೊಡ್ಲಿ ಎರಗಿತು. ಗಾಬರಿಯಿಂದ ಅಲ್ಲಿದ್ದವರೆಲ್ಲ ನೆಲಕ್ಕೆ ಬಿದ್ದು ಹೊಟ್ಟೆಹೊಸೆಯುತ್ತ, ಹೊಲದ ಸೀಮೆಯನ್ನು ದಾಟಿದ ಮೇಲೆ ಆಳಾಗಿ ಎದ್ದು ನಿಂತು, ಹೊಲದ ಕಡೆಗೆ ಮುಖ ಕೂಡ ತಿರುಗಿಸದೆ ಓಡಿಯೇ ಓಡಿದರು.

ದಾರಿಯ ಮೇಲಿದ್ದ ಒಡ್ಡಿನ ಮೇಲೆ ಜೇವಿನ ಗಿಡದ ಬುಡದಲ್ಲಿ, ಲಿಂಗಪ್ಪ, ಪಡದಯ್ಯ, ಬಾಪೂಸಾಹೇಬ ಇವರು ಹಾಸಿದ ಕಂಬಳಿಯ ಮೇಲೆ ಚಕ್ಕಂದದಲ್ಲಿ ಕುಳಿತಿದ್ದರು. ಈ ತ್ರಿಮೂರ್ತಿಗಳ ಮಹಿಮಾತಿಶಯಗಳನ್ನು ಹೊಗಳುತ್ತ ಅವರಿಗೆ ಎಕ್ಕೆಯ ಎಲೆಗಳ ಬತ್ತಿಗಳನ್ನು ಕಟ್ಟಿಕೊಡುವದರಲ್ಲಿ ನಿರತರಾದ ಭಕ್ತಾದಿಗಳಿಗೆ, ದಿಕ್ಕುಪಾಲಾಗಿ ಓಡಿಬರುವ ಜನ ಕಂಡಿತು. ಅವರೂ ನಡುಗಲಾರಂಭಿಸಿದರು.

ಅದನ್ನು ನೋಡಿ ಈ ತ್ರಿಮೂರ್ತಿಗಳಿಗೆ ತಮ್ಮ ಸೈನ್ಯ ಸೋತುಬಂದಷ್ಟು ದುಃಖವಾಯಿತು. ಜನರನ್ನು ತಡೆದು ಹುರಿದುಂಬಿಸಿ, ಪುನಃ ಬೆಳೆಯ ಲೂಟಿಗೆ ತಿರುಗಿಸಲು ಪ್ರಯತ್ನಿಸುವ ಸಾಮರ್ಥ್ಯ ಲಿಂಗಪ್ಪನಿಗರಲಿಲ್ಲ. ಸ್ವತಃ ಪಡದಯ್ಯನವರೇ ಈ ಸಾಹಸ ಮಾಡಲು ಎದ್ದುನಿಂತರು. ಈ ಹೊತ್ತಿಗೆ ದಾರಿಯ ಮೇಲಿನ ಒಡ್ಡಿನ ಸಮೀಪಕ್ಕೇ ಮತ್ತೆ ಕೆಲವರು ಓಡಿಬಂದರು. ಅವರಲ್ಲೊಬ್ಬನನ್ನು ತಡೆದು, "ಹೀಗ್ಯಾಕ ಕುರಿ ಹಿಂಡು ಓಡಿದಂಘಾಗ ಓಡತೀರಲೇ ಮಕ್ಕಳಿರಾ?" ಎಂದು ಪಡದಯ್ಯನವರು ಮೂದಲಿಸುತ್ತ ಕೇಳಿದರು.

ಆ ಮನುಷ್ಯ ಗಾಬರಿಯಿಂದ ನಡುಗಹತ್ತಿದ. ಒಮ್ಮೆಲೇ ಅವನ ಬಾಯಿಂದ ಮಾತು ಬರಲಿಲ್ಲ. ಆದರೆ ಪಡದಯ್ಯನವರು ಗಟ್ಟಿಯಾಗಿ ಕೈಹಿಡಿದದ್ದರಿಂದ ಓಡಿ

ಹೋಗುವಂತೆಯೂ ಇರಲಿಲ್ಲ. ಅವನ ಬಾಯಿ ಬಿಚ್ಚಲು ಪಡದಯ್ಯನವರು ಇನ್ನ
ಮೂರು ನಾಲ್ಕು ಸಲ ಗದರಿಸಬೇಕಾಯಿತು. ಆಗ ಅವರ ದನಿಯ ಮೇಲಿಂ
ಅವರು ಪಡದಪ್ಪನವರೆಂದು ಅವನಿಗೆ ಗೊತ್ತಾಯಿತು.

"ಛೇ ಅದೇನ ಹೇಳೂ ಮಾತ ಅಲ್ಲತಗೀರಿ ಅಪ್ಪಾಅವರ. ಕಂಡವರ
ಅಲ್ಲೇ ಎದೀ ಒಡಕೊಂಡು ಬಿದ್ದಾರು. ಶಂಕರಪ್ಪಗೌಡರ ದೆವ್ವ ಬಿಚ್ಚಗಿ
ಹಿಡಿದು ತೆನೀಗೆ ಕೈ ಹಚ್ಚಿದವರನ್ನ ಕತ್ತರಿಸಿ ಒಗೀಲಾಕ ಹತ್ತೈತಿ." ಎಂದಿಷ್ಟ
ಹೇಳಿದವನೇ, ತೇಕುತ್ತಿದ್ದರೂ ಬೀಳುವ ಎಚ್ಚರವಿಲ್ಲದೇ ಓಡಿ ಹೋದನು.

ಪಡದಪ್ಪನವರಿಗೆ ಭೂತಪಿಶಾಚಿಗಳಲ್ಲಿ ವಿಶ್ವಾಸ ಬಹಳ. ಹಿಂದಕ್ಕೊಮ್ಮೆ
ಬಾಳಾಚಾರ್ಯರ ಪಾರುಪತ್ಯ ಮಾಡಿಸಲು ಒಬ್ಬ ಮಾಂತ್ರಿಕನನ್ನು ಅವರು ಭೆಟ್ಟಿ
ಯಾಗಿ ವೇತಾಳವನ್ನು ವಶಪಡಿಸಿಕೊಡಲು ಕೇಳಿಕೊಂಡಿದ್ದರು. ಅವನು ಹೇಳಿದ
ವಿಧಿಗಳೆಲ್ಲ ಭೀಕರವಾಗಿದ್ದವು. ಸ್ಮಶಾನದಲ್ಲಿ ಬಾಣಂತಿಯ ಬಲಗೈ-ಎಲುಬನ್ನು
ತಂದು ಹಸೀ ಮಾಂಸದಿಂದ ಹೋಮಮಾಡಬೇಕು. ಸಾಧ್ಯವಾಗುವ ಮೊದಲೇ
ವೇತಾಳ ಬಂದು ಹೋಮವನ್ನು ಕೆಡಿಸಲು ನಾನಾರೂಪಗಳಿಂದ ಹೆದರಿಸಲು
ಪ್ರಯತ್ನಿಸಿದಾಗ ಅದಕ್ಕೆ ಹೆದರಬಾರದು. ಹೀಗೆಯೇ ಸತತ ಪ್ರಯತ್ನ ಮಾಡಿದ
ಮೇಲೆ ವೇತಾಳ ವಶವಾಗಿ ದಾಸನಾಗುವದು ಎಂದೇನೇನೋ ಅವನು ಹೇಳಿದ್ದ.
ಆದರೆ ಅವನು ಹೇಳಿದ ಕತೆಯೆಲ್ಲ ಪಡದಯ್ಯನವರ ಮೇಲೆ ಭಯಾನಕವಾದ
ಪರಿಣಾಮವನ್ನುಂಟು ಮಾಡಿತ್ತು. ಬಾಳಾಚಾರ್ಯರಿಗೂ ಮಂತ್ರ-ತಂತ್ರಗಳಲ್ಲಿ ಗತಿ
ಯಿತ್ತೆಂದು ಪಡದಪ್ಪನವರಿಗೆ ಗೊತ್ತಿತ್ತು. ಇಲ್ಲದಿದ್ದರೆ ಮುಂದಿನ ಪರಿಣಾಮ
ಭೀಕರವಾಗಬಹುದೆಂದು ಆ ಆಚಾರಿ ಶೇಷಪ್ಪನಿಗೇಕೆ ಎಚ್ಚರಿಕೆಯನ್ನು ಕೊಟ್ಟಿದ್ದ?

ಇವೆಲ್ಲ ಕಾರಣಗಳಿಂದ ಪಡದಪ್ಪನವರ ಮನಸ್ಸಿನಲ್ಲಿ ಭೀತಿ ಘಟಸರ್ಪದ
ಮರಿಯಾಗಿ ಮಲಗಿತ್ತು. ಮಧ್ಯರಾತ್ರಿಯ ನಿಗೂಢ ಮೌನ, ನಿರ್ಜನತೆಯ
ಮಾಯೆ, ಅಪರಾಧದ ಭೀತಿ, ಇವೆಲ್ಲ ರೂಪುಗೊಂಡು ದಂತಕತೆಯೊಂದನ್ನುಉಸುರಿ
ದಂತೆ, ಆ ಓಡಿ ಬಂದ ಮನುಷ್ಯ ದೆವ್ವದ ಕತೆಯನ್ನು ಹೇಳಿ ಹೋದಾಗ ನಂಬ
ದಿರುವದು ಹೇಗೆ? ದೆವ್ವವಲ್ಲದಿದ್ದರೆ ಒಬ್ಬ ಮನುಷ್ಯ ಮುನ್ನೂರು ನಾನೂರು
ಜನರನ್ನು ಬೆದರಿಸಿ ಓಡಿಸುವದು ಸಾಧ್ಯವೇ? ಬಾಳಾಚಾರಿಯೇ ತನ್ನ ಮಂತ್ರ
ಬಲದಿಂದ ಪಿಶಾಚಿಗಳನ್ನು ಸೃಷ್ಟಿಮಾಡಿ ಗೌಡರ ಹೊಲದ ಕಾವಲಿಗೆ ಕಳಿಸಿರ
ಬೇಕು. ಹೆದರಿದ ಕಣ್ಣಿಗೆ ಮೋಟುಮರವೂ ದೆವ್ವವಾಗಿ ಕಾಣುವಂತೆ, ಪಡದಪ್ಪ

ನವರಿಗೆ ಈ ದೆವ್ವದ ಕತೆ ನಿಜವೆನಿಸಿತು. ಶುಭ್ರವಾದ ವಿಭೂತಿಯನ್ನು ಧರಿಸಿ ಕೊಂಡು, ಮೀಸೆ ಕುಣಿಸುತ್ತ, ಬೆಳುದಿಂಗಳ ಬೆಳಕಿನಲ್ಲಿ ಬಿಚ್ಚುಗತ್ತಿಯನ್ನು ಝುಳಪಿಸುತ್ತ ತಿರುಗಾಡುವ ಗೌಡರ ಚಿತ್ರ ಅವರ ಕಣ್ಣೆದುರು ಕುಣಿಯಹತ್ತಿತು.

ಓಡಿ ಹೋಗುವಾಗ ಪಡದಪ್ಪನವರಿಗೆ ಭೂತದ ಬುರುಡೆ ಉರುಳಿಸಿದ ಮನುಷ್ಯನಿಗೆ ಪಡದಪ್ಪನವರು ತನ್ನ ಮಾತನ್ನು ನಂಬಬಹುದೆಂದು ಕನಸು ಮನಸಿನಲ್ಲಿಯೂ ಅನಿಸಿರಲಿಲ್ಲ. ಮನುಷ್ಯರು ಬಂದು ಅಡ್ಡಿ ಮಾಡಿದ್ದರಿಂದ ಹೆದರಿ ಓಡುತ್ತಿದ್ದೇವೆಂದು ಹೇಳಿದರೆ ಹೇಡಿತನವಾದೀತೆಂದು ಬಗೆದು, ಅವನು ಈ ದೆವ್ವದ ಕತೆಯನ್ನು ಸೃಷ್ಟಿಸಿ ಹೇಳಿದ್ದ. ಆದರೆ ಕಾಡಿನ ನಿರ್ಜನತೆಯಲ್ಲಿ, ಭೂತಪಿಶಾಚಿಗಳ ಅಗಾಧಶಕ್ತಿಗಳ ಬಗೆಗೆ ನಂಬಿಗೆಯಿದ್ದ ಪಡದಯ್ಯನವರು ಅದನ್ನು ಕೂಡಲೆ ನಂಬಿದರು. ಅವರ ಕೈಕಾಲು ನಡುಗುತ್ತಿದ್ದವು. ಅಂಥ ತಂಗಾಳಿಯಲ್ಲಿಯೂ ಹಣೆಯ ಮೇಲೆ ಭಯದ ತಣ್ಣಗಿನ ಬೆವರುಹನಿಗಳು ಸಾಲುಗಟ್ಟಿದವು. ಅವುಗಳನ್ನು ಒರೆಸುತ್ತ "ಲಿಂಗಪ್ಪ, ಬಾಪೂಸಾಬರಃ ಏಳ್ರಿ ಹೋಗೂನು. ಇಲದಿರಕ ಆ ದೆವ್ವ ಇಲ್ಲೇ ಓಡಿ ಬಂದೀತು" ಎಂದು ವಿಕಾರವಾಗಿ ಕೂಗಿ ಹೇಳಿ, ಅವಸರದಿಂದ ಓಡುವ ಜನರ ಬೆನ್ನು ಬಿಡದೆ ತಾವೂ ಓಡಿದರು.

ಶಂಕರಪ್ಪಗೌಡರ ಭೂತ ಬಿಚ್ಚುಗತ್ತಿ ಹಿಡಿದು ಹೊಲವನ್ನು ಕಾಯುತ್ತಿ-ರುವದೆಂಬ ಕತೆ ಕಲ್ಪನೆಯ ಕೈಕಾಲು ಮೂಡಿಸಿಕೊಂಡು ಪಾದಳ್ಳಿಯ ಮನೆ ಮನೆಗೂ ಮುಟ್ಟಿತು. ಈ ಭೂತ ಹೊಲದಲ್ಲಿ ಕಾವಲಿದ್ದು ಯಾರನ್ನೂ ಅಲ್ಲಿ ಕಾಲು ಹಾಕಗೊಡುವದಿಲ್ಲವೆಂದು ಸ್ವತಃ ಪಡದಪ್ಪನವರೇ ಹೇಳಿದರೆಂದು ಒಬ್ಬನು ಹೇಳಿಬಿಟ್ಟ. ಇನ್ನೊಬ್ಬನಂತೂ ಸ್ವಂತ ಅನುಭವನ್ನೇ ಬಣ್ಣಗೊಟ್ಟು ಹೇಳಿದ. ತಾನು ತೆನೆಗಳನ್ನು ಮುರಿಯುತ್ತಿದ್ದಾಗ, ದೆವ್ವ ತನ್ನ ಕಂಬಳಿಯನ್ನು ಹಿಡಿದು ಜಗ್ಗಿದ್ದು, ತಾನೂ ಧೈರ್ಯದಿಂದ ಕೊಸರಿಕೊಂಡದ್ದು, ಆಗ ಅದು ಒದ್ದು ನೆಲಕ್ಕೆ ಕೆಡವಿದಾಗ ಬಿದ್ದದ್ದರಿಂದ ಈಗಲೂ ಬೆನ್ನೆಲುಬು ನೋಯುತ್ತಿರುವದು, ಮುಂತಾದ ಸಂಗತಿಗಳೆಲ್ಲ ಅವನ ಬಾಯಲ್ಲಿ ಜೀವಂತ ಸತ್ಯವನ್ನು ಪಡೆದವು. ಚಪಗೊಡಲಿಯ ಹೊಡೆತದಿಂದ ಕಾಲಿಗೆ ಗಾಯವಾಗಿ ಬಿದ್ದ ಕೆಂಚನ ಮಗ ರಾಮು, "ವೈಮ್ಯಾಗ ಎಚ್ಚರ ಬಂದಾಗ, ಪುಣ್ಯಾವಂತ ದಾದಾ ಬಂದು ಹೆಗಲಮ್ಯಾಗ ಕುಂಡರಿಸಿಕೊಂಡು ಮನೀಗೆ ತಂದು ಹಾಕಿದ. ಗಾಯದಣ್ಣೀ ತಂದು, ಅಳ್ಳೀ ತೋಯಿಸಿ ಕಾಲಿಗೆ ಕಟ್ಟಿದ. ಆ ನಾರಾಯಣನ ಪುಣ್ಯೇದಿಂದ ದೆವ್ವನ ಕೈಯಾಗಿಂದ ಪಾರಾಗಿ ಉಳಿದ್ನಿ"

ಎಂದು ಕಣ್ಣೀರು ತಂದುಕೊಂಡು ಹೇಳುತ್ತಿದ್ದ.

ದಾದಾ ಚಪಗೊಡ್ಲಿ ಹಿಡಿದುಕೊಂಡು ಲೂಟಿಮಾಡುತ್ತಿದ್ದವರನ್ನು ಬೆದರಿಸಿದ ಎಂದು ಕೆಲವರು ಹೇಳಿದರೂ ಅದನ್ನು ನಂಬುವವರೇ ಇರಲಿಲ್ಲ. ಸ್ವತಃ ದಾದಾನೇ ಬಂದು ಹೇಳಿದ್ದರೂ ಯಾರೂ ನಂಬುತ್ತಿರಲಿಲ್ಲ. ಗೌಡರ ಭೂತ ದಾದಾನಂತೆ ಕಂಡಿರಬೇಕು ಎಂದೇ ಅವರು, ಹೇಳಿದವರಿಗೇ ತಿರುಗಿ ಸಮಾಧಾನ ಹೇಳುತ್ತಿದ್ದರು. ಇದಕ್ಕೆ ಬಲವಾದ ಕಾರಣವೂ ಇತ್ತು. ಗಾಯಗೊಂಡ ರಾಮುನನ್ನು ಮನೆಗೆ ತಂದು ಹಾಕಿದವನು ದಾದಾ. ಜನರ ಗೊಂಗಡಿಗಳನ್ನೆಲ್ಲ ಅವರವರ ಮನೆಗೊಯ್ದು ಮುಟ್ಟಿಸಿದವನೂ ಅವನೇ. ಮೇಲಾಗಿ ಆ ರಾತ್ರಿ ಅವನು ತನ್ನ ಹೊಲದಲ್ಲಿ ಕಾವಲು ಮಾಡುತ್ತಿದ್ದ. ಅಂದ ಮೇಲೆ ಒಬ್ಬನೇ ಹೇಗೆ ಹೋಗಿ ಎದುರಿಸುವದು ಸಾಧ್ಯ? ಒದರಾಟ ಕೂಗಾಟ ಕೇಳಿದ ಮೇಲೆ ಹೋಗಿ, ನೊಂದವರನ್ನು ಅವನು ಉಪಚರಿಸಿರಬೇಕು. ಗೌಡರ ಭೂತ ಹೊಲವನ್ನು ಕಾಯ್ದದ್ದೇ ನಿಜ, ಎಂದು ಊರಲ್ಲಿ ಎಲ್ಲರೂ ನಂಬಿದರು. ನಿಜಸಂಗತಿಯನ್ನು, ಪಾರ್ವತೆವ್ವ, ಬಾಳಾಚಾರ್ಯರು ಹಾಗೂ ದಾದಾನ ಗೆಳೆಯರಲ್ಲಿ ಮೂವರು ಮಾತ್ರ ಅರಿತಿದ್ದರು.

ದೆವ್ವದ ಕತೆ ಸುಳ್ಳೇ ಇರಲಿ, ಸತ್ಯವೇ ಇರಲಿ, ಆದ ಪರಿಣಾಮ ಒಳ್ಳೆಯದಾಯಿತು. ಆ ರಾತ್ರಿ ಗೌಡರ ಹೊಲವನ್ನು ಲೂಟಿಮಾಡುವ ಯೋಜನೆ ವಿಫಲವಾದದ್ದರಿಂದ, ಬಲಪ್ರಯೋಗದಿಂದ ಭೂಮಿಯ ಕಬಜಾ ಪಡೆಯುವ ವಿಚಾರವೇ ಹಾರಿಹೋಯಿತು. ಗೌಡರ ಭೂತದ ಕಾಟ ತಮಗೂ ಅಂಟಿಕೊಂಡೀತೆಂಬ ಭೀತಿಯಿಂದ ಗೌಡರ ಆಸ್ತಿಗೆ ಕೈಹಚ್ಚುವ ಧೈರ್ಯ ಯಾರಲ್ಲಿಯೂ ಉಳಿಯಲಿಲ್ಲ. ಬರಗಾಲದದಿಂದ ಕಂಗೆಟ್ಟ ಈ ಸ್ಥಿತಿಯಲ್ಲಿ ಪಡದಪ್ಪನವರ ಯೋಜನೆ ಜನರಿಗೆ ಸವಿಯಾಗಿಯೇ ಕಂಡಿತ್ತು. ಕೈಗೆ ಸಿಕ್ಕಷ್ಟು ಕಾಳು, ಬೇಸರ ಕಳೆಯಲು ಒಂದು ಹುರುಪಿನ ಕೆಲಸ ಇವು ಯಾರಿಗೆ ಬೇಡ? ಆದರೆ ಪಡದಪ್ಪನವರ ಯೋಜನೆ ಫಲಿಸಲೇಬಾರದೆಂದು ವಿಧಿಯ ಸಂಕಲ್ಪವಿತ್ತೋ ಏನೋ! ಜನರು ಲೂಟಿಗೆ ಸಿದ್ಧರಾದದ್ದು ಪಡದಪ್ಪನವರು ತೋರಿಸಿದ ಆಮಿಷದ ಲೋಭಕ್ಕಾಗಿ. ಆದರೆ ಆಗಲೂ ತಾವು ಮಾಡುತ್ತಿದ್ದುದು ಪಾಪ ಎಂದು ಅವರ ಮನಸಿನಲ್ಲಿ ಕುದಿಯುತ್ತಿತ್ತು. ಹೋಗದಿದ್ದರೆ ಊರಿಗೇ ವಾಳಿಯಾಗಬಹುದೆಂಬ ಭೀತಿಯಿತ್ತು. ಅಂತೆಯೇ ಊರಿಗಾದದ್ದು ನಮಗೂ ಆಗುತ್ತದೆಂಬ ಹುಚ್ಚು ಧೈರ್ಯವನ್ನು ನಂಬಿ ಅವರು ಲೂಟಿಗೆ ಹೋಗಿದ್ದರು. ಆದ್ದರಿಂದಲೇ ಅಲ್ಲಿ ದಾದಾ ಬಂದು ತಮ್ಮನ್ನೆಲ್ಲ ಏಕಾಕಿ

ಯಾಗಿ ಎದುರಿಸಿ ಓಡಿಸಿದ್ದು ಅವರಿಗೆ ಭೂತಲೀಲೆಯಾಗಿ-- ತಮ್ಮ ಪಾಪಕ್ಕೆ ತಕ್ಕ ಶಿಕ್ಷೆ ಎಂಬೆನಿಸಿತು. ದಾದಾ ಎದುರಿಸಿದಾಗ ಆ ನೂರಾರು ಜನರಲ್ಲಿ ಕೆಲವರಾದರೂ ಅವನನ್ನು ಎದುರಿಸಬಹುದಾಗಿತ್ತು. ಆದರೆ ಯಾರ ಹೊಣೆಯೂ ಅಲ್ಲದ ಈ ಕೆಲಸದ ಪಾಪ ಅವರನ್ನು ತಡೆದಿತ್ತು.

ದಾದಾ ಒಬ್ಬನೇ ನಿಂತು ತಮ್ಮ ಹೊಲವನ್ನು ರಕ್ಷಿಸಿದನೆಂಬ ಸುದ್ದಿಯನ್ನು ಕೇಳಿ ಗೌಡಿತಿ ಪಾರ್ವತೆವ್ವನಿಗೆ ಅವನ ವಿಷಯವಾಗಿ ಆದರ, ಅಭಿಮಾನ, ಮಮತೆ ಉಕ್ಕಿ ಬಂದವು. ಹುಣ್ಣಿವೆಯ ಮರುದಿನ, ತನ್ನ ಕೃತಜ್ಞತೆಯನ್ನು ವ್ಯಕ್ತಪಡಿಸಲು ಗೌಡಿತಿಯಿಂದ ದಾದಾನಿಗೆ ಕರೆಹೋಯಿತು. ಏನ ಅರಿಯದ ಹಸುಗೂಸಿನಂತೆ ದಾದಾ ವಿಸ್ಮಯದ ನಗೆಯನ್ನು ಸೂಚಿಸುತ್ತ ಅವಳ ಕಾಲಿಗೆರಗಿದ. ಪಾರ್ವತೆವ್ವ ತುಂಬಿಬಂದ ಕಂಠದಿಂದ "ನನ್ನಿಬ್ಬರು ಮಕ್ಕಳ ಜತೀಲೆ ನೀ ಒಬ್ಬ ಮಗಾ ಆದಿ. ಇಂದಿನಿಂದ ನೀ ತಾಯಿಲ್ಲದ ಪರದೇಶ್ಯಂತ ತಿಳೀಬ್ಯಾಡ ದಾದಾ. ನಿನಗ ಅನುವು-ಆಪತ್ತು ಬಂದರ ಸಥಿಯಿಂದ ಬೇಡಿ ಇಸಗೋಬೇಕು ಆಂ" ಎಂದು ಹೇಳಿದಳು.

ಅವಳ ಅಂತಃಕರಣದ ಈ ಮಾತುಗಳನ್ನು ಕೇಳಿ ದಾದಾನ ಹೃದಯವೂ ಉಕ್ಕಿಬಂತು. ಕಣ್ಣೀರು ಉಕ್ಕಿಬಂದವು. ಭಕ್ತಿಯಿಂದ ಅವಳ ಕಾಲಿಗೆರಗಿ "ಯವ್ವಾ ನಿನ್ನ ಹರಕೀ ಬಲ ಇರಲಿ. ನಿನ ಮಗಾ, ಪರಸಂಗ ಬಿದ್ದಾಗ ನಿನ್ನ ಕೈಯಾಗಿನ ಕಲ್ಲ ಅಂತ ತಿಳಕೋ ಯವ್ವಾ" ಎಂದು ಹೇಳಿ ಕಣ್ಣೀರೊರೆಸಿಕೊಂಡು ಗೌಡರ ಮನೆಯಿಂದ ಹೊರಬಿದ್ದನು.

ಪಡದಪ್ಪನ ಪುಂಡಾಟಿಕೆ ಈ ಮಟ್ಟಕ್ಕೆ ಮುಟ್ಟಬಹುದೆಂದು ಬಾಳಾಚಾರ್ಯರಿಗನಿಸಿರಲಿಲ್ಲ. ಬಹಳವಾದರೆ ಲಿಂಗಪ್ಪ ಭೂಮಿಯ ಕಬಜಾ ಪಡೆಯಲು ಬಹಿರಂಗವಾಗಿ ಬಂದಾಗ, ಅವರಿಗೂ ಗೌಡರ ಪಕ್ಷದವರಿಗೂ ಕೈಗೆ ಕೈ ಹತ್ತಿ ಕಲಹವಾಗಬಹುದೆಂದು ಅವರು ನಿರೀಕ್ಷಿಸಿದ್ದರು. ಆದರೆ ಸರಿ ರಾತ್ರಿಯಲ್ಲಿ ತುಂಬಿದ ಬೆಳೆಯನ್ನು ಕೊಯ್ಯಲು ಮನಸ್ಸು ಮಾಡಿದ್ದು, ನೀಚತನದ ಪರಮಾವಧಿಯೆನಿಸಿ, ಇನ್ನು ಮೇಲೆ ಪಾಪಳ್ಳಿಯ ಪುಣ್ಯ ತೀರಿತೆಂಬೆನಿಸಿತು. ಇಲ್ಲಿಯ ವರೆಗೆ ತುಂಬಿದ ಬೆಳೆಗೆ ಯಾರೂ ಕೈಹಚ್ಚಿರಲಿಲ್ಲ. ಈಗ ಅದೂ ನಡೆದುಹೋಯಿತು.

ಆ ಲೂಟಿ ನಡೆದಾಗ ದಾದಾ ಒಬ್ಬನೇ ಎಲ್ಲರನ್ನೂ ಎದುರಿಸಿ ಅನಾಹುತವನ್ನು ತಪ್ಪಿಸಿದನೆಂದು ಕೇಳಿ ಅವರಿಗೆ ಸಂತೋಷವಾಯಿತು. ದುಷ್ಟಶಕ್ತಿಗಳ

ಈ ಸಂಕ್ರಮಣ ಕಾಲದಲ್ಲಿ ದಾದಾ ಒಬ್ಬನೇ ಆಸೆಯ ಕಿರಣವಾಗಿ ಕಂಡ. ಅವನ ಧೈರ್ಯ-ಸಾಹಸಗಳು, ಮುಳುಗಬಹುದಾದ ಪುಣ್ಯವನ್ನು ರಕ್ಷಿಸಬಹುದೆಂದು ಅವರಿಗೆ ತೋರಿತು. ಅಂತೆಯೇ ದಾದಾನನ್ನು ಮನೆತನಕ ಕರೆಸಿಕೊಂಡು, ಅವನ ಬೆನ್ನ ಮೇಲೆ ಕೈಯಾಡಿಸಿ, ಮೆಚ್ಚುಗೆ ಸೂಚಿಸಿ ಆಶೀರ್ವದಿಸಿದರು. ಅಂದಿನಿಂದ ಗೌಡರ ಪಕ್ಷದ ಜನರಿಗೂ ಕೂಡ ದಾದಾನ ಧೈರ್ಯ ಸಾಹಸಗಳು ಮೆಚ್ಚಿಗೆಯಾದವು.

ಕೆಲದಿನಗಳು ಕಳೆದ ನಂತರ ಪಡದಪ್ಪನವರ ಕಿವಿಗೂ ದಾದಾನ ಈ ಸಾಹಸದ ಕತೆ ಮುಟ್ಟಿತು. ಶಂಕರಪ್ಪಗೌಡರ ಭೂತದ ಬದಲಾಗಿ, ದಾದಾ ಈಗ ಅವರ ಮನಸ್ಸನ್ನು ಕಾಡಹತ್ತಿದ. ತಮ್ಮ ಯೋಜನೆಗಳಿಗೆಲ್ಲ ದಾದಾ ವಿಘ್ನವಾಗಿರುವಂತೆ ಕಂಡಿತು. ತಮ್ಮ ದಾರಿಯಿಂದ ಈ ಮುಳ್ಳನ್ನು ತೆಗೆದೊಗೆಯದಿದ್ದರೆ, ತಮ್ಮ ಪ್ರಸ್ಥ ಊರಲ್ಲಿ ಬೆಳೆಯಲಾರದೆಂದು ಅವರಿಗನಿಸಿತು. ಸೊಕ್ಕಿನಿಂದ ಮುನ್ನುಗ್ಗುವ ಸ್ವಭಾವದ ಈ ದಾದಾನನ್ನು ಯಾವದಾದರೂ ಪೇಚಿನಲ್ಲಿ ಸಿಲುಕಿಸಿ, ವೈ ಮೆತ್ತಗಾಗುವಂತೆ ಮಾಡಬೇಕೆಂಬ ವಿಚಾರ ಹಗಲು ರಾತ್ರಿ ಅವರ ಮನವನ್ನು ಕದಡಹತ್ತಿತು.

ಲಕ್ಷ್ಮೀಬಾಯಿ ತಿರುಗಿ ಪಾದಳ್ಳಿಗೆ ಬರಲೊಪ್ಪುವದಿಲ್ಲ. ಅಂದ ಮೇಲೆ ಬಾಪೂಸಾಹೇಬನೇ ಅನಿರ್ಬಂಧವಾಗಿ ಜಾಗೀರು ನಡೆಸುತ್ತಾನೆ; ಪಡದಪ್ಪನ ವರ್ಚಸ್ಸು ನಿರಾತಂಕವಾಗಿ ಬೆಳೆಯುತ್ತದೆ; ಲಿಂಗಪ್ಪ ಗೌಡನಾಗಿ ಬೇರೂರಿ ಹೊಸ ಅಮಲು ನಡೆಸುತ್ತಾನೆ. ಈ ಅನಿಷ್ಟತ್ರಯದಿಂದ ಪಾದಳ್ಳಿಯ ಜೀವನ ಮೂರಾಬಟ್ಟೆಯಾಗದೆ ಉಳಿಯುವದಿಲ್ಲ. ಇದೆಲ್ಲದರ ನೈತಿಕ ಹೊಣೆ ತಮ್ಮದೆಂದು ಬಾಳಾಚಾರ್ಯರ ಭಾವನೆ. ಅದಕ್ಕಾಗಿ ಈ ಸಮಸ್ಯೆಗಳನ್ನು ನಿವಾರಿಸಲು ಅವರು ಏನಾದರೊಂದು ಉಪಾಯವನ್ನು ಹೂಡಲೇಬೇಕಾಗಿತ್ತು. ತಟ್ಟನೆ ಅವರಿಗೆ ಯಶವಂತರಾಯರ ನೆನಪಾಯಿತು.

ಲಕ್ಷ್ಮಣನನ್ನು ಆಜರಾಣಿಗೆ ಕಳಿಸಿ ಯಶವಂತರಾಯರನ್ನು ಕರೆಸಬೇಕೆಂದು ಬಾಳಾಚಾರ್ಯರ ಯೋಚನೆ. ಜೈನರ ಚಿನ್ನಪ್ಪ ಆ 'ಅಪೇಶಿ' ಲಕ್ಷ್ಮಣನನ್ನು ಕಳಿಸಿದರೆ ಕೆಲಸವಾಗುವದಿಲ್ಲವೆಂದು ಸೂಚಿಸಿದ. ಆದರೆ ಲಕ್ಷ್ಮಣನನ್ನು ಬಿಟ್ಟರೆ ಬೇರಾರನ್ನೂ ಕಳಿಸುವಂತಿರಲಿಲ್ಲ. ಈಗಂತೂ ಲಕ್ಷ್ಮಣ ಹೋಗಲಿ. ಕೆಲಸವಾಗದಿದ್ದರೆ, ಹೋಳೀಹುಣ್ಣಿವೆಯಾದ ಮೇಲೆ ದಾದಾನನ್ನು ಕಳಿಸಬೇಕೆಂದು ನಿರ್ಣಯವಾಯಿತು. ಲಕ್ಷ್ಮಣ ಅಜರಾಣಿಗೆ ಹೋದವನು ಮರುದಿನವೇ ತಿರುಗಿ

ಬಂದ. ಅಜರಾಣಿಯಲ್ಲಿ ಕಾಲರಾ ಪಿಡುಗು ಹಬ್ಬಿರುವದೆಂದೂ ಅದರ ಅಬ್ಬರ ಕಡಿಮೆಯಾದ ಮೇಲೆ ಯಶವಂತರಾಯರು ಬರುತ್ತಾರೆಂದೂ ತಿಳಿಸಿದ. "ನಾ ಮದ್ಲs ಹೇಳಿದ್ದಿಲ್ಲರೇ, ಆ ಅಪೇಶಿ ಲಕ್ಷ್ಮಣ್ಣನ್ನ ಕಳಸಬ್ಯಾಡ್ರಿ ಅಂತ" ಎಂದು ಜೈನರ ಜಿನ್ನಪ್ಪ ರಾಗವೆಳೆದ. ಮುಂದೇನು ಮಾಡಬೇಕೆಂಬ ಯೋಚನೆಯಲ್ಲಿ ಬಾಳಾಚಾರ್ಯರು ಮಗ್ನರಾದರು.

ಪಾರ್ವತೆವ್ವನ ಪಕ್ಷಪಾತಿಗಳಿಗೆ ಆಘಾತವಾಗುವಂಥ ಇನ್ನೊಂದು ಸುದ್ದಿಯೂ ಅಂದೇ ಬಂದಿತು. ಲಿಂಗಪ್ಪನ ವಾರಸಾದ ವಿರುದ್ಧ ಪಾರ್ವತೆವ್ವ ಒಂದು ತಕರಾರೀ ಅರ್ಜಿಯನ್ನು ಕೊಟ್ಟಿದ್ದಳು. ಮಾಮಲೇದಾರರು ಅದನ್ನು ಕಿತ್ತಿಹಾಕಿ, ಲಿಂಗಪ್ಪ ಶಂಕರಪ್ಪಗೌಡರ ಮಗನಾದ್ದರಿಂದ, ವಾರಸದಾರನೆಂದು ಅವನ ಹೆಸರು ಹಚ್ಚಲು ಹುಕುಮ ಕೊಟ್ಟಿರುವರೆಂದು ಲಿಂಗಪ್ಪನ ಪರವಾಗಿ ಸಕ್ಕರಿ ಹಂಚುವದು ನಡೆಯಿತು. ಊರಲ್ಲೆಲ್ಲ ಹೊಸದೊಂದು ಕೋಲಾಹಲ ಪ್ರಾರಂಭವಾಯಿತು. ಯಾವುದೋ ಊರಿನ ಇನ್ನೊಬ್ಬ ಮನುಷ್ಯ ಪಾದಳ್ಳಿಯ ಗೌಡನಾಗಿ ಬರುವದು ಹಿತಕರವಾಗಿರಲಿಲ್ಲ.

ಅಂದು ಸಾಯಂಕಾಲ ಎಂದಿನಂತೆ ಬಾಳಾಚಾರ್ಯರು ದೇವರ ದರ್ಶನಕ್ಕೆಂದು ಹೋಗಿದ್ದರು. ದೇವರ ದರ್ಶನವಾದ ಮೇಲೆ ಅಲ್ಲಿಯೇ ಕಟ್ಟಿಯ ಮೇಲೆ ಕ್ಷಣಹೊತ್ತು ಕೂಡುವದು ವಾಡಿಕೆ. ಆಗ ಅಲ್ಲಿಗೆ ಬಾಪೂಸಾಹೇಬ ಹಾಗೂ ಲಿಂಗಪ್ಪ ಇವರಿಬ್ಬರೂ ಅವರು ಕುಳಿತ ಸ್ಥಳಕ್ಕೇ ಬಂದು ವಿನಯದಿಂದ ನಮಸ್ಕರಿಸಿದರು. ಬಾಳಾಚಾರ್ಯರು ಅವರಿಗೆ ಪ್ರತಿನಮಸ್ಕಾರ ಸಲ್ಲಿಸಿ ಕುಳಿತುಕೊಳ್ಳಲು ಸೂಚಿಸಿದರು. ಶೇಷಪ್ಪನೂ ಮಾತಾಡಿಕೊಂಡಂತೆ ಇವರಿದ್ದಲ್ಲಿಗೇ ಬಂದು ಕಟ್ಟಿಯ ಮೇಲೆ ಕುಳಿತು ಆಚಾರ್ಯರಿಗೆ ನಶ್ಯವನ್ನು ನೀಡಿದ.

ಲಿಂಗಪ್ಪನು ಸಕ್ಕರೆಯ ಪೊಟ್ಟಣವನ್ನು ಆಚಾರ್ಯರ ಮುಂದಿಟ್ಟು, "ವಾರಸಾ ತಕರಾರೀ ಅರ್ಜಿ ಪ್ರಕರಣ ಮುಗೀತರಿ. ನನ್ನ ಹೆಸರs ವಾರಸಾ ರಜಿಸ್ಟರದಾಗ ಹಚ್ಚಾಕ ಹುಕುಮು ಆಗೇತಿ. ಅದಕ್ಕೆ ಸಕ್ಕರಿ ತಂದೀನಿ, ತೊಗೊಳ್ರಿ" ಎಂದು ಅವಾಸ್ತವ ವಿನಯದಿಂದ ಸೂಚಿಸಿದ.

ಈ ಅನಿರೀಕ್ಷಿತವಾದ ವಿನಯದಿಂದ ಆಚಾರ್ಯರಿಗೆ ಈ ಮೊದಲೇ ಸಂಶಯ ಬಂದಿತ್ತು. ವಿನಯದ ಶಿರಿಯ ಹಿಂದೆ ನಡೆದ ನಾಟಕವನ್ನು ಅವರೂ ತಿಳಿದುಕೊಳ್ಳಬೇಕಾಗಿತ್ತು. ಅದೀಗ ತಿಳಿದಂತಾಯಿತು. ಸಕ್ಕರೆಯ ಪೊಟ್ಟಣವನ್ನು ಕಣ್ಣಿಂದ

ಕೂಡ ನೋಡದೆ, "ಮಾಮಲೇದಾರನ ಹುಕುಮು ಹೌದಲ್ಲೊ? ಅಪೀಲ ಮಾಡಿದರ ಟಿಕಾಸತದ ಏನೋ ಶೇಷಪ್ಪಾ?" ಎಂದು ಶೇಷಪ್ಪನ ಕಡೆಗೆ ತಿರುಗಿ ಕೇಳಿದರು.

ಶೇಷಪ್ಪನಿಗೆ ಒಮ್ಮೆಲೆ ಏನು ಉತ್ತರ ಕೊಡಬೇಕೆಂಬುದು ತಿಳಿಯಲಿಲ್ಲ. ಆಚಾರ್ಯರ ಧೂರ್ತತನದ ಬಲೆಗೆ ಸಿಗದಂತೆ, ಯಾವಾಗಲೂ ಮೈಗೆ ಎಣ್ಣೆಯನ್ನು ಸವರಿಕೊಂಡಂತೆ ಜಾರಬೇಕಾಗಿತ್ತು. ಆದ್ದರಿಂದ ನೇರವಾಗಿ ಉತ್ತರವೀಯದೆ "ಖರೆಕ್ಕ ಸಾವಿಲ್ಲ ಆಚಾರ್ರ ನ್ಯಾಯ ಇದ್ದ ಪಕ್ಷಕ್ಕ ಜಯಾ ಸಿಗಲಿಕ್ಕೇಬೇಕಲ್ಲ?" ಎಂದು ವೇದಾಂತ ಓದಿ, ಒಂದು ಚಿಟಿಕೆ ನಸ್ಯವೇರಿಸಿದ.

"ಹೌದಲ್ಲೋ? ಲಿಂಗಪ್ಪನ ವಾರಸಾ ನಿನಗ ನ್ಯಾಯದ್ದು ಅಂತ ಅನಸತದ. ನಾನು ಪಾರ್ವತೆವ್ವನ ಪಕ್ಷದವ, ನನಗ ಅನ್ಯಾಯದ್ದು ಅಂತ ಅನಸತದ. ನಿಮ್ಮ ಪಕ್ಷಕ್ಕ ಗೆಲವು ಸಿಗಲಿಕ್ಕೆ ಸಾಧ್ಯ ಇಲ್ಲ. ಅದಕ್ಕಂತ್ರ ನಾನು ಸಕ್ಕರೀ ತೊಗೊಳ್ಳೋದಿಲ್ಲ"ಎಂದು ಆಚಾರ್ಯರು ನಿಷ್ಠುರವಾಗಿ ತಮ್ಮ ಅಭಿಪ್ರಾಯವನ್ನು ಹೇಳಿದರು.

ಆಚಾರ್ಯರು ಗುಡಿಯಿಂದ ಮನೆಗೆ ಹೊರಟಾಗ ಆಗಲೇ ಕತ್ತಲಾಗಿತ್ತು. ವಿಚಾರಮಗ್ನರಾಗಿಯೇ ಮನೆಗೆ ನಡೆದರು. ಗೌಡರ ಮರಣದ ದೃಶ್ಯ ಅವರ ಕಣ್ಣು ತುಂಬಿತ್ತು. "ನಮ್ಮ ಮನೆತನದ ಮರ್ಯಾದಿ, ಆಚಾರೆಪ್ಪಾ, ನಿನ್ನಉಡ್ಯಾಗ" ಎಂಬ ಮಾತು ಕಿವಿಯಲ್ಲಿ ನಿನದಿಸುತ್ತಿದ್ದವು. ಪಾದಳ್ಳಿಯ ಭವಿತವ್ಯ ಮನಸ್ಸನ್ನು ತುಂಬಿತ್ತು. ಮನೆಗೆ ಬಂದು ದೇವರಿಗೆ ಮಂಗಳಾರತಿ ಮಾಡಿದರು. ದೇವರ ಮೂರ್ತಿಯ ಪೀಠಪ್ರಭಾವಳಿಯ ಹಿಂದಿನಿಂದ ಇಲಿಯೊಂದು ನುಸುಳಿ ಬಂದು ನಂದಾದೀಪದ ಎಣ್ಣೆಗೆ ಬಾಯಿ ಹಾಕಿತು. ಅದನ್ನು ನೋಡಿ ಆಚಾರ್ಯರ ಮಂಗ-ಳಾರತಿ ಮಾಡುವ ಕೈ ನಡುಗಿತು.

:: ೧೯ ::

ಅನಾವೃಷ್ಟಿಯಿಂದುಂಟಾದ ಭೀಕರ ಪರಿಸ್ಥಿತಿ, ಕಾಲರಾ ದಾಳಿಯಿಟ್ಟ ಪರಿಣಾಮವಾಗಿ ಅನೇಕರು ಮರಣಹೊಂದಿದ್ದು– ಈ ಕಾರಣದಿಂದ, ಪಾದಳ್ಳಿಯಲ್ಲಿ ಈ ಸಾರೆ ಹೋಳೀಹುಣ್ಣಿಮೆಯ ಉತ್ಸಾಹವೆಲ್ಲ ಅಡಗಿಹೋಗಿತ್ತು. ಯಾರೂ ಲಕ್ಷ್ಯವೀಯದ ಬಡ ಅತಿಥಿಯಂತೆ, ಕಾಮನ ಹಬ್ಬ ಬಂದರೂ ಅದನ್ನು ಕೇಳುವವರಿರಲಿಲ್ಲ. ಅಗಸೆಯ ಮುಂದೆ ಕಾಮದಹನಕ್ಕಾಗಿ ಕಳವಿನಿಂದ ತಂದೊಟ್ಟಿದ, ಪರ್ವತಪ್ರಾಯವಾದ ಕುಳ್ಳಿನ ರಾಶಿ ಈಗ ಕಾಣುತ್ತಿರಲಿಲ್ಲ. ಏನೋ, ದನ ಕಾಯುವ ಹುಡುಗರು ಬೊಬ್ಬೆ ಇಡುತ್ತ ತಮ್ಮ ನೆರೆಹೊರೆಯ ಹೆಂಗಸರು ಒಡಕು ಗೋಡೆಗೆ ಹಚ್ಚಿದ ಕುಳ್ಳುಗಳನ್ನು ಕದ್ದು, ಬೈಸಿಕೊಂಡು, ತಂದು ಹಾಕಿದ ಕುಳ್ಳಿನ ರಾಶಿ ಒಂದು ಮೊಟ್ಟೆ ತುಂಬುವಷ್ಟು ಕೂಡ ಇರಲಿಲ್ಲ. ಊರ ಅಗಸೆಯಲ್ಲಿ ಕಾಲಿಟ್ಟವರಿಗೆ ಈ ಉತ್ಸಾಹದ ಅಭಾವ ತಟ್ಟನೆ ಹೊಳೆಯುವಂತಿತ್ತು.

ಕಾಮನ ಹಬ್ಬದ ಹಿಂದಿನ ರಾತ್ರಿ, ಪಡದಪ್ಪನವರ ಮಠದಲ್ಲಿ ನಿತ್ಯದಂತೆ ಗಾಂಜೀ ಭಕ್ತರ ಮೇಳವು ತೀರ್ಥಪ್ರಾಶನಕ್ಕಾಗಿ ಕೂಡಿತ್ತು. ಮಠದಲ್ಲಿ ಪಡದಪ್ಪನವರಾಗಲಿ, ಲಿಂಗಪ್ಪನಾಗಲಿ ಕಾಣುತ್ತಿರಲಿಲ್ಲ. ಕೆಂಚನಿದ್ದಿದ್ದರೆ ಮಠದಲ್ಲಿ ಸೇರುವ ಸಭೆಗಳಿಗೆ ವಿಶೇಷ ಕಳೆ ಬರಬಹುದಾಗಿತ್ತು. ಊರಲ್ಲಿ ಯಾರು ಸತ್ತರೂ ತಮಗೇನು ಎನ್ನುವ ಅನಾಸಕ್ತರಿಗೆ ಕೂಡ, ಕೆಂಚನ ವಿಯೋಗದಿಂದ ಮಠ ಮೂಕವಾಯಿತೆಂಬ ಭಾವನೆ ಬಂದಿತ್ತು. ಮಠದಲ್ಲಿ ಈಗ ಸೇರಿದವರು ಕಾಟಕರು ಹಾಗೂ ಹೊಲೆಯರು. ಮಠದಲ್ಲಿ ಯಾರೂ ಯಜಮಾನರು ಇರಲಿಲ್ಲ. ಹೊತ್ತುಗಳೆಯುವದಕ್ಕೆಂದು ಆ ಮಾತು ಈ ಮಾತು ಆಡಬೇಕಾಗಿತ್ತು. ಹೊಲೆಯರ ರುದ್ರ, ತಾನು ಹಿಂದೆ ಕುಂಬಾರ ತುಳಜಪ್ಪನ ಕುಳ್ಳುಬಾನವನ್ನೊಡೆದು ಮೂವತ್ತು ಮೊಟ್ಟೆ ಕುಳ್ಳು ಕದ್ದ ಪರಾಕ್ರಮವನ್ನು ನೆನೆದುಕೊಂಡು, "ಈ ವರಸ ಕಾಮಣ್ಣನ ಬೆಂಕೀ ಕೊಡೂ ಪರಸಂಗನ್ನೇ ತಪ್ಪಿಧಾಂಗ ಕಾಣತೈತಿ" ಎಂದು ನಿಟ್ಟುಸಿರಿನ ಜವಲು ತಂಬಾಕಿನ ಚಿಲುಮೆಯನ್ನು ಜಗ್ಗಿ ಹೊಗೆಬಿಡುತ್ತ ಹೇಳಿದ. ಆ ಹೊಗೆ ಅವನ

ಮನೋವ್ಯಥೆಯಿಂದ ಸ್ನಿಗ್ಧವಾದಂತಿತ್ತು.

ಅಗಸೆಯ ಮುಂದಿನ ಊರ ದೊಡ್ಡ-ಕಾಮಣ್ಣನಿಗೆ ಸರಿರಾತ್ರಿಗೆ ಬೆಂಕಿ ಹಚ್ಚುವದು ನಡೆದು ಬಂದ ಸಂಪ್ರದಾಯ. ಅದಕ್ಕೂ ಮೊದಲು ಹೊಲೆಗೇರಿ ಯಲ್ಲಿಯ ಕಾಮನಿಗೆ ಬೆಂಕಿಹಚ್ಚಿ ಆ ಬೆಂಕಿಯನ್ನು ತಂದಮೇಲೆ ಅಗಸೆಯ ಮುಂದಿನ ಕಾಮದಹನ ನಡೆಯಬೇಕು. ಜಾಗೀರದಾರ, ದೇಶಪಾಂಡೆ, ಗೌಡ-ಕುಲಕರ್ಣಿ ಮೊದಲಾದ ವತನದಾರರ ಮನೆಗಳಿಗೆ ಹಲಗೆಯವರು ಹೋಗಿ, ಕರೆದು, ಅವರೆಲ್ಲ ಚಾವಡಿಯಲ್ಲಿ ಸಮ್ಮಿಲಿತರಾದ ಮೇಲೆ, ಹುಲಿಬ್ಯಾಟಿ ಹಳಬರು ಬೆಂಕಿಯನ್ನು ತರಲು, ಹಲಗೆಯವರೊಡನೆ ಹೊಲೆಗೇರಿಗೆ ದಿಗ್ವಿಜಯ ಮಾಡು ತ್ತಿದ್ದರು. ಹೊಲೆಗೇರಿಯಲ್ಲಿ ಮತ್ತೊಂದು ಮೋಜಿನ ಕಲಹ ನಡೆಯಬೇಕು. ಹಳಬರು ಅಲ್ಲಿಯ ಬೆಂಕಿಗೆ ಕೈ ಹಾಕಿದಾಗ, ಹೊಲೆಯರು ಅದನ್ನು ಒಯ್ಯ ಗೊಡದೆ, ಅವರ ಕೈಗಳ ಮೇಲೆ ಸತ್ತ ದನಗಳ ಎಲುಬುಗಳನ್ನು ತೂರುತ್ತಿದ್ದರು. ಎಲುಬುಗಳ ಸಂತತ ವರ್ಷದಲ್ಲಿಯೂ ಲಿಸ್ಸನ್ನದೆ, ಬೆಂಕಿಗೆ ಕೈಹಾಕಿ ಅದನ್ನೊ ಯ್ಯುವ ಸಾಹಸದಲ್ಲಿ ನಚಿಕೇತನಂತೆ ಖ್ಯಾತಿಪಡೆದ ತಳವಾರ ಮಲ್ಲನಿಗೆ ರುದ್ರನ ಮಾತು ಅಸಹನೀಯವೆನಿಸಿತು.

“ಯಾಕಲೇ ರುದ್ರ್ಯಾ, ಕಾಮಣ್ಣನ ಸುಡದಃಟು ಕೈ ಸೋತು ಕುಂತಿಲ್ಲ ನಾವು. ನಾಳೆ ಬೆಳಗಾದರ ಬಂತು ಹುಣ್ಣಿವಿ. ನೋಡೀಯಂತ ಬೆಂಕೀ ಒಯ್ಯೂ ಚಮತಾನರೇ. ಬೆಂಕಿ ಕೊಡೂದಾಗಾಣಿಲ್ಲ ಅಂತ ಯಾವ ಮಾತಿನ ಮ್ಯಾಗಿಂದ ಹೇಳತೀಯಲೇ?” ಎಂದು ಸಿಟ್ಟು ಕೆಣಕಿದಂತಾಗಿ, ಮೀಸೆಯನ್ನು ಹುರಿ ಮಾಡಿ, ಸುತ್ತು ಮುತ್ತೂ ನೋಡಿದ.

“ಹಾಗಲ್ರೀ ಮಲ್ಲಪ್ಪಗೌಡರಃ. ವರಸಾ ಕಾಮಣ್ಣಗ ದೊಡ್ಡ ಗೌಡರು ಬೆಂಕೀ ಕೊಡತಿದ್ದರು. ನೀವು ಲಡಾಯಿ ಮಾಡಿಕೊಂತ ಬೆಂಕೀ ಒಯ್ದದ್ದಕ್ಕ ಸಾರ್ಥಕ ಆಗತಿತ್ತು. ಈ ವರಸ ಕುಳ್ಳೂ ಕೂಡಿಲ್ಲ; ಮತ್ತ ಸರಹೊತ್ತಿನ ಮಟಾ ಉಪಾಸ ಕುಂತು ಕಾಮಣ್ಣನ ಬೆಂಕೀ ಹಚ್ಚಾಕ ಗೌಡರೂ ಇಲ್ಲಾ. ಅದಕ ಹಾಗ ಅಂದಿವ್ರೀ ಯಪಾ” ಎಂದು ಹೊಲೆಯರ ರುದ್ರ ಬಿನ್ನವಿಸಿಕೊಂಡ.

“ಲೇ ಮಳ್ಳನನ ಮಗನಃ ಎಲ್ಲಿ ಅದೀ? ಲಿಂಗಪ್ಪಗೌಡರ ಹೆಸರಲೆ ಮಾಮಲೇದಾರರು ಗೌಡಕೀ ಬರದ ಬಿಟ್ಟಾರಂತ, ತಾಲೂಕಿನಿಂದ ಕಾಗದ ಬಂದೈತಿ. ಅದಕಃ ಊರಾಗ ಸಕ್ಕರಿ ಹಂಚಲಾಕ ಅವರೂ, ಪಡದಪ್ಪನವರೂ ಕೂಡೇ ಹೋಗಿ

ದಾರು. ಲಿಂಗಪ್ಪಗೌಡರs, ನಾಳೆ ಗೌಡರೂ ಅಂತ ಡಂಗರಾ ಹೊಡಸೂದs. ಕಾಮಣ್ಣಾಗ ಅವರ ಕೈಯಿಂದನs ಬೆಂಕಿ ಕೊಡಸೂದು" ಎಂದು ಬಗಲಗಸಿ ಅಂಗಿ, ಪಾವಡದ ರುಮಾಲ ಧರಿಸಿದ ಶಿವಪುತ್ರಪ್ಪ ಬಿಳಿಗಡ್ಡದ ಮೇಲೆ ಕೈಯಾಡಿಸುತ್ತ ರುದ್ರನ ಅಜ್ಞಾನದ ಬಗ್ಗೆ ಛೀ ಹಾಕಿದ.

"ಲಿಂಗಪ್ಪನಂತವರು ಕಾಮಣ್ಣಾಗ ಬೆಂಕೀ ಹಚ್ಚೂದಾದರ ನಾವೆಲ್ಲ ಹೊಡಿಯೂದೇನರಿ?" ಎಂದು ದಳವಾಯಿ ತಿಪ್ಪ ತಲೆಯಲ್ಲಾಡಿಸುತ್ತ ಕೇಳಿದ.

"ಮಗನs, ಹೋಳಿಗಿ ತುಪ್ಪಾ ಹೊಡೀಲಾಕ ಗೌಡರ ಮದಿವಿ ಅಂತ ತಿಳದೀ ಏನಲೇ? ಬೆಂಕಿ ಹಚ್ಚಿದ ಮ್ಯಾಗ ಊರ ಜನಾ ಎಲ್ಲಾ ಕೂಡಿ ಬೊಬ್ಬಿ ಹೊಡಿಯೂದು ಅsಟ." ಎಂದು ತಳವಾರ ಮಲ್ಲ ವ್ಯಂಗವಾಗಿಯೇ ನುಡಿದ. ಶಂಕರಪ್ಪ ಗೌಡರಿದ್ದಾಗ, ಅವರು ಹುಣ್ಣಿವೆಯ ರಾತ್ರಿ ಹುಲಿಬ್ಯಾಟಿ ಹಳಬರಿಗೆಲ್ಲ ಹೋಳಿಗೆಯ ಊಟ ಮಾಡಿಸುತ್ತಿದ್ದರು. ಲಿಂಗಪ್ಪನವರ ಆಳಿಕೆಯಲ್ಲಿ ಅದೇನಿಲ್ಲ ಎಂದು ಅವನ ಸೂಚನೆಯು ಅರ್ಥವಾಗಿತ್ತು.

"ಹಾಗಾರ ಕಾಮಣ್ಣನ ಸುಡೂದು ಗಟ್ಟಿ ಆದಹಾಗ ಆತಲ್ಲರಿ? ಅಂದಮ್ಯಾಗ ಸುಡೂದು ರಬ್ಬ ಆಗಾಕs ಬೇಕು. ನೂರಾರು ಮಟ್ಟಿ ಕುಳ್ಳುಕೂಡಸದಿದ್ದರ ಅವೆಂತಾ ಸುಡೂದರಿ? ನೋಡಾಕ ಬಂದ ಜನಾ ಎಲ್ಲ ಛೀ ಅಂತ ಉಗಳಿ ಹೋದಾರು" ಉಪ್ಪಾರ ಮಾಳಪ್ಪ ಗೊಣಗುಟ್ಟಿದ.

"ನಮ್ಮ ಹೊಲಿಗೇರಿ ಹುಡುಗೂರಿಗೆ ಹೇಳಬಾರದs ಕುಳ್ಳಿನ ಡೀಗs ತಂದು ಅಗಸಿ ಮುಂದಿನ ಬೈಲೆಲ್ಲಾ ತುಂಬಿ ಬಿಡತೇವು" ಎಂದು ರುದ್ರ ಹೇಳುತ್ತಿರುವುದು ತಲೆಬಾಗಿಲಲ್ಲಿ ಬರುತ್ತಿದ್ದ ಪಡದಪ್ಪನವರ ಕಿವಿಗೂ ಬಿತ್ತು.

"ಎಲುವಿಲ್ಲದ ನಾಲಗಿ ಅಂತ ಸಿಕ್ಕ ಮಾತ ಆಡಬ್ಯಾಡ್ರೆಲೇ! ನಿಮ್ಮ ಹೊಲಗೇರಿ ಜನಾ ಭಂಡರು ಅಂತ ಸುತ್ತ ಹತ್ತ ಹಳ್ಳಿಗೆಲ್ಲಾ ಡಂಗರಾ ಸಾರ್ರೈತಿ" ಎಂದು ಪಡದಪ್ಪನವರು ಅವನ ಬಾಯಿಕಟ್ಟಿ, ಪಡಸಾಲೆಯಲ್ಲಿ ತಮಗಾಗಿ ಕಾದಿಟ್ಟ ಗದ್ದುಗೆಯ ಮೇಲೆ ವಿರಾಜಮಾನರಾದರು.

"ಯಪ್ಪಾ, ನಿಮ್ಮ ಕೈಯಾಗಿನ ಕಲ್ಲ ನಾವು. ಅಪ್ಪಣೀ ಕೊಡ್ರಿ, ಕಣ್ಣ ತಿರುಗೂ ಹಾಗ ಕುಳ್ಳಿನ ರಾಶೀ ತಂದು ಒಟ್ಟಿದಿದ್ದರ ಈ ಮಾತ ಆಡ್ರಿ" ಎಂದು ರುದ್ರ ನೆಲಮುಟ್ಟಿ ಶರಣುಮಾಡಿದ.

"ಛೀ, ನಿಮ್ಮ ಕೈಯಿಂದ ಆಗೂ ಮಾತs ಅಲ್ಲ. ತೆಸೀ ಮುರಕೊಂಡು,

ಹೆಂಡ್ರು ಮಕ್ಕಳ ಹೊಟ್ಟೆಗೆ ಹಾಕಿ ಸುಕದ್ಲೆ ಬಾಳೇ ಮಾಡ್ರೆಲೇ ಅಂತ ಹೇಳಿದರ,
ಲಿಸಿಲಿಸಿ ಹೊಲಕ್ಕ ಹೋಗಿ, ಬಂದೂವಪಾ, ತೇಕ ಹತ್ತಿ ಎಡವಿ ಬಿಳೂ ಖಬರ
ಇಲ್ಲದ. ಇಂತಾ ಹೇಡಿಗೋಳು ಊರಾಗಿನ ಕುಳಬಾನ ಕದ್ದು ತರತಾವಽ?" ಎಂದು
ಪಡದಪ್ಪನವರು ದೈವೀ ತಿರಸ್ಕಾರದಿಂದ ಹೇಳಿದರು.

"ಏನ ಮಾಡೂದ್ಽತಿ ಯಪ್ಪಾ, ಊರ ಹಿಂಡ ಜನಾ ಕೂಡಿಸಿದ್ದಿರೀ.
ಅವಕ್ಕೇನ ಗೊತ್ತು, ಹೊಲಾ ಚಂಡಿಯಾಡೂ ಮುಂದ ಮೈತುಂಬ ಕಣ್ಣು ಇರ
ಬೇಕನ್ನೂದು. ಕೊಡ್ಲೀ ಏಟು ಬಿತ್ತೋ ಅಂತ ಒಂದು ಕೂಗಿತೋ ಇಲ್ಲೋ,
ಉಳಿದವರೆಲ್ಲಾ ಕುರಿಹಿಂಡಿನ್ಹಾಂಗ; ಓಡಿ ಬಿಟ್ಟರು. " ರುದ್ರ ಊರ ಜನರನ್ನೇ
ಹೇಡಿಗಳೆಂದು ಆರೋಪಿಸುವ ದನಿಯಲ್ಲಿ ಮಾತನಾಡಿದ.

" ಲೇ ರುದ್ರ್ಯಾ, ಉಳದವರು ಓಡಿದರೂ, ನೀವ್ಯಾಕ ನಿಂತು ಲೂಟಿ ಮಾಡ
ಲಿಲ್ಲಲೇ?" ತಳವಾರ ಮಲ್ಲ ತಡೆಯಲಾರದೆ ಕೆಣಕಿದ.

"ಹೊಂಡೂ ಮುಕ್ಕಟ್ಟ ಅಪನವರು ಏನ ಹೇಳಿದ್ರ ಕೇಳಿದ್ದಿಲ್ಲೇನ ಗೌಡರಽ?
'ಮಕ್ಕಳ್ರ್ಯಾ, ನಾಕ ಮಂದಿಗೂಡ ಇರಬೇಕು.' ಅಂತ. ಉಳಿದವರು ಓಡಿದಾಗ
ನಾವು ನಿಂತ ಬಿಟ್ಟದ್ರ. ಎಲ್ಲೆ ಅಪನವರು ನಡಾ ಮುರೀತಿದ್ರೋ ಅಂತ ನಾವೂ
ಓಡಬೇಕಾತು" ಎಂದು ರುದ್ರ ಎಲ್ಲರ ಬಾಯಿ ಕಟ್ಟಿದ.

ಪಡದಪ್ಪನವರು ಶಿಷ್ಯನೊಬ್ಬ ಮಡಿಚಿಕೊಟ್ಟ ವೀಳ್ಯದೆಲೆಯನ್ನು ಬಾಯಿಗೆ
ಹಾಕಿಕೊಂಡು "ಳೇ ರುಡ್ರ್ಯಾ, ಹಾಗಾರ ಇಂಡ ಒಂಡ ಕೆಳಸಾ ಮಾಡ್ರಿ. ಗೌಡರ
ಮಣಿ ಹಿಟ್ಟಳದಾಗ ಕುಳಬಾಣ ಅದಾವು ಅವಣ್ಣೆಳ್ಳಾ ಕಡ್ಡು ತಂದು ಅಗಸಿ
ಬೈಲಾಗ ಒಗೀರಿ"

"ಕುಳಬಾನ ಕದಿಯಾಕ ಬಂದು ಮನಿದರೋಡೇ ಮಾಡಿದರು ಅಂತ
ಪಂಚೇತಿ ಕೂಡಸಬಾರದರೀ ಯಪಾ. ಅದಕ ಲಿಂಗಪ್ಪನೋರು, ನೀವು, ಮತ್ತ
ಇಲ್ಲಿ ಕುಂತಾರಲ್ಲ ಮಲ್ಲಪ್ಪಗೌಡರು ಮುಂದಾಗಬೇಕು. ಆ ಮ್ಯಾಗ ನೋಡೀರಂತ
ನಮ್ಮ ಕನೂಾಯಿೂನ" ಎಂದು ರುದ್ರ ಸೂಚಿಸಿದ.

ಪಡದಪ್ಪನವರಿಗೂ ಈ ಸೂಚನೆ ಸ್ವಾಗತಾರ್ಹವೆನಿಸಿತು. ರುದ್ರನ ಮಾತಿ
ನಲ್ಲಿಯ 'ಮನಿದರೋಡೆ' ಎಂಬ ಶಬ್ದ ಅವರ ಗುಪ್ತ ಆಸೆಯ ಮೇಲೆ ಬೆಳಕು
ಚಲ್ಲಿತು. ಕುಳ್ಳಿನ ತುಡುಗಿಗೆ ಪ್ರತಿಷ್ಠಿತರೇ ಹೊರಟರೆ, ನೂರಾರು ಉತ್ಸಾಹೀ
ತರುಣರು ಹಿಂದಿನಿಂದ ಬರಬಹುದು. ಈ ನೆವದಿಂದ, ಹೊಲ ಲೂಟಿ ಮಾಡು

ವಾಗಿನ ಸೋಲಿನ ಮುಯ್ಯಿ ತೀರಿಸಿದಂತಾಗಬೇಕು. ಗೌಡರ ಭೂತ ಕಾವಲು ನಿಲ್ಲುತ್ತದೆಯೇ ? ಆ ಜೊಬ್ಬಾಟವನ್ನು ಒಮ್ಮೆ ಒರೆಗೆ ಹಚ್ಚಿಬಿಡಬೇಕು. ಹೋಳೀ ಹುಣ್ಣಿವೆಯ ಧರ್ಮಚೌರ್ಯದಲ್ಲಿಯೇ ಇನ್ನೊಂದು ಕಳವನ್ನೂ ತೀರಿಸಿಬಿಡ ಬೇಕು. ಪಡದಪ್ಪನವರು ಇದೇ ವಿಚಾರಗಳಲ್ಲಿ ತಲ್ಲೀನರಾಗಿರುವಾಗಲೇ, ಲಿಂಗಪ್ಪ, ಬಾಪೂಸಾಹೇಬ, ಶೇಷಪ್ಪನವರು ಒಳಗೆ ಬಂದರು. ಅವರ ಆಗಮನದೊಂದಿಗೆ ತೀರ್ಥದ ಬಾಟಲಿಗಳೂ ಬಂದವು. ಶೇಷಪ್ಪ ದೂರ ಸರಿದು ಕುಳಿತ. ಉಳಿದವರು ತೀರ್ಥಪ್ರಾಶನದಿಂದ ಉತ್ಸಾಹಿತರಾದರು; ಅಮಲೇರಿತು. "ಕುಳಬಾನ ಒಡೀ ಬೇಕು; ಕಾಮಣ್ಣನ ಸುಡಬೇಕು. ಲಿಂಗಪ್ಪನವರನ ಗಾದಿಗೆ ಕೂಡಸಬೇಕು" ಎಂದು ಏಕಕಂಠದಲ್ಲಿ ಒಬ್ಬರು ಮಾತಾಡಿದ್ದನ್ನೇ ಇನ್ನೊಬ್ಬರು ಪುನರುಚ್ಚರಿಸ ತೊಡಗಿದರು.

ಪಡದಯ್ಯನವರ ಪರಿವಾರ ಇವೇ ಶಬ್ದಘೋಷದೊಂದಿಗೆ ಮಠದಿಂದ ಹೊರಬಿತ್ತು. ಕುಡಿದವರೂ, ಕುಡಿಯದಿದ್ದವರೂ ಕೂಡಿಯೇ ಎಚ್ಚರತಪ್ಪಿ ದಂತಿದ್ದರು. ಬೆಳುದಿಂಗಳು ಸೊಂಪಾಗಿ ಓಣಿಯಲ್ಲೆಲ್ಲ ಚಲ್ಲಿತ್ತು. ನಡುರಾತ್ರಿ ಯಲ್ಲಿ ತಂಗಾಳಿ ಬೀಸುತ್ತಿದ್ದದ್ದರಿಂದ ಸೆಕೆಗಾಲದಲ್ಲಿ ಹಿತಕರವಾಗಿತ್ತು. ಈ ಜನ ಸಮೂಹ, ವಾಡೆಯ ಮುಂದೆ ಹಾಯ್ದು ಅಗಸೆಗೆ ಬಂದಿತು. ವಾಡೆಯಲ್ಲಿದ್ದ ಜನರು, ಅಗಸೆಯ ನೆರೆಹೊರೆಯಲ್ಲಿದ್ದ ಮನೆಗಳ ಜನರು ಈ ಹಿಂಡನ್ನು ಸೇರಿ ಕೊಂಡರು. ಅವರೆಲ್ಲ ನೇರವಾಗಿ ಗೌಡರ ಮನೆಯತ್ತ ಹೋಗದೆ, ಜನರನ್ನು ಕೂಡಿಸುತ್ತ ಊರಲ್ಲಿಯ, ಕಾಟಕರ ಓಣಿ, ಹೊಲಗೇರಿ, ಕುರುಬಗೇರಿಗಳನ್ನು ತಿರುಗಾಡಿ, ಕುಳ್ಳು,ಹೊರಲು ಕಂಬಳಿಗಳನ್ನು ಹೊತ್ತು ಗೌಡರ ಮನೆಯತ್ತ ಸಾಗಿ ದರು. ಇಷ್ಟರಲ್ಲಿ ನಾಯಿಗಳ ಬೊಗಳುವಿಕೆಯಿಂದ ಊರಲ್ಲಿ ಜನರು ಎಚ್ಚತ್ತಿದ್ದರು.

ಪ್ರತಿ ವರ್ಷ ದೊಡ್ಡವರ ನೇತೃತ್ವದಲ್ಲಿ ಈ ಕಳವಿಗಾಗಿ, ಹತ್ತಿಪ್ಪತ್ತು ಜನರ ತಂಡ ಆಡ್ಡಾಡುತ್ತಿದ್ದಾಗ ಕಂಡು ಬರದ ಒಂದು ವಿಶೇಷ ಸಂಗತಿ ಈ ಜನ ರನ್ನು ಬಾಧಿಸಿತು. ಗಂಟಲು ಹರಿಯುವ ಹಾಗೆ ನಾಯಿಗಳು ಬೊಗಳುತ್ತಿದ್ದದ್ದ ರಿಂದ, ಎಚ್ಚತ್ತ ಜನರು, 'ಯಾರವರು ?' ಎಂದು ಕೇಳಹತ್ತಿದರು. ಈ ವರ್ಷ ಹೊಲಗಳಲ್ಲಿ ರಾಶಿ ಮಾಡುವ ಪ್ರಸಂಗವಿರಲಿಲ್ಲ. ಮೇಲುಭೂಮಿ ಕೂರಿಗೆ ಎರಡೆ ಬಿದ್ದಿತ್ತು. ವರ್ಷವೂ ರಾತ್ರಿಯ ಕಾವಲು ಮಾಡಬೇಕಾದ ನಾಯಿಗಳು ಕೆಲಸವಿಲ್ಲದೆ ಊರಲ್ಲಿ ತಿರುಗಾಡಹತ್ತಿದ್ದವು. ಹೊಲಕ್ಕೆ ಹೋಗುವ ಜನರೂ

ಮನೆಯಲ್ಲಿದ್ದರು. ಹೀಗಾಗಿ ಹಿಂದಿನಂತೆ ಕಳವಿನ ಯಾತ್ರೆ ಸುಸೂತ್ರವಾಗಿರಲಿಲ್ಲ. ಆದರೂ ಪಡದಪ್ಪನವರು ಮುಂದಿಟ್ಟ ಹೆಜ್ಜೆಯನ್ನು ಹಿಂದಿಡುವ ಸ್ವಭಾವದವರಲ್ಲ. ತಮ್ಮ ಹಿಂದಿರುವ ಜನರ ಸಂಖ್ಯಾಬಲದ ಮೇಲೆ ಅವರಿಗೆ ಅಪಾರ ವಿಶ್ವಾಸ ವಿತ್ತು. ಮೇಲಾಗಿ ಹೋಳೀಹುಣ್ಣಿವೆಯ 'ಕಾಯದೇಶೀರ' ಕಳವನ್ನು ಪ್ರತಿಬಂಧಿಸುವ ಮೂರ್ಖನಾದರೂ ಯಾರು? ಹಾಗೆ ಪ್ರತಿಬಂಧಿಸಿ ಅವನು ಸೆಗಣಿಯ ಕುಳ್ಳುಗಳನ್ನು ಉಳಿಸಿಕೊಳ್ಳಬೇಕೆ? ಇದೇ ವಿಚಾರದಲ್ಲಿಯೇ, ಬಾಪೂಸಾಹೇಬ, ಲಿಂಗಪ್ಪ, ಪಡದಪ್ಪ ಈ ಮೂವರೂ ಗೌಡರ ಹಿತ್ತಲದ ಬಾಗಿಲ ಸಮೀಪಕ್ಕೆ ಬಂದು ನಿಂತರು.

ಕುಳ್ಳುಬಾನಗಳಿಗೆ ಮುತ್ತಿಗೆ ಹಾಕಲು ಪಡದಪ್ಪನವರು ಕೈಸನ್ನೆಮಾಡಿದ್ದೇ ತಡ ಅವರ ಹಿಂದೆ ಬಂದ ಜನರು ಹಿತ್ತಲದ ಬೇಲಿಕಿತ್ತಿ ಒಳಗೆ ನುಗ್ಗಿದರು. ಕುಳ್ಳುಬಾನಕ್ಕೆ ಕೈ ಹಚ್ಚುವ ಮೊದಲು, ಅರ್ಧ ಅಮಲೇರಿದ್ದರಿಂದ, ಅರ್ಧ ಮನೆಯವರಿಗೆ ಸೂಚನೆ ಕೊಡುವ ಉದ್ದೇಶದಿಂದ ಭೀಭತ್ಸವಾಗಿ ಬೊಬ್ಬೆಹೊಡೆದರು. ಅದರಿಂದ ಎಚ್ಚರಾಗಿ ಗೌಡರ ಮನೆಯವರು, ಹಿತ್ತಲದ ಬಾಗಿಲು ತೆಗೆದರೆ, ಮನೆಯೊಳಗೆ ನುಗ್ಗಬಹುದೆಂದು ಪಡದಪ್ಪನವರ ಯೋಜನೆಯಾಗಿತ್ತು. ಆ ಕೆಲಸಕ್ಕಾಗಿಯೇ ಸನ್ನದ್ಧವಾದ ಕಾದಿಟ್ಟ ದಳವೊಂದು ಪಡಪ್ಪನವರ ಸಾನ್ನಿಧ್ಯದಲ್ಲಿಯೇ ನಿಂತಿತ್ತು.

ಬೊಬ್ಬೆ ಹೊಡೆದದ್ದೇನೋ ಕೇಳಿತು. ಆದರೆ ಕುಳ್ಳುಬಾನಗಳನ್ನು ಒಡೆಯುವ ಸದ್ದು ಮಾತ್ರ ಕೇಳಲಿಲ್ಲ. ಅಮಲಿನಲ್ಲಿ ಅವರಿಗೇನನ್ನಿಸಿತ್ತೋ, ಆ ಜನರ ಬೊಬ್ಬೆ ಅಖಂಡವಾಗಿ ಮುಂದುವರಿಯಿತು. ಪಡದಪ್ಪನವರ ಕಿವಿಗಳು ಜಾಗೃತವಾದವು. ಅವರ ಎಲ್ಲ ಇಂದ್ರಿಯಗಳೂ ಕಿವಿಯೊಂದರರಲ್ಲಿಯೇ ಕೇಂದ್ರಿಕೃತವಾಗಿದ್ದವು. ಬೊಬ್ಬೆಯಿಂದ ಎಚ್ಚತ್ತ ಗೌಡರ ಮನೆಯವರು ಬಾಗಿಲ ತೆರೆಯಬಹುದೇನೋ ಎಂದು ನಿರೀಕ್ಷಿಸಿದರು. ಆದರೆ ಬಾಗಿಲು ತೆರೆಯಲಿಲ್ಲ. ಇತ್ತ ಕುಳ್ಳುಬಾನಗಳನ್ನೂ ಒಡೆದಿಲ್ಲ, ಅತ್ತ ಬಾಗಿಲೂ ತೆರೆಯಲಿಲ್ಲ, ಆದರೆ ಜನರ ಶಂಖವಾದ್ಯ ಮಾತ್ರ ನಿರಂತರವಾಗಿ ನಡೆದಿತ್ತು. ಪಡದಯ್ಯನವರು ಅದನ್ನೇ ಸೂಕ್ಷ್ಮವಾಗಿ ಕೇಳಿದರು. ಮೊದಮೊದಲು ಆ ಬೊಬ್ಬೆಯ ದನಿಯಲ್ಲಿ ಕೇಳಿದ ಉತ್ಸಾಹ, ಕುಡಿತದ ಅಮಲು ಈಗ ಕೇಳುತ್ತಿರಲಿಲ್ಲ. ಅದರ ಬದಲಾಗಿ ಆ ಬೊಬ್ಬೆಯ ದನಿಯಲ್ಲಿ ಕರ್ಕಶವಾದ ಕರುಣರಸ ಹೊರಹೊಮ್ಮಿತು. ಕುಳ್ಳುಗಳ ಮೊಟ್ಟೆಯನ್ನು ಹೊತ್ತು

ವಿಜಯೋತ್ಸಾಹದಿಂದ ಬರಬೇಕಾದ ಜನರ ಬದಲಾಗಿ, ಕೆಲಜನರು ತಲೆ ಒಡೆದು ರಕ್ತ ಚಿಮ್ಮುವ ರುದ್ರನನ್ನು ಹೊತ್ತುಕೊಂಡು ಬಂದವು. ಪಡದಯ್ಯನವರಿಗೆ ಆ ಕ್ಷಣದಲ್ಲಿ ಸಿಡಿಲುಬಡಿದಂತಾಯಿತು. ಗೌಡರ ದೆವ್ವ ಕುಳ್ಳುಬಾನವನ್ನೊಡೆದು ಬಂದು ಸದ್ದಿಲ್ಲದೆ ಈ ಹತ್ಯಾಕಾಂಡವನ್ನು ನಡೆಸಿತೇ, ಎಂದು ಆಶ್ಚರ್ಯವಾಯಿತು.

"ಏನ್ರೆಲೇ ಇದೇನು? ಹೀಂಗ್ಯಾಕಾತು ರುದ್ರ್ಯಾನ ಹಣೇಬಾರ?" ಎಂದು ಹೆದರಿಕೆಯಿಂದಲೇ ಕೇಳಿದರು.

"ಕಲ್ಲಿನ ಸುರಿಮಳೀರಿ ಎಪ್ಪಾ!" "ಕುಳಬಾನದ ಸುತ್ತ ಹತ್ತ ದಿಕ್ಕಿನಿಂದ ಬೀಳತಾವರಿ!" "ಕಲ್ಲ ಒಗಿಯೋ ಮನಸ್ಯಾರ‌ಃ ಕಾಣವಲ್ಲರರೀ!" "ಗುರಿ ಇಟ್ಟು ಬೀಸಿದ್ಹಾಂಗ ಕಲ್ಲ ಬೀಳತಾವರಿ!" "ಒಂದೊಂದು ಕವಣಿಗಲ್ಲಿನಂತಾವರಿ!" ಒಂದು ಪ್ರಶ್ನೆಗೆ ಕಲ್ಲಿನ ಮಳೆ ಸುರಿದಂತೆ ಉತ್ತರಗಳ ಸುರಿಮಳೆಯಾಗಲು ಪಡದಪ್ಪನವರು ನಿಂತಲ್ಲಿಯೇ ದಿಙ್ಮೂಢರಾದರು.

"ಬ್ಯಾಡ ನಡೀರೆಲೆ, ಗೌಡರ ಮನೀ ಕಾಮಣ್ಣ ಅಂವ. ಅಂದಮ್ಯಾಲ ಗೌಡರ ಮನಿ ಕುಳ್ಳು ಹ್ಯಾಂಗ ದಕ್ಯಾವು?" ಎಂದು ಬಾಪೂಸಾಹೇಬ ನಿರುತ್ಸಾಹದ ದನಿಯಲ್ಲಿಯೇ ಹೇಳಿದಾಗ ಯಾರೂ ಇಲ್ಲವೆನ್ನುವಂತಿರಲಿಲ್ಲ. ಕೆಲವರಂತೂ ಈಗಾಗಲೆ ಜೇಲಿಯನ್ನು ಜಿಗಿದು ಓಡಿ ಹೋಗಿದ್ದರು. ಗಾಯಗೊಂಡ ರುದ್ರನನ್ನು ಹೊತ್ತುತಂದ ಜನರು ಅವನನ್ನು ಹೊತ್ತುಕೊಂಡೇ ಮನೆಯ ದಾರಿ ಹಿಡಿದರು. ಲಿಂಗಪ್ಪ ಮಾತ್ರ ಕಲ್ಲು ಒಗೆದವರಾರು ಎಂಬುದನ್ನು ಪತ್ತೆ ಹಚ್ಚಲು, ಏಕಾಕಿಯಾಗಿ ಕುಳ್ಳುಬಾನದತ್ತ ಸಾಗಿದ. ಪಾಪ, ಅವನಿನ್ನೂ ತನ್ನ ಸಂಶೋಧನ ಕಾರ್ಯವನ್ನು ಪ್ರಾರಂಭಿಸಿರಲಿಲ್ಲ ಕೂಡ, ಆಗಲೇ ಲಿಂಬೆಹಣ್ಣಿನಾಕಾರದ ಬೆಣಚುಗಲ್ಲೊಂದು ಅವನ ಮೊಳಕಾಲ ಪರಟೆಗೇ ಎರಗಿತು. "ಅಯ್ಯೋ ಸತ್ತೆ!" ಎಂದು ನೆಲಕ್ಕೇ ಕುಸಿದ. ಪಡದಯ್ಯನವರ ಗಂಡೆದೆ ಕೂಡ ಆ ಆರ್ತಧ್ವನಿಯನ್ನು ಕೇಳಿ ನಡುಗಿತು. ಗೌಡರ ಮನೆಯ ದರೋಡೆಗೆ ಸಿದ್ಧನಾಗಿದ್ದ ತಳವಾರ ಮಲ್ಲ, ಲಿಂಗಪ್ಪನನ್ನು ಹೊತ್ತು ಮಠಕ್ಕೆ ಸಾಗಿಸಬೇಕಾಯಿತು.

ಹುಣ್ಣಿಮೆಯ ಮುನ್ನಾದಿನ ನಡೆದ ಘಟನೆ, ಮರುದಿನ ಒಂದು ರಸವತ್ತಾದ ಕತೆಯಾಗಿ ಹರಡಿ, ಹೋಳಿಹುಣ್ಣಿಮೆಯ ಉತ್ಸವಕ್ಕೆ ಕೌತುಕದ ಓಕಳಿಯನ್ನೆರಚಿತು. ಕುಳ್ಳಿನ ಕಳವಿಗೆಂದು ಹೋದವರೆ ಶಂಕರಪ್ಪಗೌಡರ ಭೂತ ಕಾವಲು ಮಾಡುತ್ತ, ಕಳ್ಳರನ್ನು ಕಲ್ಲಿನ ಮಳೆಗರೆದು ಓಡಿಸಿತೆಂದು ಸುದ್ದಿ ಹಬ್ಬಿತು. ದಾದಾ

ಮತ್ತು ಅವನ ಗರಡಿಮನೆಯ ಗೆಳೆಯರು ಮಾಳಿಗೆಯ ಮೇಲೆ ಕಾಣದಂತೆ
ನಿಂತುಕೊಂಡು, ಕಲ್ಲೊಗೆದಿವೆಂದು ಅವರೇ ಒಂದು ಹೇಳಿದ್ದರೂ, ಅದೆಲ್ಲ ಕಟ್ಟುಕತೆ
ಯೆಂದು ಕೇಳಿದವರೆಲ್ಲ ನಕ್ಕುಬಿಡಬಹುದಾಗಿತ್ತು. ಶಂಕರಪ್ಪಗೌಡರ ಭೂತದ
ವಿಷಯಕ್ಕೆ ಜನರಲ್ಲಿ ಅಷ್ಟೊಂದು ನಂಬಿಕೆ ಹುಟ್ಟಿಬಿಟ್ಟಿತ್ತು.

. ಹುಣ್ಣಿವೆಯ ದಿನ ಪಾರ್ವತೆವ್ವ ತನ್ನ ಮಗ ಶಿವಪ್ಪಗೌಡನಿಗೆ, ಮಧ್ಯ
ರಾತ್ರಿಯವರೆಗೆ ಕಡ್ಡಾಯವಾಗಿ ಉಪವಾಸವಿರಲು ಹಚ್ಚಿದಳು. ವಾಡಿಕೆಯಂತೆ
ಕುಳ್ಳಿನ ದೊಡ್ಡ ಸಂಗ್ರಹ ಕೂಡಿರಲಿಲ್ಲ. ಆದರೂ ದಾದಾ ಹಾಗೂ ಅವನ ಗೆಳೆ
ಯರು ಕೂಡಿ ನಾಲ್ಕಾರು ಮೊಟ್ಟೆ ಕುಳ್ಳು ಕೂಡಿಸಿ ಅಗಸೆಯ ಮುಂದೆ ತಂದೊ
ಟ್ಟಿದ್ದರು. ರಾತ್ರಿ ಬಾಳಾಚಾರ್ಯರು ಕಾಮನ ಪೂಜಾವಿಧಾನವನ್ನು ಶಾಸ್ತ್ರೋಕ್ತ
ವಾಗಿ ಮುಗಿಸಿದ ಮೇಲೆ, ಜನರೆಲ್ಲ ಹಲಗೆಯೊಂದಿಗೆ ಹೊಲೆಗೇರಿಗೆ ಜೆಂಕಿ ತರಲು
ಹೋದರು.

ಹೊಲೆಯರ ಗುದ್ರ ಹಿಂದಿನ ರಾತ್ರಿ ತಲೆ ಒಡೆದುಕೊಂಡಿದ್ದರಿಂದ ಹೊಲೆ
ಯರೆಲ್ಲ ಸಿಟ್ಟಾಗಿದ್ದರು. ಈಗ ಜೆಂಕಿಯನ್ನು ಒಯ್ಯಲು ಒಂದವನ ತಲೆ ಒಡೆಯ
ಬೇಕೆಂದು ಅವರು ಕಾದಿದ್ದರು. ಇದು ಮೊದಲೇ ಹೇಗೋ ತಿಳಿದದ್ದರಿಂದ ಜೆಂಕಿ
ಯನ್ನು ಮುಂದೆ ಬಿದ್ದು ಒಯ್ಯಲು ಯಾರೂ ಸಿದ್ಧರಿರಲಿಲ್ಲ. ದಾದಾನ ಕೈಯಲ್ಲಿ
ಉರಿಯುವ ದೀವಟಿಗೆಯಿತ್ತು. ಆ ಮಾತು ಈ ಮಾತು ಆಡುತ್ತಲೇ ದಾದಾ
"ಯಪ್ಪಾ ಹಾವಲೇ !" ಎಂದು ಚೀರಿ ಕೈಯಲ್ಲಿಯ ದೀವಟಿಗೆಯನ್ನು ಸಮೀಪ
ದಲ್ಲಿದ್ದ ಮುಳ್ಳಿನ ಬೇಲಿಯ ಮೇಲೆ ತೂರಿಬಿಟ್ಟ. ಜೆಂಕಿಯನ್ನು ಕಾಯಲು ನಿಂತ
ವರಲ್ಲಿ ಕೋಲಾಹಲವೆದ್ದಿತು. ಬೇಲಿಗೆ ಜೆಂಕಿ ಹತ್ತಬಹುದೆಂದು ಕೆಲವರು, ಹಾವು
ಬಂದಿತೆಂದು ಕೆಲವರು ಅಂತೂ ಎಲ್ಲರೂ ದೀವಟಿಗೆ ಬಿದ್ದತ್ತ ಧಾವಿಸಿದರು. "ಅಲ್ಲೆ
ಅಲ್ಲೆ ಸರಸರ ಅಂತೈತಿ ನೋಡ್ರಿ" ಎಂದು ನುಡಿಯುತ್ತಲೇ ಎಲ್ಲರ ಕಣ್ಣು ತಪ್ಪಿಸಿ
ಜೆಂಕಿಯನ್ನು ತೆಗೆದುಕೊಂಡು ಶಂಖವಾದ್ಯ ಮಾಡಿದ. "ಅಂತೂ ದಾದಾ ಜೆಂಕಿ
ಮುಟ್ಟಿ ಪಾರಾದ" ಎಂದು ಹೇಳಿ ಹೊಲೆಯರೆಲ್ಲ ಹಲಗೆಯ ಮೇಳದೊಂದಿಗೆ
ಅಗಸೆಗೆ ನಡೆದರು.

ಈ ಸಾರೆ ಲಿಂಗಪ್ಪನೇ ಜೆಂಕಿ ಹಚ್ಚುವನೆಂದು ಜಂಭ ಕೊಚ್ಚಿದವರೊಬ್ಬರೂ
ಅಲ್ಲಿರಲಿಲ್ಲ. ಅವನ ಮೊಳಕಾಲು ಇಂಥ ಹೊತ್ತಿನಲ್ಲಿಯೇ ಕೈ ಕೊಟ್ಟಿತ್ತು. ಶಿವಪ್ಪ
ಗೌಡನೇ ಜೆಂಕಿಹಚ್ಚಿ ಸಂಪ್ರದಾಯ ಮುರಿಯದಂತೆ ನೋಡಿಕೊಂಡ. ಕಾವ

ದಹನವಾದ ಮೇಲೆ, ಶಿವಪ್ಪ ಪಾರಣೆ ತೀರಿಸುವಾಗ ಹುಲಿಬ್ಯಾಟಿ ಹಳಬರಿಗೂ ಊಟದ ವ್ಯವಸ್ಥೆಯನ್ನು ಪಾರ್ವತೆವ್ವ ಮಾಡಿದ್ದಳು. ಆದರೆ ಬಾಪೂಸಾಹೇಬ ಅವರಿಗೆ ವಾಡೆಯಲ್ಲಿಯೇ ಊಟದ ವ್ಯವಸ್ಥೆಮಾಡಿ, ಅವರಾರೂ ಗೌಡರ ಮನೆಗೆ ಊಟಕ್ಕೆ ಹೋಗದಂತೆ ನಿರ್ಬಂಧ ಹಾಕಿದ. ಹುಲಿಬ್ಯಾಟಿ ಹಳಬರು ಬಾರದ್ದರಿಂದ ಅವರ ಪಾಲಿನ ಅಡಿಗೆ ಹೊಲೆಯರಿಗೆ ಮೀಸಲಾಯಿತು. ಹೊಲೆಗೇರಿಗೆ ಊಟದ ಕರೆ ಹೋದಾಗ ಆಗಲೇ ಮಧ್ಯರಾತ್ರಿ ಮೀರಿ ಹೋಗಿತ್ತು. ಆದರೂ ಹೊಲೆಯರೆಲ್ಲ ಚಿಕ್ಕದೊಡ್ಡವರೆನ್ನದೆ, ಪರ್ಯಾಣ ಹಿಡಿದುಕೊಂಡು ಗೌಡರ ಮನೆಬಾಗಿಲಿನಿಂದ ಹೋಳಿಗೆ ಹಾಕಿಸಿಕೊಂಡು ತೃಪ್ತರಾಗಿ ನಡೆದರು.

ಮರುದಿನ ಬೆಳಕುಹರಿಯುತ್ತಲೇ ಓಕಳಿ; ತರುಣರ ಸುಪ್ತಚೇತನಕ್ಕೆ ನೆರೆ ಬರುವ ಕಾಲ. ಹುಡುಗರೆಲ್ಲ ಕತ್ತೆಗಳ ಸವಾರಿ ಮಾಡಿದರು. ಎದುರಿಗೆ ಬಂದವರನ್ನು ಶಂಖವಾದ್ಯದಿಂದ ಸ್ವಾಗತಿಸಿ, ಬಟ್ಟೆಗಳ ಮೇಲೆಲ್ಲ ಶಗಣೆರಾಡಿಯನ್ನು ತೂರಿ ಅಂದಿನ ಕಾರ್ಯಕ್ರಮವನ್ನು ಪ್ರಾರಂಭಿಸಿದರು. ಪಾದಳ್ಳಿಯಲ್ಲಿ ಈ ಒಂದು ದಿನ ಮಾತ್ರ, ಸಣ್ಣವರು ದೊಡ್ಡವರೆನ್ನುವ ತಾರತಮ್ಯ, ಗೌರವ-ಮರ್ಯಾದೆಗಳು ಶಗಣೆಯರಾಡಿಯಲ್ಲಿ ಮುಳುಗಿರುತ್ತವೆ. ಹೊತ್ತೇರಿದಂತೆ ದೊಡ್ಡವರನ್ನೇ ಹಿಡಿದು ಕತ್ತೆಯ ಮೇಲೆ ಕೂಡಿಸಿ, ಹರಕು ಮೊಚ್ಚೆಗಳ ಮಾಲೆಯನ್ನು ಹಾಕಿ, ತಿಪ್ಪೆಯಲ್ಲಿ ಬಿದ್ದ ಹರಕು ಮೊರ-ಬುಟ್ಟಿಗಳ ಛತ್ರಚಾಮರಗಳ ಅಪೂರ್ವವೈಭವದೊಂದಿಗೆ ಅವರ ಮೆರವಣಿಗೆಗಾರಂಭವಾಯಿತು. ಶಂಖವಾದ್ಯದ ದನಿ ಗೋಪುರ ಗೋಪುರವಾಗಿ ಏರುತ್ತಿತ್ತು. ಅಷ್ಟರಲ್ಲಿ ನದಿಗೆ ಸ್ನಾನಕ್ಕೆ ಹೊರಟ ಬಾಳಾಚಾರ್ಯರ ಮೇಲೆಯೇ ತರುಣರ ಕಣ್ಣು ಬೀಳಬೇಕೇ? ಆ ತಂಡದಲ್ಲಿಯ ಒಬ್ಬ ಉಂಡಾಡಿ–ವರ್ಷದುದ್ದಕ್ಕೂ ಹೋಳಿಹುಣ್ಣಿವೆಯ ವೇಷ ಹಾಗೂ ಭಾವಲಹರಿಗಳಲ್ಲಿಯೇ ಬಾಳು ಕಳೆಯುವ ಒಬ್ಬ ಆಚಾರ್ಯರ ಮಗ– ಅವರ ಹತ್ತಿರ ಬಂದು ವಿನಯದ ಸೋಗಿನಿಂದ "ಆಚಾರ್ರ, ತಮಗೂ ಅಷ್ಟು ಸಂಸ್ಕಾರ ಆಗಬೇಕು ಅಂತ ನಮ್ಮದೆಲ್ಲಾ ಅಪೇಕ್ಷಾ" ಎಂದು ನಗುನಗುತ್ತಲೇ ಹೇಳಿದ. ಬಾಳಾಚಾರ್ಯರಿಗೆ ಈ ಗುಂಪನ್ನು ನೋಡಿಯೇ ತಮ್ಮ ಹುಡುಗತನ ಮರುಕಳಿಸಿ ಬಂದಿತೇನೋ! "ಊರಾಗ ಇಷ್ಟೆಲ್ಲಾ ದೊಡ್ಡ ಜನರು-ಕುಲಕರ್ಣಿ ಶೇಷಪ್ಪ–ಜಾಗೀರದಾರರು ಇವರೆಲ್ಲ ಇರೋ ಮುಂದ, ನನ್ನಂಥ ಬಡಬ್ರಾಹ್ಮಣಗ ಯಾಕ್ರ್ಯೋ ಈ ಮರ್ಯಾದಿ? ಅವರನ್ನು ಕೂಡಸರಿಪಾ, ಅವರ ಹಿಂದಿನಿಂದ ಗುಣಗಾನ ಮಾಡೋ ಭಟ್ಟಂಗಿ

ಯಾಗಿ ಬರತೀನಿ, ಆತಿಲ್ಲೋ" ಎಂದು ಆಚಾರ್ಯರು ನಗುತ್ತಲೇ ಉತ್ತರವಿತ್ತರು. ತರುಣರ ತಂಡ ದೊಡ್ಡದಾಗಿ ನಕ್ಕು ಮತ್ತೊಮ್ಮೆ ಬೊಬ್ಬೆ ಹೊಡೆದು ಶೇಷಪ್ಪನ ಮನೆಬಾಗಿಲಿಗೆ ಬಂದು ನಿಂತಿತು.

ಶೇಷಪ್ಪನ ಮನೆಯ ಬಾಗಿಲು ಹಾಕಿತ್ತು. ಶೇಷಪ್ಪ ಮುಂದಾಗುವದನ್ನೆಲ್ಲ ಊಹಿಸಿಯೇ ಒಳಚಿಲಕ ಹಾಕಿಕೊಂಡು ಅಡಗಿ ಕುಳಿತಿದ್ದ. ತರುಣರು ಬೊಬ್ಬೆ ಹೊಡೆದೂ ಹೊಡೆದೂ ಬಾಗಿಲು ತೆರೆಸಲು ವ್ಯರ್ಥ ಪ್ರಯತ್ನ ಮಾಡಿದರು. ಆದರೆ ಕೋಟೆ ದುರ್ಭೇದ್ಯವಾಗಿತ್ತು; ಈ ಮುತ್ತಿಗೆಗೆ ಸರಿಯುವಂತಿರಲಿಲ್ಲ. ಶಂಖ ವಾದ್ಯದ ರಭಸ ಹೆಚ್ಚಾದಾಗ, "ಮನ್ಯಾಗ ಅವರಿಲ್ರ್ಯೊ ರಂಡೇಗಂಡರ್‍ರ್ಯಾ! ಸುಮ್ಮನ ನಿಂತ ಕೇಳಲಿಕ್ಕೇನ ಧಾಡೇ?" ಎಂದು ಯಜಮಾನತಿ ಒಳಗಿನಿಂದಲೇ ಆರ್ಭಟಿಸಿದಳು.

ಹುಡುಗರು ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ಬಾಳಾ-ಚಾರ್ಯರೇ ಅವರಿಗೆ ಕ್ಷಣಹೊತ್ತು ಸುಮ್ಮನಿರಲು ಸನ್ನೆ ಮಾಡಿದರು. ತಾವೇ ಮುಂದೆ ಬಂದು ಮೆತ್ತಗಿನ ದನಿಯಲ್ಲಿ "ತುಳಸಕ್ಕಾ ಸ್ವಲ್ಪ ಬಾಗಲಾ ತಗೀತೀ ಯೇನವಾ?" ಎಂದು ಕೂಗಿದರು.

"ಅವರು ಮನ್ಯಾಗಽ ಇಲ್ಲಲ್ಲ ಆಚಾರ್ಽ" ಎಂದು ಮತ್ತೆ ಬಿಗುಮಾನದ ಉತ್ತರ.

"ನಾ ಒಬ್ಬಾವನಽ ಒಳಗ ಬಂದು ನೋಡಿಕೊಂಡು ಹೋಗತೀನವಾ. ಶೇಷಪ್ಪ ಇದ್ದಿಲ್ಲಾ ಅಂದರ ಇವರೆಲ್ಲ ಸುಮ್ಮಗಽ ಹೋಗತಾರಽ" ಎಂದು ಬಾಳಾ ಚಾರ್ಯರು ನುಡಿಯಲು ತುಳಸಕ್ಕ ನಿರುಪಾಯಳಾಗಿ ಬಾಗಿಲು ತೆರೆದಳು. ಬಾಳಾ ಚಾರ್ಯರು ಒಳಗೆ ಹೋಗಿ ಉಪಜ್ಞಾನದಿಂದಲೋ ಏನೋ, ಜೋಳದ ಕಣಜದಲ್ಲೆ ಹಣಿಕೆ ಹಾಕಿದರು. ಶೇಷಪ್ಪ ಅದರಲ್ಲಿ ಅಡಗಿಕೊಂಡಿರಬಹುದೆಂಬ ಅವರ ಅನು ಭವಪೂರ್ಣ ತರ್ಕ ಸುಳ್ಳಾಗಲಿಲ್ಲ. ಅವನ ತಲೆಯ ಮೇಲಿನ ಚಂಡಿಕೆಯ ಗಂಟಿಗೆ ಕೈಹಾಕಿ ಎತ್ತಿದರು. ಹಲ್ಲುಕಿರಿಯುತ್ತ, ತಲೆಯ ಮೇಲೆ ಕೈಯಾಡಿಸುತ್ತ ನಿಂತ ಶೇಷಪ್ಪ. "ಕತ್ತಿಮ್ಯಾಲ ಕೂತು ಮೆರಿಯೂದು ಇಂದಿನ ದಿವಸ ಆದರ ಮರ್‍ಯಾದಿ ಏನಪಾ. ಮತ್ಯಾವಾಗಾರ ಆದರ ಏನ ಮಾಡತೀಯೋ?" ಎಂದು ಬಾಳಾಚಾರ್ಯರು ಅಂದೊಡನೆ ಶೇಷಪ್ಪ, "ಜಾಗಿರದಾರ ಬಾಪೂಸಾಹೇಬ ಇದ್ದಾಗ ನನಗ್ಯಾಕ ಮರ್‍ಯಾದಿ ಆಚಾರ್ಽ?" ಎಂದು ತಕರಾರು ತೆಗೆದ.

"ಆಗಲೆಪಾ. ಜಾಗೀರದಾರರು, ಪಡದಪ್ಪನವರು-ಊರಗೌಡ ಆಗತೀನಿ ಅಂತ ಬಂದಾನಲ್ಲ–ಆ ಲಿಂಗಪ್ಪ, ಎಲ್ಲಾರಿಗೂ ತಾರತಮ್ಯದ ಪ್ರಕಾರ ಮರ್ಯಾದಿ ಆಗಲಿ. ಯಾರು ಬ್ಯಾಡಂತಾರ? ಆದರ ಕುಲಕರ್ಣಿ ನೀ ಬಂದರ ಅವರೆಲ್ಲಾರೂ ಬರತಾರಪಾ." ಎಂದು ಆಚಾರ್ಯರು ಆಗ್ರಹಪಡಿಸಿ, ಎಂದಿಲ್ಲದ ಪ್ರೀತಿಯಿಂದ ಶೇಷಪ್ಪ ನನ್ನು ರಾಸಭಾರೂಢನನ್ನಾಗಿಸಿದರು. ರೊಟ್ಟೆ ಮಾಡಿದ ಹಂಚಿನ ಬುಡದ ಕಪ್ಪು, ಶೇಷಪ್ಪನ ಮೊದಲೇ ಕಪ್ಪಾದ ಮುಖಕ್ಕೆ ಒಪ್ಪಕೊಟ್ಟಿತು. ಶೇಷಪ್ಪನನ್ನು ಈ ಮೆರವಣಿಗೆಯಲ್ಲೊಯ್ದು ಬಾಪೂಸಾಹೇಬನನ್ನು ಕರೆತರಲು ಒಪ್ಪಿಸಿ ವಾಡೆಗೆ ಬಂದರು. ನಿರುಪಾಯರಾಗಿ ಬಾಪೂಸಾಹೇಬ, ಪಡದಪ್ಪ ಇಬ್ಬರೂ ಒಪ್ಪಲೇ ಬೇಕಾಯಿತು. ಅವರಿಬ್ಬರ ಜೋಡು-ಮೆರವಣಿಗೆ ಅಗಸೆಯ ವರೆಗೆ ಬಂದಾಗ ಲಿಂಗಪ್ಪನೆಲ್ಲಿ ಎಂದು ಗದ್ದಲವೆದ್ದಿತು.

"ಅವನ ಪ್ರಕೃತಿ ಬರಾಬರಿ ಇಲ್ಲ, ಕಾಲಿಗೆ ನೋವಾಗೇದ" ಎಂದು ಶೇಷಪ್ಪ ವಕೀಲಿ ಮಾಡಿದರೂ ನಡೆಯಲಿಲ್ಲ. ಜನ ಕೇಳಲಿಲ್ಲ. "ನಮ್ಮೂರ ಗೌಡರಾಗ ವರಪಾ ಅವರು. ಅವರ ಮರ್ಯಾದೀ ಮುಳುಗಿಸಿ ನೀನss ಎಲ್ಲಾ ಎತ್ತಿಹಾಕ ಬೇಕಂತೀಯೇನು?" ಎಂದು ಬಾಳಾಚಾರ್ಯರು ಅನ್ನುವದೇ ತಡ, ದಾದಾ ಮಠಕ್ಕೆ ಹೋಗಿ ಲಿಂಗಪ್ಪನನ್ನು ಹೊತ್ತುತಂದ. ಮೊದಲೇ ಕಾಲುನೋವಿನಿಂದ ನರಳು ತ್ತಿದ ಲಿಂಗಪ್ಪ. ಮೇಲೆ ಪ್ರಖರವಾದ ಬಿಸಿಲು, ಎತ್ತ ಸರಿದರೂ ಒದೆಯಲು ಬರುವ ಕತ್ತೆಗಳು ಇವುಗಳಿಂದ ಮೆರವಣಿಗೆ ಅವನಿಗೆ ಸಾಕುಸಾಕಾಗಿ ಹೋಯಿತು.

ಓಣಿಗುಂಟ ಸಾಗಿದ ಈ ಮೆರವಣಿಗೆಯಲ್ಲಿ ಊರ ಪ್ರಮುಖಚತುಷ್ಟಯದ ಜೊತೆಗೆ, ದಳವಾಯಿಯೂ ತಾನೊಂದು ಕತ್ತೆಯನ್ನೇರಿ ಮುಂದೆಮುಂದೆ ಸಾಗಿದ್ದ. ಹಿಂದೆ ಊರ ಉಡಾಳರೆಲ್ಲ ಬಾಯಿ ನೋಯುವ ಪರಿವೆಯಿಲ್ಲದೆ ಶಂಖವಾದ್ಯದಲ್ಲಿ ನಿರತರಾಗಿದ್ದರು. ಕೆಲವು ಚಿಕ್ಕ ಹುಡುಗರ ತುಟಿಗಳಂತೂ ಬಾತುಹೋಗಿದ್ದವು. ಮೇಲೆ ಬೇಸಿಗೆಯ ಬಿಸಿಲು ಸುಡುತ್ತಿತ್ತು. ಸಂದಿ-ಗೊಂದಿಗಳಲ್ಲಿ ಹೆಂಗಸರು ನಿಂತು ಮೆರವಣಿಗೆಯನ್ನು ನೋಡಿ ನಗುತ್ತಿರುವಾಗ ಬಾಪೂಸಾಹೇಬನಿಗೆ ತಲೆತಗ್ಗಿಸು ವಂತಾಯಿತು. ಪಡದಪ್ಪನಿಗೆ ಊರನ್ನೇ ಬಿಟ್ಟು ಓಡಿಹೋಗಬೇಕೆನ್ನಿಸಿತು. ಲಿಂಗಪ್ಪನಿಗಂತೂ ಇದರ ಅನುಭವವೇ ಇಲ್ಲದ್ದರಿಂದ, ಇದಕ್ಕಿಂತ ಮರಣವೇನು ಕೇಡು ಎನ್ನಿಸಿತು. ಬಾಳಾಚಾರ್ಯರು ಮಾತ್ರ ಭಟ್ಟಂಗಿಗಳಾಗಿ ನಗುತ್ತ ಮೆರ ವಣಿಗೆಯ ಜೊತೆಗೆ ಸಾಗಿದ್ದರು. ಮುದುಕನ ಮುಖದ ಮೇಲೆ ಎಂದಿಲ್ಲದ ತುಂಟ

ತನದ ನಗೆ ನಲಿಯುತ್ತಿತ್ತು.

ಕೆಲವೇ ದಿನಗಳ ಹಿಂದೆ ಊರಲ್ಲಿ ಹೋಳಿಯಾಡಿದ ದುಷ್ಕಾಳದ ಬೇಗೆಯನ್ನು, ಕಾಲರಾ ಬೇನೆಯನ್ನು, ಆಪ್ತೇಷ್ಟರ ವಿಯೋಗದ ದುಃಖವನ್ನು ಈ ಮೋಜಿನ ಪ್ರಸಂಗ ಸ್ವಲ್ಪವಾದರೂ ಮರೆಸಿತ್ತು. ಮೇಲಾಗಿ ಈ ಸಾರೆ ಬಾಳಾಚಾರ್ಯರು ಈ ಪ್ರಮುಖರ ಗುಣಗಾನ ಮಾಡುತ್ತ ನಡೆದದ್ದೂ ಒಂದು ವಿಶೇಷ ಪ್ರಸಂಗವಾಗಿತ್ತು.

ಹುಣ್ಣಿವೆಯ ಮರುದಿನವೇ ಬೇಟೆ. ಹುಲಿಬ್ಯಾಟಿ ಹಳಬರು, 'ಕಪ್ಪುತಿನ್ನುವ' ಜಾತಿಯ ತರುಣರು, ಮಧ್ಯಮ ವಯಸ್ಸಿನವರು ಮರುದಿನದ ಬೇಟೆಯ ಸಿದ್ಧತೆಯಲ್ಲಿ ನಿರತರಾದರು. ದಾದಾನಿಗೆ ಕುಸ್ತಿಯಷ್ಟೇ ಪ್ರಿಯವಾದ ಇನ್ನೊಂದು ವಿಷಯವೆಂದರ ಬೇಟೆ. ಹೋಳಿಹುಣ್ಣಿವೆ ಹಾಗೂ ಯುಗಾದಿ ಈ ಎರಡೂ ದಿನಗಳ ಬೇಟೆಯಲ್ಲಿ, ಬೇಟೆನಾಯಿಗಳಿಗಿಂತ ವೇಗವಾಗಿ ಓಡಾಡಿದರೂ ದಣಿಯುವವನಲ್ಲ. ಹೋದ ವರ್ಷ, ಸಂಜೆಯ ವರೆಗೆ ಅಡವಿಯಲ್ಲೆಲ್ಲ ತಿರುಗಾಡಿದರೂ, ಒಂದೂ ಬೇಟೆ ಸಿಗದೆ, ರಾತ್ರಿ ಅಲ್ಲಿಯೇ ವಸ್ತಿಬಿದ್ದು ಮರುದಿನ ಸಂಜೆಯ ಹೊತ್ತಿಗೆ ಒಂದು ಮೊಲವನ್ನು ಹೊಡದುಕೊಂಡು ಬಂದ ಪ್ರಸಂಗವನ್ನು ದಾದಾ ಮರೆತಿರಲಿಲ್ಲ. ಹೋದ ವರ್ಷದ ಬೇಟೆಗೆ ವಯಸ್ಸಾದ ಜನರೇ ಹೆಚ್ಚಾಗಿ ಹೋಗಿದ್ದರಿಂದ ಆ ಪರಿಸ್ಥಿತಿ ಉಂಟಾಗಿತ್ತು. ಅಂತಲೇ ದಾದಾ ಈ ಸಾರೆಯ ಬೇಟೆಗೆ ತನ್ನ ಗೆಳೆಯರಿಗೆಲ್ಲ ಬರಲು ಕಟ್ಟಪ್ಪಣೆ ಮಾಡಿದ್ದ. ಯಾರೂ ತಪ್ಪಿಸುವಂತಿರಲಿಲ್ಲ. ದಾದಾನ ನಿಶ್ಚಯವೇ ಹಾಗೇ. ಅಂತೆಯೇ ಜೈನರ ಜಿನ್ನಪ್ಪನ ಮಗನೂ ಕೂಡ ಗೂಟನಾಮವನ್ನು ಹಣೆಯ ಮೇಲೆ ವಿರಾಜಿಸುತ್ತ ಬೇಟೆಗಾರರ ಜೊತೆಗೆ ನಡೆದಿದ್ದ.

ಮರುದಿನ ನಸುಕಿನಲ್ಲಿಯೇ ಬೇಟೆಗಾರರೆಲ್ಲ ಊರು ಬಿಟ್ಟದ್ದರು. ಬರಗಾಲದ ಫಲವಾಗಿ ಹೊಲಗಳಲ್ಲಿ ಎಲ್ಲಿಯೂ ಬೆಳೆ ಇರಲಿಲ್ಲ. ಈ ಸಾರೆಯ ಬೇಟೆಯ ಅಭಾವಕ್ಕೆ ಅದೂ ಕಾರಣವಾಗಿತ್ತು. ಎತ್ತ ನೋಡಿದರೂ ವಿಶಾಲವಾದ ಬಯಲು, ಬೇಸಗೆಯ ಬಿಸಿಲಿನಂತೆಯೇ ಬಯಲಾಗಿ ಹರಡಿತ್ತು. ಹರಧಾರಿ ದೂರ ನಡೆದರೂ ತಲೆಯ ಮೇಲೆ ಚೂರು ನೆರಳೂ ದೊರೆಯುವಂತಿರಲಿಲ್ಲ. ಬೇಟೆಗಾರರ ಜೊತೆಗೆ ಮೆಲ್ಲಗೆ ನಡೆನಡೆದೇ ನಾಯಿಗಳು ದಣಿದು ಹೋಗಿದ್ದವು. ಇಳಿಹೊತ್ತಿನ ವರೆಗೆ ಅಲೆದರೂ, ಒಂದೂ ಚಿಗರೆಯ ಹಿಂಡು ತಪ್ಪಿಕೂಡ ಎಲ್ಲಿಯೂ ಕಾಣಬರಲಿಲ್ಲ.

ಬಿಸಿಲುಗುದುರೆಯ ಓಟವನ್ನೇ ನೋಡಿ ನೋಡಿ ಕಣ್ಣು ತಿರುಗುವಂತಾಗಿತ್ತು. ಹಳ್ಳ-ಕೊಳ್ಳ, ಒಡ್ಡು-ಮರೆ, ಕಂಟಿ-ಪೊದೆ, ಎಲ್ಲೆಲ್ಲಿಯೂ ಎಷ್ಟು ಗುಂಡಬಡಿಗೆಗಳಾಡಿದರೂ ಒಂದು ಮೊಲ ಕೂಡ ಪೊದೆಯಿಂದ ಹೊರಬೀಳಲಿಲ್ಲ.

ನಡೆನಡೆದು ಬೇಟೆಗಾರರೆಲ್ಲ ದಣಿದು ಹೋಗಿದ್ದರು. ಬೇಟೆಯ ಆಸೆ, ಸಂಜೆ ನೆರಳು ಕವಿಯತೊಡಗಿದೊಡನೆ ಬೆಳಕಿನಂತೆಯೇ ಕರಗಿಹೋಗಿತ್ತು. ಹಳ್ಳದ ದಂಡೆಯ ಮೇಲೆ ಕುಳಿತು, ರೊಟ್ಟಿತಿಂದು, ಒರತೆಯಲ್ಲಿಯ ನೀರು ಕುಡಿಯುತ್ತಿರುವಾಗಲೆ, ಹಾವನೂರಿನ ಬೇಟೆಗಾರರೂ ಅಲ್ಲಿಗೆ ಬಂದರು. ಪಾದಳ್ಳಿಯವರಂತೆಯೇ ಅವರಿಗೂ ನಿರಾಶಾದಾಯಕ ಅನುಭವ ಬಂದೊದಗಿತ್ತು. ಎರಡೂ ಊರಿನ ಬೇಟೆಯ ಪಡೆಯವರು, ಊರ ಸೀಮೆ-ಸರಾಡ ವಿಚಾರಿಸದೆ ಬೇಕಾದಲ್ಲಿ ಅಡ್ಡಾಡಿ ಬೇಟೆಯಾಡಬಾರದೇಕೆಂಬ ವಿಷಯವನ್ನು ಚರ್ಚಿಸತೊಡಗಿದರು.

ಕೊನೆಗೆ ನಿರ್ಣಯವಾದದ್ದು ಹೀಗೆ: ಬೇಟೆ ಯಾವ ಸೀಮೆಯಲ್ಲಿ ಏಳಬಹುದೋ, ಅದು ಬೇಕಾದಲ್ಲಿ ಹೋಗಲಿ, ಅದು ಆ ಸೀಮೆಯವರಿಗೇ ಸೇರಿದ್ದು. ಇಷ್ಟು ನಿರ್ಣಯವಾದ ಮೇಲೆ ಎರಡೂ ತಂಡದವರು ಮತ್ತೆ ಹುಡುಕುವದಕ್ಕೆ ನಡೆದರು. ಹೊತ್ತು ಮುಳುಗಿದ್ದರೂ ಇನ್ನೂ ಕತ್ತಲಾಗಿರಲಿಲ್ಲ. ಪಾದಳ್ಳಿಯ ಸೀಮೆಯಲ್ಲಿನ ಒಂದು ಪೊದೆಯಿಂದ ಎರಡು ಮೊಲಗಳೆದ್ದದ್ದು ದಾದಾನ ಕಣ್ಣಿಗೆ ಬಿತ್ತು. ಬೇಟೆನಾಯಿಗಳು ಅವುಗಳನ್ನು ಬೆನ್ನಟ್ಟಲು ಮೊಲಗಳು ಹಾವನೂರ ಭೂಮಿಯಲ್ಲಿ ಓಡಿಹೋದವು. ಬೇಟೆನಾಯಿಗಳ ಜೊತೆಗೇ ದಾದಾ ಓಡಿದ. ನಾಯಿಗಳು ಅವುಗಳನ್ನು ಹಿಡಿಯಲು, ದಾದಾ ಹಿಂದಿನಿಂದ ಬಂದು ಮೊಲಗಳನ್ನು ಹೊಡೆದು ಕಾಲು ಕಟ್ಟಿ ಬಡಿಗೆಗೆ ಹಾಕಿಕೊಳ್ಳಬೇಕೆನ್ನುವಾಗ, ಹಾವನೂರಿನವರೂ ಅಲ್ಲಿಗೇ ಧಾವಿಸಿ ಬಂದರು. "ನಮ್ಮೂರ ಹದ್ದಿನ್ಯಾಗಿನ ಬ್ಯಾಟೆಗೆ ನೀ ಹ್ಯಾಂಗ ಕೈ ಹಾಕಿದಿ?" ಎಂದು ಬೇಟೆಯನ್ನು ಕಸಿದುಕೊಳ್ಳಲು ಮುಂದೆ ಬಂದರು.

ಬಾಯಿಗೆ ಬಾಯಿ ಹತ್ತಿ ಪ್ರಸಂಗ ವಿಕೋಪಕ್ಕೆ ಹೋಯಿತು. ಹಾವನೂರಿನವರು ಹತ್ತೆಂಟು ಜನ; ದಾದಾ ಒಬ್ಬನೇ. ಉಳಿದವರು ಇನ್ನೂ ದೂರವಿದ್ದರು. ಏಕಾಕಿಯಾಗಿಯೇ ಅವರನ್ನೆಲ್ಲ ಹಣಿಯಬಹುದೆಂಬ ಧೈರ್ಯವಿದ್ದರೂ, ಕೈಯಲ್ಲಿದ್ದ ಬೇಟೆಯನ್ನು ಕೆಳಗಿಡುವಂತಿರಲಿಲ್ಲ. ಈ ಪೇಚಿನಿಂದ ಪಾರಾಗಲು ದಾದಾ ಒಂದು ಯುಕ್ತಿ ಮಾಡಿದ. ಕೈಯಲ್ಲಿಯ ಚಪಕೊಡಲಿಯಿಂದ, ಒಡ್ಡಿನ ಮೇಲೆ ಬೆಳೆದ ಜಾಲಿಯ ಕಂಟಿಯನ್ನು, ಅವರೊಡನೆ ವಾದಿಸುತ್ತಿದ್ದಂತೆಯೇ ಕಡಿದು

ಕೈಯಲ್ಲಿ ಹಿಡಿದುಕೊಂಡ. ಮೊಲವನ್ನು ಚಪಕೊಡಲಿಯ ಕಾವಿಗೆ ಕಟ್ಟಿ ಎಡಗೈಯಲ್ಲಿ ಹಿಡಿದುಕೊಂಡು, ಬಲಗೈಯಿಂದ ಜಾಲಿಯ ಮುಳ್ಳುಕಂಟಿಯನ್ನೆತ್ತಿದ.

ಬೇಟೆಯ ಈರ್ಷೆಯಿಂದ ಹಾವನೂರಿನವರೂ ಅವನ ಮೈಮೇಲೆ ಏರಿ ಬಂದರು. ಅವರು ಸಮೀಪ ಬಂದೊಡನೆಯೇ ದಾದಾ ಕಸುವನ್ನೆಲ್ಲ ಹಾಕಿ ಜಾಲಿಯ ಕಂಟಿಯಿಂದ ಅವರನ್ನೆಲ್ಲ ಸವರಿಬಿಟ್ಟ. ಜಾಲಿಯ ಹೊಡೆತ, ಮೇಲೆ ಮುಳ್ಳುಗಳು ನಟ್ಟದ್ದರಿಂದ ಉಂಟಾದ ಗಾಯಗಳಿಂದ ಹಾವನೂರಿನವರು ಜರ್ಜರಿತರಾದರು. ದಾದಾ ಕಂಟಿಯನ್ನೆತ್ತಿಕೊಂಡೇ ಹಿಂಬರಿಕೆ ಹೋಗುತ್ತ ತನ್ನ ಜನರನ್ನು ಕೂಡಿಕೊಂಡ.

ದಾದಾನ ಪ್ರಸಂಗಾವಧಾನದಿಂದ ಊರ ಮಾನ ಉಳಿಯಿತೆಂದು ಪಾದಳ್ಳಿಯ ಬೇಟೆಗಾರರು ಅವನನ್ನು ತಬ್ಬಿಕೊಂಡರು. ಬೇಟೆಯನ್ನು ಹೊತ್ತುಕೊಂಡು ಊರು ಸೇರಿದಾಗ ರಾತ್ರಿ ಎರಡು ತಾಸಾಗಿತ್ತು. ದಾದಾನ ಪರಾಕ್ರಮದ ಕತೆ ಊರಲ್ಲೆಲ್ಲ ಹಬ್ಬಿತು. ಮಠದಲ್ಲಿ ಅಂದು ರಾತ್ರಿ ವಾಡಿಕೆಯಂತೆ ಜನರು ಕೂಡಿದಾಗ ದಾದಾನ ಪರಾಕ್ರಮವೇ ಅವರ ಹರಟೆಯ ವಿಷಯವಾಗಿತ್ತು. ತಳವಾರ ಮಲ್ಲ ಕೌತುಕದಿಂದ ನಡೆದ ಕತೆಯನ್ನೆಲ್ಲ ವಿವರಿಸಿ ಹೇಳುತ್ತ "ದಾದಾ ಸಾಮಾನ್ಯ ಹುಡುಗ ಅಲ್ಲ ತಗೀರಿ" ಎಂದು ಮುಕ್ತಕಂಠದಿಂದ ಹೊಗಳಿದ. "ಎಂಟು ಜನಾ ಹಾವನೂರವರು, ಧುತ್ತ್ಯಾನಂತವರು ಬಂದರ ಅಸಗೊಳ್ಳಲಿಲ್ಲರಿ ಅಂವಾ. ಏನು ಹೊಡಿಯಾಣರೀ ಅದು. ಈಟೊತ್ತಿಗೆ ಅಂದರ ಅವರೊಳಗ ಒಬ್ಬಾವನರೆ ಸತ್ತಿರಬೇಕು ನೋಡ್ರಿ." ಎಂದು ಭವಿಷ್ಯನ್ನೂ ನುಡಿದ.

ಪಡದಪ್ಪನವರಿಗೆ ಈ ಮಾತು ರುಚಿಸದಿದ್ದರೂ, ಈ ಪ್ರಸಂಗದಲ್ಲಿ ತಮ್ಮ ಕನಸು ನನಸಾಗುವ ಆಸೆ ಅವರಲ್ಲಿ ಫಲಿಸಿತು. ವಿಕಾರವಶರಾಗದೆ ಮಲ್ಲನಿಂದ ಬೇಟೆಯ ಎಲ್ಲ ವಿವರಗಳನ್ನೂ ಕೇಳಿಕೊಂಡರು. ತಮ್ಮ ಯಾವ ಅಭಿಪ್ರಾಯವನ್ನೂ ಅವರಾಗಿ ವ್ಯಕ್ತಮಾಡಲಿಲ್ಲ. ಮರುದಿನ ಬೆಳಕು ಹರಿಯುತ್ತಲೇ ಕುದುರೆ ಹತ್ತಿ ಅವರ ಸವಾರಿ ಹಾವನೂರಿಗೆ ಹೋಯಿತು. ಅಲ್ಲಿಯ ಪ್ರಮುಖರನ್ನು ಪ್ರತ್ಯೇಕವಾಗಿ ಭೆಟ್ಟಿಯಾಗಿ, ದಾದಾನ ಮೇಲೆ ಫೌಜದಾರರ ಕಡೆಗೆ ಫಿರ್ಯಾದಿ ಮಾಡಲು ಪ್ರೇರೇಪಿಸಿ ಬಂದರು.

ತಿರುಗಿ ಪಾದಳ್ಳಿಗೆ ನಡೆದಾಗ ಪಡದಪ್ಪನವರು ಹಸನ್ಮುಖರಾಗಿದ್ದರು. ಫೌಜದಾರ ಫಕರುದ್ದೀನನಿಗೆ ದಾದಾನಿಂದಾದ ಅವಮಾನದ ಸೇಡು ತೀರಿಸಿ

ಕೊಳ್ಳಲು ಒಂದು ಸಂಧಿಯನ್ನೊದಗಿಸಿಕೊಟ್ಟರೆ, ದಾದಾ ಕನಸಿನಲ್ಲಿಯೂ ಪಾದಳ್ಳಿ ಯನ್ನು ಕಾಣಲಾರನೆಂದು ಅವರ ವಿಚಾರ. ದಾದಾ ಒಮ್ಮೆ ಜೇಲು ಕಂಡರೆ ತಾವು ಪಾದಳ್ಳಿಯಲ್ಲಿ ನಿರ್ಭಯವಾಗಿ ವರ್ತಿಸಬಹುದೆಂದು ಅವರ ಗುಪ್ತ ಆಸೆ. ಇದೇ ಎಣಿಕೆಯಲ್ಲಿ ಊರು ಸೇರಿದಾಗ ಆಗಲೇ ಮಧ್ಯಾಹ್ನವಾಗಿತ್ತು.

ಯಶವಂತರಾಯರಿಂದ, ಅಜರಾಣಿಯಲ್ಲಿ ಕಾಲರಾ ಕಡಿಮೆಯಾದ ಸುದ್ದಿ ಬಂದ ಹೊರತು, ದಾದಾ ಹೋಗಬಾರದೆಂದು ಬಾಳಾಚಾರ್ಯರು ತಿಳಿಸಿದ್ದರು. ಹೋಳಿಹುಣ್ಣಿವೆಯಾಗಿ ಎಂಟುದಿನಗಳಾದ ಮೇಲೆ ಅಜರಾಣಿಯಲ್ಲಿ ಮಾರಿಕಾ ಜೇನೆ ತಣ್ಣಗಾಗಿರುವ ಸುದ್ದಿ ಬಂತು. ಮರುದಿನವೇ ದಾದಾ ಅಜರಾಣಿಗೆ ಹೋಗಬೇಕು. ಆದರೆ ರಾತ್ರಿಯೇ ಪಾದಳ್ಳಿಗೆ ಹವಾಲ್ದಾರ ಜಮಾಲಸಾಬರ ಆಗಮನವಾಯಿತು. ದಾದಾನನ್ನು ಹಿಡಿಯಲು ಅವರು ವಾರಂಟು ತಂದಿದ್ದರು. ಚಾವಡಿಗೆ ಬಂದ ಮೇಲೆ "ದಾದಾ ಊರಲ್ಲಿದ್ದಾನೆಯೇ?" ಎಂದು ಅವರು ಕೇಳುವ ರೀತಿಯ ಮೇಲಿಂದಲೇ ಪಾಲಿಕಾರ ಮಲ್ಲನಿಗೆ ಸಂಶಯ ಬಂದಿತು. "ಯಾಕರಿ ಒಳೇ ದಾದಾನ್ನ ಕೇಳಾಕ ಹತ್ತೀರಿ?" ಎಂದು ಕೇಳಿದ. "ಅವಾ ಎಲ್ಲ್ಯದಾನ ಹೇಳು. ಇಲದಿರಕ ಅವನ ಮನಿ ತೋರಿಸು. ಇಲ್ಲದ ಕಾರಬಾರ ಮಾಡಬ್ಯಾಡ" ಎಂದು ಹವಾಲ್ದಾರರು ಅವನನ್ನು ಜಬರಿಸಿದರು.

ಪಾಲಿಕಾರ ಮಲ್ಲಪ್ಪ ಶಂಕರಪ್ಪಗೌಡರ ಆಪ್ತಸೇವಕನಾಗಿದ್ದ. ದಾದಾನ ಮೇಲೆ ಹಾವನೂರವರು ಫಿರ್ಯಾದಿ ಮಾಡಿದ ಸುದ್ದಿ ಅವನ ಕಿವಿಗೂ ಬಿದ್ದಿತ್ತು. ಹವಾಲ್ದಾರರಿಗೆ ಚಾವಡಿಯಲ್ಲಿಯೇ ಕೂಡಲು ಹೇಳಿ, ದಾದಾನನ್ನು ಹುಡುಕುವ ನೆವಮಾಡಿಕೊಂಡು ಮಲ್ಲ ಹೊರಟ. ಆದರೆ ಅವನು ಬಂದದ್ದು ಬಾಳಾಚಾರ್ಯರ ಮನೆಗೆ. ಅವರಿಗೆ ಎಲ್ಲ ವಿಷಯವನ್ನೂ ತಿಳಿಸಿದ. "ಏನು ಬೇಕಾದ್ದು ಮಾಡು. ಆದರೆ ದಾದಾ ಪೋಲೀಸರ ಕೈಗೆ ಸಿಗಬಾರದು ನೋಡು" ಎಂದು ಅವರು ಸೂಚಿಸಿದರು.

ಮಲ್ಲಪ್ಪ ಅಲ್ಲಿಂದ ಪಾರ್ವತೆವ್ವನ ಮನೆಗೆ ಬಂದು ಅವಳಿಗೂ ಈ ಸುದ್ದಿ ತಿಳಿಸಿದ. ಪಾರ್ವತೆವ್ವನಿಗೆ ಇದನ್ನು ಕೇಳಿ ಸಂಕಟವಾಯಿತು. ಹೆದರಿಕೆಯೂ ಬಂತು. ಗೌಡರು ತೀರಿಕೊಂಡ ಮೇಲೆ ದಾದಾ ಈ ಮನೆಯನ್ನು ಹಗಲು ರಾತ್ರಿ ಕಾಯ್ದುಕೊಂಡು ಬಂದಿದ್ದ. ಅಂಥವನ ಮೇಲೆ ಈ ಸಂಕಟ ಬರಬೇಕೇ? ಪಾರ್ವತೆವ್ವ ಅವಡುಗಚ್ಚಿ "ಏನು ಕಾಯೋ ಹುಡುಗನ್ನ ಕಣ್ಮರಿ ಮಾಡಲಾಕ

ಹಂಚಿಕಿ ಹಾಕ್ಯಾವ ಮಡಸಗೋಳು" ಎಂದು ತನಗಾಗದವರನ್ನೆಲ್ಲ ಶಪಿಸಿದಳು. ಆ ಮೇಲೆ ಸ್ವಲ್ಪಹೊತ್ತು ಬಿಟ್ಟು "ದಾದಾ ಅಲ್ಲಿ ಮಾಳಿಗಿ ಮ್ಯಾಗ ಮಲಗಿದ್ದಾನು ನೋಡು ಮಲ್ಲಪ್ಪಾ. ಅವನ್ನ ಕರಕೊಂಡಬಾ. ಮನ್ಯಾಗs ಕುಂದರಂತ ಹೇಳು. ಅನಕಾತ ಹೊರಗs ಹೋಗೂದು ಬ್ಯಾಡ" ಎಂದು ದಾದಾನನ್ನು ಮುಚ್ಚಿಡುವ ಉಪಾಯವನ್ನೂ ಸೂಚಿಸಿದಳು. ಏನಾದರಾಗಲಿ ದಾದಾ ಜೇಲು ಕಾಣುವ ಪ್ರಸಂಗ ಬರದಿರಲಿ ಶಿವನೇ ಎಂದು ಪ್ರಾರ್ಥನೆಯನ್ನೂ ಸಲ್ಲಿಸಿದಳು.

:: ೨೦ ::

ಪಾರ್ವತೆವ್ವನ ಪ್ರಾರ್ಥನೆ ಫಲಿಸಿತು. ದಾದಾನ ಮನೆ, ಗರಡೀ ಮನೆ, ಗೌಡರ ಮನೆ, ಎಲ್ಲಿ ಶೋಧಮಾಡಿದರೂ ಹವಾಲ್ದಾರರಿಗೆ ದಾದಾನ ಪತ್ತೆ ಹತ್ತ ಲಿಲ್ಲ. ಪಾರ್ವತೆವ್ವ ದಾದಾನನ್ನು ಅಡಿಗೆಮನೆಯಲ್ಲಿ ಮುಚ್ಚಿಡಬಹುದೆಂಬ ಸಂಶಯ ಪಡದಪ್ಪನವರಿಗೂ ಬರಲಿಲ್ಲ. ಹವಾಲ್ದಾರರು ಊರಲ್ಲಿ ಬಂದ ಸುದ್ದಿ ಹತ್ತಿ ದಾದಾ ತಲೆತಪ್ಪಿಸಿಕೊಂಡು ಓಡಿಹೋಗಿರಬಹುದೆಂಬ ನಿರ್ಣಯವೇ ಕೊನೆಯದಾಯಿತು. ಹೋಳಿಹುಣ್ಣಿವೆಯಾದೊಡನೆ ದಾದಾ ಅಜರಾಣಿಗೆ ಹೋಗು ವವನಿದ್ದ ಸಂಗತಿಯನ್ನು ಯಶವಂತರಾಯರ ಆಳಿನಿಂದ ಕೇಳಿ ತಿಳಿದ ಬಾಪೂ ಸಾಹೇಬ, ಹೇಳಿದ ಕೂಡಲೆ, ಆ ವಿಚಾರ ಮತ್ತಷ್ಟು ಸ್ಥಿರವಾಯಿತು. ಹವಾಲ್ದಾರ ರಿಗೆ ದಾದಾ ಸಿಕ್ಕರೆ ಕೈಬೆಚ್ಚಗಾಗಬಹುದೆಂಬ ಭರವಸೆಯಿದ್ದದ್ದರಿಂದ ಅವರು ಕೂಡಲೇ ಅಜರಾಣಿಗೇ ಪ್ರಯಾಣ ಬೆಳೆಸಿದರು.

ಹವಾಲ್ದಾರರು ಅಜರಾಣಿಯನ್ನು ಮುಟ್ಟಿದಾಗ ಇನ್ನೂ ನಸುಕು ಹರಿ ದಿರಲಿಲ್ಲ. ಅವರು ನೇರವಾಗಿ ಪೋಲೀಸ ಪಾಟೀಲ ಯಶವಂತರಾಯರ ಮನೆಗೇ ಬಂದರು. ಯಶವಂತರಾಯರು ಪ್ರಾತರ್ವಿಧಿಗಳನ್ನು ತೀರಿಸಲು ಹೊರಗೆ ಹೋದ ವರು ಇನ್ನೂ ಬಂದಿರಲಿಲ್ಲ. ಹವಾಲ್ದಾರರು ಬಂದೊಡನೆ ಮನೆಯವರೆಲ್ಲ ಗಾಬರಿ ಯಾದರೂ, ಹವಾಲ್ದಾರರ ದರ್ಪಕ್ಕೆ ಹೆದರಿ ಸುಮ್ಮನಿದ್ದರು. ತನ್ನೊಂದಿಗೆ ಬಂದ ಪೋಲೀಸ ಸಿಪಾಯಿಗಳನ್ನು ಅತ್ತ ಇತ್ತ ಶೋಧಕ್ಕೆ ಕಳಿಸಿ ಹವಾಲ್ದಾರರು ಗೌಡರ

ದಾರಿಕಾಯತೊಡಗಿದಳು.

ಯಶವಂತರಾಯರು ಬಂದ ನಂತರ ಅವರಿಗೆ ದಾದಾನ ಮೇಲೆ ವಾರಂಟು ಇರುವ ಸುದ್ದಿ ತಿಳಿಯಿತು.

"ಆದರ ಅಂವಾ ಏನು ಈಚೇಕಡಸೆ ಬಂದಿಲ್ಲ ಬಿಡ್ರಿ" ಎಂದು ಅವರು ಮಾತು ಪ್ರಾರಂಭಿಸುತ್ತಲೇ ಹವಾಲ್ದಾರರು, "ಅಂವಾ ಇಲ್ಲಿಗೆ ಬಂದ ಸುದ್ದಿ ಹತ್ತ್ಯೆತಿ ಗೌಡರಃ! ಅವನ್ನ ಪಾರ ಮಾಡಾಕ ಸುಳ್ಳ ಹೇಳಿದರ ನಡಿಯಾಕಿಲ್ಲ" ಎಂದು ಎಲ್ಲ ಗೊತ್ತಿದ್ದವರಂತೆ ಗಹಗಹಿಸುತ್ತಲೇ ಹೇಳಿದರು.

"ನಿಮಗ ಹೇಳಿದವರಃ ಸುಳ್ಳ ಹೇಳ್ಯಾರು. ಅಂವಾ ಇಲ್ಲೆ ಬಂದೇ ಇಲ್ಲ. ಅಂವಾ ಬಂದದ್ದಃ ಕರೆ ಆದರ ಅಂವನ್ನ ಹಿಡದು ಕೊಡೂದು ನನ್ನ ಪಾಟೀಲಕಿ ಜವಾಬ್ದಾರೀನ ಐತೆಲ್ಲ!" ಎಂದು ಸರಳವಾಗಿ ಯಶವಂತರಾಯರು ಹೇಳಿದರೂ, ತಮ್ಮ ಮಾತಿನ ಮೇಲೆ ಹವಾಲ್ದಾರರ ವಿಶ್ವಾಸ ಕೂಡದ್ದನ್ನು ನೋಡಿ "ಇಗಾ ನಾ ಅಂವನ್ನ ಮನ್ಯಾಗ ಮುಚ್ಚಿಟಗೊಂಡು ಸುಳ್ಳ ಹೇಳತೀನಿ ಅಂತ ಸಂಶೇ ಇದ್ದರ ನನ್ನ ಮನ್ಯಾಗ ಬೇಕಾದಲ್ಲೇ ಹುಡುಕಬಹುದು. ಬೇಕಾರ ನಿಮಗ ಸಂಶೇ ಬಂಸ ಮನ್ಯಾಗ ಹುಡುಕರಿ" ಎಂದು ಯಶವಂತರಾಯರು ಸ್ವಲ್ಪ ಸಿಟ್ಟಿನಿಂದಲೇ ನುಡಿದರು.

"ಸ್ವಲ್ಪ ತಡೀರಿ ಗೌಡರಃ, ಸಂಶೇ ಬಂದ ಮನಿಗೋಳ ಯಾದಿ ಕೈಯಾಗ ಬರಲಿ, ತಪಾಸಣಿ ಮಾಡೂಣಂತ. ನಾವು ಬ್ರಿಟಿಶ್ ಹದ್ದೀ ಪೋಲೀಸರು. ನಿಮ್ಮ ಸಂಸ್ಥಾನೀ ಪೋಲಿಸರ ಹಾಂಗ ಹುಂಬಗುತಿಗಿ ವ್ಯವಹಾರ ಅಲ್ಲ. ಎಲ್ಲಾ ಕಾಯ ದೇಶೀರ ಕೆಲಸ ಆಗಬೇಕು" ಎಂದು ಹವಾಲ್ದಾರರು ಜಂಭಕೊಚ್ಚಿಕೊಳ್ಳುವವನ್ನೂ ಬಿಡಲಿಲ್ಲ.

ಅಷ್ಟರಲ್ಲಿ ಲಿಂಗಪ್ಪನ ತಂಪೆಯಾದ ಶಂಕರಪ್ಪನ ಮನೆಗೆ ಹೋದ ಪೋಲೀಸ-ಸಿಪಾಯಿ ಬಂದು ಹವಾಲ್ದಾರರಿಗೆ ಮುಜುರೆ ಹೊಡೆದ. ಹವಾಲ್ದಾರರು ಎದ್ದು ಅವನ ಹತ್ತಿರ ಹೋದರು. ಕಿವಿಯಲ್ಲಿ ಅವನು ಏನೇನೋ ಹೇಳಿದ್ದು ಕೇಳಿದರು. ಮುಗುಳುನಗೆಯಿಂದ ಅವರ ಮುಖ ಅರಳಿತು. ಯಶವಂತರಾಯರ ಕಡೆಗೆ ತಿರುಗಿ, "ಗೌಡರಃ ವಾರಂಟಿದ್ದ ಜನರು ತಲಿ ತಪ್ಪಿಸಿ ಅಡ್ಯಾಡೂದು ಸೂಳೇರ ಮನ್ಯಾಗಃ ಅನ್ನೂದು ನಮ್ಮ ಅನುಭವ ಐತಿ. ನಿಮ್ಮೂರಾಗ ಸೂಳ್ಯಾರ ಮನಿ ತಪಾಸ ಮಾಡಬೇಕಲ್ಲ," ಎಂದರು.

"ಈ ಊರಾಗ ಹೊಲಿಗೇರ್ಯಾಗ ಚಂದ್ರಿ ಅಂತ ಒಬ್ಬಾಕಿ ದೇವದಾಸಿ ಅದಾಳ. ಮಾದಿಗ್ಗೇರ್ಯಾಗ ಇನ್ನೊಬ್ಬಾಕಿ ಅದಾಳ. ನಿಮಗ ಯಾರ ಮನಿ ತಪಾಸ ಮಾಡೂದೈತಿ ತಿಳಿಸಿದರ ಅತ್ತಾಗ ಹೋಗೂನು" ಎಂದು ಯಶವಂತರಾಯರು ಉತ್ತರ ವಿತ್ತರು. ಒಳಗಿಂದೊಳಗೇ ಅವರಿಗೆ ಸಂಕಟವಾಗುತ್ತಿದ್ದರೂ ಅದನ್ನು ತೋರಗೊಡಲಿಲ್ಲ.

ಹವಾಲ್ದಾರರು ಗೌಡರ ಈ ಮಾತಿಗೆ ಉತ್ತರವನ್ನೇನೂ ಕೊಡಲಿಲ್ಲ. ಇಬ್ಬರೂ ಚಾವಡಿಗೇನೋ ಹೋದರು. ಅಲ್ಲಿಂದ ಶಂಕರಪ್ಪನ ಮನೆಯ ಆಳು ಮಗನನ್ನು ಮುಂದೆ ಮಾಡಿಕೊಂಡು, ಹವಾಲ್ದಾರರು ಹೊಲಗೇರಿಯತ್ತ ಹೊರಟರು. ಗೌಡರು ತಮ್ಮ ಸಂಗಡ ಬರುವದು ಅಗತ್ಯವಿಲ್ಲವೆಂದು ಹೇಳಿದ್ದರಿಂದ ಯಶವಂತರಾಯರು ಚಾವಡಿಯಲ್ಲೇ ಉಳಿದರು.

ಅದೇ ಬೆಳಗಾಗಿತ್ತು. ಹೊಲೆಗೇರಿಯಲ್ಲಿ ಹೊಲೆಯರು ಆಗಲೇ ಎದ್ದು ಓಣಿಗಳ ಕಸಗುಡಿಸುವದರಲ್ಲಿ ತೊಡಗಿದ್ದರು. ಅದರಿಂದೆದ್ದ ಧೂಳಿಯಿಂದ ಮುಂದಿನ ಬೀದಿಯಲ್ಲಿ ಓಡಾಡುವ ಜನರು ಕಾಣದಂತಾಗಿದ್ದರು. ಹವಾಲ್ದಾರರ ಅಧಿಕಾರೀ ಮನಸ್ಸಿಗೆ ಈ ಧೂಳಿಯಿಂದ ಸಿಟ್ಟು ಬಂತೇನೋ, ಕಸಗುಡಿಸುವ ಒಬ್ಬ ಹೊಲೆಯನಿಗೆ, "ಏ ಕತ್ತೀ ನಿಲ್ಲು. ನಮ್ಮ ಮ್ಯಾಗs ಕಸಾ ಹಾಕತಿ ಕಾಣೂದುಲ್ಲs?" ಎಂದು ಗುಡುಗಿದರು.

ಬಗ್ಗಿ ಕಸಗುಡಿಸುತ್ತಿದ್ದ ಹೊಲೆಯರ ಕಂಟ್ಯಾ, ಈ ಮಾತಿಗೆ ತಲೆಯೆತ್ತಿ ನೋಡುತ್ತಾನೆ: ಹವಾಲ್ದಾರರು, ಪೋಲೀಸರು! ಅವರ ಮಾತಿಗೆ ಉತ್ತರವೀಯುವ ಧೈರ್ಯವಿಲ್ಲದೆ ಅವನು ಹೆದರಿ, ಓಡಿ ಮನೆಸೇರಿದ. ದಾರಿ ತೋರಿಸಲು ಬಂದ ಶಂಕರಪ್ಪನ ಆಳು "ಈಗ ಓಡಿ ಹೋದನಲ್ಲರೀ, ಅವನs ಚಂದ್ರೀ ತಮ್ಮ ಕಂಟ್ಯಾ. ಅಂವಾ ಓಡಿ ಹೋದದ್ದು ಚಂದ್ರೀ ಮನೀರಿ. ಪಾದಳ್ಳೀ ಇಸಮು ಇರೂದು ಅದs ಮನ್ಯಾಗs" ಎಂದು ಸಂಶೋಧನದ ತನ್ನ ಕರ್ತವ್ಯವನ್ನು ಪೂರೈಸಿದ.

ಕಂಟ್ಯಾ ಹೆದರಿ ಮನೆಯೊಳಗೆ ಓಡಿ ಹೋದದ್ದರಿಂದ ಹವಾಲ್ದಾರರಿಗೆ ಶಂಕರಪ್ಪ ಕೊಟ್ಟ ಮಾಹಿತಿ ಸತ್ಯವಾದದ್ದೆಂದೆನಿಸಿತು. ಬೇಟೆ ಕೈಗೆಸಿಕ್ಕ ಸಂತೋಷವೂ ಆಗತೊಡಗಿತು. ಆದರೆ ಒಳಗೋಡಿದ ಕಂಟ್ಯಾ ಏನಾದರೂ ಕುತಂತ್ರ ಮಾಡಬಹುದಲ್ಲ! ಆದ್ದರಿಂದ ತಮ್ಮೊಂದಿಗಿದ್ದ ಇಬ್ಬರು ಪೋಲೀಸರಿಗೆ ಮನೆಯ ಹಿಂದಿನ ಬದಿಗೆ ಕಾವಲು ನಿಲ್ಲ ಹೇಳಿ, ತಾವು ಚಂದ್ರಿಯ ಮನೆ ಬಾಗಿಲಿಗೆ ಬಂದರು.

ಹೊಲಗೇರಿಯಲ್ಲಿ ಪೋಲೀಸ ಅಧಿಕಾರಿಗಳು ಬಂದದ್ದನ್ನು ಆಗಲೇ ಕೆಲವರು ನೋಡಿ, ಸುದ್ದಿ ಹಬ್ಬಿಸಿದ್ದರು. ಅದರ ಫಲವಾಗಿ ಚಂದ್ರಿಯ ಮನೆಯ ಮುಂದೆ ಹತ್ತೆಂಟು ಜನರು ಕೂಡಿದರು. ಹವಾಲ್ದಾರರಿಗೆ ಆ ಜನರ ಗುಂಪನ್ನು ನೋಡಿ ಮತ್ತೆ ತಲೆಕೆಟ್ಟಿತು. "ಒಂದ ಹೆಜ್ಜಿ ಮುಂದ ಇಟ್ಟರ ನೋಡ್ರಿ. ಆರೋಪಿ ಜನರನ್ನ ಪತ್ತೆಮಾಡೋ ಸರಕಾರೀ ಕೆಲಸದಾಗ ಹರಕತ್ತ ಮಾಡಿದ ಗುನ್ನೇದ ಮ್ಯಾಗಿಂದ ನಿಮಗೆಲ್ಲಾ ಸಾಲಬೇಡಿ ಹಾಕಸಬೇಕಾದೀತು" ಎಂದು ಜಬರಿಸಿ, "ಏ ಕಂಟ್ಯಾ ಹೊರಗ ಬಾ" ಎಂದು ಕೂಗಿದರು.

ಕಂಟ್ಯಾ ನಡುಗುತ್ತಲೇ ಹೊರಗೆ ಬಂದು ಹವಾಲ್ದಾರರಿಗೆ ಮುಜುರೆ ಮಾಡಿದ. ಅವನ ಕಾಲು ನಿಂತಲ್ಲಿ ನಿಲ್ಲುತ್ತಿರಲಿಲ್ಲ. ಮೊದಲೇ ಒಣಗಿ ಸಂಡಿಗೆಯಾಗಿದ್ದ ಮುಖ ಹೆದರಿಕೆಯಿಂದ ಇನ್ನೂ ಸಂಕೋಚ ಹೊಂದಿತ್ತು. ಅವನ ಹಿಂದಿನಿಂದಲೇ ಚಂದ್ರವ್ವ ಬಂದು ನಿಂತು ಹವಾಲ್ದಾರರಿಗೆ ಮುಜುರೆ ಮಾಡಿದಳು. ಹವಾಲ್ದಾರರು ನೋಡಿದರು, ತಲೆಯ ಮೇಲೆ ಸೆರಗಿರಲಿಲ್ಲ; ಅಂದೇ ಎರೆದುಕೊಂಡಿದ್ದರಿಂದ ತಲೆಗೂದಲು ಹೆಗಲಮೇಲೆ ಚಲ್ಲಾಪಿಲ್ಲಿಯಾಗಿ ಹರಡಿದ್ದವು. ಮೊಳಕಾಲ ಮೇಲೆ ಎತ್ತಿಕಟ್ಟಿದ ಸೀರೆ; ಸಾದುಗಪ್ಪುಬಣ್ಣ, ಎಲೆ ಅಡಿಕೆಯಿಂದ ಕೆಂಪಾದ ತುಟಿ! ಹವಾಲ್ದಾರರು ದುರುದುರು ನೋಡುತ್ತ, "ಈಕಿ ಯಾರೋ ಕಂಟ್ಯಾ?" ಎಂದು ತಮ್ಮ ಅಧಿಕಾರವನ್ನುಪಯೋಗಿಸಿ ಕೇಳಿದರು.

ಚಂದ್ರಿಗೆ ಆ ಮಾತಿನ ಅರ್ಥವಾಯಿತು. ಅವರ ನೋಟದಿಂದಲೇ ಅವರ ನೀರೆಷ್ಟು ಎಂಬುದರ ಅಂದಾಜು ಅವಳಿಗಾಗಿರಬೇಕು. ಅಂತಲೇ ಹವಾಲ್ದಾರರ ಪ್ರಶ್ನೆ ತನಗೇ ಎಂಬಂತೆ, "ದ್ಯಾವರೂ ಇಂವಾ ನಮ್ಮ ತಮ್ಮ ಕಂಟ್ಯಾರೀ. ತಿಳೀದ ಯಾವದಾರ ತಪ್ಪುಮಾಡಿದ್ದರ ಹೊಟ್ಯಾಗ ಹಾಕ್ಕೊರಿ" ಎಂದು ತನ್ನ ನಡಿಗೆಯೇ ಒಂದು ದಾಸರಾಟದ ಭಂಗಿಯೆಂಬಂತೆ ಕೈ ಮುಗಿದು ಹೊರಗೆ ಬಂದಳು.

"ತಿಳೀದ ತಪ್ಪು ಮಾಡಾವನ್ಕ ಈ ಕಂಟ್ಯಾ! ಪಾದಳ್ಳೀ ಆರೋಪಿನ್ನ ಒಳಗಿಟಗೊಂಡು, ಮತ್ತ ನಾವು ಬರಾಣಾ ಗಸಗ್ಗನ ಒಳಗ; ಜಿಗೂತಾನು!" ಹವಾಲ್ದಾರರಿಗೂ ಸ್ವಲ್ಪ ಆಟಬೇಕಾಗಿತ್ತೆನೋ, ಸಲೀಲವಾಗಿಯೇ ನುಡಿದರು.

ಚಂದ್ರವ್ವ ಟೊಂಕದಿಂದ ತಂಬಾಕಿನ ಚಂಚಿಯನ್ನು ತೆಗೆದು ಬಿಚ್ಚಿದಳು. ಸಾವಕಾಶವಾಗಿ ಅದನ್ನು ಬಿಚ್ಚುತ್ತ "ಏ ಶಿವನ! ಪಾದಳ್ಳಿ ಆರೋಪಿ ಬೇಕಾಗೇತೇ ನಿಮಗ? ಜನಾರ ಬ್ಯಾಡಂತಾರೀ ಸರದಾರ! ಕುಶಾಲ ಕರಕೊಂಡ ಹೋಗರಿ.

ಆ ಆರೋಪಿ ತಂದಾಕಿ ನಾ; ಮನ್ಯಾಗ ಇಟಗೊಂಡಾಕಿ ನಾ. ಅದಕ್ಕೇನ ಗೊತ್ತಾದೀತರಿ ಇದೆಲ್ಲ! ಅದರ ಮಾರಿ ನೋಡಿದರ ನಿಮಗರ ತಿಳಿಬಾರದು?" ಎಂದು ಸಾಭಿನಯವಾಗಿ ನುಡಿದಳು. ಈ ಮಾತಾಡುವಾಗಿನ ಅವಳ ಚಂಚಲತೆ ತಲೆಕೆಡುವಂತಿತ್ತು. ನಿಂತಲ್ಲಿ ನಿಲ್ಲುತ್ತಿರಲಿಲ್ಲ. ಕೈ, ಕಣ್ಣು, ಬಾಯಿ ಎಲ್ಲ ಮಾತಿನ ಲಯಕ್ಕೆ ಕುಣಿಯುವಂತಿದ್ದವು. ಇಷ್ಟು ಹೇಳಿ ಒಂದು ಮುಗುಳು ನಗೆಯನ್ನು ಬೀರಿ, ಅಡಿಕೆಯ ಹೋಳನ್ನು ಬಾಯಲ್ಲಿಸೆದು, ಎಲೆಗೆ ಸುಣ್ಣ ಹಚ್ಚುತ್ತ ಹವಾಲ್ದಾರರ ತೀರ ಸಮೀಪಕ್ಕೆ ಬಂದಳು.

ಹವಾಲ್ದಾರರ ಮನಸ್ಸು ಆ ಕ್ಷಣಕ್ಕೆ ಎಲ್ಲವನ್ನೂ ಮರೆತಂತಿತ್ತು. ಆಡಾಡುತ್ತಲೆ ಕೈಹಿಡಿದ ಕೆಲಸವಾಗಬೇಕೆಂದರೆ! ದಾದಾನಂಥ ತರುಣ ಇಂಥವಳ ಬಲೆಯಲ್ಲಿ ಸಿಗುವದು ಅಪರೂಪವೇನಲ್ಲ! ಹವಾಲ್ದಾರರ ಕರಗಿದ ಮನಸ್ಸು ಅವರಿಬ್ಬರ ಕತೆಯ ಅಧ್ಭುತರಮ್ಯತೆಯನ್ನೂ ಕೆದಕಿ ನೋಡುವಂತಿತ್ತು. ಆರೋಪಿಗೆ ಆಶ್ರಯ ಕೊಟ್ಟವಳೆಂದು ಇವಳನ್ನು ಬೆದರಿಸಿ ಎಡತಾಕ ಹಚ್ಚಿದರೆ, ಈ ಹೆಣ್ಣು ಇನ್ನೂ ಸಮೀಪಕ್ಕೆ ಬರಬಹುದು. ಆರೋಪಿಯನ್ನು ಹಿಡಿದುಕೊಟ್ಟ ಶ್ರೇಯಸ್ಸು, ಬಾಪೂಸಾಹೇಬನು ಕೊಡಮಾಡಿರುವ ದುಡ್ಡು, ಕೈಯಳತೆಯಲ್ಲೇ ಕುಣಿಯುವ ಹೆಣ್ಣು ಎಲ್ಲವೂ ತನ್ನದಾಗಬಹುದು! ಆದರೆ ಅದೆಲ್ಲ ಸಾಧ್ಯವಾಗಬೇಕಾದರೆ ಇನ್ನೂ ದರ್ಪ ತೋರಿಸದಿದ್ದರೆ ಗತಿಯಿಲ್ಲ! ಮನಸ್ಸಿಲ್ಲದೆ ಮಾಡುವದಕ್ಕೇ ಕರ್ತವ್ಯವೆಂದು ಹೆಸರಿಲ್ಲವೇ?

"ಆರೋಪಿನ್ನ ಮನ್ಯಾಗಿಟಗೊಂಡಾಕಿ ಅಂತ, ಧೈರ್ಯೇದಿಂದ ಹೇಳತೀ. ನಾಳೆ ಬೇಡೀ ಹಾಕಿ ಫೌಜದಾರರ ಮುಂದ ಒಯ್ದಾಗ ಹೇಳೀಯಂತ" ಎಂದು ಹವಾಲ್ದಾರರು ದರ್ಪದಿಂದಲೇ ಹೇಳಿ, ತಡೆಯಲಾರದೆ ತುಂಟತನದ ನಗೆ ಬೀರಿದರು.

"ನೋಡೋ ಮಲ್ಲಪ್ಪ ಕಾಕಾ, ಹಾದೀ ಹೆಣಾ ಆಗಾವರ್ನ ಮನ್ಯಾಗ ಇಟಗೊಂಡರ, ಪುಣ್ಣೇ ಬರತೇತಿ ಅಂತ ನೀವೆಲ್ಲಾ ಹೇಳಿದಿರಿ. ಈಗ ಹವಾಲ್ದಾರಸಾಬ ಬೇಡೀ ಹಾಕತೀನಂತಾನ ನೋಡು" ಎಂದು ಚಂದ್ರವ್ವ ಕೂಡಿದ ಜನರಲ್ಲಿಯೇ ವಯೋವೃದ್ಧನಾಗಿದ್ದ ಮಲ್ಲಪ್ಪನನ್ನುದ್ದೇಶಿಸಿ ನುಡಿದಳು.

"ಇರ್ಲಿ ತಂಗೀ, ಅಮಲ ಯಾರ ಕೈಯಾಗ ಐತಿ? ಮನಸ ಬಂದರ ಬೇಡೀನೂ ಹಾಕ್ಯಾರು, ಇಲದಿರಕ ಕೂರಿಗಿ ಹೊಲಾನೂ ಹಚಿಕೊಟ್ಟಾರು. ಶಿವನ್ನ ನಂಬಿ ಮನಸ ನಿರಂಬಳಾಗಿಟಗೊಂಡ ನಡದರಾತು" ಎಂದು ಮಲ್ಲಪ್ಪ

ಅನುಭವವನ್ನೇ ಅನುಭಾವದ ಶೈಲಿಯಲ್ಲಿ ಹೇಳಿದ.

"ಲೇ ಕಂಟ್ಯಾ ಏನ ನೋಡ್ತೀಲಿ ಮಗನ ಪಾದಳ್ಳಿ ಆರೋಪಿನ್ನ ತಂದು ಹೊರಗ ಹಾಕು" ಹವಾಲ್ದಾರರು ಆಜ್ಞೆಮಾಡಿದರು.

"ಯಪ್ಪಾ ಅದೊಂದು ಮಾತ ಹೇಳಬ್ಯಾಡ್ರಿ ದೊಡ್ಡ ಮನೆತನದ ಜನಾ ಅವರು. ನಾಹ್ಯಾಂಗ ಮೈಮುಟ್ಟಿ ತರಲಾಕ ಬರತೈತಿ ಹೇಳ್ರಿ" ಕಂಟ್ಯಾ ವಿನಯವೇ ಮೈವೆತ್ತು ಬಂದಂತೆ ನುಡಿದ.

"ಸರದಾರ, ಅಲಿಂದಿಲ್ಲೀ ತನಾ ಆ ಆರೋಪಿನ್ನ ಹುಡುಕಲಾಕ ಅಂತ್ಹ ಬಂದೀರಿ. ಎಡ್ಡ ಹೆಜ್ಜಿ ಒಳಮುಟಾ ಬಂದು, ನಿಮಗ ಬೇಕಾದ ಆರೋಪಿನ್ನ ಕರಕೊಂಡು ಹೋಗಲಾಸಲ್ಲ? ನಾ ಬ್ಯಾಡಂದರ ಹೇಳ್ರಿ" ಎಂದು ಚಂದ್ರವ್ವ ತಂಬಾಕು ಉಗುಳಿ ನುಡಿದಳು.

ಹವಾಲ್ದಾರರಿಗೆ ಈ ಮಾತಿನಲ್ಲಿ ಸವಿಯಾದ ಔತಣ ಕಂಡಿತು. ಆದರೂ ತೋರಗೊಡದೆ, "ಯಾಕ, ಆರೋಪಿನ್ನ ಹಿಡಕೊಂಡು ಹೋಗಲಾಕ ಅಂಜತೇನಿ ಅಂತ ತಿಳದೀ ಏನು. ನಿಮ್ಮನ್ನೆಲ್ಲಾ ಸಾಲಬೇಡೀ ಹಾಕ್ಕೊಂಡು ಒಯ್ಯತೇನು, ಆಗ ತಿಳೀತೈತಿ" ಎಂದು ಜಬರಿಸಿ, ಹವಾಲ್ದಾರರು ಪೋಲೀಸರ ಸಮೇತ ಚಂದ್ರವ್ವನ ಮನೆಯನ್ನು ಹೊಕ್ಕರು. ಹೊರಗೆ ಕೂಡಿದ ಜನ ಕುತೂಹಲದಿಂದ ಕಾಯತೊಡಗಿತು.

ಚಂದ್ರವ್ವನ ಮನೆಯೇ ಸಣ್ಣದು. ಇದ್ದ ಎರಡು ಕೋಣೆಗಳಲ್ಲಿ ದಾದಾ ಎಲ್ಲಿಯೂ ಕಾಣಲಿಲ್ಲ. ಹಿತ್ತಲಬಾಗಿಲು ಇರದ್ದರಿಂದ ಹಿಂದಿನಿಂದಲೂ ತಪ್ಪಿಸಿಕೊಂಡು ಓಡಿಹೋಗುವಂತಿರಲಿಲ್ಲ. ಎಲ್ಲ ಕಡೆಗೂ ಕಾವಲಿತ್ತು. ಹವಾಲ್ದಾರರು ಹತಾಶರಾದರು. ಅಡುಗೆಮನೆಯ ಒಂದು ಮೂಲೆಯಲ್ಲಿ ಚಾಪೆಯ ಮೇಲೆ ಒಬ್ಬ ಹೆಣ್ಣುಮಗಳು ನರಳುತ್ತ ಬಿದ್ದಿದ್ದಳು. ಹವಾಲ್ದಾರರಿಗೆ ಸಿಟ್ಟಿಗೊಂದು ನೆವ ಬೇಕಾಗಿತ್ತು. ಅಂತಲೇ "ಎ ಹುಚ್ಚಮುಂಡೆ, ಪಾದಳ್ಳೀ ದಾದಾ ಎಲ್ಲ್ಯದಾನ" ಎಂದು ಅವಳನ್ನೇ ಕೇಳಿದರು.

ಅವಳ ಸರಳಾಟ ಕಡಿಮೆಯಾಗಿರಲಿಲ್ಲ. ಗಂಡಸಿನ ದನಿ ಕೇಳಿದಾಗಲಂತೂ ಇನ್ನೂ ಹೆಚ್ಚಾಯಿತು. "ಹೊರ್ಯಾಕ ಹೋಗರಿ, ಮದಲ ಹೊರ್ಯಾಕ ಹೋಗರಿ" ಎಂದು ನೋವಿನಿಂದ ಚೀರಿದಳು.

ಹವಾಲ್ದಾರರ ಹಿಂದಿನಿಂದಲೇ ಬಂದ ಚಂದ್ರವ್ವ ಅವಳ ಹತ್ತಿರ ಬಂದು,

"ಯಾಕಬೇ, ನೀನೂ ಇದss ಯಾಳೇಕss ಬ್ಯಾನಿ ತಿನ್ನಾಕ ಹತ್ತಿದ್ಯಾ!" ಎಂದು ಹವಾಲ್ದಾರರ ಕಡೆಗೆ ತಿರುಗಿ, "ಇಗಾ ಸರದಾರ, ಪಾದಳ್ಳಿ ಆರೋಪ ಅಂತಿದ್ದರೆಲ್ಲ, ಇದss ಹೆಣಮಗಳು. ಬ್ಯಾನಿ ತಿನ್ನಾಕ ಹತ್ಯಾಳು. ಹಡದವ್ಯಾಗ ಕರಕೊಂಡು ಹೋಗತೀರ್ರ್ಯೋ, ಈಗss ಒಯ್ಯತೀರ್ರ್ಯೋ ಹೇಳ್ರಿ" ಎಂದು ಹೇಳಿದಳು.

ಹವಾಲ್ದಾರರ ಮುಖ ಕಪ್ಪಿಟ್ಟಿತು. ತಮ್ಮ ಕನಸು ಇಷ್ಟು ಬೇಗ ವಿಫಲ ವಾದೀತೆಂದು ಅವರಿಗನಿಸಿರಲಿಲ್ಲ. ಅವರಿಗೆ ಬೇಕಾದದ್ದು ದಾದಾ, ಈ ಹೆಣ್ಣು ಮಗಳಲ್ಲ! ಆ ಕ್ಷಣದಲ್ಲಿ ಚಂದ್ರವ್ವ ಹೋಗಲಿ, ಇಡೀ ಜಗತ್ತೇ ಅವರ ಪಾಲಿಗೆ ನೀರಸವೆನಿಸಿತು. ಇನ್ನು ಬದುಕುವದರಲ್ಲಿ, ನೌಕರಿ ಮಾಡುವದರಲ್ಲಿ ಅರ್ಥವಿಲ್ಲ ವೆಂದೆನಿಸಿತು. ಏನೂ ಮಾತಾಡದೆ ಹತಾಶರಾಗಿ ಹೊರಗೆ ಬಂದರು.

ಅಷ್ಟರಲ್ಲಿ ಹೊಲಗೇರಿಯ ಹಿರಿಯರೆಲ್ಲ ಅಲ್ಲಿ ಕೂಡಿದ್ದರು. ಅವರು ಹವಾ ಲ್ದಾರರಿಗೆ ಕೈಮುಗಿದು "ದ್ಯಾವರೂ, ಬಡವರ ತಾಯಿ ತಂದಿ ನೀವss ಅಲ್ಲರೇ. ಯಾರೂ ದಿಕ್ಕಿಲ್ಲದ ಹೆಣಮಗಳು ಆಡವಿಹೆಣಾ ಆಗೂದು ನೋಡಲಾರದ ನಮ್ಮ ಚಂದ್ರವ್ವ ತಂದು ಮನ್ಯಾಗ ಇಟಗೊಂಡಾಳರೀ. ಈಗ ಆ ಹೆಣಮಗಳು ಹಡ ದರ, ಬಾಣಂತ್ಯಾನದ ಖರ್ಚು ಎಲ್ಲಾ ಆ ಬಡವೀ ಮ್ಯಾಗss ಬೀಳತೈತರಿ. ನಮ್ಮ ಜಾತೀ ಹೆಣಮಗಳಾಗಿದ್ದರ ಆ ಮಾತು ಬ್ಯಾರೆ. ಆಕಿ ನಿಮ್ಮಂಗ ಊಚ ಕುಲ ದಾಕಿ. ಕುಲ ಕೆಡಿಸಿದರಿ ಅಂತ, ಆಕಿ ಗಂಡ, ಅಣ್ಣಾತಮ್ಮಗೋಳು ಬಂದು ನಮ್ಮನ್ನ ಕಾಡಬಾರದರೀ. ಅದಕೊಂದು ಹಾದೀ ತೋರಿಸಿ ಹೋಗರಿ" ಎಂದು ಹೇಳಿ ಅಡ್ಡಬಿದ್ದರು.

ಹವಾಲ್ದಾರರಿಗೆ ಇದಾವುದೂ ಬೇಕಾಗಿರಲಿಲ್ಲ. ಇಲ್ಲಿ ನಿಲ್ಲುವದೂ ಅವರಿಗೆ ಬೇಕಾಗಿರಲಿಲ್ಲ. ಆದರೆ ಅಡ್ಡಬಿದ್ದವರಿಗೆ ಏನಾದರೂ ಒಂದು ಮಾತು ಹೇಳಬೇ ಕಲ್ಲ! "ಚಾವಡಿಗೆ ಹೋಗಿ ಯಶವಂತರಾಯರಿಗೆ ಈ ಮಾತು ತಿಳಿಸಿ ಹೇಳ ಕೋರಿ. ಹೆಣಮಗಳು ಯಾರು, ಏನು, ಎಲ್ಲಾ ವಿಚಾರ ಮಾಡಿ ಅವರೇನು ಹಾದಿ ಹೇಳತಾರೋ ಅದರಂತ ನಡೀರಿ" ಎಂದು ಹೇಳಿದವರೇ ಹವಾಲ್ದಾರರು ಅಲ್ಲಿಂದ ಕಾಲು ಕಿತ್ತಿದರು.

ಹವಾಲ್ದಾರರಿಗೆ ತಾವು ಹಾಕಿದ ಹೊಂಚು ವಿಫಲವಾದದ್ದಕ್ಕೆ ಸಾಕಷ್ಟು ನಿರಾಶೆಯಾಗಿದ್ದರೂ ಕೂಡ, ತಾವು ಕಂಡ ಹೊಸ ಸಂಗತಿಗಳು ಏನೇನೋ ಆಸೆ ಗಳನ್ನು ಕೆರಳಿಸಿದ್ದವು. ದಾದಾ ಕೈಗೆ ದೊರೆತಿದ್ದರೆ, ಅವನನ್ನು ಮುಚ್ಚಿಟ್ಟ

ಟಪದ ಮೇಲೆ ಚಂದ್ರವ್ವನನ್ನು ತಮ್ಮ ಬಲೆಯಲ್ಲಿ ಕೆಡವಬಹುದಿತ್ತು.
ೀಗಲಿ. ಆದರೆ ಚಂದ್ರವ್ವನ ಮನೆಯಲ್ಲಿ ಬೇನೆ ತಿನ್ನುತ್ತ ಮಲಗಿದ ಹೆಣ್ಣು
ಗಳಾರಿರಬೇಕು? ಪಾದಳ್ಳಿಗೂ ಅವಳ ಚರಿತ್ರೆಗೂ ಸೂಕ್ಷ್ಮ ಸಂಬಂಧ ಬೇರೆ ಇದೆ.
ಾಲ್ದಾರರಿಗೆ ಈ ಸತ್ಯವನ್ನು ಬಯಲಿಗೆಳೆಯುವ ಆಸೆಯುಂಟಾದ್ದರಿಂದ ಅಲ್ಲಿಂದ
ಕರಪ್ಪನ ಮನೆಗೇ ಬಂದರು.

ಚಂದ್ರವ್ವನ ಮನೆಯಲ್ಲಿ ಈಗ ಬೇನೆ ತಿನ್ನುವ ಹೆಣ್ಣುಮಗಳು ಯಾರು?
ೀ ಹವಾಲ್ದಾರರ ಮುಖ್ಯಪ್ರಶ್ನೆಯಾಗಿತ್ತು. ಶಂಕರಪ್ಪ ತನಗೆ ಗೊತ್ತಿದ್ದಷ್ಟನ್ನು
ಿದ.ಆದ ಸಂಗತಿ ಇಷ್ಟು: ಮೊನ್ನಿನ ದಿನ ಚಂದ್ರವ್ವ ಸಂತೆಗೆ ಹೋಗಿದ್ದಳಂತೆ.
ಿಗಿ ಬರುವಾಗ ಸಂಜೆಯಾಗಿತ್ತು. ಆಗ ಈ ಹೆಣ್ಣುಮಗಳನ್ನು ದಾರಿಯಲ್ಲಿ
ಡಳು. ತುಂಬಿದ ಬಸಿರಾದ ಹೆಣ್ಣುಮಗಳನ್ನು ಕಂಡು ಚಂದ್ರವ್ವನೂ ಎಲ್ಲ ವಿವ
ನ್ನು ಕೇಳಿಕೊಂಡಳು. ಹೆಣ್ಣುಮಗಳು ಪಾದಳ್ಳಿಯವಳು. ಅವಳ ಗಂಡ
ಳನ್ನು ಯಾರದೋ ಮನೆಯಲ್ಲಿ ಬಿಟ್ಟು ಹೋಗಿದ್ದನಂತೆ. ಈಗ ದಿಕ್ಕಿಲ್ಲದವಳು.
ದ್ರವ್ವ ಮನಸ್ಸು ಕರಗಿ ಅವಳನ್ನು ತನ್ನ ಮನೆಯಲ್ಲಿ ತಂದಿಟ್ಟುಕೊಂಡಿದ್ದಾಳೆ.
ಟ್ಟೆಲ್ಲ ವಿವರಗಳೂ ಶಂಕರಪ್ಪನಿಗೆ ಆ ಮೇಲೆ ಗೊತ್ತಾದದ್ದು.

ಹವಾಲ್ದಾರರ ಊಹೆ ಈ ಕತೆಯನ್ನು ಕೇಳಿ, ಬೇರೊಂದು ಕತೆಯನ್ನೇ
ಣೆಯುತೊಡಗಿತು. ಪಡದಯ್ಯನವರನ್ನು ಹೆದರಿಸಿ, ಹೊಡೆದು ತನ್ನ ಬಸಿರಾದ
ಿಯನ್ನು ದಾದಾ ಮಠದಲ್ಲಿಟ್ಟು ಹೋದ ವಿಷಯ ಅವನಿಗೆ ಫೌಜದಾರರಿಂದ
ದಿತ್ತು. ಈ ಹೆಣ್ಣುಮಗಳು ದಾದಾನ ತಂಗಿ ಇರಬಹುದೇ ಎಂಬ ಸಂಶಯ
ರಿಗೆ ಬರದೆ ಹೋಗಲಿಲ್ಲ. ಆದ್ದರಿಂದ ದಾದಾನ ತಂಗಿ ಪಡದಯ್ಯನವರ ಮಠ
ಇನ್ನೂ ಇರುವಳೇ ಎಂದು ಶಂಕರಪ್ಪನನ್ನು ಕೇಳಿದರು. ಇಲ್ಲವೆಂದು ಉತ್ತರ
ದಾಗ ಅವರ ಸಂಶಯು ಇನ್ನೂ ಸ್ಥಿರವಾಯಿತು.

ಹವಾಲ್ದಾರರು ಅಲ್ಲಿಂದ ಚಾವಡಿಗೆ ಬಂದರು. ಅಲ್ಲಿ ಹೊಲೆಯರ ಮಲ್ಲಪ್ಪ
ಗೂ ಇನ್ನಿತರ ಹಿರಿಯರು ಕಾಯುತ್ತಿದ್ದರು. ಹವಾಲ್ದಾರರು ಬಂದೊಡನೆ ಅವ
ಮುಜುರೆ ಮಾಡಿ, "ದ್ಯಾವರೂ ನೀವು ಹೇಳಿದಂಗ ಆ ಹೆಣಮಗಳ ಬಗ್ಗೆ
ಡರಿಗೆ ವರದಿ ಕೊಟ್ಟು ಬಂದಿವಿರಿ. ಅವರು ಬಂದಕ್ಯಾಸೆ ಆಕಿನ್ನ ತಮ್ಮ
ಗೆ ಕರಕೊಂಡು ಹೋಗ್ಯಾರ್ರಿ; ಆಕಿ, ಗೌಡರಿಗೆ ಕಳಬಳ್ಳಿ ಬಳಗಿನ್ಯಾಕಿ
ತ ಹೇಳಿವರರೀ. ಚಂದ್ರವ್ವಗ, ಹರೀದಂತಾ ಉಡಗೋರಿ ಮಾಡುವಂತಾ ದಗದಾ

ಮಾಡಿದಿ ಅಂತ ಶಿಪಾರಸ ಮಾಡಿದರರೀ ಗೌಡರು" ಎಂದು ಮಲ್ಲಪ್ಪ ಎಲ್ಲವನ
ಬಿನ್ನವಿಸಿದ.

ಹವಾಲ್ದಾರರಿಗೆ ಇನ್ನು ಸಂಶಯವೇ ಉಳಿಯಲಿಲ್ಲ. ಯಶವಂತರಾಯ
ಬ್ಬರನ್ನು ಕಂಡು ಖಾತ್ರಿ ಮಾಡಿಕೊಂಡರಾಯಿತೆಂದು ಅವರ ಮನೆಗೆ ಬಂದ
ಯಶವಂತರಾಯರು ಸಂಪೂರ್ಣ ಸಂತೋಷದಿಂದ, "ನೀವು ಬಂದ ವ್ಯಾಳ್ಯಾ ಛಲ
ಇತ್ತು. ದಾದಾ ಈ ಊರಿಗೆ ಬರದಿದ್ದರೂ ಅವನ ತಂಗಿ ಬಂದದ್ದು ಪತ್ತೆ ಹ
ಕೊಟ್ಟೆರಿ. ಆಕೆ ಸುಖರೂಪದಿಂದ ಇಲ್ಲೇ ಗಂಡು ಹಡದಾಳ" ಎಂದು ತಿಳಿಸಿದರ

ಹವಾಲ್ದಾರರೇನು ಈ ಸುದ್ದಿಕೇಳಿ ಸಕ್ಕರೆ ಹಂಚಬೇಕಾಗಿರಲಿಲ್ಲ. ಆದ
ಅವರ ಕುತೂಹಲ ಇನ್ನೂ ಮುಂದೋಡಿತು. ದಾದಾನ ತಂಗಿ ಅವಿವಾಹಿತ
ರುವ ಸಂಗತಿ ಅವರಿಗೆ ಗೊತ್ತಿತ್ತು. ಅಂದ ಮೇಲೆ ಜನನ ರಜಿಸ್ಟರದಲ್ಲಿ ಕೂಸಿ
ತಂದೆಯ ಹೆಸರು ಏನೆಂದು ಹಚ್ಚಬೇಕು? ಸುತ್ತುಸುತ್ತಾಡಿ ಯಶವಂತರಾ
ರೆದುರು ತಮ್ಮ ಈ ಸಂಶಯವನ್ನು ವ್ಯಕ್ತಪಡಿಸಿದರು. ಯಶವಂತರಾಯರಿ
ಹಿಂದೊಂದು ಮುಂದೊಂದು ಆಡಿ ಗೊತ್ತೇ ಇಲ್ಲ. ಅವರಿಗೆ ಚಿಮಣಾನ ಪ್ರಿಯ
ಕರ ತಮ್ಮ ಅಳಿಯದೇವರೇ ಎಂಬ ಮಾತಿನ ಬಗ್ಗೆ ಯಾವ ಸಂಶಯವೂ ಉ
ದಿರಲಿಲ್ಲ. ಅದಕ್ಕಾಗಿಯೇ ಏನೋ ಮಾತಿನ ಓಘದಲ್ಲಿ, "ಆ ಹುಡಿಗಿ, ಕೂಸಿ
ತಂದಿ ಯಾರು ಅಂತ ಹೇಳತಾಳೋ ಆ ಹೆಸರ ಹಚ್ಚಿಸತೀನಿ. ಆಕಿ ಬಾಪೂಸಾಹೆ
ಬನ ಹೆಸರು ಹೇಳಿದರೂ ಅದನ್ನs ಹಚ್ಚಸತೇನಿ" ಎಂದು ಸ್ವಲ್ಪ ಜೋರಿನಿಂದಲ
ಹೇಳಿದರು.

ಹವಾಲ್ದಾರರು ಇನ್ನು ಅಲ್ಲಿ ನಿಲ್ಲುವಂತಿರಲಿಲ್ಲ. ಮೊದಲನೆಯದಾಗಿ
ದಾದಾನ ಶೋಧ ಇನ್ನೂ ನಡೆಯಬೇಕಾಗಿತ್ತು. ಮೇಲಾಗಿ ತಾವು ಕಂಡ ಸಂಗ
ಗಳ ಲಾಭ ಪಡೆಯಬೇಕಾಗಿತ್ತು. ಆದ್ದರಿಂದಲೇ ಅವರು ಅಜರಾಣಿಯಿಂದ ತಿರು
ಗಿದ್ದು ಮತ್ತೆ ಪಾದಳ್ಳಿಗೇ. ಸರಿರಾತ್ರಿಯ ಹೊತ್ತಿಗೆ ಪಾದಳ್ಳಿಗೆ ಬಂದು, ಚಾವಡಿಗ
ಹೋಗದೆ ಪಡದಯ್ಯನವರ ಮಠಕ್ಕೇ ನಡೆದರು. ಪಡದಯ್ಯನವರಿಗೆ ನಡೆ
ಸಂಗತಿಗಳನ್ನು ವಿವರಿಸಿ ಹೇಳುತ್ತ "ಅಂತೂ ನಿಮ್ಮ ಮ್ಯಾಗಿನ ದೊಡ್ಡ ಕುತ್ತೊಂದು
ಪಾರಾದಾಂಗಾತು. ದಾದಾನ ತಂಗಿನ್ನ ಹುಡಕಸಲಾಕ ಬಾಳ ಖಟಪಿಟಿ ಮಾಡ
ತಿದ್ರೆಲ್ಲಾ. ಈಗ ಬಕ್ಷೀಸ ಕೊಡಿಸಬೇಕು ನಮಗ ನೀವು" ಎಂದು ದೇಶಾವರ
ನಡೆಸಿದರು.

ಪಡದಯ್ಯನವರಿಗೆ ಆ ಮಾತಿನಿಂದೇನೂ ಸಂತೋಷವಾದಂತೆ ಕಾಣಲಿಲ್ಲ. ಅವರ ಮನಸ್ಸು ಇನ್ನೊಂದು ವಿಚಾರದ ಬಲೆಗೆ ಸಿಕ್ಕುಬಿತ್ತು. "ಬಕ್ಷೀಸಿನ ಕಾಳಜಿ ನಾನಿರೋತನಕ ಮಾಡಬ್ಯಾಡ್ರಿ. ಆದರ ದಾದಾನ್ನ ಹಿಡೀದಿದ್ರ ನಮಗ ಉಳಿಗಾಲ ಇಲ್ಲ. ಈಗ ಅವನ ತಂಗಿ ಗಂಡ ಹಡದ ಸುದ್ದೀ ಬ್ಯಾರೇ ಹೇಳಿದ್ರಿ, ಅದೂ ಒಂದು ಮುಳುವs! ಆ ಕೂಸಿನ ತಂದಿ ನಾನು ಅಂತ ಹೆಸರ ದಾಖಲ ಮಾಡಿದರ, ದಾದಾನ ಪುಂಡಾಟಕ್ಕ ಪುಟ ಕೊಟ್ಟ್ಯಾಂಗ ಆಗತೈತಿ. ಅವನ್ನ ಮೊದಲ ಹಿಡಿದು ಜೇಲಿಗೆ ಹಾಕಾಕs ಬೇಕು." ಎಂದು ವಿಚಾರಗಳಿಂದ ತ್ರಸ್ತರಾಗಿಯೇ ಹೇಳಿದರು.

ದಾದಾನನ್ನು ಹುಡುಕಿಸುವ ಬಗ್ಗೆ ಇಬ್ಬರಲ್ಲಿಯೂ ದೀರ್ಘ ಚರ್ಚೆಯೇ ನಡೆಯಿತು. ದಾದಾ ಎಲ್ಲಿ ಅಡಗಿದ್ದರೂ ಹುಡುಕಿ ತೆಗೆಯುವೆನೆಂಬ ಹಟ ಹವಾಲ್ದಾರದು. ಮೇಲೆ ಮೇಲೆ ಒಪ್ಪಿದಂತೆ ಕಂಡರೂ ಪಡದಯ್ಯನವರಿಗೆ ಆ ಬಗ್ಗೆ ನಂಬಿಕೆಯಿರಲಿಲ್ಲ. ಅವರ ಹಂಚಿಕೆ ಇನ್ನೂ ಬೇರೆ ರೀತಿಯದಾಗಿತ್ತು. ಯುಗಾದಿ ಆದ ಹತ್ತು ದಿನಕ್ಕೆ ಊರಲ್ಲಿ ಹನುಮಂತ ದೇವರ 'ಓಕಳಿ' ನಡೆಯಬೇಕು. ಕಾಲರಾ ಹಾಗೂ ಬರಗಾಲ ಊರನ್ನೆಲ್ಲ ತೊಳೆದು ಬಿಟ್ಟಾಗ ಓಕಳಿಯಂಥ ಉತ್ಸವ ಕಾರ್ಯಗಳು ಬೇಡ ಎಂದು ಕೆಲವರ ಅಭಿಪ್ರಾಯವಾಗಿತ್ತು. ಆದರೂ ದೇವರ ಕೆಲಸ ನಡೆಯಲೇಬೇಕಲ್ಲವೇ? ಓಕಳಿ ಬಾಪೂಸಾಹೇಬನ ವಾಡೆಯಿಂದ ನಡೆಯಬೇಕಾದ ಉತ್ಸವ. ಅದರ ಖರ್ಚುವೆಚ್ಚಗಳನ್ನೆಲ್ಲ ಜಾಗೀರದಾರರೇ ನೋಡುತ್ತಿದ್ದುದು ವರ್ಷ ವರ್ಷವೂ ನಡೆದು ಬಂದ ಸಂಪ್ರದಾಯ. ಬಾಪೂಸಾಹೇಬ ಈ ಅವಕಾಶವನ್ನು ಅನಾಯಾಸ ಬಿಡುವವನಲ್ಲ. ಅಂದ ಮೇಲೆ ಓಕಳಿ ನಡೆದೇ ತೀರುತ್ತದೆ. ಅದಕ್ಕೆ ಯಶವಂತರಾಯರೂ ಬರುತ್ತಾರೆ. ಅವರನ್ನು ಕಾಣಲು ದಾದಾ ಎಲ್ಲಿದ್ದರೂ ಆ ಹೊತ್ತಿಗೆ ಬರುತ್ತಾನೆ. ಆ ಕಾಲಕ್ಕೆ ಬಂದೋಬಸ್ತಿಯ ನೆವ ಮಾಡಿಕೊಂಡು ಹವಾಲ್ದಾರರು ಊರಲ್ಲಿದ್ದರೆ ತೀರಿತು.

ಪಡದಪ್ಪನು ಒಡ್ಡಿದ ಬಲೆಯಲ್ಲಿ ದಾದಾ ಬಂದು ಬೀಳುವದು ಖಂಡಿತ ವೆಂದು ಹವಾಲ್ದಾರರಿಗೂ ಅನಿಸಿತು. ಈ ವರೆಗೆ ಅವರು ತೆಗೆದುಕೊಂಡ ಶ್ರಮ, ಮುಂದೆ ಓಕಳಿಯ ಕಾಲಕ್ಕೆ ಅವರಿಂದಾಗಬೇಕಾದ ಸಹಾಯ ಇವನ್ನೆಲ್ಲ ಅನುಲಕ್ಷಿಸಿ, ಪಡದಯ್ಯನವರು ಬಾಪೂಸಾಹೇಬನಿಂದ ಹವಾಲ್ದಾರರ ಕೈಬೆಚ್ಚಗೆ ಮಾಡಿಸಿದರು.

ಹವಾಲ್ದಾರರು ಊರಿಗೆ ಹೋಗುವ ಮುಂದೆ ಆಡಿದ ಒಂದು ಮಾತು

ಬಾಪೂಸಾಹೇಬನ ತಲೆ ಕೆಡಿಸಿತು. 'ನಿಮ್ಮ ಮರ್ಯಾದೆ ಚಿಮಣಾಳ ಕೈಯಲ್ಲಿದೆ. ಅವಳು ಕೂಸಿನ ತಂದೆ ಎಂದು ನಿಮ್ಮ ಹೆಸರನ್ನು ಜನನ ರಜಿಸ್ಟರದಲ್ಲಿ ಹಚ್ಚದಂತೆ ನೋಡಿಕೊಳ್ಳಿರಿ.' ಎಂದು ಸೂಚಿಸಿ ಹೋಗಿದ್ದರು. ಬಾಪೂಸಾಹೇಬನಿಗೆ ಈ ವಿಚಾರ ದಿಂದ ನಿದ್ದೆಕೂಡ ಹತ್ತದಂತಾಯಿತು. ಚಿಮಣಾ ತನ್ನನ್ನು ಪ್ರೀತಿಸಿದ್ದೇನೋ ನಿಜ. ತಾನೂ ಕೂಡ ಮೊದಮೊದಲು ಆ ಬಗ್ಗೆ ಒಲವು ತೋರಿದ್ದೂ ನಿಜ. ಆದರೆ ಪಡದಯ್ಯ ಆ ರೀತಿ ದುಡುಕಿದ್ದರಿಂದ ತನ್ನ ಮನಸ್ಸು ಹಿಂದೆಗೆಯಬೇಕಾ ದದ್ದು ಸ್ವಾಭಾವಿಕವೇ ಆಗಿತ್ತು. ಪಡದಯ್ಯ ಸನ್ಯಾಸಿಯಾಗಿ ದೂರ ಉಳಿದ. ತಾನು ಸ್ತ್ರೈಣನಾಗಿ ಸಂಸಾರಿಗನಾದ್ದರಿಂದ ಈ ವ್ಯಾಪವೆಲ್ಲ ಕೊರಳಿಗೇ ಬೀಳು ವಂತಾಯಿತು. ತನ್ನ ದೊಡ್ಡಸ್ತಿಕೆ, ಹಣ, ರೂಪ, ಇರುವಿಕೆಯ ರೀತಿ ಇವೆಲ್ಲ ತನಗೇ ಮುಳುವಾದಂತಾಗಿವೆ. ಎಷ್ಟು ದೂರವಿರಬೇಕೆಂದರೂ ಸಾಧ್ಯವಾಗಲಾರ ದಂತಾಗಿದೆ. ನಾನಾ ಇದಕ್ಕಾಗಿಯೇ ಸಾಯಬೇಕಾಯಿತು. ಪುತಳಾಬಾಯಿಯ ಮರಣವೂ ಇದೇ ಕಾರಣಕ್ಕಾಗಿಯೇ ಅಲ್ಲವೇ? ಚಿಮಣಾ ಈ ಮನೆತನದ ಜೀವಂತ ಶಾಪವಾಗಿ ಬೆನ್ನುಹತ್ತಿದ್ದಾಳೆಯೇ? ತನ್ನನ್ನು ಹಾಗೂ ಚಿಮಣಾಳನ್ನು ಒಂದು-ಗೂಡಿಸಲು ಯಾವ ದೈವ ಹಾತೊರೆಯುತ್ತಿದೆ? ಅಥವಾ ಇದು ದೈವದ ಹಟವೇ ಇರಬೇಕು. ಇಲ್ಲದಿದ್ದರೆ ಬಾಪೂಸಾಹೇಬನ ಪೂರ್ವಜೀವನದಲ್ಲಿ ಇಂಥ ಪ್ರಸಂಗ ಗಳು ಅಪರೂಪವೇನಲ್ಲ. ಪಾದಳ್ಳಿಯ ಎಷ್ಟೋ ಹೆಣ್ಣು ಅವನ ಬಲೆಗೆ ಬಿದ್ದಿ ದ್ದವು. ಆದರೆ ಒಂದು ಪ್ರಕರಣವೂ ಹೀಗೆ ಬೆನ್ನುಹತ್ತಿ ಬಂದಿರಲಿಲ್ಲ. ಚಿಮಣಾಳ ಪ್ರಸಂಗದಲ್ಲಿ ಬಾಪೂಸಾಹೇಬ ನಿಮಿತ್ತಮಾತ್ರವಾಗಿದ್ದನೇ ಹೊರತು, ಪ್ರತ್ಯಕ್ಷ ವಾಗಿ ಯಾವ ಸಂಬಂಧವೂ ಅವನಿಗಿರಲಿಲ್ಲ. ದಾದಾ ಚಿಮಣಾಳನ್ನು ಮಠದಲ್ಲಿ ಇಟ್ಟಾಗ ಒಂದು ರೀತಿಯಿಂದ ಬಾಪೂಸಾಹೇಬನ ಸಂಬಂಧ ಕಡಿದಂತಾಗಿತ್ತು. ಅವಳು ಪಾದಳ್ಳಿಯನ್ನು ಬಿಟ್ಟ ಮೇಲಂತೂ ಅವನ ಮನಸ್ಸು ಆ ಬಗ್ಗೆ ವಿಚಾರ ವನ್ನೇ ಮಾಡಿರಲಿಲ್ಲ. ಆ ಕ್ಷಣಕ್ಕೆ ತಾನು ಪಾರಾದೆನೆಂದೆನಿಸಿತ್ತು. ಆದರೆ ಆ ಬಿಡುಗಡೆಯ ಭಾವನೆ ಕೆಲವೊಂದು ಕಾಲಾವಧಿಯ ವರೆಗೆ ಮಾತ್ರ. ದೈವ ತನಗರಿಯದಂತೆಯೇ, ಗುಪ್ತವಾಗಿ ಬೇರೊಂದು ರೀತಿಯಲ್ಲಿ ಹೊಂಚು ಹಾಕು ತ್ತಿತ್ತು. ಈಗ ಮತ್ತೆ ಕಣ್ಣೆದುರು ಬಂದು ನಿಂತಿದೆ. ಇಲ್ಲಿಯವರೆಗೆ ಕೇವಲ ಭಾವನೆಯಾಗಿದ್ದುದು ಈಗ ಪ್ರತ್ಯಕ್ಷ ಸಂಗತಿಯಾಗಿ ಹೆದರಿಸುತ್ತಿದೆ. ಚಿಮಣಾ ತನ್ನ ಹೆಸರನ್ನೇ ಹೇಳಿಬಿಟ್ಟರೆ? ಕಾಯದೆಯ ದೃಷ್ಟಿಯಿಂದ ಅದೇ ಸತ್ಯ. ಚಿಮಣಾ

ತನ್ನ ಹೆಸರನ್ನು ಹೇಳಬಾರದಂಥವೇನೂ ಇಲ್ಲ. ಚಿಮಣಾಳ ಗಂಡನಾಗಲು ಎಲ್ಲ ದೃಷ್ಟಿಯಿಂದಲೂ ಯೋಗ್ಯತೆಯಿದ್ದವ ತಾನು. ಮೇಲಾಗಿ ಅವಳು ಪಡದಯ್ಯನನ್ನು ಎಂದೂ ಪ್ರೀತಿಸಿರಲಿಲ್ಲ. ಒಂದು ವೇಳೆ ಪಡದಯ್ಯನ ಹೆಸರನ್ನೇ ಹೇಳಿದರೆ ಕೂಸು ಮುಂದೆ ಸನ್ಯಾಸಿಯ ಮಗನೆಂದು ಅವಮರ್ಯಾದೆಗೆ ಈಡಾಗಬೇಕಾದೀತು. ಜನರ ಕಣ್ಣಿನಲ್ಲಿಯೂ ತಾನೇ ಚಿಮಣಾಳ ಪ್ರಿಯಕರ. ಜನರ ಮಾತೇಕೆ, ಪ್ರತ್ಯಕ್ಷ ತನ್ನ ಮಾವ, ಯಶವಂತರಾಯರು ಕೂಡ ಹಾಗೇ ತಿಳಿದುಕೊಂಡಿದ್ದಾರೆ.

ಎಷ್ಟು ವಿಚಾರ ಮಾಡಿದರೂ ಬಾಪೂಸಾಹೇಬನಿಗೆ ಬಗೆಹರಿಯಲಿಲ್ಲ. ಯೋಚಿಸಿದಷ್ಟೂ ತನ್ನ ಹೆಸರನ್ನೇ ಹೇಳುವದು ಸತ್ಯವೆಂದು, ಅವನ ಒಳಗಿನ ಒಳದನಿ ಹೇಳತೊಡಗಿತು. ಬಾಪೂಸಾಹೇಬನಿಗೆ ತಡೆಯಲಾಗಲಿಲ್ಲ. ಬೆಳಕು ಹರಿಯುತ್ತಲೇ, ತನ್ನ ನಂಬುಗೆಯ ಆಳು ಚಾಂದನನ್ನು ಕರೆದು, ಅಜರಾಣಿಗೆ ಹೋಗಿ ಆಗಿಂದಾಗಲೇ ಯಶವಂತರಾಯರನ್ನು ಕರೆತರಲು ಹೇಳಿದನು. ತನಗೆ ಮೈಯಲ್ಲಿ ನೆಟ್ಟಗಿಲ್ಲವೆಂದೂ, ಕೂಡಲೆ ಬರಬೇಕೆಂದೂ ಹೇಳಿ ಕಳಿಸಿದನು.

ಬಾಪೂಸಾಹೇಬನಿಗೆ ಮೈಯಲ್ಲಿ ನೆಟ್ಟಗಿಲ್ಲವೆಂಬ ವರ್ತಮಾನ ಕೇಳಿದ ಕೂಡಲೇ ಯಶವಂತರಾಯರು ಪಾದಳ್ಳಿಗೆ ಹೊರಡುವ ಸಿದ್ಧತೆ ಮಾಡಿದರು. ಹೊರಡುವ ಮುಂದೆ ಅವರಿಗೇನು ನೆನಪಾಯಿತೋ ಚಿಮಣಾಳನ್ನು ಕಂಡು ಹೋಗಬೇಕೆಂದು ಬಂದರು.

ಚಿಮಣಾ ಇನ್ನೂ ಬಾಣಂತಿಯ ಕೋಣೆಯಲ್ಲೇ ಇದ್ದಳು. ಯಶವಂತರಾಯರ ಹೆಂಡತಿಯ ಅಕ್ಕರೆಯ ಆರೈಕೆಯಲ್ಲಿ ಚಿಮಣಾ ಸುಖವಾಗಿದ್ದರೂ, ಅವಳ ಮನಸ್ಸು ದುಃಖದ ಗವಿಯಿಂದ ಇನ್ನೂ ಹೊರಗೆ ಬಂದಿರಲಿಲ್ಲ.

"ಪಾದಳ್ಳಿಗೆ ಹೋಗಿ ಬರತೀನ ಚಿಮಣಾ. ಏನರೆ ಹೇಳೂದೈತೇನು" ಯಶವಂತರಾಯರು ಅಕ್ಕರೆಯಿಂದ ಕೇಳಿದರು.

"ಯಾರಿಗೇನ ಹೇಳಬೇಕ ಮಾಮಾ !" ಎಂದವಳೇ ಚಿಮಣಾ ಬಿಕ್ಕಿ ಬಿಕ್ಕಿ ಅಳಹತ್ತಿದಳು. ಇತ್ತೀಚೆಗೆ ಯಾರು ಸಹಾನುಭೂತಿಯಿಂದ ಮಾತಾಡಿದರೂ ಅವಳಿಗೆ ದುಃಖ ತಡೆಯುತ್ತಿರಲಿಲ್ಲ.

"ಅಳಬ್ಯಾಡ ತಂಗೀ. ಮೊದಲಿನಂಗ ನೀ ಏನು ಪರದೇಶಿ ಅಲ್ಲ. ನಿನ್ನ ಮನೀನs ಅಂತ ತಿಳಕೋ ಅಂತ ಎಷ್ಟು ಸಾರೆ ಹೇಳಿಲ್ಲ? ದಾದಾಗೇನಾರೆ ಹೇಳೂದೈತೇನು ಅಂತ ಕೇಳಿದೆ" ಯಶವಂತರಾಯರು ಸಾಂತ್ವನಗೊಳಿಸಲು ಯತ್ನಿಸಿದರು.

"ದಾದಾನ ಪಾಲಿಗೆ ನಾ ಎಂದೋ ಸತ್ತು ಹೋಗೀನಿ ಮಾಮಾ. ಅವಗಿನ್ನೂ ನನ್ನ ವ್ಯಾಗಿನ ಸಿಟ್ಟು ಇಳದೇ ಇಲ್ಲ. ಅವಗ ತೋರಸಾಕ ಮಾರಿ ಇಲ್ಲದ ಈ ಪಾಪಿಜನಮಾ ಹ್ಯಾಗ ಕಳೀಬೇಕು ಮಾಮಾ. ನಾನು ಇನ್ನ ಬದಕೂದರಾಗ ಅರ್ತ ಉಳದಿಲ್ಲ. ನಾ ಅವನ ಪಾಲಿಗೆ ಸತ್ತರೂ ಈ ಕೂಸು ಅವನ ಸ್ವಾದರಳಿಯಾ. ತಾಯಿ ಸತ್ತು ಸ್ವಾದರಮಾವ ಉಳೀಬೇಕಂತ ಹೇಳತಾರು. ಈ ಕೂಸಿನ್ನsಟು ಜ್ವಾಪಾನಾ ಮಾಡಂತ ಹೇಳ್ರಿ."

"ನಿನ್ನ ಕೂಸಿನ್ನ ಜ್ವಾಪಾನಾ ಮಾಡಲಿಕ್ಕೆ ದಾದಾನs ಯಾಕ ಬೇಕು ಚಿಮಣಾ? ಕೂಸಿನ ತಂದಿ ಜ್ವಾಕಿ ಮಾಡೇ ಮಾಡತಾನು. ನೀ ಯಾರ ಹೆಸರ ಹೇಳತಿ. ಅವರ ಹೆಸರ ಹಚ್ಚಾಕ ನಂದು ಕಬೂಲಿ ಐತಿ."

"ಕರೇವಂದ್ರೂ ಕೂಸಿನ ತಂದೀ ಹೆಸರು ಹಚ್ಚತೀರ್ಯಾ ಮಾಮಾ?" ಚಿಮಣಾಳ ದನಿಯಲ್ಲಿ ನೂರು ಆಸೆಗಳು ಉತ್ಸಾಹದಿಂದ ಕುಣಿಯುತ್ತಿದ್ದವು.

"ಹೌದು ತಂಗೀ. ನೀ ಬೇಕಾರ ಬಾಪೂಸಾಹೇಬನ ಹೆಸರು ಹೇಳಿದರೂ ಹಚ್ಚಸತಾನಿ ಆತs !"

ಯಶವಂತರಾಯರ ಈ ಅಭಯಪೂರ್ಣ ಆಶ್ವಾಸನಕ್ಕೆ ಚಿಮಣಾಳಲ್ಲಿ ದುಃಖ ತಡೆಯದೆ ಉಕ್ಕಿಬಂತು. ಅವರಿಗೇನೆಂದು ಹೇಳಬೇಕು. ದಾದಾನ ಎದುರು ಸತ್ಯವನ್ನೇ ಹೇಳಿದ್ದಳು. ಅವನೂ ಅದನ್ನು ನಂಬಿದ್ದ. ಈಗ ಬಾಪೂ ಸಾಹೇಬನ ಹೆಸರನ್ನು ಹೇಳಬೇಕೆ? ಕೂಸಿನ ಭವಿತವ್ಯದ ದೃಷ್ಟಿಯಿಂದ ಅದೇ ಹಿತಕರವಾಗಿತ್ತು. ಬಾಪೂಸಾಹೇಬನ ಆಸ್ತಿಗೆ ತನ್ನ ಮಗ ಉತ್ತರಾಧಿಕಾರಿ ಯಾದರೆ ಒಳ್ಳೆಯದೇ ಅಲ್ಲವೇ? ಆದರೆ....ಆದರೆ. ಚಿಮಣಾಳಿಗೆ ಈ ಮಾನಸಿಕ ತೊಡಕನ್ನು ಬಿಡಿಸುವಷ್ಟು ತ್ರಾಣವಿರಲಿಲ್ಲ. ಪ್ರತಿಕ್ಷಣಕ್ಕೂ ಮಾಡಿದ ಪಾಪವೆಲ್ಲ ಇತಿಹಾಸವಾಗಿ ಅವಳ ದುಃಖವನ್ನು ಮೊಗೆಯುತ್ತಿತ್ತು. ಒರತೆಯ ನೀರಿನಂತೆ ಆ ದುಃಖ ಅಕ್ಷಯವಾಗಿತ್ತು.

ಚಿಮಣಾ ಏನೂ ಮಾತಾಡಲಿಲ್ಲ. ಕೇವಲ ಕಣ್ಣೀರು ಸುರಿಸುತ್ತ ಮುಖ ಮುಚ್ಚಿಕೊಂಡು ಹೊರಸಿನ ಮೇಲೆ ಜೋರಾಗಿ ಬಿದ್ದುಬಿಟ್ಟಳು. ಅವಳು ಬಿದ್ದ ಜೋರಿಗೆ, ಇಷ್ಟೊತ್ತಿನ ವರೆಗೆ ಸುಖವಾಗಿ ಮಲಗಿದ್ದ ಕೂಸು, ಎಚ್ಚರಾಗಿ ಚಿಟ್-ಚಿಟ್ ಚೀರಹತ್ತಿತು.

ಯಶವಂತರಾಯರು ಅಲ್ಲಿ ನಿಲ್ಲದೆ ಹೊರಟು ಹೋದರು.

:: ೨೧ ::

ಯಶವಂತರಾಯರು ಪಾದಳ್ಳಿಗೆ ಬರುತ್ತಲೇ ಅವರ ಸ್ವಾಗತಕ್ಕೆಂದು ಬಾಪೂ
ಹೇಬ, ಪಡಪಪ್ಪ, ಲಿಂಗಪ್ಪ ಈ ತ್ರಿಮೂರ್ತಿಗಳು ಕೂಡಿಯೇ ಬಂದರು. ಯಶ
ಂತರಾಯರಿಗೆ ಅವರನ್ನು ನೋಡಿ ಯಾಕೋ ನೊಣ ಕಡಿದಂತೆನಿಸಿತು. ಮುಖ
ನ್ನು ಆದಷ್ಟು ಕಹಿಮಾಡಿ, "ಮೈಯಾಗ ನೆಟ್ಟಗಿಲ್ಲಾಂತ ಹೇಳಿಕಳಿಸಿದಾವ, ಈ
ಳ್ಯಾಗs ಬಂದ ಬಿಟ್ಟೇನು?" ಎಂದು ತಮ್ಮ ಅಳಿಯನನ್ನುದ್ದೇಶಿಸಿ ಕೇಳಿದರು.
ಬಾಪೂಸಾಹೇಬ ಜೋಲು ಮೋರೆ ಹಾಕಿಕೊಂಡು ಸುಮ್ಮನೆ ನಿಂತ. ಆಗ
ಡಪ್ಪನವರೇ ಬಾಪೂಸಾಹೇಬನ ಸಮರ್ಥನೆಗೆ ಮುಂದೆ ಬರಬೇಕಾಯಿತು.
ಓಕಳಿ ಉತ್ಸವಕ್ಕ ನೀವು ಬರಾಕs ಬೇಕು ಅಂತ ಜಾಗೀರದಾರರ ಆಶಾ ಇತ್ತು.
ವರ ಹಾಗ ಹೇಳಿಕಳಿಸಿದರ ನೀವು ಬರತೀರೋ, ಇಲ್ಲೋ ಅಂತ, ಹೀಗ ಹೇಳಿ
ಳಿಸ್ಯಾರು" ಎಂದು ನಗುನಗುತ್ತ ಪ್ರಸಂಗದ ಗಾಂಭಿರ್ಯವನ್ನು ಕಡಿಮೆಮಾಡಲು
ಪ್ರಯತ್ನಿಸಿದರು.
" ಮಾರುತಿದೇವರ ಓಕಳೀನ, ಜಾಗೀರದಾರ ಮನೆತನದವರು ತಲೆತಲಾಂ
ರದಿಂದ ನಡೆಸಿಕೊಂಡು ಬಂದಾರು, ವರ್ಸಾ ನಾ ಬರತೇನು ಹೋಗತೇನು.
ಂತಾದ್ದು ದೇವರ ಕೆಲಸಾ ಅಂತ ಹೇಳಿ ಕಳಿಸಿದ್ದರ ಬರತಿದ್ದಿಲ್ಲs? ಆತು, ನಿಮ
ುನಸ್ಸಿಗೆ ಬಂದಾಂಗ ಮಾಡಿಕೋರಿ" ಎಂದು ಕಡ್ಡಿ ಮುರಿದಂತೆ ಮಾತಾಡಿ
ುಶವಂತರಾಯರು ಕುದುರೆಯಿಂದ ಕೆಳಗಿಳಿದರು.
ಯಶವಂತರಾಯರು ಪಾದಳ್ಳಿಗೆ ಬಂದು ಮೂರುದಿನಗಳಾದರೂ ದಾದಾನ
ತ್ತೆಯೇ ಹತ್ತಲಿಲ್ಲ. ಲಕ್ಷ್ಮಣನಿಗೂ ದಾದಾ ಎಲ್ಲಿರುವನೆಂಬುದು ಗೊತ್ತಿರಲಿಲ್ಲ.
ಹೋದಸಾರಿ ತಾವು ಪಾದಳ್ಳಿಗೆ ಬಂದು ಹೋದಂದಿನಿಂದ ನಡೆದ ಎಲ್ಲ ಘಟನೆಗಳ
ವರಗಳೂ ಅವರಿಗೆ, ಬೇರೆ ಬೇರೆ ಜನರಿಂದ ತಿಳಿದು ಬಂದವು. ಆದರೆ ಮುಖ್ಯ
ಾಗಿ ಅವರ ಮನಸ್ಸನ್ನು ತೊಂದರೆಗೊಳಿಸಿದ ಸುದ್ದಿಯೆಂದರೆ ಗೌಡರ ಮನೆತನದ
ರಸಾ ಪ್ರಕರಣ. ಯಶವಂತರಾಯರು ಬಾಳಾಚಾರ್ಯರ ಮನೆಗೆ ಬಂದಾಗ

ಕೂಡ ಅವರ ಮನಸ್ಸಿನಲ್ಲಿ ಇದೇ ವಿಚಾರ ನಡೆದಿತ್ತು.

ಶಂಕರಪ್ಪಗೌಡರು ಪ್ರಾಣಬಿಡುವಾಗ ಯಶವಂತರಾಯರೂ ಅಲ್ಲಿದ್ದ
ಗೌಡರ ಮನೆತನ ಚಿರಕಾಲ ನಡೆಯಬೇಕೆಂದು ಆಶಿಸಿದವರಲ್ಲಿ ಅವರೂ ಒಬ್ಬ
ಆ ಮನೆತನದ ಮಾನರಕ್ಷಣೆಯ ನೈತಿಕ ಹೊಣೆಯಲ್ಲಿ ಅವರೂ ಪಾಲುಗ
ರಾಗಿದ್ದರು. ಅಂದಮೇಲೆ ತಮ್ಮೂರಿನವನೇ ಆದ ಶಂಕರಪ್ಪನವರ ಮಗ ಲಿಂಗ
ಈಗ ಗೌಡರ ಮಗನೆಂದು ಹೇಳಿ ವಾರಸಾ ಪಡೆಯುವ ಪ್ರಯತ್ನದಲ್ಲಿರುವನೆಂ
ಕೇಳಿ ಅವರಿಗೆ ಕೆಡುಕೆನಿಸಿತು.ಅದರಲ್ಲಿಯೂ ತಮ್ಮ ಅಳಿಯ ಬಾಪೂಸಾಹೇಬ
ಈ ಪ್ರಯತ್ನದಲ್ಲಿ ಭಾಗವಹಿಸಬೇಕೇ? ಬಾಪೂಸಾಹೇಬ ಪಾದಳ್ಳಿಗೆ ಬರುವ
ಮೊದಲು ಅವರಿಗೆ ಬೇಡಾಗಿತ್ತು. ಬಂದ ಮೇಲೂ ತನ್ನ ಸ್ಥಾನವನ್ನರಿತು ನಡೆ
ಕೊಳ್ಳದೇ ಊರಿನ ನೆಮ್ಮದಿಯನ್ನೇ ಹಾಳು ಮಾಡುವ ಪ್ರಯತ್ನದಲ್ಲಿದ್ದಾನೇ
ಪುತಳಾಬಾಯಿ ತೀರಿಕೊಂಡ ಕೂಡಲೆ ಅವನು ತನ್ನ ಊರಿಗೆ ತಿರುಗಿ ಹೊರ
ಹೋಗಬೇಕಾಯಿತ್ತು. ಅದಕ್ಕಾಗಿ ಈಗ ತಾವು ಸ್ವತಃ ಇಂದುಪುರಿಗೆ ಹೋ
ಲಕ್ಷ್ಮೀಬಾಯಿಯನ್ನು ಪಾದಳ್ಳಿಗೆ ತಿರುಗಿ ಕರೆದು ತರುವ ಪ್ರಸಂಗ ಬಿದ್ದರೂ ಅ
ಯಿಲ್ಲ. ಅದಕ್ಕೆ ತಾವು ಸಿದ್ಧರೆಂದು ಬಾಳಾಚಾರ್ಯರೆದುರು ತಮ್ಮ ಮನೋಗ
ವನ್ನೆಲ್ಲ ಸ್ಪಷ್ಟವಾಗಿ ಹೇಳಿದರು. ಅದೂ ಅಲ್ಲದೆ ಚಿಮಣಾನ ಬಗ್ಗೆಯೂ ವಿಚಾ
ಮಾಡುವದಿತ್ತು.

"ಚಿಮಣಾ ಒಪ್ಪಿದ್ದರ ಕೂಸಿನ ತಂದಿ ಬಾಪೂ ಅಂತಣ ಹಚ್ಚಿ ನಾ
ಕೂಸಿನ್ನ ಬೆಳಸಬೇಕಂತ ಮಾಡಿದ್ದೆ. ಬಾಪೂನ ವಾರಸದಾರ ಆಗತಿದ್ದ
ಹುಡುಗ. ಆದರ ಏನ ಮಾಡೂದೈತಿ, ಆ ಹುಚ್ಚ ಹುಡಗಿ ಯಾವುದಕ್ಕೂ ಬ
ಹರೀಗೊಡವಲ್ಲದು. ಕೂಸಿನ ತಂದಿ ಯಾರು ಹೇಳು ಅಂತಂದರ ಹೂಂ ಇ
ಹಾಂ ಇಲ್ಲ. ಏನ ಕೇಳಿದರೂ ಗಳಾಗಳಾ ಅಳತಾಳು." ಎಂದು ತಮ್ಮ ಮುಂದಿ
ಸಮಸ್ಯೆಯನ್ನು ಬಾಳಾಚಾರ್ಯರ ಮುಂದಿಟ್ಟರು.

ಬಾಳಾಚಾರ್ಯರಿಗೆ ಈ ಸಮಸ್ಯೆಯ ಅಂತರಂಗದ ಅರ್ಥವಾಗಿತ್ತು. ಕೂಸಿ
ತಂದೆ ಬಾಪೂಸಾಹೇಬನಲ್ಲ ಎಂಬ ಮಾತು ಅವರಿಗೂ ದಾದಾನಿಂದ ತಿಳಿದು
ಬಂದಿತ್ತು. ಎಲ್ಲವನ್ನೂ ಕೇಳಿಕೊಂಡ ಮೇಲೆ, "ಯಾರ ಪಾಪ ಯಾರ ಕೊರಳಿಗ
ಕಟ್ಟೂದದ? ಅದು ದೇವರ ಮೆಚ್ಚೋ ಕೆಲಸ ಅಲ್ಲ ಪಾಟೀಲರ. ಕೂಸಿನ ತಂದ
ಪಡದಪ್ಪ ಇರೋವಾಗ, ಬಾಪೂಸಾಹೇಬನ ಹೆಸರು ಹಚ್ಚು ಅಂತ ಹ್ಯಾಂಗ ಅ

ಹುಡಿಗಿ ಹೇಳೀತು?" ಎಂದು ಯಶವಂತರಾಯರೆದುರು ಎಲ್ಲ ಸತ್ಯವನ್ನು ತೆರೆದು ತೋರಿಸಿದರು.

ಯಶವಂತರಾಯರಿಗೆ ನಿರಾಶೆಯಿಂದ ಏನೂ ಮಾತಾಡಲಾಗಲಿಲ್ಲ. ಕೆಲ ಹೊತ್ತು ನೆಲ ನೋಡುತ್ತ ಸುಮ್ಮನೆ ಕುಳಿತುಬಿಟ್ಟರು. "ನನ್ನ ವಿಚಾರ ಬ್ಯಾರೇ ಇತ್ತು ಆಚಾರ್ಯ! ಚಿಮಣಾನ ಮದಿವ್ಯಾಗಿ ಮನಿಗೆ ದೀಪ ನಿಲ್ಲೋಹಂಗ ಆಗಲಿ ಅಂತ ನನ್ನ ಮಗಳು ಯಾವಾಗಲೂ ನನ್ನ ಮುಂದ ಹೇಳತಿದ್ದಳು. ನಾನಾ ಸತ್ತ ಮ್ಯಾಗ ಆ ಮಾತಾಡಾಕ ಅವಕಾಶಾನ ಸಿಗಲಿಲ್ಲ. ದಾದಾ ಗೊಂದಲ ಹಾಕಿ ಚಿಮಣಾನ್ನ ಮಠದೊಳಗ ಹೊಗಿಸಿರದಿದ್ದರ, ಬಾಪೂಗ ಹೇಳಿ ಲಗ್ನಾ ಮಾಡಿಸ ಬಹುದಿತ್ತು. ಚಿಮಣಾನ ಪರಿಸ್ಥಿತಿ ನೋಡಿಲ್ಲ ನೀವು ಆಚಾರ್ಯ. ಸಾಯುಲಾಗ ದ್ದಾಕ್ಕ ಜೀವಾ ಇಟಗೊಂಡ್ಹಾಂಗ ಕಾಣತೈತಿ. ಆಕಿನ್ನ ನಾ ಮಗಳ ಅಂತನ ತಿಳ ಕೊಂಡೀನು. ಆಕಿ ಮಗ ಬಾಪೂನ ವಾರಸದಾರ ಆಗಬೇಕು ಅಂತ ನನ್ನ ಆಶಾ. ಕಡೀಕೆ ದತ್ತಕ ತೊಗೊಂಡರೂ ಅಡ್ಡೀ ಇಲ್ಲ, ಆ ಹುಡುಗನ ಕಲ್ಯಾಣ ಆಗೂ ಹಂಗ ಮಾಡಬೇಕು. ಅದಕ್ಕ ಬಾಪೂನ ಹೆಸರ ಹಚ್ಚಬೇಕೂ ಅಂತ ನಾ ಹೇಳಿದ್ದು" ಎಂದು ಯಶವಂತರಾಯರು ಕಳಕಳಿಯಿಂದ ತಮ್ಮ ಅಭಿಪ್ರಾಯ ಗಳನ್ನು ಹೇಳಿದರು.

ಪಾಟೀಲರ ಉದಾರ ಅಂತಃಕರಣಕ್ಕೆ ಬಾಳಾಚಾರ್ಯರ ಮನಸ್ಸೂ ಕರಗಿತು. ಏನೂ ಕಾರಣವಿಲ್ಲದ ಈ ಮಾನವೀಯ ಸಹಾನುಭೂತಿಗೆ ಅರ್ಥವಾದರೂ ಏನು? ಪಾದಳ್ಳಿಯಲ್ಲಿ ನಡೆದ ಒಂದೇ ಒಂದು ಘಟನೆ ಎಷ್ಟು ಜನರನ್ನು ಸುತ್ತುಹಾಕಿ ಕೊಂಡಿದೆಯಲ್ಲ ಎಂದೆನಿಸಿತು.

"ಚಿಮಣಾ ಹ್ಯಾಂಗ ಹೇಳತಾಳ ಹಾಂಗ ನಡಿಯೋದು ನ್ಯಾಯ. ಆಕಿ ಯಾರ ಹೆಸರ ಹಚ್ಚಂತ ಹೇಳತಾಳೋ ಅವರ ಹೆಸರ ಹಚ್ಚಸೋದು ಯೋಗ್ಯ. ಇನ್ನು ಆ ಕೂಸಿನ ಭವಿತವ್ಯದ ಬಗ್ಗೆ ನೀವು ಕಾಳಜೀ ಮಾಡೋದು ಏನೂ ತಪ್ಪಲ್ಲ ಪಾಟೀಲರ. ಆದರೂ ಎಷ್ಟಂತ ಮಾಡೀರಿ. ಖರೇ ಜವಾಬ್ದಾರಿ ಭಗ ವಂತನದು. ಅವನೇ ಆ ಕೂಸಿನ ಖರೇ ಕಲ್ಯಾಣ ಮಾಡತಾನ. ಈ ಭಾವನಾ ನಿಮಗ ಇರಲಿ ತೀರಿತು." ಎಂದು ಬಾಳಾಚಾರ್ಯರು ಈ ಚರ್ಚೆಗೊಂದು ನಿರ್ಣಯ ಹೇಳುವವರಂತೆ ಮಾತು ಮುಗಿಸಿದರು.

ಈ ಸಲದ ಓಕಳಿ ಉತ್ಸವಕ್ಕೆ ಊರಲ್ಲಿ ವಾತಾವರಣ ಸರಿಯಾಗಿರಲಿಲ್ಲ.

ಬರಗಾಲದಿಂದ ತಿನ್ನಲು ಕೂಳಿಲ್ಲದಿರುವಾಗ, ಮನೆಗೆ ಉತ್ಸವಕ್ಕೆಂದು ಆಪ್ತೇಷ್ಟರು ಬಂದರೆ ಏನು ಉಣಬಡಿಸಬೇಕು? ಕಾಲರಾ ಪಿಡುಗಿನಲ್ಲಿ ಎಷ್ಟೋ ಜನರು ತಮ್ಮ ಮಕ್ಕಳು ಮರಿಗಳನ್ನು ಕಳೆದುಕೊಂಡದ್ದರಿಂದ, ಉತ್ಸವದ ಉತ್ಸಾಹ ಅವರಲ್ಲಿರಲಿಲ್ಲ. ಊರಿಗೇ ಮೇಟಿಯ ಕಂಬವಾಗಿದ್ದ ಗೌಡರು ತೀರಿಕೊಂಡು, ಸಾರ್ವಜನಿಕ ಉತ್ಸವಗಳ ಆಧಾರವೇ ತಪ್ಪಿದಂತಾಗಿತ್ತು. ಜಾಗೀರದಾರರ ವಾಡೆಯೂ ಬರಿದಾಗಿತ್ತು. ಬಾಪೂಸಾಹೇಬ ಏನು ಮಾಡಿದರೂ ಜಾಗೀರದಾರನಾಗಲಾರ. ಆದ್ದರಿಂದ ಊರಿನ ಕೂಲಿಕಾರರು, ರೈತರು ಕೂಡಿ ಹೋಗಿ ಪಡಪ್ಪನವರಿಗೆ ಈ ಸಲ ಓಕಳಿ ಮಾಡುವದು ಬೇಡವೆಂದು ತಿಳಿಸಿ ಬಂದಿದ್ದರು. ಬಾಳಾಚಾರ್ಯರಿಗೂ ಅದೇ ಮಾತು ತಿಳಿಸಿದ್ದರು. "ಆದರ ದೇವರ ಕೆಲಸ; ಮಾಡಬ್ಯಾಡ್ರಿ ಅಂತ ಹೇಳಲಿಕ್ಕೆ ನನಗ ನಾಲಿಗಿ ಏಳೂದುಲ್ಲ. ದೇವರ ಮನಸ್ಸಿನ್ಯಾಗಿದ್ದರ ತಾನss ಮಾಡಿಸಿಕೋತಾನ." ಎಂದು ಅವರು ಅಡ್ಡಗೋಡೆಯ ಮೇಲೆ ದೀಪ ಇಟ್ಟಂತೆ ನುಡಿದಿದ್ದರು.

ಬಾಳಾಚಾರ್ಯರ ಭವಿಷ್ಯ ಒಂದು ರೀತಿಯಿಂದ ನಿಜವಾಗಬೇಕಿತ್ತೇನೋ! ದೇವರ ಉತ್ಸವ ಎಂದೂ ನಿಂತಿಲ್ಲ, ನಿಲ್ಲುವಂತಿಲ್ಲ ಎಂಬ ಅವರ ಒಳ ಆಶಯಕ್ಕೆ ದೇವರೇ ಪ್ರೇರಕನಾಗಿದ್ದನೋ ಏನೋ ಯಾರು ಬಲ್ಲರು? ಪಾದಳ್ಳಿಯ ಜನರೆಲ್ಲ ಕೂಡಿಕೊಂಡು ಸರಕಾರಕ್ಕೆ, ಬರಗಾಲದ ಪರಿಹಾರಕ್ಕೆಂದು ಅರ್ಜಿ ಮಾಡಿಕೊಂಡಿದ್ದರು. ಈ ಹೊತ್ತಿಗೆ ಸರಕಾರದವರು ಪಾದಳ್ಳಿಯ ಜನರಿಗೆಂದು ಐದುಸಾವಿರ ರೂಪಾಯಿ ತಗಾಯಿ ಸಾಲವನ್ನು ಮಂಜೂರ ಮಾಡಿದರು. ಅದರ ಹುಕುಮು ಇದೇ ಸುಮಾರಿಗೆ ಬರಬೇಕೇ? ಇದೆಲ್ಲ ದೇವರ ದಯೆ, ಹಾಗೂ ಬಾಳಾಚಾರ್ಯರ ಭವಿಷ್ಯದ ಪರಿಣಾಮವೆಂದು ಜನರು ನಂಬಿದರು. ಹಣ ಕೈಗೆ ಬಂದದ್ದರಿಂದ ವರ್ಷದಂತೆ ಉತ್ಸವದ ಅಂಗವಾಗಿ ಆಟ, ಕುಸ್ತಿಗಳು ನಡೆಯಬೇಕೆಂದು ಜನರು ಪಟ್ಟ ಹಾಕಿದರು. ಓಕಳಿಯ ಉತ್ಸವ ಮುಗಿಯದೆ, ಊರಿಗೆ ಹೋಗಕೂಡದೆಂದು ಜನರು ಯಶವಂತರಾಯರಿಗೆ ಆಗ್ರಹಪಡಿಸಿದರು.

ಅಂತೂ ಮಾರುತಿದೇವರ ಓಕಳಿ ಯಥಾಪ್ರಕಾರ ವಿಜೃಂಭಣೆಯಿಂದ ನಡೆಯಿತು. ದೇವರು ತಾನಾಗಿ ಮಾಡಿಸಿಕೊಂಡ ಉತ್ಸವ, ಅಂದ ಮೇಲೆ ಕೇಳಬೇಕೇ? ಬಾಪೂಸಾಹೇಬ ವಾಡಿಕೆಯಂತೆ ಬ್ರಹ್ಮಭೋಜನದ ವ್ಯವಸ್ಥೆ ಮಾಡಿಸಿದ್ದ. ಮಾರುತಿ ಗುಡಿಯ ಮುಂದಿರುವ ಎರಡಾಳುದ್ದ ಹೊಂಡದಲ್ಲಿ ಹುಲಿಬ್ಯಾಟೆ ಹಳ

ಒರು ನೀರು ತಂದು ತುಂಬಿದರು. ಇನ್ನು ಮೇಲೆ ಜಲಯುದ್ಧ ಪ್ರಾರಂಭವಾಗ
ಬೇಕು. ಕುಸ್ತಿಯ ಗಡಿಗಳು ಚಡ್ಡಿಹಾಕಿ, ನೀರಲ್ಲಿ ಬೀಳಲು ಸಿದ್ಧರಾಗಿದ್ದರು.
ಅಷ್ಟರಲ್ಲಿ ಹೊಲೆಗೇರಿಯಿಂದ, ಹಲಗೆಯ ವೈಭವದೊಂದಿಗೆ ಹೊಲೆ ಸೂಳೆಯ
ರನ್ನು ಕರೆಸಲಾಯಿತು. ಕುಸ್ತಿಯ ಗಡಿಗಳು ಹೊಂಡದ ನೀರನ್ನು ತಮ್ಮ ಧೋತ
ರದ ಚಾಳಿಯಲ್ಲಿ ತುಂಬಿಕೊಂಡು, ಸೂಳೆಯರ ಮೇಲೆ ತೂರುವದು ಪ್ರಾರಂಭ
ವಾಯಿತು. ಆ ನೀರಿನ ಮುಸಿಕೆಗಳ ಹೊಡೆತದಿಂದ ತಪ್ಪಿಸಿಕೊಳ್ಳಲು ಸೂಳೆ
ಯರು ಮುಳ್ಳಿನ ಕಂಟಿಗಳನ್ನು ಉಪಯೋಗಿಸುತ್ತಿದ್ದರು. ಮುಳ್ಳಿನ ಜಬರಿನಿಂದ
ಅವರು ಬೀಸಿ ಹೊಡೆದಾಗ ಕುಸ್ತಿಯ ವೈಗೆ ಅದು ತೀಡಿ, ಚಿಮ್ಮಿದ ರಕ್ತಕ್ಕೆ
ಹೊಂಡದ ನೀರು ಅಲ್ಲಲ್ಲೀ ಕೆಂಪಾಗುತ್ತಿತ್ತು. ಆದರೆ ಅದರ ಪರಿವೆ ಅವರಿಗಿರಲಿಲ್ಲ.
ಅದರಿಂದ ಇನ್ನೂ ಆವೇಶಗೊಂಡವರಾಗಿ, ಮತ್ತೆ ಹೊಂಡದ ನೀರು ತುಂಬಿ
ಕೊಂಡು ಅದಕ್ಕೂ ಬಲವತ್ತರವಾದ ನೀರ-ಮುಸಿಕೆಗಳನ್ನು ಎಸೆಯುತ್ತಿದ್ದರು.
ಅಗಸೆಯ ಮುಂಬೆ ನಡೆದ ಈ ಉತ್ಸವವನ್ನು ನೋಡಲು, ಹೊಂಡದ ಸುತ್ತಲೂ,
ಪಾದಳ್ಳಿಯ ಜನರೆಲ್ಲ ಕೂಡಿದ್ದರು. ಎಲ್ಲರಿಗೂ ವೀರಾವೇಶ ತುಂಬಿದಂತಾಗಿ,
ಕೇಕೆ ಗದ್ದಲಗಳಿಂದ ಹೊಂಡ ದುಮುದುಮಿಸುತ್ತ ಅದಕ್ಕೆ ರಣರಂಗದ ಸ್ವರೂಪ
ಪ್ರಾಪ್ತವಾಗಿತ್ತು. ಸೀರೆಗಳೆಲ್ಲ ತೊಯ್ದು ತಪ್ಪಡಿಯಾಗಿದ್ದರೂ, ಸೂಳೆಯರು
ನೀರಿನ ಹೊಡೆತಕ್ಕೆ ಮುಖತಿರುಗಿಸುತ್ತಿರಲಿಲ್ಲ. ಕುಸ್ತಿಯ ಗಡಿಗಳಂತೂ ಹೊಡೆತ
ಕ್ಕೊಮ್ಮೆ ಕೇಕೆ ಹೊಡೆದು ಮತ್ತೆ ನೀರನ್ನೆಸೆಯುತ್ತಿದ್ದರು.

ಅಗಸೆಯ ಮುಂಬಿನ ಜೈಲು, ಸುತ್ತಲಿನ ಮನೆಗಳ ಕಟ್ಟೆಗಳು, ಮಾಳಿಗೆ
ಗಳು ಎಲ್ಲಿ ನೋಡಿದರೂ ಜನರೇ ಜನರು. ಎಲ್ಲರ ಕಣ್ಣುಗಳೂ ಹೊಂಡದಲ್ಲಿ
ಕೇಂದ್ರೀಕೃತವಾಗಿದ್ದವು. ಹೊಸಸೀರೆಗಳನ್ನುಟ್ಟ ಹೆಂಗಸರು, ಹೊಸದಲ್ಲದಿದ್ದರೂ
ಹೊಸದರಂತೆ ತೋರುವ ರುಮಾಲು ಸುತ್ತಿದ ಗಂಡಸರು, ಸಾಲಾಗಿ ಓಕಳಿಯನ್ನು
ನೋಡುತ್ತ ನಿಂತಿದ್ದರು. ನೀರಿನ ಹೊಡೆತಕ್ಕೆ, ರಕ್ತದ ಊಟಿಗೆ ಹೆಂಗಸರು ನಿಂತ
ಲ್ಲಿಯೇ ಕಸಿವಿಸಿಪಡುತ್ತಿದ್ದರೂ ನೋಡುವದನ್ನು ಮಾತ್ರ ಬಿಡುತ್ತಿರಲಿಲ್ಲ. ಜನ
ರೆಲ್ಲ ಈ ನೋಟದಲ್ಲಿಯೇ ವ್ಯಮರೆತು ನಿಂತಾಗ, ಹವಾಲ್ದಾರರು ಹಾಗೂ ಅವರ
ಪೋಲೀಸರು ದಾದಾನನ್ನು ಹುಡುಕಲು ಅತ್ತಿತ್ತ ಓಡಾಡುತ್ತಿದ್ದರು. ಆದರೆ
ದಾದಾ ಸಿಗಲಿಲ್ಲ. ಓಕಳಿಯ ಕಾಲಕ್ಕೆ ಪಾದಳ್ಳಿಯ ಎಲ್ಲ ಮನೆಗಳಿಗೂ ಕೀಲಿ
ಬಿದ್ದಿದ್ದು, ಉತ್ಸವವನ್ನು ನೋಡಲು ದಾದಾ ಬಂದೇ ಬರುವನೆಂದು ಹೇಳಿದ್ದ

ಪಡದಪ್ಪನವರ ತರ್ಕ ಸುಳ್ಳಾಯಿತು. ದಾದಾನನ್ನು ಹುಡುಕಲು, ಊರೆಲ್ಲ ಬೇಡವೆಂದರೂ ಹಟದಿಂದ ನೀರೋಕಳಿಯನ್ನು ಹೂಡಿದ್ದ ಪಡದಪ್ಪನವರಿಗೆ ಇದರಿಂದ ಅಸಮಾಧಾನವಾಯಿತು.

ಮರುದಿನ ಹಾಲೋಕಳಿ. ಚಾವಡಿಯ ಮುಂದಿನ ಬೈಲಿನಲ್ಲಿ ಸುಮಾರು ನಾಲ್ವತ್ತು-ನಾಲ್ವತ್ತೈದು ಅಡಿ ಎತ್ತರದ ಕಂಬವೊಂದನ್ನು ನಡಿಸಲಾಗಿತ್ತು. ಆ ಕಂಬದ ತುಟ್ಟತುದಿಗೆ ಬಣ್ಣಬಣ್ಣದ ಕಾಗದಗಳಿಂದ ಅಲಂಕೃತವಾದ ತೊಟ್ಟಿಲಿನಲ್ಲಿ ಕುಳಿತ ಬಡಿಗೇರ ರಾಮಣ್ಣ, ಕಂಬದ ಗುಂಟ, ಹುಣಿಸೆ ಕಾಳಿನಿಂದ ತಯಾರಿಸಿದ ಸರಿಯನ್ನು ಬಿಡುತ್ತಿದ್ದ. ತಳವಾರ ಮಲ್ಲ ನಿಚ್ಚಣಿಕೆಯನ್ನು ಕಂಬಕ್ಕಾನಿಸಿ, ಆ ಸರಿಯನ್ನು ಪೂರ್ತಿಯಾಗಿ ಕಂಬಕ್ಕೆ ಬಳಿದು, ಕೈಹಿಡಿದರೆ ಜಾರುವಂತೆ ಮಾಡಿದ್ದನು. ಆ ಮೇಲೆ ಹುಲಿ ಬ್ಯಾಟಿ ಹಳಬರಲ್ಲಿ ಗಟ್ಟಿಗರಾದ ತರುಣರು ಚಡ್ಡಿ ಹಾಕಿಕೊಂಡು, ಕಂಬದ ಸುತ್ತಲೂ ಸುರುವಿದ ರಾಡಿಯಲ್ಲಿ ಹಾಯ್ದು, ಕಂಬವನ್ನೇರಲು ಸಾಹಸಪಡುತ್ತಿದ್ದರು. ಸುತ್ತಲೂ ನಿಂತವರು ಜೀಕಳಿಗಳಿಂದ ನೀರನ್ನು ತೂರಿ ಕಂಬ ಇನ್ನೂ ಹೆಚ್ಚು ಜಾರುವಂತೆ ಮಾಡುತ್ತಿದ್ದರು. ಕಂಬದ ಬುಡಕ್ಕೆ ನಿಂತ ತರುಣನ ಹೆಗಲ ಮೇಲೆ, ಒಬ್ಬರ ಮೇಲೊಬ್ಬರಂತೆ ಎಂಟು ಹತ್ತು ಜನರು ನಿಂತಿದ್ದರು. ಇನ್ನಿಬ್ಬರು ಹತ್ತಿದರೆ ಮೇಲಿನ ತೊಟ್ಟಲವನ್ನು ಮುಟ್ಟಬಹುದಾಗಿತ್ತು. ಕಂಬ ಪ್ರತಿ ಕ್ಷಣಕ್ಕೂ ಜಾರುತ್ತಿತ್ತು. ಸುತ್ತಲೂ ನಿಂತವರು ಜೀಕಳಿಗಳಿಂದ ನೀರು ತೂರುವದು ನಡೆದೇ ಇತ್ತು. ಅದೂ ಅಲ್ಲದೆ ತೊಟ್ಟಲದಿಂದ ಹಾಲು ಮೊಸರಿನ ಧಾರೆ ನಿರಂತರವಾಗಿ ಸುರಿಯುತ್ತಲೇ ಇತ್ತು. ಕೆಳಗೆ ನಿಂತವನು ತನ್ನ ಮೇಲಿನ ಆಳುಗಳ ಭಾರದಿಂದ ತತ್ತರಿಸಿದನು. ಮೇಲೆ ನಿಂತವರ ತೂಕ ತಪ್ಪಿತು. ಕೆಳಗಿನವರ ಮೇಲೆ ಭಾರ ಬೀಳಬಾರದೆಂದು, ಮೇಲಿನವರು ಕಂಬವನ್ನು ಹಿಡಿಯಲು, ಅದು ಜಾರಿದಾಗ ಮತ್ತೆ ತೂಕ ತಪ್ಪಿ ಎಲ್ಲರೂ ಕಡಿದುಕೊಂಡು ಕೆಳಗಿನ ರಾಡಿಯಲ್ಲಿ ಬಿದ್ದರು. ದೂರದಿಂದ ನೋಡುವವರಿಗೆ ಕಂಬವೇ ಬೀಳುತ್ತದೇನೋ ಎಂದೆನಿಸುತ್ತಿತ್ತು. ರಾಡಿಯಲ್ಲಿ ಬಿದ್ದವರು ಮೇಲೆದ್ದು ಮತ್ತೆ ಏರಿದರು; ಮತ್ತೆಬಿದ್ದರು. ಹೀಗೆ ನಾಲ್ಕೆಂಟು ಸಲ ನಡೆದ ಮೇಲೆ, ಕೊನೆಗೊಮ್ಮೆ ತೊಟ್ಟಲು ಕೈಗೆ ನಿಲುಕಿತು. ಕಹಳೆ ಚೀರಿಕೊಂಡಿತು. ಜನರೆಲ್ಲ ಉತ್ಸಾಹದಿಂದ ಕೇಕೆ ಹಾಕಿದರು.

ನೀರೋಕಳಿಯಂತೆ ಹಾಲೋಕಳಿಗೂ ಊರ ಜನವೆಲ್ಲ ಕಿತ್ತಿ ಬಂದಿತ್ತು.

ಆದರೂ ಹವಾಲ್ದಾರರ ಕಣ್ಣಿಗೆ ದಾದಾ ಎಲ್ಲಿಯೂ ಬೀಳಲಿಲ್ಲ. ಓಕಳಿಗೆ ಬರದಿದ್ದರೂ ಕುಸ್ತಿಯನ್ನು ನೋಡಲು ಕುಸ್ತಿಯ ಕಣಕ್ಕೆ ಬಂದೇ ಬರುವನೆಂದು, ಪಡದಪ್ಪನವರು ಪ್ರತಿತರ್ಕ ಹೂಡಿದರು. ಅವರ ಈ ತರ್ಕ ಸುಳ್ಳಾಗಲಿಲ್ಲ.

ಗೌಡರ ಮನೆಯಲ್ಲಿ ದಾದಾ ಬಂದಿಯಾಗಿದ್ದ. ಕುಸ್ತಿಯಲ್ಲಿ ಪ್ರತಿಸ್ಪರ್ದಿಗಳನ್ನು ಸೋಲಿಸಲು ತನ್ನ ಗೆಳೆಯರಿಗೆ ಹುರುಪುಕೊಡಲು ಹೋಗಲೇಬೇಕೆಂದು ದಾದಾ ನಿರ್ಧರಿಸಿದ. ಪಾರ್ವತೆವ್ವನಿಗೆ ಈ ನಿರ್ಧಾರವನ್ನು ಹೇಳಿದಾಗ, "ಮರ್‍ಯೇ ಬ್ಯಾಡ ಮಾರಾಯಾ. ನಿನ್ನ ಹಿಡಿಯಾಕ ಪೋಲೀಸರು ಹೊಂಚ ಹಾಕಿ ಕುಳಿತಾರು" ಎಂದಳು.

"ಎವ್ವಾ, ಈಟ ದಿನಾ ಎಲ್ಲಾ ಕತ್ತಲ ಕ್ವಾಣ್ಯಾಗ ಇದ್ದ ಇದ್ದ ಸಾಕಾಗೇತಿ. ಇದಕಿಂತಾ ಜೇಲ ಏನು ಕೇಡು? ನಿಮ್ಮ ಮಾತು ಕೇಳಬೇಕಂತ ಓಕಳಿ ನೋಡಾಕ ಹೋಗಲಿಲ್ಲ. ಕುಸ್ತಿ ನೋಡಾಕ ನಾ ಹೋಗಾವನಃ" ಎಂದು ಹಟದಿಂದಲೇ ಹೇಳಿದ.

ಪಾರ್ವತೆವ್ವನು ದಾದಾನ ಮನಸ್ಸು ತಿರುಗಿಸಲು ಎಷ್ಟು ಪ್ರಯತ್ನಿಸಿದರೂ ಸಫಲವಾಗಲಿಲ್ಲ. ನಿರ್ವಾಹವಿಲ್ಲದೆ ಕಳಿಸಬೇಕಾಯಿತು.

ದಾದಾ ದೊಡ್ಡ ಗೊಂಗಡಿಯೊಂದನ್ನು ಹೊತ್ತುಕೊಂಡು, ಗುರುತು ಸಿಗದಂತೆ ಜನರ ಗುಂಪಿನಲ್ಲಿ ಬಂದು ಕುಳಿತ. ತಲೆಗೆ ಸುತ್ತಿದ ಚಿಂದಿರುಮಾಲು, ಬಗಲಬಂಡಿಯ ಸಡಿಲಾದ ಅಂಗಿ, ಕೃತ್ರಿಮವಾದ ಕಲ್ಲೀ ಮೀಸೆಗಳಿಂದ ಅಲಂಕೃತನಾದ ದಾದಾನ ಗುರುತು ಸಮೀಪದಲ್ಲಿ ಕುಳಿತ ಅವನ ಗೆಳೆಯರಿಗೇ ಹತ್ತಲಿಲ್ಲ.

ಕುಸ್ತಿ ಪ್ರಾರಂಭವಾಯಿತು. ಮೊದಲನೇ ತಳಕಿನಲ್ಲಿ, ಪಾದಳ್ಳಿಯ ಮೂರು ಗಡಿಗಳ ಜೊತೆಗೆ, ಡೋಣಿಸಾಲಿನವನೊಬ್ಬ, ಕೊಲ್ಲಾಪುರದವನೊಬ್ಬ ನೆರೆಹಳ್ಳಿಯವನೊಬ್ಬ ಹೀಗೆ ಮೂರು ಗಡಿಗಳು ಕಣಕ್ಕಿಳಿದಿದ್ದರು. ಕುಸ್ತಿ ಹೀಗೇ ನಡೆಯಿತು. ಪಾದಳ್ಳಿಯ ಗಡಿಗಳಲ್ಲಿ ಇಬ್ಬರು ಸೋತರು. ಹೊತ್ತು ಮುಳುಗುತ್ತಿರುವಾಗ ಎಂಟು ಹತ್ತು ತಳಕುಗಳ ಕುಸ್ತಿ ಮುಗಿಯಿತು. ಕೊನೆಗೆ ಒಬ್ಬ ಕುಸ್ತಿಗಡಿ ಎದ್ದು ಬಂದ. ಪಾದಳ್ಳಿಯ ಕುಸ್ತಿಕಣದಲ್ಲಿ ಅವನು ಮೂರು ಗಡಿಗಳನ್ನು ಒಗೆದವನಾಗಿದ್ದನು. ಅವನ ಜೊತೆಗೇ ಇನ್ನೊಬ್ಬ ಬಂದು ನಿಂತು, ಕುಸ್ತಿಯ ಗಡಿಯನ್ನು ಜನರಿಗೆಲ್ಲ ತೋರಿಸಿ, "ಈ ಗಡೀ ಜೋಡಿ ಕುಸ್ತಿ ಆಡೊ ಧೈರ್‍ಯೇ ಇದ್ದವರು ಮುಂದ ಬರಬೇಕನ್ರೋ! ಇಲ್ಲ ಅಂದರ ಇವಾ ಪಾದಳ್ಳಿಗೆ ಮೀರಿದವ ಅಂತ ಕೊಂಬ ಊದತೇವ್ರಿ" ಎಂದು ಆಹ್ವಾನವನ್ನಿತ್ತ.

ಕಣದಲ್ಲಿ ಗುಜುಗುಜು ಪ್ರಾರಂಭವಾಯಿತು. ಪಾದಳ್ಳಿಯ ಗಡಿಗಳು ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ಅವರೆಲ್ಲರ ಮನಸ್ಸಿನಲ್ಲಿ ಒಂದೇ ವಿಚಾರ, ದಾದಾ ಇದ್ದರೆ ಇಂಥ ಪ್ರಸಂಗ ಬರುತ್ತಿರಲಿಲ್ಲ. ಈಗ ಆಹ್ವಾನವನ್ನಿತ್ತ ಗಡಿಯನ್ನು ಸೋಲಿಸುವದು ತಮ್ಮ ಸಾಮರ್ಥ್ಯವನ್ನು ಮೀರಿದ್ದು. ಸುಮ್ಮನೆ ಸ್ಪರ್ಧೆಗೆ ಬಿದ್ದು, ಸೋತು ಬರುವದರಲ್ಲಿ ಏನೂ ಅರ್ಥವಿಲ್ಲ.

ಸೂರ್ಯ ತಾಯಿಯ ಹೊಟ್ಟೆಯನ್ನು ಸೇರಲು ಅನುಮಾನಿಸುತ್ತಿದ್ದ. ಪ್ರೇಕ್ಷಕರು, ಗಡಿಗಳು ಕ್ಷುಬ್ಧರಾಗಿದ್ದರು ದೀರ್ಘವಾಗಿ ಕವಿದ ನೆರಳುಗಳಲ್ಲಿ ಪ್ರೇಕ್ಷಕರೆಲ್ಲ ಒಬ್ಬರ ಮುಖವನ್ನೊಬ್ಬರು ನೊಡುತ್ತ ವಿಚಾರ ಮಗ್ನರಾಗಿದ್ದರು. ಕಣದಲ್ಲಿ ನಿಂತ ಗಡಿ ಸ್ವಲ್ಪಹೊತ್ತು ದಾರಿ ಕಾಯ್ದ. ಯಾರೂ ಬರಲಿಲ್ಲ. 'ಪಾದಳ್ಳಿಗೆ ಮೀರಿದ ಗಡಿಗೆ' ಎಂದು ಹೇಳಿ ಕೊಂಬು ಊದಲು ಸೂಚನೆ ಕೊಟ್ಟರು. ಕಹಳೆಯವ ಕಹಳೆಯನ್ನೆತ್ತಿ ಇನ್ನೇನು ಊದಬೇಕೆಂದು ಮುಗಿಲಿಗೆ ಮುಖ ಮಾಡಿದ. ಅಷ್ಟರಲ್ಲಿ ಅವನ ಹಿಂದಿನಿಂದ ಯಾರೋ ಬಂದು, ಅವನ ಕೈಬಡಿದು ಕೊಂಬನು ಕಸಿದೊಗೆದರು. ಮುಂದೆ ಬಂದ ಆ ವ್ಯಕ್ತಿ ಸಡ್ಡು ಹೊಡೆದು ನಿಂತಿತು. ಆಹ್ವಾನ್ನವಿತ್ತ ಗಡಿಯೂ ಸಡ್ಡು ಹೊಡೆದು ಮುಂದೆ ಬಂದ.

ಜನರ ಲಕ್ಷ್ಯವೆಲ್ಲ ಈ ಆಗಂತುಕನ ಕಡೆಗೆ ಹೊರಳಿತು. ಅವನು ತಲೆಯ ಮೇಲಿನ ಹೆಡಿಗೆರುಮಾಲನ್ನೂ, ಬಗಲಬಂಡಿಯನ್ನೂ, ಮೀಸೆಯನ್ನು ತೆಗೆದೊಗೆದು ಪ್ರತ್ಯಕ್ಷನಾದ. ಕ್ಷಣಾರ್ಧದಲ್ಲಿಯೇ ಜನರೆಲ್ಲ "ದಾದಾ" "ದಾದಾ" ಎಂದು ಕೇಕೆ ಹೊಡೆದರು. ಹಿಂದಿನವರೆಲ್ಲ ಕುಸ್ತಿಯನ್ನು ನೋಡಲುಮುಂದೆ, ಬರಲು ಹಾತೊರೆದರು. ಇದೇ ನುಗ್ಗಾಟದಲ್ಲಿ ಮುಂದೆ ಬರುವವರನ್ನೆಲ್ಲ ಕೈಯಲ್ಲಿಯ ಬಡಿಗೆಯಿಂದ ಹೊಡೆಯುತ್ತ, ಹವಾಲ್ದಾರರು ಕಣದ ಸಮೀಪಕ್ಕೇ ಬಂದರು. ಅವರು ನೋಡುತ್ತಿರುವಷ್ಟರಲ್ಲಿಯೇ, ದಾದಾ ಆ ಗಡಿಯನ್ನು ಕ್ಷಣಾರ್ಧದಲ್ಲಿ ಎತ್ತಿ ನೆಲಕ್ಕೆ ಅಪ್ಪಳಿಸಿದನು. ಅವನು ಅಂಗಾತ ಬಿದ್ದವನು, ಎದ್ದು ಸಾವರಿಸಿಕೊಳ್ಳುವಷ್ಟರಲ್ಲಿಯೇ ದಾದಾ ಕಣದಿಂದ ಜಿಗಿದು, ಜನರಲ್ಲಿ ಮಾಯವಾಗಿದ್ದ. ಹವಾಲ್ದಾರರು, "ದಾದಾನ್ನ ಹಿಡೀರ್‍ಯೋ" ಎಂದು ಕೂಗಿಕೊಂಡರು. ದಾದಾನ ಗೆಳೆಯರೂ ಅವನನ್ನು ಹಿಡಿದು ಮಾತಾಡಿಸಲು ಆತುರರಾಗಿದ್ದರು. ಆದರೆ ಮುಚ್ಚಂಜೆಯ ಮಬ್ಬುಗತ್ತಲೆ, ಜನರ ಗದ್ದಲ, ಕೂಗಾಟ-ಚೀರಾಟಗಳಲ್ಲಿಯೇ; ಇಲ್ಲಿ ಕಂಡ ದಾದಾ ಅಲ್ಲಿ ಕಾಣದೆ ಮರೆಯಾಗಿದ್ದ. ಎಲ್ಲರೂ "ದಾದಾ ಎಲ್ಲಿ ?"

"ದಾದಾ ಎಲ್ಲಿ?" ಎಂದು ಕೇಳುವದು ಮಾತ್ರ ಕೇಳುತ್ತಿತ್ತು. ಅಲ್ಲಿ, ಇಲ್ಲಿ ಕಂಡ ಮೀನ, ಗದ್ದಲಕ್ಕೆ ನಡುನೀರನ್ನು ಹೊಗುವಂತೆ, ಯಾರ ಕೈಗೂ ಸಿಗದಂತೆ ದಾದಾ ಮಾಯವಾಗಿದ್ದ.

ದಾದಾ ಹೊತ್ತ ಗೊಂಗಡಿ, ಹಾಕಿಕೊಂಡ ಬಗಲಬಂಡಿ ಅಳಿದು ಹೋದ ಶಂಕರಪ್ಪಗೌಡರರೆಂದು ಪತ್ತೆ ಹತ್ತಿತು. ದಾದಾ ಗೌಡರ ಮನೆಯಿಂದಲೇ ಕುಸ್ತಿಯ ಕಣಕ್ಕೆ ಬಂದಿದ್ದನೆಂದು ತಿಳಿದು, ಹವಾಲ್ದಾರರು ಈಗ ಗೌಡರ ಮನೆಗೇ ಝಡತಿಗೆ ನಡೆದರು.

ಗೌಡರ ಮನೆಯ ಸಂದಿಗೊಂದಿ, ಕೋಣೆ, ಕಣಜ, ಮಾಳಿಗೆ, ದನದ ಮನೆ, ಎಲ್ಲಕಡೆಗೂ ಹಿಲಾಲು ಹಚ್ಚಿಕೊಂಡು ಹುಡುಕಿದರೂ ದಾದಾ ಕಾಣಸಿಗ ಲಿಲ್ಲ. ಹವಾಲ್ದಾರರಿಗೆ ದಿಗಿಲು ಬಿತ್ತು. ಹುಚ್ಚು ಹಿಡಿದಂತಾಯಿತು. ಥಾಭೆ ಯಲ್ಲಿದ್ದ ದನಕಾಯುವ ಹುಡುಗನೊಬ್ಬನ ಕೆನ್ನೆಗೊಂದು ಏಟು ಕೊಟ್ಟು, "ದಾದಾ ಎಲ್ಲ್ಯದಾನಲೇ?" ಎಂದು ಗರ್ಜಿಸಿದರು. ಕಿವಿ ಮರ್‍ರೆನ್ನುವ ಆ ಹೊಡೆತಕ್ಕೆ ತತ್ತರಿ ಸಿದ ಹುಡುಗ ಹೆದರಿ, "ಇಲ್ಲಿ ಇಲ್ಲರೀ ಯಪ್ಪಾ" ಎಂದು ಹೇಳುಹೇಳುತ್ತಲೇ, "ಸತ್ತೆನೋ ಎಪ್ಪಾ" ಎಂದು ಕೂಗಿ ಅಳಹತ್ತಿದ. ಅವನನ್ನು ಜಬರಿಸಿ ಸುಮ್ಮನಿರಿಸಿ ದರು ಹವಾಲ್ದಾರರು. ಹುಡುಗ ಬಿಕ್ಕಿ ಬಿಕ್ಕಿ ಅಳಹತ್ತಿದ. ಹವಾಲ್ದಾರರು ಅವ ನಿಗೆ ಇನ್ನೊಂದು ಏಟುಕೊಟ್ಟು "ಹಾಗಾರ ಎಲ್ಲಿ ಹೋದನಲೇ ಅಂವಾ?" ಎಂದು ಮತ್ತೆ ಕೇಳಿದರು. "ಬಡೀಬ್ಯಾಡ್ರಿ ಎಪ್ಪಾ, ಕರೇ ಹೇಳತೇನು. ಕುಸ್ತಿ ನೋಡಿ ಕೊಂಡು ಬಂದು ನಾ ದನಾ ನೀರಿಗೆ ಬಿಟ್ಟಾಗ ದಾದಾ ಬಾಗಲಿಗೆ ಬಂದನರೀ. ತಲಬಾಗಲಾ ಕೀಲಿ ಹಾಕಿ ಮನೀ ಮಂದಿ ಕುಸ್ತಿ ನೋಡಾಕ ಹೋದವರು ಇನ್ನೂ ಬಂದಿದ್ದಿಲ್ಲರೀ. ಹಿತ್ತಲ ಬಾಕಲದ ಹೆಂತ್ಯಾಕ ಅಂವಾ ಬರೂದಕ್ಕ, ನಾ ದನಾ ಬಿಟ್ಟು ಬಾಕಲಕ್ಕ ಕೀಲಿ ಹಾಕೂದಕ್ಕ ಗಂಟಬಿತ್ತರೀ. ಬಾಕಲಾ ತಗೀ ಅಂದಾ. ಬ್ಯಾಡ, ಮನ್ಯಾಗ ಯಾರೂ ಇಲ್ಲದಾಗ ನಿನ್ನ ಒಳಗ ಬಿಡಾಣಿಲ್ಲ ಅಂತ ನಾ ಮುಂದ ಸಾಗಿದಿನರೀ. ಅಂವಾ ಹಾಗs ಅಂವಸರದಲೇ ನನ್ನ ದಾಟಿ ಆಚಾರೆಪ್ಪ ಗೋಳ ಮನೀ ಸಂದಿ ಹಿಡದು ಹೋದ್ನರಿ." ಬಿಕ್ಕು, ಅಳು, ನರಳುವಿಕೆ, ಇವುಗಳ ಮಧ್ಯದಲ್ಲಿ ತಡೆತಡೆದು ಆ ಹುಡುಗ ಹೇಳುತ್ತಿದ್ದ. ಹೆದರಿಕೆಯಿಂದ ಥರಥರ ನಡುಗುತ್ತಿದ್ದ.

ಆಚಾರೆಪ್ಪಗೋಳ ಸಂದಿ ಹಿಡಿದು ಹವಾಲ್ದಾರರ ಹಿಲಾಲುಗಳು ಬಾದವು.

ಆ ಸಂದಿಗುಂಟ ಬಂದರೆ ಬಾಳಾಚಾರ್ಯರೊಂದೇ ಮನೆ. ಬೇರೆ ಮನೆಗಳೇ ಇಲ್ಲ.

ಬಾಳಾಚಾರ್ಯರ ಮನೆಯಲ್ಲಿಯೇ ದಾದಾ ಅಡಗಿ ಕುಳಿತಿರಬಹುದೆಂಬ ಸಂಶಯ ಹವಾಲ್ದಾರರಿಗೆ ಬಂದಿತು. ಬಾಳಾಚಾರ್ಯರ ವಿಷಯವಾಗಿಯೂ, ಪಡ ದಪ್ಪನವರು ಸಾಕಷ್ಟು ವಿಷಬೆರೆಸಿ, ಹವಾಲ್ದಾರರ ಕಿವಿಯೂದಿದ್ದರು. ಬಾಳಾ ಚಾರಿಯೆಂದರೆ ದಾದಾನ ಆಶ್ರಯದಾತ, ಧರ್ಮದ ಸೋಗಿನಲ್ಲಿ ಪಾಪವನ್ನು ಅಡಗಿಸುವ ಪುಣ್ಯವಂತ ಎಂದು ಹವಾಲ್ದಾರರಿಗೆ ಮನವರಿಕೆಯಾಗಿ ಹೋಗಿತ್ತು. ಇಲ್ಲಿರಲೇಬೇಕೆಂದು ಬಾಗಿಲ ತಟ್ಟಿದರು.

ಆಚಾರ್ಯರು ಸಂಧ್ಯಾವಂದನೆಗೆ ಕುಳಿತಿದ್ದರು. ಆಚಾರ್ಯರ ಪತ್ನಿ ಬಂದು ಬಾಗಿಲ ತೆರೆದಳು. ಒಳಗೆ ಎಲ್ಲೆಡೆಗೂ ಶಾಂತಿಯಿತ್ತು. ಬಾಗಿಲು ತೆರೆದ ಆಚಾ ರ್ಯರ ಪತ್ನಿ, ಹಿಂದೆ ಸರಿಯಬೇಕೆನ್ನುವಷ್ಟರಲ್ಲಿ ಹವಾಲ್ದಾರರು, "ದಾದಾ ನಿಮ್ಮ ಸ್ಯಾಗ ಅಡಗಿಕುಂತಾನಂತ ಸಂಶಯ ಬಂದೈತರಿ. ಅದಕ ಮನಿ ತಪಾಸು ಮಾಡ ಲಿಕ್ಕ ಬಂದೀನು" ಎಂದು ಹೇಳಿದರು. ಆಚಾರ್ಯರ ಹೆಂಡತಿ ಉತ್ತರವನ್ನೇ ಕೊಡ ಲಿಲ್ಲ. ಸುಮ್ಮನೇ ಒಳಗೆ ಹೋಗಿಬಿಟ್ಟಳು. ಹವಾಲ್ದಾರರ ಮಾತು ಒಳಗೆ ಸಂಧ್ಯಾವಂದನೆಗೆ ಕುಳಿತ ಆಚಾರ್ಯರ ಕಿವಿಗೂ ಬಿದ್ದಿತ್ತು. "ಅವಶ್ಯ ತಪಾಸ ಮಾಡಿಕೋಬಹುದು" ಎಂದು ಕುಳಿತಲ್ಲಿಂದಲೇ ಉತ್ತರಕೊಟ್ಟು, "ಪ್ರಣವಸ್ಯ ಪರ ಬಹ್ಮರ್ಷಿಃ" ಎಂದು ಮತ್ತೆ ಸಂಧ್ಯಾವಂದನೆಗಾರಂಭಿಸಿದ್ಧರು. ಮೂಗು ಹಿಡಿದು ಕೊಂಡು ಪ್ರಾಣಾಯಾಮದಲ್ಲಿ ಲೀನರಾದರು.

ಹಿಲಾಲಿನ ಬೆಳಕಿನಲ್ಲಿ ಮನೆಯ ಸಂದಿಗೊಂದಿಗಳನ್ನೆಲ್ಲ ಪರೀಕ್ಷೆಮಾಡಿದರೂ ದಾದಾನ ಸುಳುವು ಹತ್ತಲಿಲ್ಲ. ಅವನ ಕೆರವು ಮನೆಬಾಗಿಲಿನಲ್ಲಿ ಇಲ್ಲದ್ದನ್ನು ಹವಾಲ್ದಾರರು ಗಮನಿಸಿದರು. ಈ ಕರ್ಮಠ ಬ್ರಾಹ್ಮಣ ಮರಾಠಾ ಜಾತಿಯ ದಾದಾನಿಗೆ ಒಂದು ವೇಳೆ ಮನೆಯಲ್ಲಿ ಆಶ್ರಯ ಕೊಡಬಹುದಾದರೂ, ಕೆರವು ಸಹಿತ ಒಳಗೆ ಬರಲು ಒಪ್ಪುವದು ಸಾಧ್ಯವೇ ಇಲ್ಲ. ಬ್ರಾಹ್ಮಣನಿಗೆ ತನ್ನ ಧರ್ಮ ಮೊದಲು, ಉಪಕಾರ ಆಮೇಲೆ ಎಂಬ ಮಾತು ಪ್ರಖ್ಯಾತವಲ್ಲವೇ? ಹವಾಲ್ದಾರ ರಿಗೆ ಇದು ಆತ್ಯಂತಿಕ ಸತ್ಯವೇ ಆಗಿತ್ತು. ಬಾಳಾಚಾರ್ಯರನ್ನು ಕಂಡು ಹವಾ ಲ್ದಾರರಿಗೆ ಆಶ್ಚರ್ಯವೂ ಆಗಿತ್ತು. ಪೋಲೀಸ ಅಧಿಕಾರಿ, ಮನೆಯ ತಪಾಸಣೆ ಗೆಂದು ಬಂದರೆ, ಸಂಧ್ಯಾವಂದನೆಗೆ ಕುಳಿತ ಬ್ರಾಹ್ಮಣ ಸ್ಥಳಬಿಟ್ಟು ಕದಲಬಾರ ದೆಂದರೇನು? ಪ್ರಾಣಾಯಾಮವನ್ನೂ ಬಿಟ್ಟಿಲ್ಲ. ಸ್ಪಷ್ಟವಾಗಿ ಮಂತ್ರಗಳನ್ನುಚ್ಚರಿ

ಸುತ್ತಿದ್ದಾನೆ. ಇವನಿಗೇನು ಹೆದರಿಕೆಯೇ ಇರಲಿಕ್ಕಿಲ್ಲವೇ? ದಾದಾ ಇಲ್ಲಿಗೆ ಬಂದಿರಲಿಕ್ಕಿಲ್ಲ. ಬಂದಿದ್ದರೆ ಓಡಿಹೋಗಲು ಈ ಮನೆಗೆ ಹಿತ್ತಲಬಾಗಿಲು ಕೂಡ ಇಲ್ಲ. ಮುಂಚೆಯ ಬಾಗಿಲಿನಿಂದ ಓಡಿಹೋಗಿರುವದು ಸಾಧ್ಯವೇ ಇಲ್ಲ. ಅಲ್ಲಿ ಪಡಪ್ಪನವರ ಜನರು ಕಾವಲು ನಿಂತಿದ್ದಾರೆ. ಆಯಿತು, ಇನ್ನೊಂದು ಕೋಣೆಯ ಬಾಗಿಲ್ಲೊಂದನ್ನು ತೆರೆದು ನೋಡಿಲ್ಲ ಎಂದು ವಿಚಾರ ಮಾಡಿ, “ಆಚಾರೆಪ್ಪ, ಈ ಕ್ವಾಣೀ ಬಾಕಲಾ ಒಂದು ತಗದು ತೋರಸತೀರ್ಯಾ?” ಎಂದು ವಿನಯದಿಂದಲೇ ಕೇಳಿದರು.

ಅದಕುತ್ತರವೋ ಏನೋ ಎನ್ನುವಂತೆ ಬಾಳಾಚಾರ್ಯರು “ಅಸ್ತ್ರಾಯಫಟ್” ಎಂದು ಜೋರಾಗಿ ಲಟಿಕೆ ಹೊಡೆದು, “ಈ ಮನೀನs ನಿಮ್ಮದು ಅಂತ ಹೇಳಿದೆ ಖರೆ. ಆದರೆ ಅದು ದೇವರ ಮನಿ. ಸಹಸಾ ಯಾರೂ ಅಲ್ಲೆ ಹೋಗತಿರೂದಿಲ್ಲ. ನಾ ಸಹಿತ ಸ್ನಾನ ಮಾಡಿ ಒಳಗ ಹೋಗಬೇಕಾಗತದ. ನೀವು ಅಲ್ಲೆ ಕಾಲಿಡತೀನಿ ಅಂತ ಹಟಾ ಹಿಡೀಬಾರದು. ಇನ್ನ ನೋಡೇ ತೀರತೀನಿ ಅಂದರ ನಂಪೊಂದು ಕರಾರು ಅದ. ಒಂದು ವ್ಯಾಳ್ಯಾ ದಾದಾ ಒಳಗ ಇಲ್ಲದಿದ್ದರ, ವಿನಾಕಾರಣ ಒಳಗ ಹೊಕ್ಕು ದೇವರಮನಿ ಅಪವಿತ್ರ ಮಾಡಿದ ಬಗ್ಗೆ ನಾವು ಜವಾಬ್ದಾರರಿದ್ದೀವಿ ಅಂತ ನೀವು ಬರದುಕೊಡಬೇಕು” ಎಂದಿಷ್ಟು ಹೇಳಿದವರೇ ಸಂಧ್ಯಾವಂದನೆಯನ್ನು ಮುಂದುವರಿಸಿದರು.

“ಬಾಕಲಮುಂದ ತುಪ್ಪದ ದೀಪ ಹಚ್ಚಿದ್ದ ನೋಡೇ ಸಂಶೇ ಬಂತರಿ. ಅದಕs, ಬಾಕಲಾ ತಗದು ತೋರಸರಿ ಅಂತ ನಿಮಗ ಕೇಳಿಕೊಂಡೆ. ನೀವು ಕೇಳಿದ್ದು ರಾಸ್ತ ಮಾತು. ವಿನಾಕಾರಣ ನಿಮ್ಮ ದೇವರ ಮನ್ಯಾಗ ಹೋಗಿ ಮೈಲಗಿ ಮಾಡಾಕ ನನಗೂ ಇಚ್ಛಾ ಇಲ್ಲ” ಎಂದು ಹವಾಲ್ದಾರರು ನುಡಿದರು. ಸ್ವಲ್ಪ ಹೊತ್ತು ಸುಮ್ಮನೆ ವಿಚಾರದಲ್ಲಿ ನಿಂತರು. ಏನು ಮಾಡಿದರೆ ದಾದಾ ಸಿಗಬಹುದು? ಪಾಪಳ್ಳಿಯಲ್ಲಿಯೇ ಇದ್ದು ಕಣ್ಣು ತಪ್ಪಿಸುತ್ತಿರುವನಲ್ಲ ಎಂದು ಸಿಟ್ಟೂ ಬಂತು. ಆದರೆ ಏನು ಮಾಡಿದರೂ ವಿಚಾರ ಬಗೆಹರಿಯಲಿಲ್ಲ. ಸ್ವಲ್ಪ ಹೊತ್ತು ಹಾಗೆಯೇ ಮೌನವಾಗಿ ನಿಂತಿದ್ದು, “ಹಾಗಾರ ಹೋಗಿ ಬರತೀನರಿ. ನಮಸ್ಕಾರ” ಎಂದಿಷ್ಟು ಆಚಾರ್ಯರಿಗೆ ಹೇಳಿ ಅಲ್ಲಿಂದ ಹೊರಬಿದ್ದರು.

ಹವಾಲ್ದಾರರ ಪರಿವಾರವೆಲ್ಲ ಹೊರಟು ಹೋಯಿತು. ಆಚಾರ್ಯರ ಸಂಧ್ಯಾವಂದನೆ ಅಂತೂ ಒಮ್ಮೆ ಮುಗಿಯಿತು. ಕೆಲವು ಕಾಲ ಹಾಗೆಯೇ ಕಳೆದಿರಬೇಕು.

ದೇವರಮನೆಯ ಬಾಗಿಲು ತೆರೆದು ದಾದಾ ಹೊರಗೆ ಬಂದ. ಅವನ ಮು
ಎಲ್ಲಿಲ್ಲದ ದೈನ್ಯ, ಕೃತಜ್ಞತೆಗಳಿಂದ ತುಂಬಿತ್ತು. ಹೊರಗೆ ಬಂದವನೇ ಆಚಾ
ಕಾಲಿಗೆ ಬಿದ್ದು "ದೇವರ ಮನ್ಯಾಗ ನನ್ನ ಕೂಡಿಸಿ, ಆ ಪಾಪದ ಹೊರಿ ನ
ತೆಲಿಮ್ಯಾಗ ಯಾಕ ಹೊರಿಸಿದಿರಿ ಕಾಕಾ?" ಎಂದು ಬಿಕ್ಕಿ ಬಿಕ್ಕಿ ಅಳಹತ್ತಿ
ಆಚಾರ್ಯರು ನಗುನಗುತ್ತಲೇ "ಏನ ಹುಚ್ಚ ಹುಡುಗೋ ದಾದಾ ನೀನು? ಹ
ಲ್ದಾರಗ ಹಾಂಗ ಹೇಳಿದೇ ಅಂತ ಅದನ್ನ ಖರೇ ಅಂತ ತಿಳಕೊಂಡೇನಪಾ? ಸ
ತಗಿ ಅಳಲಿಕ್ಕೇನಾಗೇದ? ದೇವರ ಮನೀ ಅಂತ. ಹಂಗಾರ ದೇವರಿಲ್ಲದ ಜ
ಯಾವದದ ತೋರಸು? ಏಳೇಳು ಊಟಾ ಮಾಡು ಮೊದಲ" ಎಂದು ಸಾಂತ್ವ
ಗೊಳಿಸಿದರು.

ಊಟ ಮಾಡಿ ದಾದಾ ಮನೆಗೆ ಹೋಗುತ್ತೇನೆಂದು ಹೇಳಿದಾಗ ಆ
ರ್ಯರು "ಎಲ್ಲೆಲ್ಲೂ ಹೋಗಬ್ಯಾಡ. ನಾಳೆ ಹವಾಲ್ದಾರ ಒಮ್ಮೆ ಹೋದಾ ಅಂ
ಇಡೀ ಊರ್‍ಽ ನಿನ್ನದು. ಮುಂಜಾನೆ ಯಶವಂತರಾಯರು ಬರತೀನಿ ಅಂತ ಹೆ
ಕಳಸ್ಯಾರ. ನಿನ್ನ ಜೋಡೀ ಏನೋ ಮಾತಾಡಬೇಕಾಗೇದಂತ. ಅನಾಯಾ
ಭೆಟ್ಟಿ ಆಗತದ. ಇಲ್ಲೇ ಮಲಕೋ" ಎಂದು ಆಗ್ರಹಪಡಿಸಿದರು.

:: ೨೨ ::

ಬೆಳಕು ಹರಿಯುತ್ತಿರುವಾಗಲೇ ಯಶವಂತರಾಯರು ಬಾಳಾಚಾರ್ಯ
ಮನೆಗೆ ಬಂದರು. ಅಲ್ಲಿ ದಾದಾ ತಮ್ಮ ಕಾಲಿಗೆ ಬಿದ್ದದ್ದು ನೋಡಿ ಅವರಿಗೆ ಎ
ಲ್ಲದ ಆಶ್ಚರ್ಯವಾಯಿತು. ಹವಾಲ್ದಾರ ಇವನನ್ನು ದಿಗ್ದೇಶಗಳಲ್ಲಿ ಹುಡುಕುತ್ತಿ
ವಾಗ ಇವನು ಪಾದಳ್ಳಿಯಲ್ಲಿಯೇ ಅವನ ಕಣ್ಣು ತಪ್ಪಿಸುತ್ತಿರುವನಲ್ಲ ಎಂ
ಸ್ವಲ್ಪ ನಗೆಯೂ ಬಂತು. ಮೊದಲಿನಿಂದಲೂ ದಾದಾ ಇಂಥ ಚಟುವಟಿಕೆಗಳ
ಪಟಾಯಿತ ಎಂಬ ಮಾತು ಅವರಿಗೆ ಅಪರಿಚಿತವೇನಲ್ಲ. ಆಚಾರ್ಯರು ಪ್ರಾತರ್ವಿ
ಗೆಂದು ಹೊರಗೆ ಹೋದದ್ದರಿಂದ, ಅವರು ಬರುವ ವರೆಗೆ ಇಬ್ಬರೂ ಆತ್ಮೀಯತೆ
ಮಾತುಕತೆಗಳಲ್ಲಿ ತೊಡಗಿದರು.

"ನೀನು ಅಜರಾಣಿಗೆ ಬರದ್ಹ ಇದ್ದದ್ದಽ ನೆಟ್ಟಗ ಮಾಡಿದಿ ನೋಡು ದಾದಾ. ಬಂದಿದ್ದರ ಅಲ್ಲೇ ನಿನ್ನ ಹಿಡದು ಹವಾಲ್ದಾರ ಜೇಲಿಗೆ ಕಳಸ್ತಿದ್ದ" ಎಂದರು ಯಶವಂತರಾಯರು.

"ಕಾಯೋ ದೇವರು ದೊಡ್ಡಾವ ಅದಾನ ಎಜ್ಜಾ. ಎಲ್ಲಿ ಹೋದರೂ ಬೆನ್ನ ಮ್ಯಾಗ ಅಂವಾ ಇದ್ದಾಗ, ಇಂತಾ ನೂರು ಹವಾಲ್ದಾರರು ಬಂದರೂ ಏನಾಗ ಬೇಕಾಗೇತಿ?"

"ಅದೂ ಕರೇನ್ಽ ಅನ್ನು. ನಾವೆಲ್ಲಾ ಕಾಯತೇವಿ ಅನ್ನೂದು ಎಲ್ಲಾ ಸುಳ್ಳಮಾತ. ಇಲ್ಲೀ ತನಾ ನಮ್ಮನ್ನ ಕಾಯಕೋತ ಬಂದಾನ ಅನ್ನೂ ಮಾತಽ ಮರಿತೇವಿ. ದೇವರಽ ಚಿಮಣಾನ್ನ ಅಡವೀ ಹೆಣಾ ಆಗೂದು ತಪ್ಪಸಲಿಲ್ಲಽ?" ಎಂದು ಯಶವಂತರಾಯರು ನಿಟ್ಟುಸಿರುಗರೆದರು. ಎಪ್ಪತ್ತು ವರ್ಷದ ಆ ಮುದುಕನಲ್ಲಿ ಇನ್ನೂ ಕೂಸಿನ ಅಂತಃಕರಣವಿತ್ತು. ಚಿಮಣಾಳ ಕರುಣಕತೆ ಅವನ ಹೃದಯವನ್ನೇ ತಲಕಾಡಿತ್ತು. ಏನು ಮಾಡಿದರೆ ಅವಳ ಹದಗೆಟ್ಟ ಬಾಳು ಒಂದು ರೂಪಕ್ಕೆ ಬಂದೀತೆಂದು ಹಗಲಿರುಳು ಚಿಂತೆ ಅವರನ್ನು ಕಾಡುತ್ತಿತ್ತು.

ದಾದಾನ ಕುತೂಹಲ ಜಾಗೃತವಾಯಿತು. ಚಿಮಣಾ ಅಡವಿಯ ಹೆಣವಾಗುತ್ತಿದ್ದಳೇ? ನಾನಾಕಾಕಾ ಸತ್ತಂದಿನಿಂದ ಆ ಮನೆತನಕ್ಕೆ ದುರ್ದೈವ ಬೆನ್ನು ಹತ್ತಿ ಕಾಡುತ್ತಿತ್ತು. ತನ್ನಂಥ ಅಣ್ಣನಿದ್ದೂ ಉಪಯೋಗವಾಗಲಿಲ್ಲ. ಚಿಮಣಾಳ ಸಮಾಚಾರವಾದರೂ ಏನು? ದಾದಾನಿಗೆ ಒಂದು ವಿವರವೂ ಗೊತ್ತಿರಲಿಲ್ಲ. ಚಿಮಣಾಳ ಕತೆಯನ್ನವನು ಕೇಳಬೇಕಾಗಿತ್ತು.

ಯಶವಂತರಾಯರು ಸಾದ್ಯಂತವಾಗಿ ಹೇಳತೊಡಗಿದರು. ಚಿಮಣಾ ಪಡಪ್ಪನಿಂದ ಅಗಲಿದ್ದು, ಅವಳ ಆತ್ಮಹತ್ಯೆಯ ಪ್ರಯತ್ನ, ಚಂದ್ರಪ್ಪ ದೇವರಂತೆ ಬಂದು ಕಾಪಾಡಿದ್ದು, ಚಿಮಣಾಳ ಪ್ರಸೂತಿವೇದನೆ, ಹವಾಲ್ದಾರರ ಆಗಮನ, ಅಕಸ್ಮಾತ್ತಾಗಿ ತಮ್ಮ ಕೈಯಲ್ಲಿ ಅವಳು ದೊರೆತದ್ದು, ಗಂಡು ಹಡೆದದ್ದು ಎಲ್ಲವನ್ನೂ ಆತ್ಮೀಯತೆಯ ದನಿಯಲ್ಲಿ ಹೇಳುವಾಗ ಅವರ ಕಂಠ ಬಿಗಿದು ಬರುತ್ತಿತ್ತು. ತದೇಕ ಚಿತ್ತನಾಗಿ ಕುಳಿತು ಕೇಳುತ್ತಿದ್ದ ದಾದಾ ಮೂಕನಾಗಿ ಕಣ್ಣೀರು ಸುರಿಸುತ್ತಿದ್ದ. ಚಿಮಣಾಳ ಜೀವನದಲ್ಲಿ ದುಃಖ ಸುಖ ಹಾಸುಹೊಕ್ಕಾಗಿ ಕರುಣಕತೆಯನ್ನೇ ನೇಯ್ದಿದ್ದವು. ಶೀಲಭ್ರಷ್ಟಳಾಗಿ ಅಲೆಯುವ ಪ್ರಸಂಗ ಅವಳಿಗೆ ಬಂದೀತೇ? ಒಂದು ಜೀವ ನೆಲೆಯಿಲ್ಲದೆ ತಿರುಗಾಡುವಂತೆ, ಯಾವ ದೈವದ ಶಾಪ ಕಾಡುತ್ತದೆ?

ದಾದಾನಿಗೆ ಇದೆಲ್ಲ ಅಸಹನೀಯವಾಯಿತು. ಕೆಲಹೊತ್ತು ಸುಮ್ಮನೆ ಅಳಹತ್ತಿದ.

ಕೊನೆಗೊಮ್ಮೆ ವ್ಯಾವಹಾರಿಕ ಸಮಸ್ಯೆ ಎದುರಾಯಿತು. ಅದನ್ನೇ ಕುರಿತು ದಾದಾನೊಡನೆ ಯಶವಂತರಾಯರು ಮಾತಾಡಬೇಕಾಗಿತ್ತು. ಈಗ ಕೂಸಿನ ತಂದೆಯ ಹೆಸರನ್ನು ಯಾರದೆಂದು ಹಚ್ಚಬೇಕು. ಇದರಲ್ಲಿ ಚಿಮಣಾಳ ಅಭಿಪ್ರಾಯವೇನೆಂದು ದಾದಾ ಕೇಳಿದ. ಕೂಸಿನ ತಂದೆಯ ಹೆಸರನ್ನು ದಾದಾನೆದುರಿಗೇ ಹೇಳಿರುವೆನೆಂದು ಅವಳೇ ಹೇಳಿದ ಮಾತನ್ನು ಯಶವಂತರಾಯರು ನೆನಪು ಮಾಡಿಕೊಟ್ಟರು. ದಾದಾನಿಗೂ ಅದೇ ಒಪ್ಪಿಗೆಯಾಯಿತು.

"ನೀ ಅನ್ನೂದೆಲ್ಲ ಕರೇ ದಾದಾ. ಆದರ ಪಡದಪ್ಪನ ಹೆಸರು ಹಚ್ಚಿತೆಂತ ತಿಳಿ. ಮುಂದ ಆ ಕೂಸಿನ ಗತಿ ಏನು? ಪಡದಪ್ಪ ಸಂಸಾರ ಇಲ್ಲದ ಸನ್ಯಾಸಿ. ಅಂಪಾ ಈ ಹುಡುಗನ್ನ ಮುಂದ ತಂದಾನಂತ ನಂಬಿಕಿ ನನಗಿಲ್ಲ. ಅದಕs ಚಿಮಣಾಗ ಹೇಳಿದ್ದೆ. ಆಕಿ ಒಪ್ಪಿದರ ಬಾಪೂಸಾಹೇಬನ ಹೆಸರು ಹಚ್ಚಬೇಕೂ ಅಂತ ನನ್ನ ಇರಾದೇ ಇತ್ತು" ಯಶವಂತರಾಯರು ಮನದಾಶಯವನ್ನು ವ್ಯಕ್ತಪಡಿಸಿದರು.

ಈ ಮಾತನ್ನು ಕೇಳಿ ದಾದಾ ಕೋಪದಿಂದ ಸಿಡಿದೆದ್ದ. "ಇದs ಮಾತs ನೀವನ್ನೂದಿs ಮತ್ತ ಯಾರಾರೇ ಅಂದಿದ್ದರ, ಒಂದ ಕೈ ತೋರಿಸ್ತಿದ್ದೆ ಯಜ್ಜಾ. ನಾವು ಬಡವರು ಕರೇ. ಆಸ್ತಿ ನಿಮ್ಮಂಗ ನಮಗೇನಿಲ್ಲ. ಆದರ ಮರ್ಯಾದಿ ಮಾರಿಕೊಂಡು ಬಾಳೇ ಮಾಡೂದು ನನಗೇನ ಮನಸ್ಸಿಲ್ಲ. ಕೂಸಿನ ತಂದಿ ಪಡದಪ್ಪ ಅನ್ನೂ ಮಾತು ನಾಕ ಮಂದಿಗೆಲ್ಲಾ ಗೊತ್ತಾಗೇತಿ. ಗೊತ್ತಾಗದಿದ್ದರೂ, ದೇವರಿಗರೇ ತಿಳದೈತಿ. ಅದನ್ನು ಮರತು ಬಾಳೇ ಮಾಡಬೇಕಂದರ, ಏನ ಮಾತಾಡತೀರಿ ಯಜ್ಜಾ. ಪಡದಪ್ಪನs ಆಕಿನ್ನ ಲಗ್ನ ಆಗಿ ಗತಿಗಾಣಸಬೇಕು."

"ಹೌದು ದಾದಾ. ಆದರ ಪಡದಪ್ಪ ಆಕಿನ್ನ ಲಗ್ನ ಆಗತಾನ ಅನ್ನೂ ಮಾತs ಹುಚ್ಚತನ. ಆಕಿನ್ನ ಗತಿಯಿಲ್ಲದಂಗ ಮಾಡಿ ಕೈ ಬಿಟ್ಟನಂತs ಆಕಿ ಕೆರಿ ಬೀಳಾಕ ಹೋಗಿದ್ದಳು. ಚಂದ್ರಿ ಆಕಿನ್ನ ಪಾರ ಮಾಡಿದಳು. ಸುಮ್ಮನ ನನ್ನ ಮಾತು ಕೇಳಿಕೋ. ಬಾಪೂನ ಹೆಸರು ಹಚ್ಚಿದರ, ಮುಂದ ಆ ಹುಡಗ ಬಾಪೂನ ಪಿತ್ರಾರ್ಜಿತ ಆಸ್ತಿಗೆ ವಾರಸದಾರ ಆಕ್ಕಾನ."

"ಆಸ್ತಿ ಮಾತ ಹೇಳತೀರಿ ಯಜ್ಜಾ. ಚಿಮಣಾನ ಮರ್ಯಾದೀ ಗತೀ ಏನು ಅಂತ ಚಿಂತೆ ಕೊರೀತೈತಿ ನನಗ. ಬಾಪೂಸಾಹೇಬ ಯಂತಾವರೇ ಇರಲಿ, ತಪ್ಪು

ಮಾಡದ ಅವಗ ಈ ಬಟ್ಟಾ ಕೊಡೂದು, ಜೀವ ಹೋದರೂ ಆಗಾಣಿಲ್ಲ ನನ್ನ ಕಡಿಂದ. ಆ ಮಾತss ಹೇಳಬ್ಯಾಡ್ರಿ" ದಾದಾ ಸ್ಪಷ್ಟವಾಗಿ ಖಂಡಿತವಾಗಿ ಹೇಳಿದ.

ಯಶವಂತರಾಯರು ನಿರುತ್ತರರಾದರು. ತುಂಬಿ ಬಂದ ಅಂತಃಕರಣ, ಚಿಮಣಾಳ ಬಗ್ಗೆ ಮೂಡಿದ ಸಹಾನುಭೂತಿ ಇವುಗಳಿಂದ ಇಂಥ ಮಾತನ್ನು ಅವ ರಾಡಿದ್ದರು. ಅದರಲ್ಲಿ ಯಾವ ದುರುದ್ದೇಶವೂ ಅಡಗಿರಲಿಲ್ಲ. ಚಿಮಣಾ ಹಾಗೂ ಅವಳ ಕೂಸಿನ ಭವಿತವ್ಯ, ತತ್ಪನಿಷ್ಠುರತೆಯ ಸಲುವಾಗಿ ಹಾಳಾಗಬಾರದೆಂಬುದೇ ಅವರ ಅಭಿಪ್ರಾಯ. ಆದರೆ ದಾದಾ ಅದಕ್ಕೊಪ್ಪದ್ದನ್ನು ಕಂಡು ನಿರುಪಾಯ ರಾದರು. ಏನಿದ್ದರೂ ದಾದಾ ಅವಳ ಅಣ್ಣ; ಅವಳ ಭವಿಷ್ಯದ ಜವಾಬ್ದಾರಿ ಅವ ನದೇ ಅಲ್ಲವೇ ?

ಇವರಿಬ್ಬರ ಮಾತುಕತೆ ನಡೆದಿರುವಾಗಲೇ ಬಾಳಾಚಾರ್ಯರು ಅಲ್ಲಿಗೆ ಬಂದರು. ಯಶವಂತರಾಯರು ಅವರಿಗೆ ನಮಸ್ಕರಿಸಿದರು.

"ಯಶವಂತರಾವ, ದಾದಾನ ಜೋಡಿ ನೀವು ಮುಖ್ಯ ವಿಷಯದ ಬಗ್ಗೆ ಮಾತಾಡಿರಬಹುದು. ಇನ್ನ, ಇನ್ನೊಂದು ವಿಷಯದ ಬಗ್ಗೆ ನಿಮ್ಮ ನಿಶ್ಚಿತ ಅಭಿ ಪ್ರಾಯ ತಿಳಕೋಬೇಕಾಗಿತ್ತು" ಎಂದು ಹೇಳಿ, ಆಚಾರ್ಯರು ತಮ್ಮ ವಾಡಿಕೆಯ ಕೃಷ್ಣಾಜಿನದ ಆಸನದ ಮೇಲೆ ಬಂದು ಕುಳಿತರು.

ಯಶವಂತರಾಯರಿಗೆ ಈ ಪ್ರಶ್ನೆ ಅನಿರೀಕ್ಷಿತವಾಗಿತ್ತು. "ಯಾವ ವಿಷಯ ಅಂತ ತಿಳಿಸಿದರ, ನನ್ನ ಮಾತೂ ಹೇಳಾಕ ತಯಾರದೀನಿ" ಎಂದು ನುಡಿದರು.

"ಅದs, ನಮಗ, ನಿಮಗ, ಈ ಊರಿಗೆ ಸಂಬಂಧಿಸಿದ ವಿಷಯ. ಈಗ ಗೌಡರ ಮನೆತನದ ವಾರಸಾಪ್ರಕರಣನss ತೋಗೋಳ್ರಿ. ಪಡದಪ್ಪ, ನಿಮ್ಮೂರ- ಯಾರ ಅಂವಾ- ಆ ಲಿಂಗಪ್ಪನ್ನ ಕರಕೊಂಡು ಬಂದು ಮತ್ತ ಪುಂಡಾಟಿಕಿ ನಡ ಸ್ಯಾನ. ಅದರಾಗ ನಿಮ್ಮ ಬಾಪೂಸಾಹೇಬ ಕೂಡಿಕೊಂಡು ತನ್ನ ಹೆಸರು ಕೆಡಿಸಿ ಕೊಳ್ಳಲಿಕ್ಕೆ ಹತ್ತ್ಯಾನ. ಅದಕ ಬಾಪೂಸಾಹೇಬ ಈ ಊರು ಬಿಟ್ಟು ತನ್ನ ಊರಿಗೆ ಹೋಗಬೇಕೂ ಅನ್ನೂದು ನನ್ನ ಅಭಿಪ್ರಾಯ."

ಯಶವಂತರಾಯರ ಅಭಿಪ್ರಾಯವೂ ಅದೇ ಆಗಿತ್ತು. ಆದರೆ ಬಾಪೂ ಸಾಹೇಬನಿಗೆ ನೇರವಾಗಿ ಹೇಗೆ ಹೇಳಬೇಕು ? ಲಕ್ಷ್ಮೀಬಾಯಿ ತಿರುಗಿ ತನ್ನ ವಾಡೆ ಯಲ್ಲಿ ಬಂದು ನಿಂತರೆ ಬಾಪೂಸಾಹೇಬನು ತಾನಾಗಿ ಊರು ಬಿಡುವಂತಾಗುವ ದೆಂದು ಬಾಳಾಚಾರ್ಯರು ಸೂಚಿಸಿದರು. ಆದರೆ ಲಕ್ಷ್ಮೀಬಾಯಿಯನ್ನು ಕರೆತರಲು

ಮಾಡಿದ ಎಲ್ಲ ಪ್ರಯತ್ನಗಳೂ ನಿಷ್ಫಲವಾಗಿದ್ದವು. ಇನ್ನು ಯಶವಂತರಾಯರೇ ಸ್ವತಃ ಲಕ್ಷ್ಮೀಬಾಯಿಯನ್ನು ಕರೆದುಕೊಂಡು ಬರುವದೊಂದೇ ಉಪಾಯ. ಯಶವಂತರಾಯರೂ ಹಾಗೆ ಮಾಡಬಹುದಿತ್ತು. ಆದರೆ ಲಕ್ಷ್ಮೀಬಾಯಿ ತನ್ನನ್ನು ಬಾಪೂಸಾಹೇಬನ ಪಕ್ಷಪಾತಿಯೆಂದು ತಿಳಿದರೆ ಹೇಗೆ? ಈ ಕೆಲಸ ಬಾಳಾಚಾರ್ಯರೇ ಮಾಡಿದರೆ ಹೇಗೆ?

ಕೊನೆಗೆ ನಿರ್ಣಯವಾದದ್ದು ಹೀಗೆ. ಯಶವಂತರಾಯರು ಸ್ವತಃ ಇಂದುಪುರಿಗೆ ಹೋಗಿ ಮಹಾರಾಜರನ್ನು ಕಂಡು, ಲಕ್ಷ್ಮೀಬಾಯಿಗೆ ಈ ಮಾತು ತಿಳಿಸಬೇಕು. ಬಾಳಾಚಾರ್ಯರೂ ಅವರನ್ನು ಕಾಣಲಿರುವರೆಂದು ತಿಳಿಸಬೇಕು. ಜಾಗೀರದಾರರ ಮನೆತನ ಮುಂದುವರಿಯಬೇಕು. ಬಾಪೂಸಾಹೇಬ ತನ್ನೂರಿಗೆ ಹೋಗಬೇಕು.

ಸ್ವಲ್ಪಹೊತ್ತು ಬಿಟ್ಟು ಬಾಳಾಚಾರ್ಯರು ಇನ್ನೊಂದು ಮಾತು ತೆಗೆದರು. "ಈಗ ನೋಡ್ರಿ ಯಶವಂತರಾವ. ಬಾಪೂಸಾಹೇಬ, ಪಡದಪ್ಪ ಕೂಡಿಕೊಂಡು, ಹಾವನೂರ ಜನರಿಂದ ದಾದಾನ ಮ್ಯಾಲೆ ವಾರಂಟು ಕೊಡಿಸ್ಯಾರ. ಅದಕ ನೀವು ಹಾವನೂರ ಗೌಡರಿಗೆ ಹೇಳಿ ಆ ವಾರಂಟು ರದ್ದ ಆಗೂಹಾಂಗ ಮಾಡಬೇಕು" ಎಂದರು.

"ಹೌದು ಯಜ್ಜಾ, ಅದೊಂದು ವಾರಂಟು ರದ್ದಾಗಲಿ. ಆ ಮ್ಯಾಗ ಈ ಸೋಟರನ್ನೆಲ್ಲಾ ಒಂದು ಕೈ ನೋಡತೇನಿ. ಈ ಪಡದಪ್ಪನ್ನ ಊರು ಬಿಟ್ಟು ಓಡಸತೇನಿ" ಎಂದು ದಾದಾನೂ ಹೇಳಿದ.

"ಏನರ ಹುಚ್ಚುಚ್ಚಾರ ಮಾತಾಡಬ್ಯಾಡ ದಾದಾ. ಪಡದಪ್ಪ ಊರ ವತನದಾರ. ಊರ ಮಂದೀ ಬೆಂಬಲ ಎಲ್ಲಾ ಅಂವಗದ. ಅಂವನ್ನೇನ ಮಾಡತೀ. ಬಾಪೂಸಾಹೇಬ ತೆನೀ ಮ್ಯಾಲಿನ ಹಕ್ಕಿ. ಅಂವಾ ಊರು ಬಿಟ್ಟು ಹೋಗೂಹಾಂಗ ಮಾಡಬೇಕು." ಎಂದರು ಬಾಳಾಚಾರ್ಯರು.

"ಆಚಾರೆಪ್ಪ ಅನ್ನೂದು ರಾಸ್ತಮಾತ ಐತಿ ದಾದಾ. ಹಾಗೆಲ್ಲಾ ಹೋಗಬ್ಯಾಡ. ಚಿಮಣಾ ಕೂಸಿನ ಕರಕೊಂಡು ಊರಿಗೆ ಬಂದವ್ಯಾಗ ಮತ್ತೆಲ್ಲಿರಬೇಕು ಆಕಿ? ಅದು ಹೋಗಲಿಬಿಡು. ಹಾವನೂರ ಗೌಡ ನನ್ನ ಮಾತು ತಗದ ಹಾಕಾಂವಲ್ಲ. ನಾ ಎಲ್ಲಾ ಅಂವಗ ಹೇಳತೀನಿ" ಎಂದು ಯಶವಂತರಾಯರೂ ಹೇಳಿದರು.

ಅಂದೇ ಇಳಿಹೊತ್ತಿಗೆ ಹಾವನೂರಿಗೆ ಹೋಗುತ್ತೇನೆಂದು ಹೇಳಿ ಯಶವಂತ
ಸುದು ಅಲ್ಲಿಂದ ಹೊರಟರು. ಮುಂದೆ ಕೆಲಹೊತ್ತಾದ ಮೇಲೆ, ಶೇಷಪ್ಪ
ಮುದಿನದ ಹನುಮಜಯಂತಿಗೆ ಆಚಾರ್ಯರಿಗೆ ಆಮಂತ್ರಣಕೊಡಲು ಅಲ್ಲಿಗೆ ಬಂದ.
ದಾ ಎದ್ದು ನಿಂತು ಶೇಷಪ್ಪನಿಗೆ 'ರಾಮರಾಮ' ಮಾಡಿದೊಡನೆ ಅವನಿಗೂ
ಶ್ಚರ್ಯವಾಯಿತು.

"ಏನೋ ದಾದಾ, ಹವಾಲ್ದಾರ ರಾತ್ರಿ ಊರುಬಿಟ್ಟು ಹೋದ ಸುದ್ದೀ
ತಿಳಿದ ಕೂಡಲೆ, ಬೆಳಗು ಹರಿಯೂದ್ರಾಗ ಬಂದು ಊರು ಸೇರಿದ್ಹಾಂಗ ಕಾಣ
?" ಎಂದು ಕೊಂಕು ಬೆರಸಿ ಕೇಳಿದ.

"ಹ್ವಾಲ್ದಾರ ಊರು ಬಿಟ್ಟು ಹೋದರೂ ನೀವದೀರಲ್ರಿ ಸರಕಾರೀ ಅಮಲ
ರರು. ನೀವೂ ಮನಸ್ಸು ಮಾಡಿದರ ಜೇಲಿಗೆ ಕಳಸಾಕ ಆಗತೈತಲ್ರಿ" ಎಂದು
ದಾ ನಗುತ್ತಲೇ ಉತ್ತರವಿತ್ತ.

"ಕೂತು ಮಾತಾಡು ದಾದಾ" ಎಂದು ಹೇಳಿ ಶೇಷಪ್ಪ ಆಚಾರ್ಯರೆಡೆಗೆ
ಸಗಿದ.

"ಈ ವರ್ಷ, ದುಷ್ಕಾಳದಾಗ ಹಣಮಜಯಂತಿ ಭಾಳ ಹಿಗ್ಗಸದ ಬರೇ
ದಿಕ ಬ್ರಾಹ್ಮಣರ ಪೂರ್ತೆ ಅಸ್ಪರ್ಶ ಮಾಡಬೇಕಂತದ ಆಚಾರ್ರ" ಎಂದು
ಸ್ತಾವನೆ ಹಾಕಿದ.

"ಒಟ್ಟು ಮಾರುತಿದೇವರು ಮಳಿ ಕೊಡಲಿಲ್ಲಾ ಅಂತ, ಅಂವಗs ಈ
ಷ್ಕಾಳದ ಝುಳಾ ಬಡಕೊಂಡದ್ದು ನೆಟ್ಟಗಾತು. ಗೌಡ ಸತ್ತಾ ಅಂತ, ಅವರ
ನೀ ಸಮಾರಾಧನಿ ಮುಳುಗಿತು. ಬರಗಾಲ ಅಂತ ಕುಲಕರ್ಣೇರ ಮನಿ
ಮಾರಾಧನಿ ಸಂಪುಷ್ಟಕ್ಕ ಬಂದದ. ಏನೋ ಬಾಪೂಸಾಹೇಬ ಇದ್ದಾ ಅಂತ
ಮುಷ್ಟ ಓಕಳೀನರೇ ಕಂಡ." ಎಂದು ನಕ್ಕರು ಬಾಳಾಚಾರ್ಯರು.

ಶೇಷಪ್ಪನಿಗೆ ಈ ಕೊಂಕು ತಿಳಿಯಿತು. "ಕೆರೀ ನೀರು ಕೆರಿಗೆ ಹಾಕಿ ವರಾ
ತಕೊಳ್ಳಿಕ್ಕೆ ಬರತಿದ್ದರ ನಾನೂ ಬೇಕಾದ್ಹಾಂಗ ಮಾಡತಿದ್ದೆ ಆಚಾರ್ರ. ಅಂವಾ
ಳಿ ಮಾಡಿದ್ದು ಭಕ್ತಿ ಅಂತ ಹೊಗಳತೀರಿ. ನನಗ ನಗೀ ಬರತದ. ಹಾಂಗ
ನೇನs ಇದ್ದರ ಮುಂದಿನ ವರ್ಷ ಮಾಡಿ ತೋರಸಲಿ ಹೇಳತೀನಿ."

"ನೂರಾರು ವರ್ಷದಿಂದ ಜಾಗೀರದಾರರ ಓಕಳಿ ನಡದ ಬಂದದೇನಪಾ.
ಂದಿನ ವರ್ಷ ಮಾಡೂದಿಲ್ಲ ಅಂತ ಹ್ಯಾಂಗ ಹೇಳತೀಯಪಾ." ಬಾಳಾ

ಚಾರ್ಯರು ಆಸನವನ್ನು ಬದಲಿಸುತ್ತ ತುಸು ಕುತೂಹಲಚಿತ್ತರಾಗಿಯೇ ಕೇಳಿದರು.

ಶೇಷಪ್ಪ ಒಂದು ಚಿಟಿಕೆ ನಶ್ಯ ಏರಿಸಿದ. ಆಚಾರ್ಯರಿಗೂ ಡಬ್ಬಿಯನ್ನು ಮುಂದೆ ಚಾಚುತ್ತ, "ಗೊತ್ತಽ ಇಲ್ಲ ಹೌದಲ್ಲೋ ಆಚಾರಽ ವಾಡೇದ ಓಕಳಿ? ಈಗ ವಾಡೇದ ಯಜಮಾನತಿ ಲಕ್ಷ್ಮೀಬಾಯಿ. ಇಲ್ಲೇ ಇಂದುಪುರದಾಗ ಬಂದು ಇದ್ದಾರ. ಅಂತಾದು, ನಿಮ್ಮ ವಾಡೇದ ಓಕಳಿ, ನೀವು ಬರಬೇಕು ಅಂತ ಬಾಪೂ ಸಾಹೇಬ ಒಂದು ಪತ್ರಾನೂ ಕಳಸಬಾರದಽ? ಅದರ ಪರಿಣಾಮ ಏನಾಗೇದ ಅಂದರ, ಲಕ್ಷ್ಮೀಬಾಯಿ ಸಿಟ್ಟಿಗೆದ್ದಾಳ. ಇಲ್ಲೀತನಕಾ ಹನ್ನೆರಡು ವರ್ಷದ ಜಮಾ ಖರ್ಚಿನ ಲೆಕ್ಕಾ ತೊಗೊಂಡು ಇಂದುಪುರಿಗೆ ಬಾ ಅಂತ, ಸಂಸ್ಥಾನದಿಂದ ಕುದುರಿ ಸ್ವಾರನ ಕಡಿಂದ ಪತ್ರಾ ಕಳಸ್ಯಾರ."

ಆಚಾರ್ಯರಿಗೂ ಈ ಸುದ್ದಿ ಗೊತ್ತಿರಲಿಲ್ಲ. ಆದರೆ ಸಂಶಯವೇನೊ ಒಮ್ಮೆಲೆ ಬಂತು. "ಓಕಳಿ ಮುಗಿಯೂದರಾಗ ಇಂಥಾ ಪತ್ರ ಬರಬೇಕಾದರ, ಈ ಕಾಯ ದೇದ ತೊಡಕು, ಇಲ್ಲೀ ಸುದ್ದೀ ಬಲ್ಲವರೇ ಕಳಿಸಿರಬೇಕು, ಅನಸತದ." ಎಂದು ತಮ್ಮ ಸಂಶಯವನ್ನು ಆಡಿಯೂ ತೋರಿಸಿದರು.

"ತಿಳಿಸದಿದ್ದರ ಹ್ಯಾಂಗರೀ. ನಾನೂ ಈ ಬಾಪೂಸಾಹೇಬನ ದರ್ಬಾರ ನೋಡಿ ಬ್ಯಾಸತ್ತು, ಇಂದುಪುರಕ್ಕ ಪತ್ರಾ ಬರದು ಕಳಿಸಿಬಿಟ್ಟಿ. ಮೊದಲಽ ಆಮಂತ್ರಣಪತ್ರ ಕಳಸೋ ಅಂತ ಗಿಳೀಗೆ ಹೇಳಿದ್ಹಾಂಗ ಹೇಳಿದೆ. ಪಡದಪ್ಪನ ಮಾತು ಕೇಳಿ ಬಿಟ್ಟುಬಿಟ್ಟ. ಇನ್ನ ಆ ಪಡದಪ್ಪನಽ ಉಳಿಸಿಕೊಳ್ಳಲಿ ಇಂವನ್ನ ಪೇಚಿನಿಂದ" ಎಂದ ಶೇಷಪ್ಪ.

ಪಡದಪ್ಪ ಬಾಪೂಸಾಹೇಬರ ಬಗ್ಗೆ ಅತ್ಯಂತ ಗೌರವಾದರಗಳಿದ್ದ ಶೇಷಪ್ಪನೇ ಈ ಮಾತನ್ನಾಡುವವನು? ಬಾಳಾಚಾರ್ಯರಿಗೆ ಈ ಕುತಂತ್ರ ಮೊದಲೇ ಹೊಳೆದಿತ್ತು. ಆದರೂ ಇನ್ನೂ ಸ್ವಲ್ಪ ಸುತ್ತು ಸುತ್ತಾಡಿ ಗಾಳ ಹಾಕಬೇಕೆಂದು "ಅಲ್ಲೋ ಶೇಷಪ್ಪಾ, ತಗಾಯಿ ಕೊಡಿಸಿದ 'ಗೋಪಾಳ'ದಾಗ ಪಡದಪ್ಪ ಶೇಕಡಾ ೫ರಂತೆ ಪಾಲು ಕೇಳಿದನಂತ ಖರೇ ಏನು?" ಎಂದರು.

"ಶೇಕಡಾ ಏನ ಮಾಡ್ಯಾನು? ಆ ಪೇಶನಿಶಾಳೆ ಲಿಂಗಪ್ಪ ಈ ಊರ ಗೌಡ ಅಂತ, ಅವನ ಪಾಲು ಕೊಡಬೇಕೂ ಅಂತ ಕೇಳಿದ. ಅವನ ಗೌಡಕೀ ವಾರಸಾ ಪ್ರಕರಣರೇ ಮೊದಲ ಮುಗೀಲಿ. ಪಾರ್ವತೆಪ್ಪನ ತಕರಾರೀ ಅರ್ಜಿಗೆ ಬರೇ ಮಾಮ ಲೇದಾರರು ಹುಕುಂ ಕೊಟ್ಟರ ಗೌಡಕೀ ಬರಲಿಲ್ಲ. ಪ್ರಾಂತಸಾಹೇಬರು ಪಾಳೀ

ರಜಿಸ್ಟರದಾಗ ಲಿಂಗಪ್ಪನ ಹೆಸರು ಹಚ್ಚಬೇಕು. ಅದರಂತೆ ಪಾಳೀ-ನೋಟೀಸು ಹೊರಡಬೇಕು. ಆ ಮ್ಯಾಲ ಲಿಂಗಪ್ಪನ ನೇಮಣೂಕಿ ಆಗಬೇಕು. ಅಲ್ಲೀ ತನಕಾ ಅಂವಾ ಎಲ್ಲೀ ಗೌಡಾ ಅಂತ ಬೆದರಿಸಿ ಬಿಟ್ಟಿ. ಅಂದಿನಿಂದ ಅಡ್ಡಗಾಲು ಹಾಕಬೇಕೂ ಅಂತ ಪಡದಪ್ಪ ಪ್ರಯತ್ನ ನಡಿಸ್ಯಾನ. ಇಕಾ, ಆಚಾರ್ರ, ಈಗ ಬಂದ ಮಾಮಲೇದಾರರ ಹುಕುಮಿನ ಮ್ಯಾಲೆ, ಪ್ರಾಂತಸಾಹೇಬರ ಕಡೆಗೆ ಅಪೀಲು ಮಾಡಿಕೋ ಅಂತ ಪಾರ್ವತೆವ್ವಗ ತಿಳಸರಿ. ಅವರು ಬರೇ ಅರ್ಜಿಗೆ ಸಹಿ ಹಾಕಿ ಕೊಟ್ಟರೂ ತೀರಿತು. ಮುಂದಿನ ಕೆಲಸ ನನಗ ಗುತ್ತಿಗಿ. ತೋರಸ ತೇನಿ ಒಂದು ಕೈ" ಎಂದು ಶೇಷಪ್ಪ ಇನ್ನೊಂದು ತಂತ್ರದ ಜಾಲ ಹೂಡಿದ.

ಆಚಾರ್ಯರಿಗೂ ಇದರ ಪ್ರಯೋಜನವಾಗಬೇಕಿತ್ತು. ಅಂತಲೇ ಸವಿ ಮಾತಿನಿಂದ "ಅದೆಲ್ಲಾ ಆತೋ ಶೇಷಪ್ಪಾ. ನೀವೆಲ್ಲಾ ಕೂಡಿ ದಾದಾನ ಮ್ಯಾಲೆ ವಾರಂಟು ಹೊರಡಿಸಿ ಕೂತೀರಿ. ಅದರಾಗಿಂದ ಒಂದ ಹಾದೀ ತಗಿಯಲಾ" ಎಂದರು.

ವಾರಂಟೀನ ಸುಟ್ಟಿತು? ೩೨೩ ಕಲಮಿನ ಪ್ರಕಾರ ಹಲ್ಲಾ ಮಾರಾಮಾರಿ ಅರ್ಜಿ. ಅಂವಾ ಹೋಗಿ ಮಾಜಿಸ್ಟ್ರೇಟರ ಮುಂದ ಹಾಜರ ಆಗಿ ಜಾಮೀನ ಕೊಟ್ಟ ಬರಲಿ. ಆ ಖಟ್ಲಿ ನಮ್ಮ ಮಾಮಲೇದಾರರ ಮುಂದ ನಡೀತದ. ಈ ವಾರಸಾ ತಕರಾರೀ ಅರ್ಜಿ ಹುಕುಮಿನ ವಿರುದ್ಧ ಅಪೀಲ ಮಾಡಿದರ, ಮಾಮಲೇದಾರ ತೊಗೊಂಡ ಗೋಪಾಳ ದಕ್ಕದಂಥ ಪ್ರಸಂಗ ಬರತದ. ದಾದಾನ್ನ ಬಿಡುಗಡೆ ಮಾಡಿ ಅದನ್ನ ದಕ್ಕಿಸಿಕೊಳ್ಳಲಿಕ್ಕೆ ಅವನ ಗಂಟ ಏನೂ ಹೋಗೂದಿಲ್ಲ" ಎಂದು ಶೇಷಪ್ಪ ಉಪಾಯ ಸೂಚಿಸಿದ.

"ಆಗಲಿ ನೋಡೋಣಂತ. ಆದರ ಮ್ಯಾಜಿಸ್ಟ್ರೇಟರ ಮುಂದ ಹಾಜರ ಆಗಲಿಕ್ಕೆ ದಾದಾ ಒಪ್ಪಬೇಕಲ್ಲ" ಎಂದು ಬಾಳಾಚಾರ್ಯರು ಸಂಶಯ ತೆಗೆದರು.

"ಯಾಕೋ ದಾದಾ, ಜಾಮೀನ ಕೊಟ್ಟು ನಿನ್ನ ಬಿಡಿಸಿಕೊಂಡು ಬರೋ ಕೆಲಸ ಸಸ್ತಾದೀತಂತಿಯೋ ಇಲ್ಲಂತಿಯೋ!"

"ಹ್ಯಾಗ ಹೇಳಬೇಕರಿ ಕುಲಕರ್ಣ್ಯಾರ? ನಿನ್ನಿನತನ ನೀವು ಪಡದಪ್ಪ ಬಾಪ್ರೀಸಾಹೇಬರ ಸಕ್ಕಿಸಂಗ ಆಡ್ಯಾಡತಿದ್ದಿರಿ. ಅಂಥವ್ಯಾಗ ಒಮ್ಮಾಕಲೇ ನಂಬಿಗಿ ಬಾ ಅಂದರ ಹ್ಯಾಗ ಬಂದೀತರೀ?"

"ತಮ್ಮಾ ನಿನಗ ಜಗತ್ತಿನ ಅನುಭವ ಇಲ್ಲ. ಇಂವ ನಿನಗ ಅಲ್ಲದವರು ನಿರಂ

ತರ ಅಲ್ಲದವರು ಅಂತ ತಿಳೀಬ್ಯಾಡ. ಇಂದ ನಿನಗ ಬೇಕಾದವರು ಶಾಶ್ವತ ನಿನಗ ಬೇಕಾದವರಾಗಿ ಇರತಾರ ಅಂತೂ ತಿಳೀಬ್ಯಾಡ ಗೆಳೆತನಾ, ದ್ವೇಷ ಇವು ಒಂದೊಂದು ಪ್ರಸಂಗದಿಂದ ಹುಟ್ಟಬರತಾವ, ಆ ಪ್ರಸಂಗದ ಮುಟ್ಟಿಗೆ ಅದರ ಲಾಭ ತೊಗೋಬೇಕು." ಎಂದು ಶೇಷಪ್ಪ ತನ್ನ ಜೀವನಾನುಭವದ ಸಾರವನ್ನೇ ಹೇಳಿ, ಒಂದು ಬಗೆಯ ಆತ್ಮಗೌರವದಿಂದ, ನಶ್ಯದ ಚಿಟಿಕೆಯೊಂದನ್ನೇರಿಸಿ ಆಚಾರ್ಯರ ಮುಖವನ್ನು ನೋಡಹತ್ತಿದ.

" ಅದೇನ ಮಾಡತೀ ಬಿಡು.ವಾರಸಾ ತಕರಾರೀ ಅರ್ಜಿ ನಿಕಾಲೀದ ವಿರುದ್ಧ ಅಪೀಲ ಮಾಡಿದರ ಫಾಯದೇ ಆದೀತು ಅಂತೀಯಾ?" ಎಂದರು ಆಚಾರ್ಯರು.

" ಲಿಂಗಪ್ಪನ ವಾರಸಾ ತ್ರಿಕಾಲಕ್ಕೂ ಆಗದ ಮಾತರೀ. ಗೋಪಾಳ ತಿಂದ ದ್ದಕ್ಕ ಮಾಮಲೇದಾರರು ಏನೇನೋ ಮಾಡಿದರು. ಅಪೀಲ ಮಾಡಿದರ ಅವನ ವಾರಸಾದ ಅರ್ಜೀ ಗಾಳೀಪಟ ಆದೀತು. ಜನನ ರಜಿಸ್ಟರದೊಳಗ 'ಶಂಕರೆಪ್ಪಾ ಜಾತಿ. ಕುರುಬರ' ಅಂತ ಸ್ಪಷ್ಟ ಅದ. ಅದನ್ನ ಹಾಜರ ಮಾಡಿಲ್ಲ. ಅಪೀಲಿಗೆ ಅದೊಂದs ಕಾರಣ ಸಾಕು."

ಶೇಷಪ್ಪನ ಮಾತಿನಿಂದ ಆಚಾರ್ಯರಿಗೆ ಉತ್ಸಾಹ ಬಂದಂತಾಯಿತು.ಊರಿನ ಅಭಿಮಾನಕ್ಕೋ, ಅಥವಾ ದುಡ್ಡಿನ ಆಸೆಗೋ ಶೇಷಪ್ಪ ತನ್ನ ಕಾಯದೇ ಜ್ಞಾನದ ಸಹಾಯವನ್ನು ನೀಡಿದ್ದ. ಶೇಷಪ್ಪನಿಗೆ ಯಾವಾಗಲೂ ಸ್ವಾರ್ಥದ ಮೇಲೆಯೇ ಕಣ್ಣು. ಪಡದಪ್ಪನಿಗೂ ಇವನಿಗೂ ಏನೋ ಮುರಗಡೆಯಾಗಿರಬೇಕೆಂದೇ, ಈಗ ಇತ್ತಕಡೆಗೆ ಬಂದಿರುವನೆಂಬ ಮಾತು ಸ್ಪಷ್ಟವೇ.ಆದರೆ ಅವನ ಸ್ವಾರ್ಥದ ಬೆನ್ನಿಗೆ ಇನ್ನೊಂದು ಪರಾರ್ಥ ಬೆನ್ನುಹಚ್ಚಿಕೊಂಡು ಕುಳಿತಿತ್ತು. ತಮ್ಮ ದೀರ್ಘವಾದ ಜೀವನಾನುಭವದಿಂದ ಆಚಾರ್ಯರು ಕಲಿತ ಪಾಠ ದುಃಖಪೂರ್ಣವಾಗಿತ್ತು. ಶೇಷಪ್ಪನಂಥವರೂ ಜಗತ್ತಿಗೆ ಅನಿವಾರ್ಯವಾಗಿದ್ದಾರೆಂಬುದು ಅವರಿಗೆ ಹೊಸ ತೇನಲ್ಲ.

ದಾದಾ ಆಚಾರ್ಯರ ಮನೆಯಿಂದ ನೆಟ್ಟಗೆ ಗೌಡರ ಮನೆಗೆ ಹೋ[illegible] ಪಾರ್ವ ತೆವ್ವನಿಗೆ ನಡೆದ ಸಂಗತಿಯನ್ನೆಲ್ಲ ಹೇಳಿದ. ಪಾರ್ವತೆವ್ವ, ಶೇಷಪ್ಪನಿಗೂ ತನ್ನ [illegible]ದ ನಿಗೂ ಸ್ನೇಹವಿದ್ದಾಗ ನಡೆದ ಅಘಟಿತ ಘಟನೆಗಳನ್ನು ಒಂದೊಂದಾಗಿ ಸ್ಮರಿಸಿ ಕೊಂಡು, ಈಗ ಶೇಷಪ್ಪನಿಗೆ ತನ್ನ ಮಕ್ಕಳ ಕಲ್ಯಾಣ ಮಾಡುವ ಬುದ್ಧಿ ಬಂದ ದ್ದನ್ನು ನೆನೆದು ಸದ್ಗದಿತಳಾದಳು.

ಅಂದು ಸಂಜೆ ಯಶವಂತರಾಯರು ಹಾವನೂರಿಗೆ ಹೋಗಲು ಕುದುರೆ
ಗಾಡಿ ಹಾಕಿ ಸಜ್ಜುಗೊಳಿಸಿದ್ದನ್ನು ನೋಡಿ ಬಾಪೂಸಾಹೇಬ, "ಅಲ್ಲೇನು ಕೆಲಸ
ಸ್ವಾಮೀ? ನಿಮಗ ಬೇಕಾದವರನ್ನು ಇಲ್ಲೇ ಕರಕಳಿಸತೀನಿ. ಚೈತ್ರಮಾಸ. ಸಂಜೀ
ಮುಂದ ಅಡ್ಡಮಳಿಗಾಳಿಗೆ ಸಿಕ್ಕೀರಿ" ಎಂದು ಉಸುರಿದ. ಯಶವಂತರಾಯರಿಗೆ
ತಮ್ಮ ಮನಸ್ಸಿನಲ್ಲಿದ್ದದ್ದನ್ನು ಸ್ಪಷ್ಟವಾಗಿ ಅವನಿಗೆ ಹೇಳಲು ಒಂದು ಸಂಧಿ ಸಿಕ್ಕಂ
ತಾಯಿತು.

"ಮುದುಕನ ಮ್ಯಾಗ ಇಷ್ಟೊಂದು ಕಕಲಾತಿ ಇದ್ದರ ನಾ ಹೇಳಿದ ಒಂದು
ಮಾತು ಕೇಳು. ನನಗ ತ್ರಾಸ ಆಗಬಾರದು ಅಂತ ಮನಸ್ಸಿದ್ದರ ನನ್ನ ಮಾತು
ಕೇಳಬೇಕು." ಎಂದರು.

ಬಾಪೂಸಾಹೇಬನಿಗೆ ಯಶವಂತರಾಯರು ಏನು ಹೇಳುವರೆಂಬುದು
ಗೊತ್ತಿತ್ತು. ಈಗ ಹಾವನೂರಿಗೆ ಅವರು ಹೊರಡುವ ಉದ್ದೇಶವೇನೆಂಬುದೂ
ಗೊತ್ತಿತ್ತು. ದಾದಾನ ಮೇಲಿನ ಫಿರ್ಯಾದಿಯನ್ನು ಹಿಂದೆಗೆದುಕೊಳ್ಳಲು ಹಾವ
ನೂರವರ ಮನವೊಲಿಸುವದು ಅವನಿಗೆ ಬೇಕಾಗಿರಲಿಲ್ಲ. ಅದನ್ನು ಯಶವಂತ
ರಾಯರೆದುರು ಆಡಿಯೂ ತೋರಿಸಿದನು. ಯಶವಂತರಾಯರಿಂದ, ಅದಕ್ಕೆ
ಉತ್ತರವಲ್ಲದೆ ಉಪದೇಶವೂ ಸಿಕ್ಕಿತು.

"ಒಟ್ಟ ನೀನು ಇಂಥವರ ಗೆಳೆತನಾನ ಬಿಡಬೇಕೂ ಅಂತ ನಾ ಹೇಳೂದು.
ನಾಳೆ ಲಕ್ಷ್ಮೀಬಾಯಿ ಈ ಊರಿಗೆ ಬಂದರ, ನಾನೂ ನಿನ್ನ ವಿರುದ್ಧ ನಿಲ್ಲತೀನಿ
ಅನ್ನೋ ಮಾತ ಮರೀಬ್ಯಾಡ" ಎಂದು ಎಚ್ಚರಿಕೆಯನ್ನು ಕೊಟ್ಟರು.

ಆದರೆ ಬಾಪೂಸಾಹೇಬ ಎಂದಿನಂತೆ ಪ್ರತಿವಾದಿಸಿದ. ಪಡದಪ್ಪನ ಸಮರ್ಥ
ನೆಯೂ ಆಯಿತು. ಮಾತಾಡುತ್ತ ಆಡುತ್ತ ಊರಲ್ಲಿ ಪಕ್ಷ-ಪಂಗಡಗಳಿರಬಾರ
ದೆಂಬ ಮಾತಿಗೆ ಬಂದಾಗ, ಬಾಪೂಸಾಹೇಬ ಆ ತಪ್ಪನ್ನೆಲ್ಲ ಬಾಳಾಚಾರ್ಯರ
ಮೇಲೆ ಹೊರಿಸಿದ. ಅವರೇ ತಪ್ಪು ಒಪ್ಪಿಕೊಂಡರೆ ಊರಲ್ಲಿ ಪಕ್ಷಗಳು ಎಳ
ುವದಿಲ್ಲ ಎಂದೂ ಸೂಚಿಸಿದ. ಲಿಂಗಪ್ಪನ ಮಾತು ಬಂದಾಗ ಅದೆಲ್ಲ ಪಡದಪ್ಪನಿಗೇ
ಗೊತ್ತೆಂದು ಹೇಳಿದ. ಕೊನೆಗೆ ಏನು ಮಾಡುವದೂ ಪಡದಪ್ಪನನ್ನು ಕೇಳಿಯೇ
ಎಂದು ಗಟ್ಟಿಯಾಗಿಯೇ ಹೇಳಿದ.

ಯಶವಂತರಾಯರೂ ಬಾಳಾಚಾರ್ಯರನ್ನು ಕೇಳಿಯೇ ತಮ್ಮ ಅಭಿ
ಪ್ರಾಯ ತಿಳಿಸುವದಾಗಿ ಹೇಳಿದರು. ಅಲ್ಲಿಂದ ನೆಟ್ಟಗೆ ಆಚಾರ್ಯ ಮನೆಗೇ

ಹೋದರು. ಬಾಪೂಸಾಹೇಬ ಪಡದಪ್ಪನವರೊಡನೆ ಆಲೋಚನೆ ನಡೆಸಿದ.

ಪಡದಪ್ಪನವರಿಗೆ ಶೇಷಪ್ಪನೊಡನೆ ಆದ ವಿರಸದಿಂದ ಹೆದರಿಕೆಯುಂಟಾಗಿತ್ತು. ಶೇಷಪ್ಪ ಆ ಪಕ್ಷವನ್ನು ಸೇರಿದರೆ ಹೇಗೆ? ತಮ್ಮ ಜೊತೆಗಿರುವತನಕ ಬೇಕಾದಷ್ಟು ಸಹಾಯ ಮಾಡಿದ್ದ. ಲಕ್ಷ್ಮೀಬಾಯಿ ತಿರುಗಿ ಊರಿಗೆ ಬಂದರೆ, ಹೊಲಗಳನ್ನೆಲ್ಲ ಬಾಪೂಸಾಹೇಬ ರೈತರ ಹೆಸರಿನಲ್ಲಿ ಹಚ್ಚಬಹುದೆಂದು ಹೇಳಿದ್ದ. ಲಿಂಗಪ್ಪನ ವಾರಸಾ ಪ್ರಕರಣದಲ್ಲಿಯೂ ಅವನ ಕಾಯದೇಸಹಾಯ ಅಗತ್ಯವಾಗಿತ್ತು. ಆದರೆ ಈಗ ಅವನನ್ನು ಯಾವುದಕ್ಕೂ ಕೇಳುವಂತಿರಲಿಲ್ಲ. ಅಂತಲೇ ಪಡದಪ್ಪನವರು ಇನ್ನೊಂದು ಉಪಾಯವನ್ನು ಯೋಚಿಸಿದರು. ಯಶವಂತರಾಯರು ಹೇಗೂ ಈಗ ಸಂಧಾನದ ಪ್ರಯತ್ನದಲ್ಲಿದ್ದಾರೆ. ಈಗಲೇ ಕೆಲ ಕರಾರುಗಳನ್ನು ಹಾಕಿ, ತೋರಿಕೆಗೆ ಸಂಧಾನವನ್ನು ಒಪ್ಪಿಕೊಂಡುಬಿಡಬೇಕು. ಈಗಲೇ ಯಶವಂತರಾಯರಿಗೆ ನಮ್ಮ ಕರಾರುಗಳನ್ನು ತಿಳಿಸಿಬಿಡಬೇಕು. ಮೊದಲನೆಯದಾಗಿ ಲಿಂಗಪ್ಪನಿಗೆ ಗೌಡಿಕಿ ವಾರಸಾ ಹಕ್ಕು ದೊರೆಯಬೇಕು; ಅವನು ಊರ ಗೌಡನಾಗಬೇಕು. ಎರಡನೆಯದಾಗಿ ದಾದಾನ ಮೇಲಿನ ಫಿರ್ಯಾದಿ ಸರಕಾರದಲ್ಲಿರುವದು; ಅದು ಖಟ್ಲೆರೀತಿಯಂತೆಯೇ ನಡೆಯಬೇಕು. ಹಾವನೂರವರು ತಾವು ಕೊಟ್ಟ ಫಿರ್ಯಾದಿಯನ್ನು ತಾವಾಗಿಯೇ ಹಿಂತೆಗೆದುಕೊಂಡರೆ ನೆಟ್ಟಗೆ. ಇಲ್ಲದಿದ್ದರೆ ದಾದಾ ಅವರ ಕ್ಷಮೆ ಕೇಳಿಕೊಳ್ಳಬೇಕು. ಈ ಕರಾರುಗಳಿಗೆ ಬಾಳಾಚಾರ್ಯರು ಒಪ್ಪಿಕೊಂಡು ಬಿಟ್ಟರೆ ಊರಲ್ಲಿ ಪಕ್ಷ-ಪಂಗಡಗಳಿಗೆ ಅವಕಾಶವೇ ಇಲ್ಲ.

ಆ ರಾತ್ರಿ ಊಟವಾದ ಮೇಲೆ ಬಾಪೂಸಾಹೇಬ ಯಶವಂತರಾಯರೆದುರು ಈ ಸೂಚನೆಯನ್ನು ಹೇಳಿದ. ಮೌನವಾಗಿ ಅದನ್ನೆಲ್ಲ ಕೇಳಿಕೊಂಡು, ಯಶವಂತರಾಯರು "ನಾ ಹೇಳಿದ್ದಕ್ಕ ಒಪ್ಪೂದಿಲ್ಲ ಅಂತ ಒಂದ ಮಾತಿನ್ಯಾಗ ಹೇಳಿದ್ದರ ಆಗತಿತ್ತಲ್ಲ! ಇಷ್ಟೆಲ್ಲ ದುಂಡು ಸುತ್ತೂದೇನು ಜರೂರ ಇರಲಿಲ್ಲ" ಎಂದು ಕಡ್ಡಿ ಮುರಿದಂತೆ ಒಂದು ಮಾತನಾಡಿ, ಹೆಚ್ಚು ಮಾತು ಬೆಳೆಸುವ ಅಪೇಕ್ಷೆ ಇಲ್ಲದೆ ಮಲಗಿಬಿಟ್ಟರು.

ನಸುಕಿನಲ್ಲಿಯೇ ಎದ್ದು ಕುದುರೆ ಹತ್ತಿ ಇಂದುಪುರಿಗೆ ಹೊರಟು ಹೋದರೆಂದು, ಬೆಳಕು ಹರಿದ ಮೇಲೆ ಬಾಪೂಸಾಹೇಬನಿಗೆ ಗೊತ್ತಾಯಿತು. ಮಾಮಾ ಸಿಟ್ಟಿಗೇಳುವರೆಂದು ಅವನಿಗೆ ಗೊತ್ತಿತ್ತು. ಆದರೂ ಈ ಸುದ್ದಿ ತಿಳಿದ ಮೇಲೆ ಮತ್ತಷ್ಟು ದುಃಖವಾಯಿತು. ತಾನು ಮಾಡುತ್ತಿರುವದು ತಪ್ಪೋ ಸರಿಯೋ

ಬಾಪೂಸಾಹೇಬನಿಗೆ ಗೊತ್ತಾಗುತ್ತಿರಲಿಲ್ಲ. ಮಾಮಾ ಒಮ್ಮೆಲೆ ಸಿಟ್ಟಿಗೆದ್ದು ಹೋದವ ರಲ್ಲ ಎಂದು ಅವರ ಬಗ್ಗೆಯೇ ವಿಚಾರ ಮಾಡುತ್ತಿರುವಾಗಲೇ, ಇನ್ನೊಂದು ಸಮಾಚಾರವೂ ಅವನಿಗೆ ತಿಳಿದು ಬಂತು. ಹವಾಲ್ದಾರನು ರಾತ್ರಿ ಬಂದು ದಾದಾ ನನ್ನು ಹಿಡಿಯಲು ಗೌಡರ ಮನೆಗೆ ಹೋದಾಗ, ದಾದಾನನ್ನು ಕುಲಕರ್ಣಿ ಶೇಷಪ್ಪ, ತಾಲೂಕಾ ಮ್ಯಾಜಿಸ್ಟ್ರೇಟರ ಮುಂದೆ ಹಾಜರ ಪಡಿಸಲು ಕರೆದುಕೊಂಡು ಹೋದನೆಂದು ಬಾಪೂಸಾಹೇಬನಿಗೆ ತಿಳಿದು ಬಂತು.

:: ೨೩ ::

ಜೈನರ ಜಿನ್ನಪ್ಪ ದಾದಾನ ಮೇಲಿನ ಖಟ್ಲೆಯಲ್ಲಿ ಜಾಮಿನಾಗಿ ಅವನನ್ನು ಬಿಡಿಸಿಕೊಂಡು ಬರಲು, ಪಾರ್ವತೆವ್ವ ಗೌಡತಿ ಹಾಗೂ ಬಾಳಾಚಾರ್ಯರ ಮಾತಿಗೆ ಮನ್ನಣೆ ಕೊಟ್ಟು, ದಾದಾನ ಸಂಗಡ ತಾಲೂಕಿಗೆ ಪ್ರಯಾಣ ಬೆಳಿಸಿದ. ಬೆಳಗಿನ ಜಾವವಾಗಿತ್ತು. ಮೂವರು ಹೋಗುವದು ಅಶುಭವೆಂದು ಜೊತೆಯಲ್ಲಿ ವಾಲೀ ಕಾರ ಮಲ್ಲಪ್ಪನೂ, ದಾದಾ, ಶೇಷಪ್ಪ, ಜಿನ್ನಪ್ಪ ಈ ತ್ರಿಮೂರ್ತಿಗಳ ಜೊತೆಯಲ್ಲಿ ನಡೆದಿದ್ದ. ಚೈತ್ರಮಾಸದ ಉರಿಬಿಸಿಲು ಮೂಡುವದರೊಳಗೆ ತಾಲೂಕು ಮುಟ್ಟು ವಂತೆ ಇವರ ಕಾರ್ಯಕ್ರಮ ನಿಶ್ಚಿತಗೊಳಿಸಲಾಗಿತ್ತು.

ವಾರಸಾ ತಕರಾರೀ ಅರ್ಜಿಯನ್ನು ಕಿತ್ತಿ ಹಾಕಿದ ಮಾಮಲೇದಾರರ ತೀರ್ಪಿನ ವಿರುದ್ಧ ಪ್ರಾಂತಕಚೇರಿಗೆ ಪಾರ್ವತೆವ್ವನ ಅಪೀಲು ಮಾಡುವದು ಗೊತ್ತಾಗಿತ್ತು. ಈ ಅಪೀಲಿನ ಬಗ್ಗೆ ಹಾಗೂ ದಾದಾನನ್ನು ಜಾಮಿನಿನ ಮೇಲೆ ಬಿಡಿಸುವ ಬಗ್ಗೆ ತಗಲುವ ವೆಚ್ಚವನ್ನು, ಪಾರ್ವತೆವ್ವನ ಪರವಾಗಿ ಜಿನ್ನಪ್ಪ ಮಾಡಬೇಕೆಂದು ಗೊತ್ತಾಗಿತ್ತು. ಶೇಷಪ್ಪನ ಸಲಹೆಯಂತೆ ಇನ್ನೂರು ರೂಪಾಯಿಯ ಹಮ್ಮಿಣಿ ಯನ್ನು ಜಿನ್ನಪ್ಪ ಟೊಂಕಕ್ಕೆ ಬಿಗಿದುಕೊಂಡಿದ್ದ.

ಜಿನ್ನಪ್ಪನಿಗೆ ಎಂದಿಲ್ಲದ ಉತ್ಸಾಹ ಹಾಗೂ ಸಂಭ್ರಮಗಳುಂಟಾಗಿದ್ದವು. ಅವನು ತನಗೆ ತಿಳಿಯಹತ್ತಿದ ಮೇಲೆ ಐವತ್ತು ಮಳೆಗಾಲಗಳನ್ನು ನೋಡಿದ್ದಾಗಿ ಹೇಳುತ್ತಿದ್ದನು. ಯಾವ ವರ್ಷ ತೀರ ಹೆಚ್ಚು ಮಳೆ ಬಿತ್ತು, ಯಾವ ವರ್ಷ ತೀರ

ಕಡಿಮೆ ಮಳೆಯಾಯಿತೆಂದು ಹೇಳುವಷ್ಟು ಅವನ ಸ್ಮರಣಶಕ್ತಿ ಜಾಗೃತವಾಗಿತ್ತು. ತಾನು ಕೆಲಸ ಮಾಡುವ ಹೊಲ-ತೋಟಗಳಲ್ಲಿ ಒಂದು ಮಣ್ಣು ಹೆಂಟೆ ಅತ್ತಿತ್ತ ಕದಲಿದರೂ ಅವನಿಗೆ ತಿಳಿಯುತ್ತಿತ್ತು. ಆದರೆ ತನ್ನ ಜೀವನದಲ್ಲಿ ಅವನೆಂದೂ ತಾಲೂಕನ್ನು ನೋಡಿರಲಿಲ್ಲ. ಮೊಟ್ಟಮೊದಲನೆಯ ಸಲ ತಾಲೂಕಿಗೆ ನಡೆದದ್ದ ರಿಂದ ಅವನ ಮನಸ್ಸು ವಿಚಿತ್ರ ಭಾವನೆಗಳಿಂದ ಗೊಂದಲಗೆಟ್ಟಿತ್ತು. ಶೇಷಪ್ಪನಿಗೆ ಈ ಮಾತನ್ನು ಕೇಳಿ ಇದೂ ಒಂದು ಅನುಕೂಲವೇ ಅನ್ನಿಸಿತು.

ತಾಲೂಕು ಕಚೇರಿಯ ಆವಾರದಲ್ಲಿ ದಾದಾ ಹಾಗೂ ಜಿನ್ನಪ್ಪ ಇವರನ್ನು ಬಿಟ್ಟು ಶೇಷಪ್ಪ ಕಚೇರಿಯ ಒಂದು ಕೋಣೆಯಲ್ಲಿ ಹೋಗಿ ಕುಳಿತ. ಖಾಕೀ ಸಮವಸ್ತ್ರ ಧರಿಸಿದ ಪೋಲೀಸರು ಅತ್ತಿತ್ತ ಓಡಾಡುವದನ್ನು ನೋಡಿ ಜಿನ್ನಪ್ಪನಿಗೆ ಹರಣವೇ ಹಾರಿದಂತೆನಿಸಿತು.

“ದಾದಾ, ಹೊರಗ ಆ ಬೈಲಾಗs ಕುಂತರ ಪಾಡಾಗಾಕಿಲ್ಲs? ಮಲ್ಲ ಇಲ್ಲೇ ಇರತಾನು. ಕುಲಕರ್ಣ್ಯಾರು ಹೊರಗ ಬಂದು ಕರೀ ಅಂತ ಹೇಳಿದವ್ರ್ಯಾಗ ನಮಗ ಬಂದು ಆ ಮಜಕೂರ ತಿಳಸತಾನು.” ಎಂದು ತಾಲೂಕ ಕಚೇರಿಯಿಂದ ಹೊರಗೆ ಬೀಳುವ ಸೂಚನೆ ಮಾಡಿದ.

ದಾದಾನಿಗೆ ಈ ಮಾತು ಒಪ್ಪಿಗೆಯಾಗಲಿಲ್ಲ. ಆವಾರದಲ್ಲಿಯೇ ಜನರು ಗುಂಪುಗುಂಪಾಗಿ ಕುಳಿತು ಹರಟೆ ಕೊಚ್ಚುತ್ತಿರುವಾಗ ಹೊರಗೇಕೆ ಹೋಗಬೇಕು? “ಇರಲಿ ಬಿಡು ಕಾಕಾ. ಇಲ್ಲೇ ನೆಳ್ಳ ಐತಿ; ನೆಲಾನೂ ಹಸನ ಐತಿ. ಮತ್ತ ಹೋಗಿ ಕುಂಡ್ರೂದರ್‍ಕ ಎಲ್ಲೆ ಈ ಕೆಟ್ಟ ಬಿಸಿಲಿನ್ಯಾಗ?” ಎಂದು ದಾದಾ ಜಿನ್ನಪ್ಪನ ಮಾತಿಗೆ ಲಕ್ಷವನ್ನೇ ಕೊಡಲಿಲ್ಲ.

ಜಿನ್ನಪ್ಪನ ಕಾಲು ನಿಂತಲ್ಲಿಯೇ ನಡುಗುತ್ತಿದ್ದವು. ಹುಬ್ಬಿನ ಮೇಲೆ ಬೆವರುಹನಿ ಸಾಲುಗಟ್ಟಿತ್ತು. ಪೋಲಿಸರು ಬಂದು, ದಾದಾನ ಮೇಲೆ ವಾರಂಟು ಜಾರಿಮಾಡಿ,ಅವನನ್ನು ಜೇಲಿಗೆ ಹಾಕಿದರೆ ಏನು ಗತಿ? ಅವನನ್ನು ಒಳಗಿಂದೊಳಗೆ ಕೊರೆಯುತ್ತಿದ್ದ ಚಿಂತೆ ಇದು. ದಾದಾನನ್ನು ಪೋಲೀಸರಿಗೆ ಒಪ್ಪಿಸಿ ಮರಳಿ ಹೋದರೆ ಊರಲ್ಲಿ ಮುಖ ತೋರಿಸದಂಥ ಪರಿಸ್ಥಿತಿ. ಪಾರ್ವತೆವ್ವನೆದುರಿಗೆ ಆಣೆ ಮಾಡಿ, ಜಾಮಿನು ಕೊಟ್ಟು, ದಾದಾನ ಮೇಲಿನ ವಾರಂಟು ರದ್ದುಮಾಡಿಸಿ ಕೊಂಡು ಬರುವದಾಗಿ ಹೇಳಿಬಂದ ತಾನು ಆ ವಚನ ಪಾಲಿಸದಿದ್ದರೆ ಹೇಗೆ? ಇತ್ತ ಶೇಷಪ್ಪನಲ್ಲಿಯೂ ಅವನಿಗೆ ನಂಬಿಕೆಯಿಲ್ಲ. ಕಚೇರಿಗೆ ಹೋದ ಕೂಡಲೆ

“ಎಲಿಗೆ ಸುಣ್ಣಾಹಚ್ಚೂದರಾಗ ದಾದಾನ ವಾರಂಟು ರದ್ದಾತಂತ ತಿಳಿ” ಎಂದು ಹೇಳಿದ ಮಹಾರಾಯ, ತಾಸು ಕಳೆದರೂ ಹೊರಗೆ ಬರಬಾರದೆಂದರೆ? ಜಿನ್ನಪ್ಪನಿಗೆ ಮೊದಲಿನಿಂದಲೂ ಈ ಲೆಕ್ಕಣಿಕೆಯ ವೀರರನ್ನು ಕಂಡರೆ ಭೀತಿ. ಅವನ ಮನಸ್ಸಿನಲ್ಲಿ ಇಲ್ಲದ ಸಂಶಯಗಳು ತಾಂಡವವಾಡಹತ್ತಿದವು. ಹೇಳಿಕೇಳಿ ಶೇಷಪ್ಪ ಪಡದಪ್ಪನ ಪಕ್ಷದವ. ಅನಾಯಾಸ ದಾದಾನನ್ನು ಕಚೇರಿಗೆ ತಂದು ಜೇಲಿಗೆ ಅಟ್ಟಿ, ‘ಮಾಮಲೇದಾರರು ಜಾಮೀನಿನ ಮ್ಯಾಲೆ ಬಿಡೂದುಲ್ಲ ಅಂತಾರಲ್ಲೋ’ ಎಂದು ದನಿಯೆಳೆದರೆ ಎನು ಗತಿ? ಶೇಷಪ್ಪನ ಇತಿಹಾಸವೆಲ್ಲ ಇಂಥ ಕತೆಗಳಿಂದಲೇ ಚಿತ್ರಿತವಾಗಿತ್ತು. ಈ ವಿಚಾರಗಳಿಂದ ಜಿನ್ನಪ್ಪನಿಗೆ ಅಲ್ಲಿ ಕೂಡಲಾಗಲಿಲ್ಲ. ಆದರೆ ಹಾಗೆ ಹೇಳಿ ದಾದಾನ ನಿಶ್ಚಿಂತವಾದ ಮನಸ್ಸನ್ನು ಕದಡಿಸುವ ಹಾಗೂ ಇಲ್ಲ. ಹೀಗಾಗಿ ಜಿನ್ನಪ್ಪ ನಿಂತಲ್ಲಿಯೇ ನಡುಗುತ್ತ ಕಾತರಭಾವದಿಂದ ಶೇಷಪ್ಪನ ಮಾರ್ಗಪ್ರತೀಕ್ಷೆ ಮಾಡಹತ್ತಿದನು.

ಜಿನ್ನಪ್ಪನಿಗೆ ನಿಮಿಷಗಳು ಯುಗಗಳಾಗಿ ಪರಿಣಮಿಸಿದವು. ದಾದಾ ಕೂತೂಹಲದಿಂದ, ಆದರೆ ನಿಶ್ಚಿಂತೆಯಿಂದ ಸುಮ್ಮನೆ ಅತ್ತಿತ್ತ ನೋಡುತ್ತಿದ್ದ. ಜಿನ್ನಪ್ಪ ಒಮ್ಮೆ ಬಿಳಿಯ ಮೀಸೆಯನ್ನು ತಿದ್ದಿಕೊಳ್ಳುತ್ತ, ರುಮಾಲು ಸರಿ ಮಾಡಿಕೊಳುತ್ತ, ಬೆವರೊರೆಸಿಕೊಳ್ಳುತ್ತ, ಶೇಷಪ್ಪ ಹೊಕ್ಕ ಕೋಣೆಯಲ್ಲಿಯೇ ನಟ್ಟ ಕಣ್ಣುಳ್ಳವನಾಗಿ ನಿಂತಿದ್ದ. ಶೇಷಪ್ಪ ಬೇರೊಂದು ಕೋಣೆಯಿಂದ, ಜಿನ್ನಪ್ಪ ನಿಂತ ಸ್ಥಳಕ್ಕೆ ಅವನ ಹಿಂಬದಿಯಿಂದ ಬಂದು “ಜಿನ್ನಪ್ಪ ದಾದಾ ಇದ್ದಾನಿಲ್ಲೋ” ಎಂದು ಕೇಳಿದ್ದಾಗ ಜಿನ್ನಪ್ಪ ಮೆಟ್ಟಿಬಿದ್ದು ತಡವರಿಸುತ್ತ “ಇ....ಲ್ಲೇ....ಅ....ದಾ....ನ....ಲ್ರಿ” ಎಂದ. ಶೇಷಪ್ಪ “ಹಾಂಗಾರ ನೆಟ್ಟಗಾತು. ಲಗೂನ ಒಂದ ರೂಪಾಯಿ ತಗಿ” ಎಂದು ಹೇಳಿದ್ದು ಕೇಳಿದಾಗ ಜಿನ್ನಪ್ಪನಿಗೆ ಇನ್ನೊಂದು ಪೇಚು ಬಿದ್ದಂತಾಯಿತು.

ಸುತ್ತಲೂ ಜನರಿದ್ದಾರೆ, ಪೋಲೀಸರು ತಿರುಗಾಡುತ್ತಿದ್ದಾರೆ, ಹೇಳಿಕೇಳಿ ಕಚೇರಿ. ಇಂಥಲ್ಲಿ ಎಲ್ಲರಿಗೂ ಕಾಣುವಂತೆ ಹಮ್ಮಿಣಿಯನ್ನು ಬಿಚ್ಚಿ ೧ ರೂಪಾಯಿ ತೆಗೆಯುವದು ಜಿನ್ನಪ್ಪನಿಗೆ ಇಷ್ಟವಿರಲಿಲ್ಲ. ಆದರೆ ರೂಪಾಯಿ ಈಗ ಇಲ್ಲ ಎಂದು ಹೇಳುವ ಧೈರ್ಯವೂ ಇರಲಿಲ್ಲ. ಏನೋ ವಿಚಾರಿಸಿದಂತೆ ಮಾಡಿ, “ರೂಪಾಯರೇ, ಈಗ ಕೆಲಸಾ ಸಾಗಸರಿ” ಎಂದು ಮೋಘವು ಮಾತಾಡಿ ಬಿಟ್ಟ.

ಶೇಷಪ್ಪನಿಗೆ ಸಿಟ್ಟು ಬಂತು. ಜಿನ್ನಪ್ಪನನ್ನು ದುರುದುರು ನೋಡುತ್ತ, ಎಡಗಡೆಗೆ ಕೈ ಬೀಸುತ್ತ “ಜಾಮೀನಿನ ಮ್ಯಾಲೆ ಬಿಡಲಿಕ್ಕೆ ಅರ್ಜಿ ಬರದದ. ಅದಕ್ಕ

ಎಂಟಾಣೆ ತಿಕೀಟ ಹಚ್ಚಬೇಕು. ಸಾಗಸರಿ ಅಂದರ ಏನ ನನ್ನ ತಲಿ ಸಾಗಸಲಿ?" ಎಂದು ಅಕ್ಕಸದಿಂದಲೇ ನುಡಿದ. ಕೈಯಲ್ಲಿದ್ದ ಕಾಗದದ ಚೂರೊಂದನ್ನು ಮುದ್ದಿ ಮಾಡಿ ಬೀಸಾಡಿದ.

ಜಿನ್ನಪ್ಪನ ಮುಖದಲ್ಲಿ ಹುಚ್ಚುಕಳೆ ಸುರಿಯಲಾರಂಭಿಸಿತು. ಬೈಸಿಕೊಂಡ ಹುಡುಗನಂತೆ, ಸಣ್ಣ ಮುಖ ಮಾಡಿಕೊಂಡು, ಮನಸ್ಸಿನಲ್ಲಿಯೇ ಏನೇನೋ ಒಟಗುಟ್ಟಿದ. ತಲೆಯ ಮೇಲಿನ ಚಿಂದಿಚಿಂದಿಯಾದ ರುಮಾಲನ್ನು ತೆಗೆದು, ಅದರ ಒಂದು ತುದಿಯಲ್ಲಿ ಕಟ್ಟಿದ ಮೂರಾಣೆ ಮೂರು ಬಿಲ್ಲಿ ಶೇಷಪ್ಪನ ಕೈಗೆ ಹಾಕಿ, "ಈಗ ಈಟs ರೊಕ್ಕ ಹೊಂಟಾವು, ಸಾಗ ಆಗಲಾಕಿಲ್ರಿ?" ಎಂದು ಹುಚ್ಚು ನಗೆ ನಕ್ಕ.

ಶೇಷಪ್ಪನಿಗೆ ಬ್ರಹ್ಮಾಂಡ ಸಿಟ್ಟು ಬಂತು. ಆದರೂ ತಡಕೊಂಡ. ರೈತರಿಂದ ಹಣವನ್ನು ಬಿಚ್ಚುವದು ತನ್ನ ಕರ್ತೃತ್ವಶಕ್ತಿಯಲ್ಲಿಯ ಒಂದು ಮಹತ್ವದ ಅಂಗ ವೆಂದು ಅವನು ಅಭಿಮಾನದಿಂದ ಹೇಳಿಕೊಳ್ಳುತ್ತಿದ್ದ. ಈಗ ಅದರ ಪರೀಕ್ಷಾ ಕಾಲವೇ ಒದಗಿ ಬಂದಿತ್ತು. ರೈತ ಹೊಲದ ಫಸಲಿನ ಬಗ್ಗೆ ಉದಾರನಾಗಿರುವಷ್ಟು ಹಣದ ಬಗ್ಗೆ ಇರುವದಿಲ್ಲ. ಜಿನ್ನಪ್ಪ ತನ್ನ ತೋಟದ ಫಸಲನ್ನೆಲ್ಲ ಕೇಳಿದ್ದರೆ ಸಂತೋಷದಿಂದ ಕೊಡಬಲ್ಲವನಾಗಿದ್ದ. ಆದರೆ ಹಣ ಕೊಡುವದೆಂದರೆ ಅವನ ಜೀವದ ಸುತ್ತು ಬರುತ್ತಿತ್ತು. ಅಂತಲೇ ಶೇಷಪ್ಪ ತಪಸ್ವಿಯ ತಾಳ್ಮೆಯಿಂದ, "ಈಗ ನಿನ್ನ ಹತ್ತರ ಇಷ್ಟs ಅವೇನು?" ಎಂದು ಗಾಳ ಹಾಕಿದ.

ಸುಳ್ಳು ಹೇಳುವದು ಜಿನ್ನಪ್ಪನ ಮನೋಭಾವವೇ ಅಲ್ಲ. "ಈಟs ಅಂತ ತಿಳಕೊಂಡಿದ್ನಿರಿ. ನಮ್ಮಾಕಿ ಹುಡುಗರಿಗೆ ತಿನ್ನಾಕ ಏನರೆ ತೊಗೊಂಬಾ ಅಂತ ಬಗಲಬಂಡಿ ಬಕ್ಕಣದಾಗ ರೊಕ್ಕಾ ಹಾಕತೀನಂದಿದ್ಲು. ಅಲ್ಲೇನರs ಹೊಂಡತಾ ವೇನೋ ನೋಡತೀನ್ರಿ" ಎಂದು ಬಗಲಬಂಡಿಯ ಕಿಸೆಯಲ್ಲಿ ಕೈಹಾಕಿ, ಚಿಲುಮೆ, ತಂಬಾಕ, ಒಂದು ಕರೀ ಅರಿವೆಯ ಪಟ್ಟಿ, ಚಿಕ್ಕ ಬೆಣಚುಗಲ್ಲು, ಚಕಮುಕಿ ಇವ ನ್ನೆಲ್ಲ ಒಂದೊಂದಾಗಿ ತೆಗೆದು ತೊಡೆಯ ಮೇಲೆ ಇಡಹತ್ತಿದ. ಜಿನ್ನಪ್ಪ ಆದಷ್ಟು ತಡವಾಗಲಿ, ಕೆಲಸ ಮುಗಿದು ಹೋಗಲಿ ಎಂದು ವೇಳೆಯನ್ನು ಕೊಲ್ಲುವವ. ಆದರೆ ಶೇಷಪ್ಪನದೋ ಅಸಾಧ್ಯ ಗಡಿಬಿಡಿ. ತಾಳ್ಮೆಗೆಟ್ಟು ಆ ಸಾಮಾನುಗಳನ್ನೆಲ್ಲ ನೋಡುವದೇ ಒಂದು ಕೆಲಸವಾಯಿತು ಅವನಿಗೆ. ಕೊನೆಗೆ ಆ ಸಮುದ್ರಮಂಥನ ದಲ್ಲಿ ಹೊರಟ ರತ್ನವೆಂದರೆ, ಎರಡು ಚವಲಿಗಳು ಮಾತ್ರ.

ಸಿಟ್ಟು ಬಂದಿದ್ದರೂ ಅದನ್ನು ತೋರಗೊಡದೆ, "ಇನ್ನೂ ಒಂದು ದುಡ್ಡು ಕಡಿಮಿ ಬಿತ್ತಲ್ಲೋ ಜಿನ್ನಪ್ಪಾ? ತಿಕೀಟು ಏನು ಉದ್ರಿ ಕೊಡತಾರಂತ ತಿಳದೀ ಏನು? ಮತ್ತ ಅರ್ಜಿ ಬರೆಯಾಂವಗ ಎಂಟಾಣೆ ಕೊಡಬೇಕು. ಜಾಮೀನ ಪತ್ರಾ ಬರೆಸಿ ಹಾಜರ ಮಾಡೋದು, ಜಾಮೀನಿನ ಮ್ಯಾಲೆ ಬಿಡಲಿಕ್ಕೆ ಹುಕುಂ ಬರೆಯೋದು ಇದೆಲ್ಲಾ ಮ್ಯಾಜಿಸ್ಟ್ರೇಟ-ಕಾರಕೂನನ ಕೆಲಸ. ಅವನೂ ಏನ ಸಾಮಾನ್ಯ ಇಲ್ಲ. ಕನಿಷ್ಠ ನೂರು ರೂಪಾಯಿ ಕೊಡಸೂ ಅಂತ ಕೂತಿದ್ದ. ಬಡವ, ಏನೂ ಇಲ್ಲ ಅಂತ ಅರದಾಡಿ ಐವತ್ತಕ್ಕ ಮುಗಿಸಿಕೊಂಡು ಬಂದೆ. ಅವನ್ನ ನಿಂತ ಕಾಲಮ್ಯಾಲೆ ಎಣಿಸಬೇಕು. ನೀನೆಲ್ಲರೆ ಚವಲಿ ಪಾವಲಿ ತಗದರ ಕೆಲಸ ನಡಿಯೂದಿಲ್ಲ. ನಿನಗ ಹೇಳಿರತೀನಿ ಜಿನ್ನಪ್ಪಾ, ತಾಲೂಕ ಕಚೇರ್‍ಯಾಗ ಕಾರಕೂನರು ಪಾವಲಿ ಅಂದರ ೨೫ರೂ. ಆಠ ಆಣೆ ಅಂದರ ೫೦ರೂ. ಒಂದ ರೂಪಾಯಿ ಅಂದರ ನೂರು ರೂಪಾಯಿ ಅಂತ ತಿಳಕೋಬೇಕಾಗತದ. ಒಂದ ರೂಪಾಯಿ ತಗಿ ಅಂತ ನಾ ಆಗಳೇ ಅಂದಾಗ ನೀನು ನೂರು ಅಂತ ತಿಳಕೋಬೇಕಾಗಿತ್ತು. ನಿನ್ನ ಕಡೆ ಅಷ್ಟು ಇದ್ದಿಲ್ಲಾ ಅಂದರ ಊರಿಗೆ ಹೋಗು, ವ್ಯವಸ್ಥಾ ಮಾಡಿಕೊಂಡು ಬಾ. ತಿರುಗಿ ಬರೋತನಕಾ, ದಾದಾನ್ನ ಪೋಲೀಸರು – ಆಕಾ ಬಂದೂಕು ಹಿಡಕೊಂಡು ನಿಂತಾರಲ್ಲಾ – ಅವರ ಕೈಯಾಗ ಕೊಟ್ಟು ಹೋಗಬೇಕಾಗತದ." ಎಂದು ಒಂದು ದೀರ್ಘ ಭಾಷಣವನ್ನೇ ಬಿಗಿದು, ಅದರ ಪರಿಣಾಮವನ್ನು ಜಿನ್ನಪ್ಪನ ಮುಖದ ಮೇಲೆ ಓದಹತ್ತಿದ.

ಇನ್ನು ಹಮ್ಮಿಣಿ ಬಿಚ್ಚದೆ ನಿರ್ವಾಹವಿಲ್ಲವೆಂದು ಜಿನ್ನಪ್ಪನಿಗೆ ಗೊತ್ತಾಯಿತು. ಅಸಹಾಯನಾಗಿ ಅದನ್ನು ಬಿಚ್ಚಿ, ಐವತ್ತು ರೂಪಾಯಿ ಎಣಿಸಿ ಶೇಷಪ್ಪನ ಕೈಗೆ ಹಾಕುತ್ತ "ಕುಲಕರ್ಣ್ಯಾರ, ನೀ ಹೇಳಿದ್ಹಾಂಗ ರುಪಾಯಿ ಕೊಟ್ಟ ಕುಂತೀನು. ಜಾಮೀನಿನ ಮ್ಯಾಗ ಹುಡುಗನ್ನ ಗಡಾನs ಮೋಕಳೀಕ ಮಾಡಬೇಕ ನೋಡ ಮತ್ತ" ಎಂದು ಹತ್ತುಸಾರೆ ಅಂದ ಮಾತನ್ನೇ ಅಂದ. ಎಣಿಸಿದ ರೂಪಾಯಿಗಳನ್ನೇ ಮತ್ತೆ ಎಣಿಸಿದ.

"ಅದಕ್ಯಾಕೋ ಚಿಂತಿ ಜಿನ್ನಪ್ಪ. ಈಗ ನಾ ಒಳಗ ಹೋಗಿ ಅರ್ಜಿ ಮ್ಯಾಲೆ ಶರಾ ಬರೆಸಿದ ಕೂಡಲೇ ಪೋಲೀಸರು ಬರತಾರ. ದಾದಾ ಅವರ ಜೋಡೀ ಹೋಗಿ ಮಾಮಲೇದಾರ ಮುಂದ ನಿಲ್ಲಬೇಕು. ನೀನೂ ಹೋಗಬೇಕಾಗತದ ಅವನ ಜತೀಲೆ. ಜಾಮೀನ ಆಗತೀಯಾ ಅಂತ ಕೇಳತಾರ. ನೀ ಹೂಂ ಅನ್ನು

ತೀರಿತು" ಎಂದು ಹೇಳಿದವನೇ ಶೇಷಪ್ಪ ಕಚೇರಿಯ ಒಂದು ಕೋಣೆಯನ್ನು ಹೊಕ್ಕ.

ಅವನು ಹೇಳಿದಂತೆ ಪೋಲೀಸ ಹವಾಲ್ದಾರನು ಬಂದು ದಾದಾನನ್ನು ಮಾಮಲೇದಾರರ ಮುಂದೆ ಒಯ್ದು ನಿಲ್ಲಿಸಿದ. ದಾದಾನನ್ನು ಜಾಮೀನಿನ ಮೇಲೆ ಬಿಡುವ ಹುಕುಮು ಆಯಿತು. ಶೇಷಪ್ಪ ಪೋಲೀಸ ಹವಾಲ್ದಾರರಿಗೆ "ಎಲೆ ಅಡಿಕೆ" ಕೊಡಲು "ನಾಲ್ಕಾಣೆ ತಗಿ" ಎಂದಾಗ ಜಿನ್ನಪ್ಪ ತಡವರಿಸದೆ ಹಮ್ಮಿಣಿ ಬಿಚ್ಚಿದ. ಅತ್ತಿತ್ತ ಹುಡುಕಾಡಿದಂತೆ ಮಾಡಿ "ಚಿಲ್ಲರ ಇಲ್ಲಲ್ಲರೀ ಕುಲಕರ್ಣ್ಯಾರ" ಎಂದು ಶೇಷಪ್ಪನ ಮುಖ ನೋಡಿದ.

"ನಾಲ್ಕಾಣೆ ಅಂದರ ಇಪ್ಪತ್ತೈದು ರುಪಾಯೋ ಮಹಾರಾಯಾ ! ನಾ ಆಗಳೇ ಹೇಳಿದ್ದು ಇಷ್ಟ ಲಗೂನ ಮರತೇನು?"ಎಂದು ಶೇಷಪ್ಪ ನಗೆಯಾಡಿದ.

ಹಮ್ಮಿಣಿಯೊಳಗಿನ ಹಣದ ಆಯುಷ್ಯ ಕ್ಷಯವಾಗುವದನ್ನು ನೋಡಿ ಜಿನ್ನಪ್ಪನಿಗೆ ಚೇಳು ಕಡಿದಂತಾಗಿತ್ತು. ತಾಲೂಕ ಕಚೇರಿಗೆ ಬಂದ ಮೊಟ್ಟ ಮೊದಲ ಅನುಭವ ಅವನಿಗೆ ಕಟುವಾಗಿ ಪರಿಣಮಿಸಿತ್ತು. ಸುತ್ತಲಿನ ಅಪರಿಚಿತ ಜನರು, ಯಮದೂತರಂತೆ ನಿಂತ ಪೋಲೀಸರು, ಆತ್ಮೀಯತೆಯ ಗಂಧವೇ ಇಲ್ಲದ ಸರಕಾರೀ ಕಟ್ಟಡ ಇವೆಲ್ಲವುಗಳಿಂದ ಪಾರಾಗಿ ಒಮ್ಮೆ ಊರು ಸೇರಿದರೆ ಸಾಕೆನಿಸಿತ್ತು. ಇನ್ನೊಮ್ಮೆ ಕಚೇರಿಗೆ ಕಾಲು ಹಾಕುವದೇ ಸಾಧ್ಯವಿಲ್ಲವೆಂದು ಮನಸ್ಸಿನಲ್ಲಿಯೇ ಪ್ರತಿಜ್ಞೆ ಮಾಡುತ್ತ, ಹಮ್ಮಿಣಿಯಿಂದ ಇಪ್ಪತ್ತೈದು ರೂಪಾಯಿ ಬಿಚ್ಚಿ ಶೇಷಪ್ಪನ ಕೈಗಿತ್ತ.

ತಾಲೂಕ ಕಚೇರಿಯಿಂದ ತಿರುಗಿ ಹೊರಟಾಗ ಜಿನ್ನಪ್ಪನ ಮುಖ ಸಂತೋಷದಿಂದ ಅರಳಿತ್ತು. ಏನೇ ಆಗಲಿ, ಒಮ್ಮೆ ದಾದಾನ ಮೇಲಿನ ವಾರಂಟು ರದ್ದು ಪಡಿಸಿಕೊಂಡೆವಲ್ಲ ಎಂಬ ಉತ್ಸಾಹ, ಹಮ್ಮಿಣಿ ಹಗುರಾದ ವಿಷಾದವನ್ನೂ ಕೂಡ ಅರ್ಧಕ್ಕರ್ಧ ಕಡಿಮೆ ಮಾಡಿತ್ತು.

ಲಿಂಗಪ್ಪನ ವಾರಸಾ ಸಂಬಂಧದಲ್ಲಿ ಮಾಮಲೇದಾರರು ಮಾಡಿದ ಹುಕುಮಿನ ವಿರುದ್ಧ ಅಪೀಲು ಮಾಡುವ ಕೆಲಸವೊಂದೇ ಇನ್ನು ಉಳಿದಿತ್ತು. ಅದನ್ನೊಂದು ಮುಗಿಸಿಕೊಂಡು ಊರಿಗೆ ಮರಳಿದರೆ ಕೃತಕೃತ್ಯನಾದಂತೆ ಎಂಬ ಉತ್ಸಾಹದಲ್ಲಿದ್ದ ಜಿನ್ನಪ್ಪ ಶೇಷಪ್ಪನಿಗೆ ದಾರಿಯಲ್ಲಿ ಆ ಕೆಲಸದ ನೆನಪು ಮಾಡಿಕೊಟ್ಟ.

"ಹೌದಲ್ಲೋ, ಅದೊಂದು ಕೆಲಸ ನಾ ಮರೆತು ಬಿಟ್ಟಿದ್ದೆ. ನೆನಪು ಮಾಡಿದ್ದು ಛಲೋ ಮಾಡಿದಿ. ವಕೀಲರ ಮನಿಗೆ ಹೋಗೂಣು ನಡಿ. ತಾಸಿನ್ಯಾಗs ಈ ಕೆಲಸಾ ಮುಗಿಸಿಕೊಂಡು ಪ್ಯಾಟೀ ಕಡಿಗೆ ಹೋಗಿ ಬರೂಣಂತ" ಎಂದು ಶೇಷಪ್ಪ ಈ ತ್ರಿಮೂರ್ತಿಗಳನ್ನು ತನ್ನ ಪರಿಚಯಸ್ಥರಾದ ಒಬ್ಬ ವಕೀಲರ ಕಡೆಗೆ ಕರೆದುಕೊಂಡು ನಡೆದ.

ಶೇಷಪ್ಪ ತೋರಿಸಿದ ಕಾಗದಪತ್ರಗಳನ್ನೆಲ್ಲ ತಮ್ಮ ವೃತ್ತಿಗೊಪ್ಪುವ ಸಾವಧಾನದಿಂದ ವಕೀಲರು ನೋಡಿಕೊಂಡರು. ಶೇಷಪ್ಪನಿಗೆ ಏನೇನೋ ಪ್ರಶ್ನೆಗಳನ್ನು ಮಾಡಿ ಮಾಹಿತಿಯನ್ನೂ ಕಲೆಹಾಕಿದರು. ಆಮೇಲೆ ಚಾಳೀಸು ತೆಗೆದು ಟೇಬಲ್ಲಮೇಲೆ ಇಡುತ್ತ, "ಅಪೀಲು ಮಾಡಿದರ, ಮಾಮಲೇದಾರರ ಆರ್ಡರು ನಿಶ್ಚಿತ ರದ್ದಾಗತದ. ಕೇಸ ಗಟ್ಟಿಮುಟ್ಟ ಅದs." ಎಂದು ಆಸೆ ಹುಟ್ಟಿಸುವ ಮಾತುಗಳನ್ನಾಡಿದರು.

"ಹಂಗಾರ ಅಪೀಲು ದಾಖಲ ಮಾಡ್ರಿ. ಪಾರ್ವತೆವ್ವನ ಕಡಿಂದ ವಕೀಲಿಪತ್ರಕ್ಕ ಸಹಿ ಮಾಡಿಸಿಕೊಂಡು ಬಂದೀನಿ. ಅಪೀಲ ಅರ್ಜಿ ಬರಿಸಿ ಕೊಟ್ಟರ ಅವರ ಸಹಿ ಮಾಡಿಸಿ ಕಳಿಸಿಕೊಡತೀನಿ" ಎಂದು ಶೇಷಪ್ಪ ಹೇಳಿದ.

"ವಕೀಲಿ ಪತ್ರ ತಂದೀರೆಪ. ಆದರ ಫೀ ಹಣ ಎಲ್ಲ್ಯದ?" ಎಂದು ನಯವಾಗಿಯೇ ಕೇಳಿ ವಕೀಲರು ಜೋರಾಗಿ ಆಕಳಿಸಿದರು.

"ಅಂದ್ಹಂಗs ವಕೀಲರ ಫೀ ಕೊಡಬೇಕಲ್ಲ ಜಿನ್ನಪ್ಪ?" ಎಂದು ಶೇಷಪ್ಪ ಜಿನ್ನಪ್ಪನ ಮುಖ ನೋಡಿದ.

ಮತ್ತೊಂದು ಪ್ರಸಂಗದಲ್ಲಾಗಿದ್ದರೆ ಜಿನ್ನಪ್ಪ ಏನು ಉತ್ತರ ಹೇಳುತ್ತಿದ್ದನೋ ಏನೋ! ಆದರೆ ಈಗ ಅವನು ಲಿಂಗಪ್ಪನ ವಾರಸಾ ರದ್ದು ಪಡಿಸುವ ಹುರುಪಿನಲ್ಲಿದ್ದ. ತಟ್ಟನೇ ಹಮ್ಮಿಣಿ ಬಿಚ್ಚಿ, "ಏಟ ಕೊಡಬೇಕಾದೀತರಿ?" ಎಂದು ಕೇಳಿದ. ಶೇಷಪ್ಪ ಕರಪಲ್ಲವಿಯಿಂದ ಒಂದು ಬೆರಳು ತೋರಿಸಿ, ನೂರು ರೂಪಾಯಿಯೆಂದು ಸೂಚಿಸಿದ. ಜಿನ್ನಪ್ಪನಿಗೆ ಎದೆ ಧಸಕ್ಕೆಂದರೂ ಅದನ್ನು ತೋರಗೊಡದೆ ರೂಪಾಯಿ ಎಣಿಸತೊಡಗಿದ. ಶೇಷಪ್ಪ ವಕೀಲರಿಗೆ ಅಷ್ಟು ಕೊಟ್ಟು "ಇಷ್ಟರಸ್ಯಾಲಿ ಈ ಕೆಲಸಾ ಮುಗಿಸಿಕೊಡಬೇಕು" ಎಂದು ದೇಶಾವರಿ ಮಾಡುತ್ತ ಬಿನ್ನವಿಸಿದ.

ಅವರಿಗೂ ಈ ಓಡಿತ-ಪೇಚುಗಳೆಲ್ಲ ಗೊತ್ತು. ಆದ್ದರಿಂದ, "ಈಗ ಇಷ್ಟs

ಕೊಡೂ ಮನಸ್ಸಿದ್ದರ ಕೊಡಿರಿ. ಮುಂದ ಕೆಲಸಾ ನಡಸೂ ಮುಂದ, ಮು
ಆದs ಅಲ್ಲಾ" ಎಂದು ಘೋರಣೆಯಿಂದ ಮಾತಾಡುತ್ತ ಎದ್ದರು.

ಇದೇ ಸಂಧಿ ಸಾಧಿಸಿ ಶೇಷಪ್ಪ, "ನಮ್ಮ ಹುಡುಗ ಇಲ್ಲೆ ನಿಂತಾನಲ್ಲಾ
ಇವನ ಮ್ಯಾಲ ಒಂದು ಕ್ರಿಮಿನಲ್ ಕೇಸ ಹಾಕ್ಯಾರ. ಆದಾವತೀಲೇ ಹಾಕಿ
ಖೊಟ್ಟಿ ಖಟ್ಲಿ ಏನ್ರೆಪಾ. ಈಗ ಜಾಮೀನ ಕೊಟ್ಟು ವಾರಂಟ ರದ್ದಮಾಡಿಸೇದ
ನಾಳೆ ಒಂದು ವ್ಯಾಳ್ಯಾ ಖಟ್ಲಿ ನಡೆದರ, ನೀವs ಖುದ್ದ ನಿಂತು ಖಟ್ಲಿ ನಡೆಸಿಕೊ
ಬೇಕು. ಅಂವಾ ತೀರಬಡವ. ಧರ್ಮಾರ್ಥ ಕೆಲಸ ಅಂತ ತಿಳದs ನೀವು ಕೆಲಸ
ಮಾಡಬೇಕು" ಎಂದು ಹುಸಿನಗೆ ನಗುತ್ತ ಬಿನ್ನವಿಸಿದ.

ವಕೀಲರ ಮುಖ ಒಮ್ಮೆಲೆ ಗಂಭೀರವಾಯಿತು; ಹುಬ್ಬು ಗಂಟಿಕ್ಕಿದವು
ಕಣ್ಣನೋಟ ಒಮ್ಮೆಲೆ ಕೂರಾಯಿತು. ಮೋಡ ಮುಸುಕಿ, ಕತ್ತಲೆಗವಿದ ಮೇಲೆ
ಮೋಡ ಗದ್ದರಿಸುವಂತೆ ಗದ್ದರಿಸಿದರು. "ಕ್ರಿಮಿನಲ್ ಕೇಸ ಅಂತೀರಿ, ಫುಕಟ
ಖಟ್ಲಿ ನಡಸಂತೀರಿ, ತಿಳಿಯೂದಲ್ಲ? ಕತ್ತಿಗೆ ಜ್ವರಾ ಬರೂವಂಥಾ ಮಾತ ಆಡ
ಬ್ಯಾಡ್ರಿ. ನನ್ನ ಜನ್ಮದಾಗ ನಾನು ಫೌಜದಾರಿ ಖಟ್ಲಿ ನೂರು ರೂಪಾಯಿ ಕೆಳಗ
ತೊಗೊಂಡು ನಡಿಸಿಲ್ಲ. ನಮಗೂ ಕೋರ್ಟಿನಾಗ ಕಿಮ್ಮತ್ತು ಇರತದೇನ್ರೆಪಾ"
ಎಂದು ದುರುದುರು ನೋಡಿದರು.

ಆದರೆ ಶೇಷಪ್ಪ ಬಿಡಲಿಲ್ಲ."ಊರಗಾರಿಕೆ ಕೆಲಸ ನೋಡ್ರಿ. ಹೋಳಿ ಹುಣ್ಣಿವಿ
ಬ್ಯಾಟಿ ಕಾಲಕ್ಕ, ಊರ ಮಾನ ಕಾಯಲಿಕ್ಕೆ ಅಂತ, ಇಂವಾ ಬಡದಾಡಿ ಬಂದ.
ಈಗ ರೊಕ್ಕಾ ಕೊಡಬೇಕೂ ಅಂದರ ಊರ ಜನರೆಲ್ಲ ಪಟ್ಟೀ ಹಾಕಿ ಕೊಡಬೇಕಾ
ಗತದ. ಅದಕ್ಕs ನಿಮಗ ನಾ ಹೇಳಬೇಕಾತು." ಅಂದ.

" ಖಟ್ಲಿ ಹಿಯರಿಂಗಿಗನಕಾ ಬರಲಿ. ಬಡವ, ಊರಗಾರಿಕಿ ಕೆಲಸಾ ಅಂದ
ಮ್ಯಾಲ ಏನೋ ಒಂದ ಹತ್ತಿಪ್ಪತ್ತು ರೂಪಾಯಿ ಸವಲತ್ತು ತೋರಸಬಹುದು,
ಫುಕಟ ಫೌಜದಾರಿಕಿ ಮಾತ್ರ ಇಲ್ಲಿ ನಡಿಯೂದುಲ್ಲ ಮತ್ತ" ಎಂದು ವಕೀಲರು
ತಮ್ಮ ವಿನೋದಕ್ಕೆ ತಾವೇ ಗಟ್ಟಿಯಾಗಿ ನಕ್ಕರು.

ಪೇಟೆಗೆ ಬಂದಾಗ ಜಿನ್ನಪ್ಪನ ಹತ್ತರ ಉಳಿದ ಹಣವೆಂದರೆ ಕೇವಲ ಇಪ್ಪ
ತ್ತೈದು ರೂಪಾಯಿ ಮಾತ್ರ. ಶೇಷಪ್ಪ ಧೋತರ ಜೋಡು, ಬೆಲ್ಲದ ಪೆಂಟಿ,
ಮೊಟ್ಟೆಯ ಜೋಡು, ಹೀಗೆ ಏನೇನೋ ಸಾಮಾನು ಖರೀದಿ ಮಾಡಿಕೊಳ್ಳುವ
ವಿಚಾರವನ್ನಿಟ್ಟುಕೊಂಡದ್ದು ಜಿನ್ನಪ್ಪನಿಗೆ ತಿಳಿಯಿತು. "ಕುಲಕರ್ಣ್ಯಾರs, ನನ್ನ

ಡೆ ಉಳಿದ ಹತ್ತೆಂಟು ರುಪಾಯಿಲೇ ನಾ ಸಂತೀ ಮಾಡಬೇಕಾಗೇತಿ. ನಿಮ್ಮ ಕಡೆ
ಕ್ಕ ಇದ್ದರ ಸಾಮಾನು ಖರೀದಿ ಮಾಡೂನು ವಾಜಿಮಿ" ಎಂದು ನಯವಾ
ಯೇ ಸೂಚಿಸಿದ.

ಶೇಷಪ್ಪ ಈ ಮಾತು ಕೇಳಿದ ಕೂಡಲೇ ಮತ್ತೊಂದು ಸೋಗು ತೆಗೆದ.
ಲ್ಲಿಲ್ಲದ ಸಿಟ್ಟಿನ ಆವಿರ್ಭಾವ ಅವನಲ್ಲಿ ಬಂದಿತು. "ಅಲ್ಲೋ ಜಿನ್ನಪ್ಪ, ಕಚೇರಿ
ರಕೂನರಿಗೆ, ಪೋಲೀಸರಿಗೆ, ವಕೀಲರಿಗೆ ಕೊಡುವಾಗ ನಿನ್ನ ಕಡಿಗೆ ದುಡ್ಡು
ತ್ತು. ಅದಕ್ಕೆಲ್ಲ ಕೊಟ್ಟು ನೀ ಬರಿಗೈ ಆಗಿರಬಹುದೇನಪಾ. ಆದರ ಮನಿ ಕೂಳು
ಂದು ನಿಮ್ಮಂಥವರ ಕೆಲಸ ಮಾಡಲಿಕ್ಕೆ ಅಡ್ಡಾಡಿ ನಾನೂ ಬರಿಗೈ ಆಗೀನೇನಪಾ.
ನಾ ಅನಕಾ ಸಂತೀ ಮಾಡಲಿಕ್ಕೇಬೇಕು. ಇದಕ್ಕ ದಾರಿ ಏನು?" ಎಂದು ಕೇಳಿದ.

"ದಾರಿ ಏನರಿ? ಊರ ದಾರಿ ಹಿಡಿದು ಗಾಡಿ ಬಿಡುದೊಂದು ದಾರಿ.
ಬಂಗಾರಿ ಅಡ್ಡಮಳಿ ಕವರಿಕೊಂಡು ಬಂದು ಗಂಟೆ ಬಿದ್ದಿತಂದರ ಹಳ್ಳಕಟ್ಟಿ,
ಲ್ಲೇ ಶಾರದಾಗs ವಸ್ತೀ ಬೀಳಬೇಕಾದೀತು. ಇನ್ನೊಮ್ಮೆ ಬಂದಾಗ ಸಂತೀ
ಮಾಡೀರಂತ" ಜಿನ್ನಪ್ಪ ಹೇಳಿದ.

"ಅದೆಲ್ಲಾ ಆಗೂದುಲ್ಲ ಏನಪಾ. ನಾ ಈಗ ವಕೀಲರ ಕಡೆ ಹೋಗಿ
ವತ್ತು ರೂಪಾಯಿ ಇಸಗೊಂಡ ಬರತೀನಿ. ನಾಳೆ ಇನ್ನೂ ನೂರು ರುಪಾಯಿ
ಡೋವನ ಅಲ್ಲ? ಅದರ ಜೋಡೀನ ಇಪ್ಪೂ ರೊಕ್ಕ ಕಳಿಸಿಕೊಡೀಯಂತ"
ಂದು ಶೇಷಪ್ಪ ಹಟದಿಂದಲೇ ಹೇಳಿದ. ಕಿರಾಣಿ ಜವಳಿ ಸಂತೆಮಾಡಿಟ್ಟು, ಹಣ
ರುವದಾಗಿ ಹೇಳಿ ವಕೀಲರ ಕಡೆಗೆ ಹೋದ.

ಜಿನ್ನಪ್ಪ ತನ್ನ ಪೇಚು ತನಗೇ ಬಿದ್ದಿತಲ್ಲ ಎಂದು ಹಳಹಳಿಸುತ್ತ ಕುಳಿತಿದ್ದ.
ದನ್ನೆಲ್ಲ ಸಾದಾ ಪ್ರೇಕ್ಷಕನಂತೆ ನೋಡುತ್ತ ನಿಂತಿದ್ದ ದಾದಾ, "ಯಾಕ ಜಿನ್ನಪ್ಪ
ಕಾ, ಒಳ್ಳೇ ಚಿಂತಿ ಮಾಡೂ ಹಂಗ ಕಾಣತೈತಿ. ಹಿಡದ ಕೆಲಸ ಪಾರ ಆಗೂ
ಟಾ ಇನ್ನೂ ಏಟೇಟ ಜನರ ಕೈ ಬಾಯಿ ಬೆಚ್ಚಗ ಮಾಡೋದೈತೋ ಏನೋ!"
ಂದು ಸಾಂತ್ವನಗೊಳಿಸಲು ಯತ್ನಿಸಿದ. ಜಿನ್ನಪ್ಪ ಹಣೆ-ಹಣೆ ಬಡಿದುಕೊಂಡ.
ನ ಹೇಳತೀಲೇ ತಮ್ಮಾ, ಅಲೂ ಮಕ್ಕಳ ಕೈಯಾಗ ಒಂದ ದುಡ್ಡು ಕೊಡುದಾ
ಣೆಲ್ಲ. ಕಾಣಕಾಣತನs ಈ ಶ್ಯಾನಬೋಗ ಐವತ್ತು ರೂಪಾಯಿ ನೆಗವಿ
ಂತಾ" ಎಂದು ನಿಟ್ಟುಸಿರುಗರೆದ.

"ಕೊಂಡವಾಡೇ ಬಿದ್ದ ದನಾ, ಹೆಂಡಿ ಹಾಕದ ಪಾರಾದೀತs ಅಂತ ಗೌಡರು

ಹೇಳತಿದ್ದರಂತ. ಅದನ್ನs ನಡಸ್ಯಾನೋ ಎಪ್ಪಾ ಈ ಕುಲಕರ್ಣಿ. ಕೆಲಸ ಆಗ ಬೇಕಾತೂ ಅಂದರ ಇಂತವರ ಕಾಲs ಬೀಳಬೇಕಾಕ್ಕತಿ ಕಾಕಾ" ಎಂದ ದಾದಾ.

"ಸರಕಾರಿ ಕಚೇರಿ-ಕಟ್ಟಿ ಅಂದರ ಬಕಾಸುರನ ಹೊಟ್ಟಿ. ಈ ಮಾತು ಹಿರ್‍ಯಾರಿಗೆ ಗೊತ್ತಿತ್ತು. ಅಂದಲ್ಲೇ ಊರಾಗಿನ ನ್ಯಾಯ ಊರಾಗ ಬಗೀಹರೀ ತಿದ್ದವು. ಕಚೇರಿಗೆ ಬಂದಾಗಿಂದs ನೋಡ್ದೇ ನೋಡತೇನೊ, ರೊಕ್ಕ ಅನ್ನೊದು ಹುಣಚೀಪಕ್ಕ ಮಾಡಿದ ಮಹರಾಯ. ಮೂರು ತಾಸಿನ್ಯಾಗ ಹಮ್ಮಿಣಿ ಬರೇದ್ನು ಮಾಡಿ, ವ್ಯಾಗ ಸಾಲಾ ಹೊರಿಸಿಟ್ಟ. ಒಂದ ದಿನದಾಗ, ಒಂದು ವರ್ಷದ ಉತ್ಪನ. ಅಳದ ಇಟ್ಟರ ನಮ್ಮಂತಾ ಬಡವರ ಬಾಳೀ ಹ್ಯಾಗಾದೀತು ಅನ್ನೊ ಚಿಂತಿ ಏನರೇ ಐತೇ ಇಂವಗ?" ಎಂದು ಜಿನ್ನಪ್ಪ ಸ್ವಗತ ಭಾಷಣವನ್ನೇ ಮಾಡಿದ.

ಮಾತಾಡುತ್ತ ಆಡುತ್ತ ಇಬ್ಬರೂ ಊರ ಸುದ್ದಿಗೆ ಬಂದು ಮುಟ್ಟಿದರು ಬಾಪೂಸಾಹೇಬನ ಹೇಡಿತನ, ಗೌಡರ ಸಾವು, ಪಡದಪ್ಪನ ಕುತಂತ್ರ ಒಂದೊಂ ದಾಗಿ ಅವರ ಹರಟೆಯಲ್ಲಿ ಹಾದು ಹೋದವು. ಜಿನ್ನಪ್ಪ ಹಿಂದಿನ ಪಡದಪ್ಪನವರ ಗುಣಗೌರವಗಳನ್ನೆಲ್ಲ ಕತೆಮಾಡಿ ಹೇಳಹತ್ತಿದ. ಆ ಪುಣ್ಯಬಲದಿಂದಲೇ ಈ ಪಡದಪ್ಪನ ಪುಂಡಾಟಿಕೆ ಇನ್ನೂ ತಡೆದದ್ದು ಎಂದು ಅವನ ಅಭಿಪ್ರಾಯ. ಆದರೆ ಪಾಪದ ಕೊಡ ಪೂರ್ತಿಯಾಗಿ ತುಂಬದೆ ಗತಿಯಿಲ್ಲ. ತುಂಬಿದ ಮೇಲೆ ಅದಕ್ಕೆ ಚ್ಯುತಿಯಿದ್ದೇ ಇದೆ. ದಾದಾ ಅದಕ್ಕೆ ಪ್ರತಿಯಾಗಿ, ಊರ ಹಿರಿಯರೆಲ್ಲ ಕೂಡಿ ಇನ್ನೊಬ್ಬ ಸ್ವಾಮಿಯನ್ನೇಕೆ ಆರಿಸಬಾರದು ಎಂದು ಸೂಚನೆಯನ್ನೊಡ್ಡಿದ.

ಆಗಲೇ ವಕೀಲರ ಮನೆಯಿಂದ ಶೇಷಪ್ಪ ಬಂದದ್ದು ಅವರ ಲಕ್ಷ್ಯಕ್ಕೆ ಬಂದಿರಲಿಲ್ಲ. "ಮತ್ತೇನೋ ಜಿನ್ನಪ್ಪ ಹೊಸಬರ್‍ನ ಯಾರ್‍ನ ಆರಿಸಬೇಕಂತೀ?" ಎಂದ. ಜಿನ್ನಪ್ಪನಿಗೆ ನೇರವಾಗಿ ಉತ್ತರ ಕೊಡುವದಾಗಲಿಲ್ಲ. ಅಂತಲೇ "ಮತ್ತೇನ್ರಿ ವಕೀಲರ ಕಡಿಂದ ಹಣಾ ತಂದು ಸಂತಿ ಸಾಗಮಾಡಿಸಿದ್ರ್ಯಾ?" ಎಂದು ನಗುತ್ತ ಕೇಳಿದ.

ಶೇಷಪ್ಪನಿಗೂ ಮಾತು ಬೆಳೆಸುವದು ಇಷ್ಟವಿರಲಿಲ್ಲ. ಹೊತ್ತುಮುಳುಗುವ ದರೊಳಗಾಗಿ ಸಂತೆಯನ್ನು ಮುಗಿಸಿಕೊಂಡು ಊರ ದಾರಿ ಹಿಡಿಯಬೇಕಾಗಿತ್ತು. ಒಂದೆರಡು ದಿನಗಳಲ್ಲಿ ಮಾಮುಲೇದಾರರು ಪಾದಳ್ಳಿಗೆ 'ವ್ಹಿಜಿಟ್' ಕೊಡುವದಾಗಿ ದಾರಿಯಲ್ಲಿ ಸಿಕ್ಕ ಕಾರಕೂನನು "ತಾಜಾ ಬಾತಮಿ" ಕೊಟ್ಟಿದ್ದ. ಆದ್ದರಿಂದ ಶೇಷಪ್ಪನ ಸಂತೆಯ ಯಾದಿಯಲ್ಲಿ ಮಹತ್ವದ ಬದಲಾವಣೆಗಳಾದವು. ಬೆಲ್ಲದ

ಜೊತೆಗೆ ಸಕ್ಕರೆ, ಶೇಂಗಾದ ಜೊತೆಗೆ ಬದಾಮು, ಅರಿಷಿಣದ ಜೊತೆಗೆ ಕೇಶರ ಮೊದಲಾದ ಸಾಮಾನುಗಳು ಸೇರಿದವು.

ಸಂತೆಯನ್ನೆಲ್ಲ ಮುಗಿಸಿ ಸಾಮಾನನ್ನು ಗಾಡಿಯಲ್ಲಿ ಹೇರಿದಾಗ ಇನ್ನೂ ಒಂದು ತಾಸು ಹೊತ್ತು ಉಳಿದಿತ್ತು. ಪಾದಳ್ಳಿಯ ದಿಕ್ಕಿನಲ್ಲಿ ಮುಂಗಾರಿಯ ಮಳೆ ಮೋಡಗಳು, ತುಂಬಿ ಈಯಲಾದ ಎಮ್ಮೆಯ ಕೆಚ್ಚಲದಂತೆ ಇಳಿದಿದ್ದವು. ಅಂಥ ಹಗಲ ಬೆಳಕಿನಲ್ಲೂ ಮಿಂಚಿನ ರೇಖೆಯೊಂದು ವಕ್ರವಕ್ರವಾಗಿ ಸುಳಿದು ಕಣ್ಣು ಕುಕ್ಕಿಸುತ್ತಿತ್ತು. ಆಗಾಗ ಗದ್ದರಿಸುತ್ತಲೂ ಇತ್ತು. ಮಳೆಯ ಅಬ್ಬರವನ್ನು ನೋಡಿ ಜಿನ್ನಪ್ಪ ಬೆಳಗಿನ ಜಾವಕ್ಕೆ ಹೊರಟರೆ ಒಳ್ಳೆಯದೆಂದು ಹೇಳಿದ. ಶೇಷಪ್ಪ ಕೇಳಲಿಲ್ಲ. “ಛೇ ಛೇ ಮಾಮಲೇದಾರರು ಬರೋವರಿದ್ದಾರ ಮಾರಾಯಾ. ಬೆಳ ಗಾಗೂದರಾಗ ಊರು ಮುಟ್ಟಲಿಕ್ಕೇಬೇಕು ” ಎಂದು ಹೇಳಿಯೇಬಿಟ್ಟ. ಹೊರ ಡುವದು ಅನಿವಾರ್ಯವಾಯಿತು. ತಾಲೂಕ ಕಚೇರಿಯಲ್ಲೇ ಇಷ್ಟೊತ್ತು ಉಳಿ ದಿದ್ದ ವಾಲೀಕಾರ ಮಲ್ಲ, ಮಾಮಲೇದಾರರು ಊರಿಗೆ ಬರುವರೆಂಬ ಹುಕುಮಿನ ಪತ್ರದೊಂದಿಗೆ ಬಂದು ಇವರನ್ನು ಸೇರಿಕೊಂಡ.

ಸಾವಕಾಶವಾಗಿ ಹೊರಟ ಗಾಡಿ ಇನ್ನೂ ಅರ್ಧ ದಾರಿಯನ್ನು ಕ್ರಮಿಸಿರ ಲಿಲ್ಲ. ಅಷ್ಟರಲ್ಲಿ ಗಾಳಿಯ ಅಬ್ಬರ ಹೆಚ್ಚಾಗಿ ನೆಲದ ಮೇಲಿಂದ ಧೂಳಿಯ ಮೋಡ ವೆದ್ದು ಬಂದು, ಆಕಾಶವನ್ನೇ ಅಪ್ಪಿಕೊಂಡಿತು. ಚೈತ್ರದ ಉರಿಬಿಸಿಲಿಗೆ ಕಾದು ಕಾದು ಹುಚ್ಚು ಹಿಡಿದಿರಬೇಕು ಪ್ರಕೃತಿಗೆ ಎಂದೆನಿಸುತ್ತಿತ್ತು ಆ ಅಬ್ಬರ. ಸ್ಪರ್ಶ ವೇದ್ಯವಾಗಿದ್ದ ಗಾಳಿ ಈಗ ಕಣ್ಣಿಗೆ ಕಾಣುವಂತಾಯಿತು. ದಾರಿಯ ಗಿಡಮರ ಗಳೆಲ್ಲ ಹೊಯ್ದಾಡಿ ಗೋಳೋ ಎಂದು ಕೂಗಿಕೊಂಡವು. ಬಯಲುಸೀಮೆಯ ವಿಸ್ತಾರದಲ್ಲಿ, ಈಗ ಬರಿಯ ಕಪ್ಪುಗೆರೆಯಾಗಿದ್ದ ಕ್ಷಿತಿಜದಿಂದ ಓಡೋಡಿ ಬರುವ ಬಿರುಗಾಳಿ ನೆಲವನ್ನೇ ನುಂಗುವಂತಿತ್ತು. ಇನ್ನೂ ಸೂರ್ಯ ಮುಳುಗಿರಲಿಲ್ಲವಾದರೂ, ನಡುರಾತ್ರಿಯ ಕತ್ತಲೆ ವ್ಯಾಪಿಸಿತು. ಬಿರುಗಾಳಿಯ ಚೀತ್ಕಾರವೇ ಬಾನಲ್ಲಿ ಪ್ರತಿಧ್ವನಿಸಿಗೊಂಡಂತೆ, ಈ ತುದಿಯಿಂದ ಆ ತುದಿಯ ವರೆಗೆ ಬಾನು ಗದ್ದರಿಸಿತು. ಮಿಂಚು ಸನ್ನೆ ಮಾಡಿತು. ಆ ಬೆಳಕಿಗೆ ಎತ್ತುಗಳು ಮುಗ್ಗರಿಸಿದವು. ಇನ್ನೇನು ಚಿಂತಿಸುವಷ್ಟರಲ್ಲಿ ಮಳೆ ಬಂದೇಬಿಟ್ಟಿತು. ಮಾವಿನಕಾಯಿಯ ಗಾತ್ರದ ಮಳೆ ಹನಿಗಳು ಭಾರವಾಗಿ ಬಿದ್ದವು. ಗಾಡಿ ಒಂದು ಗಿಡದ ಆಸರಕ್ಕೆ ನಿಲ್ಲಬೇಕಾಯಿತು. ಸುದೈವಕ್ಕೆ ಹತ್ತಿರದಲ್ಲಿಯೇ ಒಂದು ತೋಟ ಕಂಡಿತು. ದಾದಾ, ಜಿನ್ನಪ್ಪ, ವಾಲೀ

ಕಾರ ಮಲ್ಲ, ಸರತಿಯ ಪ್ರಕಾರ ಸಾಮಾನನ್ನು ಹೊತ್ತು ತೋಟದ ಗುಡಿಸಲಿಗೆ ಸಾಗಿಸಿದರು. ಕೊರಳು ಹರಿದು ಎತ್ತುಗಳನ್ನು ತೋಟಕ್ಕೇ ಒಯ್ದರು.

ಅಂದು ಮಳೆಗೆ ಏನು ಕಸುವು ಬಂದಿತ್ತೋ ಏನೋ ಒಂದೇ ಗತಿಯಲ್ಲಿ ಎರಗಿತು. ಬಿರುಗಾಳಿ ಮನಸ್ಸಿಗೆ ಬಂದತ್ತ ಬೀಸುತ್ತ ನೇಲ-ಬಾನುಗಳಲ್ಲಿ ಕೋಲಾ ಹಲವನ್ನುಂಟುಮಾಡುತ್ತಿತ್ತು. ಅದನ್ನು ಪ್ರತಿಭಟಿಸುವಂತೆ, ಜೋರಾಗಿ ಮಳೆ ಹಚ್ಚಿ ಹೊಡೆಯುತ್ತಿತ್ತು. ಭೂತಾಕಾರದ ರಾಕ್ಷಸನೋರ್ವನ ರಣಗರ್ಜನೆಯಂತೆ ಗುಡುಗುತ್ತಿತ್ತು. ಗಾಳಿಯ ಕಣ್ಣು ತಪ್ಪಿಸಬೇಕೆನ್ನುವಂತೆ ಅದ್ಭುತವಾಗಿ ಮಿಂಚು ಬೆಳಗುತ್ತಿತ್ತು. ದಿಕ್ಕುಗಳೆಲ್ಲ ಕತ್ತಲೆಯಲ್ಲಿ ಕರಗಿ ಹೋಗಿದ್ದವು ಮಳೆ ನಡುಹರೆಯದ ಉಕ್ಕಿನಲ್ಲಿದ್ದಾಗ ನೆಲ-ಮುಗಿಲುಗಳ ನಡುವಿನ ಅಂತರವೆಲ್ಲ ಅಳಿಸಿ ಹೋಗಿ ಅಂತರಿಕ್ಷವೆಲ್ಲ ಜಲಮಯವಾಯಿತು.

ಸರಿರಾತ್ರಿಯ ವರೆಗೆ ಒಂದೇ ಗತಿಯಲ್ಲಿ ಸೊಕ್ಕಿನಿಂದ ಬೀಳುತ್ತಿದ್ದ ಮಳೆ ಒಮ್ಮೆ ತಣ್ಣಗಾಯಿತು. ಕ್ರಮವಾಗಿ ಎಲ್ಲ ಕಡೆಗೆ ಮೌನ ವ್ಯಾಪಿಸಿತು. ಇಷ್ಟೊತ್ತಿನ ದುಃಖ ತಾಪಗಳನ್ನೆಲ್ಲ ಒಂದೇಟಿಗೇ ಮರೆತು ನೇಲಮುಗಿಲುಗಳೆರಡೂ ಮತ್ತೆ ಮಧುರವಾದ ಮೌನದಲ್ಲಿ ಲೀನವಾದಂತಿತ್ತು. ಮಳೆಯಿಂದುಂಟಾದ ಸರುವುಗಳು ಹರಿಯುವ ಸಪ್ಪಳ ಮಾತ್ರ ಈಗ ಕೇಳತೊಡಗಿತು. ಜಿನ್ನಪ್ಪನ ಗಾಡಿ ಮತ್ತೆ ಪ್ರಯಾಣಕ್ಕೆ ಅಣಿಯಾಯಿತು. ಇನ್ನುಮೇಲೆ ಪಾದಳ್ಳಿಯವರೆಗೆ ಲೈನದಾರಿಯಿದ್ದದ್ದರಿಂದ ಗಾಡಿಯನ್ನು ಮುಂದೆ ಹೊಡೆಯುವದಕ್ಕೆ ಆತಂಕವಿರಲಿಲ್ಲ. ಗಾಡಿ ನಿಧಾನವಾಗಿ ಮುಂದೆ ಸಾಗಿತು.

ಆಕಸ್ಮಿಕವಾಗಿ ಬಂದ ಈ ಮಳೆಯಿಂದ ಗಾಡಿಯಲ್ಲಿದ್ದವರಾರೂ ಚಲಿತರಾಗಿರಲಿಲ್ಲ. ಇದು ಅವರಿಗೆ ದಿನನಿತ್ಯದ ಅನುಭವ. ಜಿನ್ನಪ್ಪ ಹಿಂದೆ ತನಗೆ ಬಂದ ಮಳೆಯ ಅನುಭವಗಳನ್ನೆಲ್ಲ ಹೇಳಹತ್ತಿದ. ವಾಲೀಕಾರ ಮಲ್ಲ ಸಂದರ್ಭೋಚಿತವಾಗಿ ಅಲ್ಲಲ್ಲಿ ತಿದ್ದುಪಡಿಯನ್ನು ಸುಚಿಸುತ್ತಿದ್ದ. ಜಿನ್ನಪ್ಪ ಚಿಲುಮೆ ಹೊತ್ತಿಸಿಕೊಂಡು, ಸುಖವಾಗಿ ಹೊಗೆ ಬಿಡುತ್ತಿದ್ದ. ಒಮ್ಮೆ ಚಕಮಕಿಯನ್ನು ಕಟಿಯುವಾಗ, ಹರಟೆಯ ಭರದಲ್ಲಿ ಲಕ್ಷ್ಯ ಹಾರಿ ಬೆಂಕಿಯ ಕಿಡಿ ಶೇಷಪ್ಪನ ಧೋತರದ ಮೇಲೆಯೇ ಬಿದ್ದಿತ್ತು. "ಸ್ವಲ್ಪ ನೋಡಿ ಹಚ್ಚೋ ಮಹರಾಯಾ! ಎಲ್ಲ್ಯರ ಚಕ್ಕಡಿಗೇ ಬೆಂಕೀ ಹಚ್ಚಿ ಇಟ್ಟೀ!' ಎಂದು ಶೇಷಪ್ಪ ಚೇಷ್ಟೆಯನ್ನೂ ಮಾಡಿದ.

ಗಾಡಿ ಅತ್ತ ಇತ್ತ ಒಮ್ಮೊಮ್ಮೆ ಮುಗ್ಗರಿಸುತ್ತ, ಸರುವುಗಳನ್ನು ದಾಟುತ್ತ

ಸಾವಕಾಶವಾಗಿ ಮುಂದೆ ಸಾಗಿತು. ದಟ್ಟವಾದ ಕತ್ತಲೆ ಕವಿದಿದ್ದರಿಂದ ಎಷ್ಟು ದೂರ ಬಂದಿರಬಹುದೆಂದು ಗೊತ್ತು ಹಿಡಿಯುವದು ಸುಲಭವಾಗಿರಲಿಲ್ಲ. ಆದರೆ ಜಿನ್ನಪ್ಪನಿಗೆ ಇಂಥವುಗಳ ಬಗ್ಗೆ ಸೂಕ್ಷ್ಮ ಇಂದ್ರಿಯವೇ ಇತ್ತು. ನಡುವೆ ಕುಲಕರ್ಣಿ ಶೇಷಪ್ಪ ಮುದ್ದೆಯಾಗಿ ಕುಳಿತು, ದಣಿವಿನಿಂದಲೋ ಬೇಸರದಿಂದಲೋ ಆಕಳಿಸಿದಾಗ "ಬೇಸರಾತೇನರಿ ಶೇಷಪ್ಪನೋರs?. ಆತೇಳ್ರಿ ಇನ್ನೊಂದು ನಂಬರು ದಾಟಿದರ ಊರಾಗs ಬಂದ್ರಿ" ಎಂದು ಅವನನ್ನು ಸಮಾಧಾನ ಪಡಿಸಿದ್ದ. ಅವನು ಹೇಳಿದಂತೆಯೇ ಗಾಡಿ ಪಾದಳ್ಳಿಯ ಸಮೀಪಕ್ಕೆ ಬಂದಾಗ ಪಾದಳ್ಳಿಯ ಭೂಮಿಯಲ್ಲಿ ಮುಗಿಲು ಮುಟ್ಟುವಂಥ ಉರಿ ಎದ್ದದ್ದು ಕಾಣಿಸಿತು. ಅದರ ಬೆಳಕಿನಲ್ಲಿ ಇಷ್ಟೊತ್ತಿನ ವರೆಗೆ ಕಾಣದಿದ್ದ ಪಾದಳ್ಳಿಯ ಸೀಮೆಯ ಗಿಡಮರಗಳೆಲ್ಲ ಒಮ್ಮೆಲೆ ಗೋಚರವಾದವು. ಮುಗಿಲೆಲ್ಲ ಸೂರ್ಯೋದಯದ ಕಾಂತಿಯಿಂದ ತುಂಬಿದಂತೆ ಕೆಂಪಾಗಿತ್ತು. ಆ ನೋಟವನ್ನು ನೋಡಿದೊಡನೆ ಜಿನ್ನಪ್ಪನ ಎದೆ ಝಲ್ಲೆಂದಿತು. ಒಮ್ಮೆಲೆ ಅವನ ಕಣ್ಣೆದುರಿಗೆ ತನ್ನ ತೋಟ, ತೋಟದಲ್ಲಿದ್ದ ಕಣಿಕೆಯ ಬಣವಿ, ಅಕಾಂಡ ತಾಂಡವವಾಡುವ ಬೆಂಕಿ, ಎಲ್ಲ ಪ್ರತ್ಯಕ್ಷವಾದವು. ತನ್ನ ಸಂಶಯದ ಸತ್ಯಾಸತ್ಯತೆಯನ್ನು ಪರೀಕ್ಷಿಸಬೇಕೆಂದು ವಾಲೀಕಾರ ಮಲ್ಲನಿಗೇ ಕೇಳಿದ: "ಮಲ್ಲಾ, ಆ ಉರಿ ನಮ್ಮ ತ್ವಾಟದಾಗಿಂದs ಇದ್ದೀತೇನಲೇ?"

ಮಲ್ಲನಿಗೂ ಗಾಬರಿಯಾಗಿತ್ತು. "ಹೌಂದ ಕಾಕಾ. ಜಾಗೀರದಾರರ ತ್ವಾಟದಾಗಿಂದ ಆ ದೊಡ್ಡ ಆಲದ ಮರ ಈ ಬೆಳಕಿನಾಗ ಕಾಣತತಿ. ಅಂದಮ್ಯಾಗ, ನಿಮ್ಮ ತ್ವಾಟದ ಆಜೂಬಾಜೂಕ್ಕ ಬೆಂಕಿ ಹತ್ತಿದ್ಹಾಂಗ ಕಾಣತತಿ" ಎಂದು ಸಂಶಯವನ್ನು ಮಲ್ಲ ಧೃಡಪಡಿಸಿದ.

"ಜಾಗೀರದಾರ ತ್ವಾಟದಾಗ ಈ ಪರಿ ಉರಿ ಏಳೂಹಾಗ ಬಣವಿನ್ಸ ಇಲ್ಲಲೇ ಮಲ್ಲಾ. ಗುಡಿಸಲು ಸುದೇಕ ದೊಡ್ಡದಿಲ್ಲ. ಈ ಸೀಮ್ಯಾಗೆಲ್ಲ ಕಣಕಿ ಬಣವಿ ಇಷ್ಟೊಂದು ನಂದೊಂದು. ಅದಕ್ಕs ಬೆಂಕಿ ಹತ್ತಿದ್ಹಾಂಗ ಕಾಣತೇತಿಲೇ" ಎಂದು ಎದೆಯೊಡೆದು, ಗೊಗ್ಗರದನಿಯಲ್ಲಿಯೇ ಹೇಳಿದ.

ತೂಕಡಿಸುತ್ತ ಚಕ್ಕಡಿಯ ಮಧ್ಯದಲ್ಲಿ ಕುಳಿತಿದ್ದ ಶೇಷಪ್ಪನಿಗೆ ಈ ಉರಿ ಕಾಣಿಸುತ್ತಿರಲಿಲ್ಲ. ಅವನ ಹಿಂದೆ ಕುಳಿತ ದಾದಾನಿಗೂ, ಬಿಗಿದ ಗುಡಾರದ ಮುಸುಕಿನಿಂದ ಕಾಣಿಸುತ್ತಿರಲಿಲ್ಲ. ಈ ಮಾತು ಕಿವಿಗೆ ಬಿದ್ದೊಡನೆ ದಾದಾ ಟಣ್ಣನೆ ಗಾಡಿಯಿಂದ ಕೆಳಗೆ ಜಿಗಿದು ಉರಿಯನ್ನು ನೋಡಿದ. ಆ ಉರಿ ಜಿನ್ನಪ್ಪನ

ಬಣಿವೆಗೆ ಹತ್ತಿದ್ದೇ ಎಂದು ಅವನಿಗೆ ಕೂಡಲೇ ಹೊಳೆಯಿತು. ಗಾಡಿಯು ಮುಂದೆ ಓಡಿ ಬಂದು "ಅಂಜಬ್ಯಾಡಾ ಕಾಕಾ. ಓಡಿಕೊಂತ ಹೋಗಿ, ಆ ಜಾಗಾ ನೋಡಿ ಊರಿಗೆ ಬರತೇನು. ಹೀಗs ದಾರಿ ಹಿಡಿದು ಗಾಡಿ ಸಾಗಲಿ" ಎಂದವನೇ ಉತ್ತರದ ದಾರಿಯನ್ನು ಕೂಡ ಕಾಯದೆ, ಚಿಗರೆಯ ಓಟದಿಂದ ಉರಿ ಕಾಣುವ ದಿಕ್ಕಿನತ್ತ ಓಡಿ ಹೋದ.

"ಲೇ ಮತ್ತ ಯಾರದರ ಕೂಡ ಜಗಳಾ ತಗದಿಟ್ಟೇ" ಎಂದು ಜಿನ್ನಪ್ಪ ಒದರಿಕೊಂಡದ್ದು ಅವನಿಗೆ ಕೇಳಿಸಲೇ ಇಲ್ಲ.

ಅನಿವಾರ್ಯವೆನ್ನುವಂತೆ ಗಾಡಿ ಮುಂದೆ ಸಾಗಿತು. ಹೊಟ್ಟೆಯೊಳಗಿನ ಉದ್ವೇಗವನ್ನು ತಡೆಯಲಾರದೆ ಜಿನ್ನಪ್ಪ ಎತ್ತುಗಳಿಗೆ ಬಾರಕೋಲಿನಿಂದ ಎರಡೇಟು ಬಿಗಿದದ್ದರಿಂದ ಅವು ಓಡಹತ್ತಿದವು. "ಬ್ಯಾಸಿಗಿ ದಿವಸ, ಒಣಗಿದ ಕಣಕಿ; ಬೆಂಕಿ ಹತ್ತಿದರ ಈಡಾದೀತರೇ" ಎಂದು ಮಲ್ಲ ಬಣಿವೆ ಪೂರಾ ಭಸ್ಮವಾಗುವದಲ್ಲ ಎಂದು ಮರಮರನೆ ಮರುಗಿದ. ಜಿನ್ನಪ್ಪನಂತೂ ಸಂಕಟದಿಂದ ದಿಙ್ಮೂಢನಾಗಿದ್ದ. ಎತ್ತುಗಳು ಬಾರಕೋಲಿನೇಟಿಗೆ ದಾರಿ ತಪ್ಪಿ ಓಡುತ್ತಿದ್ದಾಗ, ಅವುಗಳ ಹಣೆ-ಹಗ್ಗ ವನ್ನೂ ಜಗ್ಗುವ ಎಚ್ಚರ ಅವನಿಗೆ ಉಳಿದಿರಲಿಲ್ಲ. ಬೆಳ್ಳಗಿನ ಮೀಸೆಗಳಿಂದೊಪ್ಪುವ ಅವನ ಮುಖ ಒಂದು ಗಂಭೀರವಾದ ರೌದ್ರಭಾವವನ್ನು ತಳೆದಿತ್ತು.

"ಜಿನ್ನಪ್ಪ, ಬೆಂಕಿ ತಾನಾಗೇ ಹತ್ತಿದ್ದೇನ ಅಲ್ಲ. ನೀನು ದಾದಾನ್ನ ಜಾಮೀನ ಮ್ಯಾಲೆ ಬಿಡಿಸಿಕೊಂಡು ಬಂದದ್ದಕ್ಕ, ನಿನಗ ಬುದ್ಧಿ ಕಲಿಸಬೇಕೂ ಅಂತ ಪಡದಪ್ಪ ಹೂಡಿದ ಕಿಡಿಗೇಡಿತನ ಇದು. ನನಗನಕಾ ಹಂಗs ಅನಸತದ ನೋಡಪಾ" ಎಂದು ಮತ್ತೆ ಕಿಡಿ ಹಾಕಿದ.

ಈಗ ಮಾತ್ರ ಜಿನ್ನಪ್ಪನ ರಕ್ತ ರೊಚ್ಚಿನಿಂದ ಕುದಿಯಿತು. ಇಲ್ಲಿಯ ವರೆಗೆ ಯಾರ ಮೇಲೂ ಅವನ ಸಂಶಯ ಸ್ಥಿರವಾಗಿರಲಿಲ್ಲ. ಶೇಷಪ್ಪನ ಮಾತಿನಿಂದ ಅದು ರೂಪ ತಾಳಿತು. "ನನ್ನ ಕಣಿಕಿ ಬಣವಿ ಸುಟ್ಟರ, ನನ್ನ ನಸೀಬಾನ ಸುಟ್ಟಂಗ ಅಂತ ಆ ಪಡದಪ್ಪ ತಿಳಿಕೊಂತಿದ್ದರ, ಅಂವಗ ತಲೀ ಇಲ್ಲ ಅಂತ ತೋರಿಸಿ ಕೊಡತೀನರಿ" ಎಂದು ಹೇಳಿ ಸಿಟ್ಟು ತಡೆಯದೆ ಎತ್ತಿಗೆ ಮತ್ತೊಂದೇಟು ಬಿಗಿದ.

"ಅಲ್ಲ ಕಾಕಾ, ಬರಗಾಲ ದಿನದಾಗ ಮನಸ್ಯಾ ಎಲ್ಲೀದರೆ ಕಾಳ ತಂದು, ತಿಂದು ಬದಕತಾನ. ಮೂಕ ಜನಾವರ, ಕಣಿಕಿ ಇಲ್ಲದ ಉಪಾಸ ಸಾಯ್ಯಾಕ ಹತ್ಯಾವು. ಅಂತಾ ಹೊತ್ತಿನ್ಯಾಗ ಇದ್ದ ನಾಲ್ಕಾರು ಬಣಿವಿ ಸುಡೂದಂದರ, ಇವಕ

ಮನಶ್ಯಾರನಬೇಕೋ ಏನ ದನಾ ಆನಬೇಕೋ" ಎಂದು ಮಲ್ಲ ಅವಡುಗಚ್ಚಿಯೇ ಹೇಳಿದ. ಜಿನ್ನಪ್ಪನಿಗೆ ಬಣಿವೆ ಸುಟ್ಟದ್ದಕ್ಕಿಂತ, ಊರಲ್ಲಿ ಕೊಳ್ಳಿಹಚ್ಚುವ ಭಂಟರು ತಲೆಯೆತ್ತಿದರಲ್ಲ ಎಂದು ದುಃಖವಾಗಿತ್ತು. "ಮಲ್ಲಾ, ದೇವರು ತ್ವಾಟದ ಬಾವ್ಯಾಗ ಅಮೃದಾನ ನೀರು ಕೊಟ್ಟಾನ. ದುಡದು ಬೆಳಿ ಮಾಡೂ ಬಲಾ ನನ್ನ ರಟ್ಟ್ಯಾಗ ಕೊಟ್ಟಾನ. ಬೂಮಿತಾಯಿ ಅಂತಃಕರಣ ಇದ್ದರ, ಈಗ ಸುಟ್ಟದ್ದರ ಹತ್ತಪಟ್ಟ ಬೆಳೆದು ತೋರಿಸತೀನು. ತಿಂಗಳದಾಗ ಗೊಂಜಾಳ ಫಡಾ ಬೆಳೆಸಿ ದನದ ಬರಾ ಹಿಂಗಸೇನು. ಆದರ ಬಡವರು ಮಾತ್ರ ಸುಸೂತ್ರ ಬಾಳೇ ಮಾಡದ ಹಾಗ ಆತಲ್ಲ? ಈ ಕೊಳ್ಳೀಕವಕರ ಕಾಟ ತಪ್ಪಸೂದರ ಹ್ಯಾಗ? ಈ ಮಾತಽ ನನಗ ದಿಗಿಲ ಕೆಡವೇತಿ." ಎಂದು ಮತ್ತೊಂದು ಸ್ವಗತ ಭಾಷಣವನ್ನು ಬಿಗಿದ.

ಇದುವರೆಗೆ ತಡೆದ ಶೇಷಪ್ಪ "ಜಿನ್ನಪ್ಪ, ನೀ ಮನಸು ಮಾಡಿದರ ಹಾದಿ ಅದ ತೊಗೋ. ಊರಾಗಿನ ಸೋಟರಿಗೆಲ್ಲ ಪಡದಪ್ಪನ ಮಠಾನಽ ಆಶ್ರಯ. ಇತ್ತಿತ್ತಲಾಗ ಊರಾಗ ಅವನ ವಜನಽ ಕಮ್ಮಿ ಆಗಿತ್ತು. ಅದಕ ನೀ ಊರಾಗ ಇಲ್ಲದಾಗ ನೋಡಿಕೊಂಡು, ನಿನ್ನ ಬಣವಿಗೆ ಬೆಂಕಿ ಹಚ್ಚಿಸಿ, ತಾ ಖಂಬೀರ ಮನಶ್ಯಾ ಅಂತ ಹೊಗಳಿಸಿಕೊಳ್ಳಲಿಕ್ಕೆ ಮಾಡ್ಯಾನ. ಅವನ್ನ ಊರ ಬಿಟ್ಟು ಓಡಿಸಿದರ ಈ ಸೋಟರ ತಲೀ ಎಲ್ಲ ತಾಳದ ಮ್ಯಾಲ ಬರತದ. ಅವನ್ನ ಓಡಸೂದೂ ಏನ ಕಠಿಣ ಇಲ್ಲ. ನಿನ್ನ ಬಣವಿ ಸುಡಿಸ್ಯಾನ ಅಂತ ನಾಳೇ ಅವನ ಮ್ಯಾಲೆ ಒಂದು ಫಿರ್ಯಾದಿ ಕೊಡು. ಅನಾಯಾಸ ಮಾಮಲೇದಾರರು ಊರಿಗೆ ಬರೋವರಿದ್ದಾರ. ಅವರಿಗೆ ಅಡ್ಡಬಿದ್ದು ಹೇಳಿಕೋ. ಮುಂದಿನದೆಲ್ಲ ನನಗ ಬಿಟ್ಟುಕೊಡು" ಎಂದು ಸಲಹೆ ಹೇಳಿ ನಶ್ಯವನ್ನೇರಿಸಿದ.

ಜಿನ್ನಪ್ಪನಿಗೆ ಇಂಥ ಸೂಚನೆ, ಸಾಮಾನ್ಯ ಪರಿಸ್ಥಿತಿಯಲ್ಲಾಗಿದ್ದರೆ ಸಮಂಜಸವೆನಿಸಬಹುದಾಗಿತ್ತು. ಆದರೆ ಕಚೇರಿ-ಕಟ್ಟೆ ಹತ್ತುವದೆಂದರೆ, ಮನೆಮಾರು ಸೂರೆಮಾಡಿ, ವಕೀಲರ ಸಾಕ್ಷಿದಾರರ ಮನೆ ತುಂಬುವದೆಂಬ ಅನುಭವ ಅವನಿಗೆ ಹೊಸದಾಗಿಯೇ ಬಂದಿತ್ತು. ಅಂತಲೇ ನೇರವಾಗಿ ಉತ್ತರ ಹೇಳದೆ, "ಆಚಾರೆಪ್ಪ ನನಗೆಲ್ಲ ಹಿರೇರದಾರು. ಅವರು ಹೇಳಿದ್ಹಾಂಗ ಮಾಡಿದರಾತು" ಎಂದು ಹಾರಿಕೆಯ ಉತ್ತರ ಕೊಟ್ಟು ಸುಮ್ಮಗಾದ.

ಗಾಡಿಯು ಮರಡಿಯ ದಿನ್ನೆಯನ್ನಿಳಿದು ತಗ್ಗಿನಲ್ಲಿ ಸಾಗಿತ್ತು. ದಿನ್ನೆಯ ಮೇಲಿದ್ದಾಗ ಧಗಧಗಿಸುವ ಜ್ವಾಲೆಗಳು ಕಾಣುತ್ತಿದ್ದರೆ, ಈಗ ಆಕಾಶದಲ್ಲಿ ಕೆಂಪು

ಬೆಳಕು ಮಾತ್ರ ಕಾಣುತ್ತಿತ್ತು. ಮೂಡಲು ಹರಿಯಲು ಇನ್ನೂ ಮೂರು ತಾಸು ಗಳಿದ್ದರೂ ಜಿನ್ನಪ್ಪನ ತೋಟವಿದ್ದ ದಿಕ್ಕಿನಲ್ಲಿ ಆಗಲೇ ಹೊತ್ತು ಮೂಡಿದಂತೆ ಕಾಣುತ್ತಿತ್ತು.

:: ೨೪ ::

ಜಿನ್ನಪ್ಪನ ಗಾಡಿ ಊರು ಮುಟ್ಟಿದಾಗ ಇಡೀ ಊರು ನಿದ್ದೆಹೋಗಿತ್ತು. ಗಾಡಿಯ ಸಪ್ಪಳಕ್ಕೆ ನಾಯಿಗಳ ಬೊಗಳುವಿಕೆಯೊಂದನ್ನು ಬಿಟ್ಟರೆ ಎಲ್ಲೆಲ್ಲಿಯೂ ಶಾಂತಿ ಪಸರಿಸಿತ್ತು. ಊರಲ್ಲಿ ಯಾರಿಗೂ ಜಿನ್ನಪ್ಪನ ತೋಟದಲ್ಲಾದ ಅನಾಹುತದ ಸುದ್ದಿ ಇರಲಿಲ್ಲ. ಜಿನ್ನಪ್ಪನ ಮನೆಯಲ್ಲಿ ಅವನ ಹೆಂಡತಿ ಮಕ್ಕಳು ಸಹ ನಿಶ್ಚಿಂತರಾಗಿ ಮಲಗಿದ್ದರು. ಹಿಂದಿನ ರಾತ್ರಿ ಕಲ್ಲು ಸುರಿದಂತೆ ಸುರಿದ ಮಳೆಯಂತೆಯೇ, ಬೆಂಕಿಯೂ ಪ್ರಕೃತಿಲೀಲೆಯಲ್ಲಿಯೇ ಒಂದಾಗಿತ್ತು. ಅನಾಹುತಗಳ ಸ್ವರೂಪ ಬಹುಮಟ್ಟಿಗೆ ಮನುಷ್ಯನ ಕಣ್ಣೆದುರು ನಡೆಯುವದೇ ಇಲ್ಲ. ಅದರ ಪರಿಣಾಮ ಮಾತ್ರ ನಮ್ಮ ಕಣ್ಣಿಗೆ ಕಾಣುತ್ತದೆ. ಕಾಡಿನ ಅಜ್ಞಾತವಾದ ಹೃದಯದಲ್ಲಿ ಸಿಡಿಲೊಂದು ಎರಗಿಹೋದಂತೆ, ಜಿನ್ನಪ್ಪನ ತೋಟದಲ್ಲಿಯ ಬೆಂಕಿ ತನ್ನ ಪರಾಕ್ರಮವನ್ನೆಲ್ಲ ತೋರಿಸಿ ಈಗ ತಣ್ಣಗಾಗಿತ್ತು.

ಜಿನ್ನಪ್ಪನು ಮನೆಗೆ ಹೋಗದೆ, ಗಾಡಿಯನ್ನು ಅಗಸೆಯಿಂದ ನೇರವಾಗಿ ತೋಟದ ಕಡೆಗೇ ಬಿಟ್ಟನು. ಆದರೆ ತೋಟಕ್ಕೆ ಹೋಗಿ ಕಣಿಕೆಯೆಲ್ಲ ಹೆಚ್ಚಾಗಿ ಬೂದಿಯಾಗುವ ದೃಶ್ಯವನ್ನು ನೋಡುವ ಅವಕಾಶ ಅವನಿಗೆ ದೊರೆಯಲಿಲ್ಲ. ಊರಿಂದ ಅವನ ತೋಟ ಎರಡು ಮೈಲುಗಳ ಅಂತರದಲ್ಲಿತ್ತು. ಊರಿಂದ ಒಂದು ಮೈಲು ದೂರದಲ್ಲಿಯ ಹಳ್ಳವನ್ನು ಜಿನ್ನಪ್ಪನ ಗಾಡಿ ದಾಟುತ್ತಿರುವಾಗ, ಎದುರಿನಿಂದ ದಾದಾ ಒಬ್ಬರನ್ನು ಹೆಡಮುರಿಗೆ ಬಿಗಿದು ಒದೆಯುತ್ತ ಮುಂದೆ ಹಾಕಿಕೊಂಡು ಬಂದ.

" ಏನು ಸುದ್ದ್ಯೋ ದಾದಾ?" ಎಂದು ಜಿನ್ನಪ್ಪ ಕೇಳಿದ.

"ಕಾಕಾ ಆದದ್ದೆಲ್ಲ ಪಾಡು ಆಗೇತಿ. ತಳವಾರ ಕಲ್ಲ್ಯಾನ್ನ ಹಿಡಕೊಂಡು

ಬಂದೀನು. ಬಣವಿಗೆ ಬೆಂಕಿ ಹಚ್ಚಿದ. ಇವನ ಕೈ ಕಡದು ಹಾಕಿ ಇನ್ನೊಮ್ಮೆ ಊರಾಗ ಇಂತಾ ದಗದಾ ಮಾಡದ್ಹಾಂಗ ಮಾಡಬೇಕಂತ ಮಾಡಿದ್ನಿ. ಆದರ ಈ ಬಡಸೋಳೀಮಗನ ಕೈಕಡದರ, ಮುಂದ ಬಿಕ್ಕೆ ಬೇಡಿಕೊಂತ ಊರಿಗೆ ಭಾರ ಆಗಿ ಕೂಡತತಿ ಅಂತ ಹಾಗs ಕರಕೊಂಡ ಬಂದೀನು. ನಿನಗ ತಿಳದ್ಹಾಂಗ ಮಾಡು" ಎಂದು ದಾದಾ ಹೇಳಿದ.

"ಅವನ್ನ ಮದಲ ನೆಗವಿ ಗಾಡ್ಯಾಗ ಹಾಕು" ಎಂದು ಜಿನ್ನಪ್ಪ ಗಾಡಿಯನ್ನು ಹೊರಳಿಸಿದ.

ತಳವಾರ ಕಲ್ಲನಿಗೆ 'ಗಾಡಿ ಹತ್ತು' ಎಂದು ದಾದಾ ಗುದ್ದಿದಾಗ, ಅವನು ಜೋಲಿ ಹೊಡೆಯುತ್ತ ಗಾಡಿಯ ಹತ್ತರ ಬಂದು ನಿಂತನು. ಕೈಬಿಗಿದದ್ದರಿಂದ ಅವನಿಗೆ ಗಾಡಿ ಹತ್ತುವದು ಸಾಧ್ಯವಾಗಲಿಲ್ಲ. ದಾದಾ ಅವನನ್ನೆತ್ತಿ ಗಾಡಿಯಲ್ಲಿ ಕುಳ್ಳಿರಿಸಬೇಕಾಯಿತು.

ಗಾಡಿ ಊರ ಕಡೆಗೆ ಓಡಿತು. ಗಾಡಿಯ ಓಟಕ್ಕೋ ಅಥವಾ ಹೆಚ್ಚು ಕುಡಿದದ್ದರಿಂದಲೋ, ಹೆದರಿಕೆಯಿಂದಲೋ, ತಳವಾರ ಕಲ್ಲ ಗಾಡಿಯಲ್ಲಿಯೇ ಕಾರಿಕೊಂಡ. ಸೆರೆಯ ದುರ್ಗಂಧ ಅವನ ಕಾರಿಕೆಯಿಂದ ಗಾಡಿಯ ತುಂಬೆಲ್ಲ ಇಡುಗಿತು. ಆದರಿಂದ ಶೇಷಪ್ಪನಿಗೆ ಅಸಹನೀಯವೆನಿಸಿ ಮೂಗು ಮುಚ್ಚಿಕೊಂಡೇ ಕೂಡಬೇಕಾಯಿತು.

ವಾಂತಿಯಾದ ನಂತರ ಮದ್ಯದ ಅಮಲು ಇಳಿದು ಕಲ್ಲನಿಗೆ ತಾನೆಲ್ಲಿರುವೆನೆಂಬುದರ ಎಚ್ಚರ ಬಂದಿತು. ಜಿನ್ನಪ್ಪನ ಕಾಲು ಹಿಡಿದುಕೊಂಡು, ಹುಚ್ಚುಚ್ಚಾಗಿ ಅಳುತ್ತ "ನಾ ಮಾಡಿದ ತಪ್ಪು ಹೊಟ್ಟ್ಯಾಗ ಹಕ್ಕೊಂಡುಬಿಡು ಕಾಕಾ" ಎಂದು ಬೇಡಿಕೊಳ್ಳಲು ಕೈ ಮುಂದೆ ಮಾಡಬೇಕೆಂದಾಗ ಎರಡೂ ಕೈ ಬಿಗಿದದ್ದು ನೆನಪಾಯಿತು. ಕಲ್ಲ್ಯಾ ಸಣ್ಣ ಹುಡುಗರಂತೆ ಅಳಹತ್ತಿದ, ಹಲುಬಿದ.

"ಸುಮ್ಮನಾಗೋ ಸೋಳೀಮಗನs" ಎಂದು ದಾದಾ ಅವನಿಗೆ ಮತ್ತೊಂದು ಗುದ್ದಿದ. ಅದರ ಫಲವಾಗಿ ಮತ್ತೊಮ್ಮೆ ವಾಂತಿಯಾಯಿತು. ಮದ್ಯದ ಅಮಲು ಪೂರ್ತಿಯಾಗಿ ಇಳಿಯಿತು.

"ಬಣವಿಗೆ ಬೆಂಕಿ ಹಚ್ಚಿದ್ದು ತಪ್ಪ ಆತ ಕಾಕಾ. ನಿನ್ನ ಮಗಾ ಅಂತ ತಿಳದು ನನ್ನ ಉಗಳಿ ಬಿಡು ಕಾಕಾ. ನಿನ್ನ ಬಣವಿ ಕಿಮ್ಮತ್ತು ಪಡದಪ್ಪನ ಕಡಿಂದ ಕೊಡಸತೇನ ಕಾಕಾ. ಕುಡದಾಗ ಬುದ್ಧಿ ಕೈಯಾಗಿರಲಿಲ್ಲ ಕಾಕಾ" ಎಂದು ಅಲ್ಪರಿದು

ಗೋಳಾಡಹತ್ತಿದ. ಅವನ ಚೀರಾಟ ಒದರಾಟಗಳನ್ನು ತುಂಬಿಕೊಂಡೆ ಗಾಡಿ ಊರೊಳಗೆ ಬಂದಿತು. ವಾಲೀಕಾರ ಮಲ್ಲ ಮೊದಲೇ ಗಾಡಿಯಿಂದ ಊರೊಳಗೆ ಹೋದವನು, ಈ ಹೊತ್ತಿಗಾಗಲೇ ಬೆಂಕಿ ಹಚ್ಚಿದ ಸುದ್ದಿಯನ್ನು ಊರ ತುಂಬ ಹರಡಿದ್ದ. ಜನರು ಗುಂಪುಗುಂಪಾಗಿ ಗಾಡಿಯ ಎದುರಿಗೆ ಧಾವಿಸಿ ಬರುವದನು ನೋಡಿ ಜಿನಪ್ಪ "ದಾದಾ ಕಲ್ಲ್ಯಾನ ಬಿಡಿಸಿಕೊಂಡು ಹೋಗಲಾಕ ಪಡದಪ್ಪನ ಜನಾ ಬರೂಹಾಗ ಕಾಣತೇತಿ" ಎಂದ.

"ಪಡದಪ್ಪ ಅಷ್ಟು ದೊಡ್ಡ ಮನಸ್ಸಿನಾವಾ ಅಂತ ತಿಳದೀ ಏನು ಕಾಕಾ? ಕಲ್ಲ್ಯಾನ ಬಿಡಿಸಿಗೊಂಡು ಹೋಗೂ ಬಹದ್ದರ ಅವರ ಹಿಂಡಿನ್ಯಾಗs ಯಾವನೂ ಇಲ್ಲ. ಹೆದರಬ್ಯಾಡ ನೆಟ್ಟಗ ಚಾವಡಿಗೆ ಚಕ್ಕಡೀ ಬಿಡು" ಎಂದು ದಾದಾ ಆಶ್ವಾಸನವಿತ್ತ.

ಎದುರಿಗೆ ಬಂದ ಜನರು ಪಡದಪ್ಪನ ಅನುಯಾಯಿಗಳಾಗಿರದೆ, ಜಿನ್ನಪ್ಪನ ಹಿತಚಿಂತಕರೇ ಇದ್ದದ್ದನ್ನು ನೋಡಿ ಜಿನ್ನಪ್ಪನ ಭೀತಿ ದೂರವಾಯಿತು.

ಚಾವಡಿಯ ಕಂಬಕ್ಕೆ ತಳವಾರ ಕಲ್ಲನನ್ನು ಬಿಗಿದು ಕಟ್ಟಿದರು. ಊರ ಜನರೆಲ್ಲ ಚಾವಡಿಯಲ್ಲಿ ಕೂಡಿದರು. ಬಂದವರೆಲ್ಲ ಕಲ್ಲನ ಕೆನ್ನೆಗೊಂದು ಏಟು ಕೊಟ್ಟು "ಮೂಕ ಜನಾವರ ಅನ್ನಕ್ಕ ಕೊಳ್ಳೀ ಕೊಡಲಾಕ ಅವೇನು ನಿನಗ ಮಾಡಿದ್ದುವಲೇ?" ಎಂದು ಛೀಹಾಕಹತ್ತಿದರು.

ನಸುಕಿನಲ್ಲಿಯೇ ಎದ್ದು ಸ್ನಾನಕ್ಕೆಂದು ಬಾಳಾಚಾರ್ಯರು ನದಿಗೆ ಹೊರಟಾಗ, ಅವರಿಗೆ ಈ ಸುದ್ದಿಯನ್ನು ವಾಲೀಕಾರ ಮಲ್ಲ ಮುಟ್ಟಿಸಿದ. ಅವರು ಕೂಡಲೇ ಚಾವಡಿಗೆ ಬರಬೇಕೆಂದು ಕುಲಕರ್ಣಿ ಶೇಷಪ್ಪ ಹೇಳಿದ್ದಾಗಿಯೂ ಹೇಳಿದ. ಅದನ್ನೆಲ್ಲ ಬಾಳಾಚಾರ್ಯರು ಕೇಳಿಕೊಂಡು "ನಾ ಅಲ್ಲಿ ಬಂದು ಮಾಡೂದೇನದ ಮಲ್ಲಾ. ನೀ ಮೊದಲ ಹೋಗಿ ತಳವಾರ ಕಲ್ಲನ ಮ್ಯಾಲೆ ಯಾರೂ ಕೈ ಎತ್ತದ್ಹಾಂಗ ನೋಡಿಕೋ" ಎಂದು ಹೇಳಿ ನದಿಗೆ ಸ್ನಾನಕ್ಕೆ ನಡೆದರು. ಪೂಜೆ, ಆಹ್ನಿಕಗಳನ್ನೆಲ್ಲ ಮುಗಿಸಿಕೊಂಡು ತಾಸು ಹೊತ್ತು ಏರುತ್ತಲೇ ಚಾವಡಿಗೆ ಬಂದರು. ಅಷ್ಟರಲ್ಲಿ ಇಡೀ ಊರ ಜನರೇ ಚಾವಡಿಯ ಮುಂದೆ ನೆರೆದಿದ್ದರು.

ಊರ ದೈವದವರ ಸಭೆಯೂ ಚಾವಡಿಯಲ್ಲಿ ಕೂಡಿತ್ತು. ತಾತ್ಪೂರ್ತಿಕವಾಗಿ ಊರ ಗೌಡನೆಂದು ನೇಮಕ ಹೊಂದಿದ ಲಿಂಗಪ್ಪನೂ, ಊರ ಜನರ ಕರೆ ಬರಲು ಮಠದಿಂದ ಎದ್ದು ಚಾವಡಿಗೆ ಬಂದಿದ್ದ. ಪಡದಪ್ಪ ಮಾತ್ರ ತನಗೆ ಬರುವ

ದಾಗುವದಿಲ್ಲವೆಂದು ಹೇಳಿ ಕಳಿಸಿದ್ದ. ಬಾಪೂಸಾಹೇಬನೂ ತನಗೆ ಜ್ವರ ಬಂದಿವೆ ಎಂದು ನೆವ ಹೇಳಿ ಜಾರಿಕೊಂಡಿದ್ದ. ಉಳಿದವರೆಲ್ಲ ಬಾಳಾಚಾರ್ಯರ ದಾರಿಯನ್ನು ಕಾಯುತ್ತ ಕುಳಿತಿದ್ದರು.

ಬಾಳಾಚಾರ್ಯರು ಬಂದ ನಂತರ, ಜಿನ್ನಪ್ಪನ ಬಣಿವೆಗೆ ತಳವಾರ ಕಲ್ಲ ಬೆಂಕಿ ಹಚ್ಚಿದ್ದ ಬಗ್ಗೆ ಮುಂದಿನ ಕ್ರಮದ ನಿರ್ಣಯವಾಗಬೇಕೆಂದು ಗೊತ್ತಾಗಿತ್ತು.

ತಳವಾರ ಕಲ್ಲ ಜಿನ್ನಪ್ಪನ ಬಣಿವೆಗೆ ಬೆಂಕಿ ಹಚ್ಚುವಾಗ, ಕುಡಿತದ ಅಮಲಿನಲ್ಲಿ ತನ್ನ ತಲೆಯಮೇಲಿನ ರುಮಾಲನ್ನು ಅಲ್ಲಿಯೇ ಒಗೆದು ಹೋಗಿದ್ದ. ರುಮಾಲು ಬಿದ್ದ ಸ್ಥಳದಿಂದ ಮೂಡಿದ ಹೆಜ್ಜೆಗಳನ್ನು ಉರಿಯ ಬೆಳಕಿನಲ್ಲಿ ದಾದಾ ನೋಡುತ್ತ ಸಾಗಿದಾಗ, ತೋಟದ ಸೀಮೆಯ ಒಡ್ಡಿನ ಮೇಲೆ ಕಲ್ಲ ಮಲಗಿದ್ದು ಅವನ ಕಣ್ಣಿಗೆ ಬಿದ್ದಿತ್ತು. ಅವನ ಮೈಮೇಲೆ ಎಚ್ಚರವಿರಲಿಲ್ಲ. ಕುಡಿದದ್ದರಿಂದ ಎಚ್ಚರದಪ್ಪಿ ಬಿದ್ದಿದ್ದ. ಅವನ ಕೈಗಳೆರಡನ್ನೂ ಬಿಗಿದು ಒದ್ದು ಎಬ್ಬಿಸಿದಾಗ ದಿಕ್ಕುಗಾಣದೆ ಅವನು ದಾದಾನ ಹಿಂದಿನಿಂದ ನಡೆದ. ಆಗ ಜಿನ್ನಪ್ಪನ ಗಾಡಿ ಎದುರಿಗೆ ಬಂದಿತು. ಅವನನ್ನು ಅದರಲ್ಲಿ ಎತ್ತಿ ಕೂಡಿಸಿ ಚಾವಡಿಗೆ ತರಲಾಗಿದೆ ಎಂದು ದಾದಾ ಕೊಟ್ಟ ಹೇಳಿಕೆಯ ಸಾರವಾಗಿತ್ತು.

" ಅಮಲೇರಿ ಅಲ್ಲೆ ಬಿದ್ದಿದ್ದಾನಾದೀತು. ಆದರ ಅವನss ಬಣವಿಗೆ ಬೆಂಕಿ ಹಚ್ಚಿದಾವಾ ಅಂತ ಹೇಳಾಕ ಆದೀತರೇ?" ಎಂದು ಲಿಂಗಪ್ಪ ಕಲ್ಲನ ಪಕ್ಷಗಟ್ಟಿ ನಡುವೆಯೇ ಬಾಯಿ ಹಾಕಿದ.

ಸಭೆಯ ತೀರ ಹೊರವಲಯದಲ್ಲಿ ಕುಳಿತ ಕಿಡಿಗೇಡಿಯೊಬ್ಬನಿಗೆ ಇದು ತಡೆಯಲಿಲ್ಲ. ಮುಂದೆ ಕುಳಿತವನ ಬೆನ್ನಿಗೆ ಮರೆಯಾಗಿ, "ಸುಮಾಕ ಕೂತು ದೈವದವರು ಹೇಳಿದ್ದನ್ನು ಕೇಳಿಕೊಳ್ಳಲಾಕ ಏನ ತೊಗೊಂತಾನ ಕೇಳ್ರಿಲೇ?" ಎಂದು ಕೂಗಿದ.

ಲಿಂಗಪ್ಪನಿಗೂ ಸಿಟ್ಟು ಬಂತು. "ನಾನೂ ದೈವದವರೊಳಗ ಒಬ್ಬಾವ; ಊರ ಗೌಡ. ತಪ್ಪ ಯಾರು ಮಾಡ್ಯಾರು, ಯಾರು ಮಾಡಿಲ್ಲ ಇದರ ವಿಚಾರ ಮಾಡೋ ಹಕ್ಕು ನನಗೂ ಐತಿ" ಎಂದು ಆರ್ಭಟಿಸಿದ.

"ಯಾಕ ತ್ರಾಸ ಮಾಡಿಕೋತಿ ಲಿಂಗಪ್ಪ? ಕಲ್ಲ ಏನ ಹೇಳತಾನ ಅದನ್ನ ಕೇಳಿಕೊಳ್ಳೋಣಂತ. ಅಂವಾ ತಪ್ಪ ಮಾಡಿಲ್ಲ ಅಂತ ವಾದಿಸಿದರ, ಮುಂದ ನಿನ್ನ ವಕೀಲಿ ನಡಿಸೀಯಂತ" ಎಂದು ಬಾಳಾಚಾರ್ಯರು ನಯವಾಗಿಯೇ ಲಿಂಗಪ್ಪನ

ಬಾಯಿ ಕಟ್ಟಿದರು.

ಕಲ್ಲ ದಾದಾನ ಹಾಗೂ ಊರವರ ಹೊಡೆತದಿಂದಲೇ ಹಣ್ಣಾಗಿದ್ದ. ತಪ್ಪು ಮಾಡಿದ್ದನ್ನು ಈ ಮೊದಲೇ ಅನೇಕರ ಮುಂದೆ ಒಪ್ಪಿಕೊಂಡಿದ್ದ. ಅವನಿಗೀಗ ಲಿಂಗಪ್ಪನ ಸಹಾಯದ ಅಗತ್ಯವಿರಲಿಲ್ಲ. ಅವನು ತನ್ನ ಜೀವನದಲ್ಲಿಯೇ ಮೊಟ್ಟ ಮೊದಲು ಹೀಗೆ ತಪ್ಪು ಮಾಡಿದ್ದ. ದೈವದವರಿಗೆ ಕೈಜೋಡಿಸಿ ಕಣ್ಣೀರು ಸುರಿಸುತ್ತ ಹೇಳಿದ:

"ಯಪ್ಪಾ, ತಂದೇ, ನಾನು ಊರ ತಳವಾರ. ಎಲ್ಲಾರ ಮನಿ ಎಂಜಲಾ ತಿಂದ ಬೆಳದೈತಿ ಈ ದ್ರೇಹ. ಅನ್ನಾ ಹಾಕಿ ಸಲುಹಿದ ಊರ ದೈವದವರ ಮುಂದ ಸುಳ್ಳ ಹೇಳಿದರ ಈ ನಾಲಗಿ ಸೀಳಿರಿ. ಮಟದಾಗ ಹಿರೇ ಅಪ್ಪಾಅವರು ಇದ್ದ ದಲ್ರಿ, ಅವರ ಹೆಂತ್ಯಾಕ ಹೋಗಿ ಸೇವಾ ಮಾಡತಿದ್ನಿ. ಅವರ ಗಾದಿಗೆ ಬಂದ ಈ ಪಡ-ದಪ್ಪನವರ ಸೇವಾನೂ ಮಾಡಕೋತ ಬಂದೀನು. ಮಜಾ ಮಾಡಲಾಕ ಅಂತ, ತೀರ್ತ (ತೀರ್ಥ) ಅಂತ ಆಗಾಗ ಭಟ್ಟಿ ಸೆರೆ ಕೊಡಾಕ ಹತ್ತಿದರು. ನಾನೂ ಕುಡಿಯಾಕ ಸುರೂ ಮಾಡಿದ್ನಿ. ಬರಬರತ ಅದೊಂದು ಚಟಾನ ಗಂಟಬಿತ್ತು. ಪಡದಪ್ಪನವರೂ ಅಂದರ ದೇವರಿದ್ದಾಂಗ ಅಂತಃ ನಡಿಯಾಕ ಹತ್ತಿದ್ನಿ. ಅವರು ಹೇಳಿದ್ದು ನಡಸೋದು ಧರ್ಮಾ ಅಂತ ತಿಳಕೊಂಡು ಅವರ ಕೈಯಾಗಿನ ಕಲ್ಲಿನಂಗ ಹೇಳಿದ ಕೆಲಸ ಮಾಡಿಕೋತ ಬಂದ್ನಿ. ನಿನ್ನೇ ಮಾತಿಗೆ ಮಾತು ಬಂದು, ಜಿನ್ನಪ್ಪನ ಖೋಡ ಮುರಿಯಾಕಃಬೇಕು ಅಂತ ಆತರಿ. 'ಲೇ ಮಗನ ಹೋಗು ಜಿನ್ನನ ತ್ವಾಟದಾಗಿನ ಬಣಿವಿಗೆ ಬೆಂಕಿ ಹಚ್ಚಿ ಬಾ' ಅಂತ ಅಪನೋರು ಅಪಣಿ ಕೊಟ್ಟರ್ರಿ. ನಾ 'ಯಾಕಾಗವಲ್ದು ಎಪ್ಪಾ' ಅಂತ ಏಳಾಣಾ ತುಂಬಿದ ಎರಡ ಸೆರೇದ ಕಾಯಿ ನನ್ನ ಕೈಯಾಗ ಇಟ್ಟರು. ಅದನ್ನ ತಗೊಂಡು ನೆಟ್ಟಗ ತ್ವಾಟಕ್ಕ ಹೋದ್ನಿ. ತ್ವಾಟದಾಗ ನಾಯಿ ಬಗಳಾಣಾ ಅಲ್ಲಿ ಒಡ್ಡಿನ ಮ್ಯಾಲೆ ಕಾಯಿ ಇಟಗೊಂಡು ಕುಂತಬಿಟ್ನಿ. ಹಾಗ ಜಂಪ ಹತ್ತಿಬಿಟ್ಟಿತು. ತಣೋಗ ಗಾಳಿ ಬೀಸಾಣಾ ಮತ್ತ ಎಚ್ಚರಾತ್ರಿ. ಇನ್ನೂ ನಿದ್ದೀ ಮಬ್ಬಿನ್ಯಾಗ ಎದ್ದು ಹೋಗಿ, ರುಮಾಲದ ಚುಂಗು ಹರಿದು, ಸೆರೆದಾಗ ಎದ್ದಿ ಬಣಿವ್ಯಾಗ ಇಟ್ಟು ಬೆಂಕಿ ಹಚ್ಚಿದ್ನಿ. ಭಗ್ಗನ ಬೆಳಕು ಬಿತ್ತು. ಗಾಬರ್‍ಯಾಗಿ ಕೈಯಾಗ ಇದ್ದ ಕಾಯಿ ಎತ್ತಿ, ಉಳದದ್ದೆಲ್ಲ ಗುಟಕರಿಸಿ ಒಡ್ಡಿನ ಮ್ಯಾಗ ಬಂದು ಕುಂತಕೊಡ್ನಿ. ಮುಗಲಮಟಾ ಉರಿ ಎದ್ದು ಬೆಳಕಃ ಬೆಳಕಾಗಿತ್ತು. ಗಾಬರ್‍ಯಾಗಿ ಇನ್ನೊಂದು ಕಾಯಿನೂ ಎತ್ತಿ ಕುಡದು,

ನಿಕೆ ಬಂದು ಬಿಿದ್ನಿರಿ. ದಾದಾನ ಕೈಯಾಗ ಸಿಗೂವುಟಾ ಖಬರಿಲ ಹಾರಿತ್ರಿ" ಎಂದು ಕಲ್ಲ ದೀನವಾಣಿಯಿಂದ ತನ್ನ ಹೇಳಿಕೆ ಮುಗಿಸಿದ.

ನೆರೆದ ಜನರೆಲ್ಲ ಅವನ ಮಾತು ಕೇಳಿದರು. ಒಬ್ಬೊಬ್ಬರಿಗೆ ಒಂದೊಂದು ವಿಧದ ಪರಿಣಾಮ ಮಾಡಿತಾದರೂ ಬಾಯಿಬಿಚ್ಚಿ ಹೇಳುವ ಧೈರ್ಯವನ್ನು ಯಾರೂ ಮಾಡಲಿಲ್ಲ. "ಬಣವಿಗೆ ಬೆಂಕಿ ಹಚ್ಚಿದ್ದನ್ನು ಕಲ್ಲ ತಾನಽ ಕಬೂಲ ಮಾಡತಾನಂದ ಮ್ಯಾಲ ಅಂವಗ ತಕ್ಕ ಶಾಸನಾ ಮಾಡಬೇಕಾಗತದ. ದೈವದವರು ಕೂಡಿ ಠರಾಯಿಸಲಿ" ಎಂದು ಶೇಷಪ್ಪ ಮಾತಿಗೆ ದಾರಿ ಮಾಡಿಕೊಟ್ಟ.

"ಕಲ್ಲ್ಯಾ ಹೇಳಿದ್ದು ಖರೇ ಅಂತ ದೈವದವರು ನಂಬತಿದ್ದರ ಅಂವಾ ತಪ್ಪ ಮಾಡೇ ಇಲ್ಲಾ ಅಂತ ನಾ ಅಂತೀನಿ. ಅಂವಗ ಇದನ್ನ ಮಾಡಲಿಕ್ಕೆ ಹಚ್ಚಿದ ಪಡದಪ್ಪನವರು ಖರೇ ತಪ್ಪುಗಾರರು. ಈ ಅಪರಾಧಕ್ಕ ಶಿಕ್ಷಾ ಅವರಿಗೆ ಆಗ ಬೇಕು" ಎಂದು ಬಾಳಾಚಾರ್ಯರು ಸ್ವಲ್ಪ ನಿಷ್ಠುರವಾಗಿಯೇ ಹೇಳಿದರು.

ದೈವದವರಲ್ಲಿ ಕೂಡಲೇ ಕೋಲಾಹಲವೆದ್ದಿತು. 'ಇದೆಲ್ಲಿಯ ಅಡ್ಡನ್ಯಾಯ? ಕಲ್ಲ ತನ್ನ ತಪ್ಪು ಒಪ್ಪಿಕೊಂಡಿದ್ದಾನೆ. ಇದರಲ್ಲಿ ಆಳವಾಗಿ ಯೋಚಿಸುವದೇನು ಬಂತು? ಪಡದಪ್ಪನವರು ಹೇಳಿದಂತೆ ಕುಣಿಯಲಿಕ್ಕೆ ಕಲ್ಲನಿಗೆ ವಿವೇಕವಿರ ಬಾರದೇ?'

"ಕಲ್ಲ್ಯಾ ಗುನ್ನೆ ಮಾಡಿದ್ದು ಕರೇ ಅಂತ ಕಬೂಲ ಮಾಡ್ಯಾನ. ಆದರ ಪಡದಪ್ಪನವರು ಇದನ್ನ ಹೇಳಿ ಮಾಡಿಸಿದವರು ಅನ್ನಾಕ ಸಾಕ್ಷಿನೂ ಇಲ್ಲ, ಪುರಾ ವೇನೂ ಇಲ್ಲ" ಎಂದು ಲಿಂಗಪ್ಪ ತನ್ನ ಕಾಯದೆ ಪಾಂಡಿತ್ಯವನ್ನು ತೋರಿಸದೆ ಬಿಡಲಿಲ್ಲ.

"ನಂಬೂದಾದರ ಕಲ್ಲ್ಯಾನ ಮಾತು ಪೂರಾ ನಂಬಬೇಕು. ಅರ್ಧಾ ನಂಬಿ ಅರ್ಧಾ ಬಿಡತೇನಂಬೂದು ಕೋರ್ಟುಕಚೇರ್‍ಯಾಗ ನಡೀಬಹುದು. ಈ ದೈವದವರ ನ್ಯಾಯನಿರ್ಣಯದ ರೀತೀನಽ ಬ್ಯಾರೆ ಗೌಡರಽ. ಮನಸ್ಯಾರ ಮ್ಯಾಲಿನ ನಂಬಿಕಿ ನಮುಗಿನ್ನೂ ಹೋಗಿಲ್ಲ. ಯಾಕರೆಪಾ ದೈವಾ ನೀವೇನಂತೀರಿ?" ಎಂದು ಬಾಳಾ ಚಾರ್ಯರು ನೆರೆದ ಜನರಿಗೇ ಕೇಳಿದರು. ಅವರ ತರ್ಕಕ್ಕೆ ಇಲ್ಲವೆನ್ನುವಂತಿರಲಿಲ್ಲ. ಪಡದಪ್ಪನವರು ಇಂಥ ಅನ್ಯಾಯಗಳ ಪ್ರೇರಕರಾಗಿರದಷ್ಟು ಸದ್ಗೃಹಸ್ಥರೂ ಅಲ್ಲ ವೆನ್ನುವದು ಪ್ರತಿಯೊಬ್ಬನಿಗೂ ಮನವರಿಕೆಯಾಗಿತ್ತು.

ಪಡದಪ್ಪನವರನ್ನು ಕರೆದುಕೊಂಡು ಬರಲು ಹೋದ ವಾಲೀಕಾರ ಮಲ್ಲ,

ಅವರು ತಮಗೆ ಬರುವದಾಗುವದಿಲ್ಲವೆಂದು ಹೇಳಿದರೆಂದು ವರದಿ ತಂದು ಒಪ್ಪಿಸಿದ. ಶೇಷಪ್ಪನೇ ಮತ್ತೆ, "ಈಗ ದೈವದವರು ಕರಸ್ಯಾರಂತ ಹೇಳೋ. ಬಿಟ್ಟು ಬರಬ್ಯಾಡಂದಾರಂತ ಹೇಳು" ಎಂದು ಹೇಳಿ ಪುನಃ ಅವನನ್ನು ಮಠಕ್ಕೆ ಅಟ್ಟಿದ.

ಇದೇ ಸಂದರ್ಭದಲ್ಲಿ ಜಿನ್ನಪ್ಪ ಮೇಲೆದ್ದು ದೈವದರಿಗೆ ಕೈಜೋಡಿಸಿದ:

"ಇದಕ ಯಾಳೇಕ ನನಗೂ ಓಟು ಹೇಳೂದೈತ್ರಿ. ನನ್ನ ಬಣವೇನೋ ಸುಟ್ಟೈತು. ಆದರ ಬೆಂಕಿ ಹಚ್ಚಿದವನ ಕೈ ಕಡದರ ನನಗೇನೂ ಬಣಿವಿ ಬಂದಾಂಗಾಗಲಿಲ್ಲ. ನಾ ಅದನ್ನು ಕೇಳಾವನೂ ಅಲ್ಲ. ಆದರ ಯಪ್ಪಾ, ಊರಾಗ ಇಂತಾ ಕೆಟ್ಟ ಕೆಲಸ ನಡದಿರಬಾರದೂ ಅಂತ ನ್ಯಾಯ ಸಿಗಬೇಕು. ಪಡದಪ್ಪನವರು ಈ ಊರಾಗ ಮರಿ ಆಗಿ ಬಂದಾರು ಬಂದಾರು, ಒಂದಿಲ್ಲದ ಒಂದ ರೀತಿಯಿಂದ ಊರು ಕೆಟ್ಟು ಹೋಗೇತಿ. ಗೌಡರ ವತನಕ್ಕs ನೀರ ಹಚ್ಚಿಟ್ಟರು. ತುಂಬಿ ಬೆಳೆದ ಹೊಲಾ ಲೂಟಿ ಮಾಡಸಬೇಕಂತ ಕಾಯಕಾ ಹೂಡಿದರು. ಇಂತಾವರು ಊರಾಗ ಇದ್ದರ, ದಿನದಿನಕ ಬೆಂಕಿ ಬಿಸಿನೀರು ಹೆಚ್ಚಗಾಣಿಸಿಕೊಂತ ಹೊಕ್ಯಾವ. ಅದಕ ಇವರು ಊರ ಬಿಟ್ಟು ಹೋಗೂ ಮಟಾ ಊರ ಶಾಂತ ಆಗಾಣಿಲ್ಲ. ಆದರ ಮಟಾ ದೈವದ್ದು. ದೈವದವರs ಅದರ ಮಾನಾ ಮರ್ಯಾದಿ ಕಾಯಬೇಕು. ಪಡದಪ್ಪನವರ್ನ ಹೊರಗ ಹಾಕಿದರ ಮಟದ ಬಾಗಿಲಿಗೆ ಕೀಲಿ ಬೀಳತತಿ. ಆದಿ ಬುನಾದೀಲಿದ್ದ ನಡದು ಬಂದ ಮಟಾ ಕುಡುಕನ ದಡ್ಡಿ ಆಗೇತಿ. ಅದಕ್ಕ ಮಟಕ್ಕೊಬ್ಬ ಸಂಪನ್ನಗುಣದ ಮರಿ ಮಾಡಿ, ಮಟಾ ಅವರ ತಾಬೇಕ್ಕ ಕೊಟ್ಟು ಪಡದಪ್ಪನವರು ಊರು ಬಿಡಬೇಕು. ಇದs ದೈವದವರೆದುರಿಗೆ ನನ್ನ ಅರ್ಜಿ ಐತಿ. ಇದಕ್ಕ ಅವರ ಕಬೂಲ ಮಾಡದಿದ್ದರ, ಇದs ಕಲ್ಲ್ಯಾನ್ನ ಸಾಕ್ಷೀ ಇಟ್ಟು ಅವರ್ನ ಜೇಲಿಗೆ ಕಳಸಬೇಕಾಗತೈತಿ. ದೈವದವರು ತಮಗ ಸರಿ ಕಂಡದ್ದನ್ನು ಮಾಡಲಿ" ಎಂದು ದೀರ್ಘವಾಗಿ ಹೇಳಿದ. ಜಿನ್ನಪ್ಪ ತನ್ನ ಜನ್ಮದಲ್ಲಿಯೇ ಮೊಟ್ಟಮೊದಲನೆಯ ಸಾರೆ ಕೂಡಿದ ಜನರೆದುರಿಗೆ, ಇಷ್ಟೊತ್ತಿನ ವರೆಗೆ ನಿಂತು ಮಾತಾಡಿದ್ದು. ಅವನ ಕೈಕಾಲೆಲ್ಲ ಥರಗುಟ್ಟಿ ನಡುಗಹತ್ತಿದ್ದವು. ಮುಖ ಬೆವರಿಟ್ಟು, ಬಿಳಿಯ ಕಲ್ಲೀಮೀಸೆಗಳೆಲ್ಲ ತೊಯ್ದುಹೋಗಿದ್ದವು. ಆದರೆ ಅವನ ಮುಖದ ಗಂಭೀರ ಭಾವ, ಮಾತಿನಲ್ಲಿಯ ಕಳಕಳಿಯಿಂದ ಜನರೆಲ್ಲ ಕರಗಿಹೋಗಿದ್ದರು. ಎತ್ತುಗಳೊಂದಿಗೆ ದುಡಿದುಡಿದು ಮೂಕನಾಗಿದ್ದ ಜಿನ್ನಪ್ಪನೇ ಇಷ್ಟು ಮಾತಾಡುವಂತಾಗಬೇಕಾದರೆ, ಪರಿಸ್ಥಿತಿ ಎಷ್ಟು ದೀರ್ಘಕ್ಕೆ ಹೋಗಿರಬೇಡ? ಸ್ವತಃ ಶಂಕರಪ್ಪ

ಗೌತರೇ ಜಿನ್ನಪ್ಪನಲ್ಲಿ ಅವತರಿಸಿ ಮಾತಾಡಿರಬೇಕೆಂದು ಕೆಲವರು ತಮ್ಮ ತಮ್ಮೊಳಗೇ ಹೇಳಿಕೊಂಡರು.

ಮರುದಿನವೇ ಮಾಮುಲೇದಾರರು ಬರುವವರಿದ್ದುದರಿಂದ ಸಭೆಯು ಕೆಲಸವನ್ನು ಅಂದೇ ಮುಗಿಸಿಬಿಡಬೇಕೆಂದು ಶೇಷಪ್ಪನ ಅವಸರ; ಇಲ್ಲದಿದ್ದರೆ ಪ್ರಕರಣ ದೀರ್ಘಕ್ಕೆ ಹೋಗಬಹುದೆಂಬ ಭೀತಿ. ಆದ್ದರಿಂದ ಸಭೆಯ ಮೌನವನ್ನು ಮುರಿದು "ದೈವದವರು ಹೇಳಿದ್ದನ್ನ ಜಿನ್ನಪ್ಪ ಕೇಳತಾನ. ಪಡದಪ್ಪನವರೂ ಬಂದು ಅದಽ ಮಾತು ಹೇಳಿಬಿಟ್ಟರ ನಮಗ ನಿರ್ಣಯ ಕೊಡಲಿಕ್ಕೆ ಅನುಕೂಲ ಆಗತದ" ಎಂದು ನುಡಿದ.

ಸಭೆಯಲ್ಲಿ ಗುಜುಗುಜು ನಡೆಯಿತು. ಇಷ್ಟು ದಿನ ಪಡದಪ್ಪನವರ ತೆರೆಯ ಹಿಂದಿನ ಕಾರಸ್ಥಾನವನ್ನು ಕಂಡುಂಡರೂ ಅವರ ವಿರುದ್ಧ ಬಾಯೆತ್ತುವ ಸಾಹಸವನ್ನು ಯಾರೂ ಮಾಡಿರಲಿಲ್ಲ. ದೊಡ್ಡವರ ಕಾರಭಾರ ನಮಗೇಕೆಂದು ಎಲ್ಲರೂ ದೂರವಿರುವವರೇ! ಆದರೆ ಈಗ ಗೂಳಿ ಬಿದ್ದಿತ್ತು; ಕಲ್ಲುಗಳು ಕಾಲ ಹತ್ತಿರವೇ ಬಿದ್ದಿದ್ದವು. "ಊರಿಗೇ ಭಾರ ಆಗಿ ಕುಂತ ಪಡದಪ್ಪನವರನ್ನ ಊರಾಗ ಇರಾಕ ಬಿಡಬಾರದ್ರಿ ಅವರ್ನ ಜೇಲಿಗೆ ಕಳಸೂದಽ ಪಾಡ ಕಾಣತೈತಿ" ಎಂದು ಗುಜು ಗುಜು ಧ್ವನಿಯಲ್ಲಿಯೇ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದರು.

ವಾತಾವರಣ ಕಾದಿತ್ತು; ಜನರೆಲ್ಲ ಒಟ್ಟಾಗಿ ಕಾಯುತ್ತಿದ್ದರು. ಲಿಂಗಪ್ಪನಿಗೆ ತಡೆಯಲಾಗಲಿಲ್ಲ. ಚಾವಡಿಯಿಂದ ಎದ್ದು ಮಠಕ್ಕೆ ಹೋಗಿ ಪಡದಪ್ಪನವರಿಗೆ ಎಲ್ಲ ಸಂಗತಿಗಳನ್ನು ಅರಿಕೆಮಾಡಿಕೊಂಡ. ಲಿಂಗಪ್ಪನ ಕಾತರವನ್ನು ನೋಡಿ ಮೊದಮೊದಲು ಅವರಿಗೆ ನಗೆ ಬಂದರೂ ಕೇಳುತ್ತ ಹೋದಂತೆ ಅವರ ಆತ್ಮವಿಶ್ವಾಸ ಸಡಲಿತು. ಊರವರೆಲ್ಲ ಒಟ್ಟಾಗಿರುವರೆಂಬ ಮಾತು ಅವರ ಬುಡವನ್ನೇ ಅಲುಗಾಡಿಸಿತು. ಈಗ ಉಳಿದಿರುವುದು ಎರಡೇ ದಾರಿ. ಏನೂ ಮಾತಾಡದೆ ಮಠದ ಅಧಿಕಾರವನ್ನು ಬಿಟ್ಟುಕೊಡಬೇಕು; ಇಲ್ಲದಿದ್ದರೆ ಜೇಲು ಕಾಣಬೇಕು. ಜೇಲು ಕಾಣಿಸದೆ ಜಿನ್ನಪ್ಪ ಬಿಡುವಂತಿರಲಿಲ್ಲ. ತಳವಾರ ಕಲ್ಲ ಹೊತ್ತಿಗೆ ಸರಿಯಾಗಿ ಕೈಕೊಟ್ಟಿದ್ದಾನೆ. ಪಡದಪ್ಪನವರು ಆಳವಾಗಿ ಆಲೋಚಿಸಿ, ಕೊನೆಗೆ ಮೊದಲಿನ ದಾರಿಯೇ ಒಳ್ಳೆಯದೆಂದು ನಿರ್ಣಯಿಸಿಕೊಂಡು ಚಾವಡಿಗೆ ಬಂದರು.

ಚಾವಡಿಯಲ್ಲಿ ಜನರೆಲ್ಲ ಅವರ ಬರವಿಗಾಗಿ ಕಾಯುತ್ತಿದ್ದರು. ಯಾರೂ ಬೇಸತ್ತು ಮನೆಗೆ ಹೋಗುವ ವಿಚಾರವನ್ನೇ ಮಾಡಿರಲಿಲ್ಲ. ಹೊತ್ತು ಆಗಲೇ

ಹನ್ನೊಂದಾಗಿತ್ತು. ಆದರೆ ಇಂದು ನಿರ್ಣಯವಾಗಲೇಬೇಕೆಂದು ಶೀಷಪ್ಪ ಹಟ ಹಿಡಿದಿದ್ದ. ಅಂತೂ ಒಮ್ಮೆ ಪಡದಪ್ಪನವರು ಬಂದರು. ಆದರೆ ಎಂದಿನ ಠೀವಿ ಗೌರವಗಳು ಇಂದು ಅವರಲ್ಲಿ ಕಾಣಲಿಲ್ಲ. ಜನರು ಅವರನ್ನು ನೋಡುವ ದೃಷ್ಟಿಯೇ ಬದಲಾಗಿತ್ತು. ಅವರು ಚಾವಡಿಗೆ ಬಂದ ಕೂಡಲೇ ಮೊದಲಿನಂತೆ ಯಾರೂ ಎದ್ದು ನಿಲ್ಲಲಿಲ್ಲ. ತಿರಸ್ಕಾರ ಎಲ್ಲರ ಕಣ್ಣುಗಳಲ್ಲಿಯೂ ಸ್ಪಷ್ಟವಾಗಿ ಕಾಣುತ್ತಿತ್ತು; ವಾತಾವರಣ ಅನುಕೂಲವಾಗಿರಲಿಲ್ಲ. ಪ್ರತೀಕಾರದ ವಾಸನೆ ತೀವ್ರವಾಗಿತ್ತು. ಇಂಥ ಸಂದರ್ಭದಲ್ಲಿ ಯಾವ ವೇಷ ಧರಿಸಬೇಕೆಂಬುದನ್ನು ಅವರು ಮೊದಲೇ ಊಹಿಸಿ ಗೊತ್ತುಮಾಡಿಕೊಂಡಂತಿತ್ತು.

ಬಾಳಾಚಾರ್ಯರೇ ಕರೆದು ಅವರನ್ನು ಹತ್ತಿರ ಕೂಡಿಸಿಕೊಂಡರು. ಮತ್ತೊಂದು ಸಂದರ್ಭದಲ್ಲಾಗಿದ್ದರೆ ಪಡದಪ್ಪನವರು ವ್ಯಂಗ್ಯವಾಗಿ ನುಡಿದು ಈ ಸೌಜನ್ಯವನ್ನು ಚುಚ್ಚಬಹುದಾಗಿತ್ತು. ಆದರೆ ಈಗ ದಾಳ ಕೈಯಿಂದ ಉರುಳಿ ಹೋಗಿದ್ದವು. ಅಂತಲೇ ಗಂಭೀರವಾಗಿ ಜನರನ್ನುದ್ದೇಶಿಸಿಯೇ ಪ್ರಾರಂಭಿಸಿದರು:

"ಒಟ್ಟು ನಾ ಹುಟ್ಟಿದ ಯಾಳೇನಃ ಕೆಟ್ಟ ಐತಿ. ಯಾರದೋ ಪಾಪದ ಹೊರಿ ಯಾರ ತಲಿ ಮ್ಯಾಗೋ ಬರಬೇಕಂದರ, ದೈವದಾಟಾನಃ ಇರಬೇಕು. ಇಲ ದಿರಕ ಸಾರಾಸಾರ ಯಿಚಾರ ಮಾಡೋ ತೂಕಾನಃ ಜನರಲ್ಲಿಲ್ಲ ಅನಬೇಕಾಗ ತೈತಿ. ಅಂದ ದಾದಾ ಚಿಮಣಾನ್ನ ತಂದು ಮಟದಾಗಿಟ್ಟ, ನನ್ನ ತಲಿ ಮ್ಯಾಗಃ ತುಘಾನಿ ಹೊರಿಸಿಟ್ಟ. ಆಗಲೆಪಾ ಶಿವನಾಟಾ ಅಂದೆ. ಈಗ ಬಣವಿ ಸುಟ್ಟ ಬಾ ಅಂತ ಹೇಳಿದೆ ಅಂತ ಈ ಕಲ್ಲ್ಯಾ ಹೇಳತಾನು. ಶಿಸಮಗನ ತಪ್ಪು ಗುರುಸ್ವಾಮಿ ಹೊರಾಕಃಬೇಕಲ್ರಿ? ಸೇವಾ ಮಾಡಿಸಿಕೊಳ್ಳೊದು ಬೇಕು, ಇದು ಬ್ಯಾಡಾ ಅಂದರ ಹ್ಯಾಗ ನಡದೀತು? ಬಂದದ್ದು ಬ್ಯಾಡ ಅಂದರ ಶಿವಾ ಮೆಚ್ಚಾಕಿಲ್ಲ. ಕಾಲ-ಕೂಟ ವಿಸಾ ನುಂಗಿ ನಿಂತ ಶಿವಾ. ಈಗ ನಾನೂ ಬಂದ ಅಪವಾದಾ ಎಲ್ಲ ನುಂಗ ಬೇಕಲ್ರಿ? ದೈವದವರು ಹೇಳಿದ್ದಕ್ಕ ನನ್ನ ಒಪ್ಪಿಗಿ ಐತಿ" ಎಂದು ಸುಮ್ಮಗಾದರು.

ಪಡದಪ್ಪನವರ ಭಾಷಣ ಸಾಕಷ್ಟು ನಾಟಕೀಯವಾಗಿತ್ತು. ವಾಡಿಕೆಯ ಗಡಸುದನಿ ಈಗ ಸಂದರ್ಭಕ್ಕೊಪ್ಪುವಂತೆ ಮೃದುವಾಗಿತ್ತು, ಹೃದಯಸ್ಪರ್ಶಿಯಾಗಿತ್ತು. ಕೊನೆಕೊನೆಯ ಮಾತುಗಳಂತೂ ನಿಟ್ಟುಸಿರು, ಕಣ್ಣೀರುಗಳ ಎಸರಿನಲ್ಲಿ ಬೆಂದು ಬಂದಂತೆ ಹಣ್ಣಾಗಿದ್ದವು. ಆಗ ಕಣ್ಣಂಚಿನಲ್ಲಿ ಎರಡು ಹನಿಗಳೂ ಉರುಳಿದವು. ಅವನ್ನು ಶಾಟಿಯಿಂದ ಒರೆಸಿಕೊಳ್ಳುವ ಎಚ್ಚರವೂ ಅವರಲ್ಲಿ ಉಳಿದಿರಲಿಲ್ಲ.

ಎಲ್ಲಿಯ ಆವೇಶ ಬಂದಿತ್ತೋ, ಲಿಂಗಪ್ಪ ಒಮ್ಮೆಲೇ ಮೇಲೆದ್ದ. "ಇಗಾ ನಾ ಒಂದ ಮಾತ ಹೇಳಬೇಕಂತೀನಿ. ಹಿಂದಕ, ಅಗಸನ ಮಾತ ಕೇಳಿಕೊಂಡು ರಾಮದೇವರು ಸೀತಾದೇವಿನ್ನ ವನವಾಸಕ್ಕ ಕಳಿಸಿದಾ ಅಂತ ಕತಿ ಕೇಳೀರಿ. ಅದರಂಪಾಗs ಕಲ್ಲ್ಯಾನ ಮಾತು ಕೇಳಿಕೊಂಡು, ಊರಿಗೆ ತಂದಿ ಇದ್ದಾಂಗ ಇರೋ ಪಡದಪ್ಪನೋರ್‍ನ ಕಳಕೋಬ್ಯಾಡ್ರಿ. ಇದು ಕೆಲವರ ಕುತಂತ್ರ ಅಂತ ನನಗ ಅನಸತೇತಿ. ಅದಕs ಇನ್ನೀಟು ಯಿಚಾರಾ ಮಾಡ್ರಿ. ಮುಂದ ಹಳಹಳಿ ಆದೀತು. ಪಡದಪ್ಪನವರ್‍ನ ಹೊರಗ ಹಾಕಿದ್ದು ಅನ್ಯಾಯ ಅಂತ ಖಾತ್ರಿ ಆದೀತು. ಮುಂದ ಬಾ ಅಂದರೂ ಈ ಯಾಳೇ ಬರಾಕಿಲ್ಲ. ಕೆಬ್ಬೈ ಕೆಲಬೈ ಅಂದರೂ ಪಡದಪ್ಪನವರು ಇನ್ನೊಮ್ಮೆ ಸಿಗಾಕಿಲ್ಲ." ಎಂದು ಉದ್ರೇಕಗೊಂಡು ಮಾತಾಡಿದ.

ಬಾಳಾಚಾರ್ಯರು ಈ ಉದ್ವೇಗಕ್ಕೆ ತಣ್ಣೀರೆರಚಲೆಬೇಕಾಯಿತು. "ಇಲ್ಲಿ ನೋಡ್ರಿ, ದೈವದವರಿಗೆ ಮಾತಿನ ಆಡಂಬರ ಏನೂ ಬೇಕಾಗಿಲ್ಲ. ಪಡದಪ್ಪನವರ ಮ್ಯಾಲೆ ಕಲ್ಲ್ಯಾ ಸುಳ್ಳು ಆರೋಪ ಹೊರಸತಾನಂತ ನಿಮಗೆಲ್ಲಾ ಅನಸತಿದ್ದರ ಹಾಂಗ ಸ್ಪಷ್ಟ ಹೇಳಿಬಿಡ್ರಿ. ಕಲ್ಲ್ಯಾ ಹೇಳಿದ್ದು ಖರೆ ಅನಸತಿದ್ದರ, ಪಡದಪ್ಪ ನವರಿಗೆ ಏನ ಶಿಕ್ಷಾ ಕೊಡಬೇಕೂ ಹೇಳಿಬಿಡ್ರಿ?" ಎಂದು ಕೊನೆಯ ಮಾತನ್ನೇ ಕೇಳಿದರು.

"ರಾಸ್ತ ಮಾತು", "ಬರಾಬರಿ" ಎಂದು ಸಭೆಯಿಂದ ಉದ್ಗಾರಗಳು ಹೊರ ಟವು. ಪಡದಪ್ಪನವರಿಗೆ ವಿಧಿಸಬೇಕಾದ ಶಿಕ್ಷೆಯ ಬಗ್ಗೆ ಮಾತ್ರ ಸಭೆಯಲ್ಲಿ ಇತ್ತಂಡದ ಅಭಿಪ್ರಾಯಗಳು ಹುಟ್ಟಿದವು. ಅವರನ್ನು ಜೇಲಿಗೇ ಕಳಿಸಬೇಕೆಂದು ಕೆಲವರ ಅಭಿಪ್ರಾಯವಾದರೆ, ಇನ್ನು ಕೆಲವರು ಅವರು ಊರು ಬಿಡಬೇಕೆಂದು ಕೇಳಿಕೊಂಡರು. ಸಭೆ ಗೊಂದಲದಲ್ಲಿ ಮುಳುಗಿತು. ಬಾಳಾಚಾರ್ಯರೇ ಎದ್ದು ಎಲ್ಲರನ್ನೂ ಶಾಂತಗೊಳಿಸಿ ತಮ್ಮ ನಿರ್ಣಯವನ್ನು ಹೇಳಬೇಕಾಯಿತು.

"ದೈವದವರ ಅಭಿಪ್ರಾಯದ ಪ್ರಕಾರ ಪಡದಪ್ಪನವರs ಈಗ ತಪ್ಪುಗಾರರು. ಆದರ ಅವರ ಮ್ಯಾಲೆ ನಿರ್ಣಯ ಹೇಳೂದೂ ಒಂದ ತೊಡಕs. ಅವರು ನಮ್ಮ ಸಿಸ್ವಾಂಗ ಸಾಮಾನ್ಯ ಜನರಲ್ಲ. ಸದಾನಂದ ಶಿವಯೋಗಿಗಳ ಪೀಠಕ್ಕ ಬಂದವರು, ಪುಣ್ಯಶಾಲಿಗಳು. ಪೀಠಸ್ಥರ ಅವಮರ್ಯಾದಿ ಪಾದಳ್ಳಿಯೊಳಗ ಆಗೂದು ನನಗ ಬ್ಯಾಡಾಗೇದ. ಅವರು ಜೇಲಿಗೆ ಹೋಗೋದೂ ಅಂದ್ರ ಅವರಿಗಿಂತ ಊರಿಗೇ ಹೆಚ್ಚು ಕಲಂಕ. ಆದ್ದರಿಂದ ಅವರು ಇವತ್ತ ಸಾಯಂಕಾಲದೊಳಗs ಪೀಠ

ಬಿಟ್ಟುಕೊಟ್ಟು ಊರು ಬಿಟ್ಟು ಹೋಗಬೇಕು" ಬಾಳಾಚಾರ್ಯರ ದನಿಯಲ್ಲಿಯ ಗಾಂಭೀರ್ಯವೇ ಕೊನೆಯ ನಿರ್ಣಯವನ್ನು ಹೇಳಿಬಿಟ್ಟಿತು. ಮಠಕ್ಕೆ ಮರಿಯನ್ನು ದೈವದವರೇ ಸೂಚಿಸಬೇಕೆಂದು ಜಿನ್ನಪ್ಪ ಹೇಳಿದಾಗ, ಲಿಂಗಪ್ಪ ಅದನ್ನು ವಿರೋಧಿಸಿದ್ದ. ಅದು ಪಡದಪ್ಪನವರ ವೈಯ್ಯಕ್ತಿಕ ಅಧಿಕಾರವಾದ್ದರಿಂದ ಅದರಲ್ಲಿ ಇನ್ನೊಬ್ಬರು ತಲೆ ಹಾಕಬಾರದೆಂದು ಅವನ ವಾದ. ಮುಳುಗುವವ ಹುಲ್ಲು-ಕಡ್ಡಿಯನ್ನು ಹಿಡಿದು ತೇಲಬಯಸುವಂತಿತ್ತು ಅವನ ವಾದಸರಣಿ. ಅದನ್ನಾರೂ ಒಪ್ಪುವಂತಿರಲಿಲ್ಲ. "ಪಡದಪ್ಪನವರು ಜೇಲು ಕಂಡ ಮ್ಯಾಲೂ ಅವರಿಗೆ ಅಧಿಕಾರ ಉಳೀತಿದ್ರ, ಅವರ ಮರಿಯ ಹೆಸರು ಸೂಚನಾ ಮಾಡ್ಲಿ" ಎಂದು ಶೇಷಪ್ಪ ವ್ಯಂಗ್ಯವಾಗಿಯಾದರೂ ಕಾಯದೆ ಜ್ಞಾನದ ಸೋಟು ಹಾಕಿ ಹೇಳಿದ.

ಹಿಂದೆ ಸ್ವಾಮಿಗಳಾಗಿದ್ದ ಸದಾನಂದ ಶಿವಯೋಗಿಗಳ ಶನ್ಮ್ಮನ ಮಗ ಮರಿಯಾಗಬೇಕೆಂದು ಸರ್ವಾನುಮತದಿಂದ ನಿರ್ಣಯವಾಯಿತು. ಆದರೆ ಆ ಹುಡುಗ ಇನ್ನೂ ತೀರ ಚಿಕ್ಕವನು. ಅವನು ಅಧಿಕಾರ ಸ್ವೀಕರಿಸುವತನಕ ಅವನ ತಂದೆ ಗಂಗಾಧರಸ್ವಾಮಿಗಳು ಮಠದಲ್ಲಿದ್ದು ಮಠದ ಸತ್‌ಪರಂಪರೆಯನ್ನು ನಡೆಸಿಕೊಂಡು ಹೋಗಬೇಕು. ಕೂಡಿದ ಜನರಿಗೆಲ್ಲ ಈ ನಿರ್ಣಯ ಮೆಚ್ಚಿಗೆಯಾಯಿತು. ಗಂಗಾಧರಸ್ವಾಮಿಗಳ ಹೆಸರಿನಲ್ಲಿ ಜಯಘೋಷ ಪ್ರಾರಂಭವಾಯಿತು. ಇದೇ ಉತ್ಸಾಹದಲ್ಲಿಯೇ ಜನರ ಹಿಂಡು ಗಂಗಾಧರಸ್ವಾಮಿಗಳನ್ನು ಮಠಕ್ಕೆ ಕರೆದುಕೊಂಡು ಬಂದು, ಅವರ ಮಗನೇ ಮಠದ ಮರಿಯೆಂದು ಸಾರಿದರು. ಗಂಗಾಧರಸ್ವಾಮಿಗಳಿಗೆ ಇದೆಲ್ಲದರಿಂದ ಒಮ್ಮೆಲೆ ದಿಗಿಲುಂಟಾಗಿತ್ತು. ಬಾಳಾಚಾರ್ಯರು ಎಲ್ಲ ಸಂಗತಿಯನ್ನೂ ಅವರಿಗೆ ತಿಳಿಸಿ ಹೇಳಬೇಕಾಯಿತು. ಮಠಕ್ಕೆ ಅವರು ಬಂದ ಕೂಡಲೆ ಸ್ವತಃ ಪಡದಪ್ಪನವರೇ ಎದ್ದು ಅವರಿಗೆ ಸ್ವಾಗತ ಬಯಸಿ ತಮ್ಮ ಅಧಿಕಾರವನ್ನು ಅವರಿಗೆ ಒಪ್ಪಿಸಿಕೊಟ್ಟರು. ಅವರ ಹೃದಯದಲ್ಲಿ ಆಗ ಯಾವ ಭಾವನೆಗಳ ಕೋಲಾಹಲ ನಡೆದಿತ್ತೋ ಬಲ್ಲವರಾರು? ಅವರ ಮುಖ ಮಾತ್ರ ಗಂಭೀರವಾಗಿತ್ತು. ಒಂದು ಕ್ಷಣ ಕೂಡ ಸುಮ್ಮನಿರದ ತುಟಿಗಳಿಗೆ ಈಗ ಮೌನ ಮುದ್ರೆ ಹಾಕಿತ್ತು. ಮೌನವಾಗಿಯೆ ಅಧಿಕಾರವನ್ನು ಒಪ್ಪಿಸಿಕೊಟ್ಟು ಹೊತ್ತ ಅರಿವೆಯಿಂದ ಹೊರಬಿದ್ದರು. ಹೋಗುವಾಗ ಜನರೆಲ್ಲರಿಗೂ ಕೈಮುಗಿಯಬೇಕೆಂದು ಕೈಗಳನ್ನು ಮೇಲಕ್ಕೆತ್ತಿದಾಗ, ಕಣ್ಣು ತುಂಬಿ ಬಂದಿದ್ದವು; ಕೈ ನಡುಗಿದವು. "ಹೋಗಿ ಬರತೀನಿ ದೈವಾ, ನೆಪ್ಪಿರಲಿ. ಶಿವಾ ಕರಿಸಿದಾಗ ಮತ್ತ ಬರ

ತೀನಿ" ಎಂದಿಷ್ಟು ಹೇಳಬೇಕಾದರೆ ಅವರಿಗೆ ಸಾಕುಬೇಕಾಗಿತ್ತು.

ಕೂಡಿದ ಜನರಿಗೆ ಅವರ ಮೇಲಿನ ತಿರಸ್ಕಾರ ಇನ್ನೂ ಕಡಿಮೆಯಾಗಿರಲಿಲ್ಲವಾದ್ದರಿಂದ, ಅವರಿಗೆ ಇದೂ ಒಂದು ಸೋಗೆನಿಸಿತು. ಆದರೆ ಪಡದಪ್ಪನವರು ನಿಜವಾಗಿಯೂ ಕರಗಿದ್ದರು. ಪಾದಳ್ಳಿಯಲ್ಲಿ ಇಲ್ಲಿಯ ವರೆಗೆ ಅವರಿಗೆ ರಾಜ ಮರ್ಯಾದೆಯಿತ್ತು. ಪೀಠ ಅವರ ಮಾತಿಗೆ ವೇದವಾಕ್ಯದ ಪವಿತ್ರತೆಯನ್ನು ತಂದುಕೊಟ್ಟಿತ್ತು. ದೈವದ ಬೆಂಬಲದಂತೆ ಜನರ ಬೆಂಬಲವಿತ್ತು. ಹೊತ್ತ ಶಾಟಿ ಅವರ ಕರ್ಮಗಳಿಗೆಲ್ಲ ರಕ್ಷೆಯಾಗಿತ್ತು. ಈಗ ಅವೆಲ್ಲವನ್ನೂ ತೊರೆದು ಅವರು ನಿಜವಾಗಿ ಸನ್ಯಾಸಿಯಾಗಿದ್ದರು. ಬಿಟ್ಟು ಹೋಗುವಾಗ ಅವರ ಎದೆಯಲ್ಲಿ ಸಂಕಟ ಕುದಿಯುತ್ತಿದ್ದರೆ ಏನಾಶ್ಚರ್ಯ?

ಸೂರ್ಯ ಆಗಲೇ ನಡುನೆತ್ತಿಯ ಮೇಲೆ ಉರಿಯುತ್ತಿದ್ದ. ಪಡದಪ್ಪನವರಿಗೆ ಅದು ಭಿಕ್ಷೆಯ ಹೊತ್ತು. ಶಿವಪೂಜೆ ಮುಗಿಸಿದ ನಂತರ ಕಜ್ಜಾಯದ ಹುಡುಗರು ತಂದು ಕೊಟ್ಟ ಸವಿರುಚಿನ ಭೋಜನವಾಗುತ್ತಿತ್ತು. ಆದರೀಗ ಒಬ್ಬರೂ ಕೇಳುವವರೇ ಇರಲಿಲ್ಲ. ಎದುರಿನ ವಿಸ್ತಾರವಾದ ಬಯಲೊಂದನ್ನು ಬಿಟ್ಟರೆ ಬೇರೆ ಆಶ್ರಯವಿರಲಿಲ್ಲ. ಕೆಳಗೆ ನೆಲ ಸುಡುತ್ತಿತ್ತು, ಮೇಲೆ ಬಿಸಿಲು ಸುಡುತ್ತಿತ್ತು. ಅಂಥ ಬಿಸಿಲಿನಲ್ಲಿಯೇ ನಡೆದ ಪಡದಪ್ಪನವರನ್ನು ಬೀಳ್ಕೊಡಲು ಕೂಡ ಒಬ್ಬರೂ ಬಂದಿರಲಿಲ್ಲ.

ಅದು ನೆನಪಾಗಿಯೋ ಏನೋ ಪಡದಯ್ಯನವರು ಪಾದಳ್ಳಿಯ ಸೀಮೆಯಲ್ಲಿ ಒಂದು ಕ್ಷಣ ಕೂಡ ನಿಲ್ಲದಂತೆ ಪ್ರತಿಜ್ಞೆಮಾಡಿರುವರೆಂಬಂತೆ, ಬೀಸುಗಾಲು ಹಾಕುತ್ತ ಸಾಗಿದ್ದರು.

ಇಂದುಪುರಿಗೆ ಹೋಗಿದ್ದ ಯಶವಂತರಾಯರು ಮರಳಿ ಪಾದಳ್ಳಿಗೆ ಬಂದಾಗ ಅವರಿಗೆ ಪಡದಪ್ಪನವರನ್ನು ಪದಭ್ರಷ್ಟಗೊಳಿಸಿದ ಸುದ್ದಿ ತಿಳಿಯಿತು. ಅದನ್ನು ಕೇಳಿದವರೇ ಅವರು ಬಾಳಾಚಾರ್ಯರ ಮನೆಗೋಡಿದರು. ಆಚಾರ್ಯರು ಅವರಿಗೆ ಸ್ವಾಗತ ಬಯಸಿ ನಡೆದ ಸಂಗತಿಗಳನ್ನೆಲ್ಲ ನಿವೇದಿಸಿದರು. ತಾವು ಇಂದುಪುರಿಗೆ ಹೋಗುವ ಮೊದಲೇ ಈ ಘಟನೆ ನಡೆದುದಾಗಿದ್ದರೆ ಲಕ್ಷ್ಮೀಬಾಯಿಯನ್ನು ಪಾದ ಳ್ಳಿಗೆ ಕರೆತರುವದು ಸಾಧ್ಯವಾಗುತ್ತಿತ್ತೆಂದು ಅವರ ಅಭಿಪ್ರಾಯ. ಲಕ್ಷ್ಮಣನನ್ನು ಇಂದುಪುರಿಗೆ ಕಳಿಸಿ, ನಡೆದ ಸಂಗತಿಗಳನ್ನೆಲ್ಲ ತಿಳಿಸಬಹುದಿತ್ತಲ್ಲ ಎಂದು ಯಶ ವಂತರಾಯರು ನುಡಿಯಲು, "ನನಗೂ ಆ ವಿಚಾರ ಬಂದಿತ್ತು ಪಾಟೀಲರ. ಆದರ ಆ ಅಪೇಸಿ ಲಕ್ಷ್ಮಣನ್ನ ಕಳಸಬ್ಯಾಡ್ರಿ ಅಂತ ಜಿನ್ನಪ್ಪ ಅವರೆಲ್ಲ ಅಷ್ಟು ಬಾಯಿ ಹಾಕಿದರೂ ಅಂತ ಕಳಸಲಿಲ್ಲ. ಅದೂ ಹೋಗಲಿ, ತಮ್ಮದೂ ಹೋದ ಕೆಲಸ ಮನಸ್ಸಿಗೆ ತಕ್ಕಾಂಗ ಆದ್ಹಾಂಗ ಕಾಣೂದಿಲ್ಲ?" ಎಂದು ಬಾಳಾಚಾರ್ಯರೇ ಉತ್ತರ ಪ್ರಶ್ನೆಗಳನ್ನು ಅಡಗಿಸಿ ಕೇಳಿದರು.

"ಹೂಂ ಹಾಂಗs ಅನಬಹುದು" ಎಂದು ಯಶವಂತರಾಯರು ಚುಟುಕಾ ಗಿಯೇ ಉತ್ತರಿಸಿದರು.

"ಹಂಗಾರ ತಮ್ಮ ಆಸ್ತೀನs ಯಾರ್ಯಾರಿಗೋ ಬಿಟ್ಟುಕೊಡೋ ವಿಚಾರ ದಾಗ ಅವರಿದ್ದಾರನಬಾರದs?" ಆಚಾರ್ಯರ ಮರುಪಶ್ನೆ ಬಂದಿತು.

"ಏನ ಮಾಡೂದು ಆಚಾರಸ್ವಾಮಿ, ಅವರಿಲ್ಲೆ ಬಂದರ ವಾಡೇದೊಳಗ ಕಾಲಿಡದಂಥಾ ಪರಿಸ್ಥಿತಿ ಅದ. ಸ್ವಂತ ರೈತರೇ ಅವರ ಕೈಯಾಗಿಲ್ಲ. ಪಡದಪ್ಪನ ಭುಲತಾಪಿಯಿಂದ ಬಾಪೂಸಾಹೇಬ ಅವರಿಗೆ ಭೂಮಿ ಮತ್ತು ವಾಡೇದ ಕಬಜಾ ಕೊಡಲಿಕ್ಕೆ ಸಾಫ ಒಲ್ಲೆಂದಾಗ, ಆ ಹೆಣ್ಣುಮಗಳು ಏನು ಮಾಡಬೇಕು? ಆಗ ನಾ ಮಹಾರಾಜರ ಜೋಡಿನs ಮಾತಾಡಿದೆ. ಅವರು ಅದಕ್ಕೊಂದು ಹಾದೀ ಹೇಳಿದರು. ಈಗ ಲಕ್ಷ್ಮೀಬಾಯಿ ಹೆಸರಿಗೆ ಪಾದಳ್ಳೀ ಭೂಮಿ ಎಷ್ಟವs ನೋಡ್ರಿ,

ಅವೆಲ್ಲ ರಾಜೀನಾಮೆ-ಕಬಲಾಯತ ಆಗಿ, ಮಹಾರಾಜರ ಹೆಸರ್ಲೆ ಹಚ್ಚಬೇಕು. ಮಹಾರಾಜರಿಗೆ ಭೂಮೀ ಕಬಜಾ ಪಡಿಯೋದು ಹಗರಾಗತದ. ಅವರ ಹೆಸರಿಗೆ ಭೂಮಿ ಖಾತೆ ಆದಮ್ಯಾಲ, ಅವರು ಅದರ ಲಾವಣಿ ಸಾಗಿಸಿ ಬಂದ ದುಡ್ಡು ಲಕ್ಷ್ಮೀಬಾಯಿಗೆ ಕೊಡಬೇಕು. ಲಕ್ಷ್ಮೀಬಾಯಿ ಕಡಿಂದ ರಾಜೀನಾಮೆ-ಕಬಲಾಯತಿ ಕಲೆಕ್ಟರರ ಕಡೆಗೆ ಕಳಿಸೇ ನಾ ಇತ್ತಾಗ ಬಂದೆ" ಯಶವಂತರಾಯರು ಸಾದ್ಯಂತವಾಗಿ ತಮ್ಮ ಕೆಲಸವನ್ನು ವಿವರಿಸಿದರು.

"ಅಲ್ಲಾ ಈ ವ್ಯವಸ್ಥಾದಿಂದ ಲಕ್ಷ್ಮೀಬಾಯಿ ಈ ಊರಿಗೇ ಬರದ್ಹಾಂಗ ಆತಲ್ಲ. ಜಾಗಿರದಾರರ ವಾಡೇದ ಕಬಜಾ ಮಹಾರಾಜರು ತೊಗೋತಾರ. ಇಲ್ಲಿ ಜಾಗೀರದಾರರ ಮಾನ-ಪಾನ, ಹಕ್ಕು, ಭೂಮಿ-ಸೀಮಿ ಇಂದಿನಿಂದ ಮಹಾರಾಜರಿಗೆ ಸೇರಿದ್ಹಾಂಗಾತು. ಒಂದು ದೃಷ್ಟಿಯಿಂದ ಇದೂ ನೆಟ್ಟಗಾತೂ ಅನ್ರಿ. ಆದರ ತಲೆತಲಾಂತರದಿಂದ ನಡದು ಬಂದ ಜಾಗಿರದಾರರ ಮನೆತನ ಮಾತ್ರ ನಾಮಶೇಷ ಆದ್ಹಾಂಗಾತು. ಇದು ನೆಟ್ಟಗಾಗಲಿಲ್ಲ ಅನಸತದ" ನಿರ್ವಿಣ್ಣಭಾವದಿಂದ ಬಾಳಾಚಾರ್ಯರು ನುಡಿದರು.

"ಹಾಂಗೇನೂ ತಿಳಕೊಳ್ಳೋ ಕಾರಣ ಇಲ್ಲ. ಲಕ್ಷ್ಮೀಬಾಯಿಗೆ ಇಬ್ಬರು ಹೆಣಮಕ್ಕಳು ಅದಾರ. ಅವರ ಪೈಕಿ ಯಾರಿಗಾದರೂ ಗಂಡು ಸಂತಾನ ಹುಟ್ಟಿದರ ಲಕ್ಷ್ಮೀಬಾಯಿ ದತ್ತಕ ತೊಗೋಳ್ಳಿಕ್ಕೆ ಬರತದ. ಆಗ ಈ ಭೂಮಿ-ಸೀಮಿ ಮತ್ತ ಆಕಿಗೇ ಸಿಗಬೇಕೂ ಅಂತ ವಚನ ತೊಗೊಂಡ್ ಮಹಾರಾಜರಿಗೆ ಕಬಲಾಯತಿ ಬರಿಸಿ ಕೊಟ್ಟೈತಿ. ಇನ್ನ ಊರ ಪರಿಸ್ಥಿತಿ ಸುಧಾರಿಸಿತೆಂದರ ಲಕ್ಷ್ಮೀಬಾಯಿ ಇಲ್ಲೆ ವಾಡೇದಾಗ್ ಬಂದ ಇದ್ದರೂ ಇರಬಹುದು. ಇದಕಿನ್ನಾ ಬ್ಯಾರೆ ಯವಸ್ಥಾ ಮಾಡೂದ್ ಸಾಧ್ಯ ಆಗಲಿಲ್ಲಾ. ಇನ್ನೇನು, ಪಡದಪ್ಪನೋರು ಊರ ಬಿಟ್ಟ ಸುದ್ದಿ ಮೊದಲ್ ತಿಳದಿದ್ರ ಈ ಪ್ರಸಂಗೇನು ಬರತಿದ್ದಿಲ್ಲ. ಪಡದಪ್ಪನ ಆಸರ ಇಲ್ಲದ ನಮ್ಮ ಬಾಪೂಸಾಹೇಬ ಮುಂದ ಹೆಜ್ಜಿ ಇಡೂದಿಲ್ಲ. ಇನ್ನ ತಾನ್ ಊರ ಬಿಟ್ಟು ಹೋಗತಾನ ನೋಡೀರಂತ" ಯಶವಂತರಾಯರು ತಮ್ಮ ಮಾತಿನಿಂದಲೇ ಪರಿಸ್ಥಿತಿಯನ್ನು ಸುಧಾರಿಸುವಂತೆ ನುಡಿದರು.

ಅದೂ ನಿಜವಿತ್ತು. ಆದರೆ ಬಾಳಾಚಾರ್ಯರಿಗೆ ಇನ್ನೊಂದು ದಿಕ್ಕಿನಿಂದ ಭೀತಿಯಿತ್ತು. ಗೌಡಕಿ ವಾರಸಾ ಪ್ರಕರಣದಲ್ಲಿ ಲಿಂಗಪ್ಪ ಗೆದ್ದರೆ ಬಾಪೂಸಾಹೇಬ ಅವನ ಜೊತೆಗೆ ಕೂಡಬಹುದು. ಪಡದಪ್ಪನೂ ಸಾಮಾನ್ಯ ಗಿರಾಕಿಯಲ್ಲ. ಹೊತ್ತು

ಸಾಧಿಸಿ ತಿರುಗಿ ಊರಿಗೆ ಬಂದು, ಮಠ ತನ್ನದೆಂದು ನ್ಯಾಯ ಹೂಡುವ ಸಂಭವವೂ ಇತ್ತು. ಇನ್ನೇನು ಬಾಪೂಸಾಹೇಬನಿಗೆ ಮಹಾರಾಜರೊಡನೆ ಕುಸ್ತಿಯಾಡುವ ಪ್ರಸಂಗ ಬಿತ್ತು. ಅದಕ್ಕಂಜಿ ಅವನು ಊರು ಬಿಟ್ಟರೆ ಬಿಡಬೇಕು.

ಯಶವಂತರಾಯರು ಮುಂದೆ ಹೇಳಿದರು: "ಮಹಾರಾಜರಿಂದ ಭೂಮಿ ಲಾವಣಿ ತನಗಃ ಸಿಗಬೇಕೂ ಅಂತ ನಮ್ಮ ಬಾಪೂ ಕೇಳಬಹುದು. ಪಡದಪ್ಪ ಇದ್ದರ ಖಾತ್ರೀಲೆ ಅಂವಾ ಈ ಉಪಾಯ ಹೇಳತ್ತಿದ್ದ. ಅದಕ್ಕ ಅವಕಾಶ ಸಿಗಬಾರದಂತ ನಾ ಇನ್ನೊಂದು ಯವಸ್ಥಾ ಮಾಡಿ ಬಂದೇನಿ. ಇಂದುಪುರ ಸಂಸ್ಥಾನದ ಯೋಳು ಹಳ್ಳಿ ಕುಲಕರ್ಣಿಕಿ ನಿಮ್ಮೂರವರಃ ಒಬ್ಬರು ಮಾಡೂದುಲ್ಲೆ? ಏನ ಅವರ ಹೆಸರು? ಹಾಂ, ಶ್ಯಾಮರಾಯ, ಅವರನ್ನಃ ಭೂಮಿ ವಹಿವಾಟ ನೋಡಿಕೋಳ್ಳಿಕ್ಕೆ ಕಳಿಸಾಕ ಹೇಳಿ ಬಂದೀನಿ. ಇದಃ ಊರಾವ, ಮ್ಯಾಲೆ ಭಾಳ ವಜನದಾರ ಮನಶ್ಯಾ. ಅಂವಾ ಬಂದರ ನಿಮ್ಮ ಶೇಷಪ್ಪನ ಹಾರ್‍ಯಾಟನೂ ತಣ್ಣಗಃ"

ಹೊತ್ತಾಗಿದ್ದರಿಂದ ಯಶವಂತರಾಯರು ಇಷ್ಟು ಹೇಳಿ ಎದ್ದರು. ಬಾಳಾಚಾರ್ಯರಿಗೆ ಮುಂದಿನ ದಾರಿ ಏನು ಎಂದು ಯೋಚನೆ ಬಿತ್ತು. ಈಗಾಗಲೇ ಶ್ಯಾಮರಾಯ ಈ ಊರಿಗೆ ಬರುವನೆಂದು ಕೇಳಿ ಅವರಿಗೆ ಸಂತೋಷವಾಗಿತ್ತು. ಇದೇ ಊರವನಾದ ಶ್ಯಾಮರಾಯ ಆಚಾರ್ಯರಿಗೆ ಅಪರಿಚಿತನಲ್ಲ. ಕುಲಕರ್ಣಿ ಮನೆತನದ ಓಣಿಯಲ್ಲಿ ಅವರ ಮನೆ ಇಂದಿಗೂ ಇದೆ. ಶ್ಯಾಮರಾಯನ ತಂದೆ ರಾಮರಾಯನೂ ಆಚಾರ್ಯರು ಸರಿಓರಿಗೆಯವರು, ಬಾಲ್ಯಸ್ನೇಹಿತರು. ಆಚಾರ್ಯರಿಗೆ ಹಳೆಯ ನೆನಪುಗಳೆಲ್ಲ ಕೆರಳಿದವು. ಪ್ರತಿವರ್ಷವೂ ನವರಾತ್ರಿಗೆ ಆಚಾರ್ಯರು ರಾಮರಾಯನಿರುವಲ್ಲಿಗೆ ಹೋಗಿಬರುವದು ಪರಿಪಾಠವಾಗಿತ್ತು. ಆಶ್ವೀನ ಮಾಸ ಕಳೆದ ಮೇಲೆಯೇ ಅವರು ಊರಿಗೆ ಮರಳುತ್ತಿದ್ದರು. ಅಂಥ ಆತ್ಮೀಯತೆ, ಸ್ನೇಹಾದರಗಳು ಆಚಾರ್ಯರ ಬಾಳಿನಲ್ಲಿ ತಿರುಗಿ ಎಂದೂ ದೊರೆತಿರಲಿಲ್ಲ. ರಾಮರಾಯ ತೀರಿಕೊಂಡ ನಂತರ, ಶ್ಯಾಮರಾಯನ ಆಮಂತ್ರಣವನ್ನು ಒಂದಿಲ್ಲೊಂದು ಕಾರಣ ಹೇಳಿ ಅವರು ನಿರಾಕರಿಸುತ್ತಲೇ ಬಂದಿದ್ದರು. ಮಮತೆ ಆದರಗಳಲ್ಲಿ ಒಂದಂಶ ಕಡಿಮೆಯಾದರೂ ಆಚಾರ್ಯರ ಅಭಿಮಾನಕ್ಕೆ ಪೆಟ್ಟು ಬೀಳಬಹುದಾಗಿತ್ತು. ಅದು ಅವರಿಗೆ ಬೇಕಾಗಿರಲಿಲ್ಲ. ರಾಮರಾಯ ತೀರಿಕೊಂಡ ಮೇಲೆ ಹೃದಯದೊಳಗಿನ ಆತ್ಮೀಯತೆಯ ಭಾವನೆಗಳನ್ನೆಲ್ಲ ಅವರು ತಮ್ಮ ಹೃದಯದಾಳದಲ್ಲಿ ಹುಗಿದು ಮುಚ್ಚಿಬಿಟ್ಟಿದ್ದರು.

ಈಗ ಶ್ಯಾಮರಾಯ ತಿರುಗಿ ಪಾದಳ್ಳಿಗೆ ಬರುವ ಸುದ್ದಿಯನ್ನು ಕೇಳಿ ಹುದುಗಿದ್ದ ಭಾವನೆಗಳೆಲ್ಲ ಹೊರಹೊಮ್ಮಿದವು. ಶ್ಯಾಮರಾಯ ಆಚಾರ್ಯರಿಗೆ ಪ್ರಿಯನಾಗಿದ್ದ. ತಂದೆಯಿಂದ ನೇರವಾಗಿ ಇಳಿದು ಬಂದ ಸದ್ಗುಣಗಳ ಸಂಚಯವೇ ಅವನ ಆಸ್ತಿಯಾಗಿತ್ತು. ಹೊರಗಿನಿಂದ ನಡೆದು ಬರುವ ಪಾದಳ್ಳಿಯ ಪುಣ್ಯಶೇಷ ಈಗ ಪಾದಳ್ಳಿಯನ್ನು ಉದ್ಧರಿಸಬೇಕಾಗಿತ್ತು. ಶ್ಯಾಮರಾಯ ಬರುವನೆಂಬ ವಾರ್ತೆ ಆಚಾರ್ಯರ ಚಿಂತೆಯ ಭಾರವನ್ನೇ ಇಳಿಸಿತು. ಆಚಾರ್ಯರು ಸ್ವಭಾವತಃ ಕನಸುಗಾರರಲ್ಲವಾದರೂ ಈ ಒಂದು ಶುಭವಾರ್ತೆಯನ್ನು ಕೇಳಿದೊಡನೆ, ಪಾದಳ್ಳಿ ಸುಧಾರಿಸಬಹುದೆಂಬ ಹಗಲುಗನಸನ್ನು ಅವರು ಕಾಣತೊಡಗಿದರು. ಕಾಯದೆ ಜ್ಞಾನದಲ್ಲಿ ಶ್ಯಾಮರಾಯ ಶೇಷಪ್ಪನಿಗಿಂತ ಒಂದು ತೂಕ ಹೆಚ್ಚೆಂದೇ ಹೇಳಬೇಕು. ಆಮೇಲೆ ಶೇಷಪ್ಪನ ಕವಡುಗಂಟಕತನಕ್ಕೂ ಅವಕಾಶ ಉಳಿಯದಂತಾಗುವದು. ಬಾಪೂಸಾಹೇಬ ಊರು ಬಿಡುವದು ನಿಶ್ಚಿತ. ಪಡದಯ್ಯನಂತೂ ಈಗಾಗಲೇ ಊರು ಬಿಟ್ಟಿದ್ದಾನೆ. ಇವರಿಬ್ಬರ ಆಸರಿಲ್ಲದ ಲಿಂಗಪ್ಪ ಹೇಳಕೇಳದೆ ಅಜರಾಣಿಗೆ ಓಡಿಹೋಗುತ್ತಾನೆ. ಇದ್ದ ಸಮಸ್ಯೆಗಳೆಲ್ಲ ಕಣ್ಣು ಮುಚ್ಚಿ ತೆರೆಯುವಷ್ಟರಲ್ಲಿ ಪರಿಹಾರವಾಗಿಬಿಡುತ್ತವೆ. ಯುಗಯುಗಗಳಿಂದ ಸಂಗ್ರಹವಾದ ಕತ್ತಲೆ ಒಂದು ಕಿರಣದಿಂದಲೇ ಪರಿಹಾರವಾಗುವದಿಲ್ಲವೇ?

ಶ್ಯಾಮರಾಯ ಊರಿಗೆ ಬರಲಿರುವನೆಂಬ ಸುದ್ದಿ ಆಚಾರ್ಯರಿಂದ ಊರಲ್ಲೆಲ್ಲ ಹರಡಿತು. ಒಂದು ವರ್ಷದಿಂದ ಊರವರ ತಲೆ ತಿನ್ನುತ್ತಿದ್ದ ಸಮಸ್ಯೆಗಳಿಗೆಲ್ಲ ಒಂದು ಸುಗಮವಾದ ಮಾರ್ಗ ಕಂಡಂತಾದದ್ದರಿಂದ ಎಲ್ಲರೂ ಅದರ ಬಗ್ಗೆ ಮಾತಾಡತೊಡಗಿದರು. ಶೇಷಪ್ಪನ ಕಿವಿಗೇ ಇದು ಮೊದಲು ಬಿದ್ದದ್ದು. ಗೌಡರ ವಾರಸಾ ಪ್ರಕರಣದಲ್ಲಿ ರಾಜಕೀಯದ ಚದುರಂಗದಾಟವನ್ನಾಡಿ ತನ್ನ ಅಧಿಕಾರವನ್ನು ಅಬಾಧಿತವಾಗಿ ನೆಲೆಸಬೇಕೆಂದಿದ್ದ ಶೇಷಪ್ಪನಿಗೆ ಇದನ್ನು ಕೇಳಿ ಸಿಡಿಲು ಬಡಿದಂತಾಯಿತು. ಭವಿಷ್ಯವೆಲ್ಲ ಕಗ್ಗತ್ತಲೆಯಿಂದ ತುಂಬಿದಂತೆನಿಸಿತು. ತನ್ನ ಮಾತಿಗೇ ಜನ ಹೆದರುವ ಕಾಲ ಬಂದಿತ್ತು. ಶಂಕರಪ್ಪಗೌಡರು ಸತ್ತಮೇಲಂತೂ ಶೇಷಪ್ಪನೇ ಊರಿನ ಸ್ಥಾನದೇವತೆಯಾಗಿದ್ದ. ಶ್ಯಾಮರಾಯ ಅವನಿಗೂ ಅಪರಿಚಿತನಲ್ಲ. ಅವನ ಯೋಗ್ಯತೆ ಪಾದಳ್ಳಿಯ ಹೆಮ್ಮೆಯ ವಸ್ತುಗಳಲ್ಲೊಂದಾಗಿತ್ತು. ಅಂದಮೇಲೆ ಅವನು ಊರಿಗೆ ಬಂದ ಮೇಲೆ ತನ್ನ ಗತಿಯೇನು?

ಶೇಷಪ್ಪನ ಮಿದುಳು ವಿದ್ಯುಚ್ಛಕ್ತಿಗಿಂತ ವೇಗವಾಗಿ ಓಡಬಲ್ಲದಾಗಿತ್ತು.

ತನ್ನ ಅಧಿಕಾರ ಸ್ಥಿರವಾಗಿ ನಿಲ್ಲುವಂತೆ ಮಾಡಲು ಅವನ ಮನಸ್ಸು ಅನೇಕ ವಿಚಾರಗಳಲ್ಲಿ ತೊಡಗಿತು. ಸ್ವಾರ್ಥಸಾಧಕನ ಇಚ್ಛಾಶಕ್ತಿಗೆ ಮಾರ್ಗ ಕಂಡೇ ಕಾಣುತ್ತದೆ. ದಾದಾನನ್ನು ಜಾಮೀನಿನ ಮೇಲೆ ಶೇಷಪ್ಪ ಬಿಡಿಸಿದ ಉಪಕಾರ ವೊಂದು ಬಾಳಾಚಾರ್ಯರ ತಲೆಯ ಮೇಲೆ ಭಾರವಾಗಿ ಬಿದ್ದಿತ್ತು. ಅದರ ಸದುಪ ಯೋಗವನ್ನು ಇಂಥ ಅವಕಾಶದಲ್ಲಿ ಮಾಡಿಕೊಳ್ಳದಿದ್ದರೆ ಹೇಗೆ? ಶ್ಯಾಮರಾಯ ತನ್ನ ಪಾಳಿಯಲ್ಲಿ ಕುಲಕರ್ಣಿಕಿಯ ನೇಮಣೂಕಿಯನ್ನು ತನಗೇ ಮಾಡಿಸಿಕೊಡ ಬೇಕೆಂದು ಆಚಾರ್ಯರಿಗೆ ಕೇಳಲೇಬೇಕು. ಇಲ್ಲದಿದ್ದರೆ ಹೊಲಮನೆಗಳ ಆಧಾರ ವಿಲ್ಲದೆ, ಕಾಯದೆಜ್ಞಾನ ಉಪಯೋಗಕ್ಕೆ ಬಾರದೆ, ಶೇಷಪ್ಪ ಪಾದಳ್ಳಿಯಲ್ಲಿ ಬದುಕು ಮಾಡುವದಾದರೂ ಹೇಗೆ?

ತಟ್ಟನೆ ಶೇಷಪ್ಪ ಆಚಾರ್ಯರ ಮನೆಗೋಡಿದ. ಆಚಾರ್ಯರು ಪುರಾಣದ ಓಲೆಗಳನ್ನು ಬಿಚ್ಚಿ, ಮರುದಿನದ ಪುರಾಣದ ಸಿದ್ಧತೆಯಲ್ಲಿದ್ದರು. ಶೇಷಪ್ಪನ ಸಂಭ್ರಮದ ಆಗಮನವನ್ನು ಕಂಡು, ಪ್ರಸಂಗವೇನೆಂದು ಅವರಿಗೆ ಕೂಡಲೆ ಗೊತ್ತಾಯಿತು. ಶೇಷಪ್ಪ ಒಂದು ಕ್ಷಣ ಸುಮ್ಮನೆ ಕುಳಿತ. ಟೊಂಕದಿಂದ ನಶ್ಯದ ಬುರುಡೆಯನ್ನು ತೆಗೆದು, ನಶ್ಯವನ್ನು ಅಂಗೈಯಲ್ಲಿ ತೀಡಿಯೇ ತೀಡಿದ. ಆಚಾರ್ಯರು ಅದನ್ನೆಲ್ಲ ನೋಡುತ್ತ ಸುಮ್ಮನೆ ಅಪೂರ್ವತಾಳ್ಮೆಯಿಂದ ಕುಳಿತಿದ್ದರು. ಶೇಷಪ್ಪನೇ ಮೊದಲು ಮಾತಾಡಲಿ ಎಂದು ಅವರ ಆಶಯ. ಶೇಷಪ್ಪನೇ ನಿರ್ವಾಹ ವಿಲ್ಲದೆ ಮಾತು ಪ್ರಾರಂಭಿಸಿದ. ತಡವರಿಸುತ್ತಲೇ ತನ್ನ ಬೇಡಿಕೆಯನ್ನು ಆಚಾರ್ಯ ರೆದುರು ಮಂಡಿಸಿದ. ಆಚಾರ್ಯರು ಅವನು ಹೇಳಿದ್ದೆಲ್ಲವನ್ನೂ ಆಸಕ್ತಿಯಿಂದ ಕೇಳಿಕೊಂಡರು. ಸ್ವಲ್ಪ ಹೊತ್ತು ವಿಚಾರ ಮಾಡಲೇಬೇಕಾಯಿತೇನೋ ತಡೆದು ಹೇಳಿದರು :

"ನೋಡು ಶೇಷಪ್ಪಾ, ಇದು ನನಗ ಸಂಬಂಧ ಇಲ್ಲದ ಮಾತು. ಆದರೂ ಕೇಳತೀದಿ ಅಂದಮ್ಯಾಲೆ ಒಂದ ಮಾತು ಹೇಳಬೇಕಾಗತದೇನಪಾ. ಶ್ಯಾಮರಾಯ ತನ್ನ ಪಾಳೀ ಕುಲಕರ್ಣಿಕಿ ತಾ ಮಾಡಿಕೊಂಡರ ನಿಂದೇನು ಗಂಟು ಹೋತಪಾ? ಮೇಲಾಗಿ ಕುಲಕರ್ಣಿಕಿ ಅಂದರ ಅದೇನು ಚಿರಂಜೀವಿ ಪಟ್ಟ ಇದ್ದಾಂಗಃ? ಇಂದ ನೀನು, ನಾಳೆ ಅವರು. ಮೇಲಾಗಿ ಈ ಊರು ಬಿಟ್ಟು ನಾಲ್ವತ್ತು ವರ್ಷ ದೇಶಾಂತರ ಕಳೆದ ಮನೆತನಾ ಅದು. ಅವರು ತಿರುಗಿ ತಮ್ಮೂರಿಗೆ ಬರತೀನಿ ಅಂದಾಗ ನಾ ಅದಕ್ಕ ಕಲ್ಲ ಹಾಕಲಾರೆ" ಆಚಾರ್ಯರು ಆತ್ಮೀಯತೆಯ ಮಾತು

ಗಳನ್ನೇ ಆಡಿ ಶೇಷಪ್ಪನ ಮನವೊಲಿಸಲು ಪ್ರಯತ್ನಿಸಿದರು.

"ಅವರು ಊರಿಗೆ ಬರಲಿಕ್ಕೆ ನಂದೇನೂ ತಕರಾರ ಇಲ್ಲ ಆಚಾರ . ಆದರ ಊರ ಪರಿಸ್ಥಿತಿ ನಿಮಗೇನೂ ಅರೇದ್ದಲ್ಲ. ಆಡಿದರ ಒಂದ ಕೆಟ್ಟಿತು, ಬಿಟ್ಟರ ಒಂದು ಕೆಟ್ಟಿತು. ಇಂಥಾ ಹೊತ್ತಿನ್ಯಾಗ ಸರಕಾರಿ-ದಪ್ತರ ನನ್ನ ಕೈಯಾಗ ಇರೂದss ನೆಟ್ಟಗಂತ ನನ್ನ ಅಭಿಪ್ರಾಯ. ಈಗ ನೋಡ್ರಿ ಪಾರ್ವತೆವ್ವನ ವಾರಸಾ ಆಪೀಲ ಪ್ರಕರಣನss ಅದಲ್ಲಾ. ನಾ ಕುಲಕರ್ಣಿಕಿ ಮಾಡತಿದ್ದೆ ಅಂದರ ಪ್ರಾಂತ ಕಚೇರಿಯವರು ನನ್ನ ಭಿಡೆ ಮುರೀಲಾರದ, ಮಾಮಲೇದಾರರ ಹುಕುಮು ತಿರಗಸತಾರ. ಶ್ಯಾಮರಾಯ ಬಂದ ಮ್ಯಾಲೆ ಆ ಆಪೀಲು ಸೆಟೆದು ಹೋದರ ಆ ದೋಷ ನನ್ನದಲ್ಲ. ಪಡದಪ್ಪ ತಿರಗಿ ಊರಿಗೆ ಬರಲಿಕ್ಕಿಲ್ಲ ಅಂತ ತಿಳೀ ಬ್ಯಾಡ್ರಿ. ಇನ್ನೊಂದ ತಿಂಗಳೆರಡ ತಿಂಗಳ ಹೋಗಲಿ. ಬಣವಿ ಸುಟ್ಟದ್ದಕ್ಕ ಖಟ್ಲೆ ಹಾಕೂದುಲ್ಲ ಅಂತ ತಿಳದ ಮ್ಯಾಲ ತಿರಗಿ ಮತ್ತ ಬರಾವನss. ಅಂವಾ ಬರದು ಕೊಟ್ಟ ಕಾಗದಪತ್ರ ಎಲ್ಲಾ ನನ್ನ ಕಡಿಗೆ ಅವ. ನನ್ನ ಕೈಯಾಗ ಸರಕಾರಿ ದಪ್ತರ ಇದ್ದಾಗ, ಮಠದ ಭೂಮಿಯ ಕಬಜಾ ಸಿಗೋದು ದುಸ್ತರ ಅನಿಸಿ ಬರಲಿಕ್ಕಿಲ್ಲಾ. ಅದಕ್ಕ ಶ್ಯಾಮರಾಯರ ನೇಮಣೂಕಿ ಆಗೂದು ಬ್ಯಾಡಾ ಅಂತ ನಾ ಅನ್ನೂದು. ಪರಿಸ್ಥಿತಿ ಶಾಂತ ಆಗಲಿ. ನಾನss ಸ್ವತಃ ರಾಜೀನಾಮೆ ಬರದು ಕೊಟ್ಟು ಅವನ ನೇಮಣೂಕಿ ಮಾಡಸತೇನಿ ಆತss. ಇಕಾ ಇದು ಬರೇ ಮಾತಲ್ಲ ಆಚಾರss, ವಚನಾ ಅಂತ ತಿಳೀರಿ." ಶೇಷಪ್ಪ ತಿಳಿಯಬಾರದೆಂಬಂತೆ ಮಾತಿನ ಜಾಲವನ್ನು ಬೀಸಿ, ಸ್ವಾರ್ಥ ಸಾಧಿಸುವ ಹವಣಿಕೆಯಲ್ಲಿದ್ದ.

ಆಚಾರ್ಯರು ಹೆಚ್ಚು ಮಾತಾಡಲಿಲ್ಲ. ಶೇಷಪ್ಪನ ಮಾತಿನ ಕಡೆಗೆ ವಿಶೇಷ ಲಕ್ಷ್ಯವಿತ್ತು. ಶ್ಯಾಮರಾಯನಿಗೆ ಮುಂದೆ ತೊಂದರೆಯಾದರೆ ಅದರಲ್ಲಿ ಶೇಷಪ್ಪ ನದೂ ಪಾಲಿದ್ದರೆ ಆಶ್ಚರ್ಯವೇನಲ್ಲ. ಎಷ್ಟು ಅನುಭವಚತುರನಾದರೂ ಶ್ಯಾಮ ರಾಯ ಪಾಪಳ್ಳಿಗೆ ಹೊಸಬನೇ. ಈಗ ಶೇಷಪ್ಪನ ಮಾತನ್ನು ಸಂಪೂರ್ಣ ವಿರೋಧಿಸಿದರೆ, ಮುಂದೆ ತಮ್ಮ ಜೊತೆಗೆ ಶ್ಯಾಮರಾಯನೂ ದುಃಖಿಸ್ಕೇಡಾಗ ಬೇಕಾದೀತು. ಶ್ಯಾಮರಾಯನಲ್ಲಿದ್ದದ್ದು ಕೇವಲ ಜಾಣತನ; ಆದರೆ ಶೇಷ ಪ್ಪನ ಧೂರ್ತತೆ ಅವನಲ್ಲಿಲ್ಲ. ಇವನ್ನೆಲ್ಲ ವಿಚಾರಮಾಡಿದ ಆಚಾರ್ಯರು "ಆಗಲಿ, ಅಂವಾ ಒಂದಸಲಾ ಬರಲಿ, ಮುಂದ ನೋಡೋಣಂತ" ಎಂದಿಷ್ಟೇ ಹೇಳಿ ಶೇಷ ಪ್ಪನ ಮೂಗಿಗೆ ತುಪ್ಪ ಸವರಿದರು. ಶೇಷಪ್ಪನಿಗೆ ಅಷ್ಟೇ ಎಳೆ ಸಾಕಾಯಿತು,

ಹೆಚ್ಚಡವನ್ನೆಲ್ಲ ನುಂಗಲಿಕ್ಕೆ. ಮಾತು ಬಿತ್ತಿ ತಂತ್ರವನ್ನು ಬೆಳೆಯಬಲ್ಲ ಕೃಷಿ ವಿದ್ಯೆ ಅವನಿಗೆ ಜನ್ಮಜಾತವಾಗಿ ಬಂದಿತ್ತು.

ಇದಾಗಿ ಒಂದು ವಾರವೂ ಕಳೆದಿರಲಿಲ್ಲ. ಶ್ಯಾಮರಾಯ ಕುಟುಂಬಸಮೇತ ಪಾದಳ್ಳಿಗೆ ಬಂದೇಬಿಟ್ಟ. ಅವನ ಪಾಲಿಗೆ ಬಂದ ಮನೆ ಇನ್ನೂ ಸುಣ್ಣ-ಬಣ್ಣ ಕಂಡಿರಲಿಲ್ಲವೆಂದು, ತಾತ್ಪೂರ್ತಿಕವಾಗಿ ಆಚಾರ್ಯರ ಮನೆಯಲ್ಲಿಯೇ ಧ್ವಜ ಹಾಕಬೇಕಾಯಿತು. ಆಚಾರ್ಯರಿಗೆ ಅವರೆಲ್ಲರನ್ನು ಕಂಡು, ಸತ್ತುಹೋದ ಮಕ್ಕಳೆಲ್ಲರು, ಅವರ ಹೆಂಡಿರು ಮಕ್ಕಳೊಡನೆ ತಿರುಗಿ ಬಂದಷ್ಟು ಸಂತೋಷ ವಾಯಿತು. ಬಂದ ಇಡೀ ದಿನವೆಲ್ಲ ಆಪ್ತಾಲೋಚನೆಯಲ್ಲಿಯೇ ಕಳೆಯಿತು. ಮರುದಿನ ಶ್ಯಾಮರಾಯ ವಾಡೆಗೆ ಹೋಗಿ ಬಾಪೂಸಾಹೇಬನನ್ನು ಭೆಟ್ಟಿಯಾದ.

ವಾಡೆಯ ಸದರಿನಲ್ಲಿ ಬಾಪೂಸಾಹೇಬ ಏನೋ ಲೆಕ್ಕಪತ್ರ ನೋಡುತ್ತ ಕುಳಿತ್ತಿದ್ದ. ಶ್ಯಾಮರಾಯ ಬಾಪೂಸಾಹೇಬನಿಗೆ ಅಪರಿಚಿತನಾದರೂ ಶ್ಯಾಮರಾಯ ನಿಗೆ ಮಾತ್ರ ಜಾಗಿರದಾರರ ವಾಡೆಯ ಸಂಪೂರ್ಣ ಪರಿಚಯವಿತ್ತು. ಔಪಚಾರಿಕ ವಾಗಿ ಬಾಪೂಸಾಹೇಬನಿಗೆ ನಮಸ್ಕರಿಸಿ ಶ್ಯಾಮರಾಯ ತನ್ನ ಗುರುತನ್ನು ತಾನೇ ಹೇಳಿಕೊಂಡ. ಪುತಳಾಬಾಯಿಯ ನಿಧನವಾದ ಬಗ್ಗೆ ಲಕ್ಷ್ಮೀಬಾಯಿಯವರಿಗೆ ದುಃಖವಾದ ಬಗ್ಗೆ ಸಂದೇಶ ಮುಟ್ಟಿಸಲು ಬಂದುದಾಗಿ ಮಾತು ಪ್ರಾರಂಭಿಸಿದ. "ಅಂದ್ಹಾಂಗಃ ಈಗ ಲಕ್ಷ್ಮೀಬಾಯಿಸಾಹೇಬರ ಆಸ್ತಿ ಎಲ್ಲಾ ಮಹಾರಾಜರ ಹೆಸ ರಿಗೆ ಬಂದದ. ಅವರ ಹೆಸರು ದಾಖಲಾಗೋ ಹುಕುಂ ಬಂದ ಕೂಡಲೆ ಅವರೇ ಈ ಊರಿಗೆ ಸ್ವತಃ ಬರಾವರಿದ್ದಾರ. ಅದಕ್ಕ ಅವರ ಸ್ವಾಗತದ ತಯಾರಿ ಮಾಡಲಿಕ್ಕೆ ಲಕ್ಷ್ಮೀಬಾಯಿವರಃ ಹೇಳಿ ಕಳಿಸ್ಯಾರ" ಶ್ಯಾಮರಾಯ ಮೃದುವಾಗಿ ವಿನಯ ದಿಂದಲೇ ಎಲ್ಲ ಸಂಗತಿಗಳನ್ನೂ ಅರಿಕೆ ಮಾಡಿಕೊಂಡ. ಬಾಪೂಸಾಹೇಬನಿಗೆ ಏನು ಹೇಳಬೇಕೋ ತಿಳಿಯದೆ "ಹಂ, ಹಂ" ಎಂದಿಷ್ಟೇ ಉತ್ತರವಿತ್ತು ಸುಮ್ಮನಾದ.

ಮುಂದೆ ಒಂದೆರಡು ದಿನ ಶ್ಯಾಮರಾಯ ರೈತರನ್ನು ಕಾಣುವದರಲ್ಲಿಯೇ ಕಳೆದವು. ಅವರವರ ಮನೆಗಳಿಗೆ ಹೋಗಿ ಸುಖದುಃಖ ಕೇಳಿಕೊಂಡನು. ಮಹಾ ರಾಜರು ಪಾದಳ್ಳಿಗೆ ಬಂದಾಗ ಅವರಿಗೆ ಹೇಳಿ ಹಿಂದಿನ ಬಾಕಿ ಸೂಟ ಬಿಡಿಸುವ ದಾಗಿ ಆಶ್ವಾಸನವಿತ್ತನು. ರೈತರಿಗೆ ಕಾಳು-ಕಣಿಕೆ ಕೊಳ್ಳಲು ಸಾಲ ಕೊಡಲು ಕೇಳಿ ಕೊಳ್ಳೋಣವೆಂದೂ ಭರವಸೆಯಿತ್ತನು. ಪಾದಳ್ಳಿಯ ತುಂಬೆಲ್ಲ ಒಂದು ಹೊಸ ಕೋಲಾಹಲ ಹುಟ್ಟಿಕೊಂಡಿತು. ಇಂದುಪುರ ಮಹಾರಾಜರು ಬರುವ ಸುದ್ದಿ ಎಲ್ಲ

ರನ್ನೂ ಜಾಗೃತಗೊಳಿಸಿತ್ತು. ಅವರೇ ಊರ ಜಾಗೀರಿಯ ಮಾಲಕರಾದರೆ ದೈವ ತೆರೆಯಿತೆಂದು ಎಲ್ಲರಿಗೂ ಹರ್ಷವಾಯಿತು. ಬಾಪೂಸಾಹೇಬನ ಕಿವಿಯ ವರೆಗೂ ಈ ಮಾತು ಬೀಳುವದೇನೂ ತಡವಾಗಲಿಲ್ಲ.

ವಾಡೆಯಲ್ಲಿ ಜೀತವಿಲ್ಲದೆ ದುಡಿದು ಆಯಾ ತೆಗೆದುಕೊಳ್ಳುವ ಹೊಲೆಯ ರಲ್ಲಿ ಈ ಸುದ್ದಿ ವಿಪರೀತವಾದ ಪರಿಣಾಮವನ್ನುಂಟುಮಾಡಿತ್ತು. ಮಹಾರಾಜರು ಬಂದ ಮೇಲೆ ಊಟದ ಮೇಲೆ ಸಂಬಳವೂ ದೊರೆಯುವದೆಂದು ಯಾರೋ ಅವ ರಿಗೆ ಹೇಳಿದ್ದರು. ಅಂದಮೇಲೆ ಏನೂ ಕೊಡದೆ ದುಡಿಸಿಕೊಳ್ಳುವ ಬಾಪೂ-ಸಾಹೇಬನ ಮನೆಗೇಕೆ ದುಡಿಯಲಿಕ್ಕೆ ಹೋಗಬೇಕು? ಬಾಪೂಸಾಹೇಬ ಬೇಗ ಊರು ಬಿಡುವಂತಾಗಬೇಕಾದರೆ ತಾವು ವಾಡೆಯ ಪಟಾಂಗಣದ ಕಸ ಹೊಡೆಯ ಲಿಕ್ಕಾಗಲಿ, ಕಟ್ಟಿಗೆ ಒಡೆಯಲಿಕ್ಕಾಗಲಿ ಹೋಗಲೇಬಾರದೆಂದು ನಿರ್ಧರಿಸಿದರು.

ಪ್ರಸಂಗ ಬಂದಾಗ ಊರವರೆಲ್ಲ ಕೈಬಿಟ್ಟರೂ ಹೊಲೆಯರು ತನ್ನ ಕೈಬಿಡ ಲಾರರೆಂದು ಭಾವಿಸಿಕೊಂಡಿದ್ದ ಬಾಪೂಸಾಹೇಬನಿಗೆ ಇದರಿಂದ ಬಲವಾದ ಆಘಾತ ವಾಯಿತು. ಇದರ ಜೊತೆಗೆ ಇನ್ನೂ ಒಂದು ಪೆಟ್ಟು ಬಿದ್ದಿತ್ತು. ಭೂಮಿಯನ್ನು ಸಾಗುವಳಿಗೆ ತನ್ನಿಂದ ಹಿಡಿದ ಬಗ್ಗೆ ಕಬುಲಾಯತಿ ಬರೆದು ಕೊಡಲು ರೈತರನ್ನು ಕರೆಕಳಿಸಿದಾಗ, ಅವರೆಲ್ಲ ವಾಡೆಗೆ ಬರದೆ ಮುಖ ತಪ್ಪಿಸತೊಡಗಿದರು. ಮೇಲಾಗಿ ತನ್ನನ್ನೊಂದು ಮಾತು ಕೇಳುವ ಸೌಜನ್ಯವನ್ನು ಕೂಡ ತೋರದೆ, ಹೊಲದಲ್ಲಿಯ ಗಿಡಗಳನ್ನೆಲ್ಲ ಕಡಿದು ಮಹಾರಾಜರ ಸತ್ಕಾರಾರ್ಥವಾಗಿ ಮಂಟಪದ ಸಿದ್ಧತೆ ಯಲ್ಲಿ ರೈತರೆಲ್ಲ ತೊಡಗಿದ್ದರು. ಇದರಿಂದ ದಿಕ್ಕುಗಾಣದೆ ಸಲಹೆ ಪಡೆಯಲು ಯಶವಂತರಾಯರ ಕಡೆಗೆ ಕಳಿಸಿದ ಆಳು ತಂದ ಸಂದೇಶವೂ ಪ್ರತಿಕೂಲ ವಾಗಿತ್ತು. "ಮರ್ಯಾದವಂತನ್ಹಾಂಗ ನಡಕೋತಿದ್ದರ ಕಚೇರಿಗೆ ಹೋಗಂತ ಹೇಳು" ಎಂದು ಅವರು ಹೇಳಿಕಳಿಸಿದ್ದರು. ಇವೆಲ್ಲಕ್ಕೂ ಕಳಸವಿಡುವಂತೆ ಇನ್ನೊಂದು ಸಿಡಿಲೂ ಎರಗಿತು. ಲಿಂಗಪ್ಪನ ವಾರಸಾ ಅಪೀಲಿನ ವಿಚಾರಣೆಯ ಮುದ್ದತ ನಿಯ ಮಿಸಿದ ನೋಟೀಸು ಕೈಗೆ ಬಿತ್ತು. ಬಾಪೂಸಾಹೇಬ ತತ್ತರಿಸಿಹೋದ. ಪಡಪಪ್ಪನ ಆಧಾರ ಎಂದೋ ತಪ್ಪಿಹೋಗಿತ್ತು. ಶೇಷಪ್ಪನೂ ಈಗ ವಿರೋಧಿಪಕ್ಷವನ್ನು ಸೇರಿದ್ದ. ಬಾಪೂಸಾಹೇಬನಿಗೆ ಆಪ್ತಮಿತ್ರರೇ ಪಾವಳ್ಳಿಯಲ್ಲಿರಲಿಲ್ಲ. ಆದದ್ದಾಗ ಲೆಂದು ಶೇಷಪ್ಪನ ಮನೆಗೇ ಹೋಗಿ ತನ್ನ ದುಗುಡವನ್ನೆಲ್ಲ ತೋಡಿಕೊಂಡ.

ಶೇಷಪ್ಪ ಅವನನ್ನು ತಿರಸ್ಕರಿಸಲಿಲ್ಲ. ಪರಿಸ್ಥಿತಿಯನ್ನೆಲ್ಲ ಅವನೂ ಅರ್ಥ

ಮಾಡಿಕೊಂಡಿದ್ದ. ರಾಜೀನಾಮೆ ಕಬುಲಾಯತಿಯನ್ನು ಕಲೆಕ್ಟರರು ಮಂಜೂರ ಮಾಡಿದ ನಂತರ, ಭೂಮಿಗಳೆಲ್ಲ ಮಹಾರಾಜರ ಹೆಸರಿನಲ್ಲಿ ದಾಖಲಾಗಬೇಕು. ಇನ್ನೂ ಹುಕುಮು ಬಂದಿಲ್ಲವೆಂದ ಮೇಲೆ ಈಗಲೇ ಹೆದರುವ ಕಾರಣವಿಲ್ಲ ಹುಕುಮು ಬರದೆ ಮಹಾರಾಜರು ಪಾದಳ್ಳಿಗೆ ಬರಲಾರರು. ಹುಕುಮು ಹೊರಡ ದಂತೆಯೇ ಮಾಡಿಬಿಟ್ಟರಾಯಿತಲ್ಲ ? ಆಗ ರೈತರಿಗೆಲ್ಲ ತಾವು ಮೋಸ ಹೋದೆ ವೆಂದು ಗೊತ್ತಾಗುವದು. ಶ್ಯಾಮರಾಯ ಉರುಳಿಸಿದ ಬುರುಡೆಯ ಬಗ್ಗೆ ಅವರಿಗೆ ಖಾತ್ರಿಯಾಗುವದು. ಈಗ ಮಾಡಬೇಕಾದದ್ದೆಂದರೆ ಬೆಳಗಾವಿಗೆ ಹೋಗಿ ಕಲೆಕ್ಟ ರರನ್ನು ಕಂಡು, ಹುಕುಮು ಹೊರಡದಂತೆ ಮಾಡಬೇಕು. ಅದಕ್ಕಾಗಿ ಕೈತುಂಬ ಹಣವನ್ನು ಚಲ್ಲಬೇಕಾದೀತು; ಆದರೆ ನಿರ್ವಾಹವಿಲ್ಲ. ಇದು ಶೇಷಪ್ಪ ಬಾಪೂ ಸಾಹೇಬನಿಗೆ ಕೊಟ್ಟ ಸಲಹೆಯಾಗಿತ್ತು.

ಬಾಪೂಸಾಹೇಬನಿಗೆ ಈ ಸಲಹೆಯಿಂದ ಹೊಸ ಹುರುಪು ಬಂದಿತು. ತಾನು ಪಾದಳ್ಳಿಯ ವಾಡೆಯಲ್ಲಿ ಸ್ಥಿರವಾಗಿ ನೆಲೆಸಬೇಕಾದರೆ ಧೈರ್ಯ ತೋರದೆ ಗತಿಯಿಲ್ಲ ವೆನಿಸಿತು. ರೈತರಲ್ಲಿ ಕೆಲವರನ್ನು ಆಳು ಹಚ್ಚಿ ಬಲಾತ್ಕಾರದಿಂದ ವಾಡೆಗೆ ಕರೆಸಿದ. ತನ್ನ ಪರವಾನಗಿ ಇಲ್ಲದೆ ಜಾಗೀರಿಯ ಭೂಮಿಯಲ್ಲಿ ಗಿಡಗಳನ್ನು ಕಡಿದದ್ದಕ್ಕಾಗಿ ಖಟ್ಲೆ ಹಾಕುವದಾಗಿ ಬೆದರಿಸಿದನು. ಇಲ್ಲಿಯ ವರೆಗೆ ಭೂಮಿಯ ಕಬುಲಾಯತಿ ಗಳೆಲ್ಲ ತನ್ನ ಹೆಸರಿನಲ್ಲೇ ಇಲ್ಲವೇ? ಅದರ ಬಲದ ಮೇಲೆ ತಾನು ಏನು ಬೇಕಾ ದರೂ ಮಾಡಬಹುದೆಂದು ಸೂಚಿಸಿದ. ಕಬುಲಾಯತಿಯನ್ನು ತನ್ನ ಹೆಸರಿನಲ್ಲಿ ಬರೆದುಕೊಡದಿದ್ದರೆ ಬೇರೆಯವರಿಗೆ ಭೂಮಿಯನ್ನು ಸಾಗುಮಾಡಲು ಕೊಡುವ ದಾಗಿ ಬೆದರಿಕೆ ಹಾಕಿದ. ಇದನ್ನು ಕೇಳಿದ ರೈತರಲ್ಲಿ ಮತ್ತೆ ಗಲಿಬಿಲಿ ಉಂಟಾಯಿತು. ಕೆಲವರು ಶೇಷಪ್ಪನಲ್ಲಿ ಸಲಹೆ ಪಡೆಯಲು ಓಡಿದರು. ಅವನ ಮಾತು ಕೇಳಿ ದಾಗ ತಾವು ಹಿಡಿದ ದಾರಿ ತಪ್ಪೆಂದು ಅವರಿಗೆ ಹೊಳೆಯಿತು. ಯಾವುದನ್ನೂ ನಂಬದಂತಾಯಿತು. ವಾಡೆಯಲ್ಲಿಯ ರಾಜಕೀಯ ಪ್ರಕರಣಗಳ ಮೇಲೆಯೇ ಅವರ ಹಿಡಿ ಅನ್ನದ ಸಮಸ್ಯೆ ಅವಲಂಬಿಸಿತ್ತು.

ಇದೆಲ್ಲದರ ಪರಿಣಾಮ ಪಾದಳ್ಳಿಯ ಭೂಮಿಯ ಮೇಲೆಯೇ ಆಯಿತೆನ್ನ ಬಹುದು. ಪಾದಳ್ಳಿಯ ಭೂಮಿಗಳಲ್ಲಿ ಮೂರರಲ್ಲೊಂದು ಭಾಗ ಜಾಗಿರದಾರರದು, ಇನ್ನೊಂದು ಭಾಗ ಗೌಡರದು. ಉಳಿದ ಒಂದು ಭಾಗ ಶ್ಯಾನುಭೋಗ ಹಾಗೂ ರೈತರದು. ಲಿಂಗಪ್ಪನ ವಾರಸಾ ಪ್ರಕರಣದ ತಕರಾರಿನ ಸಲುವಾಗಿ ಗೌಡರ ಹೊಲ

ಗಳಲ್ಲಿ ಕುಂಟೆ ಹೋಗಿರಲಿಲ್ಲ. ಯಾರಿಗೆ ಕಬುಲಾಯತಿ ಕೊಡಬೇಕೆಂಬ ಸಂಶಯ ದಲ್ಲಿ ರೈತರು ಮಳುಗಿದ್ದರಿಂದ ಜಾಗೀರದಾರರ ಭೂಮಿಯಲ್ಲಿಯೂ ಹರಗಿರಲಿಲ್ಲ. ಪಾದಳ್ಳಿಯ ಸುತ್ತುಮುತ್ತಲಿನ ಹೊಲಗಳೆಲ್ಲ ಬಿಸಿಲು ತಿನ್ನುತ್ತ ಕೇಳುವವ ರಿಲ್ಲದೆ ಬಿದ್ದಿದ್ದವು. ರೋಹಿಣಿ ಮಂಟಪ ಕಟ್ಟಿ ವ್ಯರ್ಥವಾಗಿ ಆಸೆ ತೋರಿಸಿ ಹೋಯಿತು. ಮೃಗ ಹೊಡಿತು. ತೆಳುಮೋಡ ಆಕಾಶದಲ್ಲಿ ಕೂಡಿಕೊಂಡವು. ಜಡಿಮಳೆ ಪ್ರಾರಂಭವಾಯಿತು; ಪಡುಗಾಳಿಯು ತಂಪು ಹನಿ ಚಲ್ಲಿದಂತಾಗಿ ಭೂಮಿಯು ಕೆನ್ನೆ ನವಿರೇರಿತು. ಕಂಡಲ್ಲೆಲ್ಲ ನೆಲ ಹಸಿರು ಮುರಿಯತೊಡಗಿತು. ಕಾರಹುಣ್ಣಿವೆ ಬಂದಿತು. ಹದಗಾಲದ ರಹಸ್ಯ ಸಂದೇಶವನ್ನು ಭೂಮಿಯಲ್ಲಿ ಊಸಿ ರಿತು. ನೆಲ ಒಡಮುರಿದೆದ್ದಿತು; ಆಕಳಿಸಿತು; ಕಣ್ಣು ತೆರೆಯಿತು. ಆದರೆ ಮನುಷ್ಯನ ಕಾದಾಟಗಳಲ್ಲಿ ನೆಲ ಸೆರೆಯಾಗಿತ್ತು. ಮುಗಿಲು ಕರೆದರೂ ಭೂಮಿಗೆ ಬಿಡುಗಡೆ ಯಾಗಲಿಲ್ಲ. ಸಾಗುಮಾಡಬೇಕಾದ ಭೂಮಿ ಬಂಜೆ-ನೆಲವಾಗಿ ಮರುಗತೊಡಗಿತು.

ಇದೇ ಹೊತ್ತಿಗೆ ಮಹಾರಾಜರ ಹೆಸರಿನಲ್ಲಿ ಜಾಗೀರಿನ ಹೊಲಗಳೆಲ್ಲ ದಾಖ ಲಾದ ಬಗ್ಗೆ ಕಲೆಕ್ಟರರಿಂದ ಹುಕುಮು ಬಂದಿತು. ಆ ಸುದ್ದಿಯನ್ನು ಕೇಳಿದವನೇ ಶ್ಯಾಮರಾಯ ಎಲ್ಲ ರೈತರನ್ನೂ ಕರೆಸಿ ತಿಳಿಹೇಳಿದನು. ಲಕ್ಷ್ಮೀಬಾಯಿಯವರು ರಾಜೀನಾಮೆ-ಕಬುಲಾಯತಿಯನ್ನು ಬರೆದು ಕೊಟ್ಟದ್ದರಿಂದ ವಾಡೆ ಮಹಾರಾಜರ ದಾಯಿತು. ನಾಳೆ ಕಾರಹುಣ್ಣಿವೆಯಲ್ಲಿ ಎತ್ತು ಕರಿಹರಿಯುವದು ಜಾಗೀರದಾರರ ಹಕ್ಕು. ವಾಡೆಯಿಂದ ಎತ್ತುಗಳನ್ನೊಯ್ದು ಅಗಸೆಯಲ್ಲಿ ಕರಿಹರಿದ ಬಳಿಕ, ತಿರುಗಿ ವಾಡೆಗೆ ಅವುಗಳು ಬಂದು ನಿಲ್ಲಬೇಕು. ಇದಕ್ಕಾಗಿ ವಾಡೆಯ ಕಬಜಾ ಪಡೆಯು ವದು ಅಗತ್ಯ.

ಶ್ಯಾಮರಾಯನ ಮಾತಿನಿಂದ ರೈತರೆಲ್ಲ ಹುರುಪುಗೊಂಡರು. ತಮ್ಮ ಬಿಡುಗಡೆಯ ಕಾಲ ಒಮ್ಮೆ ಬಂದಿತಂತೆನಿಸಿತು. ರೈತರ ಹಿಂಡು ವಾಡೆಯ ಕಬಜಾ ಪಡೆಯಲು ವಾಡೆಯ ಕಡೆಗೇ ನಡೆಯಿತು. ಈ ಸುದ್ದಿ ಕೇಳಿದ ಹೊಲಗೇರಿಯ ವರೂ ಅವರನ್ನು ಹಿಂಬಾಲಿಸಿದರು. ಎತ್ತಿನ ಗೋದಲೆಯನ್ನು ಸಾರಿಸಿ ಶಿಫಾರಸು ಪಡೆಯುವ ಹೊತ್ತು ಬಂದಾಗ ತಾವೇಕೆ ಹಿಂದೆ ಬೀಳಬೇಕೆಂಬ ವಿಚಾರ ಅವ ರನ್ನು ವಾಡೆಗೆ ಎಳೆದು ತಂದಿತ್ತು.

ಜಾಗೀರದಾರರ ಹಿರಿ ಕಮತಿಗ ಇಮಾಮಸಾಹೇಬ ಆರಡಿ ಎತ್ತರದ ಆಜಾನುಬಾಹು ಆಳು. ಕಾಲಲ್ಲಿಯ ಜಿರಿಜಿರಿ ಕೆರವುಗಳನ್ನು ಬೇಕೆಂದೇ ಸಪ್ಪಳ

ಮಾಡುತ್ತ, ಪಟಗಾದ ಶಮನನ್ನು ಹಿಂದಿನಿಂದ ಮುಂದೆ ಚಿಮ್ಮಿಕೊಂಡು ವಾಡೆ ಯಲ್ಲಿ ಕಾಲಿಟ್ಟ. ಧಾಬೆಯಲ್ಲಿ ಕಟ್ಟಿದ ಎಮ್ಮೆ-ಆಕಳುಗಳನ್ನು ಒಂದೊಂದಾಗಿ ಬಿಚ್ಚಿ ಹೊರಗೆ ಅಟ್ಟಿದ. ತನ್ನ ಜೊತೆಗೆ ಬಂದವರನ್ನುದ್ದೇಶಿಸಿ "ಲೇ ಧಾಬೆ ಹಸನ ಮಾಡಾಕ ಗಡಾನ ಬರ್‍ರಿ. ಒಳ ಗ್ವಾಡಿ ಹೊರ ಗ್ವಾಡಿ ಸಾರಸಾಕ ಹೊಲ್ಯಾರಿಗೆ ಹೇಳ್ರಿ" ಎಂದು ಪಾದಳ್ಳಿಗೇ ಕೇಳಿಸುವಂತೆ ಗುಡುಗಿದ.

ಒಳಗಿದ್ದ ಬಾಪೂಸಾಹೇಬ ಈ ಗುಡುಗನ್ನು ಕೇಳಿ ದಿಗಿಲುಗೊಂಡು ಪಡ ಸಾಲೆಗೆ ಬಂದ. ಧಾಬೆಯಿಂದ ದನಗಳೆಲ್ಲ ಹೊರಗೆ ಹೋಗುತ್ತಿರುವದನ್ನು ಕಂಡು ಸಂತಪ್ತನಾದ. "ಯಾರಲೇ ಅವರು ದನಾ ಯಾಕ ಹೊರಗ ಅಟ್ಟತೀರಿ?" ಎಂದು ಆರ್ಭಟಿಸಿದ. ಇಮಾಮುಸಾಹೇಬ ಅವನ ಮುಂದೆ ಬಂದು ನಿಂತು, ಬಗ್ಗಿ ಮುಜುರೆ ಮಾಡಿ "ಧನ್ಯಾರ, ದನಾ ನಿಮ್ಮವ್ರರಿ. ಅವನ್ನ ಮನ್ಯಾಗ ಒಯ್ದು ಕಟಗೋಳ್ರಿ. ವಾಡೇ ಇನ್ನಮ್ಯಾಗ ಮಹಾರಾಜರದು. ನಾವು ಅವರ ರೈತರು. ಹೊರಗಿನವರ ದನಾ ಇಲ್ಲಿರಬಾರದಂತ ಬಿಚ್ಚಿ ಹೊರಗ ಹಾಕಾಕ ಹತ್ತೀವು" ಎಂದ.

"ವಾಡೆ ಮಹಾರಾಜರದಂತ ಯಾರ ಹೇಳತಾರ?"

"ಕಲೇಕಟರಸಾಹೇಬರ ಹುಕುಮು ಬಂದೈತರಿ. ಲಕ್ಷ್ಮೀಬಾಯಿಸಾಹೇಬರ ಆಸ್ತಿ ಎಲ್ಲಾ ಮಹಾರಾಜರಿಗೆ ಸೇರೇತಂತರಿ "

"ಯಾರವರು ನಿಮಗ ಹೇಳಿದವರು? ಲಕ್ಷ್ಮೀಬಾಯಿಗೆ ಆಸ್ತಿ ವಿಲೇವಾಟ ಮಾಡಲಿಕ್ಕೆ ಅಧಿಕಾರಾನs ಇಲ್ಲ."

"ಇತ್ಯೋ ಇಲ್ಲೋ, ಕಲೆಕಟರಸಾಹೇಬರಿಗೇ ಗೊತ್ತರಿ. ಇಲ್ಲಾಂದರ ಹುಕುಮು ಹ್ಯಾಗ ಬರದಾರರಿ?" ಇಮಾಮ ಮರ್ಯಾದೆ ಮೀರಿಯೇ ಉತ್ತರ ಇತ್ತ. ಅಷ್ಟೇ ಅಲ್ಲ, ಪಾವಟಿಗೆ ಹತ್ತಿ ಪಡಸಾಲೆಯಲ್ಲಿಯೇ ಕಾಲಿಟ್ಟ. "ಖಬರದಾರ್ ಒಳಗ ಬಂದ್ಯಂದರ !" ಬಾಪೂಸಾಹೇಬ ಪ್ರತಿಭಟಿಸಿದ. ಸುತ್ತು ಮುತ್ತಲಿನ ತನ್ನ ಆಳುಗಳಿಗೆ "ಏನ ನೋಡತೀರ್‍ಯೊ, ಚಂಡು ಹಿಡದು ಹೊರಗ ಹಾಕರಿ ಅವನ್ನ" ಎಂದು ಆಜ್ಞೆ ಮಾಡಿದ. ಆದರೆ ಒಬ್ಬ ಆಳೂ ನಿಂತಲ್ಲಿಂದ ಮಿಸುಕ ಲಿಲ್ಲ. ಬಾಪೂಸಾಹೇಬನ ಸಿಟ್ಟು ಕ್ಷಣಾರ್ಧದಲ್ಲಿ ಭಯವಾಗಿ ಪರಿಣಮಿಸಿತು. ಸಿಟ್ಟಿಗೋ ಹೆದರಿಕೆಗೋ ಅಂತೂ ಕಾಲು ಥರಗುಟ್ಟಿ ನಡುಗುತ್ತಿದ್ದವು. ಇಮಾಮ ನಿಗೆ ಯಾವುದರ ಪರಿವೆಯೂ ಇರಲಿಲ್ಲ. ಆತ್ಮವಿಶ್ವಾಸದಿಂದ ಪಡಸಾಲೆಗೆ ಬಂದು ನಿಂತು ಆಳುಗಳಿಗೆ ಸನ್ನೆ ಮಾಡಿದ. ಪ್ರಸಂಗ ವಿಕೋಪಕ್ಕೆ ಹೋಗಬಹುದೆಂದು

ನರಿ, ಹಿತ್ತಲಬಾಗಿಲಿನಿಂದ ಹೊರಗೋಡಿದ.

ಪುಣ್ಯಕ್ಕೆ ರತ್ನಾ ಯಶವಂತರಾಯನೊಡನೆ ತವರಿಗೆ ಹೋದವಳು ಇನ್ನೂ ಬಂದಿರಲಿಲ್ಲ. ಆಳುಕಾಳುಗಳಂತೂ ಯಾವಾಗಲೋ ಜನರ ಹಿಂಡನ್ನೇ ಸೇರಿ ಬಿಟ್ಟಿದ್ದರು. ಇಡೀ ವಾಡೆ ಕೈವಶವಾಯಿತು. ಜನರ ಆವೇಶ ಕ್ರಮವಾಗಿ ಹೆಚ್ಚಾಗುತ್ತಲೇ ಇತ್ತು. ವಾಡೆಯ ಪ್ರತಿಯೊಂದು ಕೋಣೆಯಲ್ಲಿಯೂ ಜನರು ನುಗ್ಗಿದರು. ಕೈಗೆ ಸಿಕ್ಕ ಸಾಮಾನುಗಳನ್ನೆತ್ತಿ ತಂದು ಹೊರಗೆ ಇಟ್ಟರು. ಸ್ವಲ್ಪ ಹೊತ್ತಿನಲ್ಲಿಯೇ ವಾಡೆಯ ಪಟಾಂಗಣವೆಲ್ಲ ಬೆಲೆಯುಳ್ಳ ಸಾಮಾನುಗಳಿಂದ ತುಂಬಿಹೋಯಿತು. ಮನೆಯೆಲ್ಲ ಬರಿದಾಯಿತು. ಕಲೆಕ್ಟರರ ಹುಕುಮು ಬಂದ ಸುದ್ದಿಯನ್ನು ಯಶವಂತರಾಯರಿಗೆ ತಿಳಿಸಲೆಂದು ದಾದಾ ಅಜರಾಣಿಗೆ ಹೋಗಿದ್ದ. ಇಲ್ಲದಿದ್ದರೆ ಈ ಹಗಲು-ದರೋಡೆಯಲ್ಲಿ ಅವನೂ ಭಾಗವಹಿಸುತ್ತಿದ್ದನೆಂದು ಹಲವರಾಡಿಕೊಳ್ಳುತ್ತ ಆ ಸಾಮಾನುಗಳನ್ನು ಆಸೆಗಣ್ಣುಗಳಿಂದ ನೋಡುತ್ತ ನಿಂತಿದ್ದರು.

ಜಾಗೀರದಾರರ ರೈತರು ವಾಡೆಯಲ್ಲಿ ನುಗ್ಗಿ ಬಾಪೂಸಾಹೇಬನನ್ನು ಓಡಿ ಸಿದರೆಂದು ವಾಲೀಕಾರ ಮಲ್ಲಪ್ಪ ಸುದ್ದಿ ಹೇಳಿದಾಗ ಶ್ಯಾಮರಾಯ ಊಟಕ್ಕೆ ಕುಳಿತಿದ್ದ. ಅದನ್ನು ಕೇಳಿ ಊಟ ಬಿಟ್ಟೇ ಎದ್ದು, ಓಡಿ ಬರಬೇಕಾಯಿತು. ವಾಡೆಯ ಪಟಾಂಗಣದಲ್ಲಿ ರಾಶಿಯಾಗಿ ಬಿದ್ದಿದ್ದ ವಸ್ತುಸಂಗ್ರಹವನ್ನು ನೋಡಿ ಅವನ ಎದೆಯೊಡೆಯಿತು. ನಿಂತವರೆಲ್ಲ ಕೈಗೊಂದು ತೆಗೆದುಕೊಂಡು ಹೋದರೆ ಏನು ಗತಿ ಎಂದು ಹೆದರಿಕೆಯುಂಟಾಯಿತು. ಆ ಸಾಮಾನುಗಳೆಲ್ಲ ಅಪಹರಿಸ-ಲ್ಪಟ್ಟರೆ ಆ ಗುನ್ಹೆಯ ಜವಾಬ್ದಾರಿಯೆಲ್ಲ ತನ್ನ ಮೇಲೆಯೇ! ಶ್ಯಾಮರಾಯ ಬಂದದ್ದನ್ನು ನೋಡಿ ಹೊರಗೇ ನಿಂತಿದ್ದ ಇಮಾಮ ಸಗರ್ವ ಹಾಸ್ಯದಿಂದ "ವಾಡೆ ಕಬಜಾಕ ಬಂತಲ್ರೀ ಕುಲಕರ್ಣ್ಯಾರ" ಎಂದು ಆತ್ಮಸ್ತುತಿಗೆ ತೊಡಗಿದ.

ಶ್ಯಾಮರಾಯನ ಹುಬ್ಬುಗಂಟಿಕ್ಕಿದವು. "ಛೆಲೋ ಮಾಡಿದಿರಿ. ಸಾಮಾನೆಲ್ಲ ಹೊರಗ ತಂದಿಡಂತ ಯಾರು ಹೇಳಿದರೋ ನಿಮಗ? ಅವು ಯಾರವು ಅಂತ ತಿಳಿ ದೀರಿ? ಲಕ್ಷ್ಮೀಬಾಯಿಸಾಹೇಬರವು ಅವು. ವಾಡೆ ಮಹಾರಾಜರದಾತಂತ ನಮ್ಮ ಕೈಯಾಗಿನ ಹಿರೇತನಾ ಬಂತೇನು? ಅವನ್ನೆಲ್ಲ ಮತ್ತೆ ಒಳಗೊಯ್ದು ಒಂದ ಕ್ವಾಣ್ಯಾಗ ಹಾಕರಿ. ಅದರೊಳಗ ಬಾಪೂಸಾಹೇಬರ ಸಾಮಾನೆಷ್ಟ ಅದ, ಅದನ್ನ ಅವರಿಗೆ ಕೇಳಿ-ಗಾಡ್ಯಾಗ ಹೇರಿ ಅವರ ಊರಿಗೆ ಕಳಿಸಬೇಕು.

ಬಾಪೂಸಾಹೇಬರು ನಮ್ಮ ಬಾಯಿಸಾಹೇಬರಿಗೆ ತಮ್ಮ ಆಗಬೇಕು. ಅವರ ಅ
ಮಾನ ಆಗೂ ಹಾಂಗ ನಾ ಏನೂ ಮಾಡಗೊಡೂದಿಲ್ಲ. ತಿಳಿತೇನು ?" ಎಂದ
ಅವರನ್ನೆಲ್ಲ ತುಡುರಿ, ಅಸ್ತವ್ಯಸ್ತವಾಗಿ ಬಿದ್ದ ಸಾಮಾನುಗಳೆಲ್ಲವನ್ನು ಜೋ
ಯಿಂದ ಒಳಗೆ ಇಡಿಸಿದನು.

ಓಣಿಯ ತುಂಬ ಈ ಮೋಜನ್ನು ನೋಡುತ್ತ ಚಿಕ್ಕ ಚಿಕ್ಕ ಹುಡುಗರ
ನೆರೆದಿದ್ದರು. ಕಟ್ಟೆಯ ಮೇಲೆ ಕುಳಿತ ಮುದುಕನೊಬ್ಬ ಅವರನ್ನು ಬೆದರಿ
ಕಳಿಸುತ್ತಿದ್ದ. ಆ ಕೋಲಾಹಲಕ್ಕೆ ಜನರು ಒಬ್ಬೊಬ್ಬರಾಗಿ ಕೂಡಿದರು. ದೊಡ
ಗುಂಪೇ ಕೂಡಿ ಓಣಿ ಹಿಡಿಸದಾಯಿತು. ಮೊಟ್ಟಮೊದಲನೆಯ ಸಾರೆ ಜಾಗೀ
ದಾರ ಮನೆಯ ಸಾಮಾನುಗಳೆಲ್ಲ ಸೂರ್ಯನ ಬೆಳಕನ್ನು ಕಂಡದ್ದರಿಂದ ಜನ
ಸಾಮಾನ್ಯರೂ ಕೂಡ ಅವುಗಳನ್ನು ನೋಡುವಂತಾಯಿತು.

:: ೨೬ ::

ಮರುದಿನವೇ ಕಾರಹುಣ್ಣಿವೆ. ಬಯಲುಸೀಮೆಯ ಎಲ್ಲ ಹಳ್ಳಿಗಳಲ್ಲಿಯಂ
ಪಾದಳ್ಳಿಯಲ್ಲಿಯೂ ಈ ಹಬ್ಬಕ್ಕೆ ಎಂದಿಲ್ಲದ ಉತ್ಸಾಹ. ನಿಜವಾಗಿ ನೋಡಿದರೆ ಈ
ವರ್ಷ ಭೂಮಿಯೆಲ್ಲ ಸಾಗುಮಾಡದೆ ಬಿದ್ದಿತ್ತು; ಊರಲ್ಲಿ ವಾತಾವರಣ ಸರಿಯಾ
ಗಿರಲಿಲ್ಲ. ಆದರೆ ಜನರ ಉತ್ಸವಪ್ರಿಯತೆ, ಅದಕ್ಕೂ ಹೆಚ್ಚಾಗಿ ಈ ವರ್ಷ ಹುಟ್ಟಿ
ಈರ್ಷ್ಯೆ ಕಾರಹುಣ್ಣಿವೆಯ ಆಚರಣೆಗೊಂದು ಬಣ್ಣವಿಟ್ಟವು. ಶಂಕರಪ್ಪಗೌ
ರಿದ್ದಾಗ ಅವರ ಎತ್ತುಗಳ ಮೆರವಣಿಗೆ ಊರೇ ಬಂದು ನೋಡುವಂತಿರುತ್ತಿತ್ತು. ಈ
ವರ್ಷವೂ ಆ ಸಂಪ್ರದಾಯ ಮುರಿಯಬಾರದೆಂದು ಗೌಡಿತಿಯ ಆಸೆ. ಊರಿಗೆ
ದೊಡ್ಡ ಮೆರವಣಿಗೆ ತೆಗೆಸುವದು ಗೌಡರ ಮನೆತನದ ಆನುವಂಶಿಕ ಸೊತ್ತು
ಆದ್ದರಿಂದ ಈ ವರ್ಷ ಗೌಡರ ಮನೆಯಲ್ಲಿ ಮೆರವಣಿಗೆಯ ತಯಾರಿ ಜೋರಿನಿಂದ
ನಡೆದಿತ್ತು. ಜಾಗೀರದಾರರ ರೈತರು ತಮ್ಮ ಎತ್ತುಗಳನ್ನೆಲ್ಲ ಕೂಡಿಸಿ, ಅವು ಜಾಗೀರ
ದಾರರ ಅದೇಕೆ ಮಹಾರಾಜರ ಎತ್ತುಗಳಿಗೆ ಉಚಿತವೆನಿಸುವಂಥ ಮೆರವಣಿಗೆ
ತೆಗೆಯುವ ಸಿದ್ಧತೆ ಮಾಡಲು ಪಟ್ಟೇ ಕೂಡಿಸಿದ್ದರು. ನಾರಿನ ಹಗ್ಗವನ್ನು ಹೊಸೆದೂ

ೂಸೆದೂ ಪ್ರತಿಯೊಬ್ಬ ರೈತನ ಹೆಂಡತಿಯ ಕೈಗಳೂ ದಡ್ಡುಬಿದ್ದಿದ್ದವು. ತಮ್ಮ ನ್ಮದಲ್ಲಿಯೇ ಎಂದೂ ಕಾಣದಿದ್ದ ಬೆಳ್ಳಿ-ಬಂಗಾರದ ಕೊಂಬುಚೇರುಗಳನ್ನೂ, ಜರ ಾರಿಯ ಜೂಲಗಳನ್ನೂ ರೈತರ ಎತ್ತುಗಳು ಕಾಣುವಂತಾಯಿತು. ಈ ಸಿದ್ಧತೆಯ ನ್ನೆಲ್ಲ ನೋಡಿದ ಗೌಡರ ಪರಿವಾರದವರು ತಮ್ಮ ಎತ್ತುಗಳ ಮೆರವಣಿಗೆ ಇದಕ್ಕೂ ುಗಿಲಾಗಿರಬೇಕೆಂದು ಹಟ ತೊಟ್ಟರು.

ಗೌಡರ ಮನೆತನದ ಮೆರವಣಿಗೆ ಪ್ರತಿವರ್ಷವೂ ವೈಭವದಿಂದ ನಡೆಯುತ್ತಿ ುವದರಿಂದ, ಪಾದಳ್ಳಿಗೇ ಹೆಸರಾದ ಸನಾಯಿ ಮೇಳದವರು ಅದಕ್ಕೆ ಬರುವದು ನಾಮೂಲಾಗಿ ಹೋಗಿತ್ತು. ಜಾಗೀರದಾರರ ರೈತರ ಮೆರವಣಿಗೆಗೆ ಮೇಳದವರು ೋಗದಂತೆ ಅವರಿಗೆ ಎರಡು ವರ್ಷದಷ್ಟು ಬಿದಾಗಿ ಕೊಡುವದಾಗಿ ಗೌಡರ ರಿವಾರದವರು ಕಟ್ಟಾಜ್ಞೆ ಮಾಡಿದ್ದರು. ಆಯತ ಹೊತ್ತಿಗೆ ಮಹಾರಾಜರ ರೈತ ೀಕೆ, ಸ್ವತಃ ಮಹಾರಾಜರೇ ಕೇಳಿದರೂ ಸನಾಯಿ ಮೇಳದವರು ದೊರೆಯುವದು ಸಾಧ್ಯವಿರಲಿಲ್ಲ. ಅಂದ ಮೇಲೆ ತಾವು ತೆಗೆಯುವ ಮೆರವಣಿಗೆ ಗೌಡರ ಮೆರವಣಿ ಗೆಗಿಂತ ಸಪ್ಪಗಾದರೆ ಏನು ಗತಿಯೆಂದು ರೈತರೆಲ್ಲರ ಚಿಂತೆ. ಅದಕ್ಕಾಗಿ ಅವರು ಮೆರವಣಿಗೆ ಹೊರಡಿಸುವ ವಿಚಾರವನ್ನೇ ಬಿಟ್ಟುಕೊಟ್ಟರು. ಆದರೆ ಮೆರವಣಿ ಗೆಯ ಮುಂದೆ ನೆಲ ಬಿರಿಯುವಂತೆ ಕುಣಿಯಲು ಸಿದ್ಧರಾಗಿದ್ದ ತರುಣರ ತಂಡವು ಹತಾಶವಾಗಿ ಗೌಡರ ಎತ್ತುಗಳ ಮುಂದೆಯೇ ಕುಣಿದು ತಮ್ಮ ಉತ್ಸಾಹವನ್ನು ತೀರಿಸಿಕೊಳ್ಳಬೇಕಾಯಿತು.

ಗೌಡರ ಎತ್ತುಗಳ ಮೆರಣಿಗೆ ಈ ವರ್ಷ ಅಪೂರ್ವವಾಗಿತ್ತೆಂದು ಜನರಾಡಿ ಕೊಳ್ಳುವಂತಾಯಿತು. ಬೆಳ್ಳಿ-ಬಂಗಾರದ ಕೊಂಬುಚೇರುಗಳನ್ನು ಧರಿಸಿಕೊಂಡು, ಬಣ್ಣಬಣ್ಣದ ಪೀತಾಂಬರಗಳನ್ನೇ ಹೊದ್ದುಕೊಂಡು ಸಾಲಾಗಿ ಜೋಡೆತ್ತುಗಳು ಸೊಕ್ಕಿನಿಂದ ನಡೆದಾಗ ಮದುವೆಯ ಮೆರವಣಿಗೆಯನ್ನೇ ಕಂಡಂತೆನಿಸಿತು.ದಾರಿಯ ಗುಂಟ ಸೂರೆಯಾದ ಚುರಮುರಿಯ ಕಾಳುಗಳು ರಾಶಿರಾಶಿಯಾಗಿ ಬಿದ್ದಿದ್ದವು.

ಸನಾಯಿ ಮೇಳದ ಲಯದೊಂದಿಗೆ ಹೆಮ್ಮೆಯ ಹೆಜ್ಜೆಹಾಕುತ್ತ ಎತ್ತುಗಳು ನಡೆದಿರುವಾಗ, ಅದರ ಅಪೂರ್ವ ವೈಭವವನ್ನೆಲ್ಲ ನೋಡಿ ಅಭಿಮಾನ ತುಂಬಿ ಬಂದ ಗೌಡರ ಪರಿವಾರದವರ ತಲೆಯಲ್ಲಿ ಇನ್ನೊಂದು ವಿಚಾರವೂ ಸುಳಿದು ಹೋಯಿತು. ತಮ್ಮ ಎತ್ತುಗಳನ್ನೇ ಈ ವರ್ಷ ಕರಿಹರಿಯಬೇಕೆಂದು ಒಳ ಗಿಂದೊಳಗೇ ಅವರ ನಿರ್ಧಾರ ಬಲಿಯಿತು. ಈ ವಿಚಾರದಿಂದ ಮೆರವಣಿಗೆಯಲ್ಲಿ

ಸೇರಿದ ಜನರಿಗೆಲ್ಲ ಹೊಸ ಉತ್ಸಾಹ ಬಂದಂತಾಯಿತು. ಹಲಗೆಯ ಸಪ್ಪಳ ಖಣ ಖಣವೆಂದು ಮಿಡಿಯುವಂತೆ ಅವರ ಭಾವನೆಗೆ ಒಮ್ಮೆಲೇ ತೀವ್ರತೆ ಬಂತು.

ಇದಕ್ಕೆ ಕಾರಣವಿಲ್ಲದಿರಲಿಲ್ಲ. ಸಾಮಾನ್ಯವಾಗಿ ಬೈಲುಸಿಮೆಯ ಎಲ್ಲ ಹಳ್ಳಿಗಳಲ್ಲಿಯೂ ಗೌಡರ ಎತ್ತುಗಳನ್ನೇ ಕರಿಹರಿಯುವದು ವಾಡಿಕೆ. ಆದರೆ ಪಾದಳ್ಳಿ ಮೊದಲು ಸಂಸ್ಥಾನವಿದ್ದು ಈಗ ಜಾಗೀರದಾರರ ಹಳ್ಳಿಯಾದುದರಿಂದ, ಅವರ ಎತ್ತುಗಳನ್ನೇ ಕರಿಹರಿಯುವದು ಪರಂಪರೆಯಿಂದ ನಡೆದು ಬಂದಿತ್ತು. ರಾಣೋಜಿರಾಯರ ಮರಣದ ನಂತರ ಶಂಕರಪ್ಪಗೌಡರು ಈ ಮಾನವನ್ನು ತನ್ನ ಮನೆತನಕ್ಕೇ ಎತ್ತಿಹಾಕಲು ಹೊಂಚು ನಡೆಸಿದ್ದರು. ಆದರೆ ಲಕ್ಷ್ಮೀಬಾಯಿ ಪ್ರಸಂಗಾವಧಾನದಿಂದ ವಾಡೆಯ ಮಾನ-ಪಾನ ವಾಡೆಗೇ ಸಲ್ಲಬೇಕೆಂದು ರೈತರಿಗೆ ಪ್ರೇರೇಪಿಸಿದ್ದರಿಂದ ಅಗಸೆಯ ಮುಂದೆ ದೊಡ್ಡ ಹೋರಾಟವಾಗಿ ಗೌಡರ ಯೋಜನೆ ವಿಫಲವಾಗಿತ್ತು.

ಈ ವರ್ಷ ವಾಡೆ ಬರಿದಾಗಿತ್ತು. ಅದನ್ನು ಕಾಯಲು ಪ್ರತಿಭಟಿಸುವವರು ಕೂಡ ಯಾರೂ ಇರಲಿಲ್ಲ. ಒಂದು ದೃಷ್ಟಿಯಿಂದ ಜಾಗೀರದಾರರ ಮನೆತನ ಸಂಪುಷ್ಟಕ್ಕೇ ಬಂದಿತ್ತೆಂವರೂ ಸಲ್ಲುವದು. ಅಂವ ಮೇಲೆ ಬೆಳೆಯುತ್ತಿರುವ ಗೌಡರ ಮನೆತನಕ್ಕೆ ಪಾದಳ್ಳಿಯ ಈ ಮಾನ-ಪಾನ ಸಂದರೆ ಏನು ತಪ್ಪು? ಊರ ಉತ್ಸಾಹಿತರುಣರೆಲ್ಲ ಈ ಮೆರವಣಿಗೆಯಲ್ಲಿ ಭಾಗವಹಿಸಿದರು. ತಲೆಗೇರುವಂತೆ ಕುಡಿದದ್ದರಿಂದ ದಣಿವಿನ ಎಚ್ಚರವಿಲ್ಲದೆ ಕುಣಿಯುತ್ತಿದ್ದರು. ಉತ್ಸಾಹದೊಡನೆ ಈ ವಿಚಾರವೂ ಸಂಪೂರ್ಣ ತಲೆಗೇರಿತು.

ಈರ್ಷ್ಯೆ ಮೊದಲಿನಿಂದಲೇ ಅವ್ಯಕ್ತವಾಗಿ ಇದ್ದೇ ಇತ್ತು. ಈಗ ಅದು ಸಿಡಿಯಲು ಒಂದು ಕಿಡಿ ಬೇಕಾಗಿತ್ತು ಅಷ್ಟೇ. ಇನ್ನೂ ಹೊತ್ತು ಮುಳುಗಿರಲಿಲ್ಲ. ಹಲಗೆಯ ಮೇಳವವರು ಜಾಗೀರದಾರ, ದೇಶಪಾಂಡೆ, ಗೌಡ, ಕುಲಕರ್ಣಿ ಮೊದಲಾದ ಮಾನಕರಿಗಳ ಮನೆಗೆ ಹೋಗಿ ಮುಜುರೆಹೊಡೆದು, ಕರಿಹರಿಯುವದಕ್ಕೆಂದು ಅವರನ್ನೆಲ್ಲ ಚಾವಡಿಗೆ ಕರೆತಂದರು. ಕರಿಹರಿಯಲು ರೈತರ ಎರಡು ಕೆಂಪು ಬಿಳಿ ಎತ್ತುಗಳು ಸೊಕ್ಕಿನಿಂದ ಬೇವಿನ ದಂಡೆಯಿಂದಲಂಕೃತವಾಗಿ ನಿಂತಿದ್ದವು. ಇವೆರಡೂ ಎತ್ತುಗಳು ಇಬ್ಬರು ರೈತರವಾಗಿದ್ದವು. ರೈತರಲ್ಲಿ ಒಬ್ಬನು ಜಾಗೀರದಾರರ ಭೂಮಿಯನ್ನು ಸಾಗುಮಾಡಿದವ; ಇನ್ನೊಬ್ಬ ಗೌಡ-ಕುಲಕರ್ಣಿಯರ ಭೂಮಿಯನ್ನು ಸಾಗುಮಾಡಿದವನಾಗಿದ್ದನು. ವರ್ಷದಂತೆಯೇ ಜಾಗೀರದಾರರ

ಎತ್ತನ್ನೇ ಕರಿಹರಿಯಲಾಗುತ್ತದೆಂಬ ಭಾವಹುಟ್ಟಿಸಲು ಈ ಯೋಜನೆಯನ್ನು ಮಾಡಲಾಗಿತ್ತು. ಪ್ರತಿವರ್ಷ ಎತ್ತುಗಳನ್ನು ಹಿಡಿಯುವವರೇ ಈ ವರ್ಷವೂ ಹಿಡಿದಿದ್ದರು. ಆದರೆ ಒಳಗಿಂದೊಳಗೇ ಹೊಂಚು ಬೇರೆಯಾಗಿತ್ತು. ಕರಿಹರಿದ ಮೇಲೆ ಎತ್ತುಗಳನ್ನು ವಾಡೆಗೆ ಒಯ್ಯದೆ ಗೌಡರ ಮನೆಗೆ ಸಾಗಿಸಬೇಕೆಂದು ಗುಟ್ಟಾಗಿ ಗೊತ್ತುಮಾಡಲಾಗಿತ್ತು. ಯಾರಿಗೂ ಅದರ ವಾಸನೆ ಕೂಡ ಬಡಿಯು ದಂತೆ ಎಚ್ಚರ ವಹಿಸಲಾಗಿತ್ತು. ಈರ್ಷ್ಯೆ ಒಳಗಿಂದೊಳಗೇ ಮಸೆಯುತ್ತಿತ್ತು.

ಕಾರಹುಣ್ಣಿವೆಯ ಬಣ್ಣವಿಲ್ಲದ ಸಂಜೆ ಪಡುವಣದಲ್ಲಿ ಹೇಗೋ ಮೂಡಿತು. ಕರಿಹರಿಯುವ ಎತ್ತುಗಳನ್ನು ಅಗಸೆಯಿಂದ ಒಂದೆರಡು ಫರ್ಲಾಂಗು ದೂರದ ನಿರ್ದಿಷ್ಟ ಸ್ಥಳದಲ್ಲಿ ನಿಲ್ಲಿಸಲಾಗಿತ್ತು. ಕರಿಹರಿದ ಎತ್ತು ಕೊಸರಿಕೊಂಡು ಓಡಿ ಹೋದರೆ ಊರ ಕರಿ ಹೋಗುವದೆಂಬ ವಿಚಾರದಿಂದ, ಎತ್ತು ಓಡಿ ಬರುವ ದಾರಿ ಯಲ್ಲಿ ಎರಡೂ ಬದಿಗೆ ಸಾಲಾಗಿ ಜನರು ನಿಂತಿದ್ದರು. ಗದ್ದಲ ಉಕ್ಕುತ್ತಿತ್ತು. ಏನೂ ಗೊಂದಲವಾಗದೆ, ಬಡಿದಾಟವಾಗದೆ ಕರಿಹರಿದು ಪಾರಾದರೆ ಸಾಕೆಂದು ಊರ ಹಿರಿಯರೆಲ್ಲ ಕಾತರದಿಂದ ನಿರಿಕ್ಷಿಸುತ್ತಿದ್ದರು. ಅದೇ ಹೊತ್ತಿಗೆ ಅಜರಾಣಿಗೆ ಹೋದ ದಾದಾ ತಿರುಗಿ ಬಂದು, ಚಾವಡಿಯಲ್ಲಿ ಕುಳಿತಿದ್ದ ಶ್ಯಾಮರಾಯ ಬಾಳಾ ಚಾರ್ಯರಿಗೆ ರಾಮ್‌ರಾವ್ ಮಾಡಿ ಕರಿಹರಿಯುವದನ್ನು ನೋಡತ್ತ ನಿಂತಿದ್ದ.

"ಹಾಯ್-ಹುಯ್-ಕೇ-ಹೊ-ಹೊ-ಹೊ" ಎಂಬ ಜನರ ಉತ್ಸಾಹಪ್ರದ ವಾದ ಕೇಕೆ, ಮೈಮೇಲೆ ಬೀಳುವ ಬಡಿಗೆಯ ಸಪ್ಪಳಕ್ಕೆ ಪ್ರೇರಿತವಾದ ಎತ್ತು ಗಳು ಜೀವದ ಪರಿವೆಯಿಲ್ಲದೆ ಓಡಿದವು. ಅವುಗಳ ಖುರದಿಂದೆದ್ದ ಧೂಳಿಯ ಮೋಡದಲ್ಲಿ, ಮಬ್ಬುಗತ್ತಲಲ್ಲಿ ಅವನ್ನು ನೋಡುವದೇ ಅಸಾಧ್ಯವಾಯಿತು. ಚಿಗರಿಯೋಟದಿಂದ ಧಾವಿಸಿದ ಆ ವೇಗವನ್ನು ಮಾತ್ರ ತಟ್ಟನೆ ಗುರುತಿಸಬಹು ದಾಗಿತ್ತು. ಜನರ ಕೇಕೆ ಅವ್ಯಾಹತವಾಗಿ ನಡೆದೇ ಇತ್ತು. ಅಗಸೆಯ ಬಾಗಿಲಿಗೆ ಇಬ್ಬರು ಹಿಡಿದಿದ್ದ ಬೇವಿನ ತೊಪ್ಪಲದ ದಾರವನ್ನು ಹರಿದು ಎತ್ತುಗಳು ಹೊರ ನುಗ್ಗಿದವು. ಜನರು ಮೈಯೆಲ್ಲ ಕಣ್ಣಾಗಿ ನೋಡುತ್ತಲೇ ಇದ್ದರು. ದೂರದಿಂದ ನೋಡುವವರಿಗೆ ಧೂಳಿಯ ಮೋಡದ ಹೊರತಾಗಿ ಬೇರೇನೂ ಕಾಣುತ್ತಿರಲಿಲ್ಲ. ಆಡಾಡುತ್ತ ಧೂಳಿಯ ಮೋಡ ಜಾಗೀರದಾರರ ಮನೆಯ ಕಡೆಗೆ ತಿರುಗದೆ ಗೌಡರ ಮನೆಯ ಕಡೆಗೆ ತಿರುಗಿದ್ದನ್ನು ಕಂಡು ಎಲ್ಲರೂ ವಿಸ್ಮಯದಿಂದ ಕಲ್ಲಾಗಿ ನಿಂತರು.

“ಕರಿ ಪಾಡೇಕ್ಕ ತಿರಗಸ್ರ್ಯೋ” ಶ್ಯಾಮರಾಯ ಆ ಗದ್ದಲದಲ್ಲೂ ಎಲ್ಲರಿಗೂ ಕೇಳಿಸುವಂತೆ ಚಾವಡಿಯ ಕಟ್ಟೆಯಿಂದಲೇ ಕೂಗಿಕೊಂಡ. ಕ್ಷಣದಲ್ಲಿ ಜನರಲ್ಲೆಲ್ಲ ಹಾಹಾಕಾರವೆದ್ದಿತು. ಏನೋ ಮೋಸವಾಗಿದೆಯೆಂದೆನಿಸಿತು. ಬಡಿದಾಟಕ್ಕೆ ಪ್ರಸಂಗ ಹುಟ್ಟಿಕೊಂಡಿತೆಂದು ಊರ ಹಿರಿಯರು ಚಿಂತಾಮಗ್ನರಾದರು. ಆದದ್ದು ಆಕಸ್ಮಿಕವೋ, ಪೂರ್ವಯೋಜಿತವೋ ತಿಳಿದುಕೊಳ್ಳಬೇಕಾಗಿತ್ತು. ಕಂಡವರೆಲ್ಲ ಕೂಗಿಕೊಂಡರು. ದಾದಾ ಚಾವಡಿಯ ಕಟ್ಟೆಯ ತುದಿಗೆ ನಿಂತುಕೊಂಡವನು ಟಣ್ಣನೇ ಕೆಳಗೆ ಹಾರಿ, ಚಾವಡಿಯ ಹಿಂದೆ ಹಾಯ್ದು, ಗೌಡರ ಮನೆಯ ದಾರಿಯಲ್ಲಿ ಎತ್ತುಗಳಿಗೆದುರಾಗಿ ನಿಂತುಕೊಂಡು, ಎತ್ತನ್ನು ಹಿಡಿದವನ ಕೈಯಿಂದ ಹಗ್ಗವನ್ನು ಕಸಿದುಕೊಳ್ಳಲು ಕೈ ಚಾಚಿದ. ಅವನ ಕೈಗೆ ಬೀಸು-ಬಿದಿರಿನ ಏಟೊಂದು ಬಿತ್ತು. ಇದೇ ಹೊತ್ತಿಗೆ ದಾದಾನ ಹಿಂದೆಯೇ ಓಡಿ ಬಂದ ಜನರು ಗುಂಪುಗೂಡಿದ್ದರಿಂದ ದಾರಿ ಕಟ್ಟಾಗಿ ಎತ್ತುಗಳು ಮುಸುಗುಡುತ್ತ ನಿಂತಲ್ಲಿಯೇ ನಿಂತವು.

ಗುಂಪಿನ ಭಾವನೆಗೆ ತೀವ್ರವಾದ ಉಕ್ಕು ಬಂದು, ನಡೆಯುವ ಕ್ರಿಯಾ ವ್ಯಾಪಾರವೆಲ್ಲ ನಿದ್ದೆಯ ಜೊಂಗರೆಯ ಬೆನ್ನನ್ನೇರಿದಂತೆ ಕಂಡಿತು. ಮುಂಗೈಗೆ ಎಲುಬು ಮುರಿಯುವಂತೆ ಪೆಟ್ಟು ಬಿದ್ದಿದ್ದರೂ ದಾದಾ ಅಳುಕಲಿಲ್ಲ. ಇನ್ನೊಂದು ಕೈಯಿಂದ ಮೈಯೊಳಗಿನ ಕಸುವನ್ನೆಲ್ಲ ಹಾಕಿ, ಹಗ್ಗ ಹಿಡಿದವನ ಕೆನ್ನೆಗೊಂದು ಏಟನ್ನು ಬೀಸಿದ. ಅವನು ನಿಂತಲ್ಲಿಯೇ ತತ್ತರಿಸಿ, ಕಿವಿಯನ್ನು ಹಿಡಿದುಕೊಂಡು ಮುಗ್ಗರಿಸಿ ಕೆಳಗೇ ಬಿದ್ದ. ಆಗ ಅವನ ಕೈಯೊಳಗಿಂದ ಹಗ್ಗವನ್ನು ತೆಗೆದುಕೊಂಡು, ಅದೇ ಹಗ್ಗದ ತುದಿಯಿಂದ ಇನ್ನೊಬ್ಬನಿಗೂ ದಾದಾ ಬೀಸಿ ಹೊಡೆದ. ಅವನು ಹಗ್ಗವನ್ನು ಬಿಟ್ಟುಕೊಟ್ಟು ದಾದಾನ ಮೇಲೆ ಏರಿ ಬಂದ. ದಾದಾ ಅವನ ಎದೆ ದೂಡಿದಾಗ ಅವನೂ ದೊಪ್ಪನೆ ಕೆಳಗೆ ಬಿದ್ದ. ಎರಡೂ ಎತ್ತಿನ ಹಗ್ಗಗಳು ದಾದಾನ ಕೈವಶವಾದವು. “ಎದೀ ಇದ್ದವರು ಎತ್ತಿನ ಸನೇಕ ಹಾಯರೆಲೇ!” ಎಂದು ಗುಡುಗು ಹಾಕಿ ದಾದಾ ಎತ್ತುಗಳನ್ನು ಮತ್ತೆ ಚಾವಡಿಯ ಕಡೆಗೇ ತಿರುಗಿಸಿದ.

ಆದರೆ ಅಲ್ಲಿಯೇ ಇನ್ನೊಂದು ತೊಡಕು. ದಾದಾನ ಗರಡೀಮನೆಯ ಗೆಳೆಯರು ಕರಿಹರಿಯುವದರಲ್ಲಿ ಆಸ್ಥೆಯಿಂದ ಭಾಗವಹಿಸಿದ್ದರು. ಗೌಡರ ಮನೆಗೆ ಕರಿಹರಿಯುವ ಎತ್ತುಗಳನ್ನು ಮುಟ್ಟಿಸುವ ಹೊಣೆಯನ್ನು ಅವರು ಹೊತ್ತಿದ್ದರು.

ಆದರೆ ದಾದಾನ ವಿರುದ್ಧ ನಿಂತು ಪ್ರತಿಭಟಿಸುವ ಧೈರ್ಯವಾಗಲಿ, ಮನಸ್ಸಾಗಲಿ ಅವರಿಗಿರಲಿಲ್ಲ. ದಾದಾ ಎತ್ತನ್ನು ತಿರುಗಿಸಿದೊಡನೆ ಕೂಡಿದ ಜನರೆಲ್ಲ ಓಡಿ ಬಂದು ಅವನ ಬೆನ್ನನ್ನು ಚೇರಿ ಚಪ್ಪರಿಸಿದ್ದರು. ಗೌಡರ ಮನೆಯವರು ಹೂಡಿದ ಒಳಸಂಚಿನ ಅರಿವು ಅವರಾರಿಗೂ ಇರಲಿಲ್ಲ.

ದಾದಾ ಎತ್ತುಗಳನ್ನು ತಿರುಗಿಸಿದ್ದನ್ನು ನೋಡಿ ಗೌಡರ ಪರಿವಾರದವರೆಲ್ಲ ಹತಾಶರಾದರು. ಗೌಡರ ಮನೆಯಲ್ಲಿಯೇ ಉಂಡು ತಿಂದು ಯಾವಾಗಲೂ ಆ ಮನೆತನದ ನೆರಳಾಗಿರುವ ದಾದಾ ತಿರುಗಿ ಬಿದ್ದನಲ್ಲ ಎಂದು ಒಳಗಿಂದೊಳಗೇ ಹಲ್ಲು ಮಸೆದರು. ಆದರೆ ಜನರ ಬೆಂಬಲ ದಾದಾನಿಗಿತ್ತು. ಅವನನ್ನು ಪ್ರತಿಭಟಿಸಿ ಬದುಕುವ ಸಾಮರ್ಥ್ಯವೂ ಯಾರಲ್ಲಿಯೂ ಇರಲಿಲ್ಲ. ಇನ್ನೇನು ಉಪಾಯ ಹೂಡಬೇಕೆಂದು ಅವರು ಆಲೋಚನೆಯಲ್ಲಿರುವಾಗಲೇ ಎತ್ತುಗಳು ಭರದಿಂದ ಓಡಿ ವಾಡೆಯನ್ನು ಸೇರಿದವು. ಗೌಡರ ಕರಿಹರಿಯಬೇಕೆಂದು ಒಳಸಂಚು ಹೂಡಿದವರ ಮುಖ ಹೆಂಚಿನಂತಾಗಿ ಅವರೆಲ್ಲ ತಮ್ಮ ಮನೆಯ ದಾರಿ ಹಿಡಿದಿದ್ದರು. ಶ್ಯಾಮರಾಯ ಮೊದಲೇ ವಾಡೆಗೆ ಹೋಗಿ, ಎತ್ತುಗಳು ಬಂದೊಡನೆ ತನ್ನ ಹೆಂಡತಿಯಿಂದ ಅವುಗಳಿಗೆ ಆರತಿ ಮಾಡಿಸಿದ. ವಾಡೆ ಮತ್ತೆ ಜಾಗೀರದಾರರ ವೈಭವದಿಂದ ತುಂಬಿದಷ್ಟು ಅವನಿಗೆ ಸಂತೋಷವಾಯಿತು. ಪರಂಪರೆ ಸುಸೂತ್ರವಾಗಿ ಸಾಗಿತಲ್ಲ ಎಂದು ಎಲ್ಲರಿಗೂ ತೃಪ್ತಿಯಾಯಿತು. ಅದು ಮುಗಿದ ಮೇಲೆ ದಾದಾ ವಾಡೆಯಿಂದ ಗೌಡರ ಮನೆಗೆ ಬಂದ.

ಗೌಡರ ಮನೆಯು ಮುಂಬಾಗಿಲನ್ನು ಶೂನ್ಯತೆ ಕವಿದುಕೊಂಡಿತ್ತು. ಕಟ್ಟೆಯ ಮೇಲೆ ಯಾರೂ ಇರಲಿಲ್ಲ ಕರಿಹರಿದ ಎತ್ತುಗಳು ತಮ್ಮ ಮನೆಗೆ ಬರುವದನ್ನು ತಪ್ಪಿಸಿದ ದಾದಾನ ಮೇಲೆ ಪಾರ್ವತೆವ್ವಗೌಡಿತಿಗೆ ಮಿತಿ ಮೀರಿದ ಸಿಟ್ಟು ಬಂದಿತ್ತು. ಆರತಿಗೆಂದು ಸಿದ್ಧವಾಗಿದ್ದ ಕಳಸ, ಹೊತ್ತಿದ ನೀರಾಂಜನಗಳು ನಿರುಪಯುಕ್ತವಾದದ್ದರಿಂದ ಅವಳಿಗೆ ಸಂಕಟವೂ ಆಗಿತ್ತು. ದಾದಾ ಎದುರಿಗೇ ಬಂದು ನಿಂತರೂ ಅವಳು ಅವನ ಮುಖ ನೋಡಲು ಕೂಡ ಒಪ್ಪಲಿಲ್ಲ. ಮಾತನಾಡುವದಂತೂ ದೂರವೇ ಉಳಿಯಿತು. ದಾದಾ ಒಂದು ಕ್ಷಣಹೊತ್ತು ಕಲ್ಲು ಗೊಂಬೆಯಂತೆ ನಿಲ್ಲಬೇಕಾಯಿತು.

ಕಾರಹುಣ್ಣಿಮೆಯ ಹಬ್ಬದೂಟ ಮಾಡಿ ಮರುದಿನ ಹೋಗಬೇಕೆಂದು ಶ್ಯಾಮರಾಯರು ಆಗ್ರಹಪಡಿಸಿದ್ದರು. ಆದರೆ ದಾದಾನನ್ನು ಪಾದಳ್ಳಿಯ ಕರಿ

ಒಂದೇ ಸವನೆ ಎಳೆಯುತ್ತಿದ್ದದ್ದರಿಂದ ಅವನು ಅಲ್ಲಿರಲು ಒಪ್ಪಲಿಲ್ಲ. ಅಂದು ಬೆಳಗಿನಲ್ಲಿಯೇ ಅಜರಾಣಿಯನ್ನು ಬಿಟ್ಟು ಕರಿಹರಿಯುವ ಹೊತ್ತಿಗೆ ಪಾದಳ್ಳಿಗೆ ಬಂದಿದ್ದ. ನಾಲ್ವತ್ತು ಮೈಲು ದಾರಿಯನ್ನು ನಡೆಯುತ್ತ ಬಂದದ್ದರಿಂದ ಅವನಿಗೆ ಆಯಾಸವೂ ಆಗಿತ್ತು. ಬೆಳಗಿನಿಂದಲೂ ಊಟವಾಗಿರಲಿಲ್ಲ. ಎತ್ತುಗಳನ್ನು ತಿರುಗಿಸುವ ಅಸಾಮಾನ್ಯ ಸಾಹಸದಲ್ಲಿ ಹಸಿವನ್ನು ಮರೆತಿದ್ದರೂ, ಈಗ ಅದು ಸೇಡು ತೀರಿಸಿಕೊಳ್ಳುವವರಂತೆ ಅವನನ್ನು ಬಾಧಿಸುತ್ತಿತ್ತು. ಹೋಳಿಹುಣ್ಣಿವೆಯಾದಂದಿನಿಂದ ಗೌಡರ ಪರಿವಾರದಲ್ಲಿ ಒಬ್ಬನಾಗಿ ಅಲ್ಲಿಯೇ ಉಂಡು ತಿಂದು, ಕಾವಲಿಗೆಂದು ಅಲ್ಲಿಯೇ ಮಲಗುತ್ತಿದ್ದ. ಈಗ ಗೌಡಿತಿಯ ಎದುರು ಬಂದು ನಿಂತಾಗ ಅವಳ ಉಪೇಕ್ಷೆಯನ್ನು ಕಂಡು ಮುಖಭಂಗವಾದಂತಾಗಿ ದಾದಾ ಅರೆಸತ್ತಂತಾಗಿದ್ದ.

ಅಜರಾಣಿಗೆ ಯಶವಂತರಾಯನಲ್ಲಿಗೆ ಹೋಗಿ ಬಂದ ಸುದ್ದಿಯನ್ನೆಲ್ಲ ಹೇಳಬೇಕಾಗಿತ್ತು. ತನಗೆ ಒಪ್ಪಿಸಿದ ಕೆಲಸದ ವರದಿಯನ್ನೆಲ್ಲ ಅವಳಿಗೆ ಒಪ್ಪಿಸಬೇಕಾಗಿತ್ತು. ಈ ಆತುರದಲ್ಲಿಯೇ ಅಲ್ಲಿ ಬಂದು ನಿಂತಿದ್ದ ದಾದಾ. ಆದರೆ ಅವಳಿಂದಲೋ ಈ ಉಪೇಕ್ಷೆ. ಏನು ತಪ್ಪು ಮಾಡಿರುವೆನೆಂಬುದೇ ಅವನಿಗೆ ತಿಳಿಯದಾಯಿತು. ದಾದಾನಿಗೆ ಏನು ಮಾಡಬೇಕೆಂಬುದೇ ಆ ನಿರಾಶೆಯಲ್ಲಿ ತಿಳಿಯದಾಯಿತು. ಪಾರ್ವತೆವ್ವನ ಮನೆಯಲ್ಲಿಯೇ ಕುಳಿತು ಈ ತಿರಸ್ಕಾರವನ್ನು ಅನುಭವಿಸುವದು ಅವನಿಗೆ ಅಸಾಧ್ಯವೆನಿಸಿತು.

ದಾದಾ ಮೆಲ್ಲನೆ ಎದ್ದು "ಹಾಗಾರ ಬರತೀನಿ ಯವ್ವಾ" ಎಂದು ಹೇಳಿದರೂ ಕೂಡ ಪಾರ್ವತೆವ್ವ ಅವನಿಗೆ ತಡೆ ಎಂದಾಗಲಿ, ಊಟ ಮಾಡಿ ಹೋಗೆಂದಾಗಲಿ ಹೇಳುವ ಸೌಜನ್ಯ ತೋರಲಿಲ್ಲ. ಅವನ ಮುಖದ ಕಡೆಗೆ ಕೂಡ ನೋಡದೆ ಸುಮ್ಮನೆ ಗೋಣುಹಾಕಿದಳು. ದಾದಾನಿಗೆ ನಿಲ್ಲಿಸಿ ಕೆನ್ನೆಗೆ ಹೊಡೆದಂತಾಯಿತು. ಮೃದುಭಾವನೆಗಳೆಲ್ಲ ಚೂರುಚೂರಾಗಿ ದಾದಾ ಮೆಲ್ಲನೆ ಗೌಡರ ಮನೆಯಿಂದ ಹೊರಬಿದ್ದ. ಇನ್ನು ಗೌಡರ ಮನೆ ಕೊನೆವರೆಗೆ ತನಗೆ ಎರವಾಯಿತಲ್ಲ ಎಂಬ ಭಾವನೆ ಅವನ ಮನಸ್ಸನ್ನು ಕದಡಿತು. ಸ್ಪಷ್ಟವಾದ ವಿಚಾರಗಳೆಂದೂ ದಾದಾನ ತಲೆಯಲ್ಲಿ ಸುಳಿಯುತ್ತಿರಲಿಲ್ಲ. ಮನಸ್ಸಿಗೆ ತಾಕಿದ ಪೆಟ್ಟು, ಶಾರೀರಿಕ ನೋವಿನಂತೆಯೇ ಅವನನ್ನು ಬಾಧಿಸುತ್ತಿತ್ತು.

ಎಲ್ಲಿಗೆ ಹೋಗಬೇಕೆಂಬುದು ಕೂಡಲೇ ಗೊತ್ತಾಗದೆ ದಾದಾ ಆಚಾರ್ಯರ ಮನೆಗೆ ಬಂದು ಅವರಿಗೆ ರಾಮ್‌ರಾಮ್ ಮಾಡಿದ. ರಾತ್ರಿ ಎಂಟು ಗಂಟೆಯಾಗಲು

ಬಂದಿತ್ತು. ಚಾವಡಿಯ ಸಂಭ್ರಮ ಮುಗಿಸಿಕೊಂಡು ಅದೇ ಆಚಾರ್ಯರು ಮನೆಗೆ ಬಂದಿದ್ದರು. ದಾದಾನನ್ನು ನೋಡಿ, ಮಬ್ಬುಗತ್ತಲಿಯಲ್ಲಿ ಒಮ್ಮೆಲೆ ಕಂಡಿರಲಿಲ್ಲವೇನೋ, "ಯಾರು? ದಾದಾ ಏನು? ಬಾ, ಮ್ಯಾಲೆ ಬಾ" ಎಂದು ಆತ್ಮೀಯತೆಯಿಂದ ಕರೆದರು. ಕರಿಹರಿದ ಎತ್ತುಗಳನ್ನು ದಾದಾ ಅಸಾಧ್ಯ ಪ್ರಯತ್ನದಿಂದ ತಿರುಗಿಸಿ ವಾಡೆಗೊಯ್ದು ಮುಟ್ಟಿಸಿದ್ದು ತಮಗೆ ಸಮಾಧಾನವಾಯಿತೆಂದು ಹೇಳಿದರು. "ಇದೇ ರೀತಿ ಪಾದಳ್ಳಿಯ ಮಾನಸಂರಕ್ಷಣೆಯೊಳಗ ನಿನ್ನ ಪ್ರಯತ್ನ ಕಡಿಮ್ಯಾಗಬಾರದು ನೋಡು ದಾದಾ" ಎಂದು ಉತ್ಸಾಹವನ್ನೂ ನೀಡಿದರು.

ದಾದಾನ ಮನಸ್ಸು ಕೂಡಲೇ ಕರಗಿತು. ಕುತ್ತಿಗೆಯುಬ್ಬಿ ಬಂತು. ಪಟಗಾದ ತುದಿಯಿಂದ ಕಣ್ಣೊರೆಸಿಕೊಂಡು ಭಾರವಾದ ದನಿಯಲ್ಲಿಯೇ ನುಡಿದ: "ನಿಮಗರೆ ನನ್ಮಂತ ಆತು ಸಾಕು ಕಾಕಾ. ಆದರ ಏನು ಮಾಡೂದು, ಗೌಡಿತಿ ನನ್ನ ಮ್ಯಾಗ ಸಿಟ್ಟಿಗೆದ್ದಾಂಗ ಕಾಣತತಿ" ಎಂದಿಷ್ಟು ಹೇಳಿ ನಿಟ್ಟುಸಿರು ಬಿಟ್ಟ.

ಆಚಾರ್ಯರಿಗೆ ಈ ಸುದ್ದಿ ಹೊಸದು. ಆದ ಪ್ರಸಂಗವೆಲ್ಲ ಒಳ್ಳೆಯದಾಗಿರುವದೆಂದೇ ಅವರು ನಂಬಿದ್ದರು. ಶ್ಯಾಮರಾಯನೆದುರಿಗೆ ಹಾಗೆ ಆಡಿಯೂ ತೋರಿಸಿದ್ದರು. ಆದರೆ ಈಗ ದಾದಾ ಹೇಳುತ್ತಿರುವದೇನು? ಗೌಡಿತಿ ಸಿಟ್ಟಿಗೆದ್ದದ್ದೇಕೆ? ಆಚಾರ್ಯರಿಗೆ ಅರ್ಥವಾಗಲು ತಡವಾಗಲಿಲ್ಲ. ಕರಿಹರಿಯುವದು ಮುಗಿದ ಮೇಲೆ ತಿರುಗಿ ಮನೆಗೆ ಬರುವಾಗ, ದಾರಿಯಲ್ಲಿಯೇ ಅವರ ಕಿವಿಗೆ ಕೆಲ ಮಾತುಗಳು ಬಿದ್ದಿದ್ದವು. ಜಾಗೀರದಾರರ ವಾಡೆ ಬರಿದಾಗಿರುವ ಸಂಧಿಯನ್ನು ಸಾಧಿಸಿ ಗೌಡರ ಎತ್ತು ಕರಿಹರಿಯುವ ಹೊಸ ಪರಂಪರೆಯನ್ನು ಕೆಲವರು ಹಾಕಬೇಕೆಂದು ಹೊಂಚು ಹಾಕಿದ ವಾರ್ತೆ, ಅದು ವಿಫಲವಾದ ಮೇಲೆ ನಿರಾಶೆಯ ನಿಟ್ಟುಸಿರಾಗಿ ಆಚಾರ್ಯರ ಕಿವಿ ವರೆಗೆ ಮುಟ್ಟಿತ್ತು. ಅಂತೂ ಪಾದಳ್ಳಿಯಲ್ಲಿ ಈರ್ಷ್ಯೆ ಇನ್ನೂ ಸತ್ತಿಲ್ಲವೆಂದು ಆಗಲೇ ಅಂದುಕೊಂಡಿದ್ದರು. ದಾದಾ ಹೇಳಿದ ವಾರ್ತೆಯಿಂದಂತೂ ಈ ಮಾತು ಇನ್ನೂ ಸ್ಥಿರವಾಗಿತ್ತು.

ಆಚಾರ್ಯರು ನಕ್ಕು ಹೇಳಿದರು: "ಅದನ್ನೆಲ್ಲಾ ತೊಗೊಂಡು ಏನ ಮಾಡತೀ ಬಿಡು ದಾದಾ. ಹೇಳಿಕೇಳಿ ಹೆಣಮಗಳು. ನಾಕು ಜನಾ ಕೂಡಿಕೊಂಡು ಆಕೀ ತಲಿ ಕೆಡಿಸ್ಯಾರ. ಮೊದಲಿನ ವಾರಸಾ ಪ್ರಕರಣೊಂದು ಆಗಿ, ಯಾರ ಮ್ಯಾಲೂ ಆಕಿ ವಿಶ್ವಾಸ ಇಡದ್ಹಾಂಗಾಗೇದ. ಈಗೇನೋ ತಮ್ಮ ಎತ್ತು ಕರಿಹರೀಬೇಕಂತ ಮಾಡಿದ್ಹಾಳು ಕಾಣತದ, ನಿನ್ನಿಂದ ಅದೂ ತಪ್ಪಿದ್ಹಾಂಗಾತು. ಸ್ವಭಾವನ ಸ್ವಲ್ಪ

ತಲಿತಿರಕತನದ್ದು. ಅದರಾಗ ಹೀಂಗಾದ ಮ್ಯಾಲನಕಾ ಮತ್ತಿಷ್ಟ ಸಿಟ್ಟಿಗೆದ್ದಿರ ಬೇಕು. ಅದನ್ನೆಲ್ಲಾ ಮನಸ್ಸಿಗೆ ಹಚಗೋಬಾರದಪಾ. ನಿನ್ನ ತಾಯಿಽನss ನಿನ್ನ ಮ್ಯಾಲ ಸಿಟ್ಟಿಗೆದ್ದಿದ್ದರ ಏನ ಮಾಡತಿದ್ದಿ ?"

ಆಚಾರ್ಯರು ಬೇಕೆಂವೇ ಅಂತಃಕರಣದ ಮೇಲೆಯೇ ಆಟವಾಡಿದರು. ಗೌಡಿತಿ ಏನಾದರೂ ಹೆಣ್ಣುಮಗಳು. ಊರವರು ಅವಳನ್ನು ಪಕ್ಕೆಯಲ್ಲಿಟ್ಟು ರಕ್ಷಿಸಬೇಕಲ್ಲದೆ ಅವಳ ವಿರುದ್ಧ ನಿಂತು ಹೋರಾಡಬಾರದೆಂಬುದೇ ಅವರ ಅಭಿಪ್ರಾಯ. ಈಗೀಗ ದಿನನಿತ್ಯವೂ ಬಾಳಾಚಾರ್ಯರಿಗೆ ಪಾದಳ್ಳಿಯದೇ ಯೋಚನೆಯಾಗಿತ್ತು.

ಆಚಾರ್ಯರ ಮಾತಿನಿಂದ ದಾದಾ ಮರ್ಮಾಹತನಾದ. ಹೊಟ್ಟೆಯಲ್ಲಿ ತುಂಬಿದ ಸಿಟ್ಟೆಲ್ಲ, ಕಿರಣ ಮುಟ್ಟಿದ ಮಂಜಿನಂತೆ ಕರಗಿತು; ಕಣ್ಣೀರಾಗಿ ಸುರಿಯ ತೊಡಗಿತು. ಆಯಾಸ, ಮಾರ್ಗಕ್ರಮಣ, ಹಸಿವು, ಉಪೇಕ್ಷೆ, ತಿರಸ್ಕಾರ ಇವೆಲ್ಲ ಒಂದೊಂದಾಗಿ ದಾಳಿ ಹೂಡಿದ್ದರಿಂದ ಅವನು ಸಿಟ್ಟಿಗೆದ್ದಿದ್ದ. ಈಗ ಆಚಾರ್ಯರ ಒಂದೇ ಅಂತಃಕರಣದ ಮಾತಿನಿಂದ ಅವೆಲ್ಲ ಮಾಯವಾಗಿದ್ದವು. ದುಃಖವೋ, ಸುಖವೋ, ಅಂತೂ ಭಾವನೆ ತುಂಬಿ ಬಂದು ಕಣ್ಣೀರು ಸುರಿಸಿದ.

"ಹೀಂಗ ಹುಚ್ಚನ್ಹಾಂಗ ಅತಗೋತ ಕೂತರ ಏನಾಗತದ ದಾದಾ. ನಿನ್ನ ತಾಯಿ ನಿನಗ ಸಿಗತಾಳೇನು ? ಪುಣ್ಯವಂತಿ, ನೀನಿನ್ನೂ ಸಣ್ಣಾವಿದ್ದಾಗss ಕಣ್ಣು ಮುಚ್ಚಿದಳು. ಹಡದ ತಾಯಿ ನಿನಗೆಂದೂ ಕೈತುತ್ತು ಮಾಡಿ ಉಣಿಸಲೇ ಇಲ್ಲ. ಆದರ ಗೌಡಿತೀನ ನಿನಗ ತಾಯಿಕಿಂತಾ ಹೆಚ್ಚಾಗಿ ನೋಡಿಕೊಂಡಾಳಿಲ್ಲೋ ? ಈಗ ನನ್ನss ನೋಡು, ಮಕ್ಕಳಿಲ್ಲ. ತಮ್ಮಂದಿರು ನನ್ನ ಬಿಟ್ಟು, ತಮ್ಮ ಸಂಸಾರಾನೂ ನನ್ನ ಕೊಳ್ಳಿಗೇ ಬಿಟ್ಟು ಹೋದರು. ಗೋಪಾಲನ ಗತಿ ಏನಾತು ನೋಡಿದಿ. ಪಡದಪ್ಪನಂಥವನ ಗೆಳೆತನಾ ಮಾಡಿ, ಕೆಟ್ಟ ವ್ಯಸನಕ್ಕ ಬಿದ್ದು ಕಡೀಕೊಮ್ಮೆ ಕಾಲರಾ ಬಂದು ನೀಗಿದ. ಮಕ್ಕಳಿಲ್ಲಾ ಅಂತ ನನಗೇನೂ ದುಃಖ ಇಲ್ಲ. ನೀವೆಲ್ಲಾ ಇದ್ದೀರಲ್ಲಾ, ಬೆಳೆಯೋ ಹುಡುಗರು, ನನ್ನ ಮಕ್ಕಳಂತss ಅನಸತದ ನೋಡು. ನೀವೆಲ್ಲಾ ಎಲ್ಲೀತನಕ ನನ್ನ ಮ್ಯಾಲೆ ವಿಶ್ವಾಸ ಇಡತೀರ್‍ಯೋ ಅಲ್ಲೀತನಕ, ನಾ ಪರದೇಶಿ ಅಲ್ಲ, ಬಳಗವಂತ ಅಂತss ತಿಳಕೋತೀನಿ" ಆಚಾರ್ಯರ ಹೃದಯದಾಳದಿಂದ ಸ್ವಲ್ಪ ಹೆಚ್ಚಾಗಿಯೇ ಮಾತು ಹೊಮ್ಮಿದ್ದವು. ದಾದಾ ತಾಯಿಯನ್ನು ನೆನೆದೇ ಅಳುತ್ತಿದ್ದಾನೆಂದು ಅವರ ಭಾವನೆ. ತಮ್ಮ ಜೀವನದಲ್ಲಿ ಈ ರೀತಿ ಹಾರ್ದಿಕವಾಗಿ

ಅವರಿಗೆ ಮಾತಾಡುವ ಪ್ರಸಂಗ ಬಂದಿರಲೇ ಇಲ್ಲ. ಆಚಾರ್ಯರಿಗೆ ಈಗೀಗ ಅದರ ಹಂಬಲ ಉಂಟಾಗುತ್ತಿತ್ತು. ಅಂತೇ ಭಾವನೆಗೆ ಉಕ್ಕು ಬಂದಾಗ ಇಂಥ ಮಾತು ಅವರ ಬಾಯಿಂದ ಬರುತ್ತಿದ್ದವು.

ಇಬ್ಬರೂ ಅದೇ ಗುಂಗಿನಲ್ಲಿ ಕೆಲಹೊತ್ತು ಇದ್ದರು. ಆಗಾಗ ನೊಂದ ಗಾಯದ ಮೇಲೆ ಹೇಳಕೇಳದೆಯೇ ಕೈಯಾಡುವಂತೆ ನಡುವೆ ಏನೇನೋ ಮಾತಾಡಿ ಆಚಾರ್ಯರು ಸುಮ್ಮನಾಗುತ್ತಿದ್ದರು. ಅಷ್ಟರಲ್ಲಿ ಒಳಗಿನಿಂದ "ಸಂಜೀ ಫಳಾರಕ್ಕೇಳೂದಿಲ್ಲs? " ಎಂದು ಆಚಾರ್ಯರ ಪತ್ನಿ ಮೃದುವಾಗಿಯೇ ಕೇಳಿದರು.

"ಆಂ!" ಎಂದು ಬೆಚ್ಚಿ ಆಚಾರ್ಯರು ನೋಡುತ್ತಾರೆ. ಹೊಸ್ತಿಲ ಮೇಲಿಟ್ಟ ದೀಪದ ಬೆಳಕಿನಲ್ಲಿ ನಾಲ್ವತ್ತು ವರ್ಷ ಬಾಳಿನ ಜೊತೆಗಾರ್ತಿಯಾಗಿ ಬಂದ ಸಹಧರ್ಮಿಣಿ ನಿಂತಿದ್ದಾಳೆ. ಆಚಾರ್ಯರ ಕದಡಿದ ಮನಸ್ಸು ಕೂಡಲೇ ಸಮಾಧಾನ ಹೊಂದಿತು. ತಾವೇನು ಒಬ್ಬರೇ ಇಲ್ಲ ಎಂದು ತೃಪ್ತಿಯಾಯಿತು.

"ದಾದಾ ಊರಿಂದ ದಣದು ಬಂದಾನ ನೋಡು. ಅಂವಗ ಮೊದಲ ಊಟದ ವ್ಯವಸ್ಥಾ ಮಾಡಬೇಕಲ್ಲಾ?" ಎಂದು ಪತ್ನಿಗೆ ನುಡಿದರು.

ದಾದಾನಿಗೆ ತಡೆಯಲಾಗಲಿಲ್ಲ. ವಾತಾವರಣವೆಲ್ಲ ಹೃದ್ಯವಾದ ಭಾವನೆಗಳಿಂದ ಆರ್ದ್ರವಾಗಿತ್ತು. ಹಳೆಯ ನೆನಪುಗಳು ಕೆರಳಿದವೇನೋ, ದಾದಾ ಹೇಳಿದ: "ಕಾಕಾ, ಸತ್ತುಹೋದ ನಾನಾಕಾನs ನಿಮ್ಮೊಳಗ ಬಂದು ಮಾತಾಡೂ ಹಾಂಗ ಕಾಣತತಿ" ಎಂದು ತುಂಬಿದ ಕಂಠದಿಂದ ನುಡಿದು ಮತ್ತೆ ಕಣ್ಣೊರೆಸಿಕೊಂಡ.

ಆಚಾರ್ಯರ ಉಪಹಾರದೊಡನೆಯೇ ದಾದಾನ ಊಟ ಮುಗಿಯಿತು. ಆಚಾರ್ಯರು ಕೈತೊಳೆದುಕೊಂಡು ಮತ್ತೆ ಪಡಸಾಲೆಗೆ ಬಂದರು.

"ಲಿಂಗಪ್ಪನ ಜನನ-ರಜಿಸ್ಟರದ ಉತಾರ ಕಳಿಸೋ ಬಗ್ಗೆ ಯಶವಂತ ರಾಯರು ಏನ ಹೇಳಿದರೋ ದಾದಾ?" ಆಚಾರ್ಯರು ಕೂಡಲೇ ಮಾತಿಗೆ ಬಂದರು. ಅಜರಾಣಿಗೆ ಹೋದ ಕಾರ್ಯಭಾರವೇನಾಯಿತೆಂದು ಅವರು ತಿಳಿದುಕೊಳ್ಳಬೇಕಾಗಿತ್ತು.

"ಉತಾರ ತಾಲೂಕದಿಂದ ತಗಿಸಿ ಕಳಿಸತಾರಂತರೀ. ಅದರ ಅದರ ಜರೂರ ಬೇಕಾಕಿಲ್ಲಾ ಅಂತ ಅಂದರು ಯಶವಂತರಾಯರು. ಲಿಂಗಪ್ಪನ ತಂದಿ, ಶಂಕರಪ್ಪ ಇದಾನಲ್ರಿ, ಅಂವಗ ನಸಿ ಬ್ಯಾಸಿ ಹತ್ತೇತರಿ. ದೇವರನ ಕೇಳಿದ್ನಂತರಿ. 'ಲಿಂಗಪ್ಪ ನಿನ್ನ ಮಗಾ ಇದ್ದು ಇನ್ನೊಬ್ಬನ ಆಸ್ತಿ ನುಂಗಾಕ ಹೋಗ್ಯಾನು. ಅಂವನ್ನ ತಿರುಗಿ

ಕರಿಸಿಕೋ. ನಿನ್ನ ಮಗಾ ಆಗಿ ಮೊದಲಿದ್ದಾಂಗ ಮನ್ಯಾಗ ಇದ್ದರ ನಿನ್ನ ಬ್ಯಾನಿ, ನಟ್ಟ ಬೇರು ಕಿತ್ತಿಧಾಂಗ ಹೊಗತೇತಿ; ಭೂಮಿ-ಸೀಮಿ ಆಸೇಕ್ಕ ಬಿದ್ದು ಅಂವನ್ನ ಅಲ್ಲೇ ಇರಗೊಟ್ಟರ ಅಂವಗ ಜನಮಾ ಕೊಟ್ಟ ನೀ ಉಳ್ಯಾಕಿಲ್ಲಾ' ಅಂತ ಹೇಳಿಕಿ ಬಂತಂತರಿ. ಈಗ ಶಂಕರಪ್ಪನ ಹೇಣತಿ ಮಕ್ಕಳು ಯಶವಂತರಾಯರಿಗೆ ಬಂದು ಗಂಟುಬಿದ್ದಾರ್ರಿ. ಲಿಂಗಪ್ಪ ಪಾದಳ್ಳಿಯಿಂದ ಕಾಲ ಕಿತ್ತೂಹಾಗ ಮಾಡ್ರಿ ಅಂತ. ಬಾಪೂಸಾಹೇಬನೇ ಕಾಲಂತರ ಆದಾಗ, ಲಿಂಗಪ್ಪ ತಿರಗಿ ಬರತಾನ ಅಂತ ಇವರೂ ಧೈರ್ಯೇ ಹೇಳ್ಯಾರಂತರೀ. ಬಾಪೂಸಾಬ ಹೊತ್ತ ಅರಿಬೀಮ್ಯಾಗ ವಾಡೇ ಬಿಟ್ಟದ್ದು, ಪಾದಳ್ಳಿ ಗೌಡರಿಗೆ ಕೊಟ್ಟ ವಚನಾ ನಡೆಸಿಧಾಂಗ ಆತು ದಾದಾ ಅಂತ ಹಿರಿಹಿರಿ ಹಿಗ್ಗಿ ಮಾತಾಡಿದರರಿ. ಲಿಂಗಪ್ಪನ ಕರಕೊಂಡ ಹೋಗಾಕ ಅಜರಾಣಿ ಊರ ಹಿರ್‍ಯಾರ ದಂಡಃ ಬರೂದೈತಂತರಿ." ದಾದಾ ಒಂದೇ ಉಸಿರಿನಲ್ಲಿ ಮನಸ್ಸು ಬಿಚ್ಚಿ ಎಲ್ಲ ಸಮಾಚಾರವನ್ನೂ ಹೇಳಿದ.

ಆಚಾರ್ಯರಿಗೆ ಈ ಸುದ್ದಿಯನ್ನು ಕೇಳಿ ಇನ್ನೂ ಹೆಚ್ಚಿನ ಸಂತೋಷವುಂಟಾ ಯಿತು. ಆ ಸಂತೋಷದ ಉಕ್ಕಿನಲ್ಲಿಯೇ ಇನ್ನೊಂದು ಸಂತೋಷದ ಸುದ್ದಿಯನ್ನು ದಾದಾನಿಗೆ ಅವರು ಹೇಳಬೇಕಾಗಿತ್ತು.

"ಇಂದುಪುರದ ಮಹಾರಾಜರು ಯಶವಂತರಾಯರಿಂದ ತಮಗ ತಿಳಿದ ಸುದ್ದೀಯೆಲ್ಲಾ ಕಲೆಕ್ಟರರಿಗೆ ತಿಳಿಸಿದ್ದರಂತೇನಪಾ ದಾದಾ. ಈ ಪತ್ರದ ಆಧಾರದ ಮ್ಯಾಲೆ ಮಾಮಲೆದಾರರಿಗೆ ಕಲೆಕ್ಟರರು ಪತ್ರಾ ಬರದಾರಂತ. ನಿನ್ನ ಮ್ಯಾಲೆ ಹಾಕಿದ ಖಟ್ಲೆ ಪಡದಪ್ಪನ ಚಿತಾವಣಿಯಿಂದ ನಡೆದದ್ದು, ಅದಕ್ಕ ತಾಬಡತೋಬ ಪಾದಳ್ಳಿಯೊಳಗ ಚೌಕಶಿ ಇಟ್ಟು ಅದರ ನಿಕಾಲ ಆಗಬೇಕೂ ಅಂತ ತಿಳಿಸ್ಯಾರಂತ. ಮಾಮಲೇದಾರರು ಇನ್ನೊಂದೆರಡು ದಿನದಾಗಃ ಇಲ್ಲೆ ಬಂದು ಚೌಕಶಿ ನಡಿಸಿ ಖಟ್ಲೆ ನಿಕಾಲ ಮಾಡುವರಿದ್ದಾರಂತ. ಇವೊತ್ತ ಶೇಷಪ್ಪಗ ಮಾಮಲೇದಾರರಿಂದ ಹುಕುಂ ತಂದ ಮುಲ್ಕೀ ಸಿಪಾಯಿ ಇಷ್ಟೆಲ್ಲಾ ಸುದ್ದಿ ಹೇಳಿದಾ" ಎಂದು ತುಂಬಿದ ಮನಸ್ಸಿನಿಂದಲೇ ಹೇಳಿದರು.

ಇಬ್ಬರ ಮನಸ್ಸೂ ಹಗುರಾಗಿದ್ದವು. ದಾದಾ ಮತ್ತೆ ಮೊದಲಿನಂತಾಗಿದ್ದ. ಎದ್ದು ಆಚಾರ್ಯರಿಗೆ ರಾಮರಾಮ ಮಾಡಿ ಹೊರಡುವವನಿದ್ದ. ಆಚಾರ್ಯರು ಅವ ನನ್ನು ತಡೆದು "ಗೌಡರ ಮನೀಗೇ ಹೋಗತೀ ಹೌದಲ್ಲೋ?" ಎಂದು ಕೇಳಿದರು.

"ಇಲ್ಲ, ನಮ್ಮ ಮನೀಗೆ ಹೋಗತೀನರಿ. ಅಪ್ಪನ ಭೆಟ್ಟೀನಃ ಆಗಿಲ್ಲ" ಎಂದು

ದಾದಾ ಗೌಡರ ಮನೆಗೆ ಹೋಗದಿರುವದಕ್ಕೆ ಕಾರಣ ಮುಂದೆ ಮಾಡಿದ.

"ನಾಳೆ ಮುಂಜಾನೆ ಲಕ್ಷ್ಮಣನ್ನ ಭೆಟ್ಟಿಯಾಗೀಯಂತ. ಈಗ ರಾತ್ರೀ ಹೊತ್ತು. ಗೌಡರ ಮನೀ ಕಾವಲದ ಭಾರ ನಿನ್ನ ಮ್ಯಾಲೀ ಅದ. ಈಗ ಅಲ್ಲೀ ಹೋಗು" ಎಂದು ಆಚಾರ್ಯರು ಆಜ್ಞೆಮಾಡಿದರು.

ಆಚಾರ್ಯರ ಮಾತು ಮೀರುವ ಮನಸ್ಸಾಗಲಿಲ್ಲ ದಾದಾನಿಗೆ. ಆಚಾರ್ಯರ ಮನೆಯಿಂದ ಹೊರಬಿದ್ದಾಗ ರಾತ್ರಿ ಬಲಿತಿತ್ತು. ಮಳೆಗಾಲವಾದ್ದರಿಂದ ಮೋಡಗಳು ಮುಸುಕಿ ಒಂದು ನಕ್ಷತ್ರವೂ ಆಕಾಶದಲ್ಲಿರಲಿಲ್ಲ. ಸಣ್ಣಾಗಿ ಮಳೆ ಹನಿಯುತ್ತಿತ್ತು. ಆಗಾಗ ಪಶ್ಚಿಮದಿಕ್ಕಿನಿಂದ ಬೀಸುವ ಒಂದೊಂದು ಗಾಳಿಯ ಸೆಳಕು ಬೆನ್ನುಹುರಿಯನ್ನೇ ಸೇರಿ ಇಡೀ ದೇಹವನ್ನು ನಡುಗಿಸುತ್ತಿತ್ತು. ದಾರಿಯಲ್ಲಿ ಒಬ್ಬಾನೊಬ್ಬರೂ ಕಾಣುತ್ತಿರಲಿಲ್ಲ. ದಾದಾ ಗೌಡರ ಮನೆಯನ್ನು ಮುಟ್ಟಿದಾಗ ಮುಂದಿನ ಬಾಗಿಲು ಮುಚ್ಚಿತ್ತು. ತಿರುಗಿ ಹಾಗೇಯೇ ಹೋಗಿಬಿಡಲೇ ಎಂದೆನಿಸಿತು. ಆದರೂ ಮನಸ್ಸು ಗಟ್ಟಿಮಾಡಿಕೊಂಡು ಕೂಗಿದ. ಆಳು ಬಂದು ಬಾಗಿಲು ತೆರೆದ. ದಾದಾ ಒಳಗೆ ಕಾಲಿಟ್ಟಾಗ ಪಡಸಾಲೆಯಲ್ಲಿ ಜನರ ಹಿಂಡೇ ಕೂಡಿತ್ತು. ಪಾರ್ವತೆವ್ವ ಅವರೊಡನೆ ಏನೇನೋ ವಿಚಾರವಿನಿಮಯ ನಡೆಸಿದ್ದಳು. ದಾದಾ ಅವಳು ಕುಳಿತೆಡೆಗೆ ನೋಡಿದ. "ನಿನ್ನ ತಾಯಿ ಸಿಟ್ಟಿಗೆದ್ದಿದ್ದರ ಏನ ಮಾಡತಿದ್ದಿ?" ಎಂಬ ಆಚಾರ್ಯರ ಮಾತುಗಳು ನೆನಪಾದವು. ಮೆಲ್ಲಗೆ ಪಡಸಾಲೆಯ ಪಾವಟಿಗೆಗಳನ್ನೇರಿದ. ಕೆರವುಗಳನ್ನು ಹೊರಗೇ ಬಿಟ್ಟದ್ದರಿಂದ ಹೆಜ್ಜೆಯ ಸಪ್ಪಳಪಾಗುತ್ತಿರಲಿಲ್ಲ. ಯಾರೂ ಹಿಂತಿರುಗಿ ನೋಡಲಿಲ್ಲ. ದಾದಾ ಏನು ಮಾಡಬೇಕೆಂಬುದು ತಿಳಿಯದೆ ಉಪ್ಪೇಗದಲ್ಲಿ ಪಾರ್ವತೆವ್ವನ ಮುಂದೆ ಅಡ್ಡ ಬಿದ್ದು "ಯವ್ವಾ, ನಿನ್ನ ಮಗಾ ಏನರ ತಪ್ಪ ಮಾಡಿದ್ದರ ಹೊಟ್ಯಾಗ ಹಕ್ಕೊ" ಎಂದು ಕೂಗಿದ.

ಕುಳಿತ ಜನರೆಲ್ಲ ಘೊಳ್ಳನೆ ನಕ್ಕರು. ಒಬ್ಬನಂತೂ "ಗೌಡರ ಮನೆತನದ ಮಾನ-ಪಾನ ಎಲ್ಲಾ ತಪ್ಪಿಸಿ, ಈಗ ಮಸಿತನಾ ಬಂದು ಅಡ್ಡ ಬೀಳೂ ಸೋಗು ಹಾಕ್ಯಾನಸಬಾರದ?" ಎಂದು ಚುಚ್ಚಿ ಮಾತಾಡಿದ. ಸಾಮಾನ್ಯ ಪರಿಸ್ಥಿತಿಯಲ್ಲಾಗಿದ್ದರೆ ನೂರು ಜನರು ಕುಳಿತಿದ್ದರೂ ಲೆಕ್ಕಿಸದೆ, ಹಾಗೆ ನುಡಿದವನ ಹಲ್ಲು ಮುರಿದು ಬುದ್ಧಿ ಕಲಿಸಬಹುದಾಗಿತ್ತು. ಆದರೆ ಈಗ ಅವನ ಅಂತಃಕರಣ ಕರಗಿತ್ತು; ಮನಸ್ಸು ಹಣ್ಣಾಗಿತ್ತು. ವಿಚಾರದ ಭಾರ ಇದ್ದುಬಿದ್ದ ಅವನ ಸಿಟ್ಟನ್ನೂ ಕಡಿಮೆ ಮಾಡಿತ್ತು. ಅದ್ದರಿಂದಲೇ ದಾದಾ ಏನೂ ಹೇಳಲಿಲ್ಲ.

ಪಾರ್ವತೆವ್ವ ಒಂದು ತುಟಿ ಎರಡು ಮಾಡಲಿಲ್ಲ. ಅವಳ ತಿರಸ್ಕಾರ ಹೆಚ್ಚಾಗಿತ್ತೇ ಹೊರತು ಕಡಿಮೆಯಾಗಿರಲಿಲ್ಲ. ಸಿಟ್ಟಿನೊಡನೆ ದುಃಖವೂ ಸೇರಿತ್ತು. ಮುಖಕ್ಕೆ ಸೆರಗು ಹಾಕಿಕೊಂಡು ಅಲ್ಲಿಂದೆದ್ದು ಒಳಕೋಣೆಯನ್ನು ಸೇರಿದಳು. ಜನರೆಲ್ಲ ಏನೇನೋ ಮನಸ್ಸಿಗೆ ಬಂದಂತೆ ಮಾತಾಡಿಕೊಳ್ಳುತ್ತ ಮನೆಯ ಹಾದಿ ಹಿಡಿದರು. ಇಲ್ಲಿಯ ವರೆಗೆ ಸುಮ್ಮನೆ ಹನಿಯುತ್ತಿದ್ದ ಮಳೆ ಈಗ ಜಡಿಮಳೆಯಾಗಿ ಜಿಟಜಿಟ ಬೀಳಹತ್ತಿತು. ದಾದಾ ಅಲ್ಲಿಯೇ ಸ್ವಲ್ಪ ಹೊತ್ತು ನಿಂತಿದ್ದು, ಮುಂದುಗಾಣದೆ ದನದ ಧಾಬೆಗೆ ಹೋಗಿ ಅಲ್ಲಿಯೇ ಒಂದು ಕಟ್ಟೆಯ ಮೇಲೆ ಅಡ್ಡಾದ.

ದೇಹ ದಣಿದಿತ್ತು; ಮನಸ್ಸು ಬೆಂಡಾಗಿತ್ತು. ದೇಹಕ್ಕೆ ನಿದ್ದೆ ಬೇಕೆನಿಸುತ್ತಿತ್ತು. ಆದರೆ ಮನಸ್ಸು ನಿದ್ದೆಮಾಡಗೊಡಲಿಲ್ಲ. ನೋವೆಲ್ಲಿ ಎಂದು ತಿಳಿಯದೆ ಒದ್ದಾಡುವ ಮಗುವಿನ ಸ್ಥಿತಿಯಂತಾಗಿತ್ತು ದಾದಾನ ಮನಸ್ಸಿಗೆ. ತಟ್ಟನೆ ಹಿಂದಿನ ಒಂದು ಸಂಗತಿ ನೆನಪಿಗೆ ಬಂತು. ಅಂದು ಬೆಳೆಯ ಲೂಟಿಗೆ ಬಂದ ಜನರನ್ನೆಲ್ಲ ಓಡಿಸಿದ್ದನ್ನು ಕೇಳಿದಾಗ ಇದೇ ಪಾರ್ವತೆವ್ವ ಪ್ರೀತಿವಾತ್ಸಲ್ಯಗಳಿಂದ ತನ್ನನ್ನು ಬರಮಾಡಿಕೊಂಡಿದ್ದಳಲ್ಲವೇ? ಹವಾಲ್ದಾರ ತನ್ನನ್ನು ಹಿಡಿಯಲು ಬಂದಾಗ 'ನೀ ನನ್ನ ಮೂರನೇ ಮಗಾ ಅಂತ ತಿಳದೀನ ದಾದಾ.' ಎಂದು ಹೇಳಿ ತನ್ನ ಮನೆಯಲ್ಲಿಯೇ ತನ್ನನ್ನು ಅಡಗಿಸಿಟ್ಟಿದ್ದಳು. ದೊಡ್ಡ ಮನೆತನಕ್ಕೆ ಸೇರಿದ ಅವಳು ಆಗೆಲ್ಲ ದೊಡ್ಡ ಮನಸ್ಸಿನಿಂದಲೇ ನಡೆದುಕೊಂಡಿದ್ದಳು. ಆದರೆ ಈಗ? ಇದೆಂಥ ಪರಿವರ್ತನ! ತನ್ನ ಮುಖ ನೋಡಲು ಕೂಡ ಅವಳು ಸಿದ್ಧಳಿಲ್ಲ. ಪಡದಪ್ಪ ಊರು ಬಿಟ್ಟ. ಬಾಪೂಸಾಹೇಬನೂ ಊರು ಬಿಟ್ಟುಹೊರಟು ಹೋಗಿದ್ದಾನೆ. ಲಿಂಗಪ್ಪನ ಅಬ್ಬರ ತಗ್ಗಿದೆ. ಈಗ ಪಾದಳ್ಳಿಯ ಗೌಡರ ಮನೆತನ ಮತ್ತೆ ಊರ್ಜಿತಾವಸ್ಥೆಗೆ ಬರುವಂತಾಗಿದೆ. ಅದರ ಅಭಿಮಾನ ಹಿಡಿದು ಕೆಲಸ ಮಾಡಿದ ತಾವೆಲ್ಲ ಮತ್ತೆ ಧೈರ್ಯದಿಂದ ಊರಲ್ಲಿ ಓಡಾಡುವಂತಾಗಿದೆ. ಕಳವಿನ ಹೆದರಿಕೆ, ಬೆಳೆಯ ಲೂಟಿಯ ಹೆದರಿಕೆ ಇನ್ನಿಲ್ಲ ದೂರವಾದಂತಾಯಿತು. ಈಗ ದಾದಾನ ಅಗತ್ಯ ಉಳಿದಿಲ್ಲವೇನೋ! ಹಾಗಾದರೆ ತನ್ನ ಯೋಗ್ಯತೆಯಾದರೂ ಎಷ್ಟು? ಬಡಿದಾಟದ ಹೊತ್ತಿನಲ್ಲಿ ಇನ್ನೊಬ್ಬರ ಕೈಯಲ್ಲಿಯ ಕೊಡಲಿಯಂತೆ ಒಂದು ಆಯುಧವಾಗಿಯೇ ಬದುಕಬೇಕೇ ದಾದಾ? ಎಂಥ ದುರವಸ್ಥೆಯಿರಬೇಕು? ತಾನು ಉಂಡಿರುವೆನೋ ಉಪವಾಸವಿರುವೆನೋ ಕೂಡ ಗೌಡಿತಿ ಕೇಳಬಾರದೆಂದರೆ! ತಾನು ಕಾಲಿಗೆ ಬಿದ್ದು

ಕ್ಷಮೆ ಕೇಳಿಕೊಂಡಾಗ ಕೂಡ, ಬಿಮ್ಮನೆ ಬಿಗಿದುಕೊಂಡು ಒಳಗೆ ಹೋಗಿಬಿಟ್ಟಳು. ಹೌದು, ತಾನೇ ಕ್ಷಮೆ ಕೇಳಬಾರದಿತ್ತು.

ಓಡುವ ಎತ್ತುಗಳನ್ನು ಸಹಜವಾಗಿ ತಡೆದು ನಿಲ್ಲಿಸಬಲ್ಲ ದಾದಾ ಈ ಒಳತೋಟಿಗೆ ಹಣ್ಣಾದ. ಹೆಚ್ಚು ವಿಚಾರದಿಂದ ಅವನ ಮನಸ್ಸು ತಿಳಿಯಾಗುತ್ತಿರಲಿಲ್ಲ; ಬದಲಾಗಿ ಸಿಟ್ಟೇರುತ್ತಿತ್ತು. ಗರಡಿಮನೆಗಾದರೂ ಹೋಗಿ ಮಲಗಿಕೊಂಡರಾಯಿತೆಂದು ಗೊಣಗುತ್ತ ಎದ್ದು ಕುಳಿತ. ಗೊಂಗಡಿ ಜಾಡಿಸಿ, ಕಣ್ಣು ತಿಕ್ಕಿಕೊಂಡು ಒಮ್ಮೆ ಜೋರಾಗಿ ಆಕಳಿಸಿದ. ಇನ್ನೇನು ಎದ್ದು ಹೊರಡುವವ. ಅಷ್ಟರಲ್ಲಿ ಆಳುಗಳು ಸರಿಯಾಗಿ ಕಟ್ಟದ್ದರಿಂದಲೋ ಅಥವಾ ಕಾರಹುಣ್ಣಿವೆಯ ಹೊಸ ಹಗ್ಗ ಗೂಟಕ್ಕೆ ಬಿಗಿಯಾಗದೆ ಬಿಚ್ಚಿದ್ದರಿಂದಲೊ, ಆಕಳೊಂದು ದಾದಾ ಕುಳಿತ ಕಡೆಗೇ ಧಾವಿಸಿಬಂದು ಅವನ ಪಾದಗಳನ್ನು ನೆಕ್ಕುತ್ತ ನಿಂತುಕೊಂಡಿತು.

ಮಲಗುವ ಮುಂದೆ ಎಲ್ಲ ದನಗಳಿಗೂ ಮೇವು ಹಾಕುವದು ದಾದಾನ ದಿನನಿತ್ಯದ ಕೆಲಸವಾಗಿತ್ತು. ಈ ಆಕಳ ಹಾಲು ದಾದಾನಿಗೇ ಮೀಸಲೆಂದು ಪಾರ್ವತೆವ್ವನ ಕಟ್ಟಪ್ಪಣೆಯಾಗಿದ್ದರಿಂದ ದಾದಾ ವಿಶೇಷ ಆಸ್ಥೆಯಿಂದ ಈ ಆಕಳನ್ನು ಮೇಯಿಸುತ್ತಿದ್ದ. ದಾದಾನ ಮನಸ್ಸೀಗ ತ್ರಸ್ತವಾಗಿತ್ತು. ಯಾರ್‍ಯಾರಿಂದಲೋ ಸಮಾಧಾನ ಬೇಡಿ ಬೇಡಿ ಮನಸ್ಸು ದಣಿದಿತ್ತು. ಈ ಆಕಳು ಹತ್ತಿರ ಬಂದದ್ದರಿಂದ ಅವನಲ್ಲಿಯೂ ವಿಚಿತ್ರ ಕಲ್ಪನೆಗಳೇ ಮೂಡಿದವು. ದುಃಖದಿಂದ ತನಗೆ ನಿದ್ದೆ ಹತ್ತದಾಗಲು, ಸಂತವಿಸಲು ಈ ಆಕಳು ಮುಂದೆ ಬಂದಿರಬಹುದೆಂದೆನಿಸಿತು. ಅದಕ್ಕಾಗಿ ಕಣ್ಣೀರೂ ಧಾರೆಯಾಗಿ ಸುರಿಯಿತು. ಅದರ ಕುತ್ತಿಗೆಗೇ ಕೈಹಾಕಿದ, ಕೋಡುಗಳನ್ನು ಸವರಿದ, ಕೊನೆಗೆ ಅದರ ಕೊರಳನ್ನಪ್ಪಿ ಕಣ್ಣೀರಿಟ್ಟ. ಅವನ ಗಲ್ಲದ ಮೇಲೆ ಮಡುವುಗಟ್ಟಿ ಹರಿಯುವ ಕಣ್ಣೀರನ್ನು ಆಕಳು ತನ್ನ ನಾಲಗೆಯಿಂದ ನೆಕ್ಕಹತ್ತಿತು.

ಎಷ್ಟೋ ಹೊತ್ತು ಹೀಗೆಯೇ ಕಳೆದಿರಬೇಕು. ಕೊನೆಗೊಮ್ಮೆ ಆಕಳು ಅತ್ತ ಇತ್ತ ಸರಿದಾಡಿತು. ಬಿಡಿಸಿಕೊಳ್ಳಬಯಸಿತು. ಆಗ ದಾದಾನಿಗೆ ಒಮ್ಮೆಲೇ ಅರಿವುಂಟಾಯಿತು. ಕೂಡಲೆ ಎದ್ದು ಆಕಳನ್ನು ಮತ್ತೆ ಬಿಗಿದು ಕಟ್ಟಿ, ಅದರ ಮುಂದೆ ಒಂದು ಬುಟ್ಟಿ ಹೊಟ್ಟು ಇಟ್ಟು ಪುನಃ ಬಂದು ತನ್ನ ಕಟ್ಟೆಯ ಮೇಲೆ ಕುಳಿತ.

ಈ ಒಂದು ಭಾವನಾತ್ಮಕವಾದ ಪ್ರಸಂಗ ದಾದಾನಲ್ಲಿ ಏನೇನೋ ನೆನಪುಗಳನ್ನು ಕೆರಳಿಸಿತು. ಅಂದು ಫೌಜದಾರ ಫಕರುದ್ದೀನ್ ಬಂಧಿಸಿಟ್ಟ ಮರುದಿನ

ಗೌಡರ ಮನೆಗೆ ಕಳಿಸಿದಾಗ ದಾದಾ ಇದೇ ಕಟ್ಟೆಯ ಮೇಲೆ ಮಲಗಿದ್ದ. ಬಾಪೂ ಸಾಹೇಬನೊಡನೆ ಸ್ನೇಹಮಾಡಿಕೊಂಡಿದ್ದರೆ ಕಕ್ಕನ ಕೊಲೆಯ ಆರೋಪದ ಮೇಲೆ ಗಲ್ಲಿಗೇರಬಹುದಾಗಿತ್ತು. ಶಂಕರಪ್ಪಗೌಡರು ಅದನ್ನು ಮಾಡಗೊಡಲಿಲ್ಲ. ಅವರ ಉಪಕಾರ ಸಾವಿರ ರೂಪ ತಳೆದು ದಾದಾನನ್ನು ಬಂಧಿಸಿತು. ಪಾರ್ವತೆವ್ವ ತನಗೆ ಮಾಡಿದ ಈ ಉಪೇಕ್ಷೆಯೂ ಅದರಲ್ಲಿ ಮುಳುಗಿತ್ತು. ಇದೇ ವಿಚಾರ ಗಳಿಂದ ದಾದಾ ಸಮಾಧಾನವನ್ನೂ ಪಡೆದ, ನಿರ್ವಿಣ್ಣನೂ ಆಗಿದ್ದ. ಅವನಿಗೆ ಅರಿವಾಗದಂತೆಯೇ ನಿದ್ದೆ ಆವರಿಸಿತು.

:: ೨೭ ::

ಪ್ರಾಂತಸಾಹೇಬರು ಪಾದಳ್ಳಿಗೆ ಬರಲಿರುವರೆಂಬ ಅತ್ಯಂತ ಹೃದಯವಿದ್ರಾವಕವಾದ ಸುದ್ದಿ, ಸ್ವತಃ ಮಾಮಲೇದಾರರ ಶ್ರೀಮುಖದಿಂದ ಬಂದಿತೆಂದು ಶೇಷಪ್ಪ ನಂಬಬೇಕಾಯಿತು. ವರ್ಷಕ್ಕೊಮ್ಮೆ ಮಾಮಲೇದಾರರ ತಾಸೆರಡು ತಾಸಿನ ಮುಕ್ಕಾಮನ್ನು ಬಿಟ್ಟರೆ, ವರಿಷ್ಠ ಅಧಿಕಾರಿಗಳೆಂದೂ ಪಾದಳ್ಳಿಗೆ ಭೆಟ್ಟಿಕೊಟ್ಟಿರಲಿಲ್ಲ. ತನ್ನ ಹದಿನೈದು ವರ್ಷಗಳ ಕುಲಕರ್ಣಿಕಿ ಅವಧಿಯಲ್ಲಿ ಎಂದೂ ಘಟಿಸಲಾರದ ಸಂಗತಿ ಈಗ ನಡೆಯುವದಿತ್ತು. ಶೇಷಪ್ಪನಿಗೆ ಅದನ್ನು ಕೇಳಿಯೇ ಹೊಟ್ಟೆಯಲ್ಲಿ ತಣ್ಣೀರು ಸುರುವಿದಂತಾಯಿತು. ಶೇಷಪ್ಪನಿಗೆ ಕಾಲ ಸರಿಯಾಗಿರಲಿಲ್ಲ, ಪ್ರಸಂಗವೋ ನಾಜೂಕಿನದು. ತನ್ನ ಪಾಳಿ ಮುಗಿದು ಶ್ಯಾಮರಾಯನ ಪಾಳಿ-ನೇಮಣೂಕಿಯ ನೋಟೀಸು ಹೊರಟ ಈ ಕಾಲದಲ್ಲಿಯೇ ಇಂಥ ಪ್ರಸಂಗ ನಡೆಯಬೇಕೆಂದರೆ? ಶ್ಯಾಮರಾಯನ ನೇಮಣೂಕಿ ಬುಡಮೇಲಾಗಿ ತನ್ನ ಪದವಿ ಸ್ಥಿರವಾಗಿ ಉಳಿಯಬೇಕೆಂದು ಮಾಡಿದ ಪ್ರಯತ್ನಗಳೆಲ್ಲ ವಿಫಲವಾಗಿದ್ದವು. ಇವೆಲ್ಲವುಗಳಿಂದ ಶೇಷಪ್ಪನ ಕುಶಾಗ್ರಬುದ್ಧಿಗೂ ಮಂಕುಹಿಡಿದಂತಾಗಿತ್ತು.

ಶೇಷಪ್ಪನ ಕಲ್ಪಕಶಕ್ತಿ ಕ್ಷಣಮಾತ್ರದಲ್ಲಿ ಭವಿತವ್ಯವನ್ನೆಲ್ಲ ಊಹಿಸಿ ನೋಡ ತೊಡಗಿತು. ಪ್ರಾಂತಸಾಹೇಬರ ಸರಬರಾಯಿ ವ್ಯವಸ್ಥೆಯೊಂದು ತಲೆನೋವು. ಆದಕ್ಕೆ ಈಗಲೇ ಮುಂಜಾಗ್ರತೆ ವಹಿಸುವದು ಲೇಸೆಂದು ಮಾಮಲೇದಾರರಿಗೇ ಸಲಹೆ ಕೇಳಿದ. ಆಗ ಅವರು ಮುಗುಳುನಗೆ ನಕ್ಕು, "ಏನೋ ಕುಲಕರ್ಣಿ,

ವರ ಬಗ್ಗೆ ನನಗ ಕೇಳತೀಯಲ್ಲೋ? ಇಂಥಾ ಎಷ್ಟ ಮಂದಿ ಸಾಹೇಬರು ನಿನ್ನ
ಸೇದಾಗ ಇದ್ದಾರೋ ಏನೋ! ಸಾಹೇಬರ ಬಟ್ಲರ ಅವರ ಜೋಡೀ ಬರತಾನ
ೋಡು, ಅವನ್ನs ಕೇಳು. ಬಟ್ಲರನ ತೃಪ್ತಿವ್ಯಾಲೆ ಸಾಹೇಬರನ್ನು ಸಂತೋಷ
ಡಿಸೋದು ಅವಲಂಬಿಸೇದ ನೋಡು" ಎಂದು ಸೂತ್ರರೂಪವಾಗಿ ಸೂಚಿಸಿದರು.

"ಓಹೋ ಅದರ ಕಾಳಜೀನ ಬ್ಯಾಡ ಸಾಹೇಬರs. ಅನಾಯಾಸ ಕನ್ಯಾಗತ
ಂದದ. ಕುಟುಂಬಸಮೇತ ತಾವೂ ಬಂದಬಿಡಬೇಕು. ನಮ್ಮೂರ ಪುಟ್ಟಪ್ಪನೂ
ಗ ಖಾಲಿ ಇರತಾನ. ಮಂಡಿಗೀ ಪ್ರಸ್ತ ಹೊಡಿಸಿಬಿಡೂಣು" ಎಂದು
ಮಂತ್ರಣವನ್ನೇ ಕೊಟ್ಟ ಶೇಷಪ್ಪ.

ಮಾಮಲೇದಾರರಿಗೂ ಕುಟುಂಬಸಮೇತ ಫಿರ್ತಿ ಹೊರಡುವದೆಂದರೆ
ಚ್ಚುಗೆಯ ವಿಷಯವಾಗಿತ್ತು. ಅವರ 'ಫಿರ್ತಿ' ಎಂದರೆ ಸಮೀಚೀನ ಮೇಜ
ನಿ ಮಾಡಿಸುವ ಉತ್ಸಾಹೀ ಗ್ರಾಮಸ್ಥರ ಔದಾರ್ಯಕ್ಕೆಲ್ಲ ಉಕ್ಕು ಬಂದಂತಾಗು
ತ್ತು. ಸರಬರಾಯಿಯ ವೆಚ್ಚ ಗ್ರಾಮಸ್ಥರ ಮೇಲೆ ಬೀಳದಂತೆ ನೋಡಿ
ೊಳ್ಳುವರೆಂದು ಮಾಮಲೇದಾರರ ಖ್ಯಾತಿ ಬೇರೆ ಇತ್ತು. ಅವರು ತಾವೇ ಹಣ
ೊಡುತ್ತಿದ್ದರೆಂತಲ್ಲ. ಚೌಕಶಿ ನಡೆಯುವಾಗ 'ಐದು' ಪ್ರಕರಣಗಳನ್ನು ಗ್ರಾಮಸ್ಥ
ಗನುಕೂಲವಾಗುವಂತೆ ಮಾತ್ರ ನೋಡಿಕೊಳ್ಳುತ್ತಿದ್ದರು. ಗ್ರಾಮಸ್ಥರು
ೂಚಿಸಿದಂತೆಯೇ ಆ ಪ್ರಕರಣಗಳ ನಿರ್ಣಯ ಬರೆಯುತ್ತಿದ್ದರು. ಅಂದ ಮೇಲೆ
'ಸಾರ್ಥ' ಉಪಕಾರಕ್ಕಾಗಿ ಸರಬರಾಯಿಯ ಒಂದು ಕೃತಜ್ಞತೆ ಹೆಚ್ಚಿನದೇ?

ಶೇಷಪ್ಪನ ಕಣ್ಣೆದುರಿಗೆ ಈ ಉಪಾಯಗಳೆಲ್ಲ ಹಾದು ಹೋದವು.
ಾಡಾನ ಮೇಲಿನ ಫೌಜದಾರಿ ಖಟ್ಲೆಯಲ್ಲಿ ಸಾಹೇಬರು ತನಗನುಕೂಲವಾದ
ರ್ಣಯವನ್ನೇ ಬರೆಯುವರೆಂಬ ಆತ್ಮವಿಶ್ವಾಸ ಶೇಷಪ್ಪನಿಗಿತ್ತು. ಆದರೆ ಆರೋಪಿ
ಾಡಾ ಬಡವ. ಅವನಿಂದ ಯಾವದೇ ರೀತಿಯ ಲಾಭವಾಗುವಂತಿರಲಿಲ್ಲ. ಈ
ಪ್ರಕರಣದಿಂದ ಹಣ ಹುಟ್ಟಬೇಕಿದ್ದರೆ ಊರವರೆಲ್ಲ ಪಟ್ಟಿ ಹಾಕಿ ಕೊಡಬೇಕಾಗು
ತ್ತಿತ್ತು. ಈ ಮಾತು ಮಾಮಲೇದಾರರ ಕಿವಿಗೆ ಬಿದ್ದರೆ ತನ್ನ ಬಣ್ಣವೇ ಬಯಲಿಗೆ
ಬೀಳಬಹುದಲ್ಲ! ಆದರೆ ಬರಿಗೈಯಿಂದ ಕೆಲಸ ಮಾಡುವದು ಶೇಷಪ್ಪನ ಕುಲ-
ಕರ್ಣಿಕಿ 'ಆತ್ಮಸಾಕ್ಷಿಗೆ' ಒಗ್ಗದ ಮಾತು. ಅದು ಕುಲಕರ್ಣಿಕಿ ಸಂಪ್ರದಾಯಕ್ಕೇ
ಅಪಮರ್ಯಾದೆ. ಮೇಲಾಗಿ ಸರಬರಾಯಿಯ ವೆಚ್ಚವೊಂದು ನೈಮೇಲೆಯೇ
ಕುಳಿತಿದೆಯಲ್ಲ!

ಸರಬರಾಯಿಯ ವೆಚ್ಚವೆಂದೊಡನೆ ನೆನಪಾಯಿತು. ಈ ವೆಚ್ಚದಲ್ಲಿ ಅರ್ಧ
ವನ್ನು ಗೌಡರು ವಹಿಸುವದು ಸಂಪ್ರದಾಯ. ಶಂಕರಪ್ಪಗೌಡರು ಸತ್ತಮೇ
ಗೌಡಿಕಿಯ ದಪ್ತರವೂ ಶೇಷಪ್ಪನ ಕಡೆಗೇ ಇತ್ತು. ಗೌಡರ ನೇಮಣೂಕಿ ಆಗು
ವರೆಗೆ ಅವನ ಕಡೆಗೇ ಇರುವದೂ ಇತ್ತು. ಗೌಡರ ಭಾಗಕ್ಕೆ ಸೇರುವ 'ಗೋಪಾಳ'
ಹಣವೂ ತನಗೇ ಸಲ್ಲುತ್ತಿತ್ತು ನಿಜ. ಆದರೂ ಅದಕ್ಕಾಗಿ ಸರಬರಾಯಿಯ ಭಾರ
ನ್ನೆಲ್ಲ ತಾನೊಬ್ಬನೇ ವಹಿಸಬೇಕೆಂದರೆ! ಪಾರ್ವತೆವ್ವನನ್ನು ಈ ವಿಷಯಕ
ಕೇಳುವದೂ ಬಿಗಿ. ಆದರೆ ಕೇಳಿದ್ದರೆ ಕೊಡುತ್ತಿದ್ದೆನೆಂಬ ಮಾತು ಆಮೇ
ಬಂದರೆ? ಈ ಬಗ್ಗೆ ಒಂದು ಮಾತು ಯಾಕೆ ಕೇಳಿಬಿಡಬಾರದು? ಶೇಷಪ್ಪನಿ
ಅದೂ ಸರಿಯೆನಿಸಿತು. ಜೈನರ ಜಿನ್ನಪ್ಪನನ್ನು ಜೊತೆ ಮಾಡಿಕೊಂಡು ಗೌಡ
ಮನೆಗೆ ನಡೆದೇ ಬಿಟ್ಟ.

ಪಾರ್ವತೆವ್ವ ಒಳಗೆ ಅಡಿಗೆಮನೆಯಲ್ಲಿದ್ದಳು. ಶೇಷಪ್ಪ ಬಂದ ಸುದ್ದಿ ಕೇ
ಅವಳ ಮನಸ್ಸಿನಲ್ಲೂ ಏನೇನೋ ಭಾವನೆಗಳು ಮೂಡಿದವು. ಶಂಕರಪ್ಪಗೌಡರ
ಸತ್ತಮೇಲೆ ಮೊದಲನೆಯ ಸಾರೆ ಶೇಷಪ್ಪ ತನ್ನ ಮನೆಗೆ ಬಂದಿದ್ದ. ಹಿಂದಿನ
ನೂರು ವಿರಸದ ಪ್ರಸಂಗಗಳನ್ನೂ ಈಗ ಮರೆತು ಬಂದಿರಬಹುದೆಂಬ ಕಲ್ಪನೆ
ಅವಳಿಗೆ ಸಮಾಧಾನವನ್ನುಂಟುಮಾಡಿತು.

ಶೇಷಪ್ಪ ತಾನು ಬಂದ ಕಾರಣವನ್ನು ನೇರವಾಗಿ ಹೇಳಲಿಲ್ಲ. "ಮಾಮಲೆ
ದಾರ ಸಾಹೇಬರು ಈ ಊರಿಗೆ ಬರೋವರಿದ್ದಾರ. ಮನ್ನೆ ತಾಲೂಕ-ಕಚೇರಿಗೆ
ಹೋದಾಗ ಸುದ್ದಿ ಹತ್ತಿತು; ಅದಕ್ಕ ನಿಮಗ ತಿಳಿಸಿ ಹೋಗೋಣಂತ ಬಂದೆ"
ಎಂದು ಪ್ರಾರಂಭಿಸಿದನು. "ಮತ್ತ ಮಾಮಲೇದಾರರು ಇಲ್ಲಿಗೆ ಬಂದಾಗ ದಾದಾನ
ಮ್ಯಾಲಿನ ಖಟ್ಲೆ ಚೌಕಶಿ ಮಾಡಿ ನಿಕಾಲೆ ಮಾಡವರಿದ್ದಾರ" ಎಂದು ಮುಂದು
ವರಿಸಿದ. ಪಾರ್ವತೆವ್ವ ಇದರಿಂದ ಉತ್ಸಾಹಿತಳಾಗಿ ದಾದಾನ ಬಿಡುಗಡೆಗಾಗಿ
ಪ್ರಯತ್ನಿಸಬಹುದೆಂದು ಅವನ ದೂರದ ಆಸೆ.

ಆದರೆ ಅವನ ಆಸೆಗೆ ಕೂಡಲೆ ಪೆಟ್ಟು ಬಿತ್ತು. ಪಾರ್ವತೆವ್ವ "ಇದ್ದೀತು
ಬಿಡಿರಿ" ಎಂದು ನಿರುತ್ಸಾಹದ ಮಾತನ್ನಾಡಿದಳು.

ಶೇಷಪ್ಪನಿಗೆ ಆಶ್ಚರ್ಯವಾಯಿತು. "ಏನು ಪಾರ್ವತೆವ್ವನೋರ ನನ್ನ
ಕಂಡು ಚ್ಯಾಷ್ಟಿ ಮಾಡತೀರ್‍ಯೋ ಏನೋ? ದಾದಾನ್ನ ಜಾಮೀನಿನಮ್ಯಾಲೆ
ಬಿಡಸಲಿಕ್ಕೆ ಪ್ರಯತ್ನ ಮಾಡಿದವರು ಈಗ ಹೀಂಗ ಮಾತಾಡೋದು?" ಎಂದ.

ಈ ಮಾತು ನಡೆಯುತ್ತಿರುವಾಗ ಜಿನ್ನಪ್ಪ ಅಲ್ಲಿರಲಿಲ್ಲ. ಮುಂಗಾರಿಯ
ತ್ತಿಗೆಯ ವಿಷಯವಾಗಿ ಆಳುಗಳ ಜೊತೆಗೆ ಮಾತಾಡಲು ಧಾಬೆಗೆ ಹೊರಟು
ಹೋಗಿದ್ದ. ಗೌಡಿತಿಗೆ ಈಗ ತನ್ನ ಸಿಟ್ಟನ್ನೆಲ್ಲ ಕಾರಿಕೊಳ್ಳಲು ಒಳ್ಳೆಯ ಅವಕಾಶ
ದೊರಕಿದಂತಾಗಿತ್ತು. ಗೌಡರ ಮನೆತನದ ಅಭಿಮಾನ, ಅಕಸ್ಮಾತ್ತಾಗಿ ತನ್ನ ಮೈ
ಮೇಲೆ ಬಿದ್ದಿದ್ದ ಜವಾಬ್ದಾರಿ, ಅವಳ ಹೆಣ್ಣು ಸ್ವಭಾವಕ್ಕೆ ಜೊತೆಯಾಗಿ ಅವಳ
ತಲೆಯಲ್ಲಿ ಏನೇನೋ ಗೊಂದಲ ಹಾಕುತ್ತಿದ್ದವು.

"ಅಲ್ಲರಿ, ಕಾರಹುಣಿವೀ ದಿನಾ ನಮ್ಮ ಎತ್ತು ಕರಿಹರಿಯಾಕ ಈ ದಾದಾ
ಬ್ಬರಬೇಕೇನರಿ? ನಮ್ಮ ಉಪ್ಪು ಉಂಡ ಉಪಕಾರಾ ತೀರಿಸಿದ. ನಮ್ಮ
ಗಿದವರೊಳಗ ತೆಲಿ ಎತ್ತಿ ಅಡ್ಡಾಡದ್ಹಾಂಗ ಆತಿಲ್ಲರಿ? ಗೌಡರ ಮನಿಗೆ ಬರೋ
ದಿಸ್ಸಾದೀನs ಕಳದಿಟ್ಟನಲ್ಲರೀ! ಜಾಗೀರದಾರರ ನುಚ್ಚಿಗೆ ಬಿದ್ದ ಮನೆತನಾ ಅದು,
ನಮ್ಮನ್ನ ನಚ್ಚೀತರೇ? ಹೇಳಿ ಕೇಳಿ ಜಾತೀನೂ ಒಂದs. ಇವರ ಕಾಕಾ, ಇವರ
ಅಪ್ಪಾ ಎಲ್ಲಾ ಅಲ್ಲೀ ದಗ್ಗುಡಿೀತಾವಲ್ರಿ? ಜಾತೀ ಅಭಿಮಾನ ಸುಟ್ಟರೂ
ಹೋಗೂದಿಲ್ಲ ಯಪ್ಪಾ! ನಮ್ಮದs ತೆಪ್ಪು. ಹೊಟ್ಟೀಲೆ ಹುಟ್ಟಿದ ಮಗ್ಗ ಮಾಡಾ
ಲ್ಲ ಅsಟು ಇಂವಗ ಮಾಡಿವೆ. ಕಡೀಕೂ ನನಗs ಕೈ ತೋರಿಸಿದನಲ್ಲರೀ?
ನ್ನ ಅಂವಾ ಜೇಲಿಗೆ ಹೋದರೂ ಅsಟs, ಹಾಳಭಾವೀ ಬಿದ್ದರೂ ಅsಟs."

ಗೌಡಿತಿಯ ದ್ವೇಷ ದುಷ್ಟ ತರ್ಕದ ಬೆನ್ನನ್ನೇರಿ ಅಸಂಬದ್ಧ ಮಾತುಗಳನ್ನೇ
ಡಿಸಿತ್ತು. ಶೇಷಪ್ಪನಿಗೆ ತನ್ನ ಕುತಂತ್ರವನ್ನು ಬಿತ್ತಲು ಇದು ಹದವಾದ ಭೂಮಿ
ನ್ನಿಸಿತು. ದಾದಾನ ಮೇಲೆ ಅವನಿಗೇನೂ ದ್ವೇಷವೆಂದಲ್ಲ. ಆದರೆ ಶೇಷಪ್ಪ
ಗೆ ಯಾವ ಪ್ರಸಂಗದಲ್ಲಿ ಏನು ಲಾಭವಾದೀತೋ ಎಂದು ಯಾವಾಗಲೂ ನಿರೀಕ್ಷೆ
ಸುತ್ತಿತ್ತು. ಅವನೂ ಇನ್ನೊಂದು ಮಾತು ಕೇಳಿ ನೋಡೋಣವೆಂದುಕೊಂಡ.

"ಇಲ್ಲಿ ನೋಡ್ರಿ ಪಾರ್ವತೆವ್ವನವರs, ದಾದಾನ್ನ ಜೇಲಿಗೆ ಕಳಸೋದು
ಗುರು. ಅವರ ಬಿಡಿಸಿಗೊಂಡ ಬರೂದs ಕಠಿಣ. ಅದಕs ಸ್ವಲ್ಪ ವಿಚಾರ
ಮಾಡಬೇಕಾಗೇದ" ಎಂದ.

"ಹಗುರಾಗದ್ದರ ಅವನ್ನs ಮಾಡಿಬಿಡರಿ. ನನ್ನೇನು ಕೇಳೂದೈತಿ ಅದರಾಗ?"
ಎಂದು ಮತ್ತೆ ಕಡ್ಡಿ ಮುರಿದಂತೆ ಪಾರ್ವತೆವ್ವ ಮಾತಾಡಿದಳು.

ಶೇಷಪ್ಪನಿಗೆ ಇನ್ನೂ ಒಂದು ಸಂಶಯ. "ಅಲ್ಲ, ಬಾಳಾಚಾರು ನಿಮ್ಮ
ಮಾತಿಗೆ ಒಪ್ಪಬೇಕಲ್ಲ? ದಾದಾನ ಮ್ಯಾಲೆ ಅವರ ಪ್ರೀತಿ ಭಾಳ ಇದ್ಧಾಂಗ

ಕಾಣತದ. ಅವನ ಮ್ಯಾಲೆ ವಾರಂಟ ಇದ್ದಾಗ ಅವನ್ನ ತಮ್ಮ ಮನ್ಯಾಗ ಮು
ಇಟಗೊಂಡದ್ದನ್ನು ಸ್ವತಃ ನೋಡೀನಿ ಅಂತ ಈ ಮಾತ ಆಡಬೇಕಾಗೇದ."

ಮಾತು ಈಗ ಬಾಳಾಚಾರ್ಯರ ವಿಷಯಕ್ಕೇ ಬಂದವು. ಇಬ್ಬರೂ ಎಚ್ಚರಿ
ಯಿಂದ ಮಾತಾಡತೊಡಗಿದರು. ಶೇಷಪ್ಪ ತನ್ನ ಕುಲಕರ್ಣಿಕಿ ಪಾಳಿ ಹೋಗಲಿರು
ಮಾತನ್ನೂ ಆಡಿದ. ನಾಲ್ವತ್ತು ವರ್ಷ ಊರು ಬಿಟ್ಟು ಹೋದ ಶ್ಯಾಮರಾಯ
ಹೊಸ ನೇಮಣೂಕಿಗೆ ಬಾಳಾಚಾರ್ಯರ ಸಂಪೂರ್ಣ ಬೆಂಬಲವಿದ್ದದ್ದನ್
ನಿವೇದಿಸಿದ. ಆದರೆ ಗೌಡರ ವಾರಸಾ-ಪ್ರಕರಣದ ತೊಡಕು ತೊಂದರೆಗಳ
ಶ್ಯಾಮರಾಯನಿಗೇನು ಗೊತ್ತಾಗಬೇಕು? ತನ್ನನ್ನು ಇನ್ನೂ ಕೆಲ ದಿನ ಇ
ಗೊಟ್ಟರೆ ತೊಡಕುಗಳೆಲ್ಲ ಪರಿಹಾರವಾಗುವದಿಲ್ಲವೇ? ಇದಕ್ಕೆ ಬಾಳಾಚಾರ್ಯರೇ
ಅಡ್ಡಬರಬೇಕು? ಶೇಷಪ್ಪನ ತಕರಾರೆಲ್ಲ ಬಾಳಾಚಾರ್ಯರ ಮೇಲೆಯೇ
ಶ್ಯಾಮರಾಯನ ನೇಮಣೂಕಿಗೆ ಅವರೇ ಕಾರಣರೆಂದು ಅವನ 'ಕುಲಕರ್ಣಿ
ಅಂತರಾತ್ಮಾ' ಹೇಳುತ್ತಿತ್ತು. ಇದನ್ನೆಲ್ಲ ಗೌಡಿತಿಯ ಎದುರು ವಿವರಿಸಿ ಹೇ
ಬಾಳಾಚಾರ್ಯರು ವಾರಸಾ-ಪ್ರಕರಣದ ಬುಡಕ್ಕೇ ಕೊಡಲಿ ಹಾಕಲಿರುವರೆಂ
ಬಿಂಬಿಸಿದ.

ಆಳುಗಳೊಡನೆ ಮಾತಾಡಲು ಹೋದ ಜಿನ್ನಪ್ಪ, ಬಿತ್ತಲಿಕ್ಕಾಗಿ ಕೂರಿ
ದಿಂಡು ಸಜ್ಜುಮಾಡಿಕೊಟ್ಟೇ ಬಂದ. ಬಂದಾಗಲೂ ಶೇಷಪ್ಪನ ಹರಟೆ ಇನ
ನಡೆದೇ ಇತ್ತು. ಶೇಷಪ್ಪನ ಬಗ್ಗೆ ಅವನಿಗೆ ಇತ್ತೀಚೆಗೆ ಒಳ್ಳೆಯ ಅಭಿಪ್ರಾಯವ
ಆಗಿತ್ತು. ದಾದಾನನ್ನು ಜಾಮೀನಿನ ಮೇಲೆ ಬಿಡಿಸಿದ್ದು, ಪಡದಪ್ಪನನ್ನು ಓಡಿಸಿದ್ದ
ಲಿಂಗಪ್ಪನ ವಾರಸಾ ರದ್ದುಪಡಿಸಲು ಅಪೀಲು ಮಾಡಿದ್ದು ಇವನ್ನೆಲ್ಲ ಅವನ
ಕಣ್ಣಾರೆ ಕಂಡವನಾಗಿದ್ದ. ರೊಕ್ಕ ತಿಂದರೂ ಹೇಳಿದಂತೆ ಕೆಲಸ ಮಾಡಿದ್ದ. ಅಂ
ಮೇಲೆ ಇವನನ್ನು ಮೋಸಗಾರನೆಂದು ಹಿಡಿಯುವದಾದರೂ ಹೇಗೆ? ಅಂತಲೆ
ಮತ್ತೊಮ್ಮೆ ನಡುವೆ ಬಾಯಿ ಹಾಕಿದ:

"ಕುಲಕರ್ಣ್ಯಾರಃ, ನಿಮ್ಮ ಮುಂದ ಆಡೂ ಮಾತಲ್ಲ. ಆಡಿಧಾಂಗ ಮಾಡ
ಭಂಟರು ನೀವಃ ಒಬ್ಬರು ಅಂತ, ಗೌಡಿತೀ ಮುಂದ ನಾ ಹೇಳಿಕೊಂತಃ
ಬಂದೀನು. ಬೇಕಾರ ಅವರನ್ನಃ ಕೇಳಿಕೋರಿ."

ಶೇಷಪ್ಪನ ಮುಂಗಾಲು-ಪುಟಿಗೆಗೆ ಇನ್ನೊಂದು ಆಧಾರ ಸಿಕ್ಕಿತು. "ಅಲ್ಲೊ
ಜಿನ್ನಪ್ಪ, ನೀನಃ ಹೇಳು. ಶ್ಯಾಮರಾಯರ ಕುಲಕರ್ಣಿಕಿ ನೇಮಣೂಕಿ ಆದರ

ಅವನ ಕಡಿಂದ ಲಿಂಗಪ್ಪನ ವಾರಸಾ-ಪ್ರಕರಣ ನೀಗಸೂದು ಸಾಧ್ಯ ಆದೀತs ?" ಎಂದು ಕೇಳಿದ.

"ಜೀ, ಆಗಾಣರೀs! ಅವರು ಕಲ್ತವರಾದರ ನಮ್ಮೂರಾಗ ಹಿರ್‍ಯಾರಾಗಾಕ ಪಾಡದಾರು. ಕೊರ್ಟು-ಕಚೇರಿ ವಹಿವಾಟ ಇದ್ಧಾಂಗ ಕಾಣೂದಿಲ್ಲ ತಗೀರಿ" ಎಂದು ಜಿನ್ನಪ್ಪ ಮುಖಸಾಮುದ್ರಿಕ ಹೇಳುವವನಂತೆ ಶ್ಯಾಮರಾಯರ ಬೆಲೆಯನ್ನಳೆದೇ ಬಿಟ್ಟ.

"ನನಗs ಕುಲಕರ್ಣಿಕಿ ಸಿಗಬೇಕೂ ಅಂತ ನನಗೇನೂ ಆಶಾ ಇಲ್ಲ. ಅದ ರಿಂದ ಬಂದೀತೇನು, ಆದೀತೇನು ? ಆದರ ದೊಡ್ಡ ಕೆಲಸಕ್ಕ ಕೈಹಾಕೀವಿ ಏನಪಾ. ಅದನ್ನ ಸಾಧಿಸಲಿಕ್ಕೆ ದಪ್ತರ ಕೈಯಾಗ ಇರಬೇಕಾಗತದ. ನಾಳೆ ಪ್ರಾಂತಸಾಹೇ ಬರು ಬಂದರಂದರ ಶ್ಯಾಮರಾಯನ ನೇಮಣೂಕಿ ಆಗಿಬಿಡಬಹುದು. ಆಮ್ಯಾಲೆ ಪ್ರಾಂತಕಚೇರೀ ಸಂಬಂಧ ನನಗ ಉಳ್ಯೂದುಲ್ಲ. ಆಮ್ಯಾಲೆ ವಾರಸಾ ಅಪೀಲು ವಿರುದ್ಧ ಆದರ ನಾ ಜವಾಬ್ದಾರ ಅಲ್ಲ" ಶೇಷಪ್ಪನ ಮಾತಿನ ಗಾಳಕ್ಕೆ ಮೀನ ತಗಲಿತು.

ಶೇಷಪ್ಪ ಇಬ್ಬರಿಂದಲೂ ಸಹಾಯ ಯಾಚಿಸಿದ. ಅವರು ಇಲ್ಲೆನ್ನಲಾರರು. ಆದರೆ ಇಬ್ಬರಿಂದಲೂ ಆಗಬೇಕಾದದ್ದೇನು ? ಶೇಷಪ್ಪನೇ ಹಾದಿ ಹೇಳಿಕೊಡ ಬೇಕಾಯಿತು. ಕೆಲ ದಿನಗಳ ಮಟ್ಟಿಗಾದರೂ ಶೇಷಪ್ಪ ಕುಲಕರ್ಣಿಯಾಗಿ ಉಳಿಯು ವದು. ಅಶ್ಯಕವಾಗಿದೆ. ಇದರ ಸಲುವಾಗಿ ಬಾಳಾಚಾರ್‍ಯರ ವಿರುದ್ಧ ನಿಲ್ಲಬೇಕಾದ ಪ್ರಸಂಗ ಬಂದರೂ ಬರಬಹುದು. ಅದಕ್ಕಾಗಿ ಸರ್ವೋತ್ಕೃಷ್ಟ ಉಪಾಯವೆಂದರೆ ಒಂದೇ ಒಂದು. ಪ್ರಾಂತಸಾಹೇಬರ ಹೆಸರಿನಲ್ಲಿ ಒಂದು ಅರ್ಜಿ ಬರೆಯಬೇಕು. ಶೇಷಪ್ಪನೇ ಕೆಲ ದಿನಗಳ ವರೆಗೆ ಕುಲಕರ್ಣಿಯಾಗಿ ಉಳಿಯುವದು ಊರ ಹಿತದ ದೃಷ್ಟಿಯಿಂದ ಅವಶ್ಯವಾಗಿದೆಯೆಂದು ಕಾಣಿಸಬೇಕು. ಅರ್ಜಿ ಇಂದು ಸಂಜೆಯ ಒಳಗೇ ಸಿದ್ಧವಾಗಬೇಕು. ಅದಕ್ಕೆ ಗೌಡತಿಯದೇ ಮೊದಲ ಸಹಿ ಯಾಗಬೇಕು.

ಪಾರ್ವತೆವ್ವ ಜಿನ್ನಪ್ಪ ಇಬ್ಬರೂ ಈ ಮಾತಿಗೆ ಒಪ್ಪಲೇಬೇಕಾಯಿತು. ಆದರೆ ಶೇಷಪ್ಪ ಇನ್ನೊ ಎಚ್ಚರಿಕೆ ತೆಗೆದುಕೊಳ್ಳಬೇಕಾಗಿತ್ತು. ಅರ್ಜಿಗೆ ಊರವರವೆಲ್ಲ ದಿಂಬಲಿಸಬೇಕು. ಆದರೆ ಅರ್ಜಿ ಬರೆದದ್ದು ಶೇಷಪ್ಪನ ನೇಮಣೂಕಿಯ ವಿಷಯ ವಾಗಿ ಎಂದು ಜನರಿಗೆ ಹೇಳುವದು ಬೇಡ. ಹೇಳಿ ಕೇಳಿ ಇದು ವೈಯಕ್ತಿಕ

ವಿಷಯ, ಕ್ಷುಲ್ಲಕವಾದದ್ದು. ಬಾಳಾಚಾರ್ಯರು ಇದರ ವಿರುದ್ಧ ಬಾಯಿ ಹಾಕಬಹುದು. ಈ ವಿಷಯ ಅವರಿಗೂ ತಿಳಿದಿರಬಾರದು. ಆದರೂ ಎಲ್ಲರ ಬೆಂಬಲ – ಬಾಳಾಚಾರ್ಯರದೂ ಸಹ – ಸಿಕ್ಕಿರಬೇಕು. ಅದಕ್ಕೆ ಹಾದಿ ಏನು?

ಶೇಷಪ್ಪನಿಗೆ ಗೊತ್ತಿಲ್ಲವೇ ? ಮೊನ್ನೆಮೊನ್ನೆ ದುಷ್ಕಾಳ, ಕಾಲರಾ ಪಾಡಳ್ಳಿಯನ್ನೇ ಹುರಿದುಬಿಟ್ಟವೆ. ಸರಕಾರದಿಂದ ಸಹಾಯ ಬೇಡಬೇಕಾಗಿದೆ. ಈಗ ಕೊಟ್ಟ ತಗಾಯಿ ಸಾಲ ಯಾವುದಕ್ಕೂ ಸಾಲದು. ಸರಕಾರ ಸಹಾಯವನ್ನೇ ನೀಡಬೇಕು. ಅರ್ಜಿ ಬರೆದದ್ದೇ ಅದರ ಸಲುವಾಗಿ ಎಂದು ಊರವರಿಗೆಲ್ಲ ಹೇಳಿ ಅವರ ಕಡೆಯಿಂದ ಸಮ್ಮತಿಸೂಚಕವಾಗಿ ಬೊಟ್ಟು ಒತ್ತಿಸಬೇಕು. ಶೇಷಪ್ಪನಿಗೇನು ಅರಿಯದ ವಿಷಯವೇ? ಊರವರೆಲ್ಲ ನಿರಕ್ಷರಿಗಳು. ತಾನೊಬ್ಬ, ಗಾವಠೀ ಸಾಲೆಯ ವೆಂಕಣ್ಣಮಾಸ್ತರ ಇಬ್ಬರನ್ನು ಬಿಟ್ಟರೆ ಉಳಿದವರೆಲ್ಲ ಅಕ್ಷರಗಳೆಂದರೆ ದೆವ್ವವನ್ನು ಕಂಡಂತೆ ಗದಗದ ನಡುಗುತ್ತಿದ್ದರು. ಇನ್ನು ಬಾಳಾಚಾರ್ಯರು. ಅವರಿಗೆ ಕನ್ನಡ ಲಿಪಿ ಗೊತ್ತಿಲ್ಲ. ಅವರು ಓದುವದು, ಬರೆಯುವದು ದೇವನಾಗರಿ ಲಿಪಿಯಲ್ಲಿಯೇ! ಅರ್ಜಿಯಲ್ಲಿ ಬರೆದ ವಿಷಯ ಅವರಿಗೆ ಕೂಡಾ ಗೊತ್ತಾಗಿರಬಾರದು.

ಪಾರ್ವತೆವ್ವ ಜಿನ್ನಪ್ಪ ಇಬ್ಬರೂ ಸುಲಭವಾಗಿ ಅವನ ಬಲೆಗೆ ಬಿದ್ದರು. ಶೇಷಪ್ಪನಿಗೆ ತನ್ನ ಯಶಸ್ಸನ್ನು ಕಂಡು ತನಗೇ ಆಶ್ಚರ್ಯವಾಯಿತು, ಸ್ವಲ್ಪ ಹೆದರಿಕೆಯೂ ಆಯಿತು. ಆದರೂ ಅದನ್ನೆಲ್ಲ ತೋರಗೊಡದೆ ಹೇಳಿದ: “ಹಂಗಾರ ನಾ ಈಗಿಂದೀಗ ಹೋಗಿ ನಮ್ಮ ಮಾಸ್ತರ ವೆಂಕಣ್ಣನ ಕಡಿಂದ ಎರಡು ಅರ್ಜಿ ಬರಿಸಿ ಕಳಸತೀನಿ. ಒಟ್ಟಿಗೆಲ್ಲಾ ದಸ್ತೂರ ಅವರಽ ಬರೀತಾರ. ಅವರು ಇಲ್ಲಿ ಬಂದು ಕೂತಾಗ ಒಬ್ಬೊಬ್ಬರನಽ ಕರಿಸಿ ಬಟ್ಟ ಒತ್ತಿಸಿಕೋಬೇಕು. ಹತ್ತಿಪ್ಪತ್ತು ಸಹಿ ಆಗಿ ಅರ್ಜಿ ಬರದ ಕಾಗದ ಮುಗಿತೂ ಅಂದರ, ಊರಾಗ ಅಡ್ಡಾಡಿ ಬೀಳೀ ಕಾಗದದ ವ್ಯಾಲ ಬಟ್ಟ ಒತ್ತಿಸಿಗೋಬೇಕು. ಆಗ ಮಾತ್ರ ನಾ ಬರದು ಕೊಟ್ಟ ತಗಾಯಿ ಅರ್ಜಿ ಕೈಯಾಗ ತೊಗೊಂಡಿರಬೇಕು. ಬಿಳೀ ಕಾಗದದ ವ್ಯಾಲೆ ಸಹಿ ಮಾಡಿಸಿಗೊಂಡು, ಆ ಕಾಗದಾ ಅರ್ಜಿಗೆ ಹಚ್ಚಿ ಕಳಿಸಬೇಕು. ನಾ ಬರದ ಇನ್ನೊಂದು ತಗಾಯಿ ಅರ್ಜೀಗೂ ಕೆಲವು ಸಹೀ ಮಾಡಿಸಿ ಇದರ ಜೋಡೀನಽ ಕಳಿಸಿಬಿಡತೀನಿ. ಜನರಿಗೆ ಮೋಸಮಾಡಿ ಕೆಲಸಾ ಮಾಡಿದಿವಿ ಅಂತ ಅನಿಸಿಗೊಳ್ಳೋದು ಬ್ಯಾಡ”ಎಂದಿಷ್ಟು ಹೇಳಿ ಶೇಷಪ್ಪ ಗೌಡರ ಮನೆಯಿಂದ ಹೊರಬಿದ್ದ.

ದಾರಿಯಲ್ಲಿಯೇ ಗೋಪಾಲಕೃಷ್ಣನ ಗುಡಿ. ಶೇಷಪ್ಪ ಅದರ ಹತ್ತಿರ

ಬಂದಾಗ ಯಾರೋ ಭಕ್ತರು ಗಂಟೆ ಬಾರಿಸಿದ ಸಪ್ಪಳ ಕೇಳಿದವನೇ ಮೇಲೆ ನೋಡಿದ. ಬಾಳಾಚಾರ್ಯರು ಅಲ್ಲಿಯೇ ಇದ್ದರು. ಅವರನ್ನು ನೋಡಿ ಕೈಮುಗಿದು ನಮಸ್ಕರಿಸಿದ.

"ಬಾರೋ ಶೇಷಪ್ಪ, ಒಂದು ಘಳಿಗಿ ಕೂತು ಹೋಗಲ್ಲ" ಎಂದು ಆಚಾರ್ಯರೇ ಕರೆದದ್ದರಿಂದ ನಿರ್ವಾಹವಿಲ್ಲದೆ ಶೇಷಪ್ಪ ಗುಡಿಯ ಪಾವಟಿಗೆಗಳನ್ನೇರಿದ.

"ಯಾಕೋ ಒಳೇ ಅವಸರದಿಂದ ಹೊಂಟ್ಹಾಂಗಿತ್ತು ಸ್ವಾರೀ? ಇಕಡೆ ಎಲ್ಲಿ ಗೌಡರ ಮನಿಗೆ ಹೋಗಿದ್ದೇನು?" ಆಚಾರ್ಯರು ಮಾತು ಪ್ರಾರಂಭಿಸಬೇಕೆಂದು ಸಹಜಕುತೂಹಲದಿಂದಲೇ ಕೇಳಿ, ನಶ್ಯದ ಬುರುಡೆಗಾಗಿ ಶೇಷಪ್ಪನೆದುರು ಕೈಚಾಚಿದರು.

ತಮ್ಮ ಗುಟ್ಟು ಇಷ್ಟು ಬೇಗ ಇವರಿಗೆ ತಿಳಿದದ್ದಾದರೂ ಹೇಗೆ ಎಂದು ಶೇಷಪ್ಪನಿಗೆ ದಿಗಲು ಬಿತ್ತು. ಅವನಿಗರಿಯದಂತೆಯೇ ಅವನ ಹುಬ್ಬುಗಂಟಿಕ್ಕಿದವು. ನಶ್ಯದ ಚಿಟಿಕೆಯನ್ನೊಮ್ಮೆ ಮೂಗಿನಲ್ಲೇರಿಸಿ, ವಾಡಿಕೆಯಂತೆ ಹುಸಿ-ನಗೆ ನಕ್ಕು "ಅದಃ ಅಲ್ಲ ಆಚಾರಃ ಕೆಲಸ. ಬರಗಾಲದಾಗ ಜನರು ಕೂಳಿಲ್ಲದ ಸಾಯೋದನ್ನ ಕಣ್ಣೀಲೆ ಹ್ಯಾಂಗ ನೋಡಬೇಕು ಹೇಳ್ರಿ? ಅದಕ ಪಾರ್ವತೆವ್ವನ ಜೋಡಿ ಸರಕಾರಕ್ಕ ಈ ಬಗ್ಗೆ ಒಂದು ಅರ್ಜಿ ಕೊಡಬೇಕನಿಸಿತು. ಅದಕ್ಕ ಗೌಡರ ಮನೀಗೆ ಹೋಗಿದ್ದೆ" ಎಂದು ಹೇಳಿದ.

"ಇಂಥಾ ಊರುಗಾರಿಕಿ ಕೆಲಸಕ್ಕ ಅರ್ಜಿ ಕೊಡೋದಿದ್ದರ ಪಾಪ, ಪಾರ್ವತೆವ್ವಗ ಯಾಕ ತ್ರಾಸ ಕೊಡಬೇಕೋ? ನಾವೆಲ್ಲಾ ಇಲ್ಲೇನಪಾ? ಇಂಥಾ ಕೆಲಸಕ್ಕ ಎಂದಾದರೂ ಅಡ್ಡ ಬಂದೀವೇ? ನೀ ಅರ್ಜಿ ಒಂದು ಬರಿಸಿಕೊಟ್ಟಿದ್ದರ, ಜನರ ಸಹಿ ಹಾಕಸೋ ಕೆಲಸಾ ಬೇಕಾದವರು ಮಾಡತಾರ. ಅಲ್ಲೋ, ಮತ್ತ ಪಾರಸಾ ಪ್ರಕರಣದ ಬಗ್ಗೆ ಏನೋ ಮಾತು ನಡಿಸಿದ್ದಿ ಅಂತ? ಮೊದಲಃ ಗೌಡರು ಇದ್ದ ಜ್ವಾಳಾ ಊರಿಗೆ ಹಂಚಿ ಸತ್ತುಹೋದರು. ಈಗ ನೀನು ಅಪೀಲು-ಪಪೀಲು, ಮತ್ತೊಂದು-ಮಗದೊಂದು ಅಂತ ಕಾಲಾಗ ಹಾವು ಬಿಟ್ಟು ಆ ಹೆಣಮಗಳ ಕಡಿಂದ ದುಡ್ಡ ಉಕ್ಕಬ್ಯಾಡ" ಬಾಳಾಚಾರ್ಯರು ಉದ್ವೇಗವಿರದೆಯೇ ನಿಷ್ಠುರವಾಗಿ ಮಾತಾಡಿದರು.

"ಛೀ ಛೀ ಏನ ಮಾತಾಡತೀರಿ ಆಚಾರ್ರ? ನನ್ನ ಮನೀ ಕೆಲಸಾ ಅಂತ ಹೇಳಿ ನಾ ಮಾಡಲಿಕ್ಕೆ ಹತ್ತಿನಿ. ಇನ್ನೇನಾ, ನಾಳೆ ಆ ಪ್ರಕರಣದ ಚೌಕಶೀಗೆ

ಪ್ರಾಂತಸಾಹೇಬರು ಬಂದಾಗ ಸರಬರಾಯಿ ವ್ಯವಸ್ಥಾ ಮಾಡಬೇಕಾಗತದ. ಅದರ ಖರ್ಚು ಗೌಡಿತಿ ಕೊಡಲಿ ಅಂತ ಕೇಳೂದು ಅನ್ಯಾಯೇನ ? ಜವಾಬು ತೊಗೊಂಡ ಮ್ಯಾಲ, ಆರ್ಡರ ರದ್ದು ಮಾಡಲಿಕ್ಕೆ ನೋಟ ಹಾಕಾವರೇನ ಶಿರಸ್ತೇದಾರರು. ಅವರಿಗೆ ಸ್ವಲ್ಪಿಲ್ಲಾ ಸ್ವಲ್ಪ, ಎಲಿಅಡಿಕಿ ಮುಟ್ಟಸಬೇಕಂತ ಹೇಳೋದು ಅನ್ಯಾಯೇನ ? ಅದನ್ನೂ ನನ್ನ ಕೈಲೇನೇನ ಮಾಡೂ ಅಂತಿದ್ದರ ಉಪಾಯ ಇಲ್ಲ” ಶೇಷಪ್ಪ ಅಕ್ಕಸದಿಂದ ಎಲ್ಲವನ್ನೂ ಮಾತಾಡಿದ.

“ನಿನ್ನೇ ಅಜರಾಣಿ ಊರಿನ ನಾಲ್ಕು ಸಂಭಾವಿತ ಹಿರೇರು ಬಂದಾರ. ಲಿಂಗಪ್ಪನ ತಂದಿಗೆ ಜಡ್ಡಾಗೇದಂತ. ಅವನ್ನ ಕರಕೊಂಡ ಹೋಗಲಿಕ್ಕೆ ಬಂದಾರ. ಮೊದಲಿನ ಸ್ಥಿತಿ ಈಗ ಉಳದಿಲ್ಲ. ಲಿಂಗಪ್ಪ ತಾನಾಗೇ ಈಗ ವಾರಸಾ ಹಕ್ಕು ಬಿಟಗೊಟ್ಟು ಹೋಗೋ ವಿಚಾರದಾಗ ಇದ್ದಾನ. ಅಪೀಲು ಅವನ ವಿರುದ್ಧ ಆದರೂ ಸಂತೋಷನೇನ ಅವಂಗ. ಅದಕ್ಕ ಅಪೀಲು ಗೆದ್ದೇನ ತೀರೋದರೊಳಗ ಏನೂ ಮಹತ್ವ ಉಳದಿಲ್ಲ ಶೇಷಪ್ಪ” ಬಾಳಾಚಾರ್ಯರು ಹಗುರಾಗಿಯೇ ಹೇಳಿ ಶೇಷಪ್ಪನ ಯೋಜನೆಗಳನ್ನೆಲ್ಲ ವಿಫಲಗೊಳಿಸಲು ಪ್ರಯತ್ನಿಸಿದರು.

“ ಕುರುಡ ಬಯಸೋದೇನು ಆಚಾರ್ರ, ಎರಡು ಕಣ್ಣು. ಪಡದಪ್ಪ ಒಬ್ಬಾಂವ ಹೋದ. ಇನ್ನು ಲಿಂಗಪ್ಪನೂ ಹೋದಾ ಅಂದರ ನಿಶ್ಚಿಂತಿ ಆತು. ಪ್ರಾಂತ ಸಾಹೇಬರು, ಶಿರಸ್ತೇದಾರರು ಇವರಿಗೆ ಬೆಣ್ಣೀ ಹಚ್ಚೂ ಉಸಾಬರಿ ತಪ್ಪಿದ್ಹಾಂಗ ಆತು. ಅದಿರಲಿ. ಮುಖ್ಯ ವಿಷಯಾ ಅಂದರ ಬರಗಾಲದಿಂದ ತ್ರಾಸ ಆದದ್ದರ ಬಗ್ಗೆ ಸರಕಾರಕ್ಕ ಅರ್ಜಿ ಕಳಸಬೇಕಾಗೇದ. ನಾ ಅರ್ಜಿ ಬರಿಸಿ ಕಳಸತೀನಿ. ನೀವೇನ ಸ್ವತಃ ಸಹಿ ಮಾಡಸರಿ. ಆ ಅರ್ಜಿ ಮಂಜೂರಿ ಬಗ್ಗೆ ಶಿರಸ್ತೇದಾರರಿಗೆ ಹೇಳಿ ಕೊಳ್ಳೋದು ಜರೂರ ಅದ ಅಂತ ಅನಸತದ. ನೀವೇನಂತೀರಿ ? ” ಶೇಷಪ್ಪ ಹೊಟ್ಟೆಯೊಳಗಿನ ಕಹಿಯನ್ನೆಲ್ಲ ಪ್ರಯತ್ನಪೂರ್ವಕವಾಗಿ ಅಡಗಿಸಿ ಕೇಳಿದ.

“ಅದಕ್ಯಾರು ಬ್ಯಾಡಂದಾರು ಶೇಷಪ್ಪ. ನೀನೂ ಶಿರಸ್ತೇದಾರರಿಗೆ ತಿಳಿಸಿ ಹೇಳು. ಪ್ರಾಂತಸಾಹೇಬರು ಇಲ್ಲಿ ಬಂದ ಕಾಲಕ್ಕೇ ಇಂದುಪುರದ ಮಹಾ ರಾಜರೂ ಬರೋವರಿದ್ದಾರಂತ. ಅವರ ಕಾರಭಾರಿ ಕಡಿಂದ ಶ್ಯಾಮರಾಯಗ ಪತ್ರ ಬಂದದ. ಬರಗಾಲ ಸಹಾಯದ ಬಗ್ಗೆ ಪ್ರಾಂತಸಾಹೇಬರಿಗೆ ಅವರ ಕಡಿಂದ ಹೇಳಸೋದೂ ಸಾಧ್ಯ ಅದ. ನಿನ್ನ ಶಿರಸ್ತೇದಾರರ ಶಂಖದಿಂದನೇನ ನೀರು ಬೀಳ ಬೇಕೂ ಅಂಬೋ ವಿಧಿ ಏನ ಇಲ್ಲಲ್ಲ? ಹೇಳತಿದ್ದರ ಹೇಳಲಿ, ಆದರ ಅದಕ್ಕೂ

ರೊಕ್ಕಾ ಅಂದರ ಮಾತ್ರ ಬ್ಯಾಡ."

ಕೆಲ ಹೊತ್ತು ಇಬ್ಬರೂ ಸುಮ್ಮನಿದ್ದರು. ನಶ್ಯದ ವಿನಿಮಯವಾಯಿತು. ಶೇಷಪ್ಪನಿಗೆ ಇನ್ನೊಂದು ಮಹತ್ವದ ಸುದ್ದಿಯನ್ನು ಆಚಾರ್ಯರೆದುರು ಒಡೆಯುವದಿತ್ತು. ಸ್ವಲ್ಪ ಹೊತ್ತು ತಡೆದು ಹೇಳಿದ: "ಅದೆಲ್ಲ ಸರಿ ಆಚಾರ್ರ. ಆದರ ದಾದಾಗ ಶಿಕ್ಷಾ ಮಾಡಿಸೇ ತೀರಬೇಕೂ ಅಂತ ಪಾರ್ವತೆವ್ವನ ಅಭಿಪ್ರಾಯ ಅದ. ಅದೇನೋ ಕಾರಹುಣ್ಣಿವ್ಯಾಗ ಪ್ರಕರಣ ಆತಂತ. ಆವೊತ್ತು ನಾನೂ ಇದ್ದಿಲ್ಲ ಊರಾಗ. ಜಮಾಬಂದಿಗೇ ಅಂತ ಹೋಗಿದ್ದೆ."

ಆಚಾರ್ಯರಿಗೆ ಶೇಷಪ್ಪನ ಈ ಮಾತುಗಳೇ ಕರ್ಣಕಠೋರವೆನಿಸಿದವು. ಪಾರ್ವತೆವ್ವನ ಮನಸ್ಸು ದಾದಾನ ವಿಷಯಕ್ಕೇನೋ ಕಲುಷಿತವಾಗಿದೆ. ಆದರೆ ಅವನಿಗೆ ಶಿಕ್ಷೆ ಮಾಡಿಸಿಯೇ ತೀರಬೇಕೆಂಬ ಹಟ ಹುಟ್ಟುವದು ಸಾಧ್ಯವೇ? ಶೇಷಪ್ಪನೇ ಆ ಉರಿಗೆ ಪುಟಗೊಟ್ಟಿರಬಹುದೇ? ಕಾರಹುಣ್ಣಿವೆಯ ದಿನ ಈ ಮಹಾನುಭಾವ ಊರಲ್ಲಿ ಇಲ್ಲದಿದ್ದುದೇ ನೆಟ್ಟಗಾಯಿತು. ಇಲ್ಲದಿದ್ದರೆ ಆ ದಿನ ಅಗಸೆಯ ಮುಂವೆಯೇ ರಕ್ತದ ಕಾಲುವೆ ಹರಿಯಬಹುದಿತ್ತು. ಶೇಷಪ್ಪ ಬೀಸುವ ಬಲೆಯೇ ದೊಡ್ಡದು. ಆದರಲ್ಲೀಗ ದಾದಾ ಸಿಕ್ಕಿಬಿದ್ದಿದ್ದಾನೆ. ಅವನನ್ನು ಜೇಲಿಗೆ ಕಳಿಸುವಂತೆ ಮಾಡಿ ಗೌಡಿತಿಯ ಕಡೆಯಿಂದ ಹಣ ಹೊರಡಿಸುವ ಯೋಚನೆಯಲ್ಲಿದ್ದಾನೆ.

"ಅಲ್ಲೋ ಶೇಷಪ್ಪ, ಆ ಹುಡುಗ ಜೇಲಿಗೆ ಹೋಗಬೇಕೂ ಅಂತ ಮನಸಾ ನಿನಗನಸತವೇನು?" ಎಂದು ಅಂತಃಕರಣ ಕರಗಿ ಆಚಾರ್ಯರು ಕೇಳಿದರು.

"ಎಂಥಾ ಮಾತು ಹೇಳತೀರಿ ಆಚಾರ್ರ! ಹಾಂಗಿದ್ದರ ಅವನ್ನ ಜಾಮೀನಿನ ಮ್ಯಾಲೆ ಬಿಡಿಸಲಿಕ್ಕೆ ಕೈಖರ್ಚು ಮಾಡಿಕೊಂಡು ಕೋರ್ಟು-ಕಚೇರಿ ಅಡ್ಡಾಡತಿದ್ದೆನೇ? ನಾವು ಮಾಡೋದು ಒಂದು, ಅದು ಆಗೋದು ಇನ್ನೊಂದು. ಗೌಡಿತಿ ಪಾಪ, ಹೆಣಮಗಳು; ಮಕ್ಕಳು ಅಲ್ಪವಯಿ; ದೊಡ್ಡ ಆಸ್ತಿ. ಇಂಥಾ ಪರಿಸ್ಥಿತಿಯೊಳಗ ದಾದಾನಂಥಾ ಖಂಬೀರ ಹುಡುಗ ಆಕಿ ಬೆಂಬಲಿಕ್ಕಿರೋದನ ಯೋಗ್ಯ. ಆದರ ಯಾಕೋ ಪಾರ್ವತೆವ್ವ ಹಟಾನ ಹಿಡಿದಾಳ. ಅಂಥಾ ಗೌಡರ ಮನೆತನದ ಮರ್‍ಯಾದಿಗೇ ಧಕ್ಕೀ ತಂದಾ ಅಂತ ಹುಚ್ಚು ತಲ್ಯಾಗ ತುಂಬಿಕೊಂಡಾಳ. ನೀವೇನ ಮಾಡತೀರಿ?" ಶೇಷಪ್ಪ ಬಣ್ಣದ ಮಾತುಗಳನ್ನಾಡಿದ.

"ಈ ಹಟಾ ನೆಟ್ಟಗಲ್ಲ ಅಂತ ಪಾರ್ವತೆವ್ವಗ ತಿಳಿಸಿ ಹೇಳಬೇಕು ಶೇಷಪ್ಪ.

ಇಷ್ಟೂ ಮೂರಿ ಹಟಾ ಹಿಡಿದರ, ಈ ಪ್ರಕರಣದಾಗ ದಾದಾ ಉಳಿಯೂ ಹಂಗ ನೀ ನೋಡಿಕೋಬೇಕು. ದಾದಾನ್ನ ಉಳಸತೀನಿ ಅಂತ ನನ್ನೆದುರಿಗೆ ವಚನ ಕೊಟ್ಟೇ ನೆನಪದನೋ ಇಲ್ಲೋ ನಿನಗ?"

ಶೇಷಪ್ಪನಿಗೆ ಈ ಮಾತು ನೆನಪಿತ್ತು. ಹದಿನೈದು ವರ್ಷಗಳ ಕುಲಕರ್ಣಿಕಿ ಅವಧಿಯಲ್ಲಿ ಒಂದು ಸಣ್ಣ ವಿವರವನ್ನೂ ಅವನು ಮರೆತಿರಲಿಲ್ಲ. ಅವನ ದಪ್ತರ ದಂತೆಯೇ ಅವನ ತಲೆಯೂ ಚಿತ್ರವಿಚಿತ್ರವಾದ ಸಂಗತಿಗಳ ಸಂಗ್ರಹವಾಗಿತ್ತು. ಪಾದಳ್ಳಿಯಲ್ಲಿ ಪ್ರತಿಯೊಂದು ಮನೆಯಲ್ಲಿಯ ಛಿದ್ರಗಳೂ, ಅನರ್ಥಗಳೂ ಅವನ ಕಣ್ಣು ತಪ್ಪಿಸುತ್ತಿರಲಿಲ್ಲ. ಹತ್ತುವರ್ಷಗಳ ಹಿಂದೆ ಯಾವ ಜಮೀನು ಯಾರ ಹೆಸರಿ ನಲ್ಲಿ ಸುಳ್ಳು ದಾಖಲಾಗಿದೆಯೆಂದು ಕೇಳಿದರೆ ಬಾಯಿಂದಲೇ ಹೆಸರು, ತಾರೀಖು, ವಾರ, ತಿಥಿಗಳನ್ನೂ ಕೂಡ ಬೇಕಾದರೆ ಹೇಳುತ್ತಿದ್ದ. ಅಂದಮೇಲೆ ತಾನು ಕೊಟ್ಟ ವಚನವನ್ನೇ ಮರೆಯುವದೆಂದರೇನು?

ಶೇಷಪ್ಪ ಮರೆತಿರಲಿಲ್ಲ. ಅದರ ಜೊತೆಗೆ ಇನ್ನೊಂದು ಸಂಗತಿಯನ್ನೂ ಮರೆತಿರಲಿಲ್ಲ. ಶ್ಯಾಮರಾಯನ ಪಾಳಿ ತನಗೆ ನೇಮಣೂಕಿ ಆಗಬೇಕೆಂದು ಆಚಾ ರ್ಯರನ್ನು ಕೇಳಿದಾಗ "ಅಂವಾ ಬಂದರೇ ಬರಲಿ ನೋಡೋಣ" ಎಂದು ಅವರೇ ಹೇಳಿದ್ದರು. ಶ್ಯಾಮರಾಯ ಈಗ ಬಂದಿದ್ದಾನೆ. ಪಾಳಿ ನೋಟೀಸು ಅವನ ಹೆಸರಿ ನಲ್ಲಿ ಹೊರಟಿದೆಯೆಂದು ಸುದ್ದಿಯೂ ಬಂದಿದೆ. ನಾಳೆ ಪ್ರಾಂತಸಾಹೇಬರು ಬಂದಾಗ ಅವನ ನೇಮಣೂಕಿ ಆದರೂ ಆಗಬಹುದು. ಅಂದಮೇಲೆ ಈಗ ಆಚಾ ರ್ಯರೆನ್ನುವದಾದರೂ ಏನು? ಶೇಷಪ್ಪ ಅವರ ಬೆರಳನ್ನೇ ನೆರವಾಗಿ ಅವರ ಕಣ್ಣಲ್ಲಿ ತಿವಿದ.

"ನೋಡೋಣ ಅಂತ ಅಂದಿದ್ದೆ ಶೇಷಪ್ಪ. ಆದರ ಅದರ ಅರ್ಥ ನಿನ್ನ ಆ ಜಾಗಾಕ್ಕ ನೇಮಣೂಕಿ ಮಾಡಸತೀನಿ ಅಂತ ಹೇಳಿದ್ಹಾಂಗಲ್ಲ. ಶ್ಯಾಮರಾಯನ್ನ ಒಂದು ಮಾತ ಕೇಳಬೇಕಾಗಿತ್ತು. ಕೇಳಿದೆ. ತಾನಃ ಪಾದಳ್ಳಿಗೆ ನೇಮಣೂಕಿ ಮಾಡಿಸಿಗೋತೀನಿ ಅಂತ ಅಂವಾ ಹೇಳಿದ. ಅದನ್ನೂ ನಿನಗ ತಿಳಿಸಿದೆ. ಇದಕ್ಕಿಂತಾ ಹೆಚ್ಚು ನಾ ಏನು ಮಾಡಬೇಕು?" ಆಚಾರ್ಯರು ಸಮರ್ಥನೆ ಮಾಡಿಕೊಂಡರು.

"ಮಾತು ಹೊಳ್ಳಸಲಿಕ್ಕೆ ನಾನು ನಿಮಗೇನು ಕಡಿಮಿ ಅಂತ ತಿಳೀಬ್ಯಾಡ್ರಿ ಆಚಾರಃ. ಜಾಮೀನ ಕೊಟ್ಟು ದಾದಾನ ವಾರಂಟಿನ ಹೆದರಿಕೆ ತಪ್ಪಸತೀನಿ ಅಂತ ನಾನು ವಚನ ಕೊಟ್ಟಿದ್ದೆ. ಅದರಂತೆ ನಡದೆ. ಇನ್ನ ಅವನ್ನ ಬಿಡುಗಡೆ

ಮಾಡೋದೂ ಬಿಡೋದೂ ಮ್ಯಾಜಿಸ್ಟ್ರೇಟರ ಕೆಲಸ. ಆದರಾಗ ನಾ ಏನು ಮಾಡಲಿ?"

ಆಚಾರ್ಯರಿಗೆ ಈ ಮಾತಿನ ಪೆಟ್ಟು ತಾಕಿತು. ಪಡದಪ್ಪ, ಬಾಪೂಸಾಹೇಬ ರನ್ನ ಊರು ಬಿಟ್ಟು ಓಡಿಸುವದು ಸಾಧ್ಯವಾಗಿತ್ತು. ಆದರೆ ಶೇಷಪ್ಪ ಊರ ವತನದಾರ. ಪಾಡಳ್ಳಿಗೂ ಅವನಿಗೂ ಜನ್ಮಾಂತರದ ಸಂಬಂಧವಿದೆ. ಅಂತೂ ಸಮಸ್ಯೆಯೇನೂ ಬಗೆಹರಿದಂತಾಗಲಿಲ್ಲ. ಪರಿಸ್ಥಿತಿ ಹೆಚ್ಚು ಹೆಚ್ಚು ನಾಜೂಕಾಗು ತ್ತಲೇ ನಡೆದಿದೆ. ಆಚಾರ್ಯರು ಸುಮ್ಮನಾದರು.

"ಇಲ್ಲೋಡ್ರಿ ಆಚಾರಽ. ಶ್ಯಾಮರಾಯ ಬಾಪೂಸಾಹೇಬನ್ನ ವಾಡೇ ಬಿಟ್ಟು ಓಡಿಸಿದಾ, ಕರಿಹರಿದ ಎತ್ತು ವಾಡೇಕ್ಕ ತಂದು ಕಟ್ಟಿದಾ, ಅದಕ್ಕ ಅವಾ ಭಾಳ ಯೋಗ್ಯತಾದಾವಾ ಅಂತ ನೀವು ತಿಳೀಬಹುದು. ಆದರ ಅದೆಲ್ಲ ಅಂವಗ ಸಾಧ್ಯ ಆದಷ್ಟು, ನಾ ಅವನ ಕೆಲಸದೊಳಗ ಅಡ್ಡ ಬರಲಿಲ್ಲಾ ಅಂತ. ಇದನ್ನ ನೀವು ಮರೀ ಬ್ಯಾಡ್ರಿ. ಇದನ್ನ ಶ್ಯಾಮರಾಯಗ ಹೇಳ್ರಿ. ಅಂವಾ ಕೇಳದಿದ್ದರ ನಿಮ್ಮಂಥವರು ಅಂವನ್ನ ಕಟ್ಟಿಗೊಂಡು ಮುಂದ ಬರಬಾರದು." ಆಚಾರ್ಯರು ಈ ಮಾತಿಗೆ ನೊಂದು ಕೊಂಡರು. ಶೇಷಪ್ಪ ಎಷ್ಟಾದರೂ ಆಚಾರ್ಯರಿಗಿಂತ ಹತ್ತುಹನ್ನೆರಡು ವರ್ಷ ಚಿಕ್ಕವ. ಅವನಿಂದಲೂ ಬುದ್ಧಿ ಹೇಳಿಸಿಕೊಳ್ಳುವಂಥ ಪ್ರಸಂಗ ಬಂದಿತ್ತು. ಅಂತಲೇ ನೊಂದ ದನಿಯಲ್ಲಿಯೇ ಹೇಳಿದರು:

"ನೋಡು ಶೇಷಪ್ಪ, ನೀನೂ ವತನದಾರ, ಅವನೂ ವತನದಾರ. ಇಬ್ಬರೂ ಅತಿರಥ-ಮಹಾರಥಿ ಇದ್ದ್ಹಾಂಗ ಇದ್ದೀರಿ. ನಾನು ಯಾವ ಗೊಡವಿಗೂ ಬರೂ ದಿಲ್ಲ. ನೀವೇ ನಮ್ಮನ್ನ ಕರಸಿ ಇಲ್ಲದ ಪೇಚಿಗೆ ಹಾಕತಿರತೀರಿ. ಕರಸಿದರೂ ನಾ ಬರಬಾರದು ಅಂತ ನೀ ಹೇಳಿದ್ಹಾಂಗ ಆತು. ನೆಟ್ಟಗದ. ನನಗಿದೂ ಮೊದಲಽ ತಿಳೀಬೇಕಾಗಿತ್ತು. ಬುದ್ಧಿ ತಡ ಆಗಿ ಬಂತು. ಅಂತೂ ಪಾಡಳ್ಳಿಯೊಳಗ ಪಕ್ಷ ಪಂಗಡ ಹೊತ್ತೇ ಜನಾ ಹುಟ್ಟಿ ಬರತಾರೋ, ಏನ ಅವರು ಕುಡಿಯೋ ನೀರಿ ನ್ಯಾಗ, ಉಣ್ಣೋ ಅನ್ನದಾಗ ಈ ಗುಣಾ ಹುಟ್ಟಿ ರಕ್ತಗತ ಆಗತದೋ ತಿಳೀ ದ್ಹಾಂಗ ಆದ. ಊರೆಲ್ಲ ಇದರ ಸಲುವಾಗೇ ಸುಟ್ಟ ಹೋತು. ಇನ್ನೇನು ಮತ್ತ ಹೊಸಾ ತೊಡಕು ಎದ್ದು ನಿಲ್ಲತಾವೋ ನೋಡಬೇಕು. ಆತು, ಶ್ರೀಹರಿ ಇಚ್ಛಾ ಇದ್ಹಾಂಗ ಆಗತದ." ಎಂದು ನಿಟ್ಟುಸಿರಿಟ್ಟರು.

"ಅಹಾ, ಅದು ಖರೇ ನೋಡರಿ ಆಚಾರಽ. ಏನ ಮಾಡತೀರಿ ಅದನ್ನ

ತೊಗೊಂಡು ಎಲ್ಲಾ? ನಶ್ಯಾ ಹಿಡೀರಿ, ನನಗೂ ಹೊತ್ತಾತು ಹೋಗಬೇಕಾಗೇದ" ಎಂದು ಹೇಳಿ ಶೇಷಪ್ಪ ಆಚಾರ್ಯರಿಗೆ ನಶ್ಯಕ್ಕೆ ಆಗ್ರಹ ಮಾಡಿದ. ಆಚಾರ್ಯರು ಯಾಂತ್ರಿಕವಾಗಿಯೇ ಅದನ್ನು ತೆಗೆದುಕೊಂಡರು. ಶೇಷಪ್ಪನಿಗೆ ತನ್ನ ಗುಳಿಗೆ ನಾಟಿತೆನಿಸಿತು. ಏನೇ ಮಾಡಿ ಈ 'ಆಚಾರಿ'ಯನ್ನು ಹೊರಗಿಡಬೇಕಾಗಿತ್ತು. ಅದು ಸಾಧಿಸಿತೆಂದುಕೊಂಡ.

ಆಗಲೇ ನಾಲ್ಕು ತಾಸು ಹೊತ್ತೇರಿತ್ತು. ಜ್ಯೇಷ್ಠಮಾಸ. ಮುಂಗಾರು ವಿಫಲವಾಗದ ವಚನದಂತೆ ಭವಿಷ್ಯಪೂರ್ಣವಾಗಿತ್ತು. ಮೋಡ ಮುಸುಕಿಕೊಂಡಿದ್ದರಿಂದ ಸೂರ್ಯನ ಬೆಳಕಿಗೆ ಅವಕಾಶವಿರಲಿಲ್ಲ. ಆಗಾಗ ಸಣ್ಣಾಗಿ ಜಡಿಮಳೆ ಹನಿಯುತ್ತಿತ್ತು; ನಿಲ್ಲುತ್ತಿತ್ತು. ಆಚಾರ್ಯರ ಮನಸ್ಸು ದೇಹಗಳೆರಡೂ ದಣಿದಿದ್ದವು. ಸ್ವಲ್ಪ ಬಿಸಿಲು ಬಿದ್ದರೆ ಮನೆಗೆ ಹೋಗಬಹುದೆಂದು ಅವರು ಕಾದು ಕುಳಿತಿದ್ದರು. ಅರ್ಜಿ ಬರೆಸಿ ಹಾಕುವ ಗಡಿಬಿಡಿ ಇದ್ದುದರಿಂದ ಶೇಷಪ್ಪ ಹೊರಟ. ಉದುರುತ್ತಿದ್ದ ಜಡಿಮಳೆಯಾಗಲಿ, ಮುಬ್ಬು ಕವಿದ ಆಕಾಶವಾಗಲಿ ಅವನ ಲಕ್ಷ್ಯದಲ್ಲಿರಲೇ ಇಲ್ಲ. ಅವನ ಕಣ್ಣೆದುರಿಗಿದ್ದ ಸಂಗತಿ ಒಂದೇ ಒಂದು. "ಶ್ಯಾಮರಾಯ ಊರಿಗೆ ಹೊಸಬ; ಅಂತಲೇ ಕುಲಕರ್ಣಿಕಿಗೆ ಅಯೋಗ್ಯ. ಜನರು ಅವನ ವಿರುದ್ಧ ನಿಂತಿರುವಾಗ ಅವನ ನೇಮಣೂಕಿಯಾಗುವದು ಸಾಧ್ಯವಿಲ್ಲ." ಎಂದು ಬರೆದ ಮಾಮಲೇದಾರರ ಆರ್ಡರು ಅವನ ಕಣ್ಣ ಮುಂದೆ ಕುಣಿಯುತ್ತಿತ್ತು. ಆದಷ್ಟು ಬೇಗ ಆ ಕನಸು ನನಸಾಗಲೆಂದು ಹಾರೈಸುತ್ತಿದ್ದ.

ಇದೇ ಉತ್ಸಾಹದಲ್ಲಿ ಮನೆ ಮುಟ್ಟಿದ. ಮಧ್ಯಾಹ್ನದ ಹೊತ್ತಿಗೆ ಅರ್ಜಿಗಳೆರಡನ್ನೂ ಪಾರ್ವತೆವ್ವನಿಗೆ ತಿಳಿಸಿದಂತೆ ಬರೆಸಿ ಗೌಡರ ಮನೆಗೆ ಕಳಿಸಿಕೊಟ್ಟ.

:: ೨೮ ::

ಕನ್ಯಾಗತದ ನಿಮಿತ್ತ ಕೃಷ್ಣಾ ನದಿಯ ದಡದಲ್ಲಿರುವ ಪಾದಳ್ಳಿಗೆ ಬಂದಾಗ, ಅನಾಯಾಸವಾಗಿ ತೀರ್ಥಶ್ರಾದ್ಧ, ಗಂಗಾಸಮಾರಾಧನೆ ಮುಗಿಸಿಕೊಂಡು ಬಂದ ರಾಯಿತೆಂದು ಮಾಮಲೇದಾರ ಕೃಷ್ಣರಾಯರು ಕುಟುಂಬಸಮೇತ ಪಾದಳ್ಳಿಗೆ ಆಗ ಮಿಸಿದರು. ಶೇಷಪ್ಪ ಈ ಮೊದಲೇ ಆಮಂತ್ರಣವನ್ನು ಕೊಟ್ಟುಬಿಟ್ಟದ್ದ; ಸರಕಾರೀ ಕೆಲಸವೂ ಇಲ್ಲದಿರಲಿಲ್ಲ. ಕೆಲವೊಂದು ಪ್ರಕರಣಗಳ ಚೌಕಶಿ ಮಾಡುವದಿತ್ತು. ಅಂತೂ ಮಾಮಲೇದಾರರು ಕುಟುಂಬಸಮೇತ ಸವಾರಿ-ಗಾಡಿಯಿಂದ ಚಾವಡಿಯ ಮುಂದೆ ಇಳಿದಾಗ, ಪ್ರವಾಸದ ಯಾವ ಶ್ರಮವೂ ಅವರಿಗಾಗಿರಲಿಲ್ಲ. ಅವರ ಅಡಿಗೆ ಯವನು ಈ ಮೊದಲೇ ಬಂದು ಶಾಲೆಯ ಬದಿಗಿರುವ ಧರ್ಮಸಾಲೆಯ ಕೋಣೆ ಯನ್ನು ಅಡಿಗೆಮನೆಯನ್ನಾಗಿ ಪರಿವರ್ತಿಸಿದ್ದ. ಸಾಲೆಯಲ್ಲಿ ತಾತ್ಪೂರ್ತಿಕವಾಗಿ ದೊಡ್ಡ ಗುಡಾರಗಳನ್ನು ಕಟ್ಟಿ, ಒಂದು ಭಾಗದಲ್ಲಿ ಮಾಮಲೇದಾರರ ಕಚೇರಿ, ಇನ್ನೊಂದು ಭಾಗದಲ್ಲಿ ಅವರ ರಾಣೀವಾಸ, ಮತ್ತೊಂದು ಭಾಗದಲ್ಲಿ 'ಜವಾಬನಿಶಿ' ಕಾರಕೂನನ ಕಚೇರಿ ಹೀಗೆ ವ್ಯವಸ್ಥೆಯಾಗಿತ್ತು. ಮಾಮಲೇದಾರರಿಗೆ ಅದನ್ನೆಲ್ಲ ನೋಡಿ ತಮ್ಮ ಅಧಿಕಾರಬಲದ ಬಗ್ಗೆ ಮತ್ತೆ ಮನವರಿಕೆಯಾಯಿತು.

ಸರಕಾರೀ ಕೆಲಸ ತನ್ನ ದಾರಿ ತಾನು ಹಿಡಿದು ಹೋಗಬಹುದು. ಆದರೆ ಕನ್ಯಾಗತದ ಧಾರ್ಮಿಕ ವಿಧಿಗಳಿಗೆ ಮಾಮಲೇದಾರರೇ ಸ್ವತಃ ವಿಚಾರಮಾಡ ಬೇಕಲ್ಲ! ತೀರ್ಥಶ್ರಾದ್ಧವಿಧಿ ತೀರಿಸಲು ಕಟ್ಟೆ ಮನೆತನಸ್ಥ ಆಚಾರ್ಯರಾದ ನಾಣಾಚಾರ್ಯರಿಗೆ ಮಾಮಲೇದಾರರಿಂದ ಕರೆ ಹೋಯಿತು. ಎಲ್ಲ ದೊಡ್ಡ ಪಗಾರದ ಕಾಮದಾರರಂತೆಯೇ ಮಾಮಲೇದಾರರು ನಿಷ್ಠಾವಂತ ಧಾರ್ಮಿಕರಾಗಿದ್ದರು. ವೃತ್ತಿಗೆ ಸಹಜವಾದ ಆಸ್ತಿಕತೆ ಅದು. ಇಂದು ದೇವರಿಲ್ಲವೆಂದರೆ ನಾಳೆ ಕಲೆಕ್ಟ ರನೂ ಇಲ್ಲವೆನ್ನಬೇಕಾದೀತು – ಮಾಮಲೇದಾರರು ತಮ್ಮೆದುರಿಗೂ ತಾವು ಹೇಳದ ವಾದ ಅವರ ಮನಸ್ಸಿನಲ್ಲಿಯೇ ಸುಳಿದಾಡುತ್ತಿತ್ತು. ಆಚಾರ್ಯರು ಸಾಲೆ ಯಲ್ಲಿ ಪ್ರವೇಶಿಸಿದಾಗ ಮಾಮಲೇದಾರರು ಕಡುಭಕ್ತಿಯಿಂದ ಅವರಿಗೆ ವಂದಿಸಿ

ದೆರು. ಆಚಾರ್ಯರು ಆಶೀರ್ವಚನದ ಶ್ಲೋಕಗಳನ್ನು ಹೇಳಲೇಬೇಕಾಯಿತು.

ತೀರ್ಥಶ್ರಾದ್ಧವಿಧಿಗಳೇನು ಎಂಬ ಪ್ರಶ್ನೆ ಬಂತು. ಅದಕ್ಕುತ್ತರವೂ ಅಷ್ಟೇ ಔಪಚಾರಿಕವಾಗಿಯೇ ಬಂದಿತು. ಶ್ರಾದ್ಧದ ಹಿಂದಿನ ದಿನ ಉಪವಾಸವಿರಬೇಕು, ನದಿಯ ದಂಡೆಯಲ್ಲಿ ಮುಂಡನವಾಗಬೇಕು, ಮರುದಿನ ಶ್ರಾದ್ಧವಿಧಿ, ಅದರ ಮರುದಿನ ಗಂಗಾಸಮಾರಾಧನೆ, ಇದು ಶಾಸ್ತ್ರೋಕ್ತವಿಧಾನ. ಆದರೆ ಮಾಮಲೇದಾರರು ಸರಕಾರೀ ನೌಕರರು, ವೇಳೆಯನ್ನು ತ್ರಾಸಿನಲ್ಲಿ ತೂಗಿ ಲೆಕ್ಕ ಹಾಕುವವರು,– ಮೂರು ದಿನ ಮುಕ್ಕಾಂ ಹಾಕುವದು ಹೇಗೆ ಸಾಧ್ಯ? ಆದ್ದರಿಂದ ಶ್ರಾದ್ಧವಿಧಿಯನ್ನು ಇಂದೇ ಮುಗಿಸಿ, ನಾಳೆ ಗಂಗಾಸಮಾರಾಧನೆಯನ್ನು ಮುಗಿಸಿಬಿಡಬೇಕೆಂದು ಹೇಳಿ ಆಚಾರ್ಯರು ಸುಮ್ಮಗಾದರು. ಎರಡೂ ಚಿತ್ರಗಳನ್ನು ಮಾಮಲೇದಾರ ಕಣ್ಣೆದುರಿಗಿಟ್ಟು ಬೇಕಾದ್ದನ್ನು ಆರಿಸಿಕೊಳ್ಳಲಿ ಎಂಬ ನಿರ್ಲಿಪ್ತಭಾವದಿಂದ ನಿಂತರು.

ಮಾಮಲೇದಾರರು ಕ್ಷಣಹೊತ್ತು ಗುಣುಗುಣಿಸಿ ಗುಡಾರದ ಮರೆಯಲ್ಲಿಯ ರಾಣೀವಾಸದ ವರೆಗೆ ಹೋಗಿ ಸಮಸ್ಯೆಯನ್ನು ಚರ್ಚಿಸಿದರು. ಪರಿಹಾರವೂ ಗಡಸುದನಿಯಲ್ಲಿ ಅಲ್ಲಿಯೇ ಸಿಕ್ಕಿತು. "ಹಂಗಾರ ಆಚಾರ, ಹೀಂಗ ಮಾಡೂಣು. ಈಗ ಅಡಿಗಿ ತಯಾರ ಅದ ಅಂತ. ನದೀಗೆ ಹೋಗಿ ಸ್ನಾನ ತೀರಿಸಿಕೊಂಡು ಬರತೇವಿ, ನೀವು ಹೇಳಿದ್ಹಾಂಗ ನಾಳೆ ಶ್ರಾದ್ಧವಿಧಿ ಮುಗಿಸಿಬಿಡೂಣು" ಎಂದು ಹೇಳಿದರು. ಆಚಾರ್ಯರು ಆಗಲೆಂದು ಗೋಣು ಹಾಕಿ ಮನೆಗೆ ನಡೆದರು.

ಮಾಮಲೇದಾರರು ಕುಟುಂಬಸಮೇತ ನದಿಗೆ ಸ್ನಾನಕ್ಕೆ ಹೊರಟರು. ಆದರೆ ಮೈಮೇಲಿನ ವಸ್ತ್ರಒಡವೆಗಳ ಭಾರಕ್ಕೆ ಮಂದಗಮನದಿಂದ ನಡೆದಿರುವ ಕುಟುಂಬದ ಜೊತೆಗೆ ಅವರೂ ಮಂದಗಮನರಾಗಬೇಕಾಗಿತ್ತು. ಅಂತೂ ಒಮ್ಮೆ ನದಿಗೆ ಬಂದು ಮುಟ್ಟಿದರು. ಮಲೆನಾಡಿಗೆ ಬಹಳ ಮಳೆ ಹೊಡೆದಿತ್ತೆಂದು ಕೃಷ್ಣೆಗೆ ಪೂರ ಬಂದಿತ್ತು. ಮೊದಲೇ ಸೆಳವಿನ ನದಿ ಈಗಂತೂ ಸೊಕ್ಕಿಗೆದ್ದು ಹರಿಯುತ್ತಿತ್ತು. ಮಳೆಗಾಲವಾದ್ದರಿಂದ ನೀರು ಕೆಂಪಾಗಿತ್ತು. ನೀರೊಡಲ ಮೇಲಿಂದ ಬೀಸುವ ತಣ್ಣನ್ನ ಗಾಳಿಗೆ ಮೈಯೊಡ್ಡಿ, ಗೋಣುದ್ದ ರಾಡಿ ನೀರಲ್ಲಿ ಸ್ನಾನ ಮಾಡಲು ಮಾಮಲೇದಾರರಿಗೇನೂ ಮನಸ್ಸಿರಲಿಲ್ಲ. ಆದರೆ ಹಾಗೇನಾದರೂ ಅಂದಿದ್ದರೆ ಕುಟುಂಬದ ಕಟಾಕ್ಷಶಿಕ್ಷೆಗೆ ಗುರಿಯಾಗಬೇಕಾಗುತ್ತಿತ್ತು. ನದಿಯ ದಡದಲ್ಲಿ ಸಂಕಲ್ಪ ಹೇಳುವ ಬಾಳಾಚಾರ್ಯರು ಇವರ ಕಡೆಯಿಂದ 'ಮಮ' ಎನ್ನಿಸಿಯೇ

ಬಿಟ್ಟರು. ‘ ಸರ್ವಪಾಪಹರೋಂ ಹರ’ ಎಂದು ಹೇಳಿದ್ದು ಕೇಳಿ ನದಿಯಲ್ಲಿ ಮುಳುಗಲೇಬೇಕಾಯಿತು. ಸ್ವತಃ ಮಾಮುಲೇದಾರರೇ ಕೊಚ್ಚಿ ಹೋಗುವಂಥ ಪ್ರವಾಹವಿರುವಾಗ ಅವರ ಪಾಪಗಳು ಉಳಿಯಬಹುದೇ? ಆದರೆ ಪಾಪ ಉಳಿದರೂ ಚಿಂತೆಯಿಲ್ಲ ಈ ತಣ್ಣಗೆ ಕೊರೆಯುವ ಪುಣ್ಯ ಬೇಡವೆನಿಸಿತೋ ಏನೋ, ಕುಟುಂಬವ ಸೀರೆಯ ಸೆರಗು ತಮ್ಮ ಧೋತರದ ಚುಂಗಿಗೆ ದಾಂಪತ್ಯದ ಬಂಧನದಂತೆ ಗಂಟು ಹಾಕಿರುವದನ್ನೂ ಮರೆತು ಅವಸರದಿಂದ ದಂಡೆಗೆ ಜಿಗಿದರು. ನೀರಿನಲ್ಲಿದ್ದ ಕುಟುಂಬಕ್ಕೆ ಆಘಾತವಾಯಿತು. “ಸಂಕಲ್ಪ ಮುಗದ ಕೂಡಲೆ ತಲಿ ಮುಳುಗಿಸಿಕೊಂಡು ಎದ್ದಿರಿ ಹೌದಲ್ಲೊ? ಗಂಗಾದೊಳಗ ದುಡ್ಡು ಒಗೀದ ಹಂಗ ಹೋಗಲಿಕ್ಕೆ ಏನಾತೀಗ? ನನಗ ಗೊತ್ತು, ಮುಂದೀ ಆಗ್ರಹದ ಸಲುವಾಗಿ ಎಲ್ಲಾ ಮಾಡೋದು” ಎಂದು ತೆರೆಗಳಾರ್ಭಟದಲ್ಲಿಯೇ ಅವರು ಗೊಣಗಿದರು.

“ಪಂಜಾ ಹೆಗಲವ್ಯಾಲಿಲ್ಲದ ಸ್ನಾನ ಮಾಡಬಾರದೂ ಅಂತ ಅದನ್ನ ತರಲಿಕ್ಕೆ ಬಂದಿದ್ದೆ” ಎಂದು ಗದರಿದಂತೆ ಮಾಡಿ ಪಟ್ಟೇವಾಲಾ ಮದ್ದಾಚಾರಿಯ ಕಡೆಯಿಂದ ಪಂಜೆಯನ್ನು ಇಸಿದುಕೊಂಡರು. ಪುನಃ ನೀರಿಗಿಳಿಯಲೇಬೇಕಾಯಿತು. ಬೆಳ್ಳಿಯ ಚವಲಿಯೊಂದನ್ನು ತೂರಿ ನದಿಯಲ್ಲೊಗೆದು “ಗಂಗಾಭಾಗೀರಥಿ, ಪಾಪಾತ್ಮಾ, ಪಾಪಸಂಭವಃ, ತ್ರಾಹಿ ಮಾಂ ಕೃಪಯಾ ಕೃಷ್ಣೇ” ಎಂದು ಮೂಗು ಹಿಡಿದುಕೊಂಡು ಮತ್ತೊಮ್ಮೆ ಮುಳುಗಿದರು.

ಮಾಮುಲೇದಾರ ದಂಪತಿಗಳು ಸ್ನಾನ ಮುಗಿಸಿ ಬಂದಾಗ ಮಧ್ಯಾಹ್ನ ಹನ್ನೆರಡು ಗಂಟೆಯಾಗಿತ್ತು. ಅಡಿಗೆ ಸಿದ್ಧವಾಗಿತ್ತು; ಅಡುಗೆಯವ ಊಟಕ್ಕೇಳುವ ಸೂಚನೆ ಕೊಟ್ಟು ಹೋದ. ಕುಟುಂಬದ ಇನ್ನೊಂದು ಸೂಚನೆಯೂ ಬಂತು. ಅವರ ಮೇರೆಗೆ, ಪಂಕ್ತಿಲಾಭ ದೊರೆಯಬೇಕೆಂದು ಮಾಮುಲೇದಾರರು ಆಚಾರ್ಯರಿಗೆ ಬಿನ್ನವಿಸಿಕೊಂಡರು. ಆಚಾರ್ಯರು ವಿನಯದಿಂದಲೇ “ಇದೊಂದು ವಿಷಯಕ್ಕ ನನ್ನ ನೀವು ಕ್ಷಮಾ ಮಾಡಬೇಕು. ನಾನು ಪರಾನ್ನ ಸ್ವೀಕಾರ ಮಾಡೂದುಲ್ಲ. ನಿಮಗ ಬೇಕಾದರ ಇನ್ನೊಬ್ಬ ಬ್ರಾಹ್ಮಣನ್ನ ಕಳಿಸಿಕೊಡತೇನಿ” ಎಂದು ಹೇಳಿದರು.

ಮಾಮುಲೇದಾರರ ಹುಬ್ಬುಗಂಟಿಕ್ಕಿದವು. ಎಂಥ ಅಪಮಾನ! ಹೇಳಿ ಕೇಳಿ ವೈದಿಕ ಬ್ರಾಹ್ಮಣನಾಗಿ ಮಾಮುಲೇದಾರರ ಆಮಂತ್ರಣವನ್ನು ನಿರಾಕರಿಸಬೇಕೆಂದರೆ! ತಮ್ಮ ಮಾತಿಗೆ ಕವಡಿಯ ಬೆಲೆಯನ್ನೂ ಈ ಬ್ರಾಹ್ಮಣ ಕೊಡಲಿಲ್ಲವಲ್ಲ! ಆಚಾರ್ಯರು ಹೊರಟು ಹೋದ ಮೇಲೂ ಈ ಅಸಮಾಧಾನ ಮಾಮುಲೇದಾರರ

ಮನಸ್ಸನ್ನು ಮುಳ್ಳಿನಂತೆ ಕೊರೆಯುತ್ತಿತ್ತು. ಇದಕ್ಕೆ ಕಾರಣವಾದರೂ ಏನಿರ ಬಹುದು? ಕುಲಕರ್ಣಿ ಶೇಷಪ್ಪನಿಗೆ ಆಗಿಂದಾಗ ಕರೆ ಹೋಯಿತು. ಮಾಮುಲೇ ದಾರರು ಅವನೆದುರು ತಮ್ಮ ಅಪಮಾನದ ಕತೆಯನ್ನು ಹೇಳಿದರು.

ಶೇಷಪ್ಪನಿಗೆ ಒಳ್ಳೆಯ ಅವಕಾಶ ಸಿಕ್ಕಿತು. "ಪರಾನ್ನ-ಗಿರಾನ್ನ ಎಲ್ಲಾ ಸೋಗು ಸಾಹೇಬರ. ಇಂದುಪುರದ ರಾಜಪುರೋಹಿತರ ಮನೆತನ ತಮ್ಮದು ಅಂಬೋ ಅಭಿಮಾನ ಅದು. ನಾಳೆ ಪ್ರಾಂತಸಾಹೇಬರ ಜೋಡಿ ಮಹಾರಾಜರೂ ಬರೋವರಿದ್ದಾರ. ಅಂಥಾ ಹೊತ್ತಿನೊಳಗ ನಿಮ್ಮ ಜೋಡಿ ಊಟಕ್ಕ ಕೂತರ ಅವರ ಮರ್ಯಾದಿಗೆ ಕಡಿಮ್ಯಾಗತದ."

"ಅಡಿಗಿಯವ ಮಾಡಿದ ಅಡಿಗಿ ಪ್ರಶಸ್ತ ಅನಿಸಲಿಕ್ಕಿಲ್ಲ ಅಂತ ಬಿಟ್ಟಿರಬಹು ದೇನು ಮತ್ತ?" ಮಾಮುಲೇದಾರರು ಇನ್ನೂ ಅನುಮಾನದಿಂದಲೇ ಕೇಳಿದರು.

"ಅವೆಲ್ಲ ಶಿಷ್ಟತನಾ ಏನಿಲ್ಲ ಸಾಹೇಬರ! ಇವರ ಮಡಿವಂತಿಕಿ ಎಷ್ಟಂಬೂದು ನನಗ ಗೊತ್ತಾಗಿಹೋಗೇದ. ದಾದಾ ಅಂತ ಒಬ್ಬ ಮರಾಠಾ ಜಾತೀ ಹುಡುಗ ಇದ್ದಾನ ಇಲ್ಲೆ. ಅವನ ಮ್ಯಾಲೆ ವಾರಂಟಿದ್ದಾಗ ಅವನ್ನ ದೇವರ ಮನಿಯೊಳಗ ಮುಚ್ಚಿಟ್ಟದ್ದನ್ನ ನಾನss ಕಣ್ಣಾರೆ ನೋಡೀನಿ. ಸುಮ್ಮನss ನಿಮ್ಮಂಥವರ ಮ್ಯಾಲೆ ಛಾಪು ಹಾಕಲಿಕ್ಕೆ ಹೇಳೋ ಮಾತವು" ಎಂದ ಶೇಷಪ್ಪ.

ದಾದಾನ ಸಾದ್ಯಂತ ವರ್ತಮಾನವನ್ನೂ ಶೇಷಪ್ಪ ಹೇಳದೆ ಬಿಡಲಿಲ್ಲ. ಹಾವನೂರಿನವರ ಫಿರ್ಯಾದಿಯ ಚೌಕಶಿಯನ್ನು ಮಾಮುಲೇದಾರರೇ ಮಾಡ ಬೇಕಾಗಿತ್ತು. ಇದಕ್ಕೂ ಮೊದಲೇ ಪಡದಪ್ಪನವರು ಮಾಮುಲೇದಾರರನ್ನು ಕಂಡು ದಾದಾನ ವಿಷಯಕ್ಕೆ ಹೇಳಿದ್ದರಂತೆ. ಮಾಮುಲೇದಾರರಿಗೆ ಎಲ್ಲವೂ ವಿದಿತವಾಯಿತು. ಆದರೆ ಇನ್ನೊಂದು ಮಾತನ್ನೂ ಕೇಳಿಕೊಳ್ಳಬೇಕಾಗಿತ್ತು. "ದಾದಾ ಮನೀಲೆ ಹ್ಯಾಂಗ ಇದ್ದಾನ?" ಇದೊಂದು ಪ್ರಶ್ನೆಯ ಮೇಲೆಯೇ ಚೌಕ ಶಿಯ ನಿರ್ಣಯ ಅವಲಂಬಿಸಿತ್ತು. ಶೇಷಪ್ಪ ಅದಕ್ಕೂ ಸಮಾಧಾನ ಹೇಳಿದ. ದಾದಾ ಬಡವನಾದರೂ ಅವನಿಗೆ ಶಿಕ್ಷೆಯಾದರೆ ಗೌಡಿತಿಗೆ ಸಂತೋಷವಾಗಿ ಹಣ ಬಿಚ್ಚಬಹುದು! ಇನ್ನೊಂದು ಲಾಭವೆಂದರೆ ಆಮಂತ್ರಣವನ್ನು ನಿರಾಕರಿಸಿದ ಉದ್ಧಟತನಕ್ಕಾಗಿ ಬಾಳಾಚಾರ್ಯರಿಗೆ ಪಾಠ ಕಲಿಸಿದಂತಾಗುವದು !

ಊಟಕ್ಕೆ ಹೊತ್ತಾಗಿರುವದೆಂದು ಇನ್ನೊಂದು ಸೂಚನೆ ಬಂತು. ಮಾಮುಲೇ ದಾರರು ಗಡಿಬಿಡಿಯಿಂದ ಎದ್ದರು. "ಕುಲಕರ್ಣ್ಯಾರ ಭೋಜನನೂ ಇಲ್ಲೇ

ಆಗಲಿಲ್ಲ?" ಎಂದು ಗೃಹಸ್ಥನಿಗೊಪ್ಪುವಂತೆ ನುಡಿದರು.

"ಎಲ್ಲಿ ಊಟಾ ಮಾಡಿದರೂ ಅದು ನಿಮ್ಮ ಅನ್ನಾನಃ ಅಲ್ಲ ಸಾಹೇಬರಃ" ಶೇಷಪ್ಪ ಅತಿಥಿಗೊಪ್ಪುವ ವಿನಯ ಕೃತಜ್ಞತೆಗಳನ್ನು ಸೂಚಿಸಿ ನುಡಿದ.

ಹೆಚ್ಚು ಮಾತಾಡದೆ ಮಾಮಲೇದಾರರು ಕುಟುಂಬದೊಡನೆ ಊಟ ಮುಗಿಸಿ ಎದ್ದರು. ಶೇಷಪ್ಪ ಕಾರಕೂನನ ಜೊತೆಗೆ ಎರಡನೆ ಪಂಕ್ತಿಗೆ ಕುಳಿತು ಊಟಮಾಡಿದ.

ಸಾಹೇಬರನ್ನು ವಾಮಕುಕ್ಷಿಗೆಂದು ಬಿಟ್ಟು ಶೇಷಪ್ಪ ಪಾರ್ವತೆವ್ವನ ಮನೆಗೆ ನಡೆದ. ಪಾರ್ವತೆವ್ವ ಅದೇ ಊಟ ಮಾಡಿ ಅಡ್ಡಾಗಿದ್ದಳು. ಶೇಷಪ್ಪ ಬಂದದ್ದರಿಂದ ಏಳಬೇಕಾಯಿತು. ಶೇಷಪ್ಪ ನಿಂತುಕೊಂಡೇ ಎಲ್ಲ ವರ್ತಮಾನವನ್ನೂ ಹೇಳಿದ. ಇನ್ನೂರು ರೂಪಾಯಿ ಕೈಬಿಟ್ಟರೆ ದಾದಾನಿಗೆ ಶಿಕ್ಷೆಯಾಗುವದು ನಿಶ್ಚಿತ. ಮಾಮಲೇದಾರರ ಜೊತೆಗೆ ತಾನು ಮಾತಾಡಿದ್ದನ್ನೂ ಹೇಳಿದ.

ಆದರೆ ದಾದಾನಿಗೆ ಶಿಕ್ಷೆ ಮಾಡಿಸಲು ಇನ್ನೂರು ರೂಪಾಯಿಯಷ್ಟು ಹಣ ಕೊಡುವದು ಪಾರ್ವತೆವ್ವನಿಗೇ ಮನಸ್ಸಿಲ್ಲ. ಹಣ ಬೀಳದೆ ತನಗೆ ತಿಳಿದಂತೆ ಸರಕಾರವೇ ಏನಾದರೂ ಮಾಡಲಿ ಎಂದು ಅವಳ ವಾದ. ಆದರೆ ಹಣ ಬಿಚ್ಚುವ ಕುಶಲ ಕಲೆಯನ್ನು ಶೇಷಪ್ಪನಿಗೆ ಯಾರೂ ಹೇಳಿಕೊಡಬೇಕಾಗಿರಲಿಲ್ಲ. ದಾದಾನ ಬಗ್ಗೆ ಏನೇನೋ ಭೀತಿಯನ್ನು ಹುಟ್ಟಿಸಿದ. ಅವನನ್ನು ಕೆಣಕಿದ್ದಾಗಿದೆ. ಈಗ ಕೈಬಿಟ್ಟರೆ ನಮಗೇ ತೊಂದರೆ. ಮೇಲಾಗಿ ಲಿಂಗಪ್ಪನ ವಾರಸಾ ಕತೆಯನ್ನೂ ಅವಳಿಗೆ ಎದೆ ನಡುಗುವಂತೆ ಹೇಳತೊಡಗಿದ. ಲಿಂಗಪ್ಪ ಪಡದಪ್ಪನ ಸಹಾಯವನ್ನು ಪಡೆಯಬಹುದು. ಅವನ ನೆಲೆ ಪಾರ್ವತೆವ್ವನಿಗೆ ಗೊತ್ತಿಲ್ಲವೇ? ಆಗ ಮೂರರಲ್ಲಿಂದು ಭಾಗದಂತೆ ಜಮೀನಿನ ಕಬಜಾ ಬಿಟ್ಟು ಕೊಡಬೇಕಾದೀತು.

ಪಾರ್ವತೆವ್ವನಿಗೆ ದಿಗಿಲಾಯಿತು. ಶ್ಯಾಮರಾಯನ ವಿರುದ್ಧ ಕೊಟ್ಟ ಅರ್ಜಿಗೆ ಪಾರ್ವತೆವ್ವನ ಬೆಂಬಲವಿದೆಯೆಂದು ಬಾಳಾಚಾರ್ಯರಿಗೆ ಹೇಗೋ ಗೊತ್ತಾಗಿತ್ತು. ಆಗಲೇ ಅವರು ಗೌಡರ ಮನೆಗೆ ಬಂದು ಪಾರ್ವತೆವ್ವನಿಗೆ ಉಪದೇಶ ಮಾಡಿದ್ದರು. ನಾಳೆ ಸಾಹೇಬರೆದುರು ಚೌಕಶಿಯಾಗುವ ಮುಂದಾದರೂ ನಿಜ ಹೇಳಬೇಕೆಂದು ಹೆದರಿಸಿ ಹೋಗಿದ್ದರು.

ಇದೇ ಹೊತ್ತಿನಲ್ಲಿ ಚಿಕ್ಕ ಗೌಡಿತಿ ಒಪ್ಪಾಡಿದಳು. ಅವಳಿಗೆ ಮಾತನಾಡಲೂ ಆಗಲಿಲ್ಲ. ಶೇಷಪ್ಪ ನಿಂತುಕೊಂಡೇ ಇದ್ದ. "ಇಕಾ ಮಾಮಲೇದಾರರು ಏಳೂದ

ರೊಳಗ ನಾನು ಚಾವಡಿಗೆ ಹೋಗಬೇಕು. ನೀವು ಬೇಕಾರ ಜಿನ್ನಪ್ಪನ್ನ ಕರಿಸಿ ವಿಚಾರ ಮಾಡಿ ಆಮ್ಯಾಲ ತಿಳಿಸಿರಿ. ಏನೋ ವಚನ ಕೊಟ್ಟಿದ್ದಿರಿ, ನೆನಪು ಕೊಡಬೇಕಂತ ಬಂದೆ" ಎಂದು ಹೇಳಿ ಹೊರಡುವದರಲ್ಲಿದ್ದ.

"ಕುಲಕರ್ಣ್ಯಾರ, ಒಂದು ಮಾತು ನಿಮಗ ಹೇಳಾಕsಬೇಕಾಗಿತ್ತು. ಸ್ವಲ್ಪ ಕುಂತರ ಎಲ್ಲಾ ಹೇಳಾಕ ಪಾಡಾಗತೇತಿ" ಪಾರ್ವತೆವ್ವ ಆರ್ತಳಾಗಿ ಕೇಳಿದಾಗ ಶೇಷಪ್ಪನಿಗೆ ಇಲ್ಲೆನ್ನಲಾಗಲಿಲ್ಲ. ಕುಳಿತ.

"ಮತ್ತೇನೂ ಇಲ್ಲ; ಮನ್ನೆ ನೀವು ಸಹಿ ಮಾಡಿಸಿದ ಅರ್ಜಿ ಮಜಕೂರು ಆಚಾರೆಪ್ಪಗ ಯಾರೋ ಹೇಳಿಬಿಟ್ಟಾರ. ಹಾಗ ಮಾಡಿದ್ದು ನೆಟ್ಟಗಾಗಲಿಲ್ಲ ಅಂತ, ಇಲ್ಲೀ ಮಟಾ ಬಂದು ಅವರು ಒದರ್‍ಯಾಡಿ ಹೋದರು. 'ನನಗೇನೂ ಗೊತ್ತಿಲ್ಲ, ನನಗೇನು ಓದಾಕ ಬರ್‍ಯಾಕs ಬರತೈತೇ? ಅವರು ಹೇಳಿದsಟು ಮಾಡಿದೆ' ಅಂತ ನಿಮ್ಮ ಮ್ಯೆಮ್ಯಾಗs ಎಲ್ಲಾ ಹಾಕಿ ಪಾರಾದೆ" ಎಂದು ಅಂಜುತ್ತಲೇ ಹೇಳಿದಳು.

ಶೇಷಪ್ಪನಿಗೆ ಸಿಟ್ಟು ಬಂದರೂ ಅದನ್ನವನು ತೋರಗೊಡಲಿಲ್ಲ. "ವಾಲೀ ಕಾರ ಮಲ್ಲ ಈ ಅರ್ಜೀ ಮಜಕೂರ ಬೈಲಿಗೆಳದಾನ ಅಂತ ನನಗ ಸುದ್ದಿ ಬಂದದ. ನೀವೇನೂ ಹೆದರದ ಇದ್ದ ಸಂಗತಿ ಹೇಳಿಬಿಡಬೇಕಾಗಿತ್ತು. ಆಗ ಹೇಳಲಿಕ್ಕೆ ಆಗದಿದ್ರ ಈಗಾದರೂ ನೀವು ಹೇಳsಬೇಕಾಗತದ. ಹೇಳಿಬಿಡ್ರಿ" ಎಂದು ಶೇಷಪ್ಪ ಗೌಡಿತಿಯನ್ನು ಒಪ್ಪಿಸಿಯೇ ಬಿಟ್ಟ.

ಕೊನೆಗೂ ಸರಬರಾಯಿಯ ವೆಚ್ಚದ ಮಾತು ಬಂತು. ಅಲ್ಲಿಯೂ ಇದೇ ತಂತ್ರಜಾಲವನ್ನು ಶೇಷಪ್ಪ ಬೀಸಿದ. ಗೌಡರಿದ್ದಾಗ ಈ ತೊಂದರೆ ಇರುತ್ತಿರಲಿಲ್ಲ. ತನ್ನ ಮೇಲೆ ಭಾರ ಬೀಳದಂತೆ ಅವರು ನೋಡಿಕೊಂಡು ಹೋಗುತ್ತಿದ್ದರು. ಈಗ ಎರಡೂ ದಪ್ತರಗಳು ತನ್ನ ಹೆಸರಿಗೇನೋ ಇವೆ. ಆದರೆ ಊರ ಪರಿಸ್ಥಿತಿಯ ಮೂಲಕ ಒಂದು ಪೈ ಕೂಡ ಲಾಭವಾಗಿಲ್ಲ. ಅಂಥ ಹೊತ್ತಿನಲ್ಲಿ ಮಾಮಲೇ ದಾರರು ಕನ್ಯಾಗತದ ಶ್ರಾದ್ಧವನ್ನು ಬೇರೆ ಹೂಡಿದ್ದಾರೆ. ಅದಾದ ಕೂಡಲೇ ಪ್ರಾಂತ ಸಾಹೇಬರ ಆಗಮನ ಬೇರೆ. ಸರಬರಾಯಿಯ ಖರ್ಚೆಂದರೂ ಮಗಳ ಬಾಣಂತಿ ತನಕ್ಕಿಂತ ಹೆಚ್ಚು ತಾಪದಾಯಕ. ಮೇಲಾಗಿ ಗೌಡಿತಿಯದೇ ಎಲ್ಲ ಕೆಲಸ. ದಾದಾ ನಿಗೆ ಶಿಕ್ಷೆಯಾಗಬೇಕು. ಲಿಂಗಪ್ಪನ ವಾರಸಾ-ಪ್ರಕರಣ ಬಗೆ [illegible]ಯಬೇಕು. ಈಗಲೇ ಹಿಂದು ಮುಂದೆ ನೋಡಿದರೆ, ನಾಳೆ ಆಸ್ತಿಯೇ ಮುಳ[illegible]ಹೋದರೆ! ಇದನ್ನೆಲ್ಲ ಕೇಳಿದ ಗೌಡಿತಿ ವೆಚ್ಚದ ಭಾರವನ್ನು ವಹಿಸದೆ ಗತಿಯಿರಲಿಲ್ಲ. ಒಪಿ

ದಳು. ಇಷ್ಟೇ ಅಲ್ಲ, ಶೇಷಪ್ಪನ ವಿಷಯಕ್ಕೆ ಅವಳಿಗಿದ್ದ ಆದರಾಭಿಮಾನಗಳು ಇನ್ನೂ ಹೆಚ್ಚಾದವು.

ಶೇಷಪ್ಪ ಅವಸರದಿಂದ ಚಾವಡಿಗೆ ಬರುತ್ತಿರುವಾಗಲೇ ಓಡಿ ಬರುತ್ತಿರುವ ವಾಲೀಕಾರ ಮಲ್ಲ ಅವನಿಗೆ ಭೆಟ್ಟಿಯಾದ. ಶೇಷಪ್ಪನನ್ನು ಕಂಡೊಡನೆಯೇ ನಮಸ್ಕಾರ ಮಾಡಿ, “ವಾರಸಾ-ರಜಿಸ್ಟರ ತಪಾಸಣಿ ಮಾಡಾವರದಾರಂತರೀ. ನಿಮ್ಮನ್ನ ಗಡಾನ ಕರಕೊಂಡ ಬಾ ಅಂತ ಹೇಳಿ ಕಳಸ್ಯಾರ್ರಿ” ಎಂದು ತೇಕುತ್ತಲೇ ಹೇಳಿದ.

ಶೇಷಪ್ಪನಿಗೆ ಸ್ವಲ್ಪ ದಿಗಿಲಾಯಿತು. ಮೊನ್ನಿನ ಕಾಲರಾ ಪಿಡುಗು ಅನೇಕ ಜನರನ್ನು ಆಹುತಿ ತೆಗೆದುಕೊಂಡಾಗ ವಾರಸಾ-ರಜಿಸ್ಟರದಲ್ಲಿ ಶೇಷಪ್ಪನ ಹಸ್ತ ಕೌಶಲ್ಯ ಎಣೆಯಿಲ್ಲದಂತೆ ನಡೆದಿತ್ತು. ಕಾರಕೂನನು ಎಲ್ಲಾ ಬಿಟ್ಟು ಈ ರಜಿಸ್ಟರದ ತಪಾಸಣಿಗೇ ಕೂಡಬೇಕೆಂದರೆ, ಈ ವಾಲೀಕಾರನೇ ಅವನ ಕಿವಿ ಊದಿರಬೇಕು ಎಂದು ಸಂಶಯವೂ ಬಂದಿತು. ಆದರೆ ಅವನನ್ನು ಗದರಿಸಲೂ ಕೂಡ ಅವಕಾಶ ಉಳಿದಿರಲಿಲ್ಲ. “ವಾರಸಾ ಮಾಡಿದ ಇಸಮು ಅವ ನೋಡು, ಅವನ್ನ ಚಾವಡಿಗೆ ಹಿಡಕೊಂಡು ಬಾ.” ಎಂದು ಅವನಿಗೆ ಹೇಳಿ ಚಾವಡಿಗೆ ನಡೆದ.

ಚಾವಡಿಯ ಕಟ್ಟೆಯನ್ನೇರಿ ಕಾರಕೂನನನ್ನು ನಮಸ್ಕರಿಸುತ್ತ “ಏನು ವಾರಸಾ-ರಜಿಸ್ಟರ ತಗದುಕೊಡಬೇಕು?” ಎಂದು ವ್ಯಂಗ್ಯವಾಗಿ ಕೇಳಿದ. ಕಾರಕೂನನೂ ಅದೇ ಗರಡಿಯಲ್ಲಾಡಿದವ. “ಮತ್ತ ಸಾಹೇಬರ ಶ್ರಾದ್ಧದ ಖರ್ಚು ತೀಲ ಬೇಕಾವರ ವಾರಸಾ-ರಜಿಸ್ಟರದ ಹೊರತು ಆದಾ ಯಾವದು ಕುಲಕರ್ಣಿ?” ಎಂದು ನಸುನಕ್ಕ.

ವಾರಸಾ-ರಜಿಸ್ಟರ ಕೈಗೆ ಬಂತು. ಕಾರಕೂನ ಅವುಗಳನ್ನೆಲ್ಲ ಒಂದೊಂದಾಗಿ ಪರೀಕ್ಷಿಸತೊಡಗಿದ. ವಾಲೀಕಾರ ಒಬ್ಬೊಬ್ಬರನ್ನೇ ಕರೆದುಕೊಂಡು ಬರುತ್ತಿದ್ದ. ಕಾರಕೂನ ಕೇಳಿದ ಪ್ರಶ್ನೆಗಳಿಗೆ ಅವರು ಒಂದೊಂದಾಗಿ ಉತ್ತರ ಕೊಡಬೇಕಾಗುತ್ತಿತ್ತು. ವಾರಸಾ ಮಾಡಿದ್ದು ಸರಿಯೋ ಅಲ್ಲವೋ ಎಂಬುದನ್ನು ಪರೀಕ್ಷಿಸಿ ಕಾರಕೂನ ಶರಾ ಬರೆಯುತ್ತಿದ್ದ. ಯಾಂತ್ರಿಕವಾಗಿ ನೀರಸವಾಗಿ ಈ ಕ್ರಿಯೆ ಸಂಜೆಯವರೆಗೆ ನಡೆಯಿತು. ನಡುನಡುವೆ ಕಾರಕೂನ ಸ್ಪಷ್ಟೀಕರಣಕ್ಕಾಗಿ ಕುಲಕರ್ಣಿಯ ಮುಖ ನೋಡುತ್ತಿದ್ದ. ಅವನು ಎಲ್ಲಿಲ್ಲದ ಮುಂಜಾಗ್ರತೆಯಿಂದ ಉತ್ತರವೀಯುತ್ತಿದ್ದ. ಯಾವ ತೊಡಕೂ ಬರಲಿಲ್ಲವೆಂದು ಕಾರಕೂನ ಬೇಸರಗೊಂಡಿದ್ದ.

ಕೊನೆಗೊಮ್ಮೆ ತೊಡಕೂ ಬಂತು. ನಾನಾನ ವಾರಸಾ ದಾದಾನ ಹೆಸರಿನಲ್ಲಿ ಮಾಡಿದ್ದನ್ನು ನೋಡಿ ಕಾರಕೂನ ಹುಬ್ಬುಗಂಟಿಕ್ಕಿದ. "ಈ ನಾನಾಗ ಮಕ್ಕಳಿಲ್ಲೇನು?" ಎಂದು ಪ್ರಶ್ನೆ ಮಾಡಿದ. ಕುಲಕರ್ಣಿ ನಶ್ಯದ ಗಡಿಬಿಡಿಯಲ್ಲಿ ತೊಡಗಿದ್ದರಿಂದ ಉತ್ತರವೀಯಲಿಲ್ಲ. ಕೂಡಿದ ಜನರಲ್ಲಿ ಯಾರೂ ಪಿಟ್ಟೆನ್ನಲಿಲ್ಲ. ಕಾರಕೂನ ಮತ್ತೊಮ್ಮೆ ಎಲ್ಲರ ಮೊಗ ನೋಡಿದ. ಲಕ್ಷ್ಮಣ ಎದ್ದು ನಿಂತು, ಗಾಬರಿಯಿಂದ ಗೊಗ್ಗರದ ದನಿಯಲ್ಲಿ "ನಾನಾಗ ಒಬ್ಬಾಕಿ ಮಗಳದಾಳರೀ" ಎಂದು ಹೇಳಿ ಕುಳಿತ.

"ಮಗಳಿದ್ದರೂ ದಾದಾನ ಹೆಸರ್ಲೆ ಯಾಕ ವಾರಸಾ ಮಾಡಿದಿರಿ?" ಎಂದು ಕಾರಕೂನ ನಗುನಗುತ್ತಲೇ ಕೇಳಿದ. ಕೊನೆಗೂ ಬೇಟೆ ಸಿಕ್ಕಿತು.

"ಹೆಣಮಗಳಿದ್ದಾಳನ್ನೂದು ನನಗೂ ಗೊತ್ತದ. ಆದರ ಆಕೀ ಹೆಸರು ಹಚ್ಚಲಿಕ್ಕೆ ಬರೋಹಂಗ ಇರಲಿಲ್ಲ. ಮಾಮಲೇದಾರ ಸಾಹೇಬರಿಗೆ ಎಲ್ಲಾ ಕಚ್ಚಾ ಮಾಹಿತಿ ಕೊಟ್ಟು ಆಮ್ಯಾಲೇ ನಾ ವಾರಸಾ ಮಾಡಿದೆ" ಎಂದ ಶೇಷಪ್ಪ. ಪ್ರಸಂಗದ ಸೂಕ್ಷ್ಮತೆ ನಿಮಗೆ ತಿಳಿಯುವಂಥದಲ್ಲ, ತಿಳಿಯಬೇಕಾದದ್ದೂ ಇಲ್ಲ ಎಂಬ ಅರ್ಥ ಅವನ ದನಿಯಲ್ಲಿಯೇ ಹೊರಡುವಂತಿತ್ತು.

"ಕಚ್ಚಾ ಮಾಹಿತಿ ಕೊಡೂದು ಬಿಡೂದು ಅಷ್ಟು ಮಹತ್ವದ್ದಲ್ಲ ಕುಲಕರ್ಣಿ. ಆದರ ವಾರಸಾ ಯಾರಿಗೆ ಬರಬೇಕೋ ಅವರ ಹೆಸರ ಹಚ್ಚಲಿಕ್ಕೇಬೇಕು. ಬೇಕಾದ್ಹಾಂಗ ಬರೀಲಿಕ್ಕೆ ಇದೇನು ನಿಮ್ಮ ಮನೀ ಲೆಕ್ಕದ ಪುಸ್ತಕೇನು?" ಎಂದು ಸಿಟ್ಟಿನಿಂದಲೇ ಕೇಳಿದ. ಶೇಷಪ್ಪ ಆ ವಿನೋದಕ್ಕೇನೋ ಎನ್ನುವಂತೆ ಕಿಲಕಿಲನೆ ನಕ್ಕು ನಶ್ಯವನ್ನೇರಿಸಿದ. ಕಾರಕೂನನ ಸಿಟ್ಟು ಮತ್ತೂ ಹೆಚ್ಚಾಯಿತು. "ಈ ಪ್ರಕರಣದೊಳಗ ಪೂರಾ ಕಿಸೇ ತುಂಬಿರಬೇಕು ಆತು." ಎಂದು ಅವಡುಗಚ್ಚಿದ.

ಕುಲಕರ್ಣಿಗೆ ಈ ಮಾತು ಮಾತ್ರ ಅಸಹನೀಯವೆನಿಸಿತು. "ರಾಯರ್‍ಇ ಬಂದ ಮಾಡ ಎಲ್ಲಾ ಮಳೀ ಸುರಸೂದುಲ್ಲ. ನಾವು ಮಾಡಿದ ವಾರಸಾಕ್ಕೆಲ್ಲ ದುಡ್ಡು ಸಿಗತಿದ್ದರ ಭಂಗಾರದ ಮನೀ ಕಟ್ಟಸತಿದ್ದೆ" ಎಂದು ತನ್ನನ್ನು ಸಮರ್ಥಿಸಿಕೊಂಡ.

ಕಾರಕೂನ ಗೋಪಾಳರಾಯನಿಗೆ ಸ್ವಲ್ಪ ಹೊತ್ತು ಸಿಟ್ಟಿನ ಆವೇಶದಲ್ಲಿ ಏನು ಮಾಡಬೇಕೆಂಬುದೇ ತಿಳಿಯಲಿಲ್ಲ. ಆಮೇಲೆ ಈ ಕುಲಕರ್ಣಿಯ ಕೂಡ ವಾದಿಸಿ ಪ್ರಯೋಜನವಿಲ್ಲವೆಂದರಿತ. ಮತ್ತೆ ಲಕ್ಷ್ಮಣನ ಕಡೆಗೇ ಹೊರಳಿದ. "ನಾನಾನ

ವಾರಸಾ ಅವನ ಮಗಳ ಹೆಸರ್ಲೆ ಹೋದರ ನಿಂದೇನಾದರೂ ತಕರಾರ ಅದs ಏನಪಾ ?" ಎಂದು ಕೇಳಿದ.

ಲಕ್ಷ್ಮಣ ಎದ್ದು ನಿಂತ. "ಅಪ್ಪನ ವಾರಸಾ ಮಗಳಿಗೆ ಮಾಡಿದರ ನಾ ಯಾಕ ತಕರಾರು ಮಾಡಬೇಕರಿ ಎಪ್ಪಾ? ಆಕಿ ಏನಾದರೂ ನಮ್ಮ ಮಗಳು ಅಲ್ರಿ? ಇದ್ದ ಚೂರಚಾರ ಹೊಲ ಆಕಿ ಹೆಸರ್ಲೆ ಆದರ ಸಂತೋಸs ಅಲ್ರಿ?" ಎಂದಿಷ್ಟು ಹೇಳಿ ಕುಳಿತುಕೊಂಡ.

ಗೋಪಾಳರಾಯ ಈಗ ಮತ್ತೆ ಕುಲಕರ್ಣಿಯ ಕಡೆಗೆ ತಿರುಗಬೇಕಾಯಿತು. "ಅಲ್ಲರಿ? ಆಕಿ ವಾರಸಾ ಹಚ್ಚಲಿಕ್ಕೆ ಯಾರದೂ ತಕರಾರ ಇಲ್ಲದಾಗ ನೀವ್ಯಾಕ ಹಚ್ಚಲಿಲ್ಲ?" ಎಂದು ಕೇಳಿದ.

"ಇಕ್ಕೊಳ್ಳೇಡ್ರಿ ರಾಯರs, ಈ ಲಕ್ಷ್ಮಣನ ತಲೀ ನೆಟ್ಟಗಿಲ್ಲ. ಸುಮ್ಮನ ಅವನ ಮಾತಿನಿಂದ ಏನು ಪ್ರಯೋಜನ? ನಾನಾನ ವಾರಸದಾರ ದಾದಾ ಅಂತ ನಾ ಬರದದ್ದು ಎಲ್ಲಾರಿಗೂ ಒಪ್ಪಿಗಿ ಅದ. ಬೇಕಾದವರನ್ನ ಕೇಳಿ ನೋಡ್ರಿ. ಹಿಂದೂ ಕಾಯದೆ ಓದಿ ಅಪ್ಪನ ವಾರಸಾ ಮಗಳಿಗೆ ಹೋಗಬೇಕು ಅಂತ ನೀವನ್ನೋದು ಬರೋಬರಿ. ಆದರ ಎಂಥಾ ಪ್ರಸಂಗದಾಗ ಹೋಗತದ ಅನ್ನೋದು ನೀವು ವಿಚಾರಮಾಡಬೇಕಾಗಿತ್ತು. ಅವಿವಾಹಿತ ಹೆಣಮಗಳು, ತನ್ನ ಜಾತೀ ಬಿಟ್ಟು, ಇನ್ನೊಬ್ಬಾವನ ಜೋಡಿ ಕೂಡಿಕೊಂಡು, ಒಂದು ಹಡದರೂ ವಾರಸಾ ಆಕಿಗೆ ಹೋಗತದ ಹ್ಯಾಂಗ? ಇದನ್ನೆಲ್ಲಾ ನಾ ಸಾಹೇಬರಿಗೆ ಹೇಳಿದಾಗ, ಅವರು ದಾದಾನ ಹೆಸರ್ಲೆ ವಾರಸಾ ಮಾಡು ಅಂತ ನನಗ ತೋಂಡೀ ತಿಳಿಸ್ಯಾರ. ನಾಕ ಮಂದ್ಯಾಗ ಆ ಹಿಂದಿನ ರಾಡೀ ತೊಳಿಯೋದು ನನಗ ಬೇಕಾಗಿರಲಿಲ್ಲ ಅಂತ ನಾ ಸುಮ್ಮನಿದ್ದೆ. ನೀವು ಕೆದರಿ ಕೆದರಿ ಅದೇ ಮಾತಿಗೆ ತಂದಿರಿ." ಶೀನಪ್ಪ ಉತ್ಕಟ ಭಾವನಾವಶತೆಯಿಂದ ಸಾಭಿನಯವಾಗಿ ಮಾತಾಡಿದ. ತನಗೇನೂ ಕಾಯದೆ ಜ್ಞಾನ ಕಡಿಮೆಯಾಗಿಲ್ಲ, ಕಲ್ಯಾಣದ ಕಡೆಗೇ ಯಾವಾಗಲೂ ಲಕ್ಷ್ಯವಿದೆ ಎಂಬ ರಾಜಕಾರಣಪಟುವಿನ ಭಾಷಣವಂತಿತ್ತು ಅವನ ಮಾತು.

ಲಕ್ಷ್ಮಣ ಈ ಮಾತಿಗೆ ನಾಚಿಕೆಯಿಂದ ತಲೆ ತಗ್ಗಿಸಿದ. ಕೂಡಿದ ಜನರೆಲ್ಲ ಶೀನಪ್ಪನಿಗೇ ಬೆಂಬಲಿಸಿತ್ತರು. "ಕುಲಕರ್ಣ್ಯಾರು ಹೇಳೂ ಮಾತು ಬರೋಬರಿ. ಆ ಹುಡುಗಿ ಕುಲಗೆಟ್ಟು ಹೋದದ್ದs ಖರೆ" ಎಂದು ತಮ್ಮತಮ್ಮೊಳಗೇ ಮಾತಾಡಿದರು. ಶಿಕ್ಷಿತತನಕ್ಕೆ ಪ್ರೋತ್ಸಾಹ ದೊರೆತಂತಾಗಿ ತಲೆಗೊಬ್ಬರು ಆಡಬಾರದ್ದನ್ನೆಲ್ಲ

ಗುಜುಗುಜು ಆಡಿಕೊಂಡರು. ಲಕ್ಷ್ಮಣನಿಗೆ ಅಲ್ಲಿ ನಿಲ್ಲುವ ಮನಸ್ಸಾಗದೆ ತಲೆ ತಗ್ಗಿಸಿಕೊಂಡು ಮನೆಗೇ ಹೊರಟ.

ಈ ವಾರಸಾದ ಬಗ್ಗೆ ಟಿಪ್ಪಣಿ ಬರೆದಿಟ್ಟುಕೊಂಡು ಕಾರಕೂನ ಗೋಪಾಳ ರಾಯ ಟಾಕನ್ನು ಕಿವಿಯ ಹತ್ತಿರ ರುಮಾಲಿನ ಅಂಚಿನಲ್ಲಿ ಸಿಗಿಸಿಕೊಂಡು ವಾರಸಾ-ರಜಿಸ್ಟರದ ಪಾನು ತಿರುವತೊಡಗಿದ. ಜನರೆಲ್ಲ ಆತುರದಿಂದ ನಿರೀಕ್ಷಿಸ ತೊಡಗಿದರು. ಮರೆವಿನ ತೆರೆಯ ಹಿಂದೆ ನಡೆದು ಹೋದ ರುದ್ರನಾಟಕಗಳೆಲ್ಲ ನೆನಪಿಗೆ ಬಂದದ್ದರಿಂದ ಎಲ್ಲರೂ ಅಸ್ವಸ್ಥರಾಗಿದ್ದರು. ಚಿಮಣಾಳ ಪ್ರಕರಣ ನೆನಪಿಗೆ ಬಂದಾಗ ಬಾಯಿಗೆ ಬಂದಂತೆ ಟೀಕೆ ಮಾಡಿದ್ದರೂ ಅಂತರಾಳದಲ್ಲಿ ಎಲ್ಲ ರಿಗೂ ಜುಗುಪ್ಸೆಯ ಅನುಭವ ಉಂಟಾಗಿತ್ತು. ಎಲ್ಲರ ದೃಷ್ಟಿ ಗೋಪಾಳರಾಯನ ಕಡೆಗೇ ಇತ್ತು. ರಜಿಸ್ಟರದ ಯಾವ ಪಾನಿನಲ್ಲಿ ಮತ್ತಾವ ದಾರುಣ ಪ್ರಕರಣ ಅಡಗಿದೆಯೋ ಎಂದು ವಿವ್ಹಲರಾಗಿದ್ದರು. ಕಾರಕೂನ ಗೋಪಾಳರಾಯ ಮತ್ತೊಮ್ಮೆ ಅದೇ ಆಶ್ಚರ್ಯದಿಂದ ತುಂಬಿದ ಮುಖಮುದ್ರೆಯಿಂದ ಕುಲಕರ್ಣಿಯ ಮುಖವನ್ನು ನೋಡಿದ.

ಪಾದಳ್ಳಿಯ ದೇಶಪಾಂಡೆ ಭೀಮರಾಯರು ನಿಪುತ್ರಿಕರಾಗಿ ಸತ್ತದ್ದರಿಂದ ಅವರ ಹೆಂಡತಿ ಗಂಗಾಬಾಯಿಯ ಹೆಸರಿನಲ್ಲಿ ವಾರಸಾ ಮಾಡಿದ್ದನ್ನು ನೋಡಿ ಗೋಪಾಳರಾಯ ಸ್ತಂಭಿತನಾಗಿದ್ದ. "ಏನ್ರೀ ಇದು ಕುಲಕರ್ಣಿ? ದೇಶಪಾಂಡೆ ಭೀಮರಾಯರು ಪರಗಣೆ ವತನದಾರರು. ಅವರು ದತ್ತಕ ತೆಗೆದುಕೊಂಡಿದ್ದ ದಾಖಲೆ ಅದ. ದತ್ತಕ ಮಗನ ವರದಿ ತೊಗೊಂಡು ಅವನ ಹೆಸರ್ಲೆ ವಾರಸಾ ಹಚ್ಚಲಿಕ್ಕೆ ಸ್ವತಃ ಮಾಮಲೇದಾರರು ಹುಕುಮು ಕೊಟ್ಟಾರ. ಈ ತಾಲೂಕಿನ ಹತ್ತೆಂಟು ಹಳ್ಳಿಯೊಳಗ ಅವರ ಖಾತೇಕ್ಕ ಇದ್ದ ಜಮೀನೆಲ್ಲ, ದತ್ತಕ ಮಗನ ಹೆಸರ್ಲೆ ವಾರಸಾ ಆಗ್ಯಾವ. ಇಷ್ಟಿದ್ದೂ ನೀವು ಆ ದತ್ತಕ ಮಗನ ಹೆಸರ್ಲೆ ವಾರಸಾ ಮಾಡಿಲ್ಲಲ್ಲ? ಏನು ಹೇಳಬೇಕು ನಿಮಗ?" ಎಂದು ಸಿಟ್ಟಿನಿಂದ ಗೋಪಾಳರಾಯ ರಜಿಸ್ಟರನ್ನು ಮುಚ್ಚಿ ಧೊಪ್ಪನೆ ಒಗೆದ.

ಶೇಷಪ್ಪ ಸ್ವಲ್ಪ ಕೂಡ ಕದಲಿರಲಿಲ್ಲ. "ನೋಡ್ರಿ ರಾಯರ ಇದರಾಗೇನೂ ಅಂಥಾ ಆಶ್ಚರ್ಯದ ಮಾತಿಲ್ಲ. ನಮ್ಮೂರ ದೇಶಪಾಂಡೇರ ಹಕೀಕತು ನನಗ ಗೊತ್ತಿಲ್ಲ? ಇಲ್ಲಿ ಕೂತವರಿಗೆಲ್ಲಾ ಆ ಸಂಗತಿ ಗೊತ್ತದ. ಈಗ ದತ್ತಕ ಮಗಾ ಅಂತ ಹೇಳಿಕೊಳ್ಳೋ ರಂಗರಾಯನ ದತ್ತಕ ವಿಧಿಪೂರ್ವಕ ಆಗಿಲ್ಲ. ಅಂವಾ

ತನ್ನ ತಂದೀತಾಯಿಗೆ ಒಬ್ಬನs ಮಗಾ. ಏಕಪುತ್ರ ವಿಷಯ ಆದ್ದರಿಂದ ದತ್ತಕ ಆಗಲಿಕ್ಕೆ ಬರೂದಿಲ್ಲ. ರಂಗರಾಯನ ತಂದಿ ಕಾಂತರಾಯ ಮಾಮಲೇದಾರರಿಗೆ ಸ್ನೇಹಿತ ಅಂತ ಅಂವಾ ಅವರಿಗೆ ಹೇಳಿ ಹುಕುಮು ಹೊರಡಿಸಿರಬಹುದು. ಇಲ್ಲೆ ಗಂಗಾಬಾಯಿ ನಾಲ್ಕು ಮಂದಿನ್ನ ಕೇಳಿಕೊಂಡು ತಮ್ಮ ಅಣ್ಣತಮ್ಮಂದಿರ ಪೈಕೀನs ಕೃಷ್ಣರಾಯ ಅನ್ನೋ ಹುಡುಗನ್ನ ದತ್ತಕ ತೊಗೊಂಡಾಳ. ಇದು ಕೋರ್ಟಿಗೆ ಹೋಗದs ನಿರ್ಣಯ ಆಗೋ ಪ್ರಕರಣ ಅಲ್ಲ. ನಿರ್ಣಯ ಆಗೋ ತನಕಾ, ಗೊಂದಲ ಬ್ಯಾಡಾ ಅಂತ ನಾನs ಗಂಗಾಬಾಯಿಯ ಹೆಸರ್ಲೆ ವಾರಸಾ ಹಚ್ಚೀನಿ. ಗಂಡ ನಿಪುತ್ರಿಕ ಆಗಿ ಸತ್ತರ ಹೇಣತಿ ಹೆಸರ್ಲೆ ವಾರಸಾ ಮಾಡೂದು ಕಾಯದೇಶೀರ ಅದ ಅಂತ ಮಾಡಿದೆ.” ಎಂದು ಸುದೀರ್ಘ ವಿವರಣೆ ಕೊಟ್ಟನು.

ಶೇಷಪ್ಪನ ಗಂಡಿಪೆಯನ್ನು ನೋಡಿ ಗೋಪಾಳರಾಯರ ಎದೆಯೂ ಹೆದರಿಕೆಯಿಂದ ನಡುಗಿತು. ದೇಶಪಾಂಡೆ ಮನೆತನದ ದತ್ತಕ ಪ್ರಕರಣ ಗೋಪಾಳರಾಯರಿಗೇನೂ ಅಪರಿಚಿತವಲ್ಲ. ಸ್ವತಃ ಮಾಮಲೇದಾರರೇ ಹುಕುಂ ಕೊಟ್ಟಿದ್ದು ಅವನಿಗೂ ಗೊತ್ತಿತ್ತು. ಆದರೂ ಆದ ದತ್ತಕ ವಿಧಿಪೂರ್ವಕವಾಗಿಲ್ಲ ಎಂದು ಶೇಷಪ್ಪ ತಾನೇ ಸಂಶಯ ತೆಗೆದುಕೊಂಡು ಎರಡು ದತ್ತಕಗಳ ಬೀಜವನ್ನು ಬಿತ್ತಿ ನ್ಯಾಯಕ್ಕೆ ದಾರಿ ಮಾಡಿದ್ದ. ಗಂಗಾಬಾಯಿ ಊರಲ್ಲಿರಲಿಲ್ಲ. ದೇಶಪಾಂಡೆ ಯವರ ವಾಡೆ ಎಂಬೋ ಬರಿದಾಗಿತ್ತು. ಅವರ ಹೊಲಗಳು ಹತ್ತೆಂಟು ಹಳ್ಳಿಗಳಲ್ಲಿ ಚಲ್ಲವರಿದಿದ್ದವು. ಶೇಷಪ್ಪ ಈ ಪರಿಸ್ಥಿತಿಯ ದುರುಪಯೋಗ ಮಾಡಿಕೊಂಡು ಏನೇನೋ ಆಟ ಹೂಡಿದ್ದನೆಂಬುದು ಸ್ಪಷ್ಟವಿತ್ತು. ಅವನು ಹೇಳಿದ ಹೊಸ ದತ್ತಕ ಪ್ರಕರಣ ಎಷ್ಟು ಸುಳ್ಳೋ ಎಷ್ಟು ಸತ್ಯವೋ ಪರಮಾತ್ಮನಿಗೇ ಗೊತ್ತು. ಪ್ರಕರಣ ಶೇಷಪ್ಪನ ಕುತಂತ್ರದಿಂದ ಕೋರ್ಟಿನ ದಾರಿಯನ್ನೇ ಕಾಯುತ್ತಿತ್ತು. ಮುಂದೆ ಕೋರ್ಟಿನಲ್ಲಿ ನಿರ್ಣಯವಾಗಬೇಕಾದರೆ ಎಷ್ಟು ವರ್ಷ ಹತ್ತೀತೆಂಬ ನಿಯಮವಿಲ್ಲ. ಆ ಅವಧಿಯಲ್ಲಿ ವಹಿವಾಟಿ-ಕಾಯದೆ ಪ್ರಕಾರ ಆಸ್ತಿಯೆಲ್ಲ ಯಾರಿಗೋ ದಕ್ಕಾಗಿ ಹೋಗಬಹುದಿತ್ತು. ಲಕ್ಷಾಂತರ ಬೆಲೆಯ ಆಸ್ತಿಯ ಮೇಲಿ ಶೇಷಪ್ಪ ಕಣ್ಣಿಟ್ಟು ಉಚಿತವಾದ ಮಾರ್ಪಾಟು ಮಾಡಿದ್ದ.

ಗೋಪಾಳರಾಯನಿಗೆ ಸಮಾಧಾನವಾಗಲಿಲ್ಲ. “ತಾಲೂಕ ಕಚೇರಿಯಿಂದ ಬಂದ ಹುಕುಮು ನೀವು ಪಾಲಿಸಿಲ್ಲ. ನಿಮ್ಮ ಮನಸ್ಸಿಗೆ ಬಂದ್ಹಾಂಗ ವಾರಸಾ ಮಾಡಿಬಿಟ್ಟೀರಿ. ನಾಳೆ ಕೋರ್ಟಿಗೆ ಹೋದಾಗ ನಿಮ್ಮ ಗತಿ ಏನಾದೀತು ಅಂತ

ವಿಚಾರ ಮಾಡಿರೇನು?" ಎಂದು ಸಿಟ್ಟಿನಿಂದ ಅಸಡುಗಚ್ಚಿ ಕೇಳಿದ.

ಶೇಷಪ್ಪ ಇಂಥ ಸಿಟ್ಟಿಗೂ ವಿಚಲಿತನಾಗಲಿಲ್ಲ. ನಶ್ಯದ ಚಿಟಿಕೆಯನ್ನೇರಿಸಿ, ಕೈ ಚಲ್ಲಿ ಹೇಳಿದ: "ರಾಯರs, ರೆವ್ಹಿನ್ಯೂ ಖಾತೇದವರ ಕೆಲಸ ಎಷ್ಟು? ಪ್ರತ್ಯಕ್ಷ ಕಬಜಾ ಯಾರದದನೋ ಅವರ ಹೆಸರು ಹಚ್ಚೋದು. ಈಗನಸಾ ಜಮೀನು ಮನಿ ಎಲ್ಲಾ ಗಂಗಾಬಾಯಿ ಕಬಜಾದೊಳಗ ಅವ. ಅವರ ಹೆಸರು ಹಚ್ಚೀನಿ. ಹಕ್ಕಿನ ಚೌಕಶಿ ಮಾಡಿ ನಿರ್ಣಯ ಹೇಳಿ, ಕಬಜಾ ಕೊಡಿಸಲಿಕ್ಕೆ ಹುಕುಂ ಕೊಡೋದು ಕೋರ್ಟಿನ ಕೆಲಸ. ಇನ್ನ ಹುಕುಮು ಯಾಕ ಪಾಲಿಸಿಲ್ಲಾ ಅಂತ ನೀವು ಕೇಳತೀರಿ. ಹೇಳತೀನಿ: ಭೀಮರಾಯರು ವೈತ (ಮೃತ) ಆದದ್ದು ೧೩-೯-೧೮೯೭ರೊಳಗ. ನೀವು ರಂಗರಾಯರ ವಾರಸಾ ಮಾಡಲಿಕ್ಕೆ ಹುಕುಂ ಕೊಟ್ಟದ್ದು ೩೧-೩-೧೯೦೦ರೊಳಗ ಭೀಮರಾಯರು ಫೋತಿ ಆದ ಮೂರು ತಿಂಗಳ ದೊಳಗs ಗಂಗಾಬಾಯಿ ತರ್ಫೆ, ಆಕಿ ದತ್ತಕಮಗನ ಪಾಲನಕರ್ತಾ ಕೊಟ್ಟ ವರದೀ ಪ್ರಕಾರ ವಾರಸಾ ಮಾಡಿಬಿಟ್ಟಿದ್ದೆ. ಅದನ್ನ ತಪಾಸ ಮಾಡಿ ಮಾಮಲೇ ದಾರರು ಮಂಜೂರಿ ಮಾಡಿದ ಬಗ್ಗೆ ಸಹಿ ಮಾಡಿದ್ದು, ಆ ಶರಾ-ಕೋಷ್ಟಕ ದೊಳಗ ಅದ ನೋಡ್ರಿ." ಎಂದು ತನ್ನ ಕುಲಕರ್ಣಿಕಿ ಭಾಷೆಯಲ್ಲಿ ಹೇಳಿ ವಿಜ ಯದ ಆವೇಶದಿಂದ ಕಾಲು ಮಡಿಚಿಕೊಂಡು ಕುಳಿತ.

ಅಷ್ಟೊತ್ತಿಗೆ ದಾದಾ ಚಾವಡಿಯ ಕಟ್ಟಿಯನ್ನೇರಿ ಬರುತ್ತಿರುವದು ಶೇಷ ಪ್ಪನ ಕಣ್ಣಿಗೆ ಬಿತ್ತು. ಹುಸಿನಗೆ ನಗುತ್ತ ಎಂದಿಲ್ಲದ ಪ್ರೀತಿಯಿಂದ, "ಬಾರಪಾ ದಾದಾ. ಅನಾಯಾಸ ಬಂದಿ ನೋಡು. ನಾನು ನಿನ್ನ ಕರೆಕಳಿಸಬೇಕಂತ ಮಾಡಿದ್ದೆ. ನಿಮ್ಮ ನಾನಾಕಾಕಾನ ಖಾತೇಕ ಇದ್ದ ಆ ಮರಡಿ ಹೊಲಾನ, ಗೌಡರ ಹೇಳಿಕಿ ಪ್ರಕಾರ ನಿಮ್ಮ ಹೆಸರ್ಲೆ ನಾನು ಮಾಡಿದ್ದೆ. ಈಗ ನಿಮ್ಮಪ್ಪ ಆ ಜಮೀನು ಚಿಮಣಾನ ಹೆಸರ್ಲೆ ವಾರಸಾ ಹಚ್ಚರಿ ಅಂತ ಜವಾಬ ಕೊಟ್ಟು ಹೋದ. ನೀ ಏನಂತೀದಿ? " ಎಂದು ಕೇಳಿದ.

"ನನಗೇನ ಹೇಳಾಕ ತಿಳದೀತರಿ? ಚಿಮಣಾ ಕುಲಗೆಟ್ಟಾಳಂತ ಆಕಿ ಹೆಸರು ಹಚ್ಚಲಾಕ ಬರೂದಿಲ್ಲ ಅಂತ ಹೇಳಿದಿರೆಂತ, ಹೌದೇನು?" ಎಂದು ಸಿಟ್ಟಿಗೆ ಎದ್ದೇ ಕೇಳಿದ.

ದಾದಾನ ಉಗ್ರವಾದ ಮುಖವನ್ನು ನೋಡಿ ಶೇಷಪ್ಪನಿಗೆ ಫಕರುದ್ದೀನನ ಫಜೀತಿ ನೆನಪಾಯಿತು. ಅಂತಲೇ ದೇಶಾವರಿ ಮಾಡುತ್ತ "ಛೆ ಛೆ! ಅಂಥಾ

ಮಾತಾಡಿದವರ ಬಾಯಾಗ ಹುಳಾ ಬೀಳಲಿ. ಶಂಕರಪ್ಪಗೌಡರು ಆ ಜಮೀನು ನಿನಗs ಆಗಲಿ ಅಂದಿದ್ದರು ಅಂತ ನಾ ಹೆಸರು ಹಚ್ಚಿದೆ. ಬ್ಯಾಡಾ ಅಂದರ ಈಗ ಜಮುಣಾನ ಹೆಸರ್ಲೆ ವಾರಸಾ ಹಚ್ಚಿ ಸಾಹೇಬರ ಮಂಜೂರಿ ಮಾಡಸತೇನಿ. ನೀನು ವಿಚಾರ ಮಾಡಿ ಏನಂಬೂದು ಹೇಳಿಬಿಡು" ಎಂದು ತನಗೇನೂ ಸಂಬಂಧ ವಿಲ್ಲವೆಂಬಂತೆಯೇ ಮಾತಾಡಿಬಿಟ್ಟ.

"ಅದರಾಗ ವಿಚಾರ ಮಾಡೂದೇನೈತರಿ? ನಮ್ಮ ಅಪ್ಪ ಹ್ಯಾಗ ಹೇಳ್ಯಾನ ಹಾಗ ಬರದಬಿಡರಿ" ಎಂದಿಷ್ಟು ಹೇಳಿ ದಾದಾ ಚಾವಡಿಯಿಂದ ಹೊರಟ.

ಕೂಡಿದ ಜನರಿಗೆ ದಾದಾ ವ್ಯರ್ಥವಾಗಿ ತನ್ನ ಪಾಲಿನ ಹೊಲವನ್ನು ಕಳೆದು ಕೊಳ್ಳುತ್ತಿರುವನೆಂದೆನಿಸಿತು. ಕೆಲವರಂತೂ ಚಡಪಡಿಸಿದರು. ಜೈನರ ಜಿನ್ನಪ್ಪ ಎದ್ದು "ಲೇ ದಾದಾ, ಮಳ್ಳುಖೋಡಿ ಬಾ ಇಲ್ಲೆ" ಎಂದು ಕೂಗಿದ.

ಅವಸರದಿಂದ ಹೊರಟಿದ್ದ ದಾದಾ ತಡೆದು, "ಕಾಕಾ, ನನಗ ಸವಡ ಇಲ್ಲ ಈಗ. ಶ್ಯಾಮರಾಯರ ಕಡೆ ಇಂದುಪುರದ ಸ್ವಾರ ಬಂದಾನು. ಗಡಾನ ಬರಾಕ ಹೇಳಿಕಳಿಸ್ಯಾರು; ಅಲ್ಲೆ ಹೊಂಟೇನಿ." ಎಂದು ನುಡಿದವನೇ ವಾಡೆಯ ಕಡೆಗೆ ಮುಖ ಮಾಡಿ ಬಿರಬಿರನೆ ಹೊರಟುಬಿಟ್ಟ.

ಹೊತ್ತು ಮುಳುಗಿದ್ದರಿಂದ ಚಾವಡಿಯ ಮುಂದಿದ್ದ ಗುಂಪೆಲ್ಲ ಕರಗಿತು. ವಾಲೀಕಾರರು ಹಚ್ಚಿದ ದೀಪಗಳಿಂದ ಚಾವಡಿ ಸ್ವಲ್ಪಮಟ್ಟಿಗಾದರೂ ಬೆಳಗಿತು. ಈ ಅವಧಿಯಲ್ಲಿಯೇ ಗೋಪಾಳರಾಯ ಒಳಗೆ ಹೋಗಿ ಮಾಮಲೇದಾರರಿವರು ಶೇಷಪ್ಪನ ವಿಷಯವನ್ನೆಲ್ಲ ಅರಿಕೆಮಾಡಿಕೊಂಡಿದ್ದ. ಶೇಷಪ್ಪ ಇನ್ನೇನು ಎದ್ದು ಮನೆಗೆ ಹೋಗಬೇಕೆನ್ನುವಷ್ಟರಲ್ಲಿ ಕೆಂಪುರುಮಾಲು, ಡಗಲಿಗಳಿಂದಲಂಕೃತನಾದ ಉಸ್ಮಾನಸಾಹೇಬರು ಕರೆಯುತ್ತಾರೆಂದು ಹೇಳಲು, ಶೇಷಪ್ಪ ಮತ್ತೆ ತಿರುಗಬೇಕಾಯಿತು.

ಅದರೆ ಶೇಷಪ್ಪ ಇದೆಲ್ಲವನ್ನೂ ಮೊದಲು ನಿರೀಕ್ಷಿಸಿಯೇ ಇದ್ದ. ಸಾಹೇಬರೇನೂ ಮತ್ತೆ ಅದನ್ನೇ ಹಾಡಿದ. ಮಾಮಲೇದಾರರಿಗೂ ಇಂಥ ಕುಲಕರ್ಣಿ ಗಂಟುಬಿದ್ದದ್ದನ್ನು ನೋಡಿ ಬೆರಗುಂಟಾಯಿತು. ಹೇಳಬೇಕಾದುದನ್ನೆಲ್ಲ ಅವರೂ ಹೇಳಿ ಸುಮ್ಮನಾದರು. ಲಕ್ಷ್ಮಣನ ವಾರಸಾ ರದ್ದುಮಾಡಿದ್ದಕ್ಕೆ ತಾನು ಒಪ್ಪಿಕೊಂಡದ್ದಾಗಿ ಶೇಷಪ್ಪನೂ ಹೇಳಿದ. ಅದರೆ ದೇಶಪಾಂಡೆಯವರ ಪ್ರಕರಣ ಕೋರ್ಟಿಗೆ ಹೋದ ಮೇಲೆಯೇ ನಿರ್ಣಯವಾಗಬೇಕೆಂದು ಹೇಳಿಬಿಟ್ಟ.

:: ೨೯ ::

ದೇಶಪಾಂಡೆ ಭೀಮರಾಯರ ದತ್ತಕ ಮಗನಾದ ರಂಗರಾಯನ ವಾರಸಾ ಮಾಡದೆ, ಗಂಗಾಬಾಯಿಯ ವಾರಸಾ ಮಾಡಿದ ಸುದ್ದಿ ಊರೊಳಗೆ ಹಬ್ಬುವದಕ್ಕೇನೂ ತಡವಾಗಲಿಲ್ಲ. ಮರೆತು ಹೋದ ಪ್ರಕರಣವೊಂದು ಮತ್ತೆ ಬಯಲಿಗೆ ಬಂದಂತಾಯಿತು. ಪಾದಳ್ಳಿಯ ಇತ್ತೀಚಿನ ಹುಡುಗರಿಗೆ ದೇಶಪಾಂಡೆ ಮನೆತನದ ವಿಷಯವಾಗಿ ಏನೂ ಗೊತ್ತಿರಲಿಲ್ಲ. ಅವರ ಮುಚ್ಚಿದ ವಾಡೆಗೆ 'ದೇಶಪಾಂಡೆಯವರ ವಾಡೆ' ಎಂಬ ಹೆಸರನು ಬಿಟ್ಟರೆ ಅವರೇನೂ ಅರಿಯರು. ಆದರೆ ಗೋಪಾಳರಾಯ ವಾರಸಾ-ರಜಿಸ್ಟರದ ತಪಾಸಣೆಯ ಕಾಲಕ್ಕೆ ಎತ್ತಿದ ಆಕ್ಷೇಪದಿಂದ ಊರ ತುಂಬ ಅದೇ ಮಾತಾಗಿ ಹಳೆಯ ಕತೆ ಮತ್ತೆ ಜನಜನಿತವಾಗಿ ಹರಡಿತು.

ಶೇಷಪ್ಪ ಹೇಳಿದಂತೆ ಗಂಗಾಬಾಯಿ ಯಾರನ್ನೂ ದತ್ತಕ ತೆಗೆದುಕೊಂಡಿರಲಿಲ್ಲ; ಕೃಷ್ಣರಾಯನ ಮಗನನ್ನು ದತ್ತಕ ತೆಗೆದುಕೊಂಡಿರುವಳೆಂಬ ಮಾತಂತೂ ಶುದ್ಧ ಸುಳ್ಳಿನ ಕಂತೆಯಾಗಿತ್ತು. ಕೃಷ್ಣರಾಯ ಶೇಷಪ್ಪನ ಷಡ್ಡಕನಾಗಬೇಕು. ಅವನ ಮಗನನ್ನು ಗಂಗಾಬಾಯಿಯ ದತ್ತಕ ಮಗನೆಂದು ಕತೆ ಹುಟ್ಟಿಸಿ ಅದನ್ನೇ ಸತ್ಯ ಸಂಗತಿಯನ್ನಾಗಿ ಮಾರ್ಪಡಿಸಬೇಕು; ಅದನ್ನೇ ಮುಂದೆ ಗಂಗಾಬಾಯಿ ಒಪ್ಪಿದರೆ ಅಪಸಾತಿನಲ್ಲಿ ಕೆಲಸ ಮುಗಿಸಬೇಕು. ಒಪ್ಪದಿದ್ದರೆ ಕೋರ್ಟಿನ ಡಿಕ್ರಿ ಪಡೆದು, ದೇಶಪಾಂಡೆ ಮನೆತನದ ವತನ ಜಮೀನುಗಳನ್ನೆಲ್ಲ ಎತ್ತಿಹಾಕಬೇಕೆಂದು ಶೇಷಪ್ಪನ ತಂತ್ರವಾಗಿತ್ತು. ಬಾಳಾಚಾರ್ಯರಿಗೆ ಈ ತಂತ್ರವನ್ನು ತಿಳಿಯಲು ತಡವಾಗಲಿಲ್ಲ. ಗಂಗಾಬಾಯಿ ಶಾಂತರಾಯರ ಮನೆಯಲ್ಲಿಯೇ ಈಗಲೂ ಇರುವ ಸಂಗತಿ ಅವರಿಗೆ ಗೊತ್ತಿತ್ತು. ಅಂತೆಯೇ ದೇಶಪಾಂಡೆ ಮನೆತನದ ಆಸ್ತಿಯ ಬಗ್ಗೆ ಅನ್ಯಾಯವಾಗಿ ಕಲಹವೆದ್ದು ಕೋರ್ಟು-ಕಚೇರಿಗಳಿಗೆ ಎಡತಾಕಿ, ಊರಲ್ಲಿ ಪಕ್ಷ-ಪಂಗಡಗಳೇಳಬಹುದೆಂಬ ಭೀತಿ ಅವರನ್ನು ಆವರಿಸಿತು.

ಮಾಮಲೇದಾರರು ಕನ್ಯಾಗತ-ಶ್ರಾದ್ಧಕ್ಕಾಗಿ ತಮ್ಮನ್ನು ಕರೆಸಿದಾಗ ಈ

ಕುತಂತ್ರವನ್ನೆಲ್ಲ ತಾವು ಬಯಲಿಗೆಳೆಯಬಹುದೆಂದು ಅವರು ಭಾವಿಸಿದರು. ಆದರೆ ಮರುದಿನ ಮಾಮಲೇದಾರರಿಂದ ಕರೆಯೇನೂ ಬರಲಿಲ್ಲ. ನಾರಾಯಣಾಚಾರಿ ಶೇಷಪ್ಪನಿಗೆ ಹೇಳಿಕೊಂಡು ಮಾಮಲೇದಾರರ ಪೌರೋಹಿತ್ಯವನ್ನು ಹಚ್ಚಿಕೊಂಡಿದ್ದ. ಅವನ ಹೆಂಡತಿ ಸಾಲೆಯಿಂದ ಮೊರದ-ಬಾಗಿನವನ್ನು ಹೊತ್ತುಕೊಂಡು ಮನೆಗೆ ಹೊರಟದ್ದನ್ನು ಬಾಳಾಚಾರ್ಯರು ನೋಡಿದರು. ಆಗಲೇ ಅವರಿಗೆ ತಮಗೆ ಬರಬೇಕಾಗಿದ್ದ ಪೌರೋಹಿತ್ಯ ನಾರಾಯಣಾರಿಗೆ ಹೋಗಿರಬಹುದೆಂದು ತಿಳಿಯಿತು. ಬಾಳಾಚಾರ್ಯರಿಗೆ ಇದರಿಂದ ದುಃಖವೇನೂ ಆಗಲಿಲ್ಲ. ಬರಗಾಲದ ಉಪವಾಸ-ವನವಾಸಗಳಲ್ಲಿ ಸವೆಯುತ್ತಿದ್ದ ಒಂದು ಮನೆತನಕ್ಕೆ ಉಪಕಾರವಾಯಿತೆಂದು ಸಂತೋಷವೇ ಆಯಿತು. ಆದರೆ ಇದರಿಂದ ಮಾಮಲೇದಾರರನ್ನು ಕಂಡು ಮಾತನಾಡುವ ಅವಕಾಶ ಮಾತ್ರ ತಪ್ಪಿದಂತಾಯಿತು. ಕರೆಯದೆ ತಾವಾಗಿಯೇ ಮಾಮಲೇದಾರರೆದುರು ಹೋಗುವದು ಅವರ ಗೌರವಕ್ಕೆ ಸಲ್ಲದ ಮಾತು. ಇದೇ ವಿಚಾರಗಳಲ್ಲಿಯೇ ಅವರು ಚಾವಡಿಯ ಮುಂದೆ ಹಾಯ್ದು ಹೊರಟರು.

ಚಾವಡಿಯ ಮುಂದೆ ಸುತ್ತಲಿನ ಹಳ್ಳಿಯ ಜನರೆಲ್ಲ ಸೇರಿದ್ದರು. ಮಾಮಲೇದಾರರ ಮುಂದೆ ನಡೆಯಲಿರುವ ಫಿರ್ಯಾದಿಗಳಲ್ಲಿ ಅವರೆಲ್ಲ ಸಾಕ್ಷಿ ಹೇಳಲು ಬಂದವರಾಗಿದ್ದರು. ಯಾರಾರದೋ ಭವಿತವ್ಯ ಅಲ್ಲಿ ನಿರ್ಣಯವಾಗಬೇಕಾಗಿತ್ತು. ಒಂದು ಕ್ಷಣ ಒಳಗೆ ಹೋಗಿ ಮಾಮಲೇದಾರರನ್ನು ಕಾಣಬೇಕೆಂದು ಆಚಾರ್ಯರಿಗೆ ಮನಸ್ಸಾಯಿತು. ಆದರೂ ಹಾಗೇನೂ ಮಾಡದೆ ಚಾವಡಿಯನ್ನು ದಾಟಿ ಜಾಗೀರದಾರರ ವಾಡೆಗೆ ಬಂದರು.

ಅಲ್ಲಿಯೂ ಜನಸಮೂಹ ಸೇರಿತ್ತು. ಶ್ಯಾಮರಾಯ ಯಾರದೋ ಮಾರ್ಗಪ್ರತೀಕ್ಷೆಯನ್ನು ಮಾಡುತ್ತಿರುವಂತೆ ತೋರಿತು. ಅವನ ಸಮ್ಮುಖದಲ್ಲಿ ದಾದಾ, ಲಕ್ಷ್ಮಣ ಹಾಗೂ ಜಾಗೀರದಾರರ ಕೈತರು ಕುಳಿತಿದ್ದರು. ಬಾಳಾಚಾರ್ಯರು ಬಂದೊಡನೆಯೇ ನಮಸ್ಕಾರ-ಚಮತ್ಕಾರಗಳಾದವು. "ಏನಪಾ ಶ್ಯಾಮರಾಯಾ, ಊರಾಗ ಎಲ್ಲಿ ನೋಡಿದರೂ ಜನರು ಗುಂಪುಗುಂಪಾಗಿ ಕೂತಾರಲ್ಲ? ಚಾವಡಿ ಮುಂದನೂ ಮಂದಿ ಇತ್ತು; ಇಲ್ಲ್ಯೂ ಮಂದಿ ಕೂತಾರ. ಹಾದಕ್ಕೇ ಊರಾಗ ನಡದದ್ದರ ಏನು?" ಎಂದು ಆಚಾರ್ಯರು ಪ್ರಶ್ನೆಮಾಡಿದರು. ಶ್ಯಾಮರಾಯ ಅದಕ್ಕೇನೂ ಉತ್ತರ ಕೊಡದೆ, ಇಂದುಪುರದ ಮಹಾರಾಜರಿಂದ ಬಂದ ಸ್ವಾರನು ತಂದಿದ್ದ ಪತ್ರವನ್ನು ಅವರ ಮುಂದೆ ಹಿಡಿದನು. "ಇದೇನು ಓದಿ ನೋಡಿ

ಲಿಪಿ! ನನಗ ಓದಲಿಕ್ಕೆ ಬರೂದುಲ್ಲ. ನೀನs ಸಾರಾಂಶ ಹೇಳಿಬಿಡಬಾರದs?" ಎಂದರು ಆಚಾರ್ಯರು.

ಶ್ಯಾಮರಾಯ ಎಲ್ಲ ವೃತ್ತಾಂತವನ್ನು ನಿವೇದಿಸಿದ: "ಇನ್ನು ನಾಲ್ಕೇ ದಿನಗಳಲ್ಲಿ ಇಂದುಪುರದ ಮಹಾರಾಜರು ಪಾದಳ್ಳಿಗೆ ಆಗಮಿಸಲಿದ್ದಾರೆ. ಬಾಪೂ ಸಾಹೇಬ ಇಂದುಪುರಕ್ಕೆ ಹೋಗಿ ಲಕ್ಷ್ಮೀಬಾಯಿಯ ಕಾಲು ಹಿಡಿದುಕೊಂಡು ಕ್ಷಮಾಪಣೆ ಕೇಳಿಕೊಂಡನಂತೆ. ಮಹಾರಾಜರು ಇಲ್ಲಿಗೆ ಬಂದಾಗ ಯಶವಂತ ರಾಯರೂ ಅವರ ಜೊತೆಗೆ ಬರಲಿದ್ದಾರೆ. ಪ್ರಾಂತಸಾಹೇಬರೂ ಅದೇ ಹೊತ್ತಿಗೆ ಪಾದಳ್ಳಿಯಲ್ಲಿ ಕ್ಯಾಂಪು ಮಾಡಲಿದ್ದಾರೆ.

ಅದೂ ಅಲ್ಲದ ತಾಬಡತೋಬ ಇಂದುಪುರಕ್ಕ ಬರಲಿಕ್ಕೆ ನನಗ ತಿಳಿಸ್ಯಾರ. ಬರಗಾಲದಾಗ ಉಪಾಸ ಬಿದ್ದ ಜನರಿಗೆ ಸಹಾಯಾ ಅಂತ ಇನ್ನೂರು ಚೀಲಾ ಜ್ವಾಳಾ ಕಳಿಸವರಿದ್ದಾರಂತ. ಅವನ್ನ ತರಲಿಕ್ಕೆ ರೈತರ ಗಾಡೀ ವ್ಯವಸ್ಥಾ ಮಾಡಿ ಕೊಂಡು ಬರಬೇಕಂತ. ಅದಕs ರೈತರನೆಲ್ಲ ಕರೆಸಿದ್ದೆ. ಅಷ್ಟರೊಳಗs ನೀವೂ ಬಂದಿರಿ, ನೆಟ್ಟಗಾತು." ಎಂದು ಶ್ಯಾಮರಾಯ ಎಲ್ಲವನ್ನೂ ಅರಿಕೆಮಾಡಿಕೊಂಡ.

ಕಾಳು ತರಲಿಕ್ಕೆ ಸುಮಾರು ನಾಲ್ವತ್ತು ಗಾಡಿಗಳಾದರೂ ಬೇಕಾಗಿತ್ತು. ಇದಕ್ಕಾಗಿ ರೈತರ ಅಭಿಪ್ರಾಯವನ್ನು ಕೇಳಿಕೊಳ್ಳುವದು ಅಗತ್ಯವಿತ್ತು. ಅದರ ಬಗ್ಗೆ ಬಾಳಾಚಾರ್ಯರು ಎದುರಿಗೆ ನಿಂತ ಕಾಶೀಮಸಾಹೇಬನನ್ನೇ ಕೇಳಿದರು. ಕಾಶೀಮಸಾಹೇಬ ಜಾಗೀರದಾರರ ಭೂಮಿಯನ್ನು ತಲೆತಲಾಂತರದಿಂದ ಲಾವ ಣಿಗೆ ಸಾಗುಮಾಡುತ್ತ ಬಂದಿದ್ದ ದೊಡ್ಡ ರೈತ. ವಾಡೆಯ ಬಗ್ಗೆ ಅವನ ಅಭಿ ಮಾನ ಯಾವಾಗಲೂ ಜಾಗೃತವಿರುತ್ತಿತ್ತು.

"ಮಾರಾಜರು ಬಡ ಜನರಿಗೆ ಕಾಳ ಹಂಚೂ ಮುಂದ, ಅದನ್ನ ತಂದು ಊರಿಗೆ ಮುಟ್ಟಿಸದಿದ್ದರ ಪಾಡ ಕಾಣಾಕಿಲ್ಲರಿ. ಆದರ ಜಡಿಮಳಿ ಬಿದ್ದು ಭೂಮಿ ಹಸಿ ಆಗೇತಿ. ಮುಂಗಾರಿ ಬಿತ್ತೂ ತತಿ ಬಂದಾಗ ಭೂಮಿಗೆ ಬೀಜಗಾಣಿಸ ದಿದ್ದರ ಭೂಮಿತಾಯಿಗೆ ಎರಡ ಬಗದ್ಹಾಂಗ ಆಗಾಕಿಲ್ಲರೇ ? ಅದಕ ಮಡ್ಡಿಭೂಮಿ ಇದ್ದವರು ಬಿತ್ತೂ ಕೆಲಸಾ ಮಾಡಕೋಳಲಿ. ಎರಿ ಭೂಮಿಯವರು ಗಾಡಿ ಹೂಡಿ ಕೊಂಡು ಕಾಳ ತರಲ್ರಿ." ಎಂದ ಕಾಶೀಮಸಾಹೇಬ.

ಕೂಡಿದ ರೈತರಲ್ಲಿ ಕೆಲವರಿಗೆ ಇದು ಸರಿ ಬರಲಿಲ್ಲ. ಕಾಶೀಮಸಾಹೇಬನದು ಮಡ್ಡಿ-ಜಮೀನು. ಅವನು ಬಿತ್ತಲಿಕ್ಕೆಂದು ಊರೊಳಗೇ ಉಳಿದರೆ ಇಂದುಪುರಕ್ಕೆ

ಯಾರೂ ಹೋಗಲಿಕ್ಕಿಲ್ಲ. ನಿಜವಾಗಿ ನೋಡಿದರೆ ಯಾರಿಗೂ ಹೋಗಲು ಅವಕಾಶ ವಿರಲಿಲ್ಲ. ಜಮೀನಿನ ಕೆಲಸ ಯಾರಿಗೆ ಬಿಟ್ಟದ್ದು? ಸಾಮಾನ್ಯವಾಗಿ ಕೆಲವರು ಈ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.

ರೈತರು ಹೇಳಿದ ಅಡಚಣಿಗಳನ್ನು ಕೇಳಿ ಶ್ಯಾಮರಾಯನಿಗೆ ಒತ್ತಾಯ ಮಾಡಲು ಮನಸ್ಸು ಬರಲಿಲ್ಲ. ಆದರೂ ಊರಗಾರಿಕೆಯ ಕೆಲಸದಲ್ಲಿ ಸಹಾಯ ಮಾಡದಿದ್ದರೆ ಮಹಾರಾಜರು ಏನೆಂದು ತಿಳಿದುಕೊಳ್ಳಬಹುದೆಂದು ಅವನ ವಿಚಾರ. ರೈತರು ಹೇಳಿದ್ದರಲ್ಲಿ ಅರ್ಥವಿಲ್ಲವೆಂದಲ್ಲ. ಆದರೆ ಮಹಾರಾಜರು ಪುಕ್ಕಟೆ ಕಾಳು ಕೊಡುತ್ತೇವೆಂದಾಗ ಅವನ್ನು ತಂದು ಹಾಕುವ ಸೌಜನ್ಯವನ್ನೂ ತೋರದಿದ್ದರೆ ಹೇಗೆ? ಬಾಳಾಚಾರ್ಯರೂ ಈ ಸಮಸ್ಯೆಯಲ್ಲಿ ದಾರಿ ಹುಡುಕುವ ಪ್ರಯತ್ನ ಮಾಡಿದರು. ಅವರ ಅಭಿಪ್ರಾಯ ಹೀಗೆ: ಕಾಳು ತರುವ ಕೆಲಸ ಜಾಗೀರದಾರರ ರೈತರೊಬ್ಬರಿಗೇ ಸೇರಿದ್ದಲ್ಲ. ಊರ ರೈತರೆಲ್ಲ ಕೂಡಿ ಮಾಡ ಬೇಕಾದ ಕೆಲಸವದು. ಆದ್ದರಿಂದ ಯಾರಿಗೆ ಭೂಮಿಯ ಕೆಲಸ ಅಡ್ಡ ಬಾರದೆಯೋ ಅವರು ಹೋಗುವದು ಬೇಡ. ಉಳಿದವರು ಹೊರಡಲಿ. ಅವರ ಗಾಡಿಗೆ ಬಾಡಿಗೆ ಯೆಂದು ತಂದ ಕಾಳನ್ನೇ ಹಂಚಿಬಿಡಬೇಕು. ಬಾಳಾಚಾರ್ಯರ ಅಭಿಪ್ರಾಯ ಎಲ್ಲ ರಿಗೂ ಸಮ್ಮತವಾಯಿತು. ಬೆಳಕು ಹರಿಯುವದರೊಳಗೆ ಗಾಡಿಗಳು ಸಿದ್ಧವಾಗಿರ ಬೇಕೆಂದು ಶ್ಯಾಮರಾಯ ಆಜ್ಞೆ ಮಾಡಿದ. ಕಾಶೀಮಸಾಹೇಬನೇ ಆ ಜವಾಬ್ದಾರಿ ಯನ್ನೂ ಹೊರಬೇಕೆಂದು ಗೊತ್ತಾಯಿತು. ಮಹಾರಾಜರನ್ನು ಸ್ವಾಗತಿಸುವ ಸಿದ್ಧತೆ, ಅವರು ಉಳಿದುಕೊಳ್ಳಲು ಮಾಡಬೇಕಾದ ಏರ್ಪಾಡು ಇವೆಲ್ಲವುಗಳ ಬಗ್ಗೆ ಚರ್ಚೆಯಾಗಿ ಎಲ್ಲರೂ ತಂತಮ್ಮ ಮನೆಗಳಿಗೆ ನಡೆದರು.

ಚಾವಡಿಯ ಮುಂದೆ ಹಾಯ್ದು ಬಾಳಾಚಾರ್ಯರು ಇನ್ನು ತಮ್ಮ ಮನೆಗೆ ಹೋಗುವವರು, ಅಷ್ಟರಲ್ಲಿ ನಾಲ್ಕಾರು ಜನರು ಕೂಡಿ ಇವರ ಕಡೆಗೇ ಬರುತ್ತಿರು ವದು ಕಂಡಿತು. ವಂದನೆ ಮಾಡಿದವರಲ್ಲಿ ಹಾವನೂರಿನ ಕಲ್ಲನಗೌಡನ ಗುರುತು ಬಾಳಾಚಾರ್ಯರಿಗೆ ತಟ್ಟನೆ ಹತ್ತಿತು. "ಯಾಕ ಗೌಡರ, ನಮ್ಮ ಊರ ಹುಡು ಗನ್ನ ಜೇಲಿಗೆ ಅಟ್ಟಲಿಕ್ಕೆ ಇಷ್ಟು ದೂರ ಬರಬೇಕಾತೇನು ?" ಎಂದು ಬಾಳಾ ಚಾರ್ಯರು ಕೇಳದೆ ಇರಲಿಲ್ಲ.

ಕಲ್ಲನಗೌಡ ಮುಗುಳುನಗೆ ನಕ್ಕು "ನೀವೆಲ್ಲಾ ಹಿರ್ಯಾರು ದಾದಾನ ಬೆನ್ನಿಗೆ ಇದ್ದಾಗ ನಮ್ಮಿಂದೇನಾದೀತರಿ ? ನೀವು ಹಾಕಿದ ಉಗಳು ನಮ್ಮ ತಂದಿ ದಾಟಲಿಲ್ಲ.

ನಾನೂ ಅಂತವನ ಮಗನಽ ಅಲ್ಲೇ? ನಿಮ್ಮ ಮಾತು ಹ್ಯಾಗ ಮೀರೂದರಿ?" ಎಂದು ಉತ್ತರ ಕೊಟ್ಟು ಗೌಡ ಆಚಾರ್ಯರ ಬೆನ್ನು ಹಿಂದೆ ಅವರ ಮನೆಗೇ ನಡೆದ. ಬಹುಶಃ ಇವರೆಲ್ಲ ಸಂಧಾನಕ್ಕೇ ಬಂದಿರಬಹುದೆಂದು ಆಚಾರ್ಯರಿಗೆ ಹೊಳೆಯಿತು. ಆಗ ಶ್ಯಾಮರಾಯನನ್ನೂ ಮನೆಗೆ ಬರಲು ಆಗ್ರಹಪಡಿಸಿ ಆಚಾರ್ಯರು ಎಲ್ಲರನ್ನೂ ಕೂಡಿಕೊಂಡು ತಮ್ಮ ಮನೆಗೆ ಬಂದರು. ಅಲ್ಲಿ ಕಲ್ಲನಗೌಡನೇ ಮೊದಲು ಮಾತು ತೆಗೆದ. "ಖಟ್ಲೆ ಹಾಕೂ ಮನಸು ಏಟೂ ಇರಲಿಲ್ಲರಿ ನಮಗ. ಆ ನಿಮ್ಮ ಪಡವಯ್ಯ ನೋರಽ ಬಂದು ಈಟಿಲ್ಲ ಗೊಂದಲಾ ಹಾಕಿದರು. ಮತ್ತೀಗ ಅವರಽ ಪಾದಳ್ಳಿ ಬಿಟ್ಟಮ್ಯಾಗ ಖಟ್ಲೆ ನಡಿಸಿ ಏನ ಮಾಡೂದೈತಿರಿ? ಅದಕ ಅರ್ಜಿ ಹಿಂದ ತಕ್ಕೊಣಾಕ ಅಂತ ಬಂದೀವರಿ." ಎಂದ.

"ಮುತ್ತಿನಂತಾ ಮಾತಾಡಿದಿ ನೋಡು ಗೌಡಾ. ಆದರ ಅರ್ಜಿ ಹಿಂದ ತಗೋಳಿಕ್ಕೆ ನಿಮ್ಮೂರ ಮಂದಿ ಒಪ್ಪ್ಯಾರ ಹೌದಲ್ಲೋ?" ಎಂದರು ಬಾಳಾಚಾರ್ಯರು.

"ನಮ್ಮೂರಾಗ ಯಾರಿಗೆ ಬೇಕಾಗೇತಿರಿ ಖಟ್ಲೆ ನಡಸೂದು? ನಿಮ್ಮೂರವರು ಬಂದಽ ಫಿರ್ಯಾದಿ ಮಾಡಾಕ ಹೇಳಿದವರು. ಈಗ ಫಿರ್ಯಾದಿ ಹಿಂದ ತಗೊಣ್ಣಾಕೂ ನಿಮ್ಮೂರವರಽ ಅಡ್ಡ ಹಚ್ಚ್ಯಾರರಿ. ದಾದಾ ಊರಿಗೇ ಒಜ್ಜಾ ಆಗ್ಯಾನು, ಫಿರ್ಯಾದಿ ನಡಿಸೇ ತೀರಬೇಕು ಅಂತ ಹಟಾ ಹಿಡಿದಾರರಿ. ಅಂತಾದರಾಗ ಏನ ಮಾಡಬೇಕರಿ?" ಕಲ್ಲನಗೌಡ ಹೊಸ ಸಮಸ್ಯೆಯನ್ನೊಂದಿಟ್ಟ.

"ನಮ್ಮೂರವರಽ ಹೇಳತಾರ? ಯಾರಪಾ ಅವರು?" ಆಚಾರ್ಯರು ಆತಂಕಕ್ಕೊಳಗಾಗಿಯೇ ಕೇಳಿದರು.

"ನಮಗ ಹಾದ್ಯಾಗ ಹಳ್ಳದ ಹತ್ತರ ಬಿರಾದಾರ ಗೌಡರ ಪೈಕಿ ನಾಲ್ಕಾರು ಜನಾ ಗಂಟುಬಿದ್ದು, ಖಟ್ಲೆ ನಡಿಸಿದರ ಊರ ತುಂಬ ಸಾಕ್ಷಿ ಕೊಡಸತೇವು ಅಂತ ಹೇಳಿದರರೀ" ಎಂದು ಕಲ್ಲನಗೌಡ ಹೇಳಿದ.

ಕಾರಹುಣ್ಣಿವೆಯ ಕರಿಯ ಸೇಡನ್ನು ತೀರಿಸಿಕೊಳ್ಳಲು ಗೌಡಿತಿ ಈ ತಂತ್ರವನ್ನು ಹೂಡಿರಬೇಕೆಂದು ಆಚಾರ್ಯರಿಗೆ ಸಂಶಯ ಬಂತು. ಆ ಸಂಶಯವನ್ನು ಆಡಿಯೂ ತೋರಿಸಿದರು. ಕೂಡಲೆ ಕಲ್ಲನಗೌಡ, ಪಾರ್ವತೆವ್ವ ತನ್ನನ್ನು ಕರೆಸಿ ಚೌಕಶಿಯನ್ನು ಮುಂದುವರಿಸಲು ಕೇಳಿಕೊಂಡಳೆಂದು ಹೇಳಿಯೇ ಬಿಟ್ಟ. ಆಚಾರ್ಯರು ಬೆಚ್ಚಿದರು.

"ಗೌಡಾ, ನೀ ವಯಸ್ಸಿನಿಂದ ಚಿಕ್ಕಾವ ಆದರೂ ದೊಡ್ಡ ಮನೆತನದಾಗ

ಹುಟ್ಟಿದಾವ ಇದ್ದೀ. ನನ್ನ ವಿಚಾರ ಕೇಳಿಕೊಂಡು ಅದರ್‍ಹಾಂಗ ನಡಿಯೂ ಮನ ಸ್ಸಿದ್ದರ ಹೇಳು. ಸುಮ್ಮನ ಊರಾಗ ಮಂದಿ ಏನಂತಾರ ಅದನ್ನ ಕೇಳಿಕೊಂಡು ಮನಸ್ಸಿಗೆ ಬಂದ್ಹಾಂಗ ಮಾಡತಿದ್ದರ ನಾ ಹೇಳೂದುಲ್ಲ. ಅದನ್ನ ಕೇಳೋದು ನಿಮಗೂ ಒಳ್ಳೇದಲ್ಲ" ಎಂದರು.

"ನೀವು ಹಾಕಿದ ಉಗುಳು ಅವರ ತಂದಿನೂ ದಾಟಿಲ್ಲ, ಅವರೂ ದಾಟೂ ದುಲ್ಲ ಅಂತ ಗೌಡರು ಮೊದಲs ಹೇಳ್ಯಾರಲ್ಲ ಆಚಾರs?" ಎಂದು ಶ್ಯಾಮರಾಯ ನಡುವೇ ಹೇಳಿದ.

ಕಲ್ಲನಗೌಡ ಆ ಮಾತನ್ನು ಒಪ್ಪಿಕೊಂಡಿದ್ದ. ಗೌಡಿತಿ ಹೇಳಿದಾಗಿನಿಂದ ಅವರ ಮನಸ್ಸು ಅನುಮಾನಕ್ಕೊಳಗಾಗಿತ್ತು. ಅಂತೆಯೇ ತಾನೀಗ ಅನುಸರಿಸ ಬೇಕಾದ ದಾರಿ ಯಾವದೆಂದು ಅವನು ಕೇಳಿಕೊಳ್ಳಬೇಕಾಗಿತ್ತು. ಆದಕ್ಕೆ ಶ್ಯಾಮ ರಾಯನೇ ಮೊದಲು ಉಪಾಯ ಸೂಚಿಸಿದ.

"ನೋಡ್ರಿ ಗೌಡರ, ಈಗ ನೀವು ಫಿರ್ಯಾದಿ ಹಿಂದ ತಕ್ಕೊಳ್ಳಿಕ್ಕೆ ಅರ್ಜಿ ಕೊಟ್ಟದ್ದು ಗೊತ್ತಾದರ ಗೌಡಿತಿ ಮತ್ತ ಅವರ ಪರಿವಾರ ಸಿಟ್ಟಿಗೇಳತಾರ. ಅದಕ ನೀವು ಆ ರೀತಿ ಅರ್ಜಿ ಕೊಡಬ್ಯಾಡ್ರಿ. ಫಿರ್ಯಾದಿ ಅರ್ಜಿ ಚೌಕಶಿಗೆ ಬಂದಾಗ ನೀವು ಹಾಜರ ಇರಬ್ಯಾಡ್ರಿ ತೀರ್ತು. ತಾವs ಫಿರ್ಯಾದಿ ಕಿತ್ತಿ ಹಾಕತಾರ. ಆಮ್ಯಾಲೆ ನಿಮ್ಮ ಮ್ಯಾಲೆ ಯಾರೂ ದೋಷ ಹೊರಸಲಿಕ್ಕೆ ಬರೂದುಲ್ಲ."

ಕಲ್ಲನಗೌಡ ಆಚಾರ್ಯರ ಮುಖವನ್ನು ನೋಡಿದ. ಅವರ ಅಭಿಪ್ರಾಯ ವನ್ನೂ ತಿಳಿದುಕೊಳ್ಳುವದು ಅವಶ್ಯವಾಗಿತ್ತು. ಅದಕ್ಕೆ ಆಚಾರ್ಯರು "ಕಾಯದೇದ ತೊಡಕು ನನಗೇನೂ ತಿಳಿಯೂದಿಲ್ಲ ಗೌಡಾ. ಶ್ಯಾಮರಾಯ ಹತ್ತೂರ ಕುಲಕರ್ಣಿಕಿ ಮಾಡಿದಾನಾ. ಅಂವಗs ಅದೆಲ್ಲಾ ಗೊತ್ತು. ನನಗ ನೀತಿ ಏನು ಹೇಳತದ ಅಷ್ಟs ಗೊತ್ತು. ಅಂವಾ ಹೇಳಿದ್ದು ನೀತಿಗೂ ಸರಿಯಾಗಿದ್ದರ ಹಾಂಗ ಮಾಡಲಿಕ್ಕೂ ಏನ ಅಡ್ಡೀ ಇಲ್ಲ." ಎಂದರು.

"ಹಾಗಾರ ನಾವೀಗ ತಿರಗಿ ಊರಿಗೆ ಹೊಂಟಬಿಡತೇವು. ಫಿರ್ಯಾದಿ ಹಾಜರ ಇಲ್ಲಾ ಅಂತ ಅರ್ಜಿ ಕಿತ್ತಿ ಹಾಕಿದರ ಪೀಡಾ ಕಡಥಾಂಗಾತು." ಎಂದ ಕಲ್ಲನಗೌಡ.

ಆ ಮಾತು ಕೇಳಿ ಆಚಾರ್ಯರಿಗೂ ಸಂತೋಷವಾಯಿತು. "ಊರೂರೊಳಗ ಕಡಮಾಡಾ ನಿಲ್ಲಸೂ ಹಾಂಗ ಪ್ರತಿ ಊರಿಗೆ ನಿನ್ನಂಥಾ ಗೌಡ ಇರಬೇಕು

ನೋಡು." ಎಂದರು.

"ಕಡದಾಡೂದು ಯಾವಗ ಬೇಕಾಗೇತಿರಿ. ಬೆಳಗಾದರ ನಮ್ಮೂರ ಜನಾ ಈ ಊರಿಗೆ ಹಾಲು-ಮಸರು ಮಾರಾಕ ಬರತಾರು. ನದಿ ದಾಟಲಾಕ ನಾವಿಗೆ ಬರತಾರು. ನಮ್ಮ ದನಾ ಮೇಯಲಾಕ ಬಿಟ್ಟರ ಹಳ್ಳಾ ದಾಟ ನಿಮ್ಮ ಬೂವ್ಯಾಗs ಇರತಾವು. ಕಡಿದಾಡಕೊಂತ ನಿಂತರ ದಿನದ ಯವಾರ ಹ್ಯಾಗ ಸಾಗಬೇಕರಿ?" ಎಂದಿಷ್ಟು ಹೇಳಿ ಕಲ್ಲನಗೌಡ ಹೊರಟ.

ಮಧ್ಯಾಹ್ನದ ಹನ್ನೊಂದು ಗಂಟೆಯಾಗಿತ್ತು. ಮಾಮಲೇದಾರರ ತೀರ್ಥ ಶ್ರಾದ್ಧವನ್ನು ಮಾಡಿಸಬೇಕಾಗಬಹುದೆಂದು ಆಚಾರ್ಯರು ಅಂದು ನಸುಕಿನಲ್ಲಿ ಸ್ನಾನಮಾಡಿರಲಿಲ್ಲ. ಈಗ ಹೊಳೆಗೆ ಹೋಗಲೇಬೇಕಾಯಿತು. ಊಟ ಮಾಡಿ ಇಂದುಪುರಕ್ಕೆ ಹೋಗುತ್ತೇನೆಂದು ಹೇಳಿ ಶ್ಯಾಮರಾಯ ತಾನೂ ಹೊರಟ.

ನದಿಯ ದಾರಿಯನ್ನು ಹಿಡಿದು ಸಾಗಿದಾಗ ಆಚಾರ್ಯರಿಗೆ ಕಲ್ಲನಗೌಡನ ಮಾತುಗಳು ಒಂದೊಂದೇ ನೆನಪಿಗೆ ಬರುತ್ತಿದ್ದವು. ನದಿ ಜನರಿಂದ ಕಿಕ್ಕಿರಿದು ತುಂಬಿತ್ತು. ಡೋಣಿಸಾಲಿನ ಜನರು ದೇವರ ಪಲ್ಲಕ್ಕಿಯನ್ನು ಹೊತ್ತುಕೊಂಡು ಕೃಷ್ಣಾಸ್ನಾನಕ್ಕೆಂದು ನಡೆದಿದ್ದರು. ಜಯಘೋಷ ಬಯಲಿನಲ್ಲಿ ದುಮುದುಮಿ ಸುತ್ತಿತ್ತು. ನದಿಯ ದಂಡೆಗುಂಟ ನೆರೆದ ಜನಸಮುದಾಯವನ್ನು ನೋಡಿಯೇ ಆಚಾರ್ಯರ ಮನಸ್ಸು ಉಕ್ಕೇರಿತು. ಹಾವನೂರಿನ ಕಲ್ಲನಗೌಡ ಸಹಜವಾಗಿಯೇ ಎಂಬಂತೆ ಆ ಮಾತನ್ನಾಡಿ ಹೋಗಿದ್ದ. ಆಚಾರ್ಯರ ಎದೆಯಲ್ಲಿ ಅದಿನ್ನೂ ಪ್ರತಿಧ್ವನಿಸುತ್ತಿತ್ತು. ಫಿರ್ಯಾದಿಯ ಅರ್ಜಿಯನ್ನು ಹಿಂತೆಗೆದುಕೊಳ್ಳಲು ಸಾಮಾನ್ಯವಾದ ಒಂದು ತತ್ವ ಅದು. ಆದರೂ ಅದನ್ನೂ ಕೂಡ ಜನ ಮರೆತಿದ್ದಾರೆ. ಆಚಾರ್ಯರ ಮನಸ್ಸು ಯಾಕೋ ಹಿಂದೆ, ಬಹಳ ಹಿಂದೆ ಓಡಿತು. ಮತ್ತೆಮತ್ತೆ ಅವರ ಮನಸ್ಸಿನಲ್ಲಿ ಅದೇ ವಿಚಾರ ಉಯ್ಯಾಲೆಯಾಡುತ್ತಿತ್ತು. ಸುಸೂತ್ರವಾದ ಬಾಳುವೆಯನ್ನು ಹದಗೆಡಿಸಲು ಪ್ರೇರೇಪಿಸುವ ದುಷ್ಟಶಕ್ತಿ ಯಾವದು?

ಹಾವನೂರಿನವರ ದ್ವೇಷದ ಕಿಡಿ ಆಕಸ್ಮಿಕವಾಗಿ ಹುಟ್ಟಿದ್ದಲ್ಲ. ಅದರ ಹಿಂದೆ ದ್ವೇಷದ ಇತಿಹಾಸವೇ ಹಬ್ಬಿಕೊಂಡಿತ್ತು. ಪಡದಯ್ಯ, ದಾದಾ, ಬಾಪೂ ಸಾಹೇಬ, ಗೌಡ, ಶೇಷಪ್ಪ, ಸ್ವತಃ ತಾವು ಇವರೆಲ್ಲರನ್ನು ಅದೃಶ್ಯವಾದ ದ್ವೇಷದ ಸರಪಳಿಯೊಂದು ಬಂಧಿಸಿತ್ತು. ಕಿಡಿ ಕಾಡಬೇಗೆಯಾಗುವಂತೆ ಯಾವುದೋ ಒಂದು ಕ್ರಿಯೆ ಪ್ರತಿಕ್ರಿಯೆಗಳ ಪರಂಪರೆಯನ್ನೇ ಸೃಷ್ಟಿಸಿತ್ತು. ಅದಕ್ಕೆ ಎಲ್ಲರೂ

ಪಾಲುಗಾರರೇ. ಈಗ ಅದು ಮತ್ತೊಂದು ಊರಿಗೂ ವ್ಯಾಪಿಸುವದರಲ್ಲಿದೆ. ಬಾಳು ಬೆಳೆಯಬೇಕಾದದ್ದೇ ಈ ರೀತಿಯಲ್ಲೇನೋ! ದ್ವೇಷದ ಶಕ್ತಿ ಇಷ್ಟು ಪ್ರಭಾವ ಶಾಲಿಯಾಗಿದ್ದರೆ, ಪ್ರೇಮದ ಶಕ್ತಿಯೂ ಪ್ರಭಾವ ಬೀರಲಾರದೇ? ಬಾಳಾಚಾರ್ಯರ ದೀರ್ಘ ಅನುಭವ, ಇಲ್ಲವೆಂದೇ ಹೇಳಿತು. ದ್ವೇಷಕ್ಕಿರುವ ಶಕ್ತಿ ಪ್ರೇಮಕ್ಕೆ ಇಲ್ಲವೇ ಇಲ್ಲ. ದ್ವೇಷ ಹುಟ್ಟಿದರೆ ಸುಡುವ ಬೆಂಕಿ; ಪ್ರೇಮ ಹುಟ್ಟಿ, ಬೆಳೆದು, ಬಾಳ ಬೇಕಾದ ಜೀವನ. ಅಂತಲೇ ಅದು ರೂಪುಗೊಳ್ಳುವದಕ್ಕೆ ದೀರ್ಘಾವಧಿ ಕಾಲ ಬೇಕು.

ಜೀವನದಲ್ಲಿ ಮೂಡುವ ಆಕಸ್ಮಿಕ ಅನಾಹುತಗಳಿಗೆಲ್ಲ ಕಾರಣ ಬಹಳ ದೂರವಾಗಿಯೇ ಇರುತ್ತವೇನೋ! ಮಳೆಗಾಲದಲ್ಲಿ ಎಲ್ಲಿಯೋ ಮಳೆಯಾದರೆ ಪಾದ ಳ್ಳಿಯ ಮಗ್ಗಲಿನ ನದಿಯಲ್ಲಿಯ ನೀರು ಉಕ್ಕೇರುವದನ್ನು ಆಚಾರ್ಯರು ಕಂಡಿ ದ್ದರು. ಆ ದೃಷ್ಟಿಯಿಂದ ಪಾದಳ್ಳಿಯ ಜೀವನದ ಸ್ಥಿತಿಯೂ ಹಾಗೆಯೇ ಇರಲಿಲ್ಲವೇ? ಯಾರೋ ಮಾಡಿದ ಕರ್ಮವೊಂದು ತೆರೆತೆರೆಯಾಗಿ ಹಬ್ಬಿ ಊರ ಜೀವನವನ್ನೇ ಕಲಕಿತ್ತು. ಇದರಿಂದ ಬಿಡುಗಡೆಯೆಲ್ಲಿ?

ಆಚಾರ್ಯರು ಚಿಂತಿಸುತ್ತಲೇ ಇದ್ದರು. ನದಿಯ ದಂಡೆಯ ಮೇಲಿನ ಜನರ ಕಡೆಗೆ ಕೂಡ ಅವರ ಲಕ್ಷ್ಯವಿರಲಿಲ್ಲ. ಅವರ ಮನಸ್ಸೆಲ್ಲ ನದಿಯ ಮೇಲೆಯೇ ಕೇಂದ್ರೀಕೃತವಾಗಿತ್ತು. ಹರಿಯುವ ನದಿಯ ಏರಿಳಿತಗಳು, ಹರಿವು-ಮುರಿವುಗಳು ಅವರ ಮನಸ್ಸಿನಲ್ಲಿ ಯಾವಾವವೋ ಭಾವನೆಗಳನ್ನು ಕೆರಳಿಸುತ್ತಿದ್ದವು. ಆಚಾ ರ್ಯರು ಭಾವನಾವಶರಾಗಿ ನಿಂತಲ್ಲಿಯೇ ನಿಂತುಬಿಟ್ಟಿದ್ದರು. ನದಿಯಲ್ಲಿ ಸ್ನಾನ ಕ್ಕೆಂದು ಇಳಿದ ಡೋಣಿಸಾಲಿನ ಜನರು ನಡುಮಟ ನೀರಲ್ಲಿ ನಿಂತು ಆಚಾರ್ಯರ ಸಂಕಲ್ಪಕ್ಕಾಗಿ ಕಾದಿದ್ದರು. ಆಚಾರ್ಯರು ಈಗ ಬರಬಹುದೆಂದು ಅವರು ನಿರೀಕ್ಷಿಸಿ ದ್ದರು. ಆದರೆ ಅವರ ನಿರೀಕ್ಷೆ ವಿಫಲವಾಯಿತು. ಆಚಾರ್ಯರು ನಿಂತಲ್ಲಿಂದ ಕದ ಲಿರಲಿಲ್ಲ. ಅವರ ಮನಸ್ಸು ಈ ಲೋಕದಲ್ಲೇ ಇರಲಿಲ್ಲ. ಕಲ್ಲಾಗಿ ನಿಂತ ಆಚಾರ್ಯ ರನ್ನು ನೋಡಿ ನದಿಯಲ್ಲಿಳಿದ ಜನರಿಗೆ ಗಾಬರಿ ಎನಿಸಿತು.

ಅಷ್ಟರಲ್ಲಿ ನಾರಾಯಣಾಚಾರಿ ನದಿಯ ದಂಡೆಗೆ ಬಂದ. ಅವನ ಕಣ್ಣಿಗೆ ಬಾಳಾಚಾರ್ಯರೇ ಮೊದಲು ಬೀಳಬೇಕೇ? ಮುಪ್ಪಿನ ಮುದುಕನಾದರೂ ತಮ್ಮ ಕಕ್ಕ ನಾಲ್ಕೆಂಟಾಣೆ ಹಣಕ್ಕೆ ಆಸೆಪಟ್ಟು ತನಗಿಂತಲೂ ಮೊದಲು ನದಿಗೆ ಬಂದಿರುವ ನಲ್ಲ ಎಂದು ಅವನ ಸಹನೆ ಮೀರಿತು. ಮನೆತನದ ಕಲಹದ ಮೂಲಕ ನಾರಾ

ಯಣಾಚಾರಿ ಬಾಳಾಚಾರ್ಯರೊಡನೆ ಕೆಲ ವರ್ಷಗಳಿಂದ ಮಾತಾಡುವದನ್ನು ಕೂಡ ಬಿಟ್ಟುಬಿಟ್ಟಿದ್ದ. ಆದರೆ ಈಗ ಎಲ್ಲಿಲ್ಲದ ಸಿಟ್ಟು ಬಂದಿತ್ತು. ಈ ಮುದುಕ ಬದುಕಿರುವ ವರೆಗೆ ತನಗೆ ಅಡ್ಡವಾಗುವದನ್ನು ಬಿಡುವದಿಲ್ಲವೆಂದು ವೃತ್ತಿದ್ವೇಷ ಕುದಿಯಿತು. ಆದ್ದರಿಂದ ತಡೆಯಲಾರದೆ "ಇಂಥಾ ಜಡಿಮಳಿ, ಗಾಳ್ಯಾಗ ಏನ ಅಷ್ಟೈಶ್ವರ್ಯ ಗಳಸಲಿಕ್ಕೇ ಅಂತ ಬೆಳಗು ಹರಿಯೂದರಾಗ ಬಂದ ನಿಂತೀಯಪಾ?" ಎಂದು ಅಣಕ, ದ್ವೇಷ ಬೆರೆತ ದನಿಯಲ್ಲಿ ಚೀರಿದ.

ಆಚಾರ್ಯರು ಈ ದನಿಯನ್ನು ಕೇಳಿಯೇ ಬೆಚ್ಚಿದರು. ಕಣ್ಣು ತೆರೆದು ನೋಡುತ್ತಾರೆ, ಸಾಕ್ಷಾತ್ ತಮ್ಮ ಪುತ್ರರತ್ನ ಸಿಟ್ಟಿನಿಂದಲೋ ಚಳಿಯಿಂದಲೋ ನಡಗುತ್ತ ನಿಂತಿದ್ದಾನೆ. ಅವನ ಮಾತೂ ಅವರಿಗೆ ಕೇಳಿಸಿದ್ದವು; ಅವುಗಳ ಹಿಂದಿನ ರೊಚ್ಚೂ ಅರ್ಥವಾಗಿತ್ತು. ಆದರೆ ಅವಕ್ಕೆ ಅದೇ ರೀತಿಯಲ್ಲಿ ಉತ್ತರ ಕೊಡುವ ಮನಸ್ಥಿತಿಯಲ್ಲಿ ಅವರಿರಲಿಲ್ಲ. "ಗಂಗಾಭಾಗೀರಥಿ ನಮ್ಮ ಉದ್ಧಾರಕ್ಕಂತ ಬಂದಾಗ ಆಕೀ ದರ್ಶನ ಸಿಕ್ಕರ ಸಾಕು. ಅದರಕಿಂತಾ ಹೆಚ್ಚಿನ ಅಷ್ಟೈಶ್ವರ್ಯ ಇನ್ನಾವದು?" ಎಂದು ಅರ್ಧ ತಮಗೇ ಎನ್ನುವಂತೆ ಮಾತಾಡಿದರು.

ನಾರಾಯಣಾಚಾರಿಯ ಸಿಟ್ಟು ಇನ್ನೂ ಹೆಚ್ಚಾಯಿತು. "ಮಾತು ಕೇಳಬೇಕು ನಮ್ಮ ಕಕ್ಕನವs! ಯಾಜ್ಞವಲ್ಕ್ಯ, ಜನಕ ಅವರೆಲ್ಲಾ ಇವನ ಮುಂದ ಝುಕ್ಕಿಸಬೇಕು. ಡೋಣಿಸಾಲಿನ ಜನರು ಸ್ನಾನಕ್ಕ ಬಂದ ಸುದ್ದಿ ಕೇಳಿ ಸತಗೋತ ನದೀಗೆ ಬಂದಾನ. ಮತ್ತ ಮ್ಯಾಲೆ ಗುಡ್ಡದಂಥಾ ಮಾತು ಹೇಳತಾನ. ಗಂಗಾಭಾಗೀರಥಿ ಸ್ನಾನಕ್ಕ ಬಂದಾನಂತ, ಸ್ನಾನಕ್ಕ! ಸಂಕಲ್ಪದ ದಕ್ಷಿಣೀ ಆಶಾಕ ಬಂದೀನಿ ಅಂತ ಹೇಳಿದ್ದರ ಮರ್ಯಾದಿ ಹೋಗತಿತ್ತs? ತಾ ಇದ್ದಾನ ವೈದಿಕ ಬ್ರಾಹ್ಮಣ, ಮತ್ತ ದೇಸಾಯಿ ದೇಶಪಾಂಡೇರ ಠೀವಿ ಇಟ್ಟಾನ!" ನಾರಾಯಣಾಚಾರಿಯ ಅವಿವೇಕತನಕ್ಕೆ ಸೀಮೆಯೇ ಇರಲಿಲ್ಲ. ಅವರು ಈಗಾಗಲೇ ನದಿಯ ನೀರಲ್ಲಿ ಅರ್ಧ ಮುಳುಗಿದ್ದರು. ನಾರಾಯಣಾಚಾರಿಯ ವೈದಿಕವೃತ್ತಿ ತಟ್ಟನೆ ಜಾಗೃತವಾಯಿತು. ನದಿಯಲ್ಲಿ ನಿಂತ ಜನರಿಗೆ "ಹೂಂ ಕೈಯೊಳಗ ನೀರು ಹಿಡೀರಿ........ಕೇಶವ, ನಾರಾಯಣ .. ....ಪ್ರಣವಸ್ಯ........ಪಾಪಾತ್ಮ ಪಾಪ ಸಂಭವಾ.... .. ಮೂಗು ಹಿಡಕೋಳ್ರಿ .........ನದಿಯೊಳಗ ಒಂದು ಬಟ್ಟಿನಿಂದ ವರ್ತುಲ ಮಾಡ್ರಿ........ಹೂಂ ಸ್ನಾನ ಮಾಡಿರಿ" ಎಂದು ಒಟಗುಟ್ಟುತ್ತ ಒಂದೇ ಉಸಿರಿನಲ್ಲಿ ಸಂಕಲ್ಪ ಹೇಳಹತ್ತಿದ.

ನದಿಯಲ್ಲಿ ಮುಳುಗಿ ಎದ್ದ ಜನರು ಒಬ್ಬೊಬ್ಬರಾಗಿ ದಡಕ್ಕೆ ಬಂದರು. ನಾರಾಯಣಾಚಾರಿಯ ಕೈಯಲ್ಲಿ ಒಂದೊಂದು ದುಡ್ಡಿನಂತೆ ಸಂಕಲ್ಪ ಹೇಳಿದ್ದಕ್ಕೆ ದಕ್ಷಿಣೆ ಇಟ್ಟರು. "ಹನ್ನೆರಡು ವರ್ಷಕ್ಕೊಮ್ಮೆ ಭಾಗೀರಥಿ ಬರತಾಳ. ಒಂದೊಂದಽ ದುಡ್ಡು ದಕ್ಷಿಣೀ ಕೊಡತೀರಾ?" ಎಂದು ಗದರಿದ.

ಜನರು "ಒಂದೊಂದಽ ದುಡ್ಡು ಯಾಕರಿ? ನಿಮಗೊಂದು ದುಡ್ಡರೀ ಮತ್ತ ಅಲ್ಲೆ ಒಬ್ಬರದಾರಲ್ರಿ, ಅವರಿಗೊಂದು. ತಲೀಗೆ ಎರಡೆರಡು ದುಡ್ಡು ಕೊಡತೀವಲ್ರಿ" ಎಂದು ವಾದ ಹಾಕಿದರು.

"ಸಂಕಲ್ಪ ಹೇಳಿದವ ನಾನು. ಅಂವಾ ಹೇಳಲಿಕ್ಕೆ ಬಂದಿಲ್ಲಾ ಅಂತ ತಾನಽ ಹೇಳಿದಾ, ಕೇಳಿದಿರಿಲ್ಲೋ? ಇಲ್ಲೇ ಎರಡೆರಡು ದುಡ್ಡು ಕೊಟ್ಟುಬಿಡ್ರಿ" ಎಂದು ನಾರಾಯಣಾಚಾರಿ, ತೃಪ್ತವಾಗದ ಆಸೆಯನ್ನು ವೃತ್ತಿಗೌರವದಲ್ಲಿ ಹುದುಗಿಸಿ ಆಜ್ಞೆ ಮಾಡಿದ.

ಆದರೆ ಜನ ಕೇಳಲಿಲ್ಲ. "ಅಧ್ಯಾಂಗ ಆದೀತರಿ? ನಿಮಗ ಬರಬೇಕಾದ ದುಡ್ಡು ನಿಮಗ. ಅವರಿಗೆ ಮುಟ್ಟೋ ದುಡ್ಡು ಅವರಿಗೆ" ಎಂದು ಲೆಕ್ಕಾಚಾರ ಹೇಳಿ ನಾರಾಯಣಾಚಾರಿಗೆ ಒಂದೇ ದುಡ್ಡು ಕೊಟ್ಟರು. ಆಮೇಲೆ ಪಂಜೆಯನ್ನು ಒಗೆಯುತ್ತ ನಿಂತಿದ್ದ ಬಾಳಾಚಾರ್ಯರ ಹತ್ತಿರ ಹೋಗಿ "ಆಚಾರೆಪ್ಪ, ಇಗಾ ನಿಮ್ಮ ದಕ್ಷಿಣಾ ತೊಗೋರಿ" ಎಂದು ಕೂಗಿದರು.

"ನಾನೇನು ಸಂಕಲ್ಪ ಹೇಳಿಲ್ಲಪಾ, ನನಗೇನು ಬ್ಯಾಡಾ" ಎಂದು ಆಚಾರ್ಯರು ಪಂಜೆ ಒಗೆಯುತ್ತಲೇ ಹೇಳಿದರು.

"ಈಗರೆ ಗೊತ್ತಾತಿಲ್ಲೊ ನಾ ಹೇಳಿದ್ದು. ಸಂಕಲ್ಪ ಹೇಳಿದವರಿಗೇ ಎರಡು ದುಡ್ಡು ಕೊಡಬೇಕಾಗತದ ಇಲ್ಲೆ" ಎಂದು ನಾರಾಯಣಾಚಾರಿಯ ಕೀಳು ಆಸೆ ನಿಂತಲ್ಲಿಯೇ ಕೂಗಿತು.

ನೆರೆದವರಲ್ಲಿ ಒಬ್ಬನು "ಅವರೆಲ್ಲ ಸಂಕಲ್ಪ ಹೇಳತಿದ್ದರು. ನೀವಽ ಅಡ್ಡ ಬಂದು ತಪ್ಪಿಸಿದವರು" ಎಂದು ನುಡಿದು ಕೈಯಲ್ಲಿಯ ದುಡ್ಡನ್ನು ನದಿಯಲ್ಲಿ ಬೀಸಾಡಿದ. ಉಳಿದವರೂ ಅವನನ್ನೇ ಅನುಸರಿಸಿದರು.

ನಾರಾಯಣಾಚಾರಿಗೆ ಮತ್ತೆ ಪಿತ್ತ ಅಡರಿತು. ಕೋಪ ಅವಿವೇಕವನ್ನೂ ಹೆಚ್ಚು ಮಾಡಿತು. ನದಿಯಲ್ಲಿ ದುಡ್ಡು ಬೀಸಾಡಲು ಬಾಳಾಚಾರ್ಯರೇ ಸನ್ನೆಮಾಡಿರಬಹುದೆಂದು ಅವನಿಗೆ ಸಂಶಯ ಬಂದಿತು. "ಹಿರೀರಾಗಿ ಇಂಥಾ ದುರ್ಬುದ್ಧಿ

ಛಲೋದಲ್ಲ ನೋಡು. ನಿನ್ನೆ ಮಾಮಲೇದಾರರ ಬೆನ್ನುಹತ್ತಿ ಸಂಕಲ್ಪ ಹೇಳಲಿಕೆ ಹೋದಿ. ನಾ ಏನು ನಿನಗ ಬಂದ ದಕ್ಷಿಣಿಯೊಳಗ ಪಾಲು ಕೇಳಲಿಲ್ಲ. ಈಗ ಮಾತ್ರ ನನಗ ಬರಬೇಕಾದ ದುಡ್ಡು ನದೀ ಕಾಣಿಸಲಿಕ್ಕೆ ಈ ಜನರಿಗೆ ಹೇಳಿ ಕೊಟ್ಟೆ. ನೆನಪಿರಲಿ. ಇಂಡಿನೀದ ನದಿಗೆ ಬಂದವರಿಗೆ ಸಂಕಲ್ಪ ಹೇಳಿ ಒಂದು ಒಡಕ ಕವಡಿ ಘಳಿಸಲಿಕ್ಕೆ ನಿನಗ ಬಿಟ್ಟರ ನನ್ನ ಹೆಸರ ಹೇಳಬ್ಯಾಡ" ಎಂದು ಚೀರಹತ್ತಿದನು.

ಬಾಳಾಚಾರ್ಯರಿಗೆ ಕೆಡುಕೆನಿಸಿತು. ತನ್ನನ್ನು ಕಂಡರೂ ಸಿಟ್ಟಿಗೇಳುವ ಮಗನ ಈ ಅವಿವೇಕಕ್ಕೆ ಏನು ಮಾಡಬೇಕೋ ತಿಳಿಯದಾಯಿತು. "ನಾರಾಯಣಾ, ಜನರು ಪ್ರೀತಿಯಿಂದ ಕೊಡಲಿಕ್ಕೆ ಬಂದಾಗ ಯಾರು ಹೇಳಿದರೂ ಅವರು ಕೇಳೂದುಲ್ಲ. ಇಕಾ, ಇಂದಿನಿಂದ ನದಿ ಮ್ಯಾಲಿನ ಸಂಕಲ್ಪ ನಿನಗs ಗುತ್ತಿಗಿ ಆತs? ಇನ್ನ ಮ್ಯಾಲ ನಾ ಯಾರಿಗೂ ಸಂಕಲ್ಪ ಹೇಳೂದುಲ್ಲ" ಎಂದು ಅವನಿಗೇ ಸಮಾಧಾನ ಹೇಳಬೇಕಾಯಿತು.

ಆದರೆ ನಾರಾಯಣಾಚಾರಿಗೆ ಇನ್ನೂ ಸಮಾಧಾನವಾಗಿರಲಿಲ್ಲ. "ಸಂಕಲ್ಪ ಹೇಳೂದಿಲ್ಲ ಅಂತ ಒಳೇ ದೊಡ್ಡ ಮನಸ್ಸಿನವರ್ಹ್ಯಾಂಗ ಹೇಳಿದಿ. ಎರಡು ದುಡ್ಡಿನ ಸಂಕಲ್ಪ ಬಿಟ್ಟರ ಬಿಟ್ಟ್ಯಾಂಗಾಗಲಿಲ್ಲ. ತೀರ್ಥಶ್ರಾದ್ಧ ಮಾಡಿಸಲಿಕ್ಕೆ ಬಂದವರ್ನ ತಿರವ್ಯಾಡಿ ಮನೀಗೆ ಒಯ್ದು ದುಡ್ಡು ಸುಲೀತೀದಿ. ಅದನ್ನ ಮಾತ್ರ ಬಿಡಬ್ಯಾಡ" ಎಂದು ಮತ್ತೆ ಅಣಕಿಸಿ ಹೇಳಿದ.

ಬಾಳಾಚಾರ್ಯರಿಗೂ ಎಲ್ಲಿಲ್ಲದ ಸಿಟ್ಟು ಬಂದಿತ್ತು. ಆದರೂ ಅಪೂರ್ವ ಸಂಯಮದಿಂದ ಅದನ್ನು ತಡೆದುಕೊಂಡು "ಇಂದಿನಿಂದ ಅದೂ ನಿನಗs ಸೇರಿದ್ದು ಅಂತ, ಇಕಾ ಈ ಗಂಗಾ ಹಿಡದು ಹೇಳತೀನಿ. ಮುಗೀತಿಲ್ಲೊ?" ಎಂದರು.

ಆಚಾರ್ಯರು ಇಷ್ಟು ಹೇಳಿದವರೇ "ತಾಯೀ ಗಂಗಾಮಾತೇ!" ಎಂದೆನ್ನುತ್ತ ನದಿಯಲ್ಲಿ ಈಸುಬಿದ್ದರು. ನದಿಯಲ್ಲಿ ಸೆಳವು ಹೆಚ್ಚಿಗಿತ್ತು. ರಭಸದಿಂದ ಹರಿದು ಬರುತ್ತಿದ್ದ ಪ್ರವಾಹ, ಆಚಾರ್ಯರ ದೇಹ ತನಗೆ ಅಡ್ಡಬಂದದ್ದನ್ನು ಕಂಡು ಅವರನ್ನು ಸುತ್ತುವರಿಯಿತು. ದೊಡ್ಡ ದೊಡ್ಡ ತೆರೆಗಳು ಮೇಲಕ್ಕೆ ಚಿಮ್ಮಿದವು. ಆಚಾರ್ಯರು ಮಾರುಗೈ ಹಾಕಿ ಈಸುತ್ತ ನಡೆದರು. ಅವರಿಗೆ ಸೆಳವಿನ ಭಯವೆಷ್ಟೂ ಇರಲಿಲ್ಲ. ಯಾವ ಭಾವನೆ ಅವರ ಮನಸ್ಸನ್ನಾವರಿಸಿತ್ತೋ, ಅದರ ಸೆಳವಿಗೆ ಸಿಕ್ಕು ಸಾಗಿದವರಂತೆ ಅವರು ಮುನ್ನಡೆದರು. ನೀರಿನ ಒಡಲಿನಲ್ಲಿಯೇ

ಮುಕ್ತಿಯನ್ನು ಹುಡುಕುವವರಂತೆ ನಡೆದಿದ್ದರು. ನದಿಯ ಸೆಳವು ಅವರನ್ನು ಕೊಚ್ಚಿಕೊಂಡು ಹೋಯಿತು. ಬರುಬರುತ್ತ ಸುಳಿಯಾದರು; ಮೇಲೆ ಚಿಮ್ಮುವ ತೆರೆಯಾದರು; ಸೆಳವಿನ ವೇಗವಾಗಿ ಸಾಗಿದರು. ಹಾಗೆಯೇ ಸೆಳವಿಗೆ ಸಿಕ್ಕ ಅವರು ದೂರ ಹೋಗುತ್ತಿರುವದನ್ನು ಕಂಡು ಸ್ನಾನಕ್ಕೆ ಬಂದ ಡೋಣಿಸಾಲಿನ ಜನರು ಗಾಬರಿಗೊಂಡು "ಆಚಾರೆಪ್ಪ ಸೆಳವಿಗೆ ಸಿಕ್ಕು ಹೋಗತಾನ್ರೆಪ್ರೋ! ಈಸಾಕ ಬಲ್ಲವರು ಉಳಿಸಿರಿ" ಎಂದು ಕೂಗುತ್ತ ಗಲಭೆ ಎಬ್ಬಿಸಿದರು. ಆದರೆ ಪಾದಳ್ಳಿಯವರಿಗೆ ಆಚಾರ್ಯರು ಹೀಗೆ ಈಸು ಬೀಳುವದು ಅರಿಯದ ವಿಷಯವೇನಲ್ಲ. "ಯಾಕ ಒದರತೀರ್‍ಯೋ ಎಪ್ಪಾ. ಈಗ ನೋಡ್ರಿ ಹ್ಯಾಗ ಹೊಳ್ಳಿ ಈಸಿ ದಂಡಿಗೆ ಬರತಾನ ಆಚಾರೆಪ್ಪ" ಎಂದು ಅವರೇ ಸಮಾಧಾನ ಹೇಳಬೇಕಾಯಿತು.

ಆಚಾರ್ಯರು ನದಿಯಲ್ಲಿ ಕೆಲ ಅಂತರದ ವರೆಗೆ ಪ್ರವಾಹದ ಗುಂಟ ಸಾಗಿದರು. ಆದರೆ ಮತ್ತೆ ಅದೇ ಪ್ರವಾಹದ ಇನ್ನೊಂದು ದೊಡ್ಡ ತೆರೆ ಆಚಾರ್ಯರನ್ನು ದಂಡೆಗೆ ತಂದು ಹಾಕಿತು. ಪಾವಳ್ಳಿಯ ಋಣಸಂಬಂಧ ತಮಗಿನ್ನೂ ತೀರಿಲ್ಲವೆಂದೆನಿಸಿತು. ನದಿಗೆ ಕೈಮುಗಿದರು. ಸ್ವಲ್ಪ ಹೊತ್ತು ಒದ್ದೆಬಟ್ಟೆಯಲ್ಲಿಯೇ ದಂಡೆಯ ಮೇಲೆ ನಿಂತರು. ಅವರಿಗೆ ಚಳಿಯ ಪರಿವೆ ಕೂಡ ಇರಲಿಲ್ಲ. ಕೂಡಲೇ ತಮ್ಮ ಚೇಷ್ಟೆಗಳೆಲ್ಲ ತಮಗೆ ವಿಚಿತ್ರವಾಗಿ ತೋರಿರಬೇಕು. ಒಗೆದು ಒಣಗಿಸಿದ ಪಂಜೆಯನ್ನುಟ್ಟರು. ನದಿಗೆ ಮತ್ತೊಮ್ಮೆ ಕೈಮುಗಿದು ಮನೆಯ ದಾರಿ ಹಿಡಿದರು.

ವಾಡಿಕೆಯಂತೆಯೇ ಆಚಾರ್ಯರ ಬಾಯಿ ರಾಘವೇಂದ್ರಸ್ತೋತ್ರವನ್ನು ಪಠಿಸುತ್ತಿತ್ತು. ಆದರೆ ಮನಸ್ಸೋ ವಿಚಾರಗಳ ಪ್ರಳಯಕೇಂದ್ರವಾಗಿತ್ತು. ಬಾಯಲ್ಲಿ ಪುಟುಪುಟಿಸುವ ಸ್ತೋತ್ರದಲ್ಲಿ ಲಕ್ಷವೇನೂ ಇರಲಿಲ್ಲ. ಆಚಾರ್ಯರ ಲಕ್ಷ್ಯವೆಲ್ಲ ಈಗ ಬಿಡುಗಡೆಯ ದೆಗೆ ಸಾಗಿತ್ತು. ಜೀವನದ ಚಕ್ರವ್ಯೂಹ ಅವರ ವಿಚಾರಶಕ್ತಿಯನ್ನೇ ದಂಗುಬಡಿಸಿತ್ತು. ಇವೊತ್ತು ತಮ್ಮ ಮಗ ನಾರಾಯಣ ತಮಗೆ ಹೀಗೆ ಮಾತಾಡಿದ್ದು ಬಾಳಿನ ವಿಷಮಶಕ್ತಿಯ ಒಂದು ಪ್ರತೀಕವಾಗಿತ್ತು ಅಷ್ಟೇ! ಬಾಳು ನೆರೆ ಬಂದ ನದಿಯಂತೆ ಸೀಮೆಯನ್ನು ಆಕ್ರಮಿಸುವದರಲ್ಲಿತ್ತು. ಅದನ್ನು ತಡೆಯಬೇಕೆನ್ನುವದು ಹುಚ್ಚುತನವಷ್ಟೇ! ತಡೆಯುವದೂ ಸಾಧ್ಯವಿಲ್ಲದಾಗಿದೆ. ಪರಿಸ್ಥಿತಿ ಕೈಮೀರಿ ಹೋಗಿದೆ. ಹುಚ್ಚು ಹೊಳೆಗೆ ಬಾಗದೆ ಗತಿಯೇ ಉಳಿದಿಲ್ಲ. ಪುಣ್ಯವಿದ್ದರೆ ಮಾತ್ರ ಇಂದಿನಂತೆ ಬದುಕಿ ಬರಬಹುದು. ಮನಸ್ಸಿನ ತಾಪವನ್ನು ಕಳೆದುಕೊಳ್ಳುವದಕ್ಕೋ, ಅಥವಾ ತಮ್ಮ ಸತ್ವವನ್ನೇ

ಪರೀಕ್ಷಿಸುವದಕ್ಕೋ ಇಂದು ಹೊಳೆಯಲ್ಲಿನೋ ಬಿದ್ದರು. ಈಸು ಬರುತ್ತಿದ್ದರೂ ಮುಳುಗಲೆಂದೇ ಬಿದ್ದರು. ಆದರೆ ಪ್ರವಾಹ ಅವರನ್ನು ಮುಳುಗಗೊಡಲಿಲ್ಲ. ಆಚಾರ್ಯರಿಗೆ ಅದು ಬೇಡವಾಗಿತ್ತು. ಆದರೆ ಸಾಯುವದಕ್ಕೂ ಪ್ರಬಲವಾದ ಇಚ್ಛೆ ಬೇಕಾಗುತ್ತದೋ ಏನೋ! ಅಥವಾ ದೈವಶಕ್ತಿ ತಮ್ಮ ಶಕ್ತಿಗಿಂತ ಹೆಚ್ಚು ಬಲವತ್ತರವಾಗಿದೆಯೇನೋ! ಹಾಗಿದ್ದರೆ ಬದುಕಿ ಬಂದದ್ದರಲ್ಲಿ ಏನಾದರೂ ಉದ್ದೇಶ ಸಫಲವಾಗುವದಿದೇಯೇ? ಬಲ್ಲವರಾರು? ಆಚಾರ್ಯರಿಗೆ ವಿಚಾರ ಮಾಡದೆ ಗತಿಯಿರಲಿಲ್ಲ. ಮನುಷ್ಯನ ಅಸಹಾಯತೆಯಾದರೂ ಎಷ್ಟು? ಆಚಾರ್ಯರ ಮನಸ್ಸು ಒಂದೇಸವನೆ ವಿಲಿವಿಲಿ ಒದ್ದಾಡಿತು. ಒಮ್ಮೆ ಬಿಡುಗಡೆಯಾಗಿ ಹೋಗಲಿ ದೇವರೇ ಎಂದು ಪ್ರಾರ್ಥಿಸಿದರು. ಇದೇ ವಿಚಾರದಲ್ಲಿರುವಾಗಲೇ ಒಮ್ಮೆ ಮನೆ ಮುಟ್ಟಿದರು.

ದೇವರಪೂಜೆಯನ್ನೇನೋ ಮಾಡಿದರು; ಆದರೆ ಮನಸ್ಸು ಸ್ತಿಮಿತದಲ್ಲಿರಲಿಲ್ಲ. ಪ್ರಸನ್ನತೆ ಗಾವುದ ದೂರ ಓಡಿಹೋಗಿತ್ತು. ಊಟದ ಕಾಟ ತೀರಿಸಿದರು; ಮನಸ್ಸಿಗೆ ನೆಮ್ಮದಿ ಉಳಿದಿರಲಿಲ್ಲ. ಬೆಳಕಿಂಡಿಯಿಲ್ಲದ ಮನೆಯೊಳಗೆ ಹೊಗೆ ಸುತ್ತುಗಟ್ಟಿದಂತೆ, ಚಿಂತೆ ಉಸಿರುಕಟ್ಟಿಸುತ್ತಿತ್ತು. ಕೃಷ್ಣಾಜಿನದ ಮೇಲೆ ಅಡ್ಡಾದರು. ಕಣ್ಣೆವೆಗಳು ಕೂಡಿದರೂ ಜೊಂಪು ಹತ್ತಲಿಲ್ಲ.

:: ೩೦ ::

ಆಚಾರ್ಯರು ಅದೇ ಅಸ್ವಸ್ಥಮನಸ್ಥಿತಿಯಲ್ಲಿಯೇ ಹಾಗೆಯೇ ಅಡ್ಡಾಗಿದ್ದರು. ಅಸ್ವಸ್ಥತೆ ಇನ್ನೂ ಹೆಚ್ಚಿತೇ ಹೊರತು ಕಡಿಮೆಯಾಗಲಿಲ್ಲ. ಭಾಗವತವನ್ನಾದರೂ ಓದಿದರೆ ಮನಸ್ಸಿಗೆ ಸಮಾಧಾನವಾದೀತೆಂದು ಮೇಲೆದ್ದು ಹೊತ್ತಿಗೆಯನ್ನು ಬಿಚ್ಚಿದರು. ಓದುತ್ತ ನಡೆದಂತೆ ಮನಸ್ಸು ಅದರಲ್ಲಿಯೇ ನಟ್ಟಿತು. ಪೃಥುರಾಜನ ಪೃಥ್ವೀದೋಹನದ ಕತೆ ರಮ್ಯವಾಗಿ ಕಣ್ಣಮುಂದೆ ಹರಡಿತು. ಸಂಜೆಯಾಗುವವರೆಗೆ ಓದುತ್ತಲೇ ಕುಳಿತರು. ಹೊತ್ತು ಮುಳುಗಲು ಇನ್ನೂ ಒಂದು ತಾಸು ಉಳಿದಿತ್ತು. ಅಷ್ಟರಲ್ಲಿ ಕಾಶೀಮಸಾಹೇಬ ಬಂದು ಬಾಗಿಲು ತಟ್ಟಿದ. ಆಚಾರ್ಯರು

ಯಾರೆಂದು ನೋಡುವಷ್ಟರಲ್ಲಿ ಒಳಗೇ ಬಂದ.

"ಆಚಾರೆಪ್ಪ ಗಾತ ಆಗೇತರಿ. ದಾದಾನ್ನ ಮಾಮಲೇದಾರರು ಜೇಲಿಗೆ ಕಳಿಸಲಾಕ ಹುಕುಂ ಕೊಟ್ಟ್ಯಾರ್ರಿ!" ಎಂದು ಗಾಬರಿಯ ದನಿಯಲ್ಲಿಯೇ ಹೇಳಿದ.

"ಯಾಕೋ? ಹಾವನೂರಿನವರು ಖಟ್ಲೆ ನಡಿಸಿ ಸಾಕ್ಷಿಪುರಾವೆ ಮಾಡಿಸಿದರೇನು?" ಆಚಾರ್ಯರಿಗೆ ಇದೆಲ್ಲ ಅನಿರೀಕ್ಷಿತವಾದದ್ದರಿಂದ ಗಾಬರಿಗೊಂಡು ಕೇಳಿದರು.

"ಇಲ್ಲರಿ. ಖಟ್ಲೆ ಪುಕಾರಿಸಿದಾಗ ಅವರೊಬ್ಬರೂ ಚಾವಡಿ ಸನ್ಯಾಕ ಸೈತ ಇದ್ದಿಲ್ಲರಿ. ದಾದಾ, ಜಿನ್ನಪ್ಪ ಮಾತ್ರ ಹಾಜರ ಇದ್ದರರಿ. ಮಾಮಲೇದಾರರು ಏನೇನೋ ಕೇಳಾಣಾ, ಜಿನ್ನಪ್ಪ ತಾ ದಾದಾಗ ಜಾಮೀನ ಆದದ್ದನ್ನ ರದ್ದ ಮಾಡ್ರಿ ಅಂತ ಹೇಳಿದನಂತರಿ. ಜಾಮೀನ್ನ ರದ್ದು ಮಾಡೇತಿ, ಆರೋಪಿನ್ನ ಜೇಲಿಗೆ ಕಳಸರಿ, ಅಂತ ಮಾಮಲೇದಾರರು ಹೇಳಿ ದಾದಾನ್ನ ಪೋಲೀಸರ ತಾಬೇ ಮಾಡ್ಯಾರಂತರಿ"

"ನಿನಗ ಇದನ್ನೆಲ್ಲಾ ಯಾರು ಹೇಳಿದರು?" ಎಂದು ಆಚಾರ್ಯರು ಪ್ರಶ್ನೆ ಹಾಕಿದರು.

ಅದಕ್ಕೆ ಕಾಶೀಮಸಾಹೇಬ "ಜಿನ್ನಪ್ಪನs ಹೇಳಿದನರಿ. ದಾದಾ ಇಂದ ರಾತ್ರಿ ಕಾಳ ತರಲಾಕಂತ ಇಂದುಪುರಕ್ಕ ಹೋಗತೀನ ಕಾಕಾ ಅಂತ ಜಿನ್ನಪ್ಪಗ ಹೇಳಿದನಂತರಿ. ನೀ ಊರಿಗೆ ಹೋಗೂದಾದರ ನನ್ನ ಜಾಮೀನ ರದ್ದ ಮಾಡಿಸಿ ಗೋತೀನಿ ಅಂತ ಹೇಳಿದವನs ಮಾಮಲೇದಾರರಿಗೆ ಅರ್ಜಿ ಕೊಟ್ಟು ರದ್ದ ಮಾಡಿಸಿಗೊಂಡs ಬಿಟ್ಟನಂತರಿ." ಎಂದು ವರ್ತಮಾನವನ್ನೆಲ್ಲ ಅರುಹಿದ.

"ಇಷ್ಟs ಹೌದಲ್ಲೋ, ನಾ ಎಲ್ಲಾ ಮಾಮಲೇದಾರರಿಗೆ ಭೆಟ್ಟಿಯಾಗತೇನಿ ಹೋಗು" ಎಂದಿಷ್ಟು ಹೇಳಿ ಆಚಾರ್ಯರು ಮೇಲೆದ್ದರು.

ಫಿರ್ಯಾದಿ ಗೈರಹಾಜರ ಇದ್ದರೆ ಅರ್ಜಿಯನ್ನು ಕಿತ್ತಿಹಾಕುತ್ತಾರೆಂದು ಶ್ಯಾಮರಾಯ ಹೇಳಿದ್ದ. ಕಲ್ಲನಗೌಡನೂ ಚೌಕಶಿಯ ಕಾಲಕ್ಕೆ ಮೊದಲು ಹೇಳಿದಂತೆ ಹಾಜರ ಇರಲಿಲ್ಲ. ಆದರೂ ಅರ್ಜಿಯನ್ನು ಕಿತ್ತಿಹಾಕಿಲ್ಲವೆಂದ ಮೇಲೆ? ದಾದಾನನ್ನು ಯಾವ ಮಾರ್ಗದಿಂದ ಉಳಿಸಬೇಕೆಂಬ ವಿಚಾರದಲ್ಲಿಯೇ ಆಚಾರ್ಯರು ಚಾವಡಿಗೆ ಬಂದರು.

ಚಾವಡಿಯಲ್ಲಿ ಜನ ಕಿಕ್ಕಿರಿದು ತುಂಬಿರಬಹುದೆಂದು ಆಚಾರ್ಯರು ಭಾವಿಸಿದ್ದರು. ಆದರೆ ಅಲ್ಲಿ ಹೋಗಿ ನೋಡಿದಾಗ ಚಾವಡಿ ನಿರ್ಜನವಾಗಿತ್ತು. ಮುಲ್ಕಿ ಸಿಪಾಯಿ, ಶೇಷಪ್ಪ, ಕಾರಕೂನ ಗೋಪಾಳರಾಯ ಇವರನ್ನು ಬಿಟ್ಟರೆ ಬೇರಾರೂ

ಅಲ್ಲಿರಲಿಲ್ಲ. ಆಚಾರ್ಯರನ್ನು ಕಂಡೊಡನೆಯೇ ಶೇಷಪ್ಪ ಅವರಿಗೆ ನಮಸ್ಕಾರ ಸಲ್ಲಿಸಿ "ನನಗ ಹೇಳಿ ಕಳಿಸಿದ್ದರ ನಾನs ಬರತಿದ್ನೆಲ್ಲ ಆಚಾರs! ನೀವs ಇಲ್ಲೀ ತನಕಾ ಬರೋ ಶ್ರಮಾ ಯಾಕ ತೊಗೊಂಡ್ರಿ?" ಎಂದು ಶುಷ್ಕೋಪಚಾರದ ಮಾತುಗಳನ್ನಾಡಿದನು.

"ನಿನ್ನ ಕಡೆ ಕೆಲಸ ಇದ್ದರ ನಿನಗ ಹೇಳಿಕಳಿಸತಿದ್ದೆ. ಆದರ ನನ್ನ ಕೆಲಸ ಇರೂದು ಮಾಮಲೇದಾರ ಕಡೆ. ಅದಕ ಇಲ್ಲೀ ತನಕಾ ಬರಬೇಕಾತು." ಎಂದಿಷ್ಟೇ ಹೇಳಿದರು.

"ಖಾಸಗಿ ಕೆಲಸ ಇದ್ದರ ರಾವಸಾಹೇಬರನ್ನ ಸಾಲ್ಯಾಗ ಭೆಟ್ಟಿಯಾಗ ಬಹುದು" ಎಂದು ಕಾರಕೂನ ಗೋಪಾಳರಾಯ ಬಾಯಲ್ಲಿಯ ತಂಬಾಕನ್ನು ಉಗುಳಿ ಹೇಳಿದ.

"ನಂದೇನು ಸರಕಾರಿ ಕೆಲಸ ಇರಬೇಕು? ಹೇಳಿ ಕೇಳಿ ವೈದಿಕಬ್ರಾಹ್ಮಣ" ಎಂದು ಒಟಗುಟ್ಟುತ್ತ ಆಚಾರ್ಯರು ಚಾವಡಿಯ ಕಟ್ಟೆಯನ್ನಿಳಿದು ಸಾಲೆಯತ್ತ ಹೊರಟರು.

ಸಾಲೆಯಲ್ಲಿ ಮಾಮಲೇದಾರರ ಆಫೀಸಿಗೆಂದು ಒಂದು ಗುಡಾರ ಕಟ್ಟಿದ್ದರು. ಮಾಮಲೇದಾರರು ಒಳಗೆ ದಿಂಬಿಗಾತುಕೊಂಡು ಕುಳಿತು, ಮುಲ್ಕಿಸಿಪಾಯಿ ತಂದ ಟಪಾಲನ್ನು ನೋಡುತ್ತಿದ್ದರು. ಆದ್ದರಿಂದಲೇ ಅವರ ಲಕ್ಷ್ಯ ಆಚಾರ್ಯರತ್ತ ಸುಳಿ ಯಲೇ ಇಲ್ಲ. ಆಚಾರ್ಯರು ಕೆಲ ಹೊತ್ತು ಹಾದಿಕಾಯುತ್ತ ನಿಲ್ಲಬೇಕಾಯಿತು. ಸಾಲೆಯ ಇನ್ನೊಂದು ಭಾಗದಲ್ಲಿ ಗುಡಾರ ಕಟ್ಟಿ ಮಾಮಲೇದಾರರ ಅಂತಃಪುರದ ಏರ್ಪಾಡನ್ನು ಮಾಡಲಾಗಿತ್ತು. ಒಳಗಡೆಗಿದ್ದ ಮಾಮಲೇದಾರರ ಪತ್ನಿ ರುಕ್ಮಿಣಿ ಬಾಯಿಯ ಕಣ್ಣಿಗೆ ಆಚಾರ್ಯರು ನಿಂತಿರುವದು ಬಿತ್ತು. ಅವರು ಎದ್ದು ಬಂದು ಆಚಾರ್ಯರನ್ನು ಕರೆದಾಗ ಆಚಾರ್ಯರು ಅವರತ್ತ ಹೋಗಲೇಬೇಕಾಯಿತು. ಅವರು ಹೋದ ಮೇಲೆ ಮಾಮಲೇದಾರರು ಯಾವುದೋ ಕೆಲಸಕ್ಕಾಗಿ ಹೊರಗೆ ಹೋಗಿ ಬಿಟ್ಟರು. ರುಕ್ಮಿಣಿಬಾಯಿ ಸ್ವಲ್ಪ ಸ್ಥೂಲಕಾಯದ ಹೆಣ್ಣುಮಗಳು. ಮೈಯೆಲ್ಲ ವಸ್ತ್ರಗಳ ಭಾರದಿಂದ ಬೀಗುತ್ತಿತ್ತು. ಬಾಯಲ್ಲಿ ದೊಡ್ಡದೊಂದು ಅಡಿಕೆಬೆಟ್ಟ ವನ್ನು ಮೆಲುಕಾಡಿಸುತ್ತ "ಏನು ಆಚಾರs, ನಿನ್ನೆ ಮಾರಿ ತೋರಿಸಿದವರು ತಿರುಗಿ ಹಣಿಕಿ ಸೈತ ಹಾಕಲಿಲ್ಲಲ್ಲ? ನಿನ್ನೆ ಅವರು ಊಟಕ್ಕ ಕರದರೂ ಬರಲಿಲ್ಲ ಅಂತ? ಅದನ್ನು ಕೇಳಿ ಭಾಳ ಚಡಪಡಿಕಿ ಆತರೆಪಾ! ಇಂಥಾ ಕ್ಷೇತ್ರಕ್ಕ

ಬಂದರೂ ಬ್ರಾಹ್ಮಣ ಇಲ್ಲದ ಊಟಾ ಮಾಡಬೇಕಂದರೇನರಿ? ಯಾಕ ಬರಲಿಲ್ಲ ನೀವು?" ಎಂದು ಕಳಕಳಿಯಿಂದ ಕೇಳಿದರು.

"ನಾ ಬರದಿದ್ದರೇನಾತು? ಇಂದ ನಿಮ್ಮ ಮನಸ್ಸಿಗೆ ಸಮಾಧಾನ ಆಗೂ ಹಾಂಗ ಎಲ್ಲಾ ಆತೋ ಇಲ್ಲೋ?" ಆಚಾರ್ಯರು ಸಾಂತ್ವನಪರವಾಗಿ ಕೇಳಿದರು.

ರುಕ್ಮಿಣಿಬಾಯರಿಗೆ ಸಮಾಧಾನವಾಗಿರಲಿಲ್ಲ. ಅವರು ಅತ್ತಿತ್ತ ನೋಡಿ, "ಅಂತೂ ನೀವು ಹಿಂದ ಸರಕೊಂಡು, ದುಡ್ಡು ಹಿರೀಲಿಕ್ಕೆ ಆ ನಾರಣಾಚಾರಿನ್ನ ಮುಂದ ಮಾಡೀರಿ ಕಾಣತದ. ಅವರೇನೋ ನಿಮ್ಮ ಮಕ್ಕಳಾಗಬೇಕಂತಲ್ಲಾ? ಒಂದೇ ದಿನದಾಗ ಸಾಕುಸಾಕು ಮಾಡಿಸಿದರರೆಪಾ? ನದಿಯೊಳಗ ಸ್ನಾನಾ ಮಾಡೂ ಮುಂದ ಉಟ್ಟ ಸೀರಿ ಅವರಿಗೇ ಹೋಗಬೇಕಂತ. ಕಡೀಕೆ ಇವರು ಸಿಟ್ಟಿಗೆದ್ದು ಆಕಿ ಉಟ್ಟ ಜರದ ಅಂಚಿನ ಸೀರಿ ಬೇಕಂದ್ರ ಸಿಗೂದುಲ್ಲಾ. ಬೇಕಾರ ಒಂದ ಹೊಸಾ ಸೀರಿ ಕೊಡಸತೀನಿ, ಅಂದಾಗ ಸುಮ್ಮಗಾದರು. ಮರದಬಾಗಣದಾಗ ಎಣ್ಣಿ ಹಾಕಿ ಕೊಟ್ಟ ಬೆಳ್ಳಿಬಟ್ಟಲಾನೂ ಅವರದs ಅಂತ. ಮೊದಲs ತಿಳಿಸಿದ್ದರ ಸ್ವಚ್ಛ ದೊನ್ನಿಯೊಳಗ ಎಣ್ಣಿ ಹಾಕಿ ಮರದಬಾಗಣಾ ಕೊಡತಿದ್ದೆ. ನಾ ಅನಕಾ ಬ್ಯಾಸತ್ತು ಹೋದೆ. ನಾಳಿನ ದಿನ ನಿಮ್ಮನ್ನ ಕರಿಸಿ ಗಂಗಾರಾಧನಿ ಮಾಡಸೋ ಹಾಂಗ ಇದ್ದರ ಮಾಡಸರಿ, ಇಲ್ಲಾಂದ್ರ ಬ್ಯಾಡs ಬಾಡ ಅಂತ ನಾ ಇವರಿಗೆ ಝಳಾ ಝಳಾ ಹೇಳಿಬಿಟ್ಟೇನಿ" ಎಂದು ದೀರ್ಘ ಉಪನ್ಯಾಸವನ್ನೇ ಬಿಗಿದರು.

ಆಚಾರ್ಯರಿಗೆ ಈ ಮಾತು ಕೇಳಿ ಬೇಸರ ಬಂದಿತ್ತು. ಮಾತು ಮರೆಸಬೇಕೆಂದು, "ಸ್ವಲ್ಪ ರಾವಸಾಹೇಬರನ್ನ ಕಾಣಬೇಕಾಗಿತ್ತು" ಎಂದು ನಡುವೇ ಬಾಯಿ ಹಾಕಿ ಅವರ ಭಾಷಣವನ್ನು ತಡೆದರು.

ಆದರೆ ರುಕ್ಮಿಣಿಬಾಯರಿಗೆ ಇನ್ನೂ ಹೇಳುವದಿತ್ತು. "ಗಂಗಾರಾಧನಿ ವ್ಯವಸ್ಥಾ ನಿಮಗs ಒಪ್ಪಿಸಲಿಕ್ಕೆ ಹೇಳಿ ಕಳಸರಿ ಅಂತ ನಾನs ಹೇಳಿದ್ದೆ. ಆಗs ಬಸ್ಸ್ಯಾನ ನಿಮ್ಮನ್ನ ಕರಕೊಂಡು ಬಂದಿದ್ದರ ನೀವು ಹಾದಿ ಕಾಯೂದು ತಪ್ಪತಿತ್ತು. ಗೌಡಿತಿ ಭಾಳ ಆಗ್ರಹ ಮಾಡಿ ಮನೀಗೆ ಕರದಳಂತ, ಇವರು ಗೌಡರ ಮನಿಗೆ ಹೋದರು. ಈಗ ಬರತಾರ ಕೂಡ್ರಿ" ಎಂದು ಹೇಳಿದರು. ಆಚಾರ್ಯರು ರುಕ್ಮಿಣಿಬಾಯರ ಮಾತು ಕೇಳುತ್ತಿದ್ದರು. ಮಾಮಲೆದಾರರು ಗೌಡರ ಮನೆಗೆ ಹೊರಟು ಹೋಗಿದ್ದರು.

ಈಗ ಆಚಾರ್ಯರು ಬಾಯಿಯವರ ಜೊತೆಗೆ ಮಾತಾಡದೆ ವಿಧಿಯಿರಲಿಲ್ಲ.

"ಗಂಗಾರಾಧನಿ ವ್ಯವಸ್ಥಾ ಮಾಡೂದನ್ನು ಶೇಷಪ್ಪ ನಾರಾಯಣಗs ಒಪ್ಪಿಸಿ ಕೊಟ್ಟಾನ. ನಾ ಅದರಾಗ ನಡುವ ಬರೂದುಲ್ಲ. ನಾ ಇಲ್ಲೆ ಬಂದದ್ದು ಒಂದು ಜೀವಾಳದ ಕೆಲಸಕ್ಕ" ಎಂದು ತಮ್ಮ ಆಗಮನದ ಉದ್ದೇಶವನ್ನು ವಿವರಿಸಿದರು.

"ಆ ನಾರಣಾಚಾರೀ ಮಾರಿ ನೋಡಾಂಗಿಲ್ಲ ಅಂತ ನಾ ಆಣೀ ಮಾಡೀನಿ. ನೀವು ಈ ಗಂಗಾರಾಧನಿ ಕೆಲಸ ಒಪ್ಪಿಗೊಳ್ಳಿಕ್ಕೇ ಬೇಕು. ನಿಮ್ಮ ಜೀವಾಳದ ಕೆಲಸ ಏನಿದ್ದರೂ ಹೇಳ್ರಿ ನಾ ಮಾಡಿಸಿಕೊಡತೇನಿ." ಎಂದು ಆಶ್ವಾಸನವನ್ನಿತ್ತರು.

ಆಚಾರ್ಯರಿಗೆ ಅದೂ ಹೌದೆನಿಸಿತು. ಒಟ್ಟು ದಾದಾನನ್ನು ಈ ಅನ್ಯಾಯ ದಿಂದ ಉಳಿಸಬೇಕಾಗಿತ್ತು. ಆ ಪುಣ್ಯಾ ಯಾರ ಪಾಲಿಗೆ ಬಂದರೂ ಅಷ್ಟೇ. "ನೀವು ಮನಸ್ಸಿನ ಮ್ಯಾಲೆ ತೊಗೊಂಡರ ಯಾವದು ಆಗೂದುಲ್ಲ ಬಾಯಾರs? ಪರೋಪ ಕಾರದ ಒಂದು ಮಾತು ಕೇಳಿಕೋಬೇಕಾಗಿತ್ತು. ಅಂಥಾದ್ದೇನೂ ವಿಶೇಷ ಇಲ್ಲ. ದಾದಾ ಅಂತ ಒಬ್ಬ ಹುಡುಗ ಇದ್ದಾನ. ಅವರ ಅಪ್ಪಗ ಒಬ್ಬನೇ ಮಗಾ. ಒಳೇ ಬಾಳೀ ದಿಂಡಿನಂಥಾ ಹುಡುಗ. ಅಂವಾ ಏನೋ ಬ್ಯಾಟಿಗೆ ಹೋದಾಗ ಹಾವನೂರಿನ ಜನರ ಜೋಡಿ ಏನೋ ವಾದಿಸ್ಯಾಡಿದನಂತ. ಅದಕ ಅವರು ತಮ್ಮನ್ನ ಹೊಡದಾ ಅಂತ ಫಿರ್ಯಾದಿ ಕೊಟ್ಟಾರ. ಜಾಮೀನಿನ ಮ್ಯಾಲೆ ದಾದಾ ಬಿಡುಗಡೆಯಾಗಿದ್ದ. ಹಾವನೂರಿನವರೂ ಖಟ್ಲೆ ಹಿಂದ ತಕ್ಕೊಳ್ಳಿಕ್ಕೆ ಒಪ್ಪಿದ್ದರು. ಆದರ ಈಗ ಇಲ್ಲೀ ಜನರ ಕುತಂತ್ರದಿಂದ ಮತ್ತ ಅಂವಾ ಜೇಲಿಗೆ ಹೋಗೋ ಪ್ರಸಂಗ ಬಂದದ. ಅದಕ ಅವನ ಉಳಸಲಿಕ್ಕೆ ಹೇಳಬೇಕಾಗಿತ್ತು." ಎಂದು ಹೇಳಿ ಆಚಾರ್ಯರು ಸುಮ್ಮ ಗಾದರು.

ಆಚಾರ್ಯರ ದನಿಯಲ್ಲಿಯ ಮಾರ್ದವ ರುಕ್ಮಿಣಿಬಾಯರ ಹೃದಯವನ್ನು ಅಲುಗಾಡಿಸಿರಬೇಕು. ಇದ್ದ ಒಬ್ಬನೇ ಮಗ ತೀರಿಕೊಂಡು ನಿಪುತ್ರಿಕರಾದ ಅವರ ಮನಸ್ಸಿಗೆ ಆಚಾರ್ಯರ ಮಾತಿನಿಂದ ಬರೆ ಕೊಟ್ಟಂತಾಗಿತ್ತು. ಮೊದಲೇ ಆಚಾ ರ್ಯರ ವ್ಯಕ್ತಿತ್ವ ಅವರಲ್ಲಿ ಭೀತಿ ವಿಶ್ವಾಸಗಳನ್ನು ಹುಟ್ಟಿಸಿತ್ತು. ಅವರು ಹೇಳಿದ ಕತೆ ಮತ್ತಿಷ್ಟು ಹೃದಯವಿದ್ರಾವಕವಾಗಿತ್ತು. ರುಕ್ಮಿಣಿಬಾಯಿ ಭೀತಿಯಿಂದ ನಡುಗಿದರು. ಏನೇನೋ ನೆನಪಾಗಿ ಕಣ್ಣೀರು ಬಂದವು. ಅವರು ಭಾವನಾವಶ ರಾದರು. ಸೆರಗಿನಿಂದ ಕಣ್ಣೀರೊರಸಿಕೊಳ್ಳುತ್ತ, "ಆಚಾರs, ಅವರು ಬರಲಿ, ನಿಮ್ಮ ಆ ಹುಡುಗನ್ನ ಈಗಿಂದೀಗೇ ಬಿಡುಗಡೆ ಮಾಡಲಿಕ್ಕೆ ಹೇಳತೀನಿ" ಎಂದು ಅಭಯ ವನ್ನೇ ಕೊಟ್ಟರು.

“ನಿವು ಹೇಳಬಹುದು ಬಾಯರs. ಆದರ ರಾಯರು ಒಪ್ಪತಾರೋ ಇಲ್ಲೋ, ಇನ್ನೊ ಅನುಮಾನ ಅದ ನನಗ. ದಾದಾನ್ನ ಜೇಲಿಗೆ ಕಳಸೂದು ಶೇಷಪ್ಪಗ ಬೇಕಾಗೇದ; ಪಾರ್ವತೆವ್ವಗ ಬೇಕಾಗೇದ. ಆಕೀ ಕಡಿಂದ ದಕ್ಷಿಣೀ ಕೊಡಸತೀನಿ ಅಂತ ಶೇಷಪ್ಪ ರಾಯರಿಗೆ ಹೇಳಿರಬೇಕು. ಇಂಥಾ ಪರಿಸ್ಥಿತಿಯೊಳಗ ಕೆಲಸ ಪಾರಬೀಳೂದು ಕಠಿಣಾದೀತಲ್ಲ? ” ಎಂದು ಆಚಾರ್ಯರು ಅನುಮಾನವನ್ನೇ ನುಡಿದರು.

ತಮ್ಮ ಕೈಯಲ್ಲಾಗುವದನ್ನು ಮಾಡಿಯೇ ತೀರುತ್ತೇನೆಂದು ರುಕ್ಮಿಣಿ ಬಾಯರು ಮತ್ತೆ ಆಶ್ವಾಸನವನ್ನು ಕೊಟ್ಟರು. ಆ ಒಂದು ಗಳಿಗೆ ಆಚಾರ್ಯರ ಸನ್ನಿಧಾನದಲ್ಲಿ ಅವರ ಚಿತ್ತವೃತ್ತಿ ಸಂಪೂರ್ಣ ಬದಲಾಗಿ ಹೋಗಿತ್ತು. ನಿಪುತ್ರಿಕತನ ಸಹಜವಾಗಿಯೇ ಅವರಲ್ಲಿ ಆಸ್ತಿಕತೆಯನ್ನು ಹುಟ್ಟಿಸಿತ್ತು. ಮಕ್ಕಳು ಹುಟ್ಟುವದಕ್ಕೆ ಯಾವ ಉಪಾಯ ಮಾಡಬೇಕಾದೀತೆಂದು ಆಚಾರ್ಯರನ್ನು ಕೇಳುವದಿತ್ತು. ಆದ್ದರಿಂದ ಆಚಾರ್ಯರ ಯಾವ ಕೆಲಸವನ್ನಾದರೂ ಮಾಡಿಯೇ ತೀರಬೇಕೆಂಬ ಸಂಕಲ್ಪ ಅವರಲ್ಲಿ ಮೂಡಿತ್ತು.

ಅಷ್ಟರಲ್ಲಿ ಗೌಡರ ಮನೆಗೆ ಹೋಗಿದ್ದ ಮಾಮಲೇದಾರರು ತಿರುಗಿ ಬಂದರು. ಪಟ್ಟೇವಾಲಾ ಉಸ್ಮಾನ ಅವರ ಮುಂಪೆಯೇ ಇದ್ದ. ಅವನನ್ನು ನೋಡಿದ ಕೂಡಲೇ ರುಕ್ಮಿಣಿಬಾಯಿಯವರು ಗುಡಾರದಲ್ಲಿಯ ತಮ್ಮ ಖಾಸ ಕೋಣೆಯೊಳಗೆ ಪ್ರವೇಶಿಸಿದರು. ಆಚಾರ್ಯರು ಕುಳಿತ ಸ್ಥಳದಲ್ಲಿಯೇ ಎದ್ದು ನಿಂತರು. ಮಾಮಲೇದಾರರು ಬಂದವರೇ ಆಚಾರ್ಯರತ್ತ ತೀಕ್ಷ್ಣವಾದ ದೃಷ್ಟಿಯನ್ನು ಬೀರಿ ಅವರನ್ನು ಮಾತಾಡಿಸದೆ ತಾವು ಕುಳಿತುಕೊಳ್ಳುವ ಸ್ಥಾನದತ್ತ ನಡೆದರು.

ಇಷ್ಟರಲ್ಲಿಯೇ ಚಾವಡಿಯಿಂದ ಕುಲಕರ್ಣಿ ಶೇಷಪ್ಪ ಹಾಗೂ ಗೋಪಾಳ ರಾಯ ಇವರಿಬ್ಬರೂ ಸಾಲೆಗೆ ಬಂದು ಮಾಮಲೇದಾರರನ್ನು ಕಾಣಲು ಗುಡಾರದ ಒಳಗೆ ನಡೆದರು. ಅವಸರದಲ್ಲಿ ರುಕ್ಮಿಣಿಬಾಯರ ಗುಡಾರದ ಹತ್ತಿರ ನಿಂತಿದ್ದ ಆಚಾರ್ಯರನ್ನು ಅವರು ನೋಡಲೇ ಇಲ್ಲ. ಒಳಗೆ ಬಂದ ಗೋಪಾಳರಾಯ ಕಾಗದಪತ್ರಗಳನ್ನು ಸಾಹೇಬರ ಮುಂದಿಟ್ಟು ಅವರ ಹಸ್ತಾಕ್ಷರಕ್ಕಾಗಿ ಕಾದು ನಿಂತನು. ಶೇಷಪ್ಪನ ಅಧಿಕಪ್ರಸಂಗತನ ಅವನನ್ನು ಸುಮ್ಮನೆ ಕೂಡಗೊಡಲಿಲ್ಲ. “ಗೌಡಕಿರು ಭೆಟ್ಟಿಯಾಗಿ ಬಂದಿರಾ ?” ಎಂದು ಹಲ್ಲುಕಿರಿಯುತ್ತ ಕೇಳಿದ.

ಮಾಮಲೇದಾರರ ಮುಖ ಒಮ್ಮಿಲೆ ಉಗ್ರವಾದದ್ದನ್ನು ನೋಡಿ ಶೇಷಪ್ಪ

ಜೆದರಿದ. ಆದರೆ ಬಾಣ ಬಿಟ್ಟಾಗಿತ್ತು. ಸಾಹೇಬರ ಪ್ರಸನ್ನತೆ ತಿರುಗಿ ಬರುವಂತೆ ಏನು ಮಾಡಬೇಕೆಂಬುದು ತಿಳಿಯದೆ ಕೈಹೊಸೆಯುತ್ತ ನಿಂತುಬಿಟ್ಟ. ಸಾಹೇಬರು ಉಸ್ಮಾನನನ್ನು ಕರೆದು, "ಹೊರಗ ಆಚಾರು ಯಾಕ ಬಂದಾರ ಕೇಳೋ?" ಎಂದು ದರ್ಪದಿಂದ ಆಜ್ಞಾಪಿಸಿದರು.

ಉಸ್ಮಾನ ಹೊರಗೆ ಹೋಗುವ ಪ್ರಸಂಗವೇ ಬರಲಿಲ್ಲ. "ಉಸ್ಮಾನ, ನಾನsi ಕರೆಸಿದ್ದೆನಂತ ಹೇಳೋ" ಎಂದು ರುಕ್ಮಿಣಿಬಾಯರು ಗುಡಾರದೊಳಗಿಂದಲೇ ಉತ್ತರವಿತ್ತರು.

ಮಾಮಲೇದಾರರು ಸುಮ್ಮಗಾದರು. ಯಾವ ಪ್ರತಿಕ್ರಿಯೆಗೂ ಅವಕಾಶ ಉಳಿಯಲಿಲ್ಲೆಂದು ಸಿಟ್ಟು ಬಂತು. "ಗೋಪಾಳರಾವ, ಸಹಿ ಸಲುವಾಗಿ ಕಾಗದ ಪತ್ರ ಇಟ್ಟು ಹೋಗರಿ. ಸಹಿ ಮಾಡಿ ಹಿಂದಾಗಡೆ ಕಳಿಸತೇನಿ. ಶೇಷಪ್ಪ, ನಿಮ್ಮ ದೇನಾರ ಕೆಲಸ ಉಳದದೇನು?" ಎಂದು ಬೇರೆ ಸಲಿಗೆಗೆ ಆಸ್ಪದವೀಯದಂತೆ ಕೇಳಿ ಎದ್ದು ಹೊರಗೆ ಬಂದರು.

ಶೇಷಪ್ಪ ಇನ್ನೂ ಹಲ್ಲುಕಿರಿಯುತ್ತಿದ್ದ; ಕೈಹೊಸೆಯುತ್ತಿದ್ದ. ಸಾಹೇಬರನ್ನು ಹಿಂಬಾಲಿಸುತ್ತ ಹೊರಗೆ ಬಂದು, "ಮತ್ತೇನಿಲ್ಲ. ಆ ದಾದಾನ ಜಾಮೀನ ರದ್ದು ಮಾಡಿಸಿ ಜೇಲಿಗೆ ಕಳಸೋ ಹುಕುಂ ಮಾಡಿದ್ದು..." ಎಂದು ಪ್ರಸ್ತಾಪವೆತ್ತಿದ.

"ಕಾಯದೇಶೀರ ಏನ ಹುಕುಮು ಮಾಡಬೇಕೋ ಅದನ್ನೆಲ್ಲ ಮಾಡತದ. ನೀವೆಲ್ಲಾ ಹೀಂಗ ಸರಕಾರಿ ಕೆಲಸದೊಳಗ ಉಪದೇಶ ಮಾಡಲಿಕ್ಕೆ ಬರಬಾರದು." ಎಂದು ಗದ್ದರಿಸಿದರು.

ರಾಯರ ಪಿತ್ತ ಒಮ್ಮೆಲೇ ಏರಿದ್ದನ್ನು ಕಂಡು ಶೇಷಪ್ಪನಿಗೆ ಆಶ್ಚರ್ಯ ವಾಯಿತು. ಗೌಡಿತಿಯ ಮನೆಗೆ ಹೋದಾಗ ಉಚಿತ ರೀತಿಯಲ್ಲಿ ಸತ್ಕಾರವಾಗಿರ ಲಿಕ್ಕಿಲ್ಲ. ಇಲ್ಲದಿದ್ದರೆ ಮುಕ್ಕಾಲು ಪಾಲು ಕೆಲಸ ಮುಗಿದು ಹೋದಾಗ ಕೊನೆ ಕೊನೆಯ ಭಾಗಕ್ಕೆ ಇಷ್ಟು ಸಿಟ್ಟೇಕೆ? ಕೈಗೆ ಹಣ ಬೀಳದ ಹೊರತೂ ರಾಯರು ಹುಕುಮಿಗೆ ಸಹಿ ಹಾಕಲಾರರು. ಗೌಡಿತಿಯ ಮನೆಯಲ್ಲಿ ನಡೆದ ಸಮಾಚಾರ ವನ್ನು ತಿಳಿದುಕೊಳ್ಳಲೇಬೇಕಾಯಿತು. ಆಯತ ಹೊತ್ತಿನಲ್ಲಿ ಕೆಲಸ ಕೆಡುವಂತಾ ಯಿತಲ್ಲ ಎಂದು ಶೇಷಪ್ಪನಿಗೆ ಸಿಟ್ಟು ಬಂದಿತು. ಇದೇ ವಿಚಾರದಲ್ಲಿಯೇ ಶೇಷಪ್ಪ ಸಾಲೆಯಿಂದ ಹೊರಗೆ ಬಂದ.

ಸಾಲೆಯಲ್ಲಿ ಮಾಮಲೇದಾರರು ತಮ್ಮನ್ನೂ ಕಂಡೂ ಕಾಣದವರಂತೆ

ದರ್ಪದಿಂದ ಒಳಗೆ ನಡೆದದ್ದನ್ನು ನೋಡಿ ಆಚಾರ್ಯರಿಗೆ ಅಪಮಾನವೆನಿಸಿತ್ತು. ಆತಿಥ್ಯವನ್ನು ಸ್ವೀಕರಿಸದಿದ್ದ ಕಾರಣ ಮಾಮಲೇದಾರರ ಪ್ರಕೋಪ ತಮ್ಮ ಮೇಲಾಗಿರುವುದನ್ನು ಅವರು ಮನಗಂಡರು. ಇನ್ನುಮೇಲೆ ಅಲ್ಲಿ ಕುಳಿತು ಪ್ರಯೋಜನವಿಲ್ಲವೆನಿಸಿ ಅವರು ಆಗಲೇ ಅಲ್ಲಿಂದ ಹೊರಬಿದ್ದಿದ್ದರು. ಮೊದಲೇ ಅಸ್ವಸ್ಥವಾಗಿದ್ದ ಅವರ ಮನಸ್ಸು ಈಗ ಸಂಪೂರ್ಣ ತೂಕ ತಪ್ಪಿತ್ತು. ಬಹುಶಃ ಅವರು ತಮ್ಮ ಜಾಮೀನುಪತ್ರವನ್ನು ಕೊಟ್ಟು ಹೊರಗೆ ಬರಬಹುದೆಂದು ಕಾಶೀಮ ಸಾಹೇಬ ಮೊದಲಾದವರು ಅವರ ದಾರಿ ಕಾಯುತ್ತ ಹೊರಗೇ ನಿಂತಿದ್ದರು. ಆಚಾರ್ಯರು ಹೊರಗೆ ಬಂದೊಡನೆ ಅವರನ್ನು ಕೇಳಿ ನಡೆದ ಸಂಗತಿಯನ್ನು ತಿಳಿದು ಕೊಳ್ಳುವ ಆತುರ ಅವರನ್ನು ಪೀಡಿಸುತ್ತಿತ್ತು. ಆಚಾರ್ಯರ ಮನಸ್ಸೆಲ್ಲ ಈಗ ಗೌಡಿತಿ ಯನ್ನು ಕಂಡು ವಿಷಯವನ್ನು ತಿಳಿದುಕೊಳ್ಳುವದರಲ್ಲಿ ನಟ್ಟಿತ್ತು. ಅಂಥದರಲ್ಲಿಯೇ ಕಾಶೀಮಸಾಹೇಬ ಅವರನ್ನು ಸಂಧಿಸಿ, "ಆಚಾರೆಪ್ಪ, ಗಾಡಿ ಇಂದುಪುರಕ್ಕ ಹೋಗಾಕ ಸಜ್ಜ ಆಗ್ಯಾವು. ಮತ್ತ ಗಾಡಿ ಸಂಗಾಟ ಕಳಸಾಕ ದಾದಾನ್ನ ಮೋಕಳೀಕ ಮಾಡಿಸಿದರ್‍ಯಾ?" ಎಂದು ಪರ್ಯಾಯವಾಗಿ ತನ್ನ ಆತುರವನ್ನು ಸೂಚಿಸಿದ.

ಆಚಾರ್ಯರಿಗೆ ಒಮ್ಮೆಲೇ ಉತ್ತರ ಕೊಡಲಾಗಲಿಲ್ಲ. ಶೇಷಪ್ಪ ಹಾಗೂ ಗೌಡಿತಿ ಕೂಡಿ ನಡೆಸಿದ ಕಾರಸ್ಥಾನ ಅವರ ಮನಸ್ಸಿನಲ್ಲಿ ಕೊರೆಯುತ್ತಿತ್ತು. ಚೆನ್ನಪ್ಪ ತಮಗೊಂದೂ ಮಾತು ತಿಳಿಸದೆ, ಗೌಡರ ಮನೆಯಲ್ಲಿ ತಾಸುಗಟ್ಟಲೆ ಮಾತುಕತೆ ನಡೆಸಿದ್ದರ ಗೂಢವಾದರೂ ಏನಿರಬಹುದು? ಇವೇ ವಿಚಾರಗಳೇ ತಲೆಯಲ್ಲಿ ತುಂಬಿದಾಗ ಒಮ್ಮೆಲೆ ಕಾಶೀಮಸಾಹೇಬನ ಪ್ರಶ್ನೆಗೆ ಉತ್ತರವೀಯ ಲಾಗಲಿಲ್ಲ. "ಎಲ್ಲಾ ದೇವರ ಇಚ್ಛಾ ಇದ್ದಾಂಗ ಆಗತದಪಾ!" ಎಂದು ಹೇಳಿ ದೊಡ್ಡದಾಗಿ ನಿಟ್ಟುಸಿರು ಬಿಟ್ಟರು.

"ಹೀಗ ಒಗಟಾ ಹಾಕಿದ್ರಾಗ ಮಾತಾಡಿದರ ನಮಗ ಹ್ಯಾಗ ತಿಳೀಬೇಕರಿ? ಮಾಮಲೇದಾರಸಾಹೇಬರು ಏನಂತಾರು?" ಕಾಶೀಮ ನೇರವಾದ ಪ್ರಶ್ನೆಯನ್ನೇ ಕೇಳಿದ.

ಅದಕ್ಕೆ ಆಚಾರ್ಯರು "ಈಗ ಮಾಮಲೇದಾರರ ಕೈಯಾಗ ಏನೂ ಇಲ್ಲ. ಎಲ್ಲಾ ಸೂತ್ರ ಗೌಡಿತಿ ಕೈಯಾಗ ಅದ. ಅದಕ್ಕ ಅವರನ್ನ ಕಾಣಬೇಕಂತ ಅಲ್ಲೇ ಹೊಂಟೇನಿ" ಎನ್ನುತ್ತ ಆಚಾರ್ಯರು ಮುಂದೆ ಸಾಗಿದರು.

ಆಚಾರ್ಯರ ಈ ಉತ್ತರದಿಂದ ಕಾಶೀಮನಿಗೇನೂ ಸಮಾಧಾನವಾಗಲಿಲ್ಲ.

ಆದರೂ ಇನ್ನೊಂದು ಪ್ರಶ್ನೆ ಕೇಳುವ ಧೈರ್ಯ ಅವನಲ್ಲಿರಲಿಲ್ಲ. ಸುಮ್ಮನೆ ಆಚಾರ್ಯರ ಹಿಂದಿನಿಂದಲೇ ಹೊರಟುಬಿಟ್ಟ. ಶೇಷಪ್ಪ ಇದನ್ನೆಲ್ಲ ನೋಡಿದ. ಎಲ್ಲಿ ಗೌಡಿತಿ ಆಚಾರ್ಯರನ್ನು ನೋಡಿ ಅಪ್ರತಿಭಳಾಗಿ ತಾವು ಮಾಡಿದ ಯೋಜನೆಯನ್ನೆಲ್ಲ ತಿಳಿಸಿಬಿಡುವಳೋ ಎಂದು ಅವನಿಗೆ ಭಯ. ಆದ್ದರಿಂದ ತಾನೂ ಗೌಡಿತಿಯ ಮನೆಗೇ ಹೋಗಿಬಿಡಬೇಕೆಂದು ಅವನಿಗೂ ಮನಸ್ಸಾಯಿತು. ಹಾಗೆ ಹೊರಟೂ ಆಯಿತು. ಆದರೆ ಅಷ್ಟರಲ್ಲಿ ಉಸ್ಮಾನ ಬಂದು ಸಾಹೇಬರು ಕರೆದಿರುವದಾಗಿ ಹೇಳಿದ್ದರಿಂದ, ನಿರುಪಾಯನಾಗಿ ಸಾಹೇಬರ ಹತ್ತಿರ ಹೋಗಬೇಕಾಯಿತು.

ಒಳಗೆ ಮಾಮಲೇದಾರರು ತಮ್ಮ ಪತ್ನಿಯೊಡನೆ ವಾದಿಸುತ್ತಿದ್ದರು. "ಆ ಆಚಾರಿ ಭಾಳ ಸೊಕ್ಕಿನಾವ ಇದ್ದಾನ. ಅವನ್ನ ಕರೆಕಳಿಸಿ ನನ್ನ ಮರ್ಯಾದಿ ತಗಿಯೂ ಅಗತ್ಯ ಏನಿತ್ತು?" ಎಂಬ ಮಾತುಗಳು ಶೇಷಪ್ಪನ ಕಿವಿಗೆ ಬಿದ್ದವು. ಉಸ್ಮಾನ ಶೇಷಪ್ಪನ ಆಗಮನವನ್ನು ಅರುಹಿದ್ದರಿಂದ ಸಾಹೇಬರು ವಾದಿಸುವದನ್ನು ಬಿಟ್ಟು ತಮ್ಮ ಸ್ಥಾನದಲ್ಲಿ ಬಂದು ಕುಳಿತುಕೊಂಡು ಶೇಷಪ್ಪನನ್ನುಕಂಡರು. "ಏನು ಶೇಷಪ್ಪ ಇದು? ಆ ಆಚಾರಿ ಅಲ್ಲೆ ಬಂದು ನಿಂತಾಗ ದಾದಾನ ಜಾಮೀನ ರದ್ದ ಮಾಡಿಸಲಿಕ್ಕೆ ಕೇಳತೀರಿ. ಏನು ಹೇಳಬೇಕು ನಿಮಗ? ಅದೇ ಕೆಲಸಕ್ಕ ಅಂವಾ ಬಂದಿರಬೇಕು ಅಂತ ಕಾಯೂಸ ಕಟ್ಟಿದ್ದೆ. ಅದಕ್ಕ ಅವನ್ನ ಮಾತಾಡಿಸಿರಲಿಲ್ಲ. ಈಗ ನೋಡಿದರ ಹೇಳದ ಕೇಳದ ಹೋಗಿಬಿಟ್ಟಾನ. ಅಂತೂ ಭಾಳ ಸೊಕ್ಕಿನ ಬ್ರಾಹ್ಮಣ ಕಾಣಸತಾನ" ಎಂದು ಮಾತು ಪ್ರಾರಂಭಿಸಿದರು. ಶೇಷಪ್ಪನಿಗೂ ಅಷ್ಟೇ ಬೇಕಾಗಿತ್ತು. ಬಾಳಾಚಾರ್ಯರ ವಿಷಯವಾಗಿ ತನ್ನ ಮನಸ್ಸಿನಲ್ಲಿದ್ದ ವಿಷಯವನ್ನೆಲ್ಲ ಅವರೆದುರು ಕಾರಿಕೊಂಡ. ಶಂಕರಪ್ಪಗೌಡರಿದ್ದಾಗಿನಿಂದಲೂ ಆಚಾರ್ಯರು ನಡೆಸಿದ ಕಾರಭಾರವನ್ನೆಲ್ಲ ಸಾದ್ಯಂತವಾಗಿ ವಿವರಿಸಿದ. ಈಗ ಇಂದು ಪುರದ ರಾಜಪುರೋಹಿತನಾಗುವ ಗರ್ವ ತಲೆಯಲ್ಲಿ ತುಂಬಿದೆಯೆಂದೂ ಉಸುರಿದ. ಅವನ ಸೊಕ್ಕನ್ನಿಳಿಸಲಿಕ್ಕೆ ಒಂದೇ ಉಪಾಯ ಉಳಿದದ್ದು. ದಾದಾನನ್ನು ಜೇಲಿಗೆ ಅಟ್ಟಿದರೆ ಬಾಳಾಚಾರ್ಯರ ಪ್ರಸ್ಥ ತಾನಾಗಿಯೇ ಕರಗಿಹೋಗುವದೆಂದು ತನ್ನ ಅಭಿಪ್ರಾಯವನ್ನೂ ತಿಳಿಸಿದ.

"ಹಾವನೂರವರು ಇಂದು ಬಂದು ಜವಾಬು ಕೊಟ್ಟಿದ್ದರ ಅವನ್ನ ಜೇಲಿಗೆ ಕಳಿಸಿಬಿಡಬಹುದಾಗಿತ್ತು. ಅವರು ಹಾಜರ ಆಗಲಿಲ್ಲ. ಖಟ್ಲೆ ನಡೆಸೂ ಮನಸ ಆವರಿಗೆ ಇದ್ಹಾಂಗಿಲ್ಲ. ಅಂದಮೇಲೆ ದಾದಾನ್ನ ಜೇಲಿಗೆ ಕಳಸೂದು ಸ್ವಲ್ಪ ಕಠಿಣ

ಕಾಣತದ" ಎಂದರು ಮಾಮಲೇದಾರರು.

"ಸದ್ಯಕ್ಕ ಜಾಮೀನು ರದ್ದಮಾಡಿ ಜೇಲಿಗೆ ಕಳಿಸಿಬಿಡ್ರಿ. ಮುಂದ ತಿಂಗಳೊಪ್ಪತ್ತಿನ್ಯಾಗ ಹಾವನೂರವರ ಮನಸ್ಸು ಒಲಿಸಿ ಖಟ್ಲೆ ನಡಸಲಿಕ್ಕಾದೀತು" ಎಂದು ಶೇಷಪ್ಪ ಸೂಚಿಸಿದ. ಅವನ ಕೆರಳಿದ ಮನಸ್ಸು ಯಾವ ನೀಚತನಕ್ಕೂ ಸಿದ್ಧವಾಗಿತ್ತು. ಆದರೆ ಮಾಮಲೇದಾರರು ಅದಕ್ಕೊಪ್ಪುವಂತಿರಲಿಲ್ಲ. ಜಿನ್ನಪ್ಪನ ಜಾಮೀನನ್ನೇನೋ ರದ್ದುಪಡಿಸಬಹುದು. ಆದರೆ ಇನ್ನೊಬ್ಬರ ಜಾಮೀನನ್ನು ಕೊಟ್ಟರೆ ನಿರಾಕರಿಸಲು ಬಾರದು.

ಶೇಷಪ್ಪ ಎದೆಯೊಡೆದುಕೊಂಡವರಂತೆ ಮತ್ತೆ ಬಿನ್ನವಿಸಿದ. ತನ್ನ ಹಾಗೂ ಗೌಡಿತಿಯ ವರ್ಚಸ್ಸನ್ನುಳಿಸಲು ಬೇಡಿಕೊಂಡ. ಮಾಮಲೇದಾರರೂ ಬೇಸತ್ತಿದ್ದರು. "ಆಗಲಿ ನೋಡೂಣಂತ. ಇಂದ ಖಟ್ಲೆ ಪುಕಾರಿಸಿದಾಗ 'ಫಿರ್ಯಾದಿ ಗೈರಹಾಜರ ಇದ್ದರು' ಅಂತ ಪ್ರಕರಣದಾಗ ಬರದಾನೋ ಹ್ಯಾಂಗ ಆ ಗೊಪಾಳ್ಯಾನ್ನ ಕೇಳು. ಈ ಖಟ್ಲೀದ ಚೌಕಶೀ ಡಾಯರಿ ನನ್ನ ಕೇಳಿ ಬರೀಲಿಕ್ಕೆ ಹೇಳು. ಮತ್ತ ನಾಳಿನ ಗಂಗಾರಾಧನಿ ಕೆಲಸಾನ, ಆ ನಾರಣಾಚಾರಿನ್ನ ಬಿಟ್ಟು ಬ್ಯಾರೆ ಆಚಾರಿಗೆ ಒಪ್ಪಿಸು." ಎಂದು ಹೇಳಿ ಶೇಷಪ್ಪನನ್ನು ಕಳಿಸಿದರು.

ರುಕ್ಮಿಣಿಬಾಯಿಯವರು ಒಳಗೆ ನಿಂತುಕೊಂಡೇ ಇವರಿಬ್ಬರ ಸಂಭಾಷಣೆಯನ್ನು ಕೇಳುತ್ತಿದ್ದರು. ಬಾಳಾಚಾರ್ಯರು ಬಂದು ಹೋದ ಮೇಲೆ ಅವರ ಮನಸ್ಥಿತಿಯೂ ವಿಪರ್ಯಸ್ತವಾಗಿತ್ತು. "ದಾದಾ ತಮ್ಮ ಅಪ್ಪಗ ಒಬ್ಬನs ಮಗಾ" ಎಂದು ಹೇಳಿದ ಮಾತಂತೂ ಅವರ ತಾಯ್ಗರುಳನ್ನು ಕಲಕಿತ್ತು. ಶೇಷಪ್ಪ ಹೊರಗೆ ಹೊರಡುತ್ತಲೇ ಅವರು ಯಜಮಾನರ ಸಮ್ಮುಖದಲ್ಲಿ ಬಂದೇ ನಿಂತರು. "ಇಂಥಾ ಜನರ ಮಾತು ಕೇಳಿ ತಂದಿ-ಮಗನ್ನ ಅಗಲಸತೀರಿ. ಆದರ ಪಾಪ ಬೆನ್ನ ಹತ್ತಿ ಕಿತ್ತಿಮುಕ್ಕತದ. ಇದ್ದ ಒಂದ ಕೂಸಿನ್ನ ದೇವರು ಕಸಗೊಂಡ. ನಿಮ್ಮ ಇಂಥಾ ಕರ್ಮ ನೋಡೀನೂ ಮಕ್ಕಳನ್ನ ಕೊಡಲಿಕ್ಕೆ ದೇವರೇನು ಕುರುಡು ಅಲ್ಲ" ಸ್ತ್ರೀಸಹಜವಾದ ನಿಷ್ಠುರತೆಯೊಂದಿಗೆ ಅವರು ಹೇಳಿದರು.

ಮಾಮಲೇದಾರ ಕೃಷ್ಣರಾಯರಿಗೆ ಹೆಂಡತಿಯ ಈ ಮಾತು ಕೇಳಿ ಆಘಾತವಾದಂತಾಯಿತು. ಅವರು 'ಜಬರಿ ಮಾಮಲೇದಾರ'ರೆಂದೇ ಪ್ರಸಿದ್ಧರಾದವರು. ಅವರೆದುರು ನಿಂತು ಮಾತಾಡುವ 'ಛಾತಿ' ಯಾರಿಗೂ ಇರಲಿಲ್ಲ. ಆಜಾನುಬಾಹು ದೇಹ, ಕಠಿಣವಾದ ಕಣ್ಣು, ಕೋರೆಮೀಸೆಗಳನ್ನು ನೋಡಿ ಮಾತನಾಡುವ ಧೈರ್ಯ

ದೇಸಾಯಿ ದೇಶಪಾಂಡೆಯಂಥವರಿಗೂ ಆಗುತ್ತಿರಲಿಲ್ಲ. ಆದರೆ ಇಷ್ಟಿದ್ದರೂ ರಾಯರು ಮಾತ್ರ ಪತ್ನೀಭೀತರಾಗಿದ್ದರು. ಅದಕ್ಕೂ ಕಾರಣವಿಲ್ಲದೆ ಇರಲಿಲ್ಲ. ಚಿಕ್ಕಂದಿನಲ್ಲಿ ಬಡತನದ ಮೂಲಕ ವಾರದ ಮನೆಗಳಲ್ಲಿ ಊಟಮಾಡಿ ವಿದ್ಯೆ ಕಲಿತ ಜೀವ ಅವರದು. ರುಕ್ಮಿಣಿಬಾಯಿಯವರ ತಂದೆ ಈ ಹುಡುಗನ ವಿದ್ಯಾ ಸಂಪನ್ನತೆಯನ್ನು ಮೆಚ್ಚಿ ಅಳಿಯನನ್ನಾಗಿ ಮಾಡಿಕೊಳ್ಳುವ ಔದಾರ್ಯವನ್ನು ತೋರಿಸಿದ್ದರು. ಅಂದಿನಿಂದ ಕೃಷ್ಣರಾಯರು ತಮ್ಮ ಹೆಂಡತಿಯನ್ನೇ ಭಾಗ್ಯಲಕ್ಷ್ಮಿ ಯೆಂದು ತಿಳಿದು ಪೂಜಿಸಿದ್ದರೆ ಆಶ್ಚರ್ಯವೇನಿಲ್ಲ! ರುಕ್ಮಿಣಿಬಾಯಿಯ ದರ್ಪ ಅನ್ಯಾದೃಶವಾಗಿತ್ತು. ಮಕ್ಕಳಾಗದ ಕೊರತೆಯೊಂದು ಇದ್ದೇ ಇತ್ತು. ಅವರಲ್ಲಿಯೂ ಇದ್ದ ಒಂದು ಗಂಡುಕೂಸು ಒಂದು ವರ್ಷದಲ್ಲಿಯೇ ಸತ್ತುಹೋದದ್ದರಿಂದ ಅವರ ಸಿಡುಕುತನ ಇನ್ನೂ ಹೆಚ್ಚಾಗಿತ್ತು. ಇಂದಂತೂ ಬಾಳಾಚಾರ್ಯರ ಉಪದೇಶ ಅವರ ಮನಸ್ಸಿಗೆ ನೋವನ್ನುಂಟುಮಾಡಿತ್ತು. ಗಂಡನ ಇಂಥ ಅನ್ಯಾಯದ ವರ್ತನೆ ಗಳಿಂದಲೇ ಮಕ್ಕಳಾಗುವ ಯೋಗ ತನಗೆ ಒದಗಲಿಲ್ಲವೆಂಬ ಅವರ ನಿಶ್ಚಿತ ಸಿದ್ಧಾಂ ತಕ್ಕೆ ಮತ್ತೊಮ್ಮೆ ಪುಟ ಸಿಕ್ಕಂತಾಯಿತು. ಆದ್ದರಿಂದ ಈಗಿಂದೀಗ ದಾದಾನನ್ನು ಕರೆಸಿ ಬಿಡುಗಡೆ ಮಾಡಬೇಕೆಂದು ಒತ್ತಾಯದ ಆಜ್ಞೆಯನ್ನೇ ವಿಧಿಸಿದರು. ಮಾಮಲೇದಾರರು ವಿಧಿಯಿಲ್ಲದೆ ಮುಖ ಕೆಳಗೆ ಹಾಕಿಕೊಂಡು ಒಪ್ಪಿದರು.

ದಾದಾನನ್ನು ಕರೆಯಲು ಉಸ್ಮಾನನ ಮೂಲಕ ಕರೆ ಹೋಯಿತು. ಅವ ನನ್ನು ಮಧ್ಯಾಹ್ನದಿಂದ ಗೋಪಾಳರಾಯ ಚಾವಡಿಯಲ್ಲಿ ಕೂಡಿಸಿಕೊಂಡಿದ್ದ. ಮಾಮಲೇದಾರರ ಹುಕುಮಾಗುವ ವರೆಗೆ ಆರೋಪಿ ದಾದಾ, ಚಾವಡಿಯನ್ನು ಬಿಟ್ಟು ಹೋಗಬಾರದೆಂದು ಪೋಲೀಸರಿಗೆ ತಾಕೀದು ಮಾಡಿದ್ದ. ಉಸ್ಮಾನ ಬಂದು ಕರೆದಾಗ ವಿಧಿಯಿಲ್ಲದೆ ದಾದಾನನ್ನು ಬಿಡಬೇಕಾಯಿತು. ಗೋಪಾಳರಾಯ ಅವನ ಹಿಂದಿಂದಲೆ ಸಾಹೇಬರಿರುವ ಸಾಲೆಗೆ ಬಂದ. ಜೊತೆಗೆ ಜಿನ್ನಪ್ಪನ ಜಾಮೀನನ್ನು ರದ್ದುಪಡಿಸುವ ಕಾಗದ-ಪತ್ರಗಳನ್ನು ಸಾಹೇಬರ ಸಹಿಗಾಗಿ ತಂದಿದ್ದ.

ಗೋಪಾಳರಾಯ ಅಂಜುತ್ತಂಜುತ್ತಲೇ ಕಾಗದ-ಪತ್ರಗಳನ್ನು ಸಹಿಗಾಗಿ ಸಾಹೇಬರ ಮುಂದೆ ಚಾಚಿದ. ಅವುಗಳನ್ನು ನೋಡುತ್ತಲೇ ಸಾಹೇಬರ ಮುಖದ ಬಣ್ಣ ಒಮ್ಮೆಲೇ ಬದಲಾಯಿತು. ಹುಬ್ಬುಗಂಟಿಕ್ಕಿದವು; ಮೀಸೆಯ ಕೊನೆಗಳು ಕುಣಿದವು. "ಪೆನ್‌ಶನ್ ತಗೊಳ್ಳೊ ದಿವಸ ಬಂದರೂ ಮ್ಯಾಜಿಸ್ಟ್ರೇಟರ ದಪ್ತರಿ ನ್ಯಾಗಿನ ಕಾಗದ-ಪತ್ರ ತಯಾರಿಡಲಿಕ್ಕೆ ನಿನಗೇನು ಬರಲಿಲ್ಲ. ಫಿರ್ಯಾದಿ ಗ್ಯೆರ

ಹಾಜರ ಇದ್ದಾಗ ಖಟ್ಲೆ ಕಿತ್ತಿ ಹಾಕಬೇಕು. ಇದು ನಿನಗ ತಿಳೀಲಿಲ್ಲಽ? ಫಿರ್ಯಾದಿ ಅರ್ಜಿ ಕಿತ್ತಿ ಹಾಕಿದ ಮ್ಯಾಲೆ ಆರೋಪಿ ಮೋಕಳೀಕ ಆಗತಾನ. ಜಾಮೀನ ರದ್ದ ಆಗೇದಂತ ಪೋಲೀಸ ತಾಬಾ ಮಾಡಬೇಕಂತ ಈ ನೋಟ ಏನ ಬರಕೊಂಡ ಬಂದೀದಿ?" ಎಂದು ಗದ್ದರಿಸಿದರು.

"ಮತ್ತ ನೀವೇನೋ ಆ ಶೇಷಪ್ಪನ ಸಂಗತಿ ಹೇಳಿಕಳಿಸಿದಿರಂತ.... ಮತ್ತ ನೋಟೀಸು ಜಾರಿ ಆಗಲಿಲ್ಲ, ಮುದ್ದತು ಹಾಕಿತು ಅಂತ ಕೇಸ-ಡಾಯರಿ ಬರದರ ಎಲ್ಲಾ ಸರಿಯಾಗತದ" ಗೋಪಾಳರಾಯ ಏನನ್ನೋ ನೆನಪು ಮಾಡಿಕೊಡುವಂತೆ ಪರ್ಯಾಯವಾಗಿ ಸಲಹೆಯಿತ್ತ.

"ಇನ್ನ ಮೂರೇ ದಿನಕ್ಕ ಪ್ರಾಂತಸಾಹೇಬರು ಮುಕ್ಕಾಂ ಹಾಕಾವರಿದ್ದಾರ. ಫಿರ್ಯಾದಿ ಗೈರಹಾಜರ ಇದ್ದರೂ ಖಟ್ಲೆ ಕಿತ್ತಿಹಾಕಿಲ್ಲ ಅಂತ ಆ ದಾದಾ ಒಂದು ಅರ್ಜಿ ಜಡದರ ಭಲೋ ಮಂಗಳಾರತಿ ಆಗತದ. ಖೊಟ್ಟಿ ಕಾಗದ-ಪತ್ರ ಆನಿಸಿದರ ನಿನ್ನ ಗತಿ ಏನಾದೀತು ನೋಡಿಕೋ! ಶೇಷಪ್ಪ ಹೇಳಿದನಂತ, ಇಂವಾ ಖೊಟ್ಟಿ ಡಾಯರಿ ಬರೀಲಿಕ್ಕೆ ಹೇಳತಾನಂತ. ಇರಲಿ ಹೋಗು, ಕೇಸು ಕಿತ್ತಿ ಹಾಕೇದ ಅಂತ ಶರಾ ಬರಕೊಂಡು ಬಾ. ಮತ್ತ ಆ ದಾದಾಗ ಕರೆಕಳಿಸಿದ್ದೆ, ಇನ್ನೂ ಯಾಕ ಬರಲಿಲ್ಲ ಅಂವಾ?"

ಒಂದು ನಿಮಿಷದಲ್ಲಿ ಮಾಮಲೇದಾರರ ಮುಖಮುದ್ರೆ ನಾಲ್ಕಾರು ಭಾವ ಲಹರಿಗಳ ರಂಗಭೂಮಿಯಾಗಿ ಮತ್ತೆ ಮೊದಲಿನ ಸ್ಥಿತಿಗೆ ಬಂದಿತ್ತು.

"ಬಾಹರ ಆರೋಪಿ ಹಾಜರ ಹೈ ರಾವಸಾಬ" ಉಸ್ಮಾನ ಕೂಗಿದ.

"ಕೃಷ್ಣರಾಯರು ಎದ್ದು ಹೊರಗೆ ಬಂದು ನಿಂತು ಪೋಲೀಸರ ಜೆಂಗಾವಲಿನಲ್ಲಿ ನಿಂತ ದಾದಾನನ್ನು ನೋಡಿ "ಹಾವನೂರಿನವರ್ನ ಹೊಡದ ಆರೋಪಿ ನೀನಽ ಏನೋ?" ಎಂದರು.

"ಹೌದರಿ" ಎಂದು ದಾದಾ ಗೋಣು ಹಾಕಿದ.

ಮಾಮಲೇದಾರರು "ಇಂದು ಫಿರ್ಯಾದಿ ಗೈರಹಾಜರ ಇದ್ದದ್ದರಿಂದ ನಿನ್ನ ಮ್ಯಾಲಿನ ಖಟ್ಲೆ ಕಿತ್ತಿ ಹಾಕೇದ. ನೀ ಈಗ ಮನೀಗೆ ಹೋಗು" ಎಂದು ಬಿಡುಗಡೆಯ ಆಜ್ಞೆ ಮಾಡಿದ್ದರು.

ದಾದಾನ ಕಣ್ಣುಗಳಲ್ಲಿ ಕೃತಜ್ಞತೆ ತುಂಬಿ ತುಳುಕಿತು. ಏನು ಮಾಡಬೇಕೆಂಬುದೇ ತಿಳಿಯಲಿಲ್ಲ. ಕ್ಷಣಹೊತ್ತು ಮೌನವಾಗಿಯೇ ಇದ್ದ. ಆಮೇಲೆ

ಮಾಮಲೇದಾರರಿಗೆ ರಾಮರಾಮ ಮಾಡಿ ಅಲ್ಲಿಂದ ನೇರವಾಗಿ ಬಾಳಾಚಾರ್ಯರ ಮನೆಗೇ ಹೊರಟ. ಆಚಾರ್ಯರ ಮನೆಯ ಹತ್ತರ ಬಂದಾಗ ವಾಲೀಕಾರ ಮಲ್ಲ ಅವನನ್ನು ಕಂಡು, "ತಮ್ಮಾ ನಿನ್ನ ದಶಿಯಿಂದನ ಗೌಡರ ಮನ್ಯಾಗ ಆಚಾರಪ್ಪಗ ಮತ್ತ ಕುಲಕರ್ಣ್ಯಾರಿಗೆ ರಣಕದನ ನಡದೈತಿ. ಮತ್ತ ನೀ ಹ್ಯಾಗ ಚಾವಡಿಯಿಂದ ಇಲ್ಲಿಗೆ ಬಂದಿ?" ಎಂದು ಕೇಳಿದ.

"ಖಟ್ಲಿ ಕಿತ್ತಿ ರಾವಸಾಹೇಬರು ಮೋಕಳೀಕ ಮಾಡ್ಯಾರು" ಎಂದು ಹೇಳಿ ದವನೇ ಗೌಡರ ಮನೆಯತ್ತ ಧಾವಿಸಿದ. ವಾಲೀಕಾರ ಮಲ್ಲನೂ ಅವನನ್ನು ಹಿಂಬಾಲಿಸಿದ.

ಇವನು ಹೋಗುವದಕ್ಕೇ ಬಾಳಾಚಾರ್ಯರು ಕೆಲ ಜನರೊಡನೆ ಗೌಡರ ಮನೆಯಿಂದ ಹೊರಬಿದ್ದರು. ದಾದಾ ಅವರ ಕಾಲಿಗೆ ಬಿದ್ದು "ನಿಮ್ಮ ಪುಣ್ಯೇದಿಂದ ಬಿಡುಗಡಿ ಆಗಿ ಬಂದ್ನಿರಿ" ಎಂದು ನುಡಿದ.

ಆಚಾರ್ಯರಿಗೆ ಸಂತೋಷವಾಯಿತೋ ದುಃಖವಾಯಿತೋ ಗೊತ್ತಾಗ ಲಿಲ್ಲ. "ಎಲ್ಲಾ ಶ್ರೀಹರಿ ಇಚ್ಛಾ!" ಎಂದು ಸದ್ಗದಿತಕಂಠದಿಂದ ಹೇಳಿದರು.

ವಾಲೀಕಾರ ಮಲ್ಲ ಈ ಸುದ್ದಿಯನ್ನು ಆಗಲೇ ತನಗೆ ಭೆಟ್ಟಿಯಾದವರಿಗೆಲ್ಲ ಹೇಳಿದ್ದ. ಕಾಶೀಮಸಾಹೇಬ "ದಾದಾನ ಮೆರವಣಿಗಿ ತಗಿಯೂನು" ಎಂದು ಉತ್ಸಾಹದ ಯೋಜನೆಯನ್ನು ಹಾಕಿದ. "ದಾದಾ ಗಾಡೀ ಜೋಡಿ ಇಂದುಪುರಕ್ಕ ಹೋಗಲಿಕ್ಕೇ ಬೇಕು" ಎಂದು ಆಚಾರ್ಯರು ಹೇಳಿ ಅವನ ಉತ್ಸಾಹಕ್ಕೆ ತಣ್ಣೀರೆರ ಚಿದರು.

ಗೌಡರ ಮನೆಯ ಒಳಗೆ ಈ ಸುದ್ದಿ ಇನ್ನೊಂದು ರೀತಿಯ ಪರಿಣಾಮ ವನ್ನು ಉಂಟುಮಾಡಿತು. ಕುಲಕರ್ಣಿ ಶೇಷಪ್ಪ ಇನ್ನೂ ಅಲ್ಲಿಯೇ ಇದ್ದ. ಗೌಡಿತಿ ಈ ಸುದ್ದಿಯನ್ನು ಕೇಳಿದವಳೇ ಗಾಬರಿಯಿಂದ ಕಣ್ಣು ತೆರೆದು "ಕುಲಕರ್ಣ್ಯಾರ ಇನ್ನೂರು ರೂಪಾಯಿ ನೀರು ಕುಡದ್ಹಾಂಗ ಆತು. ಅದೂ ಹೋಗಲಿ, ಊರ ಜನರಿಗೆಲ್ಲಾ ಇದರ ನಿಂತಾಕಿ ಅಂತ ಕೆಟ್ಟ ಹೆಸರ ಬ್ಯಾರೆ ಬಂತಲ್ರಿ" ಎಂದು ನಿಟ್ಟು ಸಿರು ಬಿಟ್ಟಳು. ಶೇಷಪ್ಪನೂ ಉಗುಳು ನುಂಗುತ್ತಲೇ ಇದ್ದ. "ಗಾಬರಿ ಆಗ ಬ್ಯಾಡ್ರಿ, ಮಾಮಲೇದಾರರು ಇದರೊಳಗ ಹೊಸಾ ಮಸಲತ್ತು ಹಾಕಿರಬೇಕು" ಎಂದ. ಪಾರ್ವತೆವ್ವ ಅತ್ತ ಲಕ್ಷ್ಯವನ್ನೇ ಕೊಡಲಿಲ್ಲ. ತಾನೇನೋ ದೊಡ್ಡ ಅಪರಾಧ ಮಾಡಿದಂತಾಗಿತ್ತು ಅವಳಿಗೆ. ತಲೆಯ ಮೇಲೆ ಕೈಹೊತ್ತು ಯೋಚಿ

ಸುತ್ತ ಕುಳಿತುಬಿಟ್ಟಳು.

ಕತ್ತಲಾಗಿತ್ತು. ಆಳು ಬಂದು ದೀಪ ಹಚ್ಚಿದಾಗ ಬೆಳಕಾಯಿತು. ಪಾರ್ವತೆವ್ವ ದೀಪಕ್ಕೆ ಕೈಮುಗಿದು ಶೇಷಪ್ಪನಿಗೂ ನಮಸ್ಕಾರ ಮಾಡಬೇಕೆಂದು ನೋಡಿದಾಗ ಅವನು ಅಲ್ಲಿರಲಿಲ್ಲ. ಯಾವಾಗಲೋ ಅಲ್ಲಿಂದ ಜಾರಿಕೊಂಡಿದ್ದ. ಪಾರ್ವತೆವ್ವನಿಗೆ ವೈಮನಸ್ಸುಗಳೆಲ್ಲ ಒಮ್ಮೆಲೆ ದಣಿದಂತಾಗಿ ಮೇಲೇಳುವದಕ್ಕೂ ಆಗಲಿಲ್ಲ. ಎಂದೂ ಅನುಭವಿಸದಿದ್ದ ಸೋಲು ಅವಳನ್ನು ನಿರ್ವಿಣ್ಣಳನ್ನಾಗಿ ಮಾಡಿತ್ತು. ತಾನು ಹೆಣ್ಣು ಹೆಂಗಸು, ಈ ಗೊಂದಲದಲ್ಲಿ ಹೋದದ್ದಾದರೂ ಏಕೆ ಎಂದು ದುಃಖವಾಯಿತು. ಶಂಕರಪ್ಪಗೌಡರು ತೀರಿಕೊಂಡ ಮೇಲೆ ಗೌಡಿತಿಯಾಗಿ ತನ್ನ ಮನೆತನದ ಗೌರವವನ್ನು ಕಾಯಬೇಕೆಂಬ ಸದುದ್ದೇಶವೇ ತನ್ನನ್ನು ಈ ದುಃಖಕ್ಕೆ ಈಡುಮಾಡಿತ್ತು. ಮುಂದೇನು ಎಂಬ ಪ್ರಶ್ನೆ ಅವಳ ಮನಃಪಟಲದಲ್ಲಿ ಮೂಡಿತು. ಶೇಷಪ್ಪನ ಸಲಹೆಯಂತೆ ಇನ್ನುಮೇಲಂತೂ ವರ್ತಿಸುವದು ಸಾಧ್ಯವಿರಲಿಲ್ಲ. ಬಾಳಾಚಾರ್ಯರ ಮಾತಿನಂತೆ ನಡೆಯಲು ಮುಖ ಉಳಿದಿರಲಿಲ್ಲ. ತನ್ನ ಊರಿನಲ್ಲಿಯೇ ತನಗೆ ಬೆಂಬಲಿಗರು ಉಳಿಯಲಿಲ್ಲವಲ್ಲ! ತನ್ನ ಪ್ರಾಣಕ್ಕಿಂತ ಗೌಡರ ಮನೆಹೊಲಗಳನ್ನು ಕಾಯುತ್ತಿದ್ದ ದಾದಾನನ್ನೂ ಕಳೆದುಕೊಂಡಂತಾಯಿತು.

ಪಾರ್ವತೆವ್ವನಿಗೆ ಭಯ ಆವರಿಸಿತು. ಇಷ್ಟು ದಿನ ಅಭಿಮಾನ ಧೈರ್ಯವನ್ನು ತಂದುಕೊಟ್ಟಿತ್ತು. ಆದರೆ ಕ್ಷಣದಲ್ಲಿ ಆ ಅಭಿಮಾನ ಕರಗಿ ನೀರಾಗಿತ್ತು. ತನ್ನ ಪರಿಸ್ಥಿತಿ ಇಡೀ ಹಾದಳ್ಳಿಯೇ ಬೊಟ್ಟು ...ಡಿ ತೋರಿಸುವಂತಾಯಿತಲ್ಲ! ಇನ್ನುಮೇಲೆ ಯಾರನ್ನು ನಂಬುವದು? ಯಾ...ನ್ನು ಕೇಳಿ ಬದುಕು ನಡೆಸಬೇಕು? ಒಮ್ಮೆಲೇ ತಾನು ತನ್ನ ಮಕ್ಕಳು ಅನಾಥರಾದೆವಲ್ಲ! ಮನೆತುಂಬ ದನ-ಕರು, ಆಸ್ತಿ-ಹೊಲ, ಊರ ಸುತ್ತಲೂ ಇರುವ ಜಮೀನು ಒಂದೂ ಮಾನರಕ್ಷಣೆಗೆ ನೆರವು ನೀಡದಾದವು. ಪಾರ್ವತೆವ್ವನಿಗೆ ಒಮ್ಮೆಲೆ ತನ್ನ ಅಣ್ಣನ ನೆನಪಾಯಿತು. ತನ್ನ ಮಗಳನ್ನು ಲಗ್ನ ಮಾಡಿಕೊಡಲು ಶಂಕರಪ್ಪಗೌಡರು ಒಪ್ಪಲಿಲ್ಲವೆಂದು ಗುರುಲಿಂಗಪ್ಪ ಸಿಟ್ಟಾಗಿ ಹೋದವ ತಿರುಗಿ ಗೌಡರ ಮನೆಯ ಕಟ್ಟೆಯನ್ನು ಏರಿರಲಿಲ್ಲ. ಈಗ ಅವನಿಗೇ ಶರಣು ಹೋಗದೆ ಗತ್ಯಂತರವಿರಲಿಲ್ಲ. ಗೌಡರು ತೀರಿಕೊಂಡಾಗ ಕೂಡ ತನ್ನನ್ನು ಮಾತಾಡಿಸಲಿಕ್ಕೆ ಬರದ ಅಣ್ಣನ ಕಾಲು ಹಿಡಿಯಬೇಕೇ ಎಂಬ ಅನುಮಾನ ಮೂಡಿತು. ಆದರೂ ಅದೊಂದೇ ಉಪಾಯ ಉಳಿದಿತ್ತು. ಇದೇ ವಿಚಾರಗಳಲ್ಲಿ ಪಾರ್ವತೆವ್ವನಿಗೆ ಆ ರಾತ್ರಿ ನಿದ್ದೆ ಹತ್ತಿರಲಿಲ್ಲ.

ಆ ರಾತ್ರಿ ನಿದ್ದೆಗೇಡಾದ ಇನ್ನೊಂದು ವ್ಯಕ್ತಿ ಎಂದರೆ ರುಕ್ಮಿಣಿಬಾಯಿ. ಅವರ ಸಲಹೆಯಂತೆ ಮಾಮಲೇದಾರರು ಅಂದು ಸಂಜೆ ಬಾಳಾಚಾರ್ಯರನ್ನು ಕರೆಸಿಕೊಂಡು ಗಂಗಾಸಮಾರಾಧನೆಯನ್ನು ಮಾಡಿಸಲು ಬಿನ್ನವಿಸಿಕೊಂಡಿದ್ದರು. ರುಕ್ಮಿಣಿಬಾಯಿಯವರು ತಮ್ಮ ಮಾತು ನಡೆಸಬೇಕೆಂದು ಅಂಗಲಾಚಿದ್ದರು. ಆದರೆ ಆಚಾರ್ಯರಿಗೆ ಧರ್ಮಸಂಕಟ ಪ್ರಾಪ್ತವಾಗಿತ್ತು. ಕನ್ಯಾಗತದ ಪ್ರಸಂಗದಲ್ಲಿ ಸಂಕಲ್ಪ ಹೇಳುವದು, ತೀರ್ಥಶ್ರಾದ್ಧ ಮಾಡಿಸುವದು ಇವುಗಳನ್ನು ಹಿಡಿಯು ವದಿಲ್ಲವೆಂದು ಅವರು ಗಂಗೆಯನ್ನು ಮುಟ್ಟಿ ಆಣಿಮಾಡಿದ್ದರು. "ಇದು ಒಂದಕ್ಕ ನನ್ನ ಮ್ಯಾಲೆ ಜುಲಮಿ ಮಾಡಬೇಡ್ರಿ. ಈ ಕೆಲಸ ನಾರಾಯಣನಿಂದನಽ ಆಗ ತಕ್ಕದ್ದು. ಅಂವಗಽ ಒಪ್ಪಿಸರಿ" ಎಂದು ಉಪಾಯಗಾಣದೆ ಆಚಾರ್ಯರು ಹೇಳಿ ದ್ದರು. ರುಕ್ಮಿಣಿಬಾಯಿಗೆ ಎಲ್ಲಿಲ್ಲದ ಕೋಪ ಬಂದಿತು. "ದಾದಾನ್ನ ಬಿಡಿಸಿದ್ದಽ ತಪ್ಪಾತು ಬಿಡ್ರಿಪಾ" ಎಂದು ಕಡ್ಡಿ ಮುರಿದಂತೆ ಮಾತಾಡಿದ್ದರು.

ಬಾಳಾಚಾರ್ಯರ ಸ್ವಭಾವದ ಪರಿಣಾಮ ಈ ಇಬ್ಬರು ವ್ಯಕ್ತಿಗಳ ಮೇಲೆ ಎರಡೊಂದು ರೀತಿಯಲ್ಲಿ ಆಗಿತ್ತು. ಪಾರ್ವತೆವ್ವ ದುಃಖಿಸುತ್ತಲೇ ಇಡೀ ರಾತ್ರಿ ಕಳೆದಳು; ಅಭಿಮಾನಭಂಗದಿಂದ ನಿದ್ದೆಯಿಲ್ಲದೆ ರುಕ್ಮಿಣಿಬಾಯಿಯವರು ಹೊರ ಳಾಡುತ್ತಿದ್ದರು.

:: ೩೧ ::

ಮರುದಿನ ಬೆಳಗಾದೊಡನೆ ಮಾಮಲೇದಾರರು ಗೋಪಾಳರಾಯನನ್ನು ಕರೆಸಿದರು. ಪ್ರಾಂತಸಾಹೇಬರಿಂದ ಬಂದ ಪತ್ರವನ್ನು ಅವನಿಗೆ ತೋರಿಸಿ, ಪಾದಳ್ಳಿಗೆ ಮಹಾರಾಜರು ಬರುವವರಿದ್ದದ್ದರಿಂದ ಅವರ ಸ್ವಾಗತದ ವ್ಯವಸ್ಥೆಯನ್ನು ಮಾಡಲು ಶೇಷಪ್ಪನಿಗೆ ಹೇಳಲು ತಿಳಿಸಿದರು. ಗೋಪಾಳರಾಯನಿಗೆ ಆ ಸುದ್ದಿಯನ್ನು ಕೇಳಿಯೇ ಸಿಡಿಲು ಬಡಿದಂತಾಯಿತು. ಊರೂರಿಗೆ ದಾಳಿ ಮಾಡುತ್ತ ಸರಬ ರಾಯಿಯನ್ನು ಅನುಭವಿಸುವ ರೆವ್ಹಿನ್ಯೂಖಾತೆಯವರೇ ಈಗ ಇನ್ನೊಬ್ಬರ ಸರಬ ರಾಯಿಯನ್ನು ಮಾಡುವದೆಂದರೆ ಎಂಥ ಅಪಮಾನಕರ! ಆದರೆ ಸಾಹೇಬರಿಗೆ

ಎದುರುತ್ತರ ಕೊಡುವಂತಿರಲಿಲ್ಲ. ಅವರಾದರೂ ಏನು ಮಾಡಬೇಕು? ಪ್ರಾಂತ ಸಾಹೇಬರೇ ಮಹಾರಾಜರ ಸೇವೆ ಮಾಡಲು ಟೊಂಕಕಟ್ಟಿದಾಗ ಉಳಿದವರೂ ಅನುಸರಿಸಲೇಬೇಕಾಗಿತ್ತು. ತಲೆಯಲುಗಿದೊಡನೆ ಬಾಲವೂ ಅಲುಗುವದು ಅಧಿಕಾರದ ಅಗತ್ಯ ನಿಯಮಗಳಲ್ಲೊಂದಾಗಿತ್ತು.

ಗೋಪಾಳರಾಯ ಶೇಷಪ್ಪನಿಗೆ ಈ ಸುದ್ದಿಯನ್ನು ಹೇಳಿ ಚೇಷ್ಟೆಗಾರಂಭಿಸಿದ. "ಸಾವೆಲ್ಲಾ ಇನ್ನ ಪೆನ್‌ಶನ್ ತೊಗೋಬೇಕಪಾ! ಇನ್ನ ನೌಕರಿ ಮಾಡೂದರಾಗ ಏನೂ ಅರ್ಥ ಇಲ್ಲ. ಆ ಸಂಸ್ಥಾನಿಕಗ ಒಂದು ನೂರು ಸರ್ವೆ ನಂಬರು ಅವನೋ ಇಲ್ಲೋ, ನಮ್ಮ ಪ್ರಾಂತಸಾಹೇಬರು ಅವನ ಕಾಲು ಹಿಡೀಬೇಕು? ಏನು ದೈವ ಇದ್ದೀತಪಾ!" ಗೋಪಾಳರಾಯನ ಗೋಳು ಅನಂತವಾಗಿ ಸಾಗಿಯೇ ಇತ್ತು.

ಶೇಷಪ್ಪನಿಗೆ ಮಾತ್ರ ಇದರಿಂದ ಸಮಾಧಾನವಾದಂತಾಗಿತ್ತು. ನಿನ್ನೆಯ ಪ್ರಕರಣ ಸೋಲನ್ನುಂಟುಮಾಡಿತ್ತು; ಅಲ್ಲದೆ ಮಾಮಲೇದಾರರೆದುರು ತನ್ನ ಬೆಲೆಯೂ ಬಹುಮಟ್ಟಿಗೆ ಇಳಿದುಹೋಗಿತ್ತು. ಆದರೆ ಈಗ ಸರಬರಾಯಿಯ ಸಂಭ್ರಮದಲ್ಲಿ ಮಾಮಲೇದಾರರು ತನಗೆ ಶರಣುಬಾರದೆ ಗತ್ಯಂತರವಿರಲಿಲ್ಲ. ಆಗ ಹಿಂದಿನ ಸೋಲನ್ನೆಲ್ಲ ತುಂಬಿಕೊಳ್ಳಲೇಬೇಕೆಂದು ಅವನು ದೃಢಸಂಕಲ್ಪ ಮಾಡಿದ. ಪ್ರಾಂತಸಾಹೇಬರ ಕ್ಯಾಂಪಿನ ಸುದ್ದಿಯನ್ನು ಕೇಳಿ ಇನ್ನೂ ಕೆಲವು ಆಸೆಗಳು ಅವನಲ್ಲಿ ಕೆರಳಿದವು. ಶ್ಯಾಮರಾಯನ ನೇಮಣೂಕಿ ಆಗಗೊಡದಂತೆ ನೋಡುವದು ಅವುಗಳಲ್ಲಿ ಮುಖ್ಯವಾಗಿತ್ತು.

ಮಹಾರಾಜರು ಬರಲಿರುವರೆಂಬ ಸುದ್ದಿ ಶ್ಯಾಮರಾಯನ ಮೂಲಕ ಬಾಳಾಚಾವ್ಹರಿಗೆ ಹಾಗೂ ಜಾಗೀರದಾರರ ರೈತರಿಗೆ ತಿಳಿದಿತ್ತು. ವಾಡೆಯ ಹತ್ತಿರವೇ ಮಂಟಪ ಕಟ್ಟಬೇಕೆಂದು ನಿರ್ಣಯವಾಯಿತು. ಹಾವನೂರಿನ ಗೌಡರು ಇಪ್ಪತ್ತು ಗುಡಾರಗಳನ್ನು ಸಂಜೆಯೊಳಗಾಗಿ ಕಳಿಸಿಕೊಡುವೆವೆಂದು ಹೇಳಿಕಳಿಸಿದ್ದರು. ವಾಡೆಯ ದಿವಾಣಖಾನೆಯಲ್ಲಿ ದರಬಾರ-ಥಾಟಿನ ವ್ಯವಸ್ಥೆಯನ್ನು ಮಾಡಬೇಕೆಂದು ಗೊತ್ತಾಗಿತ್ತು. ಜಾಗೀರದಾರರ ರೈತರಲ್ಲಿ ಕೆಲವರು ಈಗಾಗಲೇ ಗಾಡಿ ಹೂಡಿಕೊಂಡು ನೆರೆಹಳ್ಳಿಗಳಿಗೆ ಬಿಡಿರು-ಗುಡಾರಗಳನ್ನು ತರಲು ಹೋಗಿದ್ದರು. ಮಹಾರಾಜರ ಆಪ್ತರಾದ ಯಶವಂತರಾಯರು ಅಜರಾಣಿಯಿಂದ ಬರುವವರಿದ್ದರು. ಮಂಟಪದ ವ್ಯವಸ್ಥೆಯೆಲ್ಲ ಅವರ ಖಾಸ ದೇಖರೇಖಿಯಲ್ಲಿಯೇ ನಡೆಯಬೇಕಾ

ಗಿತ್ತು. ಪಾದಳ್ಳಿಯ ಅತಿಥಿಸತ್ಕಾರದ ಅಭಿಲಾಷೆ ಒಮ್ಮೆಲೆ ಪ್ರಕಟವಾಗಿತ್ತು.

ಕರ್ತವ್ಯದ ಒಂದು ಭಾಗವೆಂದು ಮಾಮಲೇದಾರರು ವಾಡೆಯ ಹತ್ತರ ಹೋಗಿ ಸಿದ್ಧತೆಯನ್ನೆಲ್ಲ ಕಣ್ಮುಟ್ಟ ನೋಡಿದರು. ಅಲ್ಲಿಯೇ ಅವರು ಬಾಳಾಚಾರ್ಯರನು ಕಂಡದ್ದು. ಬಾಳಾಚಾರ್ಯರೂ ಅದೇ ಕೆಲಸಕ್ಕಾಗಿ ಬಂದವರು, ಮಾಮಲೇದಾರರಿಗೆ. ಸಿದ್ಧತೆಯನ್ನೆಲ್ಲ ತೋರಿಸಿ ವಿವರಿಸಿದರು. ಕೆಲ ವಿಷಯಗಳ ಬಗ್ಗೆ ಇಬ್ಬರಿಗೂ ಭಿನ್ನಾಭಿಪ್ರಾಯ ಬಂದು, ಮಾಮಲೇದಾರರು ಒಳಗಿಂದೊಳಗೇ ಆಚಾರ್ಯರ ಮೇಲೆ ಸಿಟ್ಟಿಗೆದ್ದರು. ಆ ಸಿಟ್ಟು ಹೆಚ್ಚಾಗುವದಕ್ಕೆ ಇನ್ನೊಂದು ಪ್ರಸಂಗವೂ ಕಾರಣ ವಾಯಿತು.

ರುಕ್ಮಿಣಿಬಾಯಿಯವರಿಗೆ ಇನ್ನೂ ಹಟ ಹೋಗಿರಲಿಲ್ಲ. ಬಾಳಾಚಾರ್ಯರೇ ತಮಗೆ ಸಂಕಲ್ಪ ಹೇಳಬೇಕೆಂದು ಅವರು ಮತ್ತೊಮ್ಮೆ ದುಂಬಾಲುಬಿದ್ದರು. “ಅಂವಾ ಏನು ಸಂಕಲ್ಪ ಹೇಳತಾನs. ಈಗ ರಾಜಮಹಾರಾಜರ ಸ್ವಾಗತದೊಳಗ ಬಿದ್ದಾನ.” ಎಂದು ಮಾಮಲೇದಾರರು ಹೇಳಿದರೂ ಕೇಳಲಿಲ್ಲ. ಉಸ್ಮಾನನಿಂದ ಮತ್ತೆ ಆಚಾರ್ಯರಿಗೆ ಕರೆ ಹೋಯಿತು. ಅವರು ಬಂದೊಡನೆ ಮಾಮಲೇದಾರರು ಕಹಿ ಮೋರೆಯಿಂದಲೇ ಮತ್ತೊಮ್ಮೆ ಸಂಕಲ್ಪ ಹೇಳಲು ಕೇಳಿಕೊಂಡರು. ಆಚಾರ್ಯರದು ಅದೇ ಉತ್ತರ. “ಅದೆಂಥಾ ಪ್ರತಿಜ್ಞಾ ಅದು. ನಾವಿಷ್ಟು ಕರೆಯೋದು ಹೆಚ್ಚೋ, ನೀವು ಬರೋದು ಹೆಚ್ಚೋ? ಸ್ವಚ್ಛ ಮನಸಿನ್ಯಾಗಿದ್ದದ್ದನ್ನ ಹೇಳಿಬಿಡ್ರಿ. ನಮಗ ಸಂಕಲ್ಪ ಹೇಳಲಿಕ್ಕೆ ಮನಸ್ಸಿಲ್ಲಾ ಅಂತ ಹೇಳ್ರಿಲ್ಲಾ!” ಎಂದು ರುಕ್ಮಿಣಿ ಬಾಯಿಯಿಂದ ನಿಷ್ಠುರವಾದ ಮಾತು ಬಂದವು.

ಆಚಾರ್ಯರು ಕ್ಷಣಹೊತ್ತು ವಿಚಾರದಲ್ಲಿ ಬಿದ್ದರು. ಯಾವುದೋ ಒಂದು ಭಾವನೆಯ ಸುಳಿಗೆ ಸಿಕ್ಕು ಮಾಡಿದ ಪ್ರತಿಜ್ಞೆ ತಮ್ಮ ಸತ್ವಪರೀಕ್ಷೆಗೇ ಕಾರಣವಾ ಗುತ್ತದೆಂದು ಅವರು ತಿಳಿದಿರಲಿಲ್ಲ. ಇತ್ತೀಚಿನ ಕೆಲ ಘಟನೆಗಳು ಅವರ ಅಂತಃ ಸತ್ವವನ್ನೇ ಹಿಂಡಿ ಹಿಂಡಿ ನೋಡಿದ್ದವು. ಅದರ ಪರಿಣಾಮವಾಗಿಯೋ ಏನೋ ಒಂದು ವಿಧದ ಅನಾಸಕ್ತಿ ಅವರನ್ನು ಆವರಿಸಿತ್ತು.

“ನಾ ನಿನ್ನೇ ಹೇಳೀನೆಲ್ಲ ಸಾಹೇಬರ. ಪ್ರತಿಜ್ಞಾ ಮುರಿಯೋ ಮನಸ್ಸು ನನಗ ಇಲ್ಲ. ನಾರಾಯಣನ ಕಡಿಂದನs ನೀವು ಸಂಕಲ್ಪ ಹೇಳಿಸಿಗೋಬೇಕು. ಇದರಾಗ ಆಗ್ರಹ ಮಾಡಲಿಕ್ಕೆ ಬರಬ್ಯಾಡ್ರಿ” ಎಂದೇ ಹೇಳಿದರು.

ಮಾಮಲೇದಾರರ ಅಭಿಮಾನ ಕುದಿಯಿತು. “ಅಲ್ಲ, ಆಚಾರs, ನಮಗs

ಸಂಕಲ್ಪ ಹೇಳಬಾರದು ಅಂತ ನೀವು ಹಟಾ ಹಿಡದ್ಹಾಂಗ ಕಾಣತದ. ಇಂದು-ಪುರದ ರಾಜಪುರೋಹಿತರಲ್ಲs ನೀವು? ನಾಳೆ ಮಹಾರಾಜರು ಬಂದು ಸಂಕಲ್ಪ ಹೇಳಂದರ ಏನು ಮಾಡತೀರಿ?" ಎಂದರು.

"ಅವರಿಗೂ ಇದs ಉತ್ತರಾ ಅನಿವಾರ್ಯವಾಗಿ ಹೇಳಬೇಕಾಗತದ ಸಾಹೇಬರ" ಆಚಾರ್ಯರು ವಿನಯದಿಂದಲೇ ಉತ್ತರವಿತ್ತರು.

"ಇದು ಖರೇನs ಇದ್ದರ, ನಿಮ್ಮ ಮಾತಿನಂತೆ ದಾದಾನ್ನ ಬಿಡುಗಡಿ ಮಾಡೀವಲ್ಲ, ಅವನ್ನ ಹ್ಯಾಂಗ ರಕ್ಷಣಾ ಮಾಡಿಕೋತೀರೋ ನೋಡತೀನಿ." ಅನಿರೀಕ್ಷಿತವಾಗಿ ಅಧಿಕಾರ ಗುಡುಗು ಹಾಕಿತು.

ಆಚಾರ್ಯರು ಏನೂ ಮಾತಾಡಲಿಲ್ಲ. ಆದರೆ ಒಳಗೊಳಗೇ ಮರುಗಿದರು. ತಮ್ಮ ಪ್ರತಿಜ್ಞೆಗೂ, ಮಾಮಲೇದಾರರ ಕೋಪಕ್ಕೂ, ದಾದಾನ ಬಿಡುಗಡೆಗೂ ಏನು ಸಂಬಂಧ? ಬಿಡಿಸಿದಷ್ಟೂ ತೊಡಕಿನದಾಗುವದೇ ಬಾಳಿನ ರಹಸ್ಯವೇನೋ! ಆದದ್ದಾಗಲಿ ಎಂದರು. ಹೌದು ಅನ್ನಲೇಬೇಕಾಗಿತ್ತು! ಈ ದೃಢತೆ ಬರದ ಹೊರತೂ ಬಾಳನ್ನು ಎದುರಿಸುವದೇ ಸಾಧ್ಯವಿಲ್ಲ. ಯಾವ ಬಲಹೀನ ಈ ಬಾಳ ಕರವಾಳವನ್ನೆತ್ತಿ ಗೆದ್ದಿದ್ದಾನೆ? ಆದರೂ ಒಳಗಿಂದೊಳಗೇ ಹೃದಯವೊಂದು ಸಣ್ಣಾಗಿ ಕೊರೆಯುತ್ತಲಿದೆ. ಬದುಕಿ ಬಾಳುವದಕ್ಕೆ ಈ ನೋವಿನ ದಂಡವನ್ನು ಕೊಡಲೇಬೇಕೇ? ಆಚಾರ್ಯರಿಗೆ ನೋವು ಚಿಕ್ಕಂದಿನಿಂದಲೂ ಸಹಜಸಂಗಾತಿ ಯಾಗಿತ್ತು. ಅದರ ಜೊತೆಗೇ ಸ್ನೇಹಬೆಳೆಸಿಕೊಂಡು ನಿಶ್ಚಿಂತರಾಗಬಹುದು. ಆದರೆ ನೋವಿನ ಮುಖ ಕ್ಷಣಕ್ಕೊಮ್ಮೆ ಬದಲಾಗುತ್ತದೆ.

ವಿಚಾರಗಳು ಒಂದರ ಮೇಲೊಂದು ದಾಳಿಯಿಟ್ಟವು. ಆಚಾರ್ಯರ ಹೆಜ್ಜೆಗಳು ತಡವರಿಸಲಿಲ್ಲ. ಮುಖಮುದ್ರೆಯಲ್ಲಿ ಏನೂ ಬದಲಾವಣೆಯಿರಲಿಲ್ಲ. ಮೇಲು ನೋಟಕ್ಕೆ ಶಾಂತರಾಗಿಯೇ ಸಾಗಿದರು. ಒಳಗೆ ಮಾತ್ರ ದುಃಖ ಹೃದಯವನ್ನು ಕದಿಯುತ್ತಿತ್ತು. ನಿಧಾನವಾಗಿಯೇ ಹೆಜ್ಜೆ ಹಾಕುತ್ತ ಮನೆ ಮುಟ್ಟಿದರು. ಆಚಾರ್ಯರ ಪತ್ನಿ ಆದೇ ನದಿಯಿಂದ ಸ್ನಾನ ಮಾಡಿ, ಮಡಿ-ನೀರನ್ನು ತುಂಬಿಕೊಂಡು ಮನೆಗೆ ಬಂದಿದ್ದರು. ಆಚಾರ್ಯರು ಏನೂ ಮಾತಾಡಲಿಲ್ಲ. ಮಾತಾಡಬೇಕೆಂದು ಅವರ ಪತ್ನಿಯೂ ಅಪೇಕ್ಷಿಪಟ್ಟಿರಲಿಲ್ಲ. ದೇವರ ಮುಂದೆ ತುಪ್ಪದ ದೀಪವನ್ನು ಹಚ್ಚಿಟ್ಟು, 'ಬಿನ್ನಾಹಕೋ ನಿನ ಹಂಗ್ಯಾಕೋ| ನಿನ್ನ ನಾಮದ ಬಲವೊಂದಿದ್ದರೆ ಸಾಕೋ' ಎಂಬ ಪುರಂದರದಾಸರ ಪದವನ್ನು ಹಾಡುತ್ತ ಅಡಿಗೆ ಕೆಲಸಗಳಲ್ಲಿ

ತೊಡಗಿದರು. ಆ ದನಿ, ಆ ಹಾಡು, ಆ ಪರವಶತೆ, ಆ ಹಾಡಿನ ಹಿಂದಿದ್ದ ಅಂತಃ ಸತ್ವದ ವಿಶ್ವಾಸ ಇವೆಲ್ಲ ಅಪಾರಕರುಣೆಯ ಧಾರೆಯಲ್ಲಿ ಹರಿದು ಬಂದು ಆಚಾ ರ್ಯರ ಬೆಂದ ಮನಸ್ಸಿಗೆ ತಂಪೆರೆದವು. ಆಚಾರ್ಯರು ಉತ್ಸಾಹಿತರಾದರು. ಹೆಗಲ ಮೇಲೆ ಪಂಜೆಯೊಂದನ್ನು ಹೊತ್ತು ಸ್ನಾನಕ್ಕಾಗಿ ನದಿಯ ಹಾದಿ ಹಿಡಿದರು.

ಇಂದುಪುರದ ಮಹಾರಾಜರು ಶನಿವಾರ ದಿನ ಪಾದಳ್ಳಿಗೆ ಬರುವವರಿದ್ದರು. ಅಷ್ಟರೊಳಗಾಗಿಯೇ ಪಾದಳ್ಳಿಯಲ್ಲಿ ಜಾತ್ರೆಗೆ ಬಂದಂತೆ ಸುತ್ತಲಿನ ಜನ ಬರ ಲಾರಂಭಿಸಿದರು. ತಮ್ಮ ತಮ್ಮ ಆಪ್ತೇಷ್ಟರನ್ನು ಬರಮಾಡಿಕೊಳ್ಳುವದರಲ್ಲಿಯೇ ಪಾದಳ್ಳಿಯ ಮನೆಗಳೆಲ್ಲ ತುಂಬಿಬಿಟ್ಟವು. ಆಪ್ತೇಷ್ಟರಿಲ್ಲದ ಅತಿಥಿಗಳು ಗುಡಿ-ಗುಂಡಾರಗಳನ್ನು ಅವಲಂಬಿಸಬೇಕಾಯಿತು. ಮಹಾರಾಜರು ಜನರಿಗೆ ಹಂಚ ಲೆಂದು ಕಳಿಸಿದ ಕಾಳಿನ ಗಾಡಿಗಳು ಒಂದರ ಹಿಂದೊಂದರಂತೆ ನಡೆದು ಬಂದು ಸುತ್ತ ಲಿನ ಊರುಗಳಿಗೆಲ್ಲ ಮಹಾರಾಜರ ವಾರ್ತೆಯನ್ನು ಬೀರಿದ್ದವು. ಪಾದಳ್ಳಿಯ ಜನಜೀವನ ಕೂಡಲೆ ಜಾಗೃತವಾಗಿತ್ತು; ಮಹಾರಾಜರ ದರ್ಶನಾಪೇಕ್ಷೆಯಿಂದ ಕ್ಷುಬ್ಧವೂ ಆಗಿತ್ತು. ಪಾದಳ್ಳಿಯ ಸಾರ್ವಜನಿಕ ಜೀವನದಲ್ಲಿಯೇ ಇಂಥ ಚಿರ ಸ್ಮರಣೀಯವಾದ ಐತಿಹಾಸಿಕ ಘಟನೆ ಇತ್ತೀಚೆಗೆ ನಡೆದಿರಲಿಲ್ಲ. ಮನೆಮನೆಗಳ ಲ್ಲೆಲ್ಲ ಮಹಾರಾಜರನ್ನು ಎದುರುಗೊಳ್ಳುವ ಸಿದ್ಧತೆ ನಡೆದಿತ್ತು.

ಇಂದುಪುರದಿಂದ ಮಹಾರಾಜರು ಬರಬೇಕಾದರೆ ಪಾದಳ್ಳಿಯ ಮುಂದೆ ಹರಿಯುವ ಕೃಷ್ಣಾನದಿಯನ್ನು ದಾಟಿ ಬರುವದು ಅನಿವಾರ್ಯವಾಗಿತ್ತು. ನದಿಗೆ ಸ್ವಲ್ಪ ನೆರೆ ಬಂದದ್ದರಿಂದ ನಾವೆಯನ್ನು ಎಚ್ಚರಿಕೆಯಿಂದ ದಾಟಿಸಬೇಕಾದ ಹೊಣೆ ಅಂಬಿಗರದಾಗಿತ್ತು. ಆದ್ದರಿಂದಲೇ ಏನೋ ಶನಿವಾರ ಬೆಳಿಗ್ಗೆ ಅಂಬಿಗರ ವೇಷ ಭೂಷಣಗಳೆಲ್ಲ ಪ್ರೇಕ್ಷಣೀಯವಾಗಿದ್ದವು. ಬಣ್ಣಬಣ್ಣದ ಹೊಸ ಬಟ್ಟೆಗಳನ್ನು ಧರಿಸಿ ಕೊಂಡು, ಹಣೆಯ ಮೇಲೆ ತಿದ್ದಿದ ಗಂಧದ ಗೀರುನಾಮವನ್ನಿಟ್ಟುಕೊಂಡು ಅಂಬಿ ಗರು ಬೆಳಗಿನಿಂದಲೇ ನದಿಯ ತೀರದಲ್ಲಿ ಸುಳಿದಾಡುತ್ತಿದ್ದರು. ಅವರ ಕೇಕೆ-ಗದ್ದಲ, ಉತ್ಸಾಹ-ಸಂಭ್ರಮಗಳನ್ನು ನೋಡಿದವರಿಗೆ, ಅವರು ದಿನನಿತ್ಯ ಪಾದ ಳ್ಳಿಯ ತೀರದಲ್ಲಿ ಅಡ್ಡಾಡುವ ಅಂಬಿಗರಾಗಿ ತೋರದೆ ಬೇರೆ ಲೋಕದಿಂದ ಇಳಿದು ಬಂದಂತಿತ್ತು.

ಖಾಸಗಿ ಕಾರಭಾರಿ ಶ್ಯಾಮರಾಯ, ಬಾಳಾಚಾರ್ಯರು, ಯಶವಂತರಾವ ಪಾಟೀಲ ಹಾಗೂ ದಾದಾ ಇಷ್ಟು ಜನರು ನಾವಿನಲ್ಲಿ ಕುಳಿತು ಆಚೆಯ ದಡಕ್ಕೆ

ಮೊದಲೇ ಹೋಗಿ ಮಹಾರಾಜರ ಮಾರ್ಗಪ್ರತೀಕ್ಷೆಯಲ್ಲಿ ನಿರತರಾಗಿದ್ದರು. ನದಿಯ ದಂಡೆಗೆ ಮಹಾರಾಜರ ನಾವು ಶೃಂಗರಿಸಿಕೊಂಡ ನವವಧುವಿನಂತೆ ಆತುರದಿಂದ ಮಹಾರಾಜರ ಬರವನ್ನು ನಿರೀಕ್ಷಿಸುತ್ತಿತ್ತು. ನದಿಯ ತೀರವೆಲ್ಲ ಸದ್ದು ಗದ್ದಲಗಳಿಂದ ದುಮುದುಮಿಸುತ್ತಿತ್ತು.

ಪ್ರಾಂತಸಾಹೇಬರು ಅಂದೇ ಬೆಳಿಗ್ಗೆ ಆಗಮಿಸಿದ್ದರಿಂದ, ಅವರ ಯೋಗಕ್ಷೇಮದಲ್ಲಿ ನಿರತರಾದ ಮಾಮಲೇದಾರರಿಗೆ ಈ ತಂಡದೊಡನೆ ಬರಲಾಗಲಿಲ್ಲ. ಮಹಾರಾಜರು ನಾವೆಯಲ್ಲಿ ಕುಳಿತು ಪಾದಳ್ಳಿಯ ಕಡೆಗಿರುವ ತೀರವನ್ನು ಸೇರಿದೊಡನೆ, ಪ್ರಾಂತಸಾಹೇಬರು, ಮಾಮಲೇದಾರರು, ಶೇಷಪ್ಪ ಮೊದಲಾದವರು ಸ್ವಾಗತಕ್ಕಾಗಿ ತೀರದಲ್ಲಿರಬೇಕೆಂದು ಗೊತ್ತಾಗಿತ್ತು.

ಸುತ್ತುಮುತ್ತಲಿನ ವಾತಾವರಣದಲ್ಲೆಲ್ಲ ನಿರೀಕ್ಷೆ ಸ್ಪಂದಿಸುತ್ತಿರುವಾಗಲೇ ಎಂಟು ಕುದುರೆಸವಾರರು ಎತ್ತರವಾದ ಕಾಠೇವಾಡಿ ಕುದುರೆಗಳ ಮೇಲಿಂದ ನದಿಯ ದಡದಲ್ಲಿಳಿದರು. ಅಲ್ಲಿದ್ದ ಜನರೆಲ್ಲ ಗಡಿಬಿಡಿಯಿಂದ ಮಹಾರಾಜರೇ ಬಂದರೆಂದು ಅವರನ್ನು ಸ್ವಾಗತಿಸಲು ಧಾವಿಸಿ ಬಂದು ನಿರಾಶರಾದರು. ಇನ್ನರ್ಧ ತಾಸಿನಲ್ಲಿಯೇ ಮಹಾರಾಜರ ಸವಾರಿ ಬರಲಿರುವರೆಂಬ ಸುದ್ದಿ ಮಾತ್ರ ಮುಟ್ಟಿತು.

ದೂರದಿಂದಲೇ ಕುದುರೆ-ಸವಾರರನ್ನು ಕಂಡ ಪಾದಳ್ಳಿಯ ಜನರು ಮಹಾರಾಜರನ್ನು ಕಣ್ತುಂಬ ನೋಡಲು ಹಿಂಡುಹಿಂಡಾಗಿ ಹೊರಟರು. ನಾವೆ ಬಂದು ನಿಲ್ಲುವ ವಾಡಿಕೆಯ ಮೆಟ್ಟು ಬಿಟ್ಟು, ಹುದುಲಿಲ್ಲದ ಉಪ್ಪಿನ ಮಾಳಿಗಳ ಹತ್ತಿರ ಮಹಾರಾಜರನ್ನು ಇಳಿಸುವ ವ್ಯವಸ್ಥೆಯನ್ನು ಮಾಡಲಾಗಿತ್ತು. ಅಲ್ಲಿಯೇ ಈಗ ಅಧಿಕಾರಿವರ್ಗದವರು ನೆರೆದರು. ಸಾಮಾನ್ಯರಿಗೆ ಈ ವ್ಯವಸ್ಥೆ ಗೊತ್ತಿರದ್ದರಿಂದ ಅವರೆಲ್ಲ ವಾಡಿಕೆಯ ಹರಗೋಲ ಘಡಿಯ ಕಡೆಗೆ ಅವಸರದಿಂದ ಓಡುತ್ತಿದ್ದರು

ಮಹಾರಾಜರ ಕುದುರೆಯ ಗಾಡಿ ಆಚೆಯ ದಂಡೆಗೆ ಬಂದು ನಿಂತಿತು. ತಮಗೆ ಸ್ವಾಗತವೀಯಲು ಬಂದ ಜನರನ್ನು ಕಂಡು ಅವರು ಸೂಚಿಸಿದ ಮುಗುಳುನಗೆ ದೂರದಿಂದಲೇ ಕಾಣಬಹುದಿತ್ತು. ನಿರೀಕ್ಷೆ ಕೊಟ್ಟ ವಿಶೇಷ ಶಕ್ತಿಯಿಂದ ಕಣ್ಣು ಎಲ್ಲವನ್ನೂ ನೋಡಬಲ್ಲವಾಗಿದ್ದವು. ಮಹಾರಾಜರು ಸ್ವಾಗತವನ್ನು ಸ್ವೀಕರಿಸಿ ನಾವೆಯ ಹತ್ತಿರ ಬಂದರು. ದೊಡ್ಡ ಗೃಹಸ್ಥರನ್ನು ಹೆಗಲ ಮೇಲೆ ಕೂಡಿಸಿಕೊಂಡು ನಾವೆಯಲ್ಲಿಳಿಸುವ ಪದ್ಧತಿ ಅಲ್ಲಿ ರೂಢವಾಗಿದ್ದರಿಂದ, ಅಂಬಿಗರು ಮಹಾರಾಜರ ವಾಹನವಾಗಲು ಮುಂದೆ ಬಂದರು. ಆದರೆ ಮಹಾರಾಜರೇ

ಅವಕ್ಕೊಪ್ಪಲಿಲ್ಲ. ತಾವೇ ನಾವೆಗೆ ಸೇರಿಸಿದ ಸೇತುವೆಯ ಮೇಲಿಂದ ನಡೆದು ನಾವೆಯ ಮೇಲೆ ಬಂದು ನಿಂತರು.

ನದಿಯ ಪಾತ್ರ ಅಷ್ಟೇನೂ ದೊಡ್ಡದಾಗಿರಲಿಲ್ಲವಾದ್ದರಿಂದ ಅಂಬಿಗರು ಹುಟ್ಟುಕಡೆಯುವ ಕಾರಣವೇನೂ ಇರಲಿಲ್ಲ. ಸಾಕಷ್ಟು ಹೊಸ ನೀರು ಬಂದಿತ್ತು; ಸೆಳವೂ ಸಾಕಷ್ಟಿತ್ತು. ಅಂಬಿಗರು ಸುಮ್ಮನೆ ನಿಂತಿದ್ದರೂ, ತೆರೆಗಳ ಮೇಲೆ ಉಯ್ಯಾಲೆಯಾಡುತ್ತ ನಾವೆ ಪ್ರವಾಹದಗುಂಟ ಸಾಗಿತು. ಗಾಳಿಯೂ ಅನುಕೂಲವಾಗಿ ಬೀಸುತ್ತ ಪ್ರವಾಹದ ವೇಗವನ್ನು ಹೆಚ್ಚು ಮಾಡಿತ್ತು. ನಾವೆ ಉಪ್ಪಿನ ಮಾಳಿಗಳಿರುವ ತಾಣದೆಡೆಗೆ ಸಾಗಿತು. ಮಹಾರಾಜರ ದರ್ಶನಾಪೇಕ್ಷೆಯಿಂದ ಹರಗೋಲ ಘಡಿಯ ಹತ್ತರ ಸಮ್ಮಿಲಿತರಾದ ಜನರಿಗೆ ಮಾತ್ರ ಇದರಿಂದ ತೀವ್ರವಾದ ನಿರಾಶೆಯಾಯಿತು.

ನಾವೆಯು ಉಪ್ಪಿನ ಮಾಳಿಗಳ ಹತ್ತಿರ ಬಂದಾಗ, ಅಂಬಿಗರ ಭರಮು ತನ ಹಸ್ತಕೌಶಲ್ಯ, ಪ್ರಸಂಗಾವಧಾನ ಎಲ್ಲವನ್ನೂ ಏಕಕಾಲಕ್ಕೆ ಪ್ರಯೋಗಿಸಿ, ನೀರಿನ ಸೆಳವಿನಲ್ಲಿ ಸಿಕ್ಕ ನಾವೆಯನ್ನು ಸರ್ರನೆ ದಂಡೆಗೆ ತಿರುಗಿಸಿದನು. ದಂಡೆಯಲ್ಲಿದ್ದವರ ಜಯಘೋಷ ತೆರೆಗಳ ಸಪ್ಪಳದೊಂದಿಗೆ ಸ್ಪರ್ಧೆ ಹೂಡಿತು. ಕಹಳೆಯವನು ಬಿಟ್ಟುಬಿಡದೆ ಕಹಳೆಯನ್ನೂದಿ ಮಹಾರಾಜರ ಆಗಮನವಾರ್ತೆಯನ್ನು ದಶದಿಕ್ಕುಗಳಿಗೂ ಮುಟ್ಟಿಸಿದನು. ಬಜಂತ್ರಿಯ ಮೇಳದ ವಾದ್ಯಗಳೂ ಮೊಳಗಿದವು. ಪ್ರಾಂತಸಾಹೇಬರು ಕರವಸ್ತ್ರವನ್ನು ಬೀಸಿ ಮಹಾರಾಜರಿಗೆ ಸ್ವಾಗತ ಕೋರಿದರು.

ಉಪ್ಪಿನ ಮಾಳಿಗಳ ಹತ್ತಿರದ ನೆಲ ಒಣದಾಗಿರುವದೆಂದು ನಾವೆಯನ್ನು ಅಲ್ಲಿ ತರುವ ಯೋಜನೆಯನ್ನು ಮಾಡಲಾಗಿತ್ತು. ಆದರೆ ನದಿಯ ಪ್ರವಾಹ ವಿಕ್ಷಿಪ್ತವಾಗಿ ಹರಿದು ಬಂದದ್ದರಿಂದ ಇಲ್ಲಿಯ ನೆಲವೂ ಕೆಸರಿನಿಂದ ತುಂಬಿತ್ತು. ಮಹಾರಾಜರನ್ನು ಎಲ್ಲಿ ಇಳಿಸಬೇಕೆಂದು ಎಲ್ಲರಿಗೂ ದಿಗಿಲಾಯಿತು. ಅಂಬಿಗರ ಬಸಪ್ಪ ಮುಂದೆ ಬಂದು, ಮಹಾರಾಜರನ್ನು ಹೆಗಲ ಮೇಲೆ ಕರೆದುಕೊಂಡು ಹೋಗಬಹುದೆಂದು ಕಾರಭಾರಿಗೆ ಸೂಚಿಸಿದನು. ಆದರೆ ಮಹಾರಾಜರಿಗೆ ಮನಸ್ಸಿರಲಿಲ್ಲ. ಸ್ವಾರರು ಏರಿದ್ದ ಒಂದು ಕುದುರೆಯನ್ನು ತರಲು ಅವರೇ ಹೇಳಿದಾಗ ಎಲ್ಲರ ಚಿಂತೆಯು ದೂರಾಯಿತು.

ಚಾಂದ ಸ್ವಾರನು ಕೂಡಲೆ ತನ್ನ ಕುದುರೆಯ ಮೈ ಒರೆಸಿ ಥಡಿ ಹಾಕಿ ನಾವೆಯ ಹತ್ತರ ತಂದ. ಮಹಾರಾಜರು ನಾವೆಯಿಂದಿಳಿದು ಅದನ್ನೇರಿದರು.

ಕುದುರೆ ಎರಡು ಹೆಜ್ಜೆ ಮುಂದೆ ಸಾಗಿರಬೇಕು. ಅಷ್ಟರಲ್ಲಿ ನದಿಯ ಪ್ರವಾಹದಲ್ಲಿ ತೇಲಿ ಬಂದ ಮುಳ್ಳಿನ ಪೊದೆಯೊಂದು ಅದರ ಕಾಲಿಗೆ ತೊಡಗಿಕೊಂಡಿತು. ಕುದುರೆ ಬೆದರಿ ಕಂಗಾಲಾಗಿ ಮುಂಗಾಲನ್ನೆತ್ತಿ ನಿಂತುಕೊಂಡಿತು. ಮಹಾರಾಜರು ಚಕಿತ ರಾಗಿ ಲಗಾಮು ಸೆಳೆದರು. ಪ್ರವಾಹದಲ್ಲಿದ್ದ ಸೆಳವಿನ ರಭಸ, ಜನರ ಗದ್ದಲ, ಕಹಳೆಯವರ ಕೂಗಾಟ ಇವುಗಳಿಂದ ಕುದುರೆ ಮತ್ತಷ್ಟು ಬೆದರಿ ಪ್ರವಾಹದತ್ತ ಜಿಗಿಯಿತು. ಮಹಾರಾಜರನ್ನು ಮೊದಲುಗೊಂಡು ಎಲ್ಲರೂ ಮುಂಗಾಣದಂತಾ ದರು.

ದಾದಾ ಆಗ ನಾವೆಯಲ್ಲಿ ಮಹಾರಾಜರ ಸಾಮಾನನ್ನಿಳಿಸುವ ಕೆಲಸದಲ್ಲಿದ್ದ. ಮಹಾರಾಜರ ಕುದುರೆ ಹುಚ್ಚಾಟ ನಡಿಸಿದ್ದು ಅವನ ಕಣ್ಣಿಗೆ ಬಿತ್ತು. ಟಣ್ಣನೆ ನಾವೆಯಿಂದ ಜಿಗಿದು, ಕುದುರೆಯ ಮುಂದೆ ಬಂದು ನಿಂತು ಅದರ ಕಡಿವಾಣ ವನ್ನು ಹಿಡಿದುಕೊಂಡ. ಕುದುರೆ ಪ್ರವಾಹದಲ್ಲಿ ಜಿಗಿದದ್ದರಿಂದ ಅದರ ನೆಲೆ ಮುರಿದು ಈಸುವ ಸ್ಥಿತಿಯಲ್ಲಿತ್ತು. ದಾದಾ ಈಸುವ ಕುದುರೆಯನ್ನೇ ಹಿಡಿದು ದಂಡೆಯತ್ತ ತಿರುಗಿಸಿದ. ಮಹಾರಾಜರೂ ಕುದುರೆ ಹತ್ತುವದರಲ್ಲಿ ಗಟ್ಟಿಗ ರಾದ್ದರಿಂದ ಈಸುವ ಕುದುರೆಯ ಬೆನ್ನನ್ನು ಬಿಟ್ಟಿರಲಿಲ್ಲ. ಅಂತೂ ದಾದಾನ ಪ್ರಸಂಗಾವಧಾನದಿಂದ ಕುದುರೆ ದಡ ಮುಟ್ಟಿತು. ಮಹಾರಾಜರು ದೊಡ್ಡದೊಂದು ಕುತ್ತಿನಿಂದ ಪಾರಾದರೆಂದು ಜನ ದಾದಾನನ್ನು ಹೊಗಳಿದರು.

ನಾವೆಯೊಳಗಿಂದಲೇ ಹೊತ್ತು ತಂದ ಕುದುರೆಯ ಗಾಡಿ ಮತ್ತೆ ಮಹಾ ರಾಜರ ಸಮ್ಮುಖಕ್ಕೆ ಬಂತು. ಆದರೆ ಮಹಾರಾಜರು ಅದರಲ್ಲಿ ಹೊರಡಲು ಒಪ್ಪ ಲಿಲ್ಲ. ಪಾದಚಾರಿಗಳಾಗಿಯೇ ತಮ್ಮ ಪೂರ್ವಜರ ವಾಡೆಯನ್ನು ಸೇರುವ ಆಸೆ ಅವರದಾಗಿತ್ತು. ವಾದ್ಯವೈಭವಗಳೊಂದಿಗೆ ಮಹಾರಾಜರನ್ನು ಕರೆತರಬೇಕೆಂದಿದ್ದ ಪಾವಳ್ಳಿಯ ಮಹಾಜನರಿಗೆ ಇದರಿಂದ ನಿರಾಸೆಯಾಯಿತು. ಮಹಾರಾಜರು ನಡೆಯುತ್ತಲೇ ಪ್ರಾಂತಸಾಹೇಬರು, ಮಾಮಲೇದಾರರು, ಬಾಳಾಚಾರ್ಯರು ಇವ ರೊಡನೆ ನಡೆದರು.

ದಾರಿಯಲ್ಲಿ ಹೋಗುತ್ತಿರುವಾಗ ಏನೋ ನೆನಪಾದವರಂತೆ ತಡೆದು, ಜೊತೆಗೆ ಬರುತ್ತಿದ್ದ ಬಾಳಾಚಾರ್ಯರಿಗೆ "ನಮ್ಮ ಕುದುರೆ ಲಗಾಮು ಜಗ್ಗಿ ಹಿಡಿದ ನಲ್ಲಾ ಆ ಹುಡುಗ ಯಾರು?" ಎಂದು ಪ್ರಶ್ನೆ ಮಾಡಿದರು.

"ಅವನೇ? ಅಂವಾ ತಮ್ಮ ಶಿಲೇದಾರ, ಮಹಾರಾಜ. ಅವನ ಇಟ್ಟ ಹೆಸರು

ಭೀಮಸೇನ. ಆದರ ಗರಡಿಮನಿಯವರು ದಾದಾ ಅಂತ ಕರೀತಾರ. ಅದೇ ಅವನ ಹೆಸರಾಗೇದ." ಎಂದರು ಆಚಾರ್ಯರು.

"ಅಂವಾ ಕುಸ್ತಿ ಆಡತಾನೇನು?" ಮತ್ತೆ ಪ್ರಶ್ನೆ ಬಂದಿತು.

"ಈ ಭಾಗದೊಳಗಽ ಅಂವಾ ಬೆಳದ ಗಡಿ ಮಹಾರಾಜ." ಆಚಾರ್ಯರೆಂದರು.

"ಅಂತೂ ಪಾದಳ್ಳಿಯೊಳಗೂ ರತ್ನ ಅವ ಅಂದ್ಹಾಂಗಾತು." ಎಂದು ಸಂತೃಪ್ತಿಯ ಮುಗುಳುನಗೆಯಿಂದ ಮಹಾರಾಜರು ನುಡಿದರು.

ಈ ವೇಳೆಗಾಗಲೇ ಅವರು ನೀರಗಸೆಯ ಬಳಿಗೆ ಬಂದಿದ್ದರು. ತುಂಬಿದ ಕೊಡಗಳನ್ನು ಹೊತ್ತು ನಿಂತ ಮುತ್ತೈದೆಯರು ಮಹಾರಾಜರ ಪಾದಗಳಿಗೆ ಅಭಿಷೇಕವಾಗುವಂತೆ ಅಗಸೆಯ ತುಂಬ ನೀರು ಸುರುವಿದರು. ಮೊದಮೊದಲು ಮಹಾರಾಜರಿಗೆ ಈ ಸ್ವಾಗತ ಅಸಹ್ಯವಾಗಿತ್ತು. ಆದರೆ ಊರ ಹೆಂಗಳೆಯರೆಲ್ಲ ಅಲ್ಲಿ ನೆರೆದು, ಒಬ್ಬೊಬ್ಬರಾಗಿ ಬಂದು ಕುಂಕುಮ ಹಚ್ಚಿ ಆರತಿ ಬೆಳಗಿದಾಗ ಮಾತ್ರ ಮಹಾರಾಜರ ಹೃದಯದಲ್ಲಿ ಯಾವುದೊ ಭಾವನೆಯ ತೆರೆಯೊಂದು ಉಮ್ಮಳಿಸಿ ಬಂದು ಅವರ ಕಣ್ಣುಗಳನ್ನು ಒದ್ದೆ ಮಾಡಿತು.

ಗೋಪಾಲಕೃಷ್ಣನ ಗುಡಿಗೆ ಬಂದಾಗ ದೇವರ ದರ್ಶನಕ್ಕೆ ಒಳಗೆ ಹೋಗಲೇ ಬೇಕಾಯಿತು. ಹತ್ತು ರೂಪಾಯಿ ಕಾಣಿಕೆಯಿತ್ತು ಮರಳಿದರು. ತೀರ್ಥಶ್ರಾದ್ಧಕ್ಕೆಂದು ಜನರನ್ನು ಕರೆದುಕೊಂಡು ನದಿಗೆ ಹೋದ ನಾರಾಯಣಾಚಾರಿಗೆ ಈ ಸುದ್ದಿಯನ್ನು ಕೇಳಿ ಕೆಡುಕೆನಿಸಿತು. ಗುಡಿಯ ಪೂಜಾರಿಯಾದ ತಾನು ಗುಡಿಯಲ್ಲಿದ್ದಿದ್ದರೆ ತನಗೂ ಹತ್ತುರೂಪಾಯಿ ದಕ್ಷಿಣೆ ಸಲ್ಲಬಹುದಿತ್ತೆಂದು ಹಲುಬಿದನು. ಮೇಲಾಗಿ ಇನ್ನೂ ಹೆಚ್ಚಿನ ಸಂಕಟವೆಂದರೆ ತಾನಿಲ್ಲದಾಗ ಬಾಳಾಚಾರ್ಯರು ಗುಡಿಯಲ್ಲಿದ್ದದ್ದು. ಮುಂದೆ ಎಂಟಾನೆಂಟು ದಿನಗಳ ವರೆಗೆ ಅವನಿಗೆ ಇದೊಂದೇ ಕನವರಿಕೆಯಾಗಿತ್ತು.

ಮಹಾರಾಜರು ಅಲ್ಲಿಂದ ಪಾಡೆಯ ಸಮೀಪದ ಬಯಲಿಗೆ ಬಂದರು. ಅಲ್ಲಿಂದಲೇ ಸಾಲೆ, ಚಾವಡಿ ಇವುಗಳನ್ನು ನೋಡಬಹುದಾಗಿತ್ತು. ಸಾಲೆಯಲ್ಲಿ ಕಟ್ಟಿದ ಗುಡಾರಗಳನ್ನು ಕಂಡು ಅದೇನೆಂದು ಕೇಳಿದರು.

"ಮಾಮಲೇದಾರರ ಕ್ಯಾಂಪು ಊರಾಗ ಅದ ಮಹಾರಾಜ." ಬಾಳಾಚಾರ್ಯರು ಸೂಚ್ಯವಾಗಿ ಉತ್ತರವಿತ್ತರು.

"ಮಾಮಲೇದಾರರು ಸಾಲಿಯೊಳಗ ಇಳದರ, ಹುಡುಗೇರು ಎಲ್ಲೆ ಹೋಗ

ಬೇಕು?" ಮುಗುಳುನಗೆಯಿಂದಲೇ ಸಹಜವಾಗಿ ಮಹಾರಾಜರು ಚೇಷ್ಟೆ ಮಾಡಿದರು. ಆದರೆ ಅದರ ಪರಿಣಾಮವಾಗಿ ಹತ್ತಿರ ನಿಂತಿದ್ದ ಮಾಮಲೇದಾರರ ಮುಖ ಗುರುತು ಹತ್ತದಷ್ಟು ಕಪ್ಪಾಗಿತ್ತು.

ಮಾಮಲೇದಾರರ ಪತ್ನಿ ರುಕ್ಮಿಣಿಬಾಯಿಯರು ಸಾಲೆಯ ಕಿಡಿಕಿಯೊಳಗಿಂದಲೇ ಮಹಾರಾಜರನ್ನು ನೋಡುತ್ತ ನಿಂತಿದ್ದರು. ರೇಶಿಮೆಯ ಜರದಂಚಿನ ಪಟಕ, ಶುಭ್ರವಾದ ನಿಲುವಂಗಿ, ಕಾಲಲ್ಲಿಯ ಜರದ ಚಡಾವು, ಆಜಾನುಬಾಹುವಾದ ದೇಹ ಇವುಗಳನ್ನು ನೋಡಿ, ಮನಸ್ಸಿನಲ್ಲಿಯೇ, "ಅದಕs ರಾಜಾ ಆಗ್ಯಾನವಾ!" ಎಂದು ಅಂದುಕೊಂಡರು. ಆದರೆ ಅವರ ಬದಿಗೆ ನಿಂತ ತಮ್ಮ ಯಜಮಾನರು ಮಾತ್ರ ಸತ್ವಹೀನರಾಗಿ ಕಂಡರು. ಮಾಮಲೇದಾರರ ದರ್ಪದ ಒಂದು ಅಂಶವೂ ಅವರಲ್ಲಿರಲಿಲ್ಲ. ಹಿಂಡು ಜನರಲ್ಲಿ ಅನಾಮಧೇಯನಂತೆ ತನ್ನ ಗಂಡ ನಿಂತದ್ದನ್ನು ಕಂಡು ಅವರಿಗೆ ಅಸಮಾಧಾನವೆನಿಸಿತು. ಮಹಾರಾಣಿಯೂ ಬಂದಿದ್ದರೆ ತನಗೆ ಅವಳ ಪರಿಚಯ ಮಾಡಿಕೊಡುವದಾಗಿ ಜಂಬಕೊಚ್ಚಿದವರು, ಅಜ್ಞಾತ ಅತಿಥಿಯಂತೆ ಮಜೀನರಾಗಿ ನಿಲ್ಲಬೇಕೇ?

ಪ್ರಾಂತಸಾಹೇಬರು ಮಹಾರಾಜರನ್ನು ವಾಡೆಯ ವರೆಗೆ ಕಳಿಸಿ ಅವರ ಅಪ್ಪಣೆಯನ್ನು ಪಡೆದು ಕ್ಯಾಂಪಿಗೆ ಮರಳಿದರು.

ಶೇಷಪ್ಪನ ಕ್ಯಾಂಪೂ ಅಲ್ಲಿಯೇ ಇತ್ತು. ಇಂದು ಅವನಿಗೆ ಪ್ರಾಂತಸಾಹೇಬರ ಕ್ಯಾಂಪಿನ ಕಾರಕೂನರೊಡನೆ ಪಂಕ್ತಿಲಾಭವಿತ್ತು. ಪ್ರಾಂತಶಿರಸ್ತೇದಾರ ಜಕ್ಕಪ್ಪನವರು, ಜಮಾಬನಿಶಿಕಾರಕೂನರಾಗಿದ್ದಾಗಲೇ ಶೇಷಪ್ಪನ ಸಲಿಗೆ ಅವರೊಡನೆ ಬೆಳೆದು ಬಂದಿತ್ತು. ಹತ್ತಿರ ಎಲ್ಲಿಯಾದರೂ ಕ್ಯಾಂಪು ಕೂಡಿದರೆ ಶೇಷಪ್ಪನಿಗೆ ಆಮಂತ್ರಣವಿದ್ದೇ ಇರುತ್ತಿತ್ತು. ಈಗಂತೂ ಶೇಷಪ್ಪನದೇ ಸರಬರಾಯಿ. ಅಂದಮೇಲೆ ಅವನಿಲ್ಲದೆ ನಡೆಯುವಂತಿರಲಿಲ್ಲ.

ಶೇಷಪ್ಪ ಅವಸರದಿಂದಲೇ ಬಂದು ಜಕ್ಕಪ್ಪನವರನ್ನು ಕಂಡಿದ್ದ. ಅವರು ಊಟದ ಗಡಿಬಿಡಿಯಲ್ಲಿದ್ದರೂ ಬಿಡಲಿಲ್ಲ. ಗೌಡರ ವಾರಸಾ ಚೌಕಶಿಯನ್ನು ಈ ಕ್ಯಾಂಪಿನಲ್ಲಿಯೇ ಮುಗಿಸಿಬಿಡಬೇಕೆಂದು ಅವನ ಆಗ್ರಹ. ಅಡಿಗೆಯ ಸುಬ್ಬರಾಯ ಬಹಳ ಅವಸರಿಸಿದ್ದರಿಂದ ಜಕ್ಕಪ್ಪನವರು ಏನೂ ಮಾತಾಡದೆ ಊಟಕ್ಕೆದ್ದರು.

ಊಟ ತೀರಿಸಿಕೊಂಡು ದಫ್ತರಗಳನ್ನೆಲ್ಲ ಪಟ್ಟೇವಾಲಾನ ಕಡೆಯಿಂದ

ಹೊರಿಸಿಕೊಂಡು ಬಂದು ಜಕ್ಕಪ್ಪನವರು ಡಿಂಬಿಗೊರಗಿದಾಗ ಮಾತಾಡಲು ಪುರು ಸೊತ್ತಾಯಿತು. "ಮತ್ತ ಜಕ್ಕಪ್ಪನವರs, ಕುಲಕರ್ಣಿಕಿ ಪಾಳಿ ನೇಮಣೂಕಿ ಶ್ಯಾಮರಾಯಗ ಆಗಬಾರದೂ ಅಂತ ಊರ ಜನರು ಅರ್ಜಿ ಕೊಟ್ಟಾರಲ್ಲ. ಅದನ್ನ ಚೌಕಶಿಗಿಡತೀರೇನು?" ಎಂದು ಶೇಷಪ್ಪ ಆತುರದಿಂದಲೇ ಕೇಳಿದ.

"ಆ ಅರ್ಜೀನ ಸ್ವತಃ ಸಾಹೇಬರು ತಮ್ಮ ಪರ್ಸನಲ್ ಫಾಯಿಲಿನ್ಯಾಗ ಇಟಗೊಂಡಾರೋ ಶೇಷಪ್ಪ. ಸಿಕ್ಹಾಂಗ ಮಾಡಲಿಕ್ಕೆ ಇಂವಾ ಏನು ದೇಶೀ ಸಾಹೇಬ ಅಂತ ತಿಳಕೊಂಡೀ ಏನು? ಮೊದಲs ಹೊಸಬ, ಅದರಾಗ ಮಹಾ ಕಾಯದೇಶೀರ ಇದ್ದಾನ. ಮೂಕಿ ಅರ್ಜಿ ಸೈತ ಸ್ವತಃ ಚೌಕಶಿ ಮಾಡತಾನಂತ. ಸರಕಾರದ ತರ್ಫೆ ನೇಮಣೂಕಿ ಆಗಬೇಕೂಂತ ಸಾಹೇಬ ಶರಾ ಬರದಾ ಅಂದರ ತೀರಿತು. ತಾಬಡತೋಬ ನೋಟ ಹಾಕಿ ನಿನ್ನ ನೇಮಣೂಕಿ ಆಗೋವಂತೆ ಮಾಡ ತೀನಿ, ಆತಿಲ್ಲೋ?" ಜಕ್ಕಪ್ಪ ವರಪ್ರದಾನ ಮಾಡಿದ. "ಆದರ ಅರ್ಜಿಗೆ ಸಹಿ ಹಾಕಿ ಸಿದವರ ಜವಾಬು ಕೊಡಸೋ ತಯಾರೀನೂ ಇಡು. ಅದನ್ನೂ ಸಾಹೇಬ ಚೌಕ ಶಿಗೆ ತೊಗೊಂಡರೂ ತೊಗೋಬಹುದು" ಎಂನು ಅಗತ್ಯದ ಸಲಹೆಗಳನ್ನು ಕೊಡಲೂ ಮರೆಯಲಿಲ್ಲ.

ಶೇಷಪ್ಪನಿಗೆ ಎಲ್ಲಿಲ್ಲದ ಉತ್ಸಾಹ ಬಂದಿತು. ಅಲ್ಲಿಂದೆದ್ದು ಪಾರ್ವತೆವ್ವನ ಮನೆಗೇ ಬಂದ. "ವಾರಸಾ ಅಪೀಲಿನ ಚೌಕಶಿ ಇದೇ ಕ್ಯಾಂಪಿನಾಗ ಮುಗಸ ತಾರಂತ. ಆದರ ಒಂದ ಮಾತು. ಶ್ಯಾಮರಾಯನ ನೇಮಣೂಕಿ ಚೌಕಶಿನೂ ಆಗೋದದ. ಆಗ, ರೈತರಿಂದ ನಾ ಹೇಳಿದಾಂಗ, ನೀವು ಖಂಡತುಂಡ ಜವಾಬ ಕೊಡಸಬೇಕು. ಇವೊತ್ತs ರಾತ್ರಿ ರೈತರನೆಲ್ಲಾ ಕರೆಸಿ ಹೇಳಿ ಇಡ್ರಿ" ಎಂದು ಹೇಳಿ ಅಲ್ಲಿಂದ ಚಾವಡಿಗೆ ಬಂದ.

ಚಾವಡಿಯಲ್ಲಿ ಇನ್ನೊಂದು ಸಂಗತಿ ತಿಳಿಯಿತು. ಬರಗಾಲದಲ್ಲಿ ತಗಾಯಿ ಸಾಲವನ್ನು ಪಡೆದವರನ್ನು ಚಾವಡಿಯಲ್ಲಿ ಅಂದು ಸಂಜೆಯೇ ಕೂಡಿಸಬೇಕೆಂದು ಪ್ರಾಂತಸಾಹೇಬರ ಹುಕುಮು ಬಂದಿತ್ತು. ಅಂದು ಸಂಜೆಯೇ ಪ್ರಾಂತಸಾಹೇ ಬರು ತಗಾಯಿ ಸಾಲದ ವಿಚಾರಣೆಯನ್ನು ನಡೆಸುವವರಿದ್ದರು. ಶೇಷಪ್ಪನಿಗೆ ನಡುಗು ಹುಟ್ಟಿತು. ತಗಾಯಿ ಸಾಲದ ವಿತರಣೆಯ ಲೆಕ್ಕವನ್ನು ಕೇಳಿದರೆ ಏನು ಮಾಡಬೇಕೆಂದು ತಿಳಿಯದಾಯಿತು.

ಅದು ಸಂಜೆ ವಿಚಾರಣೆ ನಡೆದಾಗ ಶೇಷಪ್ಪನ ಕೈಚಳಕವೆಲ್ಲ ಹೊರಬೀಳು

ವಂತಾಯಿತು. ಸಾಹೇಬರು ರೈತರೊಬ್ಬೊಬ್ಬರನ್ನಾಗಿ ಕೇಳುತ್ತ ಅವರು ಹೇಳಿದ್ದ ನ್ನೆಲ್ಲ ಬರೆದಿಟ್ಟುಕೊಂಡರು. ರೈತರು ಹೇಳಿದ ಅಂಕಿ, ಸರಕಾರಿ ಲೆಕ್ಕದಲ್ಲಿ ಕಾಣಿ ಸಿದ ಅಂಕಿಗಿಂತ ನೂರಕ್ಕೆ ಇಪ್ಪತ್ತರಷ್ಟು ಕಡಿಮೆ ಇರುವದು ಕಂಡುಬಂದಿತು. ಶೇಷಪ್ಪ ಅದರಬಗ್ಗೆ ಒಂದು ಕತೆಯನ್ನೇ ಕಟ್ಟಿದ್ದ. "ತಗಾಯಿ ಸಾಲಕ್ಕ ಜಾಮೀನ ಕೊಡಲಿಕ್ಕೆ ಗತಿ ಇಲ್ಲದ ಬಡವರಿಗೆ, ಈ ರಕಮಿನೊಳಗಿಂದ ನೂರಕ್ಕ ಇಪ್ಪತ್ತರಂತೆ ಸಾಲಾ ಕೊಡಲಿಕ್ಕೆ ಊರ ಹಿರೇರೆಲ್ಲ ತಿಳಿಸಿದ್ದರು. ಅದಕ್ಕ ಈ ರೈತರಿಗೆ ಅಷ್ಟು ಹಣಾ ಕಡಿಮಿ ಬಂದದ" ಎಂದು ಹೇಳಿಬಿಟ್ಟ.

ಆದರೆ ಇದನ್ನೆಲ್ಲ ಕೇಳುತ್ತ ಕುಳಿತಿದ್ದ ಮೂಲಿಮನಿ ಜಂಬಣ್ಣ ಎದ್ದು ನಿಂತು "ಕುಲಕರ್ಣ್ಯಾರು ಹೇಳೂದು ಎಲ್ಲಾ ಸುಳ್ಳ ಐತಿರಿ. ಬಾಳಾಚಾರನ್ನ ಕೇಳಿರಿ ಬೇಕಾರ. ತಗಾಯಿ ಸಾಲದ ರಕಮಿನ್ಯಾಗ ಸರಬುರಾಯಿ ಖರ್ಚು ಮುರಕೊಂಡು ನಮುಗ ಹಣಾ ಕೊಟ್ಟಾರ್ರಿ" ಎಂದು ಶೇಷಪ್ಪನನ್ನು ಬಯಲಿಗೆಳೆದ.

ಮುಂದೆ ವಿಚಾರಣೆ ಇನ್ನೂ ಸೂಕ್ಷ್ಮವಾಯಿತು. ಬರಗಾಲದ ಕಾಮಗಿರಿ ಕೆಲಸವನ್ನು ಪ್ರಾರಂಭಿಸಲು ಕೊಟ್ಟ ಅರ್ಜಿಗೆ ಸಹಿ ಮಾಡಿದವರು ಯಾರಾರೆಂಬು ದನ್ನು ತಿಳಿದುಕೊಳ್ಳಬೇಕಾಗಿತ್ತು. ಅವರಿಗೆಲ್ಲ ಎದ್ದು ನಿಲ್ಲಲು ಆಜ್ಞೆಯಾಯಿತು. ಸಹಿಮಾಡದಿರುವ ಒಬ್ಬ ರೈತ ಎದ್ದು ನಿಂತದ್ದರಿಂದ ಸಾಹೇಬರೇ ಕಾರಣ ಕೇಳ ಬೇಕಾಯಿತು.

"ಅದ್ಯಾಕ್ರಿ ಯಪ್ಪ, ನಾನೂ ಬಟ್ಟು ಒತ್ತೀನರಿ" ಎಂದವನು ಹೇಳಿದ.

"ಶ್ಯಾಮರಾಯನ ನೇಮಣೂಕಿ ಆಗಬಾರದು ಅಂತ ಕೊಟ್ಟ ಅರ್ಜಿಗೆ ನೀನು ಬಟ್ಟ ಒತ್ತೀದಿ ?" ಎಂದರು ಸಾಹೇಬರು.

ಆ ರೈತ ಬೆಚ್ಚಿ ಬಿದ್ದ. "ಛೇ ತಗೀರಿ, ಶ್ಯಾಮರಾಯಕಾಕಾ ನಮಗೇನ ಕೆಡಕ ಮಾಡ್ಯಾರಂತ ಅವರ ವ್ಯಾಗ ಅರ್ಜಿ ಕೊಡಾಕ ಹೋಗೂನು ? ಬರ ಗಾಲದಾಗ ಜನಕ್ಕ ಕೆಲಸಾ ಕೊಡಲಾಕ ಅರ್ಜಿ ಐತಿ, ಸಹಿ ಮಾಡಂದರು, ಮಾಡಿ ದೆವು." ಎಂದು ಆ ರೈತ ಸತ್ಯಸಂಗತಿಯನ್ನು ಹೇಳಿಬಿಟ್ಟ.

ಆಗ ಶ್ಯಾಮರಾಯನ ವಿರುದ್ಧ ಕೊಟ್ಟ ಅರ್ಜಿಗೆ ಸಹಿ ಮಾಡಿದವರಾರೆಂಬು ದನ್ನು ನೋಡಿದಾಗ ಹತ್ತು ಜನರ ಹೆಸರುಗಳು ಸಿಕ್ಕವು. ಅದರಲ್ಲಿ ಗೌಡಿತಿ ಪಾರ್ವತೆವ್ವನ ಹೆಸರೂ ಒಂದಾಗಿತ್ತು. ಅವಳನ್ನು ಚೌಕಶಿಗೆ ಕರೆಸಬೇಕೆಂದಾಗ ಬಾಳಾಚಾರ್ಯರೇ ಬೇಡವೆಂದರು. ಸಾಹೇಬರು ಗೌಡಿತಿಯ ಮನೆಗೇ ಹೋಗಿ

ವಿಚಾರಿಸಲು ಒಪ್ಪಿಕೊಂಡರು.

ಸಾಹೇಬರು ತನ್ನ ಮನೆಗೆ ಬಂದದ್ದು ನೋಡಿ ಗೌಡಿತಿಗೆ ಹರ್ಷವಾಯಿತು ಶೇಷಪ್ಪನ ಉಪಕಾರಕ್ಕೆ ಮನಸ್ಸಿನಲ್ಲಿಯೇ ವಂದನೆ ಸಲ್ಲಿಸಿದಳು. ಆದರೆ ಈ ಸಂತೋಷ ಬಹಳ ಹೊತ್ತಿನ ವರೆಗೆ ಉಳಿಯುವಂತಿರಲಿಲ್ಲ. ಸಾಹೇಬರು ಲೋಡಿಗೆ ಆತು ಕುಳಿತು, "ಶ್ಯಾಮರಾಯನ ನೇಮಣೂಕಿ ಆದರೆ ಊರಿಗೆಲ್ಲಾ ಕೇಡು. ಜನರ ನಾಲಿಗೆಗೆ ಅವಕಾಶ ಕೊಟ್ಟಂತಾಗುವದು. ಈ ಎಲ್ಲ ಮಜಕೂರು ತುಂಬಿದ ಅರ್ಜಿಗೆ ನೀವೇ ಸಹಿ ಮಾಡಿದಿರಾ?" ಎಂದು ಕೇಳಿದರು.

ಈ ಪ್ರಶ್ನೆಗೆ ಏನು ಉತ್ತರ ಕೊಡಬೇಕೆಂಬುದು ತಿಳಿಯದೆ ಗೌಡಿತಿ ಸುಮ್ಮ ನಾದಳು. "ಗಾಬರಿಯಾಗುವಂಥಾದ್ದೇನಿಲ್ಲ. ನಿಮಗೆ ತಿಳಿದದ್ದನ್ನು ಹೇಳಬಹುದು" ಸಾಹೇಬರು ಶಾಂತರಾಗಿಯೇ ಹೇಳಿದರು.

ಗೌಡಿತಿ ಉತ್ತರ ಹೇಳಲೇಬೇಕಾಯಿತು. "ನಾ ಏನು ಅರ್ಜಿ ಬರದಾಕೆಲ್ಲ. ದೈವದವರಿಗೆಲ್ಲಾ ಆ ನೇಮಣೂಕಿ ಆಗಬಾರದು ಅಂತ ಅನಿಸಿತೆಂತ. ದೈವದವರನ್ನ ಬಿಟ್ಟಿರಬಾರದೂ ಅಂತ ಅರ್ಜಿಗೆ ನಾ ಬಟ್ಟ ಒತ್ತಿದ್ದು ಕರೆ. ನಮ್ಮ ಬಿರಾದಾರ ಜನರೂ ಬಟ್ಟ ಒತ್ತಿದ್ದೂ ಕರೆ" ಎಂದು ಹೇಳಿದಳು.

ಸಾಹೇಬರ ಮುಖ ಸಿಟ್ಟನಿಂದ ಕೆಂಪಾಯಿತು. ಈ ಪ್ರಕರಣದ ಹಿಂದಿನ ಕಪಟನಾಟಕವನ್ನು ಅವರು ಊಹಿಸಿದ್ದರು. ಆದರೆ ಇನ್ನೂ ತಿಳಿದುಕೊಳ್ಳುವ ದಿತ್ತು. ಅರ್ಜಿ ಬರೆದ ವೆಂಕಣ್ಣಮಾಸ್ತರನನ್ನು ಹಾಜರಪಡಿಸಲು ಹೇಳಿ ತಮ್ಮ ಕ್ಯಾಂಪಿಗೆ ನಡೆದರು.

ವೆಂಕಣ್ಣಮಾಸ್ತರ ನಡುಗುತ್ತಲೇ ಸಾಹೇಬರ ಮುಂದೆ ಬಂದು ನಿಂತ. ಕಣ್ಣು ಗಳಲ್ಲಿ ನೀರು ಸುರಿಯುತ್ತಿತ್ತು. ಅವನೆಂದೂ ಇಂಥ ವಿಚಾರಣೆಗೆ ಬಂದವನಲ್ಲ. ಈ ಅನುಭವ ಹೊಸದಾಗಿದ್ದುದರಿಂದ ಅವನು ಸಂಪೂರ್ಣ ಭಯಗ್ರಸ್ತನಾಗಿದ್ದ.

"ಅರ್ಜಿ ಬರೆಯಲು ನಿನಗೆ ಹೇಳಿದವರು ಯಾರು?" ಸಾಹೇಬ ಗುಡುಗಿದ.

ಗುಡುಗಿನಂಥ ಪ್ರಶ್ನೆಯನ್ನು ಕೇಳಿ ವೆಂಕಣ್ಣಮಾಸ್ತರ ದನಿ ತೆಗೆದು ಅಳ ಹತ್ತಿದ. "ಸಾಹೇಬರು ಖರೆ ಹೇಳತೀನರಿ. ನನ್ನ ಮಕ್ಕಳ ಆಣೆ ಅಂದರೂ ಖರೆ ಹೇಳತೀನಿ. ನಾ ಬಡವರಿ. ಖರೇ ಹೇಳದಿದ್ದರ ನನ್ನ ನಾಲಿಗೀ ಕೊಯ್ಯರಿ. ಖರೆ ಹೇಳತೀನರಿ. ಮಕ್ಕಳೊಂದಿಗ್ಯಾ, ಹೊಟ್ಟೆ ಇದನ್ನ ಮಾಡಿಸಿತು. ಖರೆ ಹೇಳ ತೀನರಿ" ಬೆನ್ನಮೇಲೆ ಬೀಳುವ ಹೊಡೆತಗಳನ್ನು ತಪ್ಪಿಸಿಕೊಳ್ಳುವವನಂತೆ

ಮಾಸ್ತರ ಹೇಳಿದ ಮಾತನ್ನೇ ಮತ್ತೆ ಮತ್ತೆ ಹೇಳಹತ್ತಿದ.

"ಅವೇ, ಅರ್ಜೀ ಬರೆಯಬೇಕೆಂದು ಯಾರು ಹೇಳಿದರು?" ಮತ್ತೆ ಪ್ರಶ್ನೆ ಬಂತು.

"ಹೇಳತೀನರಿ ಸಾಹೇಬ, ಹೇಳತೀನಿ. ಶೇಷಪ್ಪ ಹೇಳಿದರು. ನಾ ಬರೆದೆ. ಅವರು ಹೇಳಿದಂತೆ ನಾ ಅರ್ಜಿ ಬರದೀನಿ. ಒಂದು ಶ್ಯಾಮರಾಯನ ವಿರುದ್ಧ ಅರ್ಜಿ ಬರೆಸಿದರು. ಅದರೊಳಗಿನ ಸಹಿಗೆ ದಸ್ತೂರ ಮಾಡಿದೆ. ಇನ್ನೊಂದು ಬಿಳೀ ಕಾಗದಕ್ಕೂ ದಸ್ತೂರ ಮಾಡಿದೆ. ಮುಂದ ಬಟ್ಟು ಒತ್ತಿದ ಬಿಳೀ ಕಾಗದಾನ ಶ್ಯಾಮರಾಯರ ವಿರುದ್ಧ ಇದ್ದ ಅರ್ಜೀಗೆ ಶೇಷಪ್ಪ ಜೋಡಿಸಿದರು." ಎಂದು ಹೇಳಿ ಮತ್ತೆ ಅಳಹತ್ತಿದ.

ಗಿಬ್ಸನ್ ಸಾಹೇಬರಿಗೆ ವೆಂಕಣ್ಣಮಾಸ್ತರನ ದೈನ್ಯಾವಸ್ಥೆಯನ್ನು ನೋಡಿ ಕನಿಕರವೆನಿಸಿತು. ನಗೆಯೂ ಬಂತು. ಅವನ ದುಃಖವನ್ನು ಮರೆಸುವದಕ್ಕಾಗಿಯೋ "ನಿನ್ನ ಉದ್ಯೋಗವೇನು?" ಎಂದು ಕೇಳಿದರು.

"ಉದ್ಯೋಗರೀ? ಗಾವಠಿಸಾಲಿ ನಡಸತೀನರಿ. ತಿಂಗಳಿಗೆ ಐದಾರು ರೂಪಾಯಿ ಫೀ ಬರತದರಿ. ಸುಗ್ಗೀ ದಿನದಾಗ ಹೊಲಕ್ಕ ಹೋಗಿ ಸೂಡ-ಸೊಪ್ಪಿ ತಂದದ್ದು ನಾಲ್ಕು ಚೀಲ ಜ್ವಾಳಾ ಮಾಡಿಕೋತೀನರಿ. ಶೇಷಪ್ಪನ ಆಶ್ರಯ ತಪ್ಪಿದರ ರೈತರು ಹೊಲದೊಳಗ ಕಾಲ ಹಾಕಗೊಡೂದುಲ್ಲ ಅಂತ ಅವರ ಮಾತ ಕೇಳಿ ಅರ್ಜಿ ಬರದಿನ್ರಿ. ಹೀಂಗ ಅವರಿವರ ಕೈಯಾಗ-ಬಾಯಾಗ ಓಡಾಡಿ ಹೊಟ್ಟೀ ತುಂಬಿಕೊಳ್ಳೋದೇ ನನ್ನ ಉದ್ಯೋಗರಿ" ಎಂದು ಹೇಳಿ ಕಣ್ಣೊರಿಸಿಕೊಂಡ.

ಸಾಹೇಬರು ಅವನನ್ನು ಬಿಡುಗಡೆ ಮಾಡಿದರು. ಅವರ ಮನಸ್ಸಿಗೂ ಸಾಕಷ್ಟು ವ್ಯಥೆಯಾಗಿತ್ತು. ಈಗಲೇ ಏನೂ ನಿರ್ಣಯವನ್ನು ಹೇಳಲು ಬರದಂತಿತ್ತು. ಸಭೆಯನ್ನು ಮುಗಿಸಿ ಎದ್ದಾಗ ಅವರ ಮುಖದಿಂದಲೂ ನಿಟ್ಟುಸಿರು ಹೊರಬಿದ್ದಿತು.

:: ೩೨ ::

ಮಹಾರಾಜರಿಗೆ ತಮ್ಮ ಪೂರ್ವಜರ ಊರನ್ನೆಲ್ಲ ಕಣ್ಣುಮುಟ್ಟ ನೋಡಬೇಕಾಗಿತ್ತು. ಅವರ ವಂಶ ಜನ್ಮ ತಾಳಿ ಬೆಳೆದು ಬಂದಿದ್ದು ಪಾದಳ್ಳಿಯಲ್ಲಿಯೇ ಎಂಬ ಮಾತನ್ನು ಅವರು ಮರೆತಿರಲಿಲ್ಲ. ಪಾದಳ್ಳಿಯ ಸುತ್ತುಮುತ್ತಲಿನ ನೆಲ ಅವರ ಪೂರ್ವಜರು ಪಾದಾಕ್ರಾಂತ ಮಾಡಿಕೊಂಡ ಭೂಮಿಯಾಗಿತ್ತು. ಲಕ್ಷ್ಮೀಬಾಯಿಯ ಖಾತೆಗಿದ್ದ ಜಮೀನುಗಳೆಲ್ಲ ಈಗ ಮಹಾರಾಜರ ವಶಕ್ಕೆ ಬಂದಿದ್ದವು. ಈ ಸಂಗತಿ ಮಹಾರಾಜರಿಗೆ ಐತಿಹಾಸಿಕ ಮಹತ್ವವುಳ್ಳದ್ದಾಗಿ ಕಂಡಿತ್ತು. ಪಾದಳ್ಳಿಯ ತವರು-ನೆಲವನ್ನು ನೋಡಿದಾಗ ಅವರ ಹೃದಯದ ಅವ್ಯಕ್ತಭಾವನೆಗಳೆಲ್ಲ ಉಕ್ಕಿಬಂದಿದ್ದವು. ತಮ್ಮ ವಶಕ್ಕೆ ಬಂದ ಜಮೀನುಗಳಲ್ಲೆಲ್ಲ ಅಡ್ಡಾಡಿ ಕಣ್ಣ ಪ್ರೀತಿಯನ್ನು ಕಳೆದುಕೊಳ್ಳಬೇಕೆಂದು ಅವರಿಗೆ ಆಸೆಯಾಯಿತು.

ತಮ್ಮ ಜೊತೆಗೆ ಗಿಬ್ಸನ್‌ಸಾಹೇಬರೂ ಬರಬೇಕೆಂಬುದು ಅವರ ಇನ್ನೊಂದು ಪ್ರಬಲವಾದ ಆಸೆಯಾಗಿತ್ತು. ಮರುದಿನ ರವಿವಾರವಾದದ್ದರಿಂದ ಗಿಬ್ಸನ್ ಸಾಹೇಬರಿಗೆ ಕಚೇರಿಯ ಕಾಟವಿರಲಿಲ್ಲ. ಅಡ್ಡಾಡುವದರ ಜೊತೆಗೆ ಬೇಟೆಯಾಡಿ ಒಂದೆರಡು ಚಿಗರೆಗಳನ್ನು ಹೊಡೆದು ತಂದರಾಯಿತೆಂದು ಮಹಾರಾಜರು ತಿಳಿಸಿದಾಗ ಗಿಬ್ಸನ್‌ಸಾಹೇಬರು ಸಂತೋಷದಿಂದ ಒಪ್ಪಿಕೊಂಡರು. ಗಿಬ್ಸನ್‌ಸಾಹೇಬರಿಗೆ ಈ ದೇಶವೆಲ್ಲ ಹೊಸದು. ಇಲ್ಲಿಯ ರೀತಿನೀತಿಗಳನ್ನೂ, ದೇಶದ ವಿಚಿತ್ರ ಸೌಂದರ್ಯವನ್ನೂ ನೋಡಬೇಕೆಂದು ಅವರಿಗೂ ಒಳಗಿಂದೊಳಗೇ ಕುತೂಹಲವಿತ್ತು.

ಮರುದಿನ ಬೆಳಿಗ್ಗೆ ಉಪಹಾರ ತೀರಿಸಿಕೊಂಡು ಎಂಟು ಗಂಟೆಯ ಹೊತ್ತಿಗೆ ಇಬ್ಬರೂ ತಂತಮ್ಮ ಕುದುರೆಗಳನ್ನೇರಿ ಸಿದ್ಧರಾದರು. ಮಹಾರಾಜರು ಸ್ವತಃ ಬೇಟೆಗೆ ಹೋಗಲಿರುವರೆಂಬ ಸುದ್ದಿಯನ್ನು ಕೇಳಿ ಹುಲಿಬ್ಯಾಟೆ ಹಳಬರ ತಂಡಕ್ಕೆ ತಂಡವೇ ಅವರನ್ನು ಅನುಸರಿಸಿತ್ತು. ಯಶವಂತರಾವ ಪಾಟೀಲರು ಮಹಾರಾಜರ ಮಧ್ಯಾಹ್ನದ ಊಟದ ವ್ಯವಸ್ಥೆಯನ್ನು ಮಾಡಬೇಕಾಗಿತ್ತೆಂದು, ಬೆಳಕು ಹರಿ

ಯುವ ಮೊದಲೇ ಜಾಗೀರದಾರರ ತೋಟಕ್ಕೆ ಹೊರಟುಹೋಗಿದ್ದರು. ಶಿಲೇದಾರ ಲಕ್ಷ್ಮಣ, ಕಾಶೀಮಸಾಹೇಬ ಮೊದಲಾದವರು ಮಹಾರಾಜರ ಅಡಿಗೆಯವನ ಸಮೇತವಾಗಿ ಮೊದಲೇ ತೋಟದಲ್ಲಿ ತಳವೂರಿದ್ದರು.

ದಾದಾ ಮಹಾರಾಜರ ಕುದುರೆಯ ಜೊತೆಯಲ್ಲಿಯೇ ಬೇಟೆಗೆ ಹೋಗುವ ನೆಂದು ಗೊತ್ತಾಗಿತ್ತು. ದಾದಾ ಉತ್ಸಾಹದಿಂದ ಮಹಾರಾಜರ ಕುದುರೆಯನ್ನು ಹಿಡಿದುಕೊಂಡು ನಡೆದಿದ್ದ. ಮಹಾರಾಜರು ವಾಡೆಯನ್ನು ಬಿಟ್ಟು ಸ್ವಲ್ಪ ದೂರ ಹೋದಾಗ ಎದುರಿನಿಂದ ಕಾವಿವಸ್ತ್ರಗಳನ್ನು ಧರಿಸಿದ ಎಂಟು ಹತ್ತು ವರ್ಷಗಳ ಹುಡುಗನೊಬ್ಬ ಬರುತ್ತಿರುವದನ್ನು ಕಂಡರು. ಜನರೆಲ್ಲ ಅವನ ಕಾಲುಮುಟ್ಟಿ ನಮಸ್ಕರಿಸಿ ಹೊರಡುತ್ತಿದ್ದರು. ಗಿಬ್ಸನ್ ಸಾಹೇಬರಿಗೆ ಈ ಸಂಗತಿ ಕೌತುಕಾಸ್ಪದ ನಿಸಿಸಿತು. ಭಾರತದ ಅನೇಕ ಗೂಢ ಸಂಗತಿಗಳಲ್ಲಿ ಇದೂ ಒಂದಾಗಿರಬಹುದೆಂದು ತಿಳಿದು, ಶ್ಯಾಮರಾಯನನ್ನು ಇದೇನೆಂದು ಕೇಳಿದರು.

"ಇವರು ನಮ್ಮೂರ ಹಿರೇಮಠದ ಗುರುಪೀಠಕ್ಕ ಬಂದ ಚರಮೂರ್ತಿಗಳು. ಪಡದಪ್ಪನವರು ಊರು ಬಿಟ್ಟು ಹೋದ ಮ್ಯಾಲೆ ಊರ ಹಿರೇರೆಲ್ಲ ಕೂಡಿ ಇವ ರನ್ನ ಪೀಠಕ್ಕ ಆರಿಸಿದರು." ಎಂದು ಸಂಕ್ಷಿಪ್ತವಾಗಿ ಶ್ಯಾಮರಾಯ ಹೇಳಿದ. ಗಿಬ್ಸನ್‌ಸಾಹೇಬರು ಇನ್ನೂ ಚಕಿತರಾಗಿ ಮಹಾರಾಜರ ಮುಖವನ್ನು ನೋಡಿ ದರು. ಮಹಾರಾಜರು ಕೇವಲ ಮುಗುಳ್ನಗೆಯ ಉತ್ತರವನ್ನು ಮಾತ್ರ ಕೊಟ್ಟರು. ಗಿಬ್ಸನ್ ಸಾಹೇಬರ ಆಶ್ಚರ್ಯ ಮತ್ತೆ ಆಶ್ಚರ್ಯವಾಗಿಯೇ ಉಳಿಯಿತು.

ಮಹಾರಾಜರು ಮೊದಲು ನದಿಯ ದಂಡೆಯ ಮೇಲಿನ ಜಾಗೀರದಾರರ ಗದ್ದೆಗೆ ಬಂದರು. ಅರ್ಧ ಗದ್ದೆ ನದಿಯಲ್ಲಿ ಮುಳುಗಿಹೋಗಿತ್ತು. ಉಳಿದರ್ಧದಲ್ಲಿ ಅಂಥಿಂಥ ಕೆಲ ಗಿಡಗಳು, ಅವರೆ, ತೊಗರಿ ಮೊದಲಾದ ಕಂಟಿಗಳು ಮಾತ್ರ ಬೆಳೆ ದಿದ್ದವು. ಊರ ದನಗಳೆಲ್ಲ ಅವನ್ನೇ ಮೇಯುತ್ತ ಮೆಲಕಾಡಿಸುತ್ತ ನಿಂತಿದ್ದವು. "ಹೊಳೀ ಬಂದು ಇನ್ನ್ಯಾಡ ದಿನದಾಗ ಗಡ್ಡಿ ಪೂರಾ ಮುಳುಗಿ ಹೋಕ್ಕೈತರಿ. ಅದಕ್ಕ ಊರ ದನಾ ಎಲ್ಲಾ ಇಲ್ಲಿ ತಿರವಿದ್ದು" ಎಂದು ಅಲ್ಲಿಯ ರೈತನಾದ ಸಿಂಟೂರ ಯಲ್ಲ ಶ್ಯಾಮರಾಯನಿಗೆ ತಿಳಿಸಿದ.

ಗದ್ದೆಯ ಮುಂದೆ ಇದ್ದ ಜಾಗೀರದಾರರ ಹತ್ತುನಂಬರ ಭೂಮಿ ಬೇಸಿಗೆಯ ಬೆಳಸವನ್ನೇನೂ ಕಾಣದೆ ಕಸ ಹತ್ತಿ ಬಿದ್ದದ್ದು ಮಹಾರಾಜರ ಕಣ್ಣಿಗೆ ಬಿತ್ತು. ಭೂಮಿ ಹೀಗೆ ಪಡ ಬೀಳಲು ಕಾರಣವೇನೆಂದು ಶ್ಯಾಮರಾಯನನ್ನೇ ಕೇಳಿದರು.

ವಾಡೆಯ ಸ್ವಂತ ಕಮತಕ್ಕೆಂದು ಇಟ್ಟ ಜಮೀನುಗಳಿವು; ಬಾಪೂಸಾಹೇಬ ರಿದ್ದಾಗ ಅವರು ಭೂಮಿಯ ಕಡೆಗೆ ಲಕ್ಷ್ಯವೀಯಲಿಲ್ಲ. ಬಾಪೂಸಾಹೇಬರು ಕಾರಹುಣ್ಣಿವೆಯ ಮೊದಲೇ ಹೊರಟು ಹೋದ ಮೇಲೆ, ಮಹಾರಾಜರ ಹುಕುಮ್ ಆಗದೆ ನಾವಿನ್ನೂ ಕೆಲಸ ಮಾಡಿಸಿಲ್ಲವೆಂದು ಶ್ಯಾಮರಾಯ ಹೇಳಿದ.

ಮಹಾರಾಜರಿಗೆ ಭೂಮಿಯ ಸ್ಥಿತಿಯನ್ನು ನೋಡಿ ಕೆಡುಕೆನಿಸಿತು. ಇಲ್ಲಿಯ ಪ್ರತಿ ಅಂಗುಲವೂ ಅನಾಥವಾಗಿ ಕೇಳುವವರಿಲ್ಲದೆ ಬಿದ್ದಿತ್ತು. ಜಾಗೀರದಾರರ ಸುತ್ತುಮುತ್ತಲಿನ ಹೊಲಗಳೂ ಅದರಂತೆಯೇ ಪಡ ಬಿದ್ದಿದ್ದವು. ಕಸ-ಕಂಟೆ ಯನ್ನು ಕೂಡ ಯಾರೂ ತೆಗೆದಿರಲಿಲ್ಲ. ಮಹಾರಾಜರು ಸುಮ್ಮನೆ ಇನ್ನೊಂದು ಹೊಲದ ಕಡೆಗೆ ಬೆರಳು ತೋರಿಸಿ ಅದು ಯಾರದೆಂದು ಕೇಳಿದರು. ಬೇಸಿಗೆ ಕಾಲದಲ್ಲಿ ಹೊಲ ಹರಗಿ ಕೋಲಿಗಳನ್ನು ಕೂಡ ಯಾರೂ ತೆಗೆದಿರಲಿಲ್ಲ. ಹುಲಿ ಬ್ಯಾಟಿ ಹಳಬರ ದಳವಾಯಿ, “ಎಪ್ಪಾ, ಅದು ದೇಶಪಾಂಡೇರ ಭೂಮಿರಿ. ಹ್ವಾದ ವರ್ಸ ಬರಾ ಬಿದ್ದರೂ ಬೆಳೀ ನೆಟ್ಟಗ ಬಂದಿತ್ತರಿ. ಈ ವರಸ ಮನೀಲೆ ಇಡತೀವೆಂತ ಹೇಳಿ ಕಳಿಸ್ಯಾರರಿ. ಹಾಗಂತ ಹೇಳಿ ಕುಲಕರ್ಣ್ಯಾರು ರೈತರಿಗೆ ಭೂಮಿ ಕೊಡ ಬ್ಯಾಡಾ ಅಂದರು. ಅವರಿನ್ನೂ ಬಂದಿಲ್ಲ; ಭೂಮಿನೂ ಸಾಗ ಲಗಿಲ್ಲರಿ” ಎಂದು ಹೇಳಿದ. ಎಲ್ಲಿ ನೋಡಿದರೂ ಭೂಮಿಯಲ್ಲಿ ಮನುಷ್ಯನ ಕತೆಯ ವಿಷಾದಛಾಯೆ ಪಸರಿಸಿದಂತಿತ್ತು. ಯಾರದೋ ಈರ್ಷ್ಯೆ ನೆಲವನ್ನು ಬಂಜೆಯಾಗಿಸಿತ್ತು; ಅಧಿಕಾರ ಭೂಮಿಯನ್ನು ಮುಟ್ಟದಂತೆ ನಿರ್ಬಂಧ ಹಾಕಿತ್ತು; ಕಪಟಕಾರಸ್ಥಾನಗಳೆಲ್ಲ ಬೀಜದ ಮೊಳಕೆ ಮೇಲೇಳದಂತೆ ಮಾಡಿದ್ದವು.

ಕುದುರೆಗಳು ಹಾಗೆಯೇ ಮರಡಿಯ ದಿಕ್ಕು ಹಿಡಿದು ಸಾಗಿದವು. ಪಾದ ಳ್ಳಿಯ ಗುಡ್ಡವನ್ನು ದಾಟಿ ಹೋದ ಮೇಲೆ ಚಿಗರೆಗಳ ಹಿಂಡು ವಾಸಿಸುವ ಸ್ಥಾನ ವಿತ್ತು. ಅಲ್ಲಿ ಬೇಟೆಗೆ ಅನುಕೂಲವಾದ ಸ್ಥಳವೂ ಇತ್ತು. ಬೇಟೆಯ ವಿಷಯ ದಲ್ಲಿ ಮಾರ್ಗದರ್ಶಿಗಳಾಗಿ ಹುಲಿಬ್ಯಾಟಿ ಹಳಬರು ಉತ್ಸಾಹದಿಂದ ಮುಂದೆ ಸಾಗಿ ದ್ದರು. ಮರಡಿಯ ಬಳಿಗೆ ಬಂದು ಅದನ್ನು ಏರಿದ್ದಾಯಿತು. ಆ ಎತ್ತರದ ಮೇಲಿಂದ ಹಿಂದಿರುಗಿ ನೋಡಿದಾಗ, ಪಾದಳ್ಳಿ, ಅದರ ಮುಂದೆ ಬೆಳ್ಳಿಯ ಗೆರೆ ಯಾಗಿ ಹರಿಯುವ ನದಿ, ಮೌನವಾಗಿ ಚಿತ್ರದಲ್ಲಿ ಬರೆದಂತೆ ರಮ್ಯವಾಗಿ ಕಂಡವು. ಮರಡಿಯ ಎದುರಿಗಿರುವ ತಗ್ಗಿನಲ್ಲಿ ಹೊಗೆ ಮುಸುಕಿದ ಗಿಡಗಳ ಗುಂಪಿನೊಳಗಿ ನಿಂದ ಹಾವನೂರನ್ನೂ ಕಾಣಬಹುದಾಗಿತ್ತು. ಆ ದಿಕ್ಕಿನಿಂದ ದನಗಳ ಹಿಂಡಿಗೆ

ಂತೇ ಬರುತ್ತಿತ್ತು. ಹಾವನೂರಿಗೆ ದನಗಳನ್ನು ಮೇಯಿಸಲು ಅಡವಿ ಇರಲಿಲ್ಲ.
ಾವನೂರಿನಭೂಮಿಯೆಲ್ಲ ಫಲವತ್ತಾದುದು, ಒಂದಂಗುಲವೂ ಬಿಡದಂತೆ ಸಾಗು
ಳಿಯಾಗಿತ್ತು. ಅಂತೆಯೇ ಹಾವನೂರಿನ ದನಕರುಗಳು ಪಾದಳ್ಳಿಯ ಈ ಬೀಳು
ಿದ್ದ ಮರಡಿಯಲ್ಲಿ ಅಡ್ಡಾಡಿ ಮೇಯುವದು ರೂಢಿಯಾಗಿತ್ತು. ಮಹಾರಾಜರು
ತ ದನಗಳ ಹಿಂಡಿನತ್ತ ಕುದುರೆ ಓಡಿಸಿದೊಡನೆ ಅವೆಲ್ಲ ದೂರದಿಂದಲೇ ಕಂಡು,
ಾಲವನ್ನೆತ್ತರಿಸಿ ಓಡಿದವು. ತುಡುಗು-ಮೇಯುವ ದನಗಳು ತುಡುಗರಿಗಿಂತ
ಹೆಚ್ಚು ಬೆದರಿ ಓಡುತ್ತಿದ್ದ ದೃಶ್ಯ ಕೌತುಕಮಯವಾಗಿತ್ತು. ಹುಲಿಬ್ಯಾಟಿ ಹಳಬರ
ೇಕೆ ನಗೆಗಳಿಂದ ಮರಡಿಯೆಲ್ಲ ಪ್ರತಿಧ್ವನಿಸಿತು.

"ತುಡುಗರಿಗಿಂತಾ ಈ ತುಡುಗದನಾ ಹಿಡಿಯೂದು ಬಳೆ ಬಿರಿ ಬಂಸ್ತೈತರಿ."
ಂದು ದಳವಾಯಿ ಹಾವನೂರಿನ ತುಡುಗುದನಗಳಿಂದಲೇ ಪಾದಳ್ಳಿಯ ಬೆಳೆ
ಾಳಾಯಿತೆಂದು ಗೋಳು ತೋಡಿಕೊಂಡ.

"ಈ ವಿಷಯಕ್ಕೆ ಸರಕಾರಕ್ಕೇನೂ ಅರ್ಜಿ ಬಂದಿಲ್ಲ?" ಎಂದು ಪ್ರಾಂತ
ಾಹೇಬರು ಕೇಳಿದರು.

ಪೆಚ್ಚುಮುಖ ಹಾಕಿಕೊಂಡ ದಳವಾಯಿಗೆ ಉತ್ತರ ಕೊಡುವ ಅವಕಾ
ವೇ ದೊರೆಯಲಿಲ್ಲ. ಎರೆಭೂಮಿಯಲ್ಲಿ ಮಿಂಚಿನ ಗೊಂಚಲವೊಂದು ಹೊಳೆದಂತೆ
ಿಗರೆಗಳ ಹಿಂಡೊಂದು ಓಡುತ್ತ ಹೊಯಿತು. ಅವನಿಗೆ ಎಲ್ಲ ಮರೆತಂತಾಗಿ
ಚಿಗರೀ ಹಿಂಡು ಸಾಹೇಬರ!.... ನಾಯಿ ಬಿಟ್ರೀ...." ಎಂದು ಕೂಗಿಕೊಂಡ.
ೇಟೆಯ ಜಾಗೃತಿ ಮಿಂಚಿನಂತೆ ಎಲ್ಲರಲ್ಲಿಯೂ ಅವತರಿಸಿತು. ನಾಯಿಗಳು
ೊರಳ ಸರಪಳಿಯ ಬಂಧನದಿಂದ ಮುಕ್ತವಾದವು. ಕೆಲನಿಮಿಷಗಳಲ್ಲಿಯೇ
ಿಗರೆಯ ಹಿಂಡನ್ನು ಸುತ್ತುವರಿದು, ಅವು ಮರಡಿಯನ್ನಿಳಿದು ಎರೆಭೂಮಿಯನ್ನು
ೇರುವಂತೆ ಮಾಡಿದವು.

ಆಷಾಢಮಾಸದ ಜಡಿಮಳೆ ಬಿದ್ದದ್ದರಿಂದ ಎರೆಭೂಮಿ ಹಸಿಯಾಗಿತ್ತು.
ಿಗರೆಗಳು ಜಿಗಿದರೆ ಅವುಗಳ ಕಾಲುಗಳು ಅನಾಯಾಸವಾಗಿ ಹುದುಲಿನಲ್ಲಿ ಸಿಗ
ುದಾಗಿತ್ತು. ಆಗ ಓಡುವದು ಆಯಾಸಪ್ರದವಾಗಿ ಅವು ನಾಯಿಗಳ ಬಾಯಿಗೆ
ವಾಗಿಯೇ ಬೀಳುವ ಪ್ರಸಂಗ ಬರುತ್ತದೆ. ಈ ಭಾಗದಲ್ಲಿಯ ಬೇಟೆಯ
ೀತಿಯೇ ಹಾಗೆ. ನುರಿತ ಬೇಟೆನಾಯಿಗಳು ಚಿಗರೆಗಳನ್ನು ಅಟ್ಟಿಸಿಕೊಂಡು
ೋಗಿ ಎರೆಭೂಮಿಯಲ್ಲಿ ಓಡುವಂತೆ ಮಾಡಿದರೆ ತೀರಿತು. ಚಿಗರೆ ಎಡವುತ್ತ

ನೆಡೆದಾಗ ಮುಗಿಬಿದ್ದು ನಾಯಿಗಳೇ ಬೇಟೆಗಾರರ ವಶಕ್ಕೆ ಅವನ್ನು ತಂದು ಕೊಡುತ್ತವೆ.

ಚಿಗರೆಗಳನ್ನು ಹೀಗೆ ಸಜೀವವಾಗಿದ್ದಾಗಲೇ ಹಿಡಿಯಬಹುದೆಂಬ ಕಲ್ಪನೆ ಗಿಬ್ಸನ್‌ಸಾಹೇಬರಿಗಿರಲಿಲ್ಲ. ತಮ್ಮ ಗುರಿಯು ನೇರದಲ್ಲಿದ್ದ ಒಂದು ಗಂಡೆರಳೆಗೆ ಗುಂಡು ಹಾಕುವ ಸಿದ್ಧತೆಯಲ್ಲಿ ಅವರಿದ್ದರು. ಮಹಾರಾಜರಿಗೆ ಈ ರೀತಿಯ ಬೇಟೆ ಸಾಕಷ್ಟು ಪರಿಚಿತವಿದ್ದದ್ದರಿಂದ ಅವರು ಗುಂಡು ಹಾರಿಸುವ ಗೋಜಿಗೆ ಹೋಗದೆ ಸುಮ್ಮನೆ ಚಿಗರೆಗಳ ಹಿಂದೆ ಕುದುರೆಯನ್ನೋಡಿಸುತ್ತಿದ್ದರು. ನಾಯಿಗಳು ಚಿಗರೆಯ ಬೆನ್ನ ಹಿಂದೆಯೇ ಓಡುತ್ತಿದ್ದವು. ಭಯಂಕರವಾಗಿ ಬೊಗಳುತ್ತಿದ್ದದರಿಂದ ಬೆದರಿದ ಚಿಗರೆಗಳು ಹಿಂದೆ ನೋಡಿ ಮುಂದೆ ಓಡುತ್ತಿರುವಾಗ ಹುದುಲಿನಲ್ಲಿ ಕಾಲು ಸಿಕ್ಕು ಅಸಹಾಯವಾಗಿ ಬೀಳುತ್ತಿದ್ದವು. ಅಷ್ಟರಲ್ಲಿ ಸಾಹೇಬರು ಹಾರಿಸಿದ ಗುಂಡು ಎರಳೆಗೆ ಬಡಿಯದೆ ಹಿಂದೆ ಓಡುತ್ತಿದ್ದ ಮಹಾರಾಜರ ನಾಯಿಗೇ ಬಡಿಯಿತು. ನಾಯಿ 'ಭೌಂ' ಎಂದು ಚೀರಿ ನೆಲಕ್ಕುರುಳಿತು. ಬೇಟೆಯ ಸಂಭ್ರಮದಲ್ಲಿ ಯಾರೂ ಅದನ್ನು ಲೆಕ್ಕಿಸಲಿಲ್ಲ. ಉಳಿದ ನಾಯಿಗಳು ಇನ್ನೂ ಬೊಗಳುತ್ತ ಚಿಗರೆಗಳನ್ನು ಬೆನ್ನಟ್ಟಿದವು. ಬೇಟೆಗಾರರು ಅಡವಿ ನಡುಗುವಂತೆ ಹುಯಿಲೆಬ್ಬಿಸಿ ಅಳವಿನಲ್ಲಿ ಹಿಡಿಯಲು ಕುಳಿತರು.

ಹಸಿಯಾದ ಎರೆಭೂಮಿಗೆ ಬಿದ್ದು ಚಿಗರೆಹಿಂಡು ಗಾಸಿಯಾಯಿತು. ಚಿಗರೆಗಳು ಓಡುವದಾಗದೆ ಕಂಗಾಲಾದವು. ಚಿಗರೆಗಳು ಅಳವಿನಲ್ಲಿ ಬಂದಾಗ ನಾಯಿಗಳು ರೌದ್ರ ಆವೇಶದಲ್ಲಿ ಮುಗಿಬಿದ್ದವು. ಬೇಟೆಗಾರರು ಬೀಸಿ ಒಗೆದ ಬಡಿಗೆಯ ಏಟು ಬಿದ್ದು ಗಂಡೆರಳೆಯೊಂದು ನೆಲಕ್ಕುರುಳಿತು. ತಳವಾರ ಮಲ್ಲ ಧಾವಿಸಿ ಹೋಗಿ ಅದನ್ನೆತ್ತಿಕೊಂಡು ಬಂದು ಮಹಾರಾಜರ ಕುದುರೆಯ ಮುಂದೆ ಒಗೆದ. ಇನ್ನೂ ಜೀವ ಹೋಗಿರಲಿಲ್ಲ; ಬಡಿಗೆಯ ಏಟು ಮರ್ಮಕ್ಕೆ ತಾಕಿದ್ದರಿಂದ ಎರಳೆ ಒಂದೇಸವನೆ ಹೊರಳುತಿತ್ತು. ಕಣ್ಣುಗಳಲ್ಲಿ ಪ್ರಾಣವೇ ಒಟ್ಟಾಗಿ ಬಂದಂತೆ ಕರುಣೆ ತುಂಬಿತ್ತು. ಆ ನೋಟ ವಿಲಕ್ಷಣ ಮಾನವೀಯತೆಯಿಂದ ತುಂಬಿ ತುಳುಕುತ್ತಿತ್ತು. ಆದರೆ ಮಹಾರಾಜರು ಬೇಟೆಯ ಆವೇಶದಲ್ಲಿದ್ದುದರಿಂದ ಎರಳೆಯನ್ನು ತೋಟಕ್ಕೊಯ್ಯಲು ಸನ್ನೆಮಾಡಿದರು.

ಮಹಾರಾಜರ ನಾಯಿಯನ್ನು ಗುಂಡುಹಾಕಿ ಕೊಂದದ್ದರಿಂದ ಗಿಬ್ಸನ್ ಸಾಹೇಬರಿಗೆ ಬಹಳ ವ್ಯಥೆಯಾಗಿತ್ತು. ಬೇಟೆಯಾಡುವದರಲ್ಲಿ ಅವರಿಗೆ ಆಸಕ್ತಿ

ಉಳಿದಿರಲಿಲ್ಲ. ತನ್ನನ್ನು ಕ್ಷಮಿಸಬೇಕೆಂದು ಮಹಾರಾಜರಿಗೆ ಒಂದಲ್ಲ ನೂರು ಸಾರೆ ಕೇಳಿಕೊಂಡರು. ಮಹಾರಾಜರೂ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡಿದ್ದರು. ಅದರ ಬಗ್ಗೆ ಚಿಂತಿಸಬಾರದೆಂದು ಗಿಬ್ಸನ್‌ಸಾಹೇಬರಿಗೆ ಹೇಳಿ ಅವರೇ ಸಮಾಧಾನ ಪಡಿಸಬೇಕಾಯಿತು. ಆದರೂ ಅವರ ಮನಸ್ಸಿನಲ್ಲಿ ತಮ್ಮ ನಚ್ಚಿನ ನಾಯಿಯನ್ನು ಕಳೆದುಕೊಂಡ ಬಗ್ಗೆ ಎಲ್ಲ ಬೇಟೆಗಾರರಿಗಾಗಿರುವಂತೆಯೇ ಆಳವಾದ ದುಃಖ ಮಿಡಿಯುತ್ತಿತ್ತು.

ಬೇಟೆ ಮುಗಿದು ಇಬ್ಬರೂ ತೋಟಕ್ಕೆ ತಿರುಗಿದಾಗ ಸೂರ್ಯ ನೆತ್ತಿಯ ಮೇಲೆ ಬಂದಿದ್ದ. ಬಿಸಿಲು ಸುಡುತ್ತಿತ್ತು. ಆದರೆ ಪಶ್ಚಿಮ ದಿಕ್ಕಿನಲ್ಲಿ ಜಡಿಮಳೆಯ ಮೋಡಗಳು ತುಂಬಿಕೊಂಡು ಬಂದಿದ್ದವು. ಎತ್ತರದ ಮೇಲಿಂದ ಮುಗಿಲ ಕಡೆಗೆ ನೋಡಿದಾಗ ಈ ನೋಟ ಮೋಹಕವಾಗಿಯೇ ಕಂಡಿತು. ಸ್ವಲ್ಪಹೊತ್ತಿನಲ್ಲಿಯೇ ಮೋಡ ಹಿಂಜಿದಂತಾಗಿ ಬಾನೆಲ್ಲವನ್ನೂ ವ್ಯಾಪಿಸಿತು. ಸೂರ್ಯನ ಬೆಳಕು ಮರೆಯಾಯಿತು. ಪಡುವಣ ಗಾಳಿಗೆ ಹರೆ ಬಂದಿತ್ತೇನೋ, ಭರದಿಂದ ಬೀಸುತ್ತಿತ್ತು. ಒಮ್ಮೊಮ್ಮೆ ಗಾಳಿಯ ಬೀಸುವಿಕೆಯಿಂದ ಮುಂದೆ ಹೋಗುವದೂ ಅಸಾಧ್ಯವಾಗುತಿತ್ತು. ಬಟ್ಟಬಯಲು ಗಾಳಿಗೆ ಮೈಯೊಡ್ಡಿಕೊಂಡು ಅದರ ಸತ್ವವನ್ನೇ ಪರೀಕ್ಷಿಸುವಂತಿತ್ತು. ಗಿಡಮರಗಳೆಲ್ಲ ತಮ್ಮ ನಿಡಿದಾದ ಬರಲುಗಳಿಂದ ಬೀಸಿ ಹೊಡೆದರೂ ಗೂಳಿಯಂತೆ ಏರಿ ಬರುವ ಗಾಳಿಯನ್ನು ತಡೆಯುವದು ಅಸಾಧ್ಯವಾಗಿತ್ತು.

ಜಡಿಹಿಡಿದು ಮಳೆ ಒಂದೇಸವನೆ ಹನಿಯಲಾರಂಭಿಸಿತು. ಗಾಳಿ ಹುಚ್ಚು ರಭಸದಿಂದ ಬೀಸಿದ್ದರಿಂದ ಜಾಗೀರದಾರರ ತೋಟದ ಗುಡಿಸಲಿನ ಹುಲ್ಲಿನ ಮೇಲು ಛಾವಣಿ ಹಾರಿಹೋಗಿತ್ತು. ಅವಸರದಿಂದ ಅದನ್ನು ಸರಿಪಡಿಸುವ ಕೆಲಸವೂ ಸಫಲವಾಗಿರಲಿಲ್ಲ. ಅಡಿಗೆಯ ವ್ಯವಸ್ಥೆಗೆಂದು ಮೀಸಲಾಗಿರಿಸಿದ್ದ ಹಳೆಯ ಗುಡಿಸಲು ಮಾತ್ರ ಪ್ರಶಸ್ತವಾಗಿತ್ತು. ಹದಿನಾರು ಎತ್ತುಗಳನ್ನು ಕಟ್ಟುವ ಧಾಬೆಗೆ ತಕ್ಕಂತೆ ಆ ಗುಡಿಸಲನ್ನು ಕಟ್ಟಲಾಗಿತ್ತು. ಹೊರಗೆ ಮಳೆಯಿದ್ದದ್ದರಿಂದ ಮಹಾರಾಜರೂ ಗಿಬ್ಸನ್‌ಸಾಹೇಬರೂ ಆಶ್ರಯಕ್ಕೆಂದು ಇದೇ ಗುಡಿಸಲಿನಲ್ಲಿ ನುಗ್ಗಬೇಕಾಯಿತು. ಮಹಾರಾಜರ ಪರಿವಾರದ ಇನ್ನಿತರರು ಚಕ್ಕಡಿಯ ಮೇಲೆ ಗುಡಾರ ಹಾಕಿ ಅದರ ಚಾಟಿನಲ್ಲಿ ಕುಳಿತರು.

ಮಹಾರಾಜರಿಗೆ ಗುಡಿಸಲಿನಲ್ಲಿ ಒಬ್ಬೊಂಟಿಗರಾಗಿ ಕುಳಿತುಕೊಳ್ಳಲು ಬೇಸರವೆನಿಸಿತು. ಚಕ್ಕಡಿಯಲ್ಲಿ ಕುಳಿತವರನ್ನೂ ಒಳಗೆ ಕರೆಯಲಾಯಿತು.

ಇದ್ದ ಒಂದೇ ಗುಡಾರದ ಮೇಲೆ ತಕ್ಕನುಟ್ಟಗೆ ಇಂಬುಮಾಡಿಕೊಂಡು ಕುಳಿತರು. ಬೇಗನೆ ಅಡಿಗೆಯಾಗುವದೂ ಸಾಧ್ಯವಿರಲಿಲ್ಲ. ಯಶವಂತರಾಯರು ಗೆಣಸಿನ ಡಬ್ಬಿಗಾಯಿಗಳನ್ನು ಮಾಡಿಸಿ ಬಾಳೆಹಣ್ಣುಗಳ ಜೊತೆಗೆ ಉಪಾಹಾರಕ್ಕೆಂದು ತಂದಿಟ್ಟರು. ಮಹಾರಾಜರು ತಮ್ಮ ಗೌರವದ ಬಂಧನವನ್ನೂ ಮರೆತು, ಕ್ಷುಧಾ ಶಾಂತಿಯಲ್ಲಿ ನಿರತರಾದರು. ಸರಸವಾಗಿ ಹರಟೆಯನ್ನು ಹೊಡೆಯಲಾರಂಭಿಸಿದರು. ಹಾಲು, ಬೆಲ್ಲ, ಗೊಂಜಾಳದ ತೆನೆಗಳನ್ನು ಹಂಚುತ್ತ ತಿರುಗಾಡುತ್ತಿದ್ದ ದಾದಾ ಮತ್ತೊಮ್ಮೆ ಮಹಾರಾಜರ ಕಣ್ಣು ತುಂಬಿದ. ಅವನ ದೇಹಸೌಷ್ಠವ ಅವರಿಗೆ ಹುಚ್ಚು ಹಿಡಿಸಿತ್ತು. ಯಶವಂತರಾಯರನ್ನು ಮತ್ತೆ ದಾದಾನ ಬಗ್ಗೆ ಮಾಹಿತಿಗಾಗಿ ಕೇಳಿಕೊಂಡರು.

ಮೊದಲು ಜಡಿಮಳೆಯಾಗಿದ್ದದ್ದು, ಬಿರುಮಳೆಯಾಗಿ ಸುರಿದು ಕೊನೆಗೊಮ್ಮೆ ಮಳೆ ನಿಂತಿತು. ಆ ಹೊತ್ತಿನಲ್ಲಿ ಜಾಗೀರದಾರರ ತೋಟದ ಬಾವಿಯಲ್ಲಿ ಮಳೆಯಿಂದ ತೋಯಿಸಿಕೊಳ್ಳಬಾರದೆಂದು ನಿಂತ ನಾಲ್ವರು ಬಾವಿಯ ಮೆಟ್ಟಲನ್ನೇರಿ ಮೇಲೆ ಬಂದರು. ಅವರನ್ನು ನೋಡಿ ಗೊಂಜಾಳ ತೆನೆಯನ್ನು ಕಡಿದು ತಿನ್ನುತ್ತಿದ್ದ ಹೊಲೆಯರ ರುದ್ರ "ಸಲಾಮರೀ ಗೌಡರs" ಎಂದು ದೊಡ್ಡದಾಗಿ ಕೂಗುತ್ತ ವಂದನೆ ಸಲ್ಲಿಸಿದ. ತಳವಾರ ಮಲ್ಲ ಅವರನ್ನು ಮಹಾರಾಜರು ಕುಳಿತ ಗುಡಿಸಲಿಗೆ ಕರೆದುಕೊಂಡು ಬಂದ.

ಗುಡಿಸಲದ ಬಾಗಿಲಲ್ಲಿ ಬಂದ ಲಿಂಗಪ್ಪನನ್ನು ನೋಡಿ ಯಶವಂತರಾಯರು "ಬರ್ರಿ, ಬರ್ರಿ, ಗೌಡರ" ಎಂದು ಕರೆದರು. ಲಿಂಗಪ್ಪನಿಗೆ ಒಳಗಿನ ಪರಿವಾರವನ್ನು ನೋಡಿ ದಿಗ್ಭ್ರಮೆಯೆನಿಸಿದರೂ ಅದನ್ನು ತೋರಗೊಡುವಂತಿರಲಿಲ್ಲ. ಲಿಂಗಪ್ಪನ ಹಿಂದಿನಿಂದಲೇ ಪಡದಪ್ಪ, ಪಡದಪ್ಪನ ಅಣ್ಣನಾದ ಶಂಕರೆಪ್ಪ ಹಾಗೂ ಲಿಂಗಪ್ಪನ ಸೋದರಮಾವ ಇವರೆಲ್ಲ ಗುಡಿಸಲಿನಲ್ಲಿ ಬಂದು ಗುಡಾರದ ಅಂಚಿಗೆ ಕುಳಿತುಕೊಂಡರು.

ಈ ಆಗಂತುಕರು ಬಂದದ್ದರಿಂದ ಅಪರಿಚಿತರಿಗೆ ಸಂಕೋಚವೆನಿಸಿತು. ಕೆಲವರಿಗೆ ಪೂರ್ವಸ್ಮೃತಿಗಳೆಲ್ಲ ಕೆರಳಿದವು. ಕೆಲವರಿಗೆ ಮೋಜೆನಿಸಿತು; ಮತ್ತೆ ಕೆಲವರಿಗೆ ಕುತೂಹಲವೂ ಹುಟ್ಟಿತು. ಲಿಂಗಪ್ಪ ಈಗ ಮೊದಲಿನಂತೆ ಸ್ಥೂಲಕಾಯನಾಗಿರದೆ, ಸೊರಗಿ ಹೋಗಿದ್ದ. ಅವನ ವೇಷದಲ್ಲಿಯೂ ಮೊದಲಿನ ಆಡಂಬರವಿರಲಿಲ್ಲ. ಪಡದಯ್ಯನ ಸನ್ಯಾಸಿವೇಷವೆಲ್ಲ ಮಾಸುವಾಗಿತ್ತು. ಎಲ್ಲಿಲ್ಲದ

ಹುಚ್ಚು ಕಳೆ ಅವರ ಮುಖವನ್ನು ಆವರಿಸಿತ್ತು.

ಕೆಲಹೊತ್ತು ಎಲ್ಲರೂ ಮೌನವಾಗಿಯೇ ಕಾದರು. ಕೊನೆಗೆ ಯಶವಂತ ರಾಯರು "ದಾದಾ, ಪಾವಣೇರಿಗೆ ಫಳಾರದ ಜೀನಸಾ ಬರಲಿ" ಎಂದು ಆದೇಶ ವಿತ್ತರು. ಅವರ ಮುಖ ಸಂಯಮದಿಂದ ಗಂಭೀರವಾಗಿತ್ತು. ದಾದಾನ ಮುಖ ಈ ಮಾತುಗಳನ್ನು ಕೇಳಿ ಕಹಿಯಾಯಿತು; ಹುಬ್ಬುಗಂಟಿಕ್ಕಿದವು. ಆದರೂ ಏನೂ ತೋರಗೊಡುವ ಹಾಗಿರಲಿಲ್ಲ. ನಿರುಪಾಯನಾಗಿ ಫಲಾಹಾರದ ಸಾಮಾನು ಗಳನ್ನು ಲಿಂಗಪ್ಪನ ಮುಂದೆ ತಂದಿಟ್ಟು ಮತ್ತೆ ದೂರ ಸರಿದ. ಲಿಂಗಪ್ಪ ಏನೂ ಮಾತಾಡದೆ ಸುಮ್ಮನೆ ಕುಳಿತಿದ್ದ. ಯಶವಂತರಾಯರು ಔಪಚಾರಿಕವಾಗಿ "ಮತ್ತೇನು ಊರ ಕಡೆ ಎಲ್ಲಾ ಆರಾಮಃ?" ಎಂದು ಲಿಂಗಪ್ಪನನ್ನು ಕೇಳಿದರು. ಅವರು ಅಜರಾಣಿಯನ್ನು ಬಿಟ್ಟು ಎರಡು ವಾರಗಳ ಮೇಲಾಗಿತ್ತು. ತಮ್ಮ ಊರ ಸಮಾಚಾರವನ್ನು ಕೇಳಲು ಆತುರರಾಗಿದ್ದರು. ಆದರೆ ಈ ಪ್ರಶ್ನೆಯನ್ನು ಕೇಳಿದ ಕೂಡಲೆ ಲಿಂಗಪ್ಪನ ಕಣ್ಣಲ್ಲಿ ನೀರು ತುಂಬಿ ಬಂದವು. ಎದುರಿಗೆ ಹೊಸಬರಿಲ್ಲ ದಿದ್ದರೆ ಬಿಕ್ಕಿಬಿಕ್ಕಿ ಅಳುತ್ತಿದ್ದನೋ ಏನೋ! ದುಃಖ ತುಂಬಿ ಬಂದು ಉತ್ತರ ನೀಯುವುದೇ ಅವನಿಗೆ ಅಸಾಧ್ಯವಾಗಿತ್ತು.

ಶಂಕರಪ್ಪನೇ ಈಗ ನಡುವೆ ಬಾಯಿ ಹಾಕಬೇಕಾಯಿತು. "ಪಾಟೀಲರಃ ಲಿಂಗಪ್ಪನ ತಂದಿಯವರು ಕೈಲಾಸ ಕಂಡದ್ದು ನಿಮಗ ಗೊತ್ತಃ ಇಲ್ಲ ಕಾಣತೈತಿ?" ಎಂದು ನುಡಿದನು.

ಯಶವಂತರಾಯರಿಗೆ ಕೆಡುಕೆನಿಸಿತು. ಕ್ಷಣಹೊತ್ತು ಸುಮ್ಮನಿದ್ದು "ಸಾವಿಗೆ ಏನ ಮಾಡೂದೈತಿ? ಆದದ್ದು ಆಗಿ ಹೋತು. ಅವರಿಗೂ ವಯಸ್ಸಾಗಿತ್ತಲ್ಲ. ಸುಮ್ಮನ ಅತ್ತರ ಏನ ಬಂದಹಾಗಾತು? ಹಸದು ಬಂದೀರಿ ಕಾಣತೈತಿ. ಫಳಾರ ತೊಗೋರಿ" ಎಂದು ಸಮಾಧಾನ ಹೇಳಿದರು.

ಅವರೆಲ್ಲ ಹಿಂದಿನ ದಿನವೇ ಅಜರಾಣಿಯಿಂದ ಹೊರಟಿದ್ದರು. ನಡುವೆ ದಾರಿಯಲ್ಲಿ ಹಳ್ಳ ಕಟ್ಟಿದ್ದರಿಂದ ಗಾಡಿಯನ್ನು ಬಿಟ್ಟು ನಡೆಯುತ್ತಲೇ ಬಂದಿದ್ದರು. ನಿನ್ನಿನಿಂದ ಹೊಟ್ಟೆಯಲ್ಲಿ ಏನೂ ಬಿದ್ದಿರಲಿಲ್ಲ. ದಾರಿ ನಡೆದ ದಣಿವಿನಿಂದ ಇನ್ನಷ್ಟು ಕಂಗಾಲಾಗಿದ್ದರು. ಯಾರೂ ಮಾತಾಡುವ ಸ್ಥಿತಿಯಲ್ಲಿ ಕೂಡಾ ಇರಲಿಲ್ಲ. ಮರು ಮಾತಾಡದೆ ಎದುರಿಗಿದ್ದ ಡಬ್ಬಗಾಯಿ ಬಾಳೇಹಣ್ಣುಗಳಿಗೆ ಕೈನೀಡಿದರು.

ಯಶವಂತರಾಯರು ನೀಡಿದ ಅತಿಥಿಸತ್ಕಾರದಿಂದ ಮಹಾರಾಜರಿಗೆ ಇವ

ರಾರೆಂದು ತಿಳಿದುಕೊಳ್ಳುವ ಕುತೂಹಲ ಉಂಟಾಯಿತು. ಯಶವಂತರಾಯರಿಗೆ ಅದು ಗೊತ್ತಾಯಿತೇನೋ, ಅತಿಥಿಗಳ ಪರಿಚಯ ಮಾಡಿಕೊಟ್ಟರು. "ಇವರು ಇದೇ ಊರಿನ ಗೌಡರು. ಮೃತ ಶಂಕರಪ್ಪಗೌಡರ ಮಗಾ ಲಿಂಗಪ್ಪಗೌಡರು. ಇವರು ಪಾದಳ್ಳಿ ಹಿರೇಮಠದ ಪಡಪ್ಪನವರು. ಇನ್ನಿಬ್ಬರೂ ಅವರ ಆಪ್ತರು" ಎಂದು ಹೇಳಿದರು.

ಮಹಾರಾಜರಿಗೆ ಈ ವ್ಯಕ್ತಿಗಳ ಹಿಂದಿನ ಇತಿಹಾಸವೆಲ್ಲ ಸಾಕಷ್ಟು ಅವಗತವಾಗಿತ್ತು. ಸ್ವತಃ ಯಶವಂತರಾಯರೇ ಆ ಕತೆಯನ್ನೆಲ್ಲ ಹೇಳಿದ್ದರು. ಆದರೆ ಅತಿಥಿಗಳಿಗೆ ಬಂದವರನ್ನು ಶಿಷ್ಟಾಚಾರಕ್ಕೆ ಸಮ್ಮತವಾಗುವಂತೆ ಮಾತ್ರ ಆದರಿಸುತ್ತಿರುವರೆಂಬ ಮಾತು ಮಹಾರಾಜರಿಗೆ ಅರ್ಥವಾಯಿತು. ಅಂತೆಯೇ ಅವರು ಹೆಚ್ಚಿನ ಪ್ರಶ್ನೆ ಕೇಳುವ ಗೋಜಿಗೆ ಹೋಗಲಿಲ್ಲ. ಲಿಂಗಪ್ಪನಿಗೆ ದೊರೆತ ಆತಿಥ್ಯವನ್ನು ನೋಡಿ ಈತನೂ ಮಹಾರಾಜರಿಗೆ ಬೇಕಾದವನೇ ಇರಬೇಕೆಂದು ಗಿಬ್ಸನ್ ಸಾಹೇಬರ ಅಭಿಪ್ರಾಯವಾಯಿತು. ಅಷ್ಟರಲ್ಲಿ ಮಳೆ ಸಂಪೂರ್ಣವಾಗಿ ನಿಂತದ್ದರಿಂದ ತಾವು ಕ್ಯಾಂಪಿಗೆ ಹೊರಡುವದಾಗಿ ಹೇಳಿ ಗಿಬ್ಸನ್‌ಸಾಹೇಬರು ಎದ್ದರು. ಲಿಂಗಪ್ಪ ಬಾಗಿ ಅವರಿಗೆ ವಂದಿಸುವಾಗ ಅವನ ನೀರು ತುಂಬಿದ ಕಣ್ಣುಗಳನ್ನು ನೋಡಿ ಗಿಬ್ಸನ್‌ಸಾಹೇಬರಿಗೆ ವಿಲಕ್ಷಣ ಭಾವನೆಗಳುಂಟಾದವು.

ಸಾಹೇಬರು ತಮ್ಮ ಕ್ಯಾಂಪಿಗೆ ಹೊರಟರು. ಉಪಹಾರ ತೀರಿಸಿಕೊಂಡ ಹಳಬರು ಅವರ ಕುದುರೆಯ ಮುಂದೆ ಊರ ವರೆಗೆ ಓಡಿದರು. ಲಿಂಗಪ್ಪ ಪಡಪ್ಪ ಇಬ್ಬರೂ ಮಹಾರಾಜರಿಗೆ ವಂದಿಸಿ, ಯಶವಂತರಾಯರಿಗೆ ಹೇಳಿ ಪಾದಳ್ಳಿಯ ದಾರಿಯನ್ನು ಹಿಡಿದರು. ಲಿಂಗಪ್ಪ ಶಂಕರೆಪ್ಪ ಇವರು ಸ್ವಲ್ಪಾದರೂ ಮಾತಾಡಿದ್ದರು. ಏನೂ ಮಾತಾಡದೆ ಹಾಗೆಯೇ ಹೋದ ವ್ಯಕ್ತಿಯೆಂದರೆ ಪಡದಪ್ಪನವರೊಬ್ಬರೇ.

ಅವರು ಹೋದ ಮೇಲೂ ವಾತಾವರಣ ಇನ್ನೂ ಜಡವಾಗಿಯೇ ಇತ್ತು. ಬೇಟೆಯ ಈ ಕಾರ್ಯಕ್ರಮ ನಿರೀಕ್ಷಿಸಿದಷ್ಟು ಉತ್ಸಾಹಕರವಾಗಿ ಪರಿಣಮಿಸಲಿಲ್ಲ. ಬೇಟೆಯಲ್ಲಿ ಮಹಾರಾಜರ ನಾಯಿ ಗುಂಡಿಗಾಹುತಿಯಾಗಿ ಅವರ ಮನಸ್ಸಿನಲ್ಲಿ ಕಳವಳವನ್ನುಂಟುಮಾಡಿತ್ತು. ಉತ್ಸಾಹದಿಂದ ಬಂದಿದ್ದ ಗಿಬ್ಸನ್ ಸಾಹೇಬರು ವ್ಯಥೆಗೊಂಡು ಉದಾಸೀನಾರಾಗಿಯೇ ಉಳಿದರು. ಆಕಸ್ಮಿಕವಾಗಿ ಬಂದ ಮಳೆ ಬಿಸಿಲನ್ನು ನುಂಗಿದಂತೆ ಉತ್ಸಾಹವನ್ನೂ ನುಂಗಿತ್ತು. ಗಾಳಿ ಬೀಸಿ

ಹುಲ್ಲಿನ ಛಾವಣಿ ಹಾರಿ ಹೋಗಿದ್ದರಿಂದ ಅಡಿಗೆ ತೆಡವಾಗಿ, ಯಶವಂತರಾಯರು ಆತಂಕಕ್ಕೊಳಗಾಗಿದ್ದರು. ಆದರೆ ಸಭ್ಯತೆಯ ನಿರ್ಬಂಧಗಳಿದ್ದದ್ದರಿಂದ ಯಾರೊಬ್ಬರೂ ಸಿಡಿಮಿಡಿಗೊಳ್ಳದೆ ಇದ್ದದ್ದರಲ್ಲಿಯೇ ಸಮಾಧಾನಗೊಂಡಿದ್ದರು.

ಮಳೆಮೋಡಗಳು ಇನ್ನೂ ಮಬ್ಬುಕವಿಸಿದ್ದಾಗಲೇ ಅನಿರೀಕ್ಷಿತವಾಗಿ ಈ ಅತಿಥಿಗಳ ಪ್ರವೇಶವಾಗಿತ್ತು. ಗತಜನ್ಮದ ಪಾಪದ ಅವಶೇಷವೊಂದು ತೀವ್ರ ವ್ಯಥೆಯಾಗಿ, ಅಕಾರಣವಾಗಿ ಮನಸ್ಸನ್ನು ಕಲಕುವಂತೆ, ಯಾರಿಗೂ ಬೇಡವಾದ ಅತಿಥಿಗಳು ಒಳಗೆ ಬಂದಿದ್ದರು. ಯಶವಂತರಾಯರು ಗೃಹಸ್ಥಧರ್ಮವನ್ನು ಪರಿಪಾಲಿಸಲೇಬೇಕಾಗಿತ್ತು. ಹುಟ್ಟಿದಾರಭ್ಯ ಕೂಡಿ ಬಂದ ಸೌಜನ್ಯ ಕಲಿಸಿದ ಪಾಠವಾಗಿತ್ತು ಅದು. ಅತಿಥಿಗಳಿಗೂ ಇಲ್ಲಿಯ ವಾತಾವರಣ ಹಿತಕರವಾಗಿರಲಿಲ್ಲ. ಮಹಾರಾಜರ ಸಾನ್ನಿಧ್ಯ ಭಯವನ್ನು ಹುಟ್ಟಿಸಿದ್ದರೆ, ಯಶವಂತರಾಯ ಹಾಗೂ ಡಾದಾ ಇವರ ಸಾನ್ನಿಧ್ಯ ಸಂಕೋಚ, ತಿರಸ್ಕಾರಗಳನ್ನು ಹುಟ್ಟಿಸಿತ್ತು. ಲಿಂಗಪ್ಪನಂತೂ ಅಶುಭದುಃಖದ ಭಾರವನ್ನೇ ಹೊತ್ತುಕೊಂಡು ಬಂದಿದ್ದ. ಯಶವಂತರಾಯರು ಅಜರಾಣಿಯ ಕುಶಲವನ್ನು ಕೇಳಿದಾಗ ಅವರಿಗೆ ಅಂಥ ಉತ್ತರ ದೊರೆತಿತ್ತು.

"ಇಂಥಾ ಚಂಡಾಲರ ಸೇವಾ ಮಾಡೂ ಹೊತ್ತು ಬಂತಲ್ಲ ಯಜ್ಜಾ!" ಎಂದು ಡಾದಾ ಹಲ್ಲು ಕಚ್ಚಿ ಗುರುಗುಟ್ಟಿದ. ಇಷ್ಟೊತ್ತಿನ ವರೆಗೆ ತಡೆದದ್ದೇ ಸಾಕಾಗಿತ್ತು. ಪಡದಯ್ಯನವರನ್ನು ನೋಡಿಯಂತೂ ಅವನ ರಕ್ತ ಕುದಿದಿತ್ತು. ಮಹಾರಾಜರ ಸಾನ್ನಿಧ್ಯ, ಯಶವಂತರಾಯರ ಸಂಸ್ಕೃತಿ ಇವುಗಳ ನಿರ್ಬಂಧದಿಂದ ಮಾತ್ರ ಅವನು ಸುಮ್ಮನೆ ಕುಳಿತಿದ್ದ. ಈಗ ಮಾತ್ರ ತಡೆಯಲಾರದೆ ಮಾತಾಡಿದ. "ಹಾಗಲ್ಲ ತಮ್ಮಾ, ಅವರು ಎಷ್ಟಂದರೂ ಸರಕಾರದ ಅತಿಥಿಗಳು. ಹಾಗೆಲ್ಲ ಮಾಡಬಾರದು." ಎಂದು ಯಶವಂತರಾಯರು ಸಮಾಧಾನ ಹೇಳಿದರು.

ಡಾದಾ ಸುಮ್ಮನೇನೋ ಕುಳಿತ. ಆದರೆ ಅಂತರಂಗದಲ್ಲಿ ಮಾತ್ರ ಸಿಟ್ಟು ಶೋಕಗಳು ತುಮುಲ-ವಿಪ್ಲವದಲ್ಲಿ ತೊಡಗಿದ್ದವು. ಪಡದಯ್ಯನ ನೆರಳು ಕೂಡ ಅವನಿಗಾಗುತ್ತಿರಲಿಲ್ಲ. ಅವನ ದರ್ಶನ ಕೋಪವನ್ನು ಪ್ರಜ್ವಲಿಸಿತ್ತು. ಅದರ ಜೊತೆಗೇ ಚಿಮಣಾಳ ನೆನಪು ಓಡಿಬಂದು ಅವನ ಕಾಲಲ್ಲಿ ಗಾಯಗೊಂಡು ನರಳುತ್ತಿತ್ತು. ಅವಳ ಅನಾಥ ಜೀವ ಅಣ್ಣನ ಆಶ್ರಯಕ್ಕಾಗಿ ಹಂಬಲಿಸುವಂತೆ ಭಾಸವಾಯಿತು. ತನ್ನ ಅಸಹಾಯತೆಗೆ ನಾಚಿಕೆಯೂ ಬಂದಿತು. ದುಃಖವನ್ನು

ತಡೆಯಲಾರದೆ ದಾದಾ ಕಣ್ಣೊರೆಸಿಕೊಂಡು ಇನ್ನೊಂದೆಡೆಗೆ ಹೊರಟುಹೋದ.

ಯಶವಂತರಾಯರೂ ಕಳವಳಕ್ಕೀಡಾಗಿದ್ದರು. ಸಭ್ಯತೆಯ ಕಟ್ಟಿಗೆ ಒಳಗಾಗಿ ಅವರು ಗೌರವಯುತವಾಗಿಯೇ ನಡೆದುಕೊಂಡಿದ್ದರು. ಆದರೆ ನಡೆದ ಪ್ರಸಂಗವೆಲ್ಲ ಅವರಿಗೂ ಅಪ್ರಿಯವಾಗಿಯೇ ಇತ್ತು. ಲಿಂಗಪ್ಪನ ತಂದೆ ಸತ್ತ ಸುದ್ದಿಯನ್ನು ಕೇಳಿದಾಗ ಅಪಶಕುನವಾದಂತೆ ಅವರು ಗಾಬರಿಗೊಂಡಿದ್ದರು. ಮಹಾರಾಜರಿಗೆ ತೃಪ್ತಿಯಾಗುವಂತೆ ವ್ಯವಸ್ಥೆಯನ್ನು ಮಾಡಲಾಗಲಿಲ್ಲವಲ್ಲ ಎಂಬ ವ್ಯಥೆ ಬೇರೆ ಅಂತರಂಗವನ್ನು ಕೊರೆಯುತ್ತಿತ್ತು. ವಿಷಣ್ಣರಾಗಿಯೇ ನಿಟ್ಟುಸಿರಿಟ್ಟರು.

ಮಹಾರಾಜರ ಉತ್ಸಾಹವೆಲ್ಲ ನಾಯಿ ಸತ್ತಾಗಲೇ ಅಡಗಿಹೋಗಿತ್ತು. ಗಿಬ್ಸನ್‌ಸಾಹೇಬರೆದುರು ಮನಸ್ಸಿಗಾದ ಸಂಕಟವನ್ನು ಪ್ರಕಟಿಸುವಂತಿರಲಿಲ್ಲ. ತಮ್ಮ ಪೂರ್ವಜರ ನಾಡನ್ನು ನೋಡಬಂದಾಗ ಅವರಿಗೆ ಕಂಡದ್ದೇನು? ಬಂಜೆ ನೆಲ, ವ್ಯರ್ಥವಾದ ಬೇಟೆ, ಆಕಸ್ಮಿಕವಾಗಿ ಬಂದ ಮಳೆ, ಗೊತ್ತಿಲ್ಲದ ಅತಿಥಿಗಳು,- ಇವೆಲ್ಲ ಮನಸ್ಸನ್ನು ಕಲಕಿದ್ದವು. ಒಮ್ಮೆ ಪಾದಳ್ಳಿಯನ್ನು ಮುಟ್ಟಿದರೆ ಸಾಕೆನಿಸಿತ್ತು.

ಹೊರಗೆ ಮಳೆ ನಿಂತಿದ್ದರೂ ಬೆಳಕಿರಲಿಲ್ಲ; ತಾಸಿನ ಹಿಂದೆ ರಭಸದಿಂದ ಬೀಸಿದ್ದ ಗಾಳಿ ಅದೃಶ್ಯವಾಗಿತ್ತು. ಇನ್ನೂ ಮಧ್ಯಾಹ್ನವಾಗಿದ್ದರೂ ಸಂಜೆಯ ಮಬ್ಬು ಎಲ್ಲೆಡೆಗೂ ಕವಿದಿತ್ತು. ಮಳೆಯ ಭಾರಕ್ಕೋ, ಕವಿದ ಮಬ್ಬಿಗೋ ಗಿಡಬಳ್ಳಿಗಳೆಲ್ಲ ಸೋತಂತೆ ಜೋತುಬಿದ್ದಿದ್ದವು. ಮಳೆ ಸುರಿದು ಸುರಿದು ಮೋಡಗಳು ಕೂಡ ನಿರ್ವಿಣ್ಣವಾಗಿದ್ದವು.

ಅಡಿಗೆಯ ಲಕ್ಷ್ಮಣ ಊಟಕ್ಕೆ ಎಬ್ಬಿಸಿದಾಗ ಯಾರಿಗೂ ಏಳಬೇಕೆಂಬ ಉತ್ಸಾಹವೇ ಇರಲಿಲ್ಲ. ಯಶವಂತರಾಯರೇ ಎಲ್ಲರನ್ನೂ ಎಚ್ಚರಿಸಬೇಕಾಯಿತು. ಅತಿಥಿಗಳನ್ನು ಸ್ವಾಗತಿಸಿದಂತೆಯೇ ಇದೂ ಮಾಡಲೇಬೇಕಾದ ಕರ್ತವ್ಯಗಳಲ್ಲಿ ಒಂದಾಗಿತ್ತು. ಯಾಂತ್ರಿಕವಾಗಿಯೇ ಎಲ್ಲರೂ ಮೇಲೆದ್ದರು.

:: ೩೩ ::

ಶೇಷಪ್ಪನಿಗೆ ಗಿಬ್ಸನ್‌ಸಾಹೇಬರ ಹೆಸರನ್ನು ನೆನೆದರೂ ಭಯದಿಂದ ನಡುಗುವಂತಾಯಿತು. ವೆಂಕಣ್ಣಮಾಸ್ತರನಿಂದ ಶ್ಯಾಮರಾಯನ ನೇಮಣೂಕಿ ಆಗದಂತೆ ಅರ್ಜಿಯನ್ನು ಬರೆಸಿದ ಗುಟ್ಟು ರಟ್ಟಾಗಿ ತಾನು ಬೀಸಿದ ಜಾಲದಲ್ಲಿ ತಾನೇ ಬಿದ್ದಂತಾಯಿತು. ವೆಂಕಣ್ಣಮಾಸ್ತರನ ವಿಚಾರಣೆಯಾದ ಕಾಲಕ್ಕೆ ಶೇಷಪ್ಪ ಅಲ್ಲಿರಲಿಲ್ಲ. ನಡೆದ ಸಂಗತಿಯನ್ನೆಲ್ಲ ಶಿರಸ್ತೇದಾರರಿಂದಲೇ ತಿಳಿದುಕೊಳ್ಳಬೇಕಾಯಿತು. ಮುಂದೇನಾಗಬಹುದೋ ಎಂಬ ಭಯ ಸೇರಿತು. ಗಿಬ್ಸನ್‌ಸಾಹೇಬರು ಏನೂ ನಿರ್ಣಯ ಹೇಳಿರಲಿಲ್ಲ. ಶಿರಸ್ತೇದಾರ ಜಕ್ಕಣ್ಣನೊಂದಿಗೆ ಆಪ್ತಾಲೋಚನೆ ನಡೆಸಿದ. ಜಕ್ಕಣ್ಣನಿಗೂ ಶೇಷಪ್ಪನ ಪಾದದಲ್ಲಿ ಹುರುಳಿಲ್ಲವೆಂದು ಗೊತ್ತಿತ್ತು. ಆದರೂ ಸರಬರಾಯಿಯ ಋಣ ಅವನ ಬಾಯಿ ಕಟ್ಟಿತು. "ಶ್ಯಾಮರಾಯನ ನೇಮಣೂಕಿ ಮುದ್ದತು ನಾಳಿನ ದಿವಸ ಅದ. ಸಾಧ್ಯ ಆದರೆ ಮುಂದ ಹಾಕಲಿಕ್ಕೆ ಬರತದೇನೋ ನೋಡೋಣ" ಎಂದು ಆಶ್ವಾಸನವಿತ್ತನು.

ಶೇಷಪ್ಪ ಮಾಮಲೇದಾರ ಕೃಷ್ಣರಾಯರಿಗೆ ಗಂಟುಬಿದ್ದ. ಪ್ರಾಂತಸಾಹೇಬ ಎಷ್ಟೆಂದರೂ ಹೊರಗಿನವ. ತಮ್ಮಿಬ್ಬರಿಗೂ ಬಿಡಲಾರದ ಸಂಬಂಧವಲ್ಲವೇ? "ಏನರಿ, ಆ ಹುಡುಗನಂಥಾ ಸಾಹೇಬ ತನ್ನ ಮನಸ್ಸಿಗೆ ಬಂದ್ಹಾಂಗ ಮಾಡಬೇಕs? ತನ್ನ ಸ್ಥಾನಕ್ಕ ತಕ್ಕಾಂಗ ನಡಕೋಬೇಕು. ಅದನ್ನೆಲ್ಲಾ ಬಿಟ್ಟು ಗೌಡರ ಮನೀತನಕಾ ಹೋಗಿ ಬರೋದಂದರೇನು? ಶಿರಸ್ತೇದಾರರಿಗೆ ಜವಾಬು ತಕೊಂಡು ಕಾಗದಪತ್ರಾ ತರಸಲಿಕ್ಕೆ ಹೇಳೋದು ಬಿಟ್ಟು ಎಲ್ಲಾ ತಾನs ಮಾಡೋದs?" ಎಂದು ಸಂಕಟ ತೋಡಿಕೊಂಡ.

ಮಾಮಲೇದಾರರಿಗೆ ಪ್ರಾಂತಸಾಹೇಬರ ನಿಂದೆಯಲ್ಲಿ ಆಸ್ಥೆ ಇರಲಿಲ್ಲ. "ಇಂಗ್ರೇಜಿ ಸಾಹೇಬ, ಅನನುಭವಿಕ ಹುಡುಗ. ಹೊಸದಾಗಿ ಅಧಿಕಾರ ತೊಗೊಂಡಾನ. ಅನುಭವಿಕ ದೇಶೀಸಾಹೇಬರ್‍ಹಾಂಗ ಅಧಿಕಾರ ನಡಸೋದು ಗೊತ್ತಿರಲಿಕ್ಕಿಲ್ಲ." ಎಂದು ಹೇಳಿ, "ಸಾಹೇಬ ವಾರಸಾ ರಜಿಸ್ಟರ ತಪಾಸು ಮಾಡಲಿದ್ದಾನೇನು

ಮತ್ತ? ದೇಶಪಾಂಡೇರ ವಾರಸಾಪ್ರಕರಣದಾಗ ನೀ ಮಾಡಿದ ರಾಡಿ ಅ ನ
ಕಣ್ಣಿಗೆ ಬಿದ್ದರ ತೀರಿಹೋತು" ಎಂದು ಎಚ್ಚರಿಕೆಯಿತ್ತರು.

ಶೇಷಪ್ಪನಿಗೆ ಗಾಯದ ಮೇಲೆ ಗಾಯಗಳಾದವು. ಎಂಥ ಅನನುಕೂಲ ಪರಿಸ್ಥಿತಿಯಲ್ಲಿಯೂ ದಾರಿ ಹುಟ್ಟಿಸುವ ಅವನಿಗೆ, ಈಗ ಎಲ್ಲ ದಾರಿಗಳು ಕಟ್ಟಾದವೆಂದೆನಿಸಿತು. ತನ್ನ ಜೊತೆಗೆ ಬಂದವರನ್ನೆಲ್ಲ ಸೂತ್ರದ ಗೊಂಬೆಗಳಂತೆ ಕುಣಿಸುವ ಅವನ ಬುದ್ಧಿಚಾತುರ್ಯಕ್ಕೆ ಈಗೇನೂ ಬೆಲೆಯಿರಲಿಲ್ಲ. ಅವನು ರಚಿಸಿದ ಪಾತ್ರಗಳೇ ಅವನ ವಿರುದ್ಧ ಬಂಡು ಹೂಡಿದ್ದವು. ಗೌಡಿತಿ, ವೆಂಕಣ್ಣಮಾಸ್ತರ ಇವರೆಲ್ಲ ತನ್ನ ವಿರುದ್ಧವಾಗಿ ಹೇಳಿಕೆ ಕೊಟ್ಟರು. ಶಿರಸ್ತೇದಾರರು, ಮಾಮಲೇದಾರರೆಲ್ಲ ಇವನ ವಿಷಯದಲ್ಲಿ ಏನೂ ಸಹಾಯ ಮಾಡಲಾರದವರಾಗಿದ್ದರು. ಇನ್ನುಮೇಲೆ ತನ್ನ ಕೈಯಲ್ಲಿ ದಪ್ತರ ಉಳಿಯಲಾರದು; ಶ್ಯಾಮರಾಯನಿಗೆ ಚಾರ್ಜ ವಹಿಸಿಕೊಡುವದು ಅನಿವಾರ್ಯವಾಗುವದೆಂಬುದನ್ನುನೆನೆದು ಶೇಷಪ್ಪನಿಗೆ ದುಃಖವಾಯಿತು. ಖಿನ್ನನಾಗಿಯೇ ಅಲ್ಲಿಂದ ಮನೆಗೆ ಹೊರಟ. ಸಣ್ಣಾಗಿ ಮಳೆ ಬೀಳುತ್ತಿತ್ತು. ಅವನಿಗೇನೂ ಅದರ ಲಕ್ಷ್ಯವಿರಲಿಲ್ಲ. ಯಾಂತ್ರಿಕವಾಗಿಯೇ ಮನೆ ಮುಟ್ಟಿದ. ದಪ್ತರದಲ್ಲಿ ತಾನು ಅರ್ಧಮರ್ಧ ಮಾಡಿಟ್ಟ ಕೆಲಸವನ್ನೆಲ್ಲ ಪೂರ್ತಿಯಾಗಿ ಮುಗಿಸಿಬಿಡಬೇಕೆಂದು ದಪ್ತರ ಬಿಚ್ಚಿದ.

ಕುಲಕರ್ಣಿಕಿ ದಪ್ತರ ಶ್ಯಾಮರಾಯನಿಗೆ ಹೋದರೂ, ಗೌಡಿಕಿಯ ದಪ್ತರ ತನಗೇ ಉಳಿಯುವದೆಂದು ಸಮಾಧಾನ ಹಚ್ಚಿಕೊಂಡು, ಗೌಡಿಕಿಯ ದಪ್ತರನ್ನು ಗಟ್ಟಿಯಾಗಿ ಕಟ್ಟಿಟ್ಟು, ಕುಲಕರ್ಣಿಕಿ ದಪ್ತರನ್ನು ಬಿಚ್ಚಿದ.

ಊಟದ ಹೊತ್ತಾಯಿತೆಂದು ಹೆಂಡತಿ ಬಂದು ಎಚ್ಚರಿಕೆ ಕೊಟ್ಟರೂ ಶೇಷಪ್ಪನ ಲಕ್ಷ್ಯ ಅತ್ತ ಹೋಗಲಿಲ್ಲ. ಅವನಿಗೆ ಜಗತ್ತಿನ ಲಕ್ಷ್ಯವೇ ಹಾರಿ ಹೋಗಿತ್ತು. ಸಂಪೂರ್ಣವಾಗಿ ತನ್ನ ದಪ್ತರದಲ್ಲಿಯೇ ಲೀನನಾಗಿದ್ದ. ಮೃತ್ಯು ಕಾಲ ಸನ್ನಿಹಿತವಾಗಿರಲು, ಮೃತ್ಯುಪತ್ರವನ್ನು ಬರೆದು ಮುಗಿಸುವ ನಿರ್ಧಾರದಿಂದಲೇ ಕುಳಿತವನಂತೆ ಅವನು ಬರೆಯುವದರಲ್ಲಿ ಮಗ್ನನಾಗಿದ್ದ. ದಪ್ತರ ಅವನ ಪಾಲಿಗೆ ಜನ್ಮಕ್ಕಂಟಿಕೊಂಡು ಬಂದ ಸಹಜವಾದ ಆಸ್ತಿಯಾಗಿತ್ತು; ಕರ್ಣನ ಕವಚ ಕುಂಡಲಗಳಂತೆ ಅವನ ಕ್ರಿಯಾಶಕ್ತಿಯ ಬಾಹ್ಯರೂಪವಾಗಿತ್ತು. ದಪ್ತರದ ಹಸ್ತಾಂತರ ಅವನ ದೃಷ್ಟಿಯಲ್ಲಿ ಪಾದಳ್ಳಿಗ್ರಾಮದ ಅಧಿಕಾರದ ಹಸ್ತಾಂತರದಷ್ಟೇ ಮಹತ್ವಪೂರ್ಣವಾಗಿತ್ತು; ಜೀವನವನ್ನು ಬಿಟ್ಟುಕೊಡುವಷ್ಟೇ ದುಃಖಪ್ರದವಾ

ಗಿತ್ತು. ಸಕಲಪ್ರಯತ್ನಗಳೂ ವಿಫಲವಾಗಿರುವಾಗ ಈ ದಪ್ತರನ್ನು ತ್ಯಜಿಸುವದು ಅನಿವಾರ್ಯವಾಗಿದ್ದಾಗ, ಹುತಾತ್ಮನೊಬ್ಬ ಆತ್ಮಾಹುತಿಯ ಅನುಭವ ಶೇಷಪ್ಪ ನಿಗೆ ಬರಹತ್ತಿತ್ತು. ದೃಢನಿರ್ಧಾರದಿಂದ ಆ ನೋವನ್ನು ಸಹಿಸಲೇಬೇಕಾಗಿತ್ತು.

ಶೇಷಪ್ಪನ ಮುಖ ಎಂದಿಲ್ಲದ ಗಂಭೀರತೆಯನ್ನು ತಳೆದಿತ್ತು. ರುದ್ರನಾಟಕ ವೊಂದರಲ್ಲಿಯ ಕೊನೆಗಳಿಗೆಯಂತೆ, ಕಾಲ ಅವನ ಪಾಲಿಗೆ ಅವಾಸ್ತವ ಮಹತ್ವ ದಿಂದ ಕೂಡಿತ್ತು. ಲೋಕದ ಪರಿವೆಯಿಲ್ಲದೆ ಒಂದೇಸವನೆ ಬರೆಯುತ್ತಿದ್ದ. ಬರೆದು ಮುಗಿಸಿ ಎದ್ದಾಗ ಮಳೆ ನಿಂತಿತ್ತು. ಸ್ನಾನದ ಶಾಸ್ತ್ರ ಮುಗಿಸಿ, ಊಟದ ಕಾಟ ತೀರಿಸಿ ಪಡಸಾಲೆಗೆ ಅದೇ ವಿಷಣ್ಣಸ್ಥಿತಿಯಲ್ಲಿ ಬಂದ. ಮನಸ್ಸು ದಣಿ ದಂತಾಗಿದ್ದುದರಿಂದ ಸ್ವಲ್ಪ ಅಡ್ಡಾಗಬೇಕೆನಿಸಿತು. ಅಷ್ಟರಲ್ಲಿಯೇ ಲಿಂಗಪ್ಪ ಪಡವಪ್ಪ ಇಬ್ಬರೂ ಒಳಗೆ ಬಂದು ಶರಣು ಮಾಡಿದ್ದನ್ನು ನೋಡಿ ಶೇಷಪ್ಪನಿಗೆ ಕಾಲಕೆಳಗಿನ ನೆಲ ಸರಿದುಹೋದಷ್ಟು ಆಶ್ಚರ್ಯವಾಯಿತು.

ಲಿಂಗಪ್ಪ ಇನ್ನು ಮೇಲೆ ಪಾದಳ್ಳಿಗೆ ಬರಲಿಕ್ಕಿಲ್ಲ; ಗೌಡಿಕಿ ದಪ್ತರ ತನಗುಳಿ ದಂತೆಯೇ ಎಂದು ಎಣಿಕೆ ಹಾಕಿ ಸಮಾಧಾನಗೊಂಡ ಶೇಷಪ್ಪನ ಮನಸ್ಸು ಇವ ರಿಬ್ಬರನ್ನೂ ನೋಡಿ ಮತ್ತೆ ತ್ರಸ್ತವಾಯಿತು. ವಿಧಿ ತನ್ನೊಬ್ಬನನ್ನೇ ಬೇಟೆಯಾಡು ತ್ತಿರಬೇಕೆಂದು ಅವನಿಗನಿಸಿತು. ಲಿಂಗಪ್ಪನ ದರ್ಶನದಿಂದುಂಟಾದ ಆಘಾತ ದಿಂದ ಅವನಿನ್ನೂ ಚೇತರಿಸಿಕೊಂಡಿರಲಿಲ್ಲವಾದ್ದರಿಂದ, ಬಂದವರಿಗೆ "ಯಾವಾಗ ಬಂದಿರಿ?" ಎಂದು ಕೇಳುವ ಸೌಜನ್ಯವೂ ಅವನಲ್ಲಿ ಉಳಿದಿರಲಿಲ್ಲ. ಸುಮ್ಮನೆ ಅವರನ್ನು ನೋಡುತ್ತ ನಿಂತುಬಿಟ್ಟ.

ಪಡದಪ್ಪನವರೇ ಮೌನವನ್ನು ಮುರಿಯಬೇಕಾಯಿತು. "ಕುಲಕರ್ಣ್ಯಾರ, ನನ್ನ ಸಾವಿರ ತಪ್ಪ ಆಗಿದ್ದರೂ ನೀವು ಹೊಟ್ಟ್ಯಾಗ ಹಕ್ಕೋಬೇಕು. ನೀವೂ ನಮ್ಮ ಹಿರ್‍ಯಾರಲ್ಲ? ನೀವದೀರೆಂತ ಲಿಂಗಪ್ಪನ್ನ ಕರಕೊಂಡ ಬಂದೀನು. ನೀವು ಬ್ಯಾಡಾ ಅಂದರ ಅಂವಾ ಇಂದs ಹೊಂಟ ಹೋಕ್ಕಾನು. ವಾರಸಾ ಅಪೀಲಿನ ಚೌಕಶಿ ನಾಳಿಗೆ ಇಟ್ಟಾರಂತ. ಈಗ ನಿಮ್ಮ ಅಪ್ಪಣಿ ಏನು ಕೇಳಲಾಕ ಬಂದೀವು" ಎಂದು ಗಂಭೀರವಾಗಿಯೇ ಹೇಳಿ ಕುಳಿತುಕೊಂಡರು. ಲಿಂಗಪ್ಪನ ಮೌನ ಪಡದಪ್ಪ ನವರ ಛಾಯಾನುವರ್ತಿಯಾಗಿತ್ತು.

ಅಷ್ಟರಲ್ಲಿಯೇ ಶೇಷಪ್ಪ ಚೇತರಿಸಿಕೊಂಡಿದ್ದ. "ನೋಡ್ರಿ ಸ್ವಾಮೇರ, ಅಪೀ ಲಿನ ಚೌಕಶಿ ನಡೆಸುವವ ಗಿಬ್ಸನ್‌ ಸಾಹೇಬ. ಅಂಥಾದರಾಗ ನಾ ಹೇಳಬೇಕಾ

ದದ್ದು ಏನ ಇರತದ? ಲಿಂಗಪ್ಪನವರ ವಾರಸಾ ಕಾಯಮು ಆದರ ಅವರು ಗೌಡ ರಾಗತಾರ. ಈ ಊರಾಗ ನಾ ಬ್ಯಾಡ ಅಂದವರೂ ಇರತಾರ. ಸುಮ್ಮನೆ ನನಗ್ಯಾಕ ದೊಡ್ಡಿಸ್ತನ ಕೊಟ್ಟು ಮಾತಾಡತೀರಿ?" ಎಂದು ಕೊಸರಿಕೊಳ್ಳುವವನಂತೆ ಮಾತಾಡಿದ.

ತಾನೂ ಸ್ವಲ್ಪ ಹೇಳಿಕೊಳ್ಳುವದು ಅಗತ್ಯವೆಂದೆನಿಸಿತೋ ಏನೋ, ಲಿಂಗಪ್ಪನೂ ತುಟಿ ಬಿಚ್ಚಿದ. "ಕುಲಕರ್ಣ್ಯಾರ, ವಾರಸಾ ಮಾಡಿಸಿದವರೂ ನೀವು; ನಾವು ಬ್ಯಾಡಾದಿವೆಂತ ಅಪೀಲು ಮಾಡಿಸಿದವರೂ ನೀವು. ಈಗ ಅಪೀಲ ಚೌಕಶಿ ನಡಸಂದರ ನಡಸತೀನು. ಬ್ಯಾಡಾ ಅಂದರ ಬಿಡತೀನು. ನಿಮ್ಮ ಅಂತಃಕರಣಕ್ಕ ಅನಿಸಿದ್ದನ್ನ ಹೇಳಿರಿ" ಎಂದು ಅಂಗಲಾಚಿದ.

"ನೋಡು ಲಿಂಗಪ್ಪ, ಸರಕಾರಿ ಕೆಲಸದಾಗ ನನ್ನ ಮಾತಿನಂತೆ ನಡಿಯೂದು ಯಾತರ ಸಲುವಾಗಿ? ಈಗ ಪಡಪ್ಪನವರು ನಿನ್ನ ಹಿಂದ ಇದ್ದಾರ. ಅವರಽ ಇಲ್ಲಿಗೆ ನಿನ್ನ ಕರಕೊಂಡು ಬಂದಾರ. ನಂಬೀರಿ ಅಂದ ಮ್ಯಾಲ ಅವರ ಮಾತು ಕೇಳೂದು ನಿನಗೇನು ಬಿಟ್ಟದ್ದಲ್ಲ. ಅವರು ಹೇಳಿದ್ಹಾಂಗ ನಡದಿ ಅಂತ ಅಪೀಲ ಮಾಡಬೇಕಾತು. ಈಗ ಅಪೀಲು ಗೆದ್ದರ ನೀ ಗೆದ್ದಿ, ನಾ ಬಿದ್ದೆ. ನನ್ನ ಮಾತು ಕೇಳೂದೇನು ಕಾರಣ ಇಲ್ಲ. ನನಗ ಇದರಾಗ ಹೇಳಲಿಕ್ಕೆ ತಿಳಿಯೂದುಲ್ಲ." ಶೇಷಪ್ಪ ಇನ್ನೂ ಅದೇ ತಂತಿಯನ್ನೇ ಹಿಡಿದ.

ಆದರೆ ಪಡದಪ್ಪನವರ ಹಿಡಿತ ಉಡದ ಹಿಡಿತ. ಶೇಷಪ್ಪನನ್ನು ಮರುಳು ಮಾಡುವ ಗಾರುಡೀವಿದ್ಯೆ ಅವರಿಗೇ ಅವಗತವಾಗಿತ್ತು. "ಕುಲಕರ್ಣ್ಯಾರ, ನಿಮ್ಮ ಕೈಯಾಗ ದಪ್ತರ ಐತಿ. ಮನಸ ಮಾಡಿದರ ಲಿಂಗಪ್ಪನ್ನ ಹಾರಿಸಿ ಒಗೀತೀರಿ. ಇಲ್ಲಾಂದರ ಊರ ಧೊರೀನ್ನೂ ಮಾಡತೀರಿ. ಧೊರಿತನಾ ಕೊಡಸತೀನಿ ಅಂದರ ಅಂವಾ ಈ ಊರಿಗೆ ಬಂದು ಬಾಳೇ ಮಾಡಬಹುದು. ಇಲ್ಲಾಂದರ ನನ್ನ ಹಾಗ ಊರ ಬಿಟ್ಟು ಗಾಳಿಗರಾ ಆಗಿ ಹೋಗಬೇಕಾದೀತು. ನಿಮ್ಮ ಹಿಂದ ನಾಲ್ಕು ಜನಾ ಐತಿ. ಅವಾ ನಿಮಗ ಬೇಕಾದಾವ ಆದರ, ಅಂವಗ ನಾಕು ಮಂದಿ ಬೇಕಾಗತಾರ. ನೀವಽ ಉದ್ಯಾಗ ಹೆಕ್ಕೋಳದಿದ್ದರ ಮತ್ತೇನ ಮಾಡೂದೈತಿ. ಹುಟ್ಟಿದ ಮನಿ ಬಿಟ್ಟದ್ದಲ್ಲ. ಅಜರಾಣಿಗೆ ಹೋಗಿ ಕುರಿಹಿಂಡ ಕಾಯಕೊಂತ ತಿರಗತಾನ ತೀರಿತು" ಎಂದು ಒಂದು ಕತೆಯನ್ನೇ ಕಟ್ಟಿ, ಹೇಳಿ, ದೊಡ್ಡದಾಗಿ ನಿಟ್ಟುಸಿರು ಬಿಟ್ಟರು.

ಈ ಮಾತುಗಳನ್ನು ಕೇಳಿದ ಶೇಷಪ್ಪನ ಮನಸ್ಸಿಗೆ ಮತ್ತೊಮ್ಮೆ ಮರ್ಮಾ
ಘಾತವಾಯಿತು. ಅವನ ಗಾಯಗೊಂಡ ಮನಸ್ಸು ಪಡಪಯ್ಯನವರ ಮಾತಿನಲ್ಲಿ
ಲಿಂಗಪ್ಪನ ಕರುಣಚಿತ್ರವನ್ನು ಕಾಣಲಿಲ್ಲ. ತನ್ನ ಅವನತಿಯ ಇತಿಹಾಸವನ್ನೇ
ಅವರು ಹೇಳುತ್ತಿರುವರೆಂದೆನಿಸಿತು. ಕುಲಕರ್ಣಿಕಿ ದಪ್ತರ ನಾಳೆ ಕೈಬಿಟ್ಟರೆ
ನಾಲ್ಕುಜನ ತನ್ನ ಬೆನ್ನಿಗುಳಿಯುವದಿಲ್ಲವೆಂಬ ಕಟುಸತ್ಯ ಕಣ್ಣೆದುರು ಕಟ್ಟಿ
ದಂತಾಯಿತು. ಅಂಥ ಪ್ರಸಂಗದಲ್ಲಿ ಲಿಂಗಪ್ಪ ತನ್ನಿಂದ ಉಪಕೃತನಾದವನಾಗಿದ್ದರೆ,
ತನ್ನ ಹಿಂದೆ ಇರುವ ನಾಲ್ಕುಜನರಾದರೂ ತನ್ನ ಮಾತು ಕೇಳಬಹುದೆಂಬ
ವಿಚಾರ ಅವನಲ್ಲಿ ಸುಳಿಯಿತು. ಸರ್ವನಾಶ ಸನ್ನಿಹಿತವಾಗಿದ್ದರೂ ಶೇಷಪ್ಪನ
ಸ್ವಭಾವದ ಸಂಪೂರ್ಣವಾಗಿ ಒಡೆದುಹೋಗಿರಲಿಲ್ಲ. ಯಾವ ಪ್ರಸಂಗ ತನ್ನ
ಸ್ವಾರ್ಥವನ್ನು ದೂಷಿಸೀತೋ ಹೇಳಬಲ್ಲವರಾರು? ಸ್ವಾರ್ಥಸಾಧಕನಾದವನು,
ತನ್ನ ಜೀವನದ ತಳಹದಿ ಭದ್ರವಾಗಿರಬೇಕೆಂದು ಬಯಸುವವನು ಅಜಾತಶತ್ರು
ವಾಗಿರಬೇಕು.

ಶೇಷಪ್ಪನ ಮಾತಿನ ಧಾಟಿ ಒಮ್ಮೆಲೆ ಬದಲಾಯಿತು. “ಲಿಂಗಪ್ಪ ನಮ್ಮ
ಮಾತು ಕೇಳಿಕೊಂಡಿರಾಪಾ ಅಂತ. ನಾನು ವಾರಸಾ-ಪ್ರಕರಣದಾಗ ಕೈಹಾಕಿದೆ;
ನ್ಯಾಯ ಮಾಡಿದೆ. ನನಗೇ ತಿರುಗಿ ಬಿದ್ದು ಸರಿಪಾಲು ಕೇಳಿದ. ಬುದ್ಧಿ ಕಲಿಸ
ಬೇಕಂತ ಅಪೀಲು ಮಾಡಬೇಕಾತು. ಈಗ ಬಾಣ ಕೈಮೀರಿ ಹೋಗೇದ” ಎಂದು
ಹೇಳಿ ಲಿಂಗಪ್ಪನ ಮುಖ ನೋಡಿದ.

“ಕುಲಕರ್ಣ್ಯಾರ, ನಿಮ್ಮ ಆಶೀರ್ವಾದ ಒಂದಿರಲಿ. ಮತ್ತ ನಿಮ್ಮ ಮನಸ್ಸಿ
ಗ್ಗಿನ್ನರ ನಿಮ್ಮ ಬಾಣ ನಿಮ್ಮ ಬತ್ತಳಿಕ್ಯಾಗ ಬಂದು ಸೇರೂದು ಏಟೊತ್ತಿನ
ಮಾತರಿ? ಇದು ಅಲ್ಲಾ ಅಂದರ ನನ್ನ ಹೆಸರ ಕರೀಬ್ಯಾಡ್ರಿ” ಎಂದು ಪಡಪ್ಪ
ನವರು ಸೂಚ್ಯವಾಗಿ ನುಡಿದು ಮಾಡಬೇಕಾದ ಕೆಲಸವೇನೆಂಬುದನ್ನು ಅರಿಕೆ
ಮಾಡಿಕೊಟ್ಟರು.

ಶೇಷಪ್ಪ ಪಡಪ್ಪರಿಬ್ಬರೂ ಒಳಗಿನ ಕೋಣೆಯಲ್ಲಿ ಕುಳಿತು ಏನೇನೋ
ಸಮಾಲೋಚನೆ ನಡೆಸಿದರು. ತಿರುಗಿ ಕೋಣೆಯಿಂದ ಹೊರಬಿದ್ದಾಗ ಪಡಪ್ಪ
ನವರ ಮುಖ ಹರ್ಷದಿಂದ ಅರಳಿತ್ತು. “ಲಿಂಗಪ್ಪಗೌಡರ, ಏಳ್ರಿನ್ನ. ಮುಂದಿನ
ವಿಚಾರ ಮಾಡೂದು ಬಾಳ ಐತಿ” ಎಂದು ಹೇಳಿ ಲಿಂಗಪ್ಪನನ್ನು ಎಬ್ಬಿಸಿದರು.
ಲಿಂಗಪ್ಪನಿಗೆ ಏನಾಯಿತೆಂದು ತಿಳಿಯುವ ಕುತೂಹಲ. ಆದರೆ ಏನೂ ಮಾತಾಡು

ವಂತಿರಲಿಲ್ಲ. ಆದದ್ದಾಗಲೆಂದು ಪಡದಪ್ಪನವರ ಅಡಿಯನ್ನನುಸರಿಸಿದ. ಶೇಷಪ್ಪ ನಿಗೆ ವಂದನೆ ಸಲ್ಲಿಸಿ ಇಬ್ಬರೂ ಅಲ್ಲಿಂದ ಹೊರಬಿದ್ದವರು ನೇರವಾಗಿ ಹಿರೇ ಮಠಕ್ಕೇ ಬಂದರು.

ಪಡದಪ್ಪ ಹಾಗೂ ಲಿಂಗಪ್ಪ ಇವರಿಬ್ಬರೂ ಊರಿಗೆ ಬಂದ ಸುದ್ದಿ ರಹಸ್ಯ ವಾಗಿರಲಿಲ್ಲ. ಅವರು ಅಗಸೆಯಲ್ಲಿ ಕಾಲಿಟ್ಟಾಗಲೇ ಯಾರೋ ಆ ಸುದ್ದಿಯನ್ನು ಗೌಡಿತಿ ಪಾರ್ವತೆವ್ವನಿಗೆ ಮುಟ್ಟಿಸಿದ್ದರು. ಅಪೀಲು ನಡೆಸಲು ಲಿಂಗಪ್ಪ ಬಂದ ನೆಂದು ಅವಳಿಗೆ ಚಿಂತೆಯುಂಟಾಯಿತು. ಇತ್ತೀಚೆಗೆ ಪ್ರತಿ ನಿಮಿಷವೂ ಅವಳಿಗೆ ಭಯವನ್ನುಂಟುಮಾಡುತ್ತಿತ್ತು. ಸೋಲು ಒಂದರ ಹಿಂದೊಂದು ಸಾಲುಗಟ್ಟಿ ಬಂದಾಗ ಅವಳ ಹೆಣ್ಣೆದೆ ಗಾಬರಿಗೊಂಡಿತ್ತು. ಶೇಷಪ್ಪನಿಗೆ ಕರೆಕಳಿಸಿದಳು. ಆದರೆ ಅವನು ತಾನು ಭಾರಿ ಕೆಲಸದಲ್ಲಿ ತೊಡಗಿರುವದಾಗಿ ಹೇಳಿಕಳಿಸಿದ. ಪಾರ್ವತೆವ್ವನ ಚಿಂತೆ ಒಂದಕ್ಕೆ ಹತ್ತಾಗಿ ಬೆಳೆಯಿತು. ಅವಳ ಒದ್ದಾಟವನ್ನು ನೋಡಲಾರದೆ ಸ್ವತಃ ಜಿನ್ನಪ್ಪ ಹೋಗಿ ಶೇಷಪ್ಪನನ್ನು ಕರೆದುಕೊಂಡು ಬರಬೇ-ಕಾಯಿತು. ಶೇಷಪ್ಪ ಗೊಣಗುತ್ತಲೇ ಬಂದ.

"ಲಿಂಗಪ್ಪ ಬಂದಾನಂತಲ್ಲರೀ ?" ಎಂದು ಪಾರ್ವತೆವ್ವ ಉದ್ವಿಗ್ನಳಾಗಿಯೇ ಕೇಳಿದಳು.

"ಬರದೇ ಬಿಡತಾನೇನು ಅಂವಾ ? ಬಾಳಾಚಾರಿ ಅವನ ಜೋಡಿ ಕೂಡಿ ಕೊಂಡು ಒಳಸಂಚು ಮಾಡ್ಯಾನ ಅಂತ ಹೇಳಿದರ ನೀವು ನಂಬಲಿಲ್ಲ. ನೋಡಿ ದಿರೋ ಇಲ್ಲೋ? ಲಿಂಗಪ್ಪ ಮೊದಲಿಗೆ ಜಾಗೀರದಾರರ ತ್ವಾಟಕ್ಕ ಹೋಗಿ ಯಶ ವಂತರಾಯರ ಜೋಡಿ ಮಾತಾಡಿಕೊಂಡು ಇಲ್ಲಿ ಬಂದಾನಂತ. ನೀವು ನನ್ನ ಕುತಗೀ ಕೊಯ್ಯೊ ಹಂಗ ನಿನ್ನೆ ನನ್ನ ವಿರುದ್ಧ ಜವಾಬು ಕೊಟ್ಟರಿ. ನನಗೂ ಈ ಹಾಳ ಉಸಾಬರಿ ಸಾಕಾಗಿ ಹೋಗೇದ. ನೀವೇನೋ ನಿಮ್ಮ ಅಪೀಲೇನೋ, ನನಗ ಒಂದೂ ಬ್ಯಾಡಾಗೇದ !" ಎಂದು ಒದರಾಡಿ ತನಗೇನೂ ಸಂಬಂಧವಿಲ್ಲವೆನ್ನುವಂತೆ ನಾಟಕ ಹೂಡಿದ.

ಪಾರ್ವತೆವ್ವ ಕಣ್ಣೀರು ತಂದಳು. ತನಗೇನೂ ಗೊತ್ತಿರಲಿಲ್ಲ. ಶೇಷಪ್ಪನೇ ಬಂದು ತಿಳಿಸಿಕೊಟ್ಟದ್ದರೆ ಅವನಂತೆಯೇ ಹೇಳಬಹುದಾಗಿತ್ತು, ಎಂದು ಅವಳ ವಾದ. "ಸಾಹೇಬ ಮನೀ ಮಟಾ ಬಂದು ಜವಾಬು ಕೇಳಿದಾ. ಗಾಬರಿ ಆಗಿ ಖರೇವು ಗೊತ್ತಿದ್ದಷ್ಟು ಹೇಳಿಬಿಡೋವಾಗ ಬೆವರು ಬಿಟ್ಟಿತು" ಎಂದು ತಪ್ಪನ್ನೊಪ್ಪಿ

ಕೊಂಡಳು.

"ನಿಮಗ ಜೀವರು ಬಿಟ್ಟೆತು, ನಮಗ ಕಣ್ಣೀರು ಕಪಾಳಕ್ಕ ಬಂದವು. ಈಗ ನಾಯೇನೂ ಮಾಡೋಹಾಂಗಿಲ್ಲ. ನನ್ನ ಕೈಮೀರಿ ಹೋಗೇದ" ಎಂದು ಆಕ್ರೋಶ ಮಾಡಿದರೂ. ಕೊನೆಗೆ ಒಂದು ಉಪಾಯ ಹೇಳಿದ: "ಸಾಹೇಬ ಬೆಳ ಗಾವಿಯೊಳಗ ಇದ್ದಾಗ ಮುದ್ದತ ಇಡಸಲಿಕ್ಕೆ ಶಿರಸ್ತೇದಾರರಿಗೆ ಹೇಳಿಕೊಟ್ಟೇನಿ. ನಾಗತದೋ ಆಗಲಿ. ಮಹಾರಾಜರ ಗಡಿಬಿಡಿಯೊಳಗ ಸಾಹೇಬರ ಸರಬರಾಯಿ ವ್ಯವಸ್ಥಾ ನೆಟ್ಟಗಾಗಲಿಲ್ಲ ಅಂತ ಅವರು ಗುರುಗುಟ್ಟತಾರ" ಎಂದು ತನ್ನ ಸಂಕಟ ವನ್ನೂ ತೋಡಿಕೊಂಡ.

ಪಾರ್ವತೆವ್ವ "ಖಟ್ಲೆ ಚೌಕಶಿಗೆ ಇಟ್ಟರ ಚಂದಾಗಿ ವಕೀಲರನ್ನ ಕೊಟ್ಟು ಇಡಸಲಾಕ ಬರತೈತಿ. ಮುದ್ದತ ಹಾಕಿಸಿ ಕೊಡಿರಿ. ಸರಬರಾಯಿ ಚಿಂತಿ ನೀವು ಮಾಡೂದು ಬ್ಯಾಡ" ಎಂದು ಆಶ್ವಾಸನವನ್ನಿತ್ತಳು.

ಶೇಷಪ್ಪ ಮುದ್ದತ ಹಾಕಿಸುವದಾಗಿ ಹೇಳಿ, ಸರಬರಾಯಿಯ ಲೆಕ್ಕವನ್ನು ಪಾರ್ವತೆವ್ವ ತೀರಿಸುವಂತೆ ಅವಳಿಂದ ಭರವಸೆಯನ್ನು ಪಡೆದು ಅಲ್ಲಿಂದ ಹೊರಬಿದ್ದ. ಹೊರಗೆ ಆಗಲೇ ಕತ್ತಲಾಗಿತ್ತು. ಹೊಸ ತಂತ್ರದ ಸೂತ್ರವೊಂದು ಕೈಗೆ ಸಿಕ್ಕಂ ತಾಗಿ ಅವನಿಗೆ ಸಮಾಧಾನವಾಗಿತ್ತು. ತನ್ನಿಂದ ಇನ್ನೂ ಕೆಲಸವಾಗಬೇಕೆಂದು ದೈವಸಂಕಲ್ಪವಿರಬೇಕು. ಇಲ್ಲದಿದ್ದರೆ ಎಲ್ಲವನ್ನೂ ಕಳೆದುಕೊಂಡು ನಿರಾಧಾರ ನಾಗಿ ಬಟ್ಟಬಯಲಿನಲ್ಲಿ ನಿಂತಿರುವಾಗ ಹೇಳಿಕಳಿಸಿದವರಂತೆ ಲಿಂಗಪ್ಪ ಪಡದಪ್ಪ ನವರಿಬ್ಬರೂ ಬಂದಿದ್ದೇಕೆ? ಶೇಷಪ್ಪನಿಗೆ ಮತ್ತೆ ಆತ್ಮವಿಶ್ವಾಸ ಚಿಗುರಿದಂತಾ ಯಿತು. ಕಾಲಿಗೆ ಹೊಸ ಚೈತನ್ಯ ಬಂದಂತಾಯಿತು. ದೇವರು ಕೊಟ್ಟ ಈ ಸಂಧಿ ಯನ್ನು ಉಪಯೋಗಿಸಿಕೊಂಡರೆ ತನ್ನ ಅಧಿಕಾರ ಪುನಃ ಸ್ಥಾಪಿತವಾದರೂ ಆಗ ಬಹುದೆಂದೆನಿಸಿ ಉತ್ಸಾಹದಿಂದ ಹೆಜ್ಜೆಹಾಕಿದ.

ಶೇಷಪ್ಪ ಚಾವಡಿಯ ಹತ್ತಿರ ಬಂದಾಗ, ವಾಡೆಯ ಕಡೆಗೆ ಗುಂಪಾಗಿ ಜನರು ಓಡಿ ಹೋಗುತ್ತಿರುವದನ್ನು ಕಂಡು ಕುತೂಹಲದಿಂದ ಏನಾಗಿದೆಯೋ ನೋಡಬೇಕೆಂದು ಅಲ್ಲಿಯೇ ಕ್ಷಣಹೊತ್ತು ನಿಂತ. ಸ್ವಲ್ಪಹೊತ್ತಾದ ಮೇಲೆ ವಾಡೆಯ ಕಡೆಯಿಂದ ದಾದಾ ಪಡದಪ್ಪನನ್ನು ಹೊತ್ತುಕೊಂಡು ಚಾವಡಿಯ ಕಡೆಗೆ ಬರುತ್ತಿರುವದು ಕಂಡಿತು. ಈ ದೃಶ್ಯ ಶೇಷಪ್ಪನಲ್ಲಿ ಆಶ್ಚರ್ಯ ಭಯಗಳೆ ರಡನ್ನೂ ಕೆರಳಿಸಿತು. ದಾದಾ ನೆಟ್ಟಗೆ ಚಾವಡಿಯ ಮುಂದಿನ ಚೌಕಿನಲ್ಲಿ

ಹಾಯ್ದು ಮಸೀದೆಯ ಪಾವಟಿಗೆಗಳನ್ನೇರಿ ಪಡದಪ್ಪನವರನ್ನು ಅಲ್ಲಿ ಸ್ಥಾಪಿ
ಕಟ್ಟೆಯನ್ನಿಳಿದು ಬಂದ. ಪಾಡಿಯ ಕಡೆಗೆ ಜನ ಹೀಗೆ ಓಡಿ ಹೋದದ್ದು
ದಾದಾನ ಈ ವಿಲಕ್ಷಣ ಸಾಹಸ ಇವುಗಳ ಅರ್ಥವನ್ನು ಶೇಷಪ್ಪ ದೂ
ದಿಂದಲೇ ಕಂಡು ಊಹಿಸಿದ. ಪಡದಪ್ಪನವರು ಮಠಕ್ಕೆ ಹೋಗಿರಬೇಕು; ಜನರು
ಸಿಟ್ಟಿಗೆದ್ದು ಅವರನ್ನು ಮಠದಿಂದ ಹೊರದೂಡಿ ಗುರುಲಿಂಗಯ್ಯನವರಿಗೆ ಸೇರಿದ
ಮಠ ಅವರ ವಶದಲ್ಲಿಯೇ ಉಳಿಯಲೆಂದು ಹೂಡಿದ ತಂತ್ರದ ಪರಿಣಾಮವಿರ
ಬೇಕೆಂದು ಅವನಿಗೆ ಗೊತ್ತಾಯಿತು. ಮಸೀದೆಗೆ ಹೋಗಿ ಪಡದಪ್ಪನವರನ್ನು
ತನ್ನ ಮನೆಗೆ ಕರೆದುಕೊಂಡು ಹೋಗಬೇಕೆಂಬ ವಿಚಾರ ಬಂತು. ಆದರೆ ಹಾಗೆ
ಮಾಡಲು ಅವಕಾಶವೇ ದೊರೆಯಲಿಲ್ಲ. ಮಾಮಲೇದಾರರ ಪಟ್ಟೇವಾಲಾ
ಉಸ್ಮಾನ ಬಂದು ಸಲಾಂ ಮಾಡಿ ಸಾಹೇಬರು ಕರೆಯುತ್ತಿದ್ದಾರೆಂದು ಅರಿಕೆ
ಮಾಡಿಕೊಂಡ. ಶೇಷಪ್ಪ ತನ್ನ ಕಾರ್ಯಕ್ರಮವನ್ನು ಬದಲಿಸಿ ಸಾಲೆಯನ್ನು
ಪ್ರವೇಶಿಸಿದ.

ಊರಲ್ಲಿ ಇಷ್ಟೊಂದು ಪೋಲೀಸರು, ಅಮಲ್ದಾರರು, ಅದೂ ಅಲ್ಲದೆ ಮಠದ
ಸಮೀಪದ ವಾಡೆಯಲ್ಲಿಯೇ ಮಹಾರಾಜರ ಕ್ಯಾಂಪು ಹಾಕಿರುವಾಗ ದಾದಾ
ಪಡದಪ್ಪನವರನ್ನು ಹೊತ್ತು ತಂದು ಮಸೀದೆಯಲ್ಲಿ ಇಳಿಸಿದನಲ್ಲ,– ಪುಂಡತನಕ್ಕೆ
ಇದನ್ನು ಬಿಟ್ಟರೆ ಮತ್ತಾವ ಸಾಕ್ಷಿ ದೊರಕೀತು? ಈ ಸಂಗತಿಯನ್ನು ಮಾಮಲೇ
ದಾರರಿಗೆ ಹೇಳಿ ಹೊಸ ಪ್ರಕರಣವೊಂದನ್ನು ಸೃಷ್ಟಿಸಬಹುದೆಂದು ಶೇಷಪ್ಪನಿಗೆ
ಹರ್ಷವೆನಿಸಿತ್ತು. ಅದೇ ಉನ್ಮಾದದಲ್ಲಿಯೇ ಒಳಗೆ ಕಾಲಿಟ್ಟ. ಮಾಮಲೇದಾರರು
ಏನೋ ಕೆಲಸವಲ್ಲಿದ್ದವರು ಮುಖವೆತ್ತಿ ನೋಡಿದರು, ಎದುರಿಗೆ ಶೇಷಪ್ಪ! ಅವರ
ಮುಖ ಒಮ್ಮೆಲೆ ಗಂಭೀರವಾಯಿತು; ಹುಬ್ಬು ಸಂಕುಚಿತವಾದವು; ಕಣ್ಣಿಕೊನೆ
ಕೆಂಪಾದವು. ವಾಡಿಕೆಯಂತೆ ಮೀಸೆಯ ತುದಿಗಳು ಕುಣಿಯತೊಡಗಿದವು.

ಅಧಿಕಾರಿಗಳ ಇಂಥ ಮುಖಗಳನ್ನು ಓದಿ ಅರ್ಥಮಾಡಿಕೊಳ್ಳುವದರಲ್ಲಿ
ಶೇಷಪ್ಪ ನಿಷ್ಣಾತನಾಗಿದ್ದ. ಮುಂದೇನೋ ಅನಾಹುತ ಕಾದಿದೆಯೆಂದು ಗೊತ್ತಾ
ಯಿತು. ಅದಕ್ಕೆ ತಕ್ಕಂತೆ ಜೋಲುಮೋರೆ ಹಾಕಿದ; ಕೈ ಒಂದನ್ನೊಂದು
ಹೊಸೆಯಹತ್ತಿದವು. ದೇಶಾವರಿ ನಗೆ ಹೇಳಿಕಳಿಸಿದಂತೆ ತುಟಿಗಳ ಅಂಚಿನಲ್ಲಿ
ಮಿನುಗಹತ್ತಿತು. ಯಾವ ಉಪಾಯದಿಂದ ಸಾಹೇಬರ ಮುಖದ ಉರಿಯನ್ನು
ಶಾಂತಗೊಳಿಸಬೇಕೆಂಬ ಎಣಿಕೆಯಲ್ಲಿಯೇ ಮಗ್ನನಾಗಿ ಶೇಷಪ್ಪ ಅವರ ಅಪ್ಪಣೆ

ಗಾಗಿ ಕಾದು ನಿಂತ.

ಮಾಮಲೇದಾರ ಕೃಷ್ಣರಾಯರು ಅವನೆಡೆಗೆ ಒಂದು ಬಿರುನೋಟವನ್ನು ಬೀರಿದರು. ಮೇಜಿನ ಮೇಲಿದ್ದ ಒಂದು ಹಾಳೆಯನ್ನು ಮುಂದೆ ಸರಿಸುತ್ತ, "ಶೇಷಪ್ಪ, ನಿನ್ನ ಕೆಲಸದಿಂದ ಸಸ್ಪೆಂಡ ಮಾಡೋದ ಅಂತ ಪ್ರಾಂತಸಾಹೇಬರು ಆ:ರ್ಡರ ಮಾಡ್ಯಾರ. ತಗಾಂವಿ ಸಾಲ ಊರ ಜನರಿಗೆ ಸರಿಯಾಗಿ ಮುಟ್ಟಿಸಿಲ್ಲ, ಮತ್ತ ಬರಗಾಲಪರಿಹಾರಕ್ಕಂತ ಅರ್ಜಿ ಬರಿಸಿ, ಊರ ಜನರಿಂದ ಅವರ ಮ್ಯಾಲಿ ಸಹಿ ತೊಗೊಂಡು, ಆ ಅರ್ಜೀ ಒಳಗ ಶ್ಯಾಮರಾಯನ ನೇಮಣೂಕಿ ಆಗಬಾರದೂ ಅಂತ ಬರಸೀದಿ ಅಂತ ನಿನ್ನ ಮ್ಯಾಲೆ ಆರೋಪ ಅದ. ಖಟ್ಲೆ ಹಾಕಬೇಕೂ ಅಂತ ಆ:ರ್ಡರ ಮಾಡ್ಯಾರ. ದಪ್ತರ ತರಿಸಿ ಈಗಿಂದೀಗ ಶ್ಯಾಮರಾಯಗ ಚಾರ್ಜ ಕೊಡಿಸಬೇಕೂ ಅಂತ ನಮಗ ತಿಳಿಸ್ಯಾರ. ಅದಕ ಈಗಽ ದಪ್ತರ ತರಿಸಬೇಕಾಗೇದ" ಎಂದು ಬಿರುಸಿನ ದನಿಯಲ್ಲಿ ಶೇಷಪ್ಪನ ಹೃದಯಭೇದವಾಗುವಂತೆ ನುಡಿದರು.

ಶೇಷಪ್ಪ ಈ ಮಾತುಗಳನ್ನೆಲ್ಲ ಶಾಪವಾಕ್ಯಗಳನ್ನು ಕೇಳಿಕೊಳ್ಳುವಂತೆ ಕೇಳಿಕೊಂಡ. ಸ್ವಲ್ಪ ಹೊತ್ತು ಅವನು ಕಲ್ಲಾಗಿದ್ದ. ಆ ಹೊತ್ತಿಗೆ ತನ್ನ ಆಯುಷ್ಯವೇ ಕೊನೆಯಾಯಿತೆಂದು ಕಂಡಿತು. ಮಾಮಲೇದಾರರು ಸರ್ಪಾಸ್ತ್ರದಂತಿರುವ ಮಾತುಗಳನ್ನಾಡಿ ಅವನ ಪ್ರಾಣವನ್ನೇ ಹೀರಿದ್ದರು. ಇನ್ನೊಂದು ಮಾತು ಕೇಳಲೂ ಕೂಡ ಅವಕಾಶವಿರಲಿಲ್ಲ. ಆದರೆ ಶಾಪಕ್ಕೊಂದು ಉಶ್ಯಾಪವಿರಬೇಕಲ್ಲವೇ?

"ಸಾಹೇಬರ, ಇದೊಂದು ಸಾರೆ ನನ್ನ ಉಳಿಸಿಕೊಳ್ಳಿರಿ" ಎಂದು ಅಂಗಲಾಚಿ ದೈನ್ಯವೇ ಮೂರ್ತಿಯಾದಂತೆ ಶೇಷಪ್ಪ ಕೇಳಿದ.

ಮಾಮಲೇದಾರರು ಕರಗುವಂತಿರಲಿಲ್ಲ. "ಇದು ನನ್ನ ಆ:ರ್ಡರಲ್ಲ ತಿಳೀತಿಲ್ಲೊ? ಪ್ರಾಂತಸಾಹೇಬ ಮಾಡ್ಯಾನ. ಹೋಗಿ ಬೇಕಾರ ಅವಗಽ ಹೇಳಿಕೋ. ನನ್ನ ಕೆಲಸೆಷ್ಟು ಅಷ್ಟು ನಾ ಮಾಡತೇನಿ. ಈಗಿಂದೀಗಽ ದಪ್ತರ ಬರಬೇಕಿಲ್ಲಿ." ಎಂದು ಗುಡುಗಿದರು. ನಿನ್ನಿನ ಅವರ ಸೌಜನ್ಯಕ್ಕೂ, ಇಂದಿನ ಕಠೋರತೆಗೂ ಎಂಥ ಅಂತರ! ಅಧಿಕಾರಿಗಳಿಗೆ ಹೃದಯವೇ ಇರಲಿಕ್ಕಿಲ್ಲವೇ ಎಂದು ಶೇಷಪ್ಪನಿಗೂ ಕೂಡ ಆಶ್ಚರ್ಯವೆನಿಸಿತು. ಆ ದನಿಯ ಬಿರುಸುತನವನ್ನು ನೋಡಿಯೇ ಅವನ ಎಲ್ಲ ಆಸೆಗಳೂ ಬಾಡಿಹೋಗಿದ್ದವು. "ಈಗ ತಾಸು ರಾತ್ರಿ ಆಗೇದಲ್ಲ ಸಾಹೇಬರ?

ನಾಳೆ ಮುಂಜಾನೆ ದಪ್ತರ ತರಿಸಿ ಚಾರ್ಜ ಕೊಡಿಸಿದರ ಆಗಲಿಕ್ಕಿಲ್ಲs?" ಶೇಷಪ್ಪನ ದನಿ ಗುರುತು ಸಿಗದಷ್ಟು ದೀನವಾಗಿತ್ತು. ಅಧಿಕಾರದ ಉಕ್ಕಿನ ಹೃದಯವನ್ನು ಭೇದಿಸುವ ಕೊನೆಯ ಅಸ್ತ್ರವಾಗಿತ್ತದು.

"ಸಾಹೇಬರು ಐದು ಘಂಟೇಕ್ಕ ಆ:ರ್ಡರ ಜಾರಿಮಾಡಬೇಕೂ ಅಂತ ಕೊಟ್ಟ ಕಳಿಸ್ಯಾರ. ಊರ ತುಂಬ ಹುಡಿಕಿಸಿದರೂ ನೀ ಏನ ಸಿಗಲಿಲ್ಲ. ಆ:ರ್ಡರ ಜಾರಿ ಆದದ್ದು ಸಾಯಂಕಾಲದೊಳಗ ಅಂತ ರಿಪೋರ್ಟ ಮಾಡುವದು ಜರೂರ ಅದ. ದಪ್ತರ ತರಸಲಿಕ್ಕೇಬೇಕು. ಈಗ ನಿನ್ನ ಸಂಗತೀಲೆ ಪೋಲೀಸರು ಬರತಾರ. ಅವರ ಕೈಯಾಗ ದಪ್ತರ ಕೊಡು. ಇಕಾ, ಈಗ ಈ ಆ:ರ್ಡರ ಮುಟ್ಟಿದ್ದಕ್ಕ ಸಹಿ ಮಾಡು." ಮಾಮಲೇದಾರರು ಇನ್ನೊಂದು ಮಾತೆತ್ತದಂತೆ ನುಡಿದರು.

ಶೇಷಪ್ಪ ಅವರ ಪ್ರತಿಯೊಂದು ಮಾತನ್ನೂ ಲಕ್ಷ್ಯಪೂರ್ವಕವಾಗಿ ಕೇಳಿ ಕೊಂಡ. ಮೃತ್ಯುದೇವತೆಯೇ ತನ್ನಿದಿರು ನಿಂತು ಮಾತಾಡುತ್ತಿರುವಂತೆ ಅವನಿಗೆ ಅನಿಸಿತು. ಮಂತ್ರಮುಗ್ಧವಾದ ಹಾವಿನಂತಾಗಿತ್ತು ಅವನ ಸ್ಥಿತಿ. ನಾಲಗೆಯ ದ್ರವವೇ ಆರಿಹೋಗಿದ್ದರಿಂದ ಅವನ ಬಾಯಿಂದ ಮಾತುಗಳೇ ಹೊರಡಲಿಲ್ಲ. ಕಣ್ಣು ಕತ್ತಲೆಗವಿದಂತಾದವು. ಸುಮ್ಮನೆ ಮಾಮಲೇದಾರರು ಮುಂದೆ ಚಾಚಿದ ಕಾಗದಕ್ಕೆ ಸಹಿ ಮಾಡಲು ಬಂದ ಕೈಗಳು ಭಯದಿಂದ ಕಂಪಿಸುತ್ತಿದ್ದದ್ದರಿಂದ ಬರೆಯುವದಾಗಲಿಲ್ಲ. ಆಸನ್ನಮರಣನಾದ ರೋಗಿಯ ಚಲನವಲನವನ್ನು ನಿರೀ ಕ್ಷಿಸುವ ಡಾಕ್ಟರನಂತೆ ಮಾಮಲೇದಾರರು ಶೇಷಪ್ಪನ ಕಡೆಗೆ ಅತ್ಯಂತ ನಿರ್ವಿಕಾರ ವೃತ್ತಿಯಿಂದ ಲಕ್ಷ್ಯಕೊಟ್ಟಿದ್ದರು.

ಹೋಗುವಾಗ ಅತ್ಯಂತ ದೈನ್ಯಪೂರ್ಣವಾದ ನೋಟವೊಂದನ್ನು ಮಾಮಲೇ ದಾರರೆಡೆಗೆ ಶೇಷಪ್ಪ ಬೀರಿದ. ಅದೂ ಫಲಕಾರಿಯಾಗಲಿಲ್ಲ. ಮಾಮಲೇದಾರರು ಅವನ ಕಡೆಗೆ ನೋಡಲೇ ಇಲ್ಲ. ಅಪರಕರ್ಮವನ್ನು ಮುಗಿಸಿ ಪಾರಾಗುವ ಪುರೋಹಿತನಂತೆ ಅವರು ಈ ಕರ್ತವ್ಯವನ್ನು ನೆರವೇರಿಸಿ ಕೃತಕೃತ್ಯರಾಗಿದ್ದರು.

ಶೇಷಪ್ಪನ ಮನೆಯಿಂದ ಪೋಲೀಸರು ಕುಲಕರ್ಣಿಕಿ ದಪ್ತರನ್ನು ಚಾವಡಿಗೆ ಸಾಗಿಸಿದರು. ಅವರ ಜೊತೆಗೆ ಅವನೂ ಚಾವಡಿಗೆ ಬರಬೇಕಾಯಿತು. ಅಲ್ಲಿ ಬಂದ ಮೇಲೆ ಚಾರ್ಜಶೀಟನ್ನು ತಯಾರಿಸಿಕೊಟ್ಟ. ಈ ಎಲ್ಲ ವಿಧಿ ನಡೆಯುತ್ತಿರು ವಾಗ ಮೊದಲು ಸ್ನೇಹದಿಂದ ಹತ್ತಿರ ಸುಳಿಯುತ್ತಿದ್ದವರೆಲ್ಲ ಈಗ ತಿರಸ್ಕಾರದಿಂದ ನೋಡುತ್ತಿದ್ದರು. ಅಂದು ರಾತ್ರಿ ತಿರುಗಿ ಅವನು ಮನೆಗೆ ಹೋಗುವಂತಿಗಲಿಲ್ಲ.

ಅಲ್ಲಿಯೇ ಗೋಪಾಳರಾಯನ ಹತ್ತಿರ ಮಲಗುವದಾಗಿ ಹೇಳಿದರೂ ಪೋಲೀಸರು ಕೇಳಲಿಲ್ಲ. ಧರ್ಮಶಾಲೆಯ ಕೋಣೆಯಲ್ಲಿಯೇ ಅವನು ಮಲಗಬೇಕೆಂದು ಆಜ್ಞೆಯಾಗಿದೆಯೆಂದು ಪೋಲೀಸರು ಹೇಳಿದರು. ಶೇಷಪ್ಪನಿಗೂ ಪಾರಾಗುವ ಆಸೆ ಏನೂ ಉಳಿದಿರಲಿಲ್ಲ. ನಿರುಪಾಯನಾಗಿ ಒಪ್ಪಿಕೊಂಡ.

ಅಂದು ಮಧ್ಯಾಹ್ನದಿಂದ ಹಿಡಿದ ಮಳೆ ಬಿಟ್ಟಿರಲಿಲ್ಲ. ನಿಂತು ನಿಂತು ಸುರಿಯುತ್ತಿತ್ತು. ಮೋಡಗಳಿದ್ದುದರಿಂದ ನಕ್ಷತ್ರಗಳ ಬೆಳಕು ಕೂಡ ಇರಲಿಲ್ಲ. ಪಡುವಣಗಾಳಿ ಬೀಸುತ್ತಿತ್ತು; ಚಳಿ ಹೆಚ್ಚಾಗಿತ್ತು.

ಶೇಷಪ್ಪ ಧರ್ಮಶಾಲೆಯಲ್ಲಿ ಒಂದು ಕಂಬಳಿಯ ಮೇಲೆ ಬಿದ್ದುಕೊಂಡಿದ್ದ. ಅವನಿಗಿದು ಚೊಚ್ಚಿಲ ಅನುಭವ. ಕಂಬಳಿಯ ಮೇಲೆ, ಚಳಿ ಕೊರೆಯುತ್ತಿರುವಾಗ, ಅದೂ ಇಂಥ ಮನಸ್ಥಿತಿಯಲ್ಲಿ ನಿದ್ದೆಹತ್ತುವದು ದೂರದ ಮಾತಾಗಿತ್ತು. ಇಪ್ಪತ್ತು ವರ್ಷಗಳ ಅವನ ಗತಜೀವನವು ಚಿತ್ರಚಿತ್ರವಾಗಿ ಕಣ್ಣುಮುಂದೆ ಹಾಯ್ದು ಮಾಯವಾಗುತ್ತಿತ್ತು. ಇಂಥ ಅಪರಾಧಗಳೆಷ್ಟೋ ಹಿಂದೆ ಅವನ ಕೈಯಿಂದ ಆಗಿದ್ದವು. ಒಂದೊಂದು ಅಪರಾಧಕ್ಕೆ ಅವನಿಗೆ ಏಳೇಳು ವರ್ಷ ಶಿಕ್ಷೆಯಾಗಬಹುದಿತ್ತು. ಆದರೆ ಒಂದು ಸಲವೂ ಅವನು ಶಿಕ್ಷೆಗೆ ಗುರಿಯಾಗಿರಲಿಲ್ಲ. ಪುಣ್ಯವಶದಿಂದಲೋ ಏನೋ, ಹೇಗೋ ಅವುಗಳಿಂದ ನುಸುಳಿಕೊಂಡು ಬಂದಿದ್ದ. ಕಾಯದೆ ಜ್ಞಾನ ಅವನ ಅಮೌಲ್ಯವಾದ ಸೊತ್ತಾಗಿತ್ತು. ಕಾಯದೆಯ ಕುಸುರು ತೆಗೆಯುವ ಅವನ ಬುದ್ಧಿವಂತಿಕೆಯನ್ನು ಮೆಚ್ಚಿ, ಕೈತುಂಬ ಹಣ ಕೊಟ್ಟು ಸತ್ಕರಿಸಲು ಕಾರಣವಾಗಿದ್ದ ಅವನ ಕೃತಿಗಳ ಎದುರಿಗೆ, ಇಂದು ಗಿಬ್ಸನ್‌ಸಾಹೇಬನು ಆರೋಪಿಸಿದ ಕೃತಿಗಳು ತೀರ ಕ್ಷುಲ್ಲಕವೆನಿಸಿದವು. ಆದರೆ ಅಂಥ ಕೃತಿಗಳೇ ಇಂದು ಅವನ ಗೌರವವನ್ನು ಪಾದಳ್ಳಿಯ ಪೇಟೆಯಲ್ಲಿ ಕಾಸಿಗೆ ಪಂಥೇರಾಗುವಂತೆ ಮಾಡಿದ್ದವು. ಸಾಕ್ಷಿಗಳನ್ನು ಒಡೆದು, ಹೆಸರುಗಳನ್ನು ತಿದ್ದಿ, ಸತ್ತವರನ್ನು ಪುನರುಜ್ಜೀವನಗೊಳಿಸಿ ಖಟ್ಲೆಯನ್ನು ಗೆಲ್ಲಬಲ್ಲ ತನ್ನಂಥ ಕೃತಿವೀರನಿಗೆ ಖಟ್ಲೆಯ ಹೆದರಿಕೆಯೆಂದರೇನು?

ಆದರೆ ಮಾಂತ್ರಿಕನ ಮಂತ್ರದಂಡವೇ ಕಳೆದುಹೋಗಿತ್ತು. ಅನುಷ್ಠಾನದಲ್ಲಿ ತ್ಯ್ರತಿ ಉಂಟಾದರೆ ಪೋಷಿದ್ದ ಭೂತ ವೇತಾಳಿಯನ್ನೇ ನುಂಗುವಂತೆ ಶೇಷಪ್ಪನ ಗತಿಯಾಗಿತ್ತು. ಅವನ ದಫ್ತರ ಅವನ ಕೈಯಲ್ಲಿರಲಿಲ್ಲ. ಅದು ಅವನ ಕುಲಕಸಬಿನ ಕೌಶಲ್ಯದ ರಂಗಭೂಮಿಯಾಗಿತ್ತು; ಬುದ್ಧಿಸಾಮರ್ಥ್ಯದ ಗರಡಿಮನೆ-

ಯಾಗಿತ್ತು. ಹಾವಿನಂತೆ ಕುನಸಿಟ್ಟುಕೊಳ್ಳುವ ಜನರನ್ನೂ ಆಡಿಸಬಲ್ಲ ಗರುಡನ ಗರೆ ಅದರಲ್ಲಿತ್ತು. ಎಷ್ಟೋ ಅನಾಥಜೀವಿಗಳ, ಎಷ್ಟೋ ಗರ್ವಿಷ್ಠರ ವಿಧಿಲಿಖಿತ ಅದರಲ್ಲಿ ಬರೆಯಲ್ಪಟ್ಟಿತ್ತು. ಶೇಷಪ್ಪ ಅವರೆಲ್ಲರ ದೈವನಿಯಾಮಕನಾಗಿದ್ದ. ಊರ ಜನರ ಆಸ್ತಿಯೆಲ್ಲ ಅವನ ಸೂತ್ರದಂತೆ ಉಳಿದು ಅಳಿಯುತ್ತಿತ್ತು; ಹೊಲದ ಸೀಮಾರೇಖೆಗಳು ಬೆಳಗಾಗುವದರಲ್ಲಿ ಬದಲಾಗುತ್ತಿದ್ದವು.

ಆದರೆ ಈಗ ಆ ಇಂದ್ರಜಾಲವೆಲ್ಲ ಕೆಲಸಕ್ಕೆ ಬಾರದಂತಾಗಿತ್ತು. ಶೇಷಪ್ಪ ಹಲ್ಲು ಮುರಿಸಿಕೊಂಡ ಹೆಬ್ಬುಲಿಯಾಗಿದ್ದ. ಅವನ ಕಣ್ಣಿಗೆ ಭವಿತವ್ಯ ಘೋರ ವಾಗಿಯೇ ಕಂಡಿತು. ಅಧಿಕಾರ ಕೈಯಲ್ಲಿರುವಾಗ ಜನ ಹೇಳಿದಂತೆ ಕೇಳಿದ್ದರು. ಆದರೆ ಗೂಳಿ ಬಿದ್ದುಹೋಗಿತ್ತು. ಬಿದ್ದ ಪೆಟ್ಟೇ ಅಸಹನೀಯವಾಗಿರುವಾಗ ಮೇಲೆ ಆಳಿಗೊಂದೊಂದರಂತೆ ಬೀಸುವ ಕಲ್ಲುಗಳನ್ನೂ ತಡೆದುಕೊಳ್ಳಬೇಕು. ದುರ್ಬಲತೆ ಮರಣಕ್ಕಿಂತ ದುಃಖದಾಯಕವಾಗಿ ಕಂಡಿತು.

ಎಷ್ಟು ಸುಲಭವಾಗಿ ತಾನು ಬಲೆಗೆ ಬಿದ್ದೆನಲ್ಲ ಎಂದು ಶೇಷಪ್ಪನಿಗೆ ದುಃಖ ವಾಗಿತ್ತು. ಪ್ರಬಲವಾದ ಅಪರಾಧಕ್ಕೆ ಶಿಕ್ಷೆಯನ್ನನುಭವಿಸುವದರಲ್ಲಿರುವ ವೈಭ ವವೇ ಬೇರೆ! ಕೊಲೆ, ಸುಲಿಗೆ, ಕಳವು ಮುಂತಾದ ಘೋರ ಅಪರಾಧಗಳನ್ನೇ ಮಣ್ಣುಮರೆಗೆ ಸಾಗಿಸಿದ ಧೀರ ತಾನು! ಅಂಥವನು ಇಂಥ ಕ್ಷುದ್ರವಾದ ತಪ್ಪಿಗೆ ಶಿಕ್ಷೆಗೆ ಗುರಿಯಾಗಬೇಕಾಯಿತಲ್ಲ? ಸಾವಿರಾರು ರೂಪಾಯಿ ಲಂಚ ತಿಂದಾದರೂ ಸಸ್ಪೆಂಡ ಆಗಿದ್ದರೆ ಆ ಮಾತೇ ಬೇರೆ. ಒಟ್ಟು ಇಂಥ ಕೆಲಸಕ್ಕೇ ಕೈ ಹಾಕಬಾರ ದಿತ್ತೆಂದೆನಿಸಿತು.

ಖಟ್ಲೆ ಹಾಕಿದರೆ ಮುಂದೇನು ಎಂಬ ವಿಚಾರವೂ ಶೇಷಪ್ಪನಿಗಿತ್ತು. ಕುಲ ಕರ್ಣಿಕಿ ಇನ್ನು ಮುಂದೆ ದೊರೆಯುವದು ಸಾಧ್ಯವಿರಲಿಲ್ಲ. ಊರ ತುಂಬ ಮುಳ ಗಳ್ಳಿಯಂತೆ ಕುಲಕರ್ಣಿಮನೆತನ ಹಬ್ಬಿರುವಾಗ ಜನ್ಮಕ್ಕೊಮ್ಮೆ ಪಾಳಿ ಬಂದರೆ ಕೃತಾರ್ಥರಾದಂತೆ. ಅಂಥದರಲ್ಲಿ ತಾನು ನಿರಾಬಾಧಿತವಾಗಿ ಕುಲಕರ್ಣಿಕಿ ನಡೆಸಿ ದವ. ಅಂಥ ತನ್ನ ಮೇಲೂ ಖಟ್ಲೆಯಾದರೆ ಕುಲಕರ್ಣಿಕೆಯ ಆಸೆಯನ್ನು ತೊರೆ ಯಲೇಬೇಕು. ಖಟ್ಲೆ ಹಾಕಿದರೆ ಸಾಕ್ಷಿಗಳನ್ನು ಒಡೆಯುವದು ಸಾಧ್ಯವೇ ಎಂಬ ವಿಚಾರವೂ ಬರದಿರಲಿಲ್ಲ. ಆದರೆ ಎಲ್ಲ ಆಸೆಗಳೂ ಕೆಣಕುವ ಆಸೆಗಳೇ!

ಸ್ವಾರ್ಥಸಾಧಕತೆ ಶೇಷಪ್ಪನಲ್ಲಿ ರಕ್ತಗತವಾಗಿ ಬಂದ ಗುಣವಾಗಿತ್ತು. ಆ ಗುಣದ ಬಲದಿಂದಲೇ ಅವನು ಪಾದಳ್ಳಿಯ ನೆಲದಲ್ಲಿ ಬೇರುಬಿಟ್ಟು ಬೆಳೆಯಲು

ಸಮರ್ಥನಾಗಿದ್ದ. ಎಂಥ ಪ್ರಸಂಗದಲ್ಲಿಯೂ ಅವನ ಬುದ್ಧಿ ಸ್ವಂತ ಲಾಭದ ವಿಷಯ ವನ್ನೇ ಲೆಕ್ಕ ಹಾಕುತ್ತಿತ್ತು. ಅಂತೆಯೇ ಹವಾಮಾನಕ್ಕೆ ತಕ್ಕಂತೆ ಅವನ ವ್ಯಕ್ತಿತ್ವ ದಲ್ಲಿ ಬದಲಾವಣೆಗಳಾಗುತ್ತಿದ್ದವು. ಆದರೆ ಅದರ ಗಂಡಾಂತರಗಳನ್ನು ಅವನು ಗಮನಿಸಿರಲಿಲ್ಲ. ಕೇವಲ ಬಹಿರ್ಮುಖವಾಗಿಯೇ ಬೆಳೆದು ಬಂದ ವ್ಯಕ್ತಿತ್ವ ಅಂತ ರ್ಮುಖವಾಗಿರಲೇ ಇಲ್ಲ. ಈಗ ಸರ್ವನಾಶ ಆಕಾಶದಿಂದ ಎರಗುವ ಸಿಡಿಲಿನಂತೆ ತಲೆಯ ಮೇಲೆ ತೂಗಾಡುತ್ತಿತ್ತು. ಅದರ ಭೀಕರ ವ್ಯಾಪಕತೆಯಲ್ಲಿ ಇಡೀ ಜಗತ್ತು ಮರೆಯಾಗಿತ್ತು. ಎಲ್ಲಿಯೂ ನಿಲ್ಲಲು ಒಂದು ಅಡಿ ಸ್ಥಳ ದೊರೆಯದಂತಾದಾಗಲೇ ಮನುಷ್ಯ ತನ್ನೆಡೆಗೆ ತಿರುಗುತ್ತಾನೆ. ಶೇಷಪ್ಪನಂಥ ಸ್ವಾರ್ಥಿಯೂ ಈಗ ತನ್ನೆಡೆಗೆ ತಿರುಗಿದ್ದ. ಆದರೆ ಅಲ್ಲಿ ಅವನಿಗೆ ತನ್ನ ವ್ಯಕ್ತಿತ್ವದ ಗುರುತೇ ಹತ್ತಲಿಲ್ಲ. ಕ್ಷಣ ಕ್ಕೊಂದು ರೂಪ ತಳೆದು ತಳೆದು ಅದು ಜೀರ್ಣವಾಗಿತ್ತು, ಛಿದ್ರಛಿದ್ರವಾಗಿತ್ತು, ರೂಪರಹಿತವಾಗಿತ್ತು.

ರಾತ್ರಿ ಬಲಿಯುತ್ತ ಬಂದಂತೆ ಕತ್ತಲೆ ಆಳವಾಗುತ್ತ ನಡೆಯಿತು. ಶೇಷಪ್ಪ ಭಯದಿಂದಲೋ ಚಳಿಯಿಂದಲೋ ಕಂಬಳಿಯ ಮೇಲೆ ಹೊರಳಾಡುತ್ತಿದ್ದ. ನಿದ್ದೆ ಪೋಲೀಸರ ಬೂಟಿನ ಸಪ್ಪಳಕ್ಕಂಜಿ ಗಾವುದ ದೂರ ಓಡಿ ಹೋದಂತೆನಿಸಿತ್ತು. ತನ್ನ ಮೇಲಿನ ಆರೋಪಗಳೆಲ್ಲ ಸಿದ್ಧವಾಗಿ, ಶಿಕ್ಷೆ ವಿಧಿಸಲ್ಪಟ್ಟರೆ ತನಗೆ ಜೇಲು ವಾಸವೇ ಗತಿ ಎಂಬ ವಿಚಾರ ಅವನನ್ನು ಧೃತಿಗೆಡಿಸಿತು. ಅಂಥ ಚಳಿಯಲ್ಲಿಯೂ ಮೈಯೆಂತ ಮೈಯೆಲ್ಲ ಬೆವರು ಬಿಟ್ಟಿತು. "ಜೇಲು" "ಜೇಲು" ಎಂದು ತನಗೆ ತಾನೇ ಹೇಳಿಕೊಂಡಂತೆ ಕನವರಿಸಿದ.

ಧರ್ಮಶಾಲೆಯ ಹೊರಗೆ ಮಲಗಿದ್ದ ಪೋಲೀಸ ಹವಾಲ್ದಾರನಿಗೂ ನಿದ್ದೆ ಹತ್ತಿರಲಿಲ್ಲ. ಶೇಷಪ್ಪನ ಬಡಬಡಿಕೆ ಅವನ ಕಿವಿಗೂ ಬಿತ್ತು. ಮಲಗಿಕೊಂಡ ಲ್ಲಿಯೇ, "ಇದು ಜೇಲ ಅಲ್ಲರೀ ಕುಲಕರ್ಣ್ಯಾರ! ನಾಳೆ ಸಾಹೇಬರು ಜಾಮೀನಿನ ಮ್ಯಾಗ ಬಿಡಲಿಕ್ಕೆ ಹುಕುಂ ಕೊಟ್ಟರ ಮನಿಗೆ ಹೋಗೀರೆಂತ. ಈಗ ಸುಮಾಕ ಮಲಕೊಳ್ರಿ" ಎಂದು ಗದರಿಸಿ, ಮಗ್ಗುಲಾಗಿ ಮಲಗಿದ.

:: ೩೪ ::

ಗಿಬ್ಸನ್‌ಸಾಹೇಬರು ದಿನಾಲು ಬೆಳಗಿನಲ್ಲೆದ್ದು ತಿರುಗಾಡಲು ಹೋಗುವದು ವಾಡಿಕೆಯಾಗಿತ್ತು. ತಮ್ಮ ಬಂಗಲೆಯಲ್ಲೇ ಇರಲಿ, ಕ್ಯಾಂಪಿನಲ್ಲೇ ಇರಲಿ ಈ ನಿಯಮ ವನ್ನೆಂದೂ ತಪ್ಪಿಸುತ್ತಿರಲಿಲ್ಲ. ಲಂಡಚಣ್ಣ, ಅರೆತೋಳಿನ ಶರ್ಟು, ಬೂಟು, ಕಾಲುಚೀಲ, ಕೈಯಲ್ಲಿ ಮೊಳದುದ್ದದ ಬೆತ್ತ ಇವುಗಳಿಂದಲಂಕೃತರಾಗಿ ಹೊರಟಾಗ ಅವರ ನಾಯಿಯೂ ಬೆನ್ನುಹಿಂದಿನಿಂದ ಹೊರಟಿತೆಂದೇ ತಿಳಿಯಬೇಕು. ಇವೊತ್ತು ಪಾದಳ್ಳಿಯ ಕ್ಯಾಂಪಿನಲ್ಲೂ ಸಾಹೇಬರ ಈ ನಿಯಮ ತಪ್ಪಲಿಲ್ಲ.

ಇನ್ನೂ ಪೂರ್ಣ ಬೆಳಗಾಗಿರಲಿಲ್ಲ. ಮೋಡಗಳಿರದಿದ್ದರೂ ಮಳೆಗಾಲವಾದ್ದ ರಿಂದ ನಸುಕು ವರ್ಣರಹಿತವಾಗಿತ್ತು. ಬೂದುಬಣ್ಣದ ಕತ್ತಲೆಯೇ ಸುತ್ತ ಹರಡಿ ದಂತಾಗಿತ್ತು. ಮೂಡಲಾರದೆ ಹೊತ್ತು ಮೂಡುತ್ತಿತ್ತು. ಮುಗಿಲ ತುಂಬ ನಿರ್ವಿಣ್ಣಛಾಯೆ ಪಸರಿಸಿತ್ತು. ಗಾಳಿ ಮಂದವಾಗಿ ಬೀಸುತ್ತಿದ್ದರೂ ಕೊರೆಯುವ ಚಳಿ ತೀಕ್ಷ್ಣವಾಗಿತ್ತು. ಉತ್ಸಾಹದ ಒಂದಂಶವೂ ವಾತಾವರಣದಲ್ಲಿರಲಿಲ್ಲ.

ಆದರೂ ಗಿಬ್ಸನ್‌ಸಾಹೇಬರು ಪ್ರಕೃತಿಯನ್ನೇ ಮೂದಲಿಸುವವರಂತೆ ಉತ್ಸಾಹದಿಂದ ಪಾದಳ್ಳಿಯ ನದಿಯ ದಂಡೆಗುಂಟ ಸಾಗಿದ್ದರು. ಅವರ ಜೊತೆ ಯಾಗಿ ಬಂದ ನಾಯಿ ಅಲ್ಲಲ್ಲಿ ನಿಂತು ಬರುತ್ತಿದ್ದಿತಾದ್ದರಿಂದ ಸಾಹೇಬರ ನಡಿಗೆಯ ಗತಿಗೆ ಒಮ್ಮೊಮ್ಮೆ ತಡೆಯುಂಟಾಗುತ್ತಿತ್ತು. ಗಿಡ-ಬಳ್ಳಿ ಕಲ್ಲು-ಮುಳ್ಳು ಎಲ್ಲದರ ಬಗ್ಗೆಯೂ ಅಧಿಕಪ್ರಸಂಗದ ಕುತೂಹಲವನ್ನು ತೋರಿಸುತ್ತಿದ್ದ ನಾಯಿ ಸಾಹೇಬರ ಕೋಪವನ್ನೂ ಒಮ್ಮೊಮ್ಮೆ ಕೆರಳಿಸುತ್ತಿತ್ತು. ಆದರೆ ಸಾಹೇಬರ ಕುತೂಹಲವೂ ಕಡಿಮೆಯಾಗಿರಲಿಲ್ಲ. ಈ ನಾಡಿನ ಅಸಂಖ್ಯ ವೈಚಿತ್ರ್ಯಗಳೇ ಅವರ ಕುತೂಹಲ ವನ್ನು ಸದಾ ಜಾಗೃತವಾಗಿರುವಂತೆ ಮಾಡಿದ್ದವು.

ನದಿಯ ದಂಡೆಗುಂಟ ನಡೆದು ಬಂದರೂ ಒಬ್ಬ ಪ್ರಾಣಿಯೇನು ಭೆಟ್ಟಿಯಾಗಿ ಸಾಹೇಬರ ಚಿಕಿತ್ಸೆಯನ್ನು ತೃಪ್ತಿಪಡಿಸಲಿಲ್ಲ. ಸುತ್ತಲಿನ ಪರಿಸರವೆಲ್ಲ ನಿರ್ಜನ ವಾಗಿತ್ತು. ದೂರದಿಂದ ನೋಡಿದಾಗ ಪಾದಳ್ಳಿ ನಿದ್ದೆ ಹೋದಂತಿತ್ತು. ಜಾಗೃತಿಯ

ಒಂದು ಸುಳಿವೂ ಕಾಣುತ್ತಿರಲಿಲ್ಲ.

ಸಾಹೇಬರ ಲಕ್ಷ್ಯ ಮತ್ತೆ ಪ್ರಕೃತಿಯ ಕಡೆಗೇ ಹೊರಳಿತು. ಮೂಡಲ ದಿಕ್ಕು ಯಾಂತ್ರಿಕವಾಗಿಯೇ ಎಂಬಂತೆ ಸಾವಕಾಶವಾಗಿ ಬೆಳಗುತ್ತಿತ್ತು. ನದಿಯ ಪಾತ್ರ ಮಂಜಿನ ತೆರೆಯನ್ನು ಮೆಲ್ಲಗೆ ಓಸರಿಸಿ ಅಷ್ಟೇ ಮೆಲ್ಲಗೆ ಹರಿಯುತ್ತಿತ್ತು. ರಾತ್ರಿಯ ಚಳಿಗೋ, ನಿದ್ದೆಯಿಲ್ಲದ್ದರಿಂದಲೋ ಪ್ರವಾಹದ ವೇಗ ಕಡಿಮೆ ಯಾಗಿತ್ತು. ಬೆಳಕು ಪೂರ್ಣವಾಗಿ ಬೀಳದ್ದರಿಂದ ದೂರದಲ್ಲಿ ಕಾಣುವ ಗುಡ್ಡ ಕೇವಲ ರೇಖಾಕೃತಿಯಾಗಿ ಕಾಣುತ್ತಿತ್ತು.

ಸಾಹೇಬರು ಈಗ ತೀರ ನದಿಯ ಸಮೀಪಕ್ಕೇ ಬಂದಿದ್ದರು. ಮೊನ್ನೆ ತಾವು ಮಹಾರಾಜರನ್ನು ಸ್ವಾಗತಿಸಲು ನಿಂತ ಸ್ಥಳ ಈಗ ಪ್ರವಾಹದ ಮಧ್ಯದಲ್ಲಿದೆ. ಕ್ಷಣಕ್ಷಣಕ್ಕೂ ಬದಲಾಗುತ್ತಿರುವ ನದಿಯ ಶಯ್ಯೆ ಎರಡೂ ದಂಡೆಗಳನ್ನು ಕಬಳಿ ಸಿದೆ. ಎರಡೇ ದಿನಗಳಲ್ಲಿ ಎಷ್ಟು ನೆರೆ ನದಿಗೆ ಬಂದಿರಬೇಕು ! ಊರ ಭೂಮಿಯ ಬಹುಭಾಗವು ಈ ನದಿಯ ಒತ್ತಿನಲ್ಲಿ ಮುಳುಗಿಹೋಗಿರಬೇಕು ! ಮಳೆಗಾಲ ವಾದ್ದರಿಂದ ನದಿಯ ಪ್ರವಾಹ ಯೌವನದಿಂದ ಸೊಕ್ಕಿದಂತಿತ್ತು. ಅದರ ಉನ್ಮಾದ ವನ್ನು ತಡೆಯುವದು ಅಸಾಧ್ಯವಾಗಿತ್ತು. ಹತ್ತಲಿನ ಎರೆಭೂಮಿ ಕಸುವು ಕಳೆದು ಕೊಂಡು ಪ್ರವಾಹದ ರೊಚ್ಚಿಗೀಡಾಗಿತ್ತು. ಈ ನೆಲದ ತಲೆ ಬಡಿದು ಪ್ರವಾಹ ವಿಜ ಯೋನ್ಮಾದದಲ್ಲಿ ಮುಂದೆ ಸಾಗಿತ್ತು. ಸಾಹೇಬರು ಯೋಚಿಸುತ್ತಿದ್ದರು. ನಾಳಿನ ದಿನ ಈ ಊರಲ್ಲಿ ನಿಲ್ಲುವದಾದರೆ ನದಿಯ ಈ ಒತ್ತಿನಲ್ಲಿಯ ನೀರು ಗಂಭೀರ ಸರೋವರವಾಗಿ ತುಳುಕಾಡುವದನ್ನು ಕಾಣಲೇಬೇಕು. ನೀರು-ನೆಲಗಳ ಕೊನೆ ಯಿಲ್ಲದ ಈ ಸಂಟುತನದಲ್ಲಿ ಪ್ರಕೃತಿಯ ಯಾವ ರಹಸ್ಯ ಅಡಗಿದೆಯೋ! ಭೂಮಿ ಹುಟ್ಟಿದಂದಿನಿಂದಲೇ ಈ ನೀರೂ ಹೀಗೆಯೇ ಭೂಮಿಯ ಒಡಲನ್ನು ಸೀಳಿಕೊಂಡು ಅನಂತವಾಗಿ ಪ್ರವಹಿಸುತ್ತಲೇ ಇದೆ. ಇಷ್ಟು ನೀರು ವ್ಯರ್ಥವಾಗಿ ಹರಿದು ಸಮುದ್ರವನ್ನು ಕೂಡುತ್ತಿರುವದನ್ನು ನೋಡಿ ಸಾಹೇಬರ ಪಾಶ್ಚಾತ್ಯ ಮನೋವೃತ್ತಿಗೆ ಕೆಡುಕೆನಿಸಿತು. ಅನಾವೃಷ್ಟಿ, ಬರಗಾಲ, ತಗಾಯಿ ಸಾಲ, ಬಡತನ, ಉಪವಾಸ, ಹೀಗೆಯೇ ಲೆಕ್ಕವಿಲ್ಲದ ತಕರಾರು ಹೇಳಿ ಈ ಜನರು ಸರಕಾರಕ್ಕೆ ಅರ್ಜಿಕೊಟ್ಟು ಬೊಬ್ಬೆ ಇಡುವಷ್ಟು ಶ್ರಮವನ್ನೇ, ಈ ನೀರಿನ ಉಪ ಯೋಗದಲ್ಲಿ ವಹಿಸಿದರೆ ...? ಎಂದೆನಿಸಿತು. ಊರಮಗ್ಗುಲಿಗೇ ಹರಿಯುವ ಈ ದೊಡ್ಡ ನದಿ ಇವರ ಪಾಲಿಗೆ ಬಂಗಾರದ ಕಣಿಯಾಗಬೇಕು. ಆದರೆ ವಸ್ತುಸ್ಥಿತಿ

ಎಷ್ಟು ವಿಪರೀತವಾಗಿದೆಯಲ್ಲ ಎಂದೆನಿಸಿತು.

ನದಿ ಪೂರ್ವಾಭಿಮುಖವಾಗಿಯೇ ಹರಿಯುತ್ತಿತ್ತು. ಬೆಳಗಿನ ದುರ್ಬಲ ಕಿರಣಗಳು ತೆರೆಗಳಲ್ಲಿ ಪ್ರತಿಫಲಿಸಿದವು; ನದಿಗೆ ಜೀವ ಬಂದಂತಾಯಿತು. ಸಾಹೇಬರು ನೆಟ್ಟ ನೋಟದಿಂದಲೇ ಪ್ರವಾಹದ ಕಡೆಗೆ ನೋಡುತ್ತಿದ್ದರು. ಅಷ್ಟರಲ್ಲಿ ನದಿಯ ಮಧ್ಯಪ್ರವಾಹದಲ್ಲಿಯೇ ಒಬ್ಬ ಮನುಷ್ಯ ತೇಲಿಹೋಗುತ್ತಿರುವದನ್ನು ನೋಡಿ ಸಾಹೇಬರ ಹೃದಯ ಕಂಪಿಸಿತು. ಪಾಪ ಅವನು ಸೆಳವಿಗೆ ಸಿಕ್ಕು ತೇಲಿ ಹೋಗುತ್ತಿದ್ದಾನೆಂದು ಕಳವಳವಾಯಿತು. ದೂರದ ನೋಟವಾದ್ದರಿಂದಲೂ, ಆ ಮನುಷ್ಯ ತೇಲಿ ಮುಳುಗುತ್ತಿದ್ದುದರಿಂದಲೂ ಯಾರೆಂಬುದು ಗೊತ್ತಾಗುವಂತಿರಲಿಲ್ಲ. ಸಾಹೇಬರ ಅಂತಃಕರಣ ಧಡಪಡಿಸಿ, ಅವನನ್ನು ಉಳಿಸಬೇಕೆಂದು ಆಸೆಯಾದರೂ ಅವರು ಅಸಹಾಯರಾಗಿದ್ದರು. ಸಮುದ್ರದಲ್ಲಿ ಈಸಿದ ಅನುಭವ ಸಾಹೇಬರಿಗಿತ್ತು. ಆದರೆ ಸೆಳವಿನ ನದಿಗಳಲ್ಲಿ ಈಸುವದು ಅಪಾಯಕರ ಎಂದು ಅವರಿಗೆ ಯಾರೋ ಹೇಳಿದ್ದರು. ಅದರಲ್ಲಿ ದಕ್ಷಿಣದ ಈ ನದಿಗಳಂತೂ ತೀರ ಸೆಳವಿನವು. ಸುಮ್ಮನೆ ನೋಡುತ್ತ ನಿಲ್ಲುವದಲ್ಲದೆ ಅವರು ಏನೂ ಮಾಡದಾದರು.

ಸ್ವಲ್ಪ ಹೊತ್ತು ಹೀಗೆಯೇ ವ್ಯರ್ಥ ನಿರೀಕ್ಷೆಯಲ್ಲಿಯೇ ಕಳೆಯಿತು. ಆ ಮೇಲೆ ತೇಲಿ ಹೋಗುತ್ತಿದ್ದ ಆ ವ್ಯಕ್ತಿ ನಿರಾಯಾಸದಿಂದ ಕೆಲ ಅಂತರದ ಮೇಲೆ ನೀರಿನ ಮಲುವನ್ನು ನೋಡಿ ಈಸುತ್ತ ದಂಡೆಗೆ ಮುಟ್ಟಿತು. ದಂಡೆಯಮೇಲೆ ಮೊದಲಿಟ್ಟಿದ್ದ ಪಂಜೆಯನ್ನುಟ್ಟು, ನದಿಗೂ ಸೂರ್ಯನಿಗೂ ವಂದನೆ ಸಲ್ಲಿಸಿ, ಆ ವ್ಯಕ್ತಿ ಮಂತ್ರಘೋಷದೊಂದಿಗೆ ಮನೆಯ ದಾರಿ ಹಿಡಿಯುವ ವರೆಗೆ, ಸಾಹೇಬರು ಆಶ್ಚರ್ಯದಿಂದ ಕಲ್ಲಾಗಿ ನೋಡುತ್ತಲೇ ನಿಂತಿದ್ದರು. ಅವನು ತೇಲಿಹೋಗುತ್ತಿರದೆ ದಿನಾಲು ನದಿಯ ಮಧ್ಯಪ್ರವಾಹದ ವರೆಗೆ ಈಸಿ ಹೋಗಿ ಆ ನಿರ್ದಿಷ್ಟ ಸ್ಥಳವನ್ನು ಮುಟ್ಟಿ ಬರುವ ರೂಢಿಯನ್ನಿಟ್ಟುಕೊಂಡವನಾಗಿರಬೇಕೆಂದು ತೋರಿತು. ಅವನು ತಿರುಗಿ ಹೊರಟಾಗ ಅವನನ್ನು ಕಂಡು ಮಾತಾಡಿಸಲೇಬೇಕೆಂಬ ಕುತೂಹಲ ಸಾಹೇಬರಲ್ಲಿ ಹೆಚ್ಚಿತು.

ಅವಸರದಿಂದ ಹೆಜ್ಜೆಹಾಕುತ್ತ ಸಾಹೇಬರು ಆ ವ್ಯಕ್ತಿಯನ್ನು ಅನುಸರಿಸಿದರು. ನಾಯಿ ಅವರ ಬೆನ್ನಹಿಂದೆಯೇ ಓಡುತ್ತ ಬಂದಿತು. ತೀರ ಹತ್ತಿರ ಬಂದಾಗ, ಮಂತ್ರೋಚ್ಚಾರಣೆ ಮಾಡುತ್ತ ನಡೆದಿರುವ ವ್ಯಕ್ತಿ ಮತ್ತಾರೂ ಆಗಿರದೆ ರಾಜಪುರೋಹಿತರಾದ ಬಾಳಾಚಾರ್ಯರೇ ಎಂಬ ಸಂಗತಿ ಸ್ಪಷ್ಟವಾಗಿ ತಿಳಿಯಿತು.

ಸಾಹೇಬರಿಗೆ ತಮ್ಮ ಬೆಳಗಿನ ಈ ಸಂಶೋಧನೆಯನ್ನು ಕಂಡು ಹೊಟ್ಟೆತುಂಬ
ನಗೆ ಬಂತು. ಯಾವುದಾದರೂ ವಿಕ್ರಮವನ್ನು ಸ್ಥಾಪಿಸಬಲ್ಲ ಈಸುಗಾರನನ್ನು
ಈ ಕೊಂಪೆಯಲ್ಲಿ ಅರಸಬೇಕೆಂದಿದ್ದ ಅವರಿಗೆ ಆಚಾರ್ಯರನ್ನು ಕಂಡು ನಿರಾಶೆ
ಯಾಯಿತು.

"ಇದೇನು ರಾಜಪುರೋಹಿತರೇ, ತೀರ ನಸುಕಿನಲ್ಲಿಯೇ ಸ್ನಾನಕ್ಕೆ
ಬಂದಂತಿದೆ?" ಎಂದು ಸಾಹೇಬರು ಮಾತಾಡಿಸಿದರು.

ಆಚಾರ್ಯರು ಮೊದಲು ಆಶ್ಚರ್ಯದಿಂದ ತಡವರಿಸಿದರು. "ದಿನಾ ನಸಿಕಿ
ನ್ಯಾಗ ಎದ್ದು ಕೃಷ್ಣಾಸ್ನಾನ ಮಾಡುವ ರೂಢಿ ಇಟಗೊಂಡೀನಿ ಸಾಹೇಬರ. ಈಗ
ಹತ್ತು ವರ್ಷ ಆಗಿರಬೇಕು, ಈ ರೂಢಿ ಎಂದೂ ತಪ್ಪಿಸಿಲ್ಲ" ಎಂದು ವಿನಯ
ದಿಂದಲೇ ಆಚಾರ್ಯರು ಉತ್ತರವಿತ್ತರು.

ತಮ್ಮ ಬೆಳಗಿನ ಈ ರೂಢಿ ಗಿಬ್ಸನ್‌ಸಾಹೇಬರ ಕಣ್ಣಿಗೆ ಬಿದ್ದದ್ದರಿಂದ
ಆಚಾರ್ಯರಿಗೆ ಸಂಕೋಚವೆನಿಸಿತ್ತು. ಆದರೆ ಸಾಹೇಬರಿಗೆ ಆಚಾರ್ಯರ ಬಗ್ಗೆ ಇನ್ನೂ
ಹೆಚ್ಚಿಗೆ ತಿಳಿದುಕೊಳ್ಳಬೇಕೆಂಬ ಕುತೂಹಲವಿತ್ತು. ಬೆಳಗಿನ ಇಂಥ ಚಳಿಯಲ್ಲಿ
ಮಧ್ಯಪ್ರವಾಹದ ವರೆಗೆ ಈಸಿ ಬರುವ ರೂಢಿಯನ್ನಿಟ್ಟುಕೊಂಡಿರುವ ಈ ಬ್ರಾಹ್ಮಣ
ಸಾಮಾನ್ಯನಾಗಿರಲೇಬೇಕೆಂದು ಅವರ ನಂಬಿಕೆಯಾಗಿಬಿಟ್ಟಿತ್ತು. ಈ ಬ್ರಾಹ್ಮ
ಣನ ಒಳಗುಟ್ಟನ್ನು ತಿಳಿದುಕೊಂಡೇಬಿಡಬೇಕೆಂದು ಅವರಿಗೆ ಆಸೆಯಾಗಿತ್ತು.

"ನೀವು ಪ್ರವಾಹಕ್ಕೆ ಸಿಕ್ಕು ತೇಲಿಹೋಗುವಿರೆಂದು ನಾನು ಗಾಬರಿಯಾಗಿದ್ದೆ.
ನಾನು ಕೂಗುವ ಮೊದಲೇ ನೀವು ಅನಾಯಾಸವಾಗಿ ದಂಡೆಗೆ ಬಂದು ಮುಟ್ಟಿದಿರಿ"
ಎಂದು ಮುಗುಳುನಗೆ ನಗುತ್ತಲೇ ಹೇಳಿದರು.

ಆಚಾರ್ಯರೂ ಅದೇ ರೀತಿಯಾಗಿ ನಗುತ್ತ "ಸಾಹೇಬರೇ, ದೇವರ ಇಚ್ಛಾ
ಹ್ಯಾಂಗಿರತದೋ ಹಾಂಗ ಆಗತದ. ನಾನು ತೇಲಿಹೋಗೋದಿದ್ದರ ನೀವು ಕಾಯ
ಬೇಕಿತ್ತೇನ್ರಾ? ಅದೆಲ್ಲ ಸುಳ್ಳು! ನಮ್ಮ ದೈವದಾಗ ಇದ್ದದ್ದು ಆಗತದ" ಹೇಳಿದರು.

ಸಾಹೇಬರಿಗೆ ಈ ದೈವವಾದವನ್ನೇ ಕೆಣಕಬೇಕೆಂದೆನಿಸಿತು. "ಮಾತು
ಮಾತಿಗೆ ದೈವವೆಂದು ಕುಳಿತರೆ ಪುರುಷಪ್ರಯತ್ನದ ಗತಿ ಏನು? ಮನುಷ್ಯನ
ಪ್ರಯತ್ನದಲ್ಲಿ ನಮಗೆ ಶ್ರದ್ಧೆ ಇರಬೇಕು ಅಲ್ಲವೇ?" ಎಂದು ಆಚಾರ್ಯರ ಜೀವನ
ರಹಸ್ಯವನ್ನೇ ಕೆದಕಿದರು.

ಈ ಪ್ರಶ್ನೆಯಿಂದ ಆಚಾರ್ಯರೂ ಕದಲಲಿಲ್ಲ. "ನನಗದೇನೂ ಗೊತ್ತಿಲ್ಲ

ಸಾಹೇಬರ! ಈ ಜಗತ್ತು ನಡೆದದ್ದು ದೇವರ ಪ್ರೇರಣಾದಿಂದ. ಇದಿಷ್ಟೇ ನಾನು ಕಲತಿದ್ದು. ನಾ ನಂಬಿದ್ದೂ ಅದನ್ನೇ" ಎಂದಿಷ್ಟೇ ಹೇಳಿದರು. ಆಚಾರ್ಯರಿಗೆ ದೇವರಲ್ಲಿಯ ನಿಷ್ಠೆ ಅಗಾಧವಾಗಿತ್ತು. ಅದರ ಬಗ್ಗೆ ವಾದ ಅವರಿಗೆ ಬೇಕಾಗಿರಲಿಲ್ಲ. ಅವರಿಗಿದ್ದ ಸಂಸ್ಕಾರ, ಅವರು ಕಲಿತ ವಿದ್ಯೆ, ಬೆಳೆದು ಬಂದ ವಾತಾವರಣ ಇದೇ ವಿಚಾರಸರಣಿಯನ್ನು ಹೆಚ್ಚುಹೆಚ್ಚಾಗಿ ದೃಢಗೊಳಿಸಿದ್ದವು.

ಬೇರೇನೂ ಮಾತಾಡದೆ ಆಚಾರ್ಯರು ಮನೆಯ ದಾರಿ ಹಿಡಿದರು. ಸಾಹೇಬರೂ ನಿರಾಶರಾಗಿ ತಮ್ಮ ಕ್ಯಾಂಪಿನ ದಾರಿ ಹಿಡಿದರು. ಸಾಹೇಬರ ನಾಯಿ ಮಾತ್ರ ಆಚಾರ್ಯರ ಹಿಂದಿನಿಂದ ಹೋಗಿ ಅವರನ್ನು ತಡೆಹೊಡೆದು ತಿರುಗಿ ಸಾಹೇಬರ ಹತ್ತಿರ ಬಂತು. ಆಚಾರ್ಯರು ಗಕ್ಕನೆ ತಿರುಗಿ, ಕೈಯಲ್ಲಿ ಹಿಡಿದಿದ್ದ ತಂಬಿಗೆ-ಗಿಂಡಿಗಳಲ್ಲಿಯ ನೀರನ್ನು ನೆಲಕ್ಕೆ ಸುರುವಿ, ಪುನಃ ನದಿಯ ದಾರಿ ಹಿಡಿದರು. ಸಾಹೇಬರಿಗೆ ಮತ್ತೊಂದು ಆಶ್ಚರ್ಯದ ಆಘಾತವಾಯಿತು. "ಮತ್ತೆ ನದಿಯ ದಾರಿಗೆ ನಡೆದಿರಲ್ಲ, ದಾರಿ ತಪ್ಪಿತೇನು ?" ಎಂದು ಕೇಳಿದರು.

"ಇಲ್ಲ. ನಿಮ್ಮ ನಾಯಿ ತಾಕಿದ್ದರಿಂದ ಮೈಲಿಗ್ಯಾತು. ಅದಕ್ಕ ಇನ್ನೊಮ್ಮೆ ಸ್ನಾನ ಆಗಬೇಕು ಸಾಹೇಬರ." ಎಂದು ಹೇಳಿ ಆಚಾರ್ಯರು ನದಿಗೆ ನಡೆದರು.

ಸಾಹೇಬರು ಆಶ್ಚರ್ಯಚಕಿತರಾಗಿ ತಮ್ಮ ಕ್ಯಾಂಪಿನ ದಾರಿಯನ್ನು ಮೌನವಾಗಿಯೇ ಅನುಸರಿಸಿದರು. ಬೆಳಗಿನ ಈ ನೋಟದಿಂದ ಅವರಿನ್ನೂ ವಿಚಾರದಲ್ಲಿಯೇ ಮುಳುಗಿದ್ದರು. 'ಬಿಳಿಮನುಷ್ಯನ ಭಾರ' ಕೇವಲ ಭಾರವಾಗಿರಲಿಲ್ಲ, ಅಗಮ್ಯವೂ ಆಗಿತ್ತು. ಈ ಜನರ ಜೀವನಸಿದ್ಧಾಂತಗಳಲ್ಲಿ ಸರಳತೆಯೇ ಇಲ್ಲ; ಸಾವಿರಾರು ವಿರೋಧಗಳು ಕೂಡಿ ಗಹನವಾಗಿದ್ದವು. ಇಷ್ಟು ವಿಪರೀತ ಮನೋಭಾವಗಳ ಬಂಧನದಲ್ಲಿ ಮನುಷ್ಯ ಬದುಕುವದಾದರೂ ಹೇಗೆ ?

ಸಾಹೇಬರು ವಿಚಾರಮಗ್ನರಾಗಿ ಸಾಗಿರುವಾಗ ಇನ್ನೊಂದು ಸಂಗತಿ ನಡೆದು ಅವರನ್ನು ಮತ್ತೆ ಜಾಗೃತಲೋಕಕ್ಕೆ ಎಳೆದು ತಂದಿತು. ಕಾವಿಯ ಬಟ್ಟೆಯನ್ನು ಧರಿಸಿ, ವಿಭೂತಿಯ ಸ್ಪಷ್ಟ ಗೆರೆಗಳಿಂದಲಂಕೃತವಾದ ಹಣೆಯುಳ್ಳ, ಸ್ವಚ್ಛವಾಗಿ ಬೋಳಿಸಿದ ಮುಂಡದ, ರುದ್ರಾಕ್ಷಿಮಾಲೆಗಳಿಂದೊಪ್ಪುವ ಪುಷ್ಟದೇಹದ ಒಂದು ವ್ಯಕ್ತಿ ಸಾಹೇಬರ ಮುಂದೆ ದಾರಿಯಲ್ಲಿ ತಾನು ಹೊದ್ದ ಧೋತರವನ್ನು ಹಾಸಿ ಅಡ್ಡಬಿದ್ದುಬಿಟ್ಟಿತು.

ಸಾಹೇಬರ ಹೃದಯ ನಡುಗಿತು. "ಏನಿದು, ಹೀಗೇಕೆ?" ಎಂದು ತಮಗೆ

ನೇ ಕೇಳಿಕೊಂಡಂತೆ ಸಾಹೇಬರು ಪ್ರಶ್ನಿಸಿದರು. ಅಷ್ಟರಲ್ಲಿ ಅವರ ಅಂಗರಕ್ಷಕ
ತಿದ್ದ ಆ ನಾಯಿ ಅಡ್ಡಬಿದ್ದ ವ್ಯಕ್ತಿಯ ಕಾವಿಬಣ್ಣದ ಬಗಲಕಸಿಯ ಅಂಗಿ
ನ್ನು ಹಿಡಿದು ಜಗ್ಗಿತು. ಕಚ್ಚಲೆಂದು ನೀಡಿದ್ದ ಅದರ ಬಾಯಿಗೆ ದಪ್ಪನಾದ
ಡೆಯರಿವೆಯ ಅಂಗಿಯೇ ಸಿಕ್ಕಿತು. ಪುಣ್ಯಕ್ಕೆ ಚರ್ಮ ಇನ್ನೂ ಒಳಗೆ
ದುಗಿತ್ತು. ಇಲ್ಲದಿದ್ದರೆ ಅಡ್ಡ ಬಿದ್ದಿದ್ದ ಪಡದಪ್ಪನವರ ಬೆನ್ನಿನ ತೊಗಲು ಅಂಗಿಯ
ವೆಯಂತೆಯೇ ಕಿತ್ತಿಬರಬಹುದಾಗಿತ್ತು.

ಈ ಮೊದಲೇ ಬಾಳಾಚಾರ್ಯರನ್ನು ನದಿಗೆ ಅಟ್ಟಿದ್ದರಿಂದ ಸಾಹೇಬರ ಮನ
ಗೆ ಬೇಸರವಾಗಿತ್ತು. ಇನ್ನೊಂಮ್ಮೆ ಅಂಥವೇ ಪ್ರಕರಣ ನಡೆದರೇನು ಗತಿ ಎಂದು,
ನ್‌ಸಾಹೇಬರು ಕೈಯಲ್ಲಿಯ ಬಡಿಗೆಯಿಂದ ನಾಯಿಯ ತಲೆಗೊಂದು ಏಟು
ಟ್ಟರು. ಸನ್ನೆಯನ್ನು ತಿಳಿದುಕೊಂಡ ನಾಯಿ, ಅಂಗಿಯನ್ನು ಬಿಟ್ಟು ಬಾಲ
ಲ್ಲಾಡಿಸುತ್ತ ಸಾಹೇಬರ ಪಾದಗಳಲ್ಲಿ ಸುಳಿದಾಡತೊಡಗಿತು.

ಪಡದಪ್ಪನವರು ಮೇಲೆದ್ದರು. ಕೈಮುಗಿದರು. "ಸಾಹೇಬರ, ಈ ಅನಾ
ಅರ್ಜಿ ಕೇಳಿಕೊಂಡು ನನಗ ನ್ಯಾಯ ಕೊಡಬೇಕು" ಎಂದು ನಾಟಕದಲ್ಲಿಯ
ತ್ರದಂತೆ ಮಾತಾಡಿದರು.

ಸಾಹೇಬರಿಗೆ ಅವರನ್ನು ನೋಡಿ ದಿಗಿಲುಬಿದ್ದಿತು. ನಿನ್ನಿನ ದಿನ ತೋಟ
ಮಹಾರಾಜರ ಸರಿಸಮಾನನಂತೆ ಅವರೆದುರು ಕುಳಿತು ಆತಿಥ್ಯವನ್ನು
ಕರಿಸಿದ ಈ ವ್ಯಕ್ತಿ ಬೆಳಗಾಗುತ್ತಲೆ ಬಂದು ಕೇಳಿಕೊಳ್ಳುವದಾದರೂ ಏನು?
ಮ್ಮ ಅರ್ಜಿ ಏನು?" ಎಂದು ಕೇಳಿದರು.

"ಹೇಳತೀನರಿ, ಸಮಾಧಾನದಿಂದ ಕೇಳಿಕೋಬೇಕು. ಸಾಹೇಬರ‌ಽ, ಈ
ರ ಹಿರೇಮಠದ ಪಟ್ಟಕ್ಕ ಬಂದ ಸ್ವಾಮಿ ನಾನು. ಮಠದ ಆಸ್ತಿ ನಾಕು
ಬರ ಬೂಮಿ ಐತರಿ. ನಾ ಪಟ್ಟಕ್ಕ ಬಂದಮ್ಯಾಗಿಂದ ಮಠಾನೂ ನನ್ನ
ದಾಗ ಐತ್ರಿ. ಆದರ ಊರಾಗ ದಾದಾ ಬಾಳ ಪುಂಡಾಟಗಿರಿ ನಡಿಸಿ
ನ್ನ ಸಾಗ್ಯ ಕಾರಣ ಇಲ್ಲದ‌ಽ ದ್ವೇಷಾ ಕಟಿಗೊಂಡ. ಕುಲಕರ್ಣಿ ಶೇಷಪ್ಪ ತನ್ನ
ಚಕ್ಕ ಅಡ್ಡ ಬರತೀನಿ ಅಂತ ಹೊಂಚಿಕಿ ಹಾಕಿದರರಿ. ನಾ ಮಠದಾಗ ಇದ್ದಾಗ
ನ್ನ ಹೊಡಿಯೂದು ಬಡಿಯೂದು ಮಾಡಾಕ ಹತ್ತಿದರರಿ. ಕರೇನಂದರ ಈ ಗೌಡರ
ನಿತನದ ಗುರು ಆಗಬೇಕರಿ ನಾನು. ಶಂಕರಪ್ಪಗೌಡ ತೀರಿಕೊಂಡ ಮ್ಯಾಗ
ದ ಹಿರೀ ಮಗ ಲಿಂಗಪ್ಪಗ ಗೌಡಿಕಿ ಬರಬೇಕೂ ಅಂತ ನಾ ಹೇಳಿದರ, ಕೆಲ

ಮುಂದಿಗೆ ಅದು ಬರಷಣ ಅನಿಸಿತರಿ. ಎಲ್ಲಾರೂ ಕೂಡಿಕೊಂಡು ನನ್ನ ಮ್ಯಾಗ
ಏರಿ ಬಂದರರಿ. ಜೀವಕ್ಕ ಹೆದರಿ ಮಟಾ ಬಿಟ್ಟು ಅಜರಾಣಿಗೆ ನಾ ಓಡಿ ಹೋದೆನರಿ.
ತಾವು ಈ ಊರಿಗೆ ಬಂದ ಸುದ್ದಿ ಕೇಳಿ ಹೇಳಿಕೋಬೇಕು ಅಂತ ಬಂದೀನರಿ" ಎಂದು
ಹೇಳಿ ತಮ್ಮ ಮಾತಿನ ಪರಿಣಾಮವೇನಾವಾಯಿತೆಂದು ತಿಳಿಯಲು ಸಾಹೇಬರ
ಮುಖವನ್ನು ನೋಡಿದರು.

ಸಾಹೇಬರಿಗೆ ಅವರು ಹೇಳಿದ್ದರಲ್ಲಿ ಎಷ್ಟು ಭಾಗ ತಿಳಿದಿತ್ತೋ ದೇವರೇ ಬಲ್ಲ.
ಈ ಊರಿನ ಪುಂಡಾಟಿಗೆಯ ಇತಿಹಾಸದ ಒಂದು ಭಾಗ ಗೋಚರಿಸಿತ್ತು ಮಾತ್ರ.
ಇನ್ನೂ ಹೇಳಲಿ ಎಂದು ಸಾಹೇಬರು ಸುಮ್ಮನೆ ಇದ್ದರು. ಪಡದಪ್ಪನವರು
ಮುಂದುವರಿಸಿದರು:

"ಊರಿಗೆ ಬಂದ ಮ್ಯಾಗ ನನ್ನ ಮಠಕ್ಕ ಹೋದ್ನೆರಿ. ಯಾವನೋ ಒಬ್ಬ
ಹುಡುಗ ಪಟ್ಟಕ್ಕ ಕುಂತಾನರಿ. ಅಂವಾ ಇಲ್ಲಿಬಂದು ಹ್ಯಾಗ ಕುಂತಾ ಅಂತ
ಕೇಳಬೇಕಾಗಿತ್ತು. ಅಂತsಸಂಜೀಮಟಾ ಸುಮ್ಮಗs ಕುಂತಿದ್ವೆ. ತಾಸು ರಾತ್ರಿ
ಆಗಿತ್ತರಿ. ವಾಡೇದಾಗ ಮಹರಾಜರು ಬಡಜನರಿಗೆ ಜ್ವಾಳಾ ಹಂಚತಿದ್ದರು.
ಆಗ ವಾಡೇದಿಂದ ಈ ದಾದಾ ನೂರಾರು ಜನರನ ಕರಕೊಂಡು ಬಂದು, ನನ್ನ
ಅಮಾತ ನೆಗವಿ ಮಸೀದ್ಯಾಗ ತಂದು ಇಳಸಬೇಕೇನರಿ? 'ಮಠದಾಗ ಕಾಲಿಟ್ಟರ
ಕಾಲs ಮುರೀತೇನು' ಅಂತ ಜಬರಿಸಿ ಹೋದ. ಚಾವಡ್ಯಾಗ ಪೋಲೀಸರು
ಇದ್ದರಿ. ಸಾಲ್ಯಾಗ ಮಾಮಲೇದಾರರ ಕ್ಯಾಂಪು ಐತಿ. ಹೀಗಿದ್ದರೂ ಯಾರ
ಅಂಜಿಕಿಲ್ಲದ ನನ್ನ ಹೊತ್ತು ಒಯ್ದು ಮಸೀದ್ಯಾಗ ಇಡಬೇಕಂದರ ಈ ದಾದಾನ
ಪುಂಡತನಾ ಏಟ ಇದ್ದೀತು ಲೆಕ್ಕಾ ಹಾಕರಿ?" ಎಂದು ಹೇಳಿ ಪಡದಪ್ಪನವರು
ವಿರಮಿಸಿದರು. ಭಾವಕ್ಕೆ ತಕ್ಕಂತೆ ಅವರ ಮುಖಮುದ್ರೆ, ಅಭಿನಯ, ಮಾತಿನ
ರೀತಿ, ದನಿಯ ಏರಿಳಿತ, ಎಲ್ಲ ಬದಲಾಗುತ್ತಿದ್ದವು.

ಸಾಹೇಬರು ಸ್ವಲ್ಪ ಹೊತ್ತು ಏನೂ ಹೇಳಲಿಲ್ಲ. ಆಮೇಲೆ "ನಿನ್ನೆ ನೀವು
ತೋಟದಲ್ಲಿ ಮಹಾರಾಜರನ್ನು ಭೆಟ್ಟಿಯಾಗಿದ್ದಿರಲ್ಲವೇ?" ಎಂದು ಕೇಳಿದರು.

"ಹೌದರಿ. ಮತ್ತ ನನ್ನ ಸಂಗಾಟ, ನನ್ನಂತೇ ಊರಬಿಟ್ಟು ಓಡಿ ಹೋದ
ಲಿಂಗಪ್ಪಗೌಡರೂ ಇದ್ದರಲ್ಲರಿ" ಎಂದು ಪಡದಪ್ಪನವರು ಪರ್ಯಾಯವಾಗಿ
ಲಿಂಗಪ್ಪನ ಪರಿಚಯವನ್ನೂ ಮಾಡಿಕೊಟ್ಟರು.

ಸಾಹೇಬರು ಸ್ವಲ್ಪ ಹೊತ್ತು ವಿಚಾರಿಸಬೇಕಾಯಿತು. ಪಡದಪ್ಪನವರು

ಹೇಳಿದ ವಿವರಗಳನ್ನೆಲ್ಲ ಕೂಲಂಕಷವಾಗಿ ತಿಳಿದುಕೊಳ್ಳಬೇಕಾಗಿತ್ತು. ವಿಷಯ ಗಂಭೀರವಾಗಿತ್ತು. ದಾದಾ ಕಾಯದೆಯನ್ನು ಮೀರಿ ವರ್ತಿಸಿದ್ದ. ಪಡದಪ್ಪನವರು ನ್ಯಾಯವಾಗಿ ತಮಗೆ ಇದ್ದ ಮಠವನ್ನೂ ಕಳೆದುಕೊಂಡಿದ್ದರು. ಇವರು ಹೇಳಿದ ಸಂಗತಿ ನಿಜವಿದ್ದರೆ ಅವರ ಮೇಲೆ ಅನ್ಯಾಯ ನಡೆದಿತ್ತು. ಪಡದಪ್ಪನವರ ಕತೆಯಲ್ಲಿ ಪುಂಡಾಟಿಕೆಯ ಲೀಲೆಯೇ ಹೆಚ್ಚಾಗಿತ್ತು. ಇದರ ಜೊತೆಗೆ ಲಿಂಗಪ್ಪಗೌಡನವಾರಸಾ ಪ್ರಕರಣವೂ ತಳಕು ಹಾಕಿಕೊಂಡಿತ್ತು. ವಾರಸಾ ಅಪೀಲಿನ ಅರ್ಜಿ ಸಾಹೇಬರಿಗೆ ಈಗಾಗಲೇ ಮುಟ್ಟಿತ್ತು.

"ನೀವು ಹೇಳಿದ ದೂರುಗಳನ್ನು ಲೇಖಿ ಬರೆದುಕೊಡಬೇಕು. ನಾವು ಮಾಡಬೇಕಾದ ಚೌಕಶಿಗೆ ಅದು ಅನುಕೂಲ" ಎಂದು ಸಾಹೇಬರು ಹೇಳಿದರು.

ಪಡದಪ್ಪನವರು ಮತ್ತೊಮ್ಮೆ ಅಡ್ಡಬಿದ್ದರು. ಈ ಅತಿ ವಿನಯದ ಆವಿರ್ಭಾವ ಸಾಹೇಬರಿಗೆ ಬೇಸರ ತರಿಸಿತ್ತಾದರೂ ಅದನ್ನು ಸಹಿಸದೆ ವಿಧಿಯಿರಲಿಲ್ಲ. ಅಧಿಕಾರವನ್ನನುಭವಿಸುವಾಗ ಈ ದುಃಖ ಅನಿವಾರ್ಯವಾದದ್ದೇ. "ನೀವು ಹೇಳಿದ್ಹಾಂಗ ಮಾಡತೀನರಿ ಸಾಹೇಬರ. ಒಟ್ಟು ಬಡವನ ಮ್ಯಾಗ ದಯಾ ಇರಬೇಕು. ನಮಗ ನ್ಯಾಯ ಸಿಗೂಹಾಂಗ ಮಾಡಾಕಬೇಕು" ಎಂದರು ಪಡಪ್ಪನವರು.

"ಹೂಂ ಆಗಲಿ" ಎನ್ನುತ್ತ ಸಾಹೇಬರು ಮುಂದುವರಿದರು. ಪಡದಪ್ಪ ಮತ್ತೊಮ್ಮೆ ವಂದನೆ ಸಲ್ಲಿಸಿ ಹೊರಟುಹೋದರು. ಆಗ ಬೆಳಗಿನ ಏಳು ಗಂಟೆಯಾಗಿತ್ತು. ಸಾಹೇಬರು ಬಿಡುಗಡೆಯನ್ನು ಪಡೆದವರಂತೆ ಒಂದು ನಿಟ್ಟುಸಿರನ್ನು ಬಿಟ್ಟು ತಮ್ಮ ತಂಬೂ ಸೇರಿದರು. ಬೆಳಗಿನಲ್ಲಿ ದೊರೆತ ಈ ಅನುಭವ ಅವರ ಮನಸ್ಸಿನ ಮೇಲೆ ಭಾರವಾಗಿತ್ತು.

ಸಾಹೇಬರು ವಾಡಿಕೆಯಂತೆ ಬ್ರೇಕ್‌ಫಾಸ್ಟಿಗೆ ಬಂದು ಕುಳಿತರು. ಅವರ ಬಟ್ಲರ್ ಎಲ್ಲವನ್ನೂ ಅಣಿಮಾಡಹತ್ತಿದ. ಮೇಜಿನ ಮೇಲೆ ಪ್ಲೇಟುಗಳು ಬಂದವು. ಸಾಹೇಬರ ಮನಸ್ಸು ಮಾತ್ರ ಅದರಲ್ಲಿರಲಿಲ್ಲ. ದಿನವೂ ಉತ್ಸಾಹದಿಂದ ಬಟ್ಲರನೊಡನೆ ಜೇಷ್ಟೆಮಾಡುತ್ತ ತಿನ್ನುವ ಸಾಹೇಬರು ಇಂದು ಗಂಭೀರರಾಗಿದ್ದರು. ಯಂತ್ರದಂತೆ ತಂದಿಟ್ಟ ಪದಾರ್ಥಗಳನ್ನು ತಿನ್ನುವದರಲ್ಲಿ ತೊಡಗಿದ್ದರು.

ಪಾದಳ್ಳಿಯಲ್ಲಿ ನಡೆದ ಈ ಪುಂಡಾಟಿಕೆ ಅವರ ಮನಸ್ಸಿನಿಂದ ಮರೆಯಾಗುವಂತಿರಲಿಲ್ಲ. ಶೇಷಪ್ಪ ಸರಕಾರಿ ನೌಕರನಾಗಿಯೂ ಇಂಥ ಚಟುವಟಿಕೆಗಳಲ್ಲಿ

ಭಾಗವಹಿಸುವದೆಂದರೇನು? ಲಿಂಗಪ್ಪನ ವಾರಸಾ ಆಗಬೇಕಾದರೆ ವ್ಯತ್ಯಯವೇಕೆ ಬರಬೇಕು? ಪಡದಪ್ಪನವರು ತಮ್ಮ ಮಠದಲ್ಲಿ ತಾವು ಸುಖವಾಗಿ ಇರಗೊಡದಂತೆ ದಾದಾ ಅಕ್ರಮವಾಗಿ ವರ್ತಿಸಿದ್ದೇಕೆ? ನಡೆದ ಸಂಗತಿ ಕೇವಲ ಒಂದು ಪ್ರಕರಣವಾಗಿರಲಿಲ್ಲ. ಮಾನವೀಯತೆಯ ಒಂದು ಚೂರು ಅಲ್ಲಿ ಮಿಡಿಯುತ್ತಿತ್ತು. ಪೂರ್ಣವಾಗಿ ಈ ವಿವರಗಳನ್ನೆಲ್ಲ ತಿಳಿದುಕೊಳ್ಳಲೇಬೇಕೆಂದು ಸಾಹೇಬರು ನಿರ್ಧರಿಸಿದರು. ಇಂದು ಕೇಳಿದ ಸಂಗತಿಗಳೆಲ್ಲ ನಿಜವಾಗಿದ್ದರೆ ಇವು ಭಾರಿ ಸ್ವರೂಪದ ಗುನ್ಹೆಗಳಾಗಬೇಕು. ಇವನ್ನೆಲ್ಲ ವಿಚಾರಿಸಲೇಬೇಕಾಗಿತ್ತು.

ಮೊದಲು ಮಠಕ್ಕೆ ಹೋಗಿ ಸ್ಥಾನಿಕ ಚೌಕಶಿಯನ್ನು ನಡೆಸಬೇಕೆಂಬ ವಿಚಾರ ಸಾಹೇಬರ ತಲೆಯಲ್ಲಿ ಬಿರುಗಾಳಿಯಂತೆ ತುಂಬಿತು. ಅವಸರದಿಂದಲೇ ಬ್ರೆಕ್‌ಫಾಸ್ಟ್ ಮುಗಿಸಿದರು. ಯಾರ ಜೊತೆಗೂ ಮಾತಾಡಲಿಲ್ಲ. ಅವಸರದಿಂದಲೇ ವೇಷಧರಿಸಿಕೊಂಡು ನೇರವಾಗಿ ಚಾವಡಿಗೇ ಬಂದರು. ಮಾಮಲೇದಾರರು ಅಲ್ಲಿ ಏನೋ ಕೆಲಸದಲ್ಲಿದ್ದವರು ಸಾಹೇಬರನ್ನು ಕಾಣುತ್ತಲೇ ಎದ್ದು ಸ್ವಾಗತಬಯಸಿದರು. ಸಾಹೇಬರು ಅವರನ್ನು ಜೊತೆಗೆ ಕರೆದುಕೊಂಡು ಹಿರೇಮಠಕ್ಕೆ ಬಂದರು.

ಮಠದಲ್ಲಿ ಕಾವಿಬಟ್ಟೆಯನ್ನು ಧರಿಸಿದ ಎಂಟು ವರ್ಷದ ಬಾಲಕನೊಬ್ಬನಿದ್ದ. ಅವನೇ ಮಠದ ಉತ್ತರಾಧಿಕಾರಿಯೆಂದೂ, ಊರ ಹಿರಿಯರು ಅವನನ್ನು ಮಠದ ಪೀಠಕ್ಕೆ ಕೂಡಿಸಿರುವರೆಂದೂ ತಿಳಿದುಬಂತು. ಮಠದ ಪಟ್ಟದ ದೇವರಾರು? ಅದರ ಉತ್ತರಾಧಿಕಾರಿಯನ್ನು ನೇಮಿಸುವ ಹೊಣೆ ಯಾರದು? ಮಠದ ಸ್ಥಿತಿಗತಿ ಏನು? ಪಡದಪ್ಪನವರನ್ನು ದಾದಾ ಮಠದಿಂದ ಹೊರದೂಡಿದ್ದು ನಿಜವೇ? ಇವೇ ಮೊದಲಾದ ಪ್ರಶ್ನೆಗಳಿಗೆ ಅಲ್ಲಿ ನೆರೆದಿದ್ದವರಿಂದ ಉತ್ತರ ಪಡೆದು ಸಾಹೇಬರು ಅಲ್ಲಿಂದ ಹೊರಬಿದ್ದರು. ಪಡದಪ್ಪನವರ ಆರೋಪ ಸತ್ಯವಾದುದೆಂಬ ಮನವರಿಕೆ ಅವರಿಗೆ ಆಗಲೇ ಆಗಿಬಿಟ್ಟಿತು. ದಾರಿಯಲ್ಲಿ ವಾಡೆಯ ಮುಂದೆ ಹಾದುಹೋಗುವಾಗ ಸಾಹೇಬರಿಗೆ ಮಹಾರಾಜರನ್ನು ಕಂಡು ಹೋಗಬೇಕೆಂದು ಅಪೇಕ್ಷೆಯಾಯಿತು.

ಮಹಾರಾಜರು ಅದೇ ಎದ್ದಿದ್ದರು. ಸಾಹೇಬರನ್ನು ಆದರದಿಂದ ಬರಮಾಡಿಕೊಂಡರು. ಸ್ವಲ್ಪ ಹೊತ್ತು ಸಾಮಾನ್ಯ ಮಾತು-ಕತೆ ನಡೆಯಿತು. ಮಾತಾಡುತ್ತಲೇ ಸಹಜವಾಗಿಯೆಂಬಂತೆ ಗಿಬ್ಸನ್‌ಸಾಹೇಬರು, ದಾದಾ ಪಡದಪ್ಪನವರನ್ನು ಹೊರದೂಡಿದ ಕತೆಯನ್ನು ಹೇಳಿದರು. ಮೊದಮೊದಲು ಮಹಾರಾಜರು ಈ

ಮಾತನ್ನೇ ನಂಬಲಿಲ್ಲ. ಪಡದಪ್ಪನಂಥ ಟೊಣಪನನ್ನು ದಾದಾ ಹೊತ್ತುಕೊಂಡು ಒಯ್ಯುವನೆಂದರೇನು? ಮಹಾರಾಜರಿಗೆ ನಗೆ ತಡೆಯಲಾಗಲಿಲ್ಲ. ಆದರೆ ಸಾಹೇಬರ ಗಂಭೀರಮುಖವನ್ನು ನೋಡಿ ಅದು ಚೇಷ್ಟೆಯಲ್ಲವೆಂದು ನಂಬಬೇಕಾಯಿತು.

ದಾದಾ ಅಲ್ಲಿಯೇ ಓಡಾಡುತ್ತಿದ್ದ. ಸಾಹೇಬರ ದೃಷ್ಟಿ ಅವನ ಮೇಲೆ ಕೇಂದ್ರೀಕೃತವಾಯಿತು. ಸಂಗತಿ ನಿಜವೇನೆಂದು ಅವನನ್ನೇ ಕೇಳಿದರು. ದಾದಾ ಹೌದೆಂದು ಒಪ್ಪಿಕೊಂಡ. ಕಾಯದೆಯನ್ನೂ ಮೀರಿ ವರ್ತಿಸಿದ್ದೇಕೆ ಎಂದು ಸಾಹೇಬರು ಪ್ರಶ್ನಿಸಿದರು. ದಾದಾ ಸುಮ್ಮನಿದ್ದ. ಅಲ್ಲಿಯೇ ಕುಳಿತಿದ್ದ ಯಶವಂತರಾಯರು ವಿವರಣೆ ಕೊಡಬೇಕಾಯಿತು.

"ಊರಿಗೇ ಬ್ಯಾಡಾಗಿದ್ದನರಿ ಆ ಪಡದಯ್ಯ. ಅಂವಾ ಇದ್ದ ಊರಾಗ ಸಂಭಾವಿತರು ಸುಖದಿಂದ ಬಾಳೇ ಮಾಡೂದಽ ಸಾಧ್ಯ ಇಲ್ಲರಿ. ಅಂತಾವಗ ಹೀಗ ಆಗೂದಽ ಪಾಡ. ಅಂವಾ ಅಂತಾ ಕೆಲಸಾ ಮಾಡಿದ್ದಾ ಅಂತಽ ಊರ ಜನರೆಲ್ಲ ರೊಚ್ಚಿಗೆದ್ದರು. ಜನಕ್ಕಂಜಿ ಊರು ಬಿಟ್ಟ. ಅಂದಿನಿಂದಽ ಮಠದ ಅಧಿಕಾರಾನಽ ಕಳಕೊಂಡಾನ. ದಾದಾ ಮಾಡಿದ್ದರಾಗ ಏನೂ ತಪ್ಪಿಲ್ಲ ತಗೀರಿ" ಎಂದು ವಾದಿಸಿದರು.

ಏನೇ ಇದ್ದರೂ ದಾದಾ ಕಾಯದೆಯ ದೃಷ್ಟಿಯಿಂದ ತಪ್ಪಿತಸ್ಥನೇ ಎಂದು ಸಾಹೇಬರ ಅಭಿಪ್ರಾಯವಾಗಿತ್ತು. ಪಡದಪ್ಪ ಮಠಕ್ಕೆ ಕೂಡುವ ಅಧಿಕಾರವನ್ನು ಕಳೆದುಕೊಂಡಿದ್ದರೆ, ಅವನನ್ನು ಹೊರದೂಡುವ ಅಧಿಕಾರವನ್ನು ಕೋರ್ಟಿನಿಂದ ಪಡೆಯಬೇಕಾಗಿತ್ತು. ಅದನ್ನು ಬಿಟ್ಟು ಅವನ ಮೇಲೆ ಮುಗಿಬಿದ್ದದ್ದು ಶುದ್ಧ ಪುಂಡತನ. ಅಂಥ ಪುಂಡಾಟಿಕೆಗೆ ಯೋಗ್ಯ ಶಾಸನವಾಗಲೇಬೇಕು ಎಂದು ನಿಷ್ಠುರವಾಗಿ ಗಿಬ್ಸನ್‌ಸಾಹೇಬರು ಪ್ರತಿವಾದಿಸಿದರು.

"ಕಾಯದೆ ಹ್ಯಾಂಗ ಹೇಳ್ತದೋ ಹಾಂಗ ಸಾಕ್ಷಿ ಪುರಾವೆ ತೊಗೊಂಡು ಶಿಕ್ಷಾ ಕೊಡೋ ಮಾತು ಈಗ ಯಾಕ?" ಎಂದು ಮಹಾರಾಜರು ಹೇಳಿ ಆ ವಾದವನ್ನು ಅಲ್ಲಿಗೇ ನಿಲ್ಲಿಸಿದರು. ಕೆಲಹೊತ್ತು ಎಲ್ಲರೂ ಮೌನವಾಗಿದ್ದರು. ಮಹಾರಾಜರೇ ಮತ್ತೆ ಆ ಮೌನವನ್ನು ಮುರಿದು, ನಿನ್ನೆಯ ಬೇಟೆಯ ಸಂಗತಿಗಳ ಬಗ್ಗೆಯೇ ಬಿಚ್ಚುಮನಸ್ಸಿನಿಂದಲೇ ಹರಟೆ ಹೊಡೆಯುತ್ತಿದ್ದರು. ಸಾಹೇಬರು ಸ್ವಲ್ಪ ಹೊತ್ತಿನ ಮೇಲೆ ಪ್ರಸನ್ನರಾದರು. ಅಂದು ಸಾಯಂಕಾಲ ಮಹಾರಾಜರ ಸತ್ಕಾರಸಭೆ ನಡೆಯುವದಿತ್ತು. ಹಾದಳ್ಳಿಯ ರೈತರು ತಮ್ಮ ಹೊಸ ಅಧಿಪತಿಗಳಿಗೆ

ಗೌರವ ಸಲ್ಲಿಸಲೆಂದು ಈ ಸಭೆಯನ್ನು ಕರೆದಿದ್ದರು. ಯಶವಂತರಾಯರು ಆ ಸಭೆಗೆ ಬರಲು ಗಿಬ್ಸನ್‌ಸಾಹೇಬರಿಗೂ ಆಮಂತ್ರಣವಿತ್ತರು. ಸಾಹೇಬರು ಅದನ್ನು ಕೃತಜ್ಞತೆಯಿಂದ ಸ್ವೀಕರಿಸಿ, ಮಹಾರಾಜರಿಗೆ ವಂದನೆ ಸಲ್ಲಿಸಿ ಅಲ್ಲಿಂದೆದ್ದರು. ಬೆಳಗಿನಿಂದಲೂ ಅವರ ಮನಸ್ಸು ವಿಚಾರಗಳ ಹೊಡೆತಕ್ಕೆ ಸಿಕ್ಕು ಗಾಸಿಯಾಗಿತ್ತು. ಅದು ಬಿಡುವನ್ನೇ ಕಂಡಿರಲಿಲ್ಲ.

ಅಂದು ಮಧ್ಯಾಹ್ನ ದಾದಾ ಆರೋಪಿಯಾಗಿ ಮತ್ತೆ ಸಾಹೇಬರೆದುರು ನಿಂತ. ಸಾಹೇಬರು ಆದಷ್ಟು ತೀಕ್ಷ್ಣವಾಗಿಯೇ ವಿಚಾರಣೆ ನಡೆಸಿದರು. ದಾದಾ ತಾನು ಹೇಳಬೇಕಾದದ್ದನ್ನೆಲ್ಲ ಹೇಳಿದ. ಆದರೆ ಪಡದಪ್ಪನವರ ಫಿರ್ಯಾದಿಯನ್ನು ಸಮರ್ಥಿಸಿ– ಸಾಕ್ಷಿ ಹೇಳಲು ಒಂದು ಪಿಳ್ಳೆಯೂ ಪಾದಳ್ಳಿಯಲ್ಲಿ ಸಿದ್ಧವಿರಲಿಲ್ಲ. ಪಡದಪ್ಪನವರ ಬೆನ್ನು ಕಟ್ಟಲು ಒಬ್ಬರೂ ಪಾದಳ್ಳಿಯಲ್ಲಿ ಇಲ್ಲದ್ದನ್ನು ಕಂಡು ಸಾಹೇಬರಿಗೆ ಅಚ್ಚರಿಯೆನಿಸಿತು. ಪಡದಪ್ಪನವರ ಫಿರ್ಯಾದಿಯಲ್ಲಿ ಹೇಳಿದ ಮಾತಿಗೆ ದಾದಾನ ಕಬೂಲಿಜವಾಬ ಒಂದನ್ನು ಬಿಟ್ಟರೆ ಬೇರೆ ಸಾಕ್ಷಿಗಳಿಲ್ಲದಿರುವಾಗ ದಾದಾನಿಗೆ ಶಿಕ್ಷೆಯನ್ನು ವಿಧಿಸುವ ದಾರಿಯೇ ಸಾಹೇಬರಿಗೆ ಕಾಣದಾಯಿತು.

ಆದರೆ ಕರ್ತವ್ಯವನ್ನು ನಿರ್ವಹಿಸಲೇಬೇಕಾಗಿತ್ತು. ಚೌಕಶಿ ನಡೆಸಿದ ಮೇಲೆ ನಿರ್ಣಯವನ್ನು ಹೇಳುವದು ಕ್ರಮಪ್ರಾಪ್ತವಾಗಿತ್ತು. ಪಡದಪ್ಪನವರು ಮೂಲ ಪಟ್ಟದ ಅಧಿಕಾರಿಗಳು; ಅಂದಮೇಲೆ ಅವರಿಗೆ ಮಠದಲ್ಲಿರಲು ಸಂಪೂರ್ಣ ಸ್ವಾತಂತ್ರ್ಯವಿರಬೇಕು. ಅವರನ್ನು ಯಾರೂ ಆತಂಕಪಡಿಸಲಾಗದೆಂದು ಸಾರುವ ಆಜ್ಞೆಯನ್ನು ಸಾಹೇಬರು ಹೊರಡಿಸಿದರು. ದಾದಾ ನಿರ್ದೋಷಿಯಲ್ಲ; ತನ್ನ ಬೇಕಾಯದೇಶೀರ ವರ್ತನವನ್ನು ತಾನೇ ಒಪ್ಪಿಕೊಂಡಿದ್ದ. ಆದರೆ ಇನ್ನೂ ಎಳೆ ವಯಸ್ಸಿನ ತರುಣನಾದ್ದರಿಂದ ಅವನ ಅಪರಾಧವನ್ನು ಕ್ಷಮಿಸಿಬಿಡಬೇಕು. ಈ ನಿರ್ಣಯ ಸಾಹೇಬರ ಆತ್ಮಸಾಕ್ಷಿಗೆ ಒಪ್ಪಿದುದಾಗಿತ್ತು. ಅಂತೂ ಒಂದು ಗುರುತರವಾದ ಕರ್ತವ್ಯವನ್ನು ಕೊನೆಗಾಣಿಸಿದ ತೃಪ್ತಿ ಅವರಿಗಾಯಿತು.

ಸಾಹೇಬರ ಮನಸ್ಸು ಈ ಪ್ರಕರಣದಿಂದ ಇನ್ನೂ ಬಿಡುಗಡೆಯನ್ನು ಪಡೆದಿರಲಿಲ್ಲ. ದಾದಾನ ವಿರುದ್ಧವಾಗಿ ಸಾಕ್ಷಿಗಳೇಕೆ ಹುಟ್ಟಲಿಲ್ಲ? ಪಡದಪ್ಪನವರ ಫಿರ್ಯಾದಿ ನ್ಯಾಯವಾಗಿರುವಾಗ ಅವರ ಬೆಂಬಲಕ್ಕೆ ಯಾರೂ ನಿಲ್ಲಲಿಲ್ಲವೇಕೆ? ವಿಚಾರ ಮಾಡಿದಂತೆ ಸಾಹೇಬರಿಗೆ ಇನ್ನೂ ಆಳಕ್ಕಿಳಿಯಬೇಕೆಂದು ಮನಸ್ಸಾಯಿತು. ಈ ಪ್ರಕರಣದ ಪೂರ್ವಾಪರಗಳನ್ನು ಲೆಕ್ಕ ಹಾಕತೊಡಗಿದರು.

ಲಿಂಗಪ್ಪನ ವಾರಸಾದ ತೊಡಕೂ ಈ ಪ್ರಕರಣದಲ್ಲಿ ಮಹತ್ವದ ಭಾಗವಾಗಿತ್ತು. ಬಹುಶಃ ಪಾರ್ವತೆವ್ವನ ಪಕ್ಷದವರೇ ಯಾರೂ ಸಾಕ್ಷಿ ಹೇಳದಂತೆ ಬೆದರಿಕೆ ಹಾಕಿರಬೇಕೆಂದು ಸಾಹೇಬರಿಗೆ ಮನವರಿಕೆಯಾಯಿತು. ಪಾದರಸದಂಥ ಅವರ ಬುದ್ಧಿ ಕೂಡಲೆ ಕಾರ್ಯರಂಗಕ್ಕೆ ಇಳಿಯಿತು.

ಲಿಂಗಪ್ಪನ ವಾರಸಾ ಅಪೀಲಿನ ಚೌಕಶಿ ನಡೆಯಿತು. ಹಿಂದಕ್ಕೆ ಪಾರ್ವತೆವ್ವ ಶ್ಯಾಮರಾಯನ ವಿರುದ್ಧ ಕೊಟ್ಟ ಅರ್ಜಿಗೆ ಸಹಿ ಹಾಕಿದ್ದ ತಪ್ಪನ್ನು ಸಾಹೇಬರು ಇನ್ನೂ ಮರೆತಿರಲಿಲ್ಲ. ಲಿಂಗಪ್ಪನ ಪ್ರಕರಣದ ಹಿಂದೆಯೂ ಇಂಥ ಮೋಸ ನಡೆದಿರಲಾರದೆಂದು ಹೇಗೆ ಹೇಳಬೇಕು? ಈಗ ಪಾರ್ವತೆವ್ವನಂತೆಯೇ ನಿರ್ಣಯ ಹೇಳಿದರೆ ಪುಂಡಾಟಿಕೆಗೆ ಇನ್ನೂ ಅವಕಾಶ ದೊರೆಯುವಂತಾಗುವದಿಲ್ಲವೇ? ಆದ್ದರಿಂದ ಗಿಬ್ಸನ್‌ಸಾಹೇಬರು ಶಂಕರಪ್ಪಗೌಡರ ವಾರಸಾ ಹಕ್ಕು ಅವರ ಮೊದಲನೆಯ ಹೆಂಡತಿಯ ಹೊಟ್ಟೆಯಲ್ಲಿ ಹುಟ್ಟಿದ ಹಿರಿಯಮಗನಾದ ಲಿಂಗಪ್ಪನಿಗೇ ಸಲ್ಲಬೇಕೆಂದು ಮಾಮಲೇದಾರರು ಕೊಟ್ಟ ನಿರ್ಣಯವನ್ನೇ ಎತ್ತಿ ಹಿಡಿದರು.

ಅಪೀಲ ಅರ್ಜಿಯ ಜೊತೆಯಲ್ಲಿ ಲಿಂಗಪ್ಪನ ಜನನ ಉತಾರವನ್ನು ಹಾಜರಪಡಿಸಲಾಗಿತ್ತು. ಅದರ ಪ್ರಕಾರ ಲಿಂಗಪ್ಪನ ತಂದೆಯ ಹೆಸರು ಶಂಕರೆಪ್ಪನೆಂದಿದ್ದರೂ ಜಾತಿ ಕುರುಬರ ಎಂದೇ ಇತ್ತು. ಅಂದಮೇಲೆ ಅವನು ಅಜರಾಣಿಯ ಕುರುಬರ ಶಂಕರಪ್ಪನ ಮಗನೆಂದು ಸಿದ್ಧವಾಗುವದೆಂಬ ವಾದವನ್ನು ಸಾಹೇಬರು ಲಕ್ಷ್ಯಕ್ಕೇ ತರಲಿಲ್ಲ. ಅದು ಅವರಿಗೆ ಅನಗತ್ಯವೆಂದೇ ಕಂಡಿತು. ಶಂಕರೆಪ್ಪಗೌಡರು ತಮ್ಮ ಮೊದಲನೆಯ ಹೆಂಡತಿ ಗಿರಿಯವ್ವನಿಗೆ ಸೋಡಚೀಟಿ ಕೊಡುವದಕ್ಕಿಂತ ಮೊದಲೇ ಲಿಂಗಪ್ಪ ಹುಟ್ಟಿರಬೇಕೆಂದೇ ಅವರ ಭಾವನೆ. ಗಿಬ್ಸನ್‌ಸಾಹೇಬರ ಮನಸ್ಸು ಯಾರ ವಾದವನ್ನೂ ಒಪ್ಪುವ ಸ್ಥಿತಿಯಲ್ಲಿ ಇರಲಿಲ್ಲ. ಪಾರ್ವತೆವ್ವನ ಅಪೀಲು ಕಿತ್ತಿ ಹೋಯಿತು. ಲಿಂಗಪ್ಪನಿಗೇ ವಾರಸಾಹಕ್ಕು ಸಲ್ಲುವದು ಕ್ರಮಪ್ರಾಪ್ತವೆಂದು ನಿರ್ಣಯ ಹೇಳಿಬಿಟ್ಟರು.

ಈ ಎರಡೂ ನಿರ್ಣಯಗಳು ಪಾದಳ್ಳಿಯ ಜೀವನವನ್ನೇ ಬೇರೆ ದಿಕ್ಕಿಗೆ ತಿರುಗಿಸಿದವು. ಮಠದಲ್ಲಿ ಪಡೆಪ್ಪನವರಿರುವದು ಯಾರಿಗೂ ಬೇಕಾಗಿರಲಿಲ್ಲ. ಅವರ ದೈವಗತಿಯನ್ನು ತಪ್ಪಿಸಲಾಗದೆಂಬಂತೆ ಅವರೇ ಮತ್ತೆ ಅಧಿಕಾರಿಗಳಾದರು. ಮಠ ಬರಿದಾಗಿದ್ದರೂ ಜನರು ಅವನ್ನು ಸಹಿಸಿಕೊಂಡಿರಬಹುದಾಗಿತ್ತು. ಅವರ

ಪೀಡೆ ತೊಲಗಿದಂತೆ ಊರು ಬಿಟ್ಟು ಹೋದ ಪಡದಪ್ಪನವರು ತಿರುಗಿ ಬಂದ
ಮತ್ತಾವ ಕಾಯಕವನ್ನು ಹೂಡಲಿರುವರೋ ಎಂದು ಜನ ಭಯಗ್ರಸ್ತರಾದರು.
ಪಾದಳ್ಳಿಯ ಗೌಡರ ಮನೆತನಕ್ಕೂ ಅಜರಾಣಿಯ ಲಿಂಗಪ್ಪನಿಗೂ ಯಾವದು
ಸಂಬಂಧವಿಲ್ಲವೆಂಬ ಮಾತು ಸೂರ್ಯಪ್ರಕಾಶದಂತೆ ಸ್ಪಷ್ಟವಾಗಿತ್ತು. ಆದ
ಕಾಯದೆಯ ಪ್ರಕಾರ ಅವನೇ ಗೌಡನಾದ. ಶಂಕರಪ್ಪಗೌಡರು ಸಾಯುವಾಗ
ಊರವರೆಲ್ಲ ಅವರ ಮನೆತನದ ಪ್ರತಿಷ್ಠೆಯನ್ನು ಕಾಯುವ ಹೊಣೆ ಹೊತ್ತಿದ್ದರು
ಆದರೆ ನಡೆದ ಸಂಗತಿ ವಿಪರೀತವಾಗಿತ್ತು.

ಈ ಎರಡೂ ನಿರ್ಣಯಗಳು ಜನರ ಪವಿತ್ರ ಭಾವನೆಯನ್ನೆ ಹೊಲೆಗೆಡಿಸು
ವಂತಿದ್ದವು. ಜೀವನವೇ ಕೈಮೀರಿ ಹೋಗುತ್ತಿರುವಂತೆ ಕಂಡಿತು. ಯಾವುದೋ
ಅನಿಷ್ಟ ದೈವ ಮಳೆಗಾಲದಲ್ಲಿ ನೆರೆಬಂದ ನದಿಯಂತೆ ಕೊಚ್ಚಿಕೊಂಡು ಬಂದಿತ್ತು.
ಅದರೆದುರು ಯಾವ ಶಕ್ತಿಯೂ ನಿಲ್ಲಲಾರದೇನೋ! ಜೀವನ ದಂಡೆಯ ಮಣ್ಣಿ
ನಂತೆ ಸಡಿಲಾಗಿ ಉದುರುತ್ತಿತ್ತು; ನೀರಾಗಿ ಹೋಗುತ್ತಿತ್ತು. ತುಂಬಿದ ನದಿಯನ್ನು
ಈಸಿದ ಬಾಳಾಚಾರ್ಯರಂಥವರೂ ಈ ಸುದ್ದಿಯನ್ನು ಕೇಳಿ ಹತಾಶರಾಗಿದ್ದರು.

:: ೩೫ ::

ಆ ರಾತ್ರಿ ಸತ್ಕಾರ ಸಭೆಮುಗಿದು ಬಾಳಾಚಾರ್ಯರು ತಿರುಗಿ ಮನೆಗೆ
ಹೊರಟಾಗ ಹತ್ತುಗಂಟೆಯ ಮೇಲಾಗಿತ್ತು. ಸಭೆಯಲ್ಲಿ ನಡೆದ ಘಟನೆಗಳನ್ನೆಲ್ಲ
ಆಚಾರ್ಯರು ಮೆಲುಕುಹಾಕಹತ್ತಿದ್ದರು. ರೈತರು ಮಹಾರಾಜರಿಗೆ ತೋರಿಸಿದ
ಗೌರವ ಹೃದಯಸ್ಪರ್ಶಿಯಾಗಿತ್ತು; ಮಹಾರಾಜರ ಹಾಗೂ ಗಿಬ್ಸನ್‌ಸಾಹೇಬರ
ಭಾಷಣಗಳು ಅವರವರ ದೊಡ್ಡಸ್ತಿಕೆಗೆ ಒಪ್ಪುವಂತಿದ್ದವು.

ಆದರೆ ಎಲ್ಲಕ್ಕಿಂತ ಮಹತ್ವದ ಘಟನೆಯೊಂದು ನಡೆದುಹೋಗಿತ್ತು.
ಮಧ್ಯಾಹ್ನ ನಡೆದ ಚೌಕಶಿಯಲ್ಲಿ ದಾದಾ ಬಿಡುಗಡೆಹೊಂದಿದ್ದರೂ ಊರವರಿಗೆಲ್ಲ
ಅವನ ಬಗ್ಗೆ ಅಸಮಾಧಾನವಾಗಿತ್ತು. ಮೇಲಾಗಿ ಇನ್ನುಮೇಲೆ ಅವನ ದುಡುಕು
ಹೆಚ್ಚಾಗಬಹುದೆಂದು ಭೀತಿಯೂ ಇತ್ತು. ಪಡದಪ್ಪನವರು ಪಾದಳ್ಳಿಯಲ್ಲಿ

ಶಾಶ್ವತವಾಗಿ ನೆಲೆಸಲಿಕ್ಕೇ ತಿರುಗಿ ಬಂದವರಾಗಿದ್ದರು. ಅಂದಮೇಲೆ ಅವರಿಬ್ಬರಿಗೂ ಹತ್ತಿದ ಜಗಳ ಹರಿಯದಿದ್ದರೆ ಹೇಗೆ? ಲಿಂಗಪ್ಪನ ವಾರಸಾ ಕಾಯಂ ಆಗಿತ್ತು. ಇಂಥ ವಿಷಮಪರಿಸ್ಥಿತಿ ಹೊತ್ತಿಸಿದ ಅಗ್ನಿಕುಂಡದಲ್ಲಿ ದಾದಾ ಸಹಜವಾಗಿ ಬಲಿಯಾಗಬಹುದಿತ್ತು. ಅವನು ಇದರಿಂದ ಹೇಗಾದರೂ ಪಾರಾದರೆ ಸಾಕೆಂದು ಎಲ್ಲರಿಗೂ ಅನಿಸಿತ್ತು. ಅನಾಯಾಸವಾಗಿಯೇ ಆ ಯೋಗ ಒದಗಿ ಬಂದಿತ್ತು.

ಕುದುರೆಯ ಮೇಲಿಂದ ತಮ್ಮನ್ನು ಪಾರುಮಾಡಿದ್ದಾಗಲೇ ಮಹಾರಾಜರು ದಾದಾನ ಮೇಲೆ ಕೃಪಾಕಟಾಕ್ಷವನ್ನು ಬೀರಿದ್ದರು. ಅವನ ಅಂಗಸೌಷ್ಠವ, ಅವನ ಅಸಾಮಾನ್ಯ ಶಕ್ತಿಗಳಿಂದಂತೂ ಅವರು ಆಕರ್ಷಿತರಾಗಿದ್ದರು. ಮಹಾರಾಜರಿಗೆ ಕುಸ್ತಿಯ ಗಡಿಗಳೆಂದರೆ ಪ್ರಾಣ; ದಾದಾ ಹೆಸರಾಂತ ಕುಸ್ತಿಗಡಿಯಾಗಿದ್ದ. ಮಹಾರಾಜರು ಇಲ್ಲಿರುವಾಗ ಅವರ ಹತ್ತಿರವೇ ಅಡ್ಡಾಡಿದಾಗ ದಾದಾನ ಸ್ವಭಾವದ ಪರಿಚಯವೂ ಅವರಿಗೆ ಸಾಕಷ್ಟಾಗಿತ್ತು. ಏನಾದರೂ ಮಾಡಿ ದಾದಾನನ್ನು ತಮ್ಮ ಜೊತೆಗೆ ಕರೆದೊಯ್ಯಬೇಕೆಂದು ಅವರ ಅಭಿಲಾಷೆಯಾಗಿತ್ತು. ಅದು ನೆರವೇರುವದಕ್ಕೆ ಅವನ ಮೇಲೆ ಆರೋಪ ಬಂದದ್ದೂ ಒಂದು ಕಾರಣವಾಗಿತ್ತು.

ಅವನು ಮಹಾರಾಜರ ಜೊತೆಗೆ ಹೋದರೆ ಪಾದಳ್ಳಿಯಲ್ಲಿದ್ದುಕೊಂಡು ಗೋಳಾಡುವದು ತಪ್ಪಬಹುದೆಂದು ಭಾವಿಸಿದ ಬಾಳಾಚಾರ್ಯರು ಈ ವಿಚಾರಕ್ಕೆ ಅನುಮತಿಯನ್ನಿತ್ತರು. ದಾದಾನೂ ಆನಂದದಿಂದ ಒಪ್ಪಿದ್ದ. ಆದರೆ ಲಕ್ಷ್ಮಣನನ್ನು ಒಪ್ಪಿಸುವದೇ ಬಿಗಿಯಾಗಿತ್ತು. "ಒಬ್ಬನsss ಮಗಾರಿ. ಅವನ್ನ ಬಿಟ್ಟು ಇರಾಕ ಮನಸ್ಸು ಹ್ಯಾಂಗ ಬಂದೀತರಿ? ನನಗರೆ ಅವನ್ನ ಬಿಟ್ಟು ಯಾರದಾರ್ರಿ?" ಎಂದು ಗೋಳಾಡಿದ. ಬಾಳಾಚಾರ್ಯರು ಅವನಿಗೆ ಪರಿಪರಿಯಿಂದ ಸಮಾಧಾನ ಹೇಳಬೇಕಾಯಿತು. "ನಿನಗ ಇಲ್ಲೆ ಇರೂದು ಆಗದಿದ್ದರ ನಮ್ಮೂರಿಗೆ ಬಾ. ಅಲ್ಲೇ ಕಮತಾ ಕಟ್ಟಿ ನೋಡಿಕೊಂತ ಇರಾಕ ಬಂದೀತು." ಎಂದು ಯಶವಂತರಾಯರು ಹೇಳಿ ಅವನ ತಾಪವನ್ನು ಕಡಿಮೆಮಾಡಿದ್ದರು.

ಅಂತೂ ಒಂದು ದೃಷ್ಟಿಯಿಂದ ದಾದಾನ ಸಮಸ್ಯೆ ಬಗೆಹರಿದಂತಾಗಿತ್ತು. ಆದರೆ ಪಾದಳ್ಳಿಯ ತೊಡಕು ಮಾತ್ರ ಬಗೆಹರಿಯುವ ಲಕ್ಷಣ ಕಾಣುತ್ತಿರಲಿಲ್ಲ. ದಾದಾನನ್ನು ಪಾದಳ್ಳಿಯ ಕಾಣಿಕೆಯೆಂದು ಒಪ್ಪಿಸುತ್ತೇವೆಂದು ಆಚಾರ್ಯರು ಮಹಾರಾಜರಿಗೆ ನುಡಿದಿದ್ದರು. ಅದರ ಬದಲಾಗಿ ಪಾದಳ್ಳಿಯ ಸ್ಥಿತಿಗತಿಗಳು

ಚೆನ್ನಾಗಿರುವಂತೆ ಮಹಾರಾಜರು ನೋಡಬೇಕೆಂಬುದೇ ಅವರ ಅಭಿಲಾಷೆಯಾಗಿತ್ತು. ಮಹಾರಾಜರು ಆನಂದದಿಂದ ಈ ಮಾತಿಗಂತೂ ಒಪ್ಪಿದ್ದರು. ಸತ್ಕಾರ ಸಭೆಯಲ್ಲಿ ಉತ್ತರರೂಪವಾಗಿ ಹಾಗೆ ವಚನವನ್ನೂ ಕೊಟ್ಟಿದ್ದರು.

ಆದರೂ ಆಚಾರ್ಯರಿಗೆ ಪಾದಳ್ಳಿಯ ದುಃಖ ಮುಗಿಯುವಂತೇನೂ ತೋರಲಿಲ್ಲ. ಈ ಐದಾರು ದಿನಗಳಲ್ಲಿ ನಡೆದ ಘಟನೆಗಳು ಸತ್ಯವನ್ನೇ ವಿಪರ್ಯಾಸಗೊಳಿಸುವಷ್ಟು ಭೀಕರವಾಗಿದ್ದವು. ಮಠದ ಭವಿತವ್ಯ ಶುಭವಾಗಬಹುದೆಂದು ಭಾವಿಸಿದ್ದರೆ ಪಡದಯ್ಯ ಮತ್ತೆ ಬಂದು ಕುಳಿತಿದ್ದ. ಅವನ ಪಾಪದ ನೆರಳನಿಂದ ಪಾದಳ್ಳಿಯ ಜೀವನ ಕಪ್ಪಾಗುವದಿತ್ತು. ಒಂದು ಕಡೆಗೆ ನಿಲ್ಲದೆ ಹರಿಯುವ ನೀರಿನಂತೆ ಆಚಾರ್ಯರಿಗೆ ಈ ಜೀವನ ಕಂಡಿತ್ತು. ಈ ಕ್ಷಣಕ್ಕೆ ತಿಳಿಯಾಗಿ ಹರಿಯುವ ನೀರು ಮರುಗಳಿಗೆಗೇ ರಾಡಿಯಾಗುವದನ್ನು ಅವರು ಕಂಡಿದ್ದರು. ಅದರಂತೆಯೇ ಜೀವನ ಈಗ ಮತ್ತೆ ದೂಷಿತವಾಗತೊಡಗಿತ್ತು.

ಎಲ್ಲಕ್ಕಿಂತ ದುಃಖಪ್ರದವಾದ ಸಂಗತಿಯೆಂದರೆ ಗೌಡರ ಮನೆತನದ ಭವಿತವ್ಯ. ಶಂಕರಪ್ಪಗೌಡರ ಮನೆತನಕ್ಕೆ ಈ ಕಲಂಕ ಹತ್ತುವದು ಯಾರಿಗೂ ಬೇಕಾಗಿರಲಿಲ್ಲ. ಪಾರ್ವತೆವ್ವ ಎಷ್ಟೇ ಊರವರ ವಿರೋಧವನ್ನು ಕಟ್ಟಿಕೊಂಡಿದ್ದರೂ ಅವಳು ಊರಿಗೆ ಬೇಡವಾಗಿರಲಿಲ್ಲ. ಶಂಕರಪ್ಪ ಸಾಯುವ ಮುನ್ನವೇ ಈ ಭೀತಿಯ ನೆರಳು ಅವನ ವಂಶದ ಮೇಲೆ ಬಿದ್ದಿತ್ತು. ಅದಕ್ಕೂ ಈ ಪಡದಯ್ಯನೇ ಕಾರಣನಾಗಿದ್ದ. ನಾನಾನ ಮರಣ, ಚಿಮಣಾಳ ಅಪಮಾನ, ಊರಲ್ಲಿ ಕೊಲೆ ಸುಲಿಗೆಗಳು ಇವೆಲ್ಲವೂ ಪಡದಯ್ಯನ ನೇತೃತ್ವದಲ್ಲಿಯೇ ಸಾಗಿದ್ದವು. ಈ ಸಂಗತಿಗಳಾವೂ ರಹಸ್ಯವಾಗಿರಲಿಲ್ಲ. ಆದರೆ ದುಷ್ಟಶಕ್ತಿಯ ವಿರುದ್ಧ ಹೋರಾಡಲು ಯಾರಿಗೂ ಶಕ್ತಿಯಿಲ್ಲದಂತಾಗಿತ್ತು. ದಾದಾ ಹುಂಬತನದ ರೀತಿಯಲ್ಲೇ ಹೋರಾಡಿದ್ದ. ಅದರ ಫಲವಾಗಿ ಅವನೇ ಊರು ಬಿಟ್ಟು ಹೋಗುವಂತಾಗಿತ್ತು. ಸ್ವತಃ ತಾವು ಹೋರಾಡಿದ್ದರು. ಆದರೆ ಅದೆಲ್ಲ ನೆರಳಿನೊಡನೆ ಗುದ್ದಾಡಿದಂತಾಗಿತ್ತು.

ಆಚಾರ್ಯರಿಗೆ ತಮ್ಮ ದೌರ್ಬಲ್ಯದ ಅರಿವು ಸಾಕಷ್ಟಿತ್ತು. ತಮ್ಮ ಶಕ್ತಿ ಪಾದಳ್ಳಿಯ ಮೇಲೆ ಅಧಿಕಾರ ನಡೆಸುವಂಥದಲ್ಲ. ಶೇಷಪ್ಪನ ಕಾಯದೆಜ್ಞಾನವಾಗಲಿ, ಶಂಕರಪ್ಪಗೌಡರ ಅಧಿಕಾರಯುತ ದರ್ಪವಾಗಲಿ ಅವರಿಗಿರಲಿಲ್ಲ. ಕನ್ನಡ ಲಿಪಿಯನ್ನೋದಲೂ ಕೂಡ ಬಾರದಷ್ಟು ಅವರ ವಿದ್ಯೆ ಪರಿಮಿತವಾಗಿತ್ತು. ಹೇಳಿಕೇಳಿ ವೈದಿಕಬ್ರಾಹ್ಮಣ; ಸನಾತನವಾದ ಧರ್ಮದಲ್ಲಿ ಶ್ರದ್ಧೆಯಿತ್ತೆಂದು

ಜನ ತಮ್ಮನ್ನು ಗೌರವಿಸುತ್ತಿದ್ದರು. ಇಲ್ಲದಿದ್ದರೆ ತಮಗೇನು ಬೆಲೆ? ಊರ ಪೈವಪವರಲ್ಲಿ ಅವರೂ ಒಬ್ಬ ಸದಸ್ಯರಾಗಿದ್ದರು; ಶಂಕಪ್ಪಗೌಡರಿರುವತನಕ ಅವರ ಮಾತು ನಡೆಯುತ್ತಿತ್ತು. ಆದರೆ ಈಗ ತಾವು ಯಾರಿಗೂ ಬೇಕಾಗಿರಲಿಲ್ಲ. ಮಹಾರಾಜರು ತಮಗೆ ತೋರಿದ ಗೌರವ ಪ್ರಾಮಾಣಿಕವಾಗಿಯೇ ಇತ್ತು. ಆದರೆ ಒಬ್ಬ ಸಚ್ಛೀಲ ಬ್ರಾಹ್ಮಣನೆಂದು ಮಾತ್ರ ತಮಗೆ ಆ ಮರ್ಯಾದೆ ಸಂದಿತ್ತು.

ಇಷ್ಟು ಗೊತ್ತಿದ್ದೂ ತಾವು ಈ ವ್ಯವಹಾರದಲ್ಲಿ ಕೈಹಾಕಿದ್ದೇಕೆ? ಆಚಾರ್ಯರಿಗೆ ತಾವು ಮಾಡಿದ್ದೆಲ್ಲ ಅಧಿಕಪ್ರಸಂಗವೆನಿಸಿತು. ಮೊದಮೊದಲು ತಾವೆಲ್ಲ ಕೂಡಿ ಮಾಡಿದ್ದ ಅನ್ಯಾಯಗಳಿಗೆ ಲೆಕ್ಕ ಉಂಟೇ? ಆ ಪಾಪಕ್ಕೆಲ್ಲ ಪ್ರಾಯಶ್ಚಿತ್ತವನ್ನು ಅನುಭವಿಸಲೇಬೇಕು. ಹೌದು ದುಃಖವನ್ನು ಅನುಭವಿಸಿಯೇ ಕಳೆದುಕೊಳ್ಳಬೇಕು. ಅಂದರೇ ಬಿಡುಗಡೆ ಸಾಧ್ಯ. ಈಗ ಶೇಷಪ್ಪ ತಾನೂ ಪ್ರಾಯಶ್ಚಿತ್ತವನ್ನು ಅನುಭವಿಸುವದಿಲ್ಲವೇ?

ಹುಲಿಬ್ಯಾಟಿ-ಹಳಬನೊಬ್ಬ ಹಿಲಾಲು ಹಿಡಿದುಕೊಂಡು ದಾರಿ ತೋರಿಸುತ್ತ ನಡೆದಿದ್ದ. ಮೂರು ತಾಸು ರಾತ್ರಿಯಾಗಿತ್ತು. ಮೇಲೆ ಜಿಟಿ ಜಿಟಿ ಮಳೆ, ನಡುವೆ ಜೆನ್ನೆಲುಬನ್ನೇ ಕೊರೆಯುವ ಗಾಳಿಯ ಸೆಳಕುಗಳು ಇವುಗಳಿಂದ ಹಿಲಾಲಿನ ಬೆಳಕಿನ ಕುಡಿ ಒದ್ದಾಡುತ್ತಿತ್ತು. ಆಚಾರ್ಯರು ಯಾಂತ್ರಿಕವಾಗಿಯೇ ವಾಡೆಯಿಂದ ತಮ್ಮ ಮನೆಗೆ ಸಾಗಿದ್ದರು. ಸತ್ಕಾರಸಭೆಯ ವಿವರಗಳೆಲ್ಲ ಅವರ ಸ್ಮೃತಿಪಥದಲ್ಲಿ ಮತ್ತೊಮ್ಮೆ ಸುಳಿದವು. ಮನಸ್ಸಿಗೆ ಯೋಚನೆಯಿಂದ ಬಿಡುಗಡೆ ಎಲ್ಲಿ? ಎಷ್ಟು ಬೇಡವೆಂದರೂ ವಿಚಾರಗಳು ದಾಳಿಯಿಡುತ್ತಿದ್ದವು. ಅವುಗಳ ಗೊಂದಲದಲ್ಲಿ ಏನು ಮಾಡಿದರೂ ಆತ್ಮಸತ್ವದ ಬೆಳಕು ಆರದಿರಲೆಂದು ಶ್ರಮಿಸಬೇಕಾಗಿತ್ತು. ಅನವರತವೂ ಎಚ್ಚರಿದ್ದೇ ಅದನ್ನು ಕಾಯಬೇಕಾಗಿತ್ತು. ಯಾವುದೋ ತೀವ್ರ ವಿರೋಧ ಯಾವುದೋ ತೀವ್ರ ಮೋಹ. ಆ ಬೆಳಕನ್ನು ನಂದಿಸಬಹುದಾಗಿತ್ತು. ಒಮ್ಮೊಮ್ಮೆ ಬತ್ತಿಯೇ ನಿಸ್ಸತ್ವವಾಗಿ ಬೆಳಗಲು ಒಲ್ಲೆನ್ನಬಹುದಾಗಿತ್ತು. ಈ ಜೀವನ ಮನುಷ್ಯನ ಅಂತಃಸತ್ವವನ್ನೇ ಪರೀಕ್ಷಿಸಲೆಂದು ನಿರ್ಮಿತವಾದ ಈಶ್ವರಮಾಯೆಯಿರಬೇಕೆಂದು ಆಚಾರ್ಯರಿಗೆ ಹೊಳೆಯಿತು.

ಆಚಾರ್ಯರು ಇದೇ ವಿಚಾರದಲ್ಲಿರುವಾಗಲೇ ಮನೆಯನ್ನು ಸಮೀಪಿಸಿದರು. ಮನೆಯಲ್ಲಿ ತಮ್ಮ ನಿತ್ಯ ಆಹ್ನಿಕವನ್ನು ಮುಗಿಸಿಕೊಂಡು ಪುನಃ ವಾಡೆಗೆ ತಿರುಗಿ ಹೋಗುವ ಅವಸರವಿತ್ತು. ಮಹಾರಾಜರು ಮರುದಿನವೇ ಊರು ಬಿಡುವವ

ರಿದ್ದದ್ದರಿಂದ ಅದರ ಸಿದ್ಧತೆಯಾಗಬೇಕಿತ್ತು. ಆಹ್ನಿಕವನ್ನು ಬೇಗ ಮುಗಿಸಿ ಹೋದರಾಯಿತೆಂದು ಮನೆಯೊಳಗೆ ಕಾಲಿಟ್ಟರು. ಅಷ್ಟರಲ್ಲಿಯೇ ತಮ್ಮ ಮನೆ ಯೊಳಗೆ ಹೆಣ್ಣುಮಗಳೊಬ್ಬಳು ಬಿಕ್ಕಿಬಿಕ್ಕಿ ಅಳುವದು ಆಚಾರ್ಯರ ಕಿವಿಗೆ ಬಿತ್ತು. ಆಚಾರ್ಯರು ಲಕ್ಷ್ಯಗೊಟ್ಟು ಆಲಿಸಿದರು; ದನಿಯು ಗುರುತು ಹತ್ತಿತು. "ಯಾರು? ತುಳಸಕ್ಕಾ, ಅಳೋವಂಥಾದೇನಾಗೇದವಾ?" ಎಂದು ಸಮಾಧಾನ ಕುತೂಹಲ ಗಳೆರಡನ್ನೂ ಬೆರೆಸಿ ಕೇಳಿದರು.

ಆಚಾರ್ಯರ ಪ್ರಶ್ನೆಯನ್ನು ಕೇಳಿದೊಡನೆ ಶೇಷಪ್ಪನ ಹೆಂಡತಿ ತುಳಸಕ್ಕನ ದುಃಖ ಕೋಡಿವರಿದು ಹರಿಯಲಾರಂಭಿಸಿತು. ಮಾತಾಡದೆ ಸುಮ್ಮನೆ ಹೆಚ್ಚು ಬಿಕ್ಕಿಸಿ ಅಳಹತ್ತಿದಳು. ಆಚಾರ್ಯರ ಪತ್ನಿಯೇ ಹೊರಗೆ ಬಂದರು. "ಪಾಪ, ಶೇಷಪ್ಪನ್ನ ನಿನ್ನೆ ರಾತ್ರೀನ ಚಾವಡಿಗೆ ಕರಕೊಂಡು ಹೋಗ್ಯಾರಂತ. ಇಂದ ಊಟಕ್ಕ ಸೈತ ಬಿಟ್ಟಿಲ್ಲ. ಅದೇನೋ ಮ್ಯಾಲಿನ ಸಾಹೇಬ ಜೇಲಿಗೇ ಕಳಿಸತೀನಿ ಅಂತ ಬೆದರಿಕೆ ಹಾಕ್ಯಾನಂತ. ಅದನ್ನ ಕೇಳಿ ಪಾಪ, ನಮ್ಮ ತುಳಸಿ, ಕೈಕಾಲ ಕಳಕೊಂಡು ಅತಗೋತ ಕೂತಬಿಟ್ಟಾಳ. ಏನಾದರೂ ಮಾಡಿ ಆ ಶೇಷಪ್ಪನ್ನ ಬಿಡುಗಡಿ ಮಾಡಸರಿ ಅಂತ ಕೇಳಲಿಕ್ಕೆ ಬಂದಾಳ" ಎಂದು ನಡೆದ ಸಂಗತಿಯನ್ನು ನಿವೇದಿಸಿ ಉತ್ತರಕ್ಕಾಗಿ ಅಲ್ಲಿಯೇ ಕಾಯ್ದು ನಿಂತರು.

ಆಚಾರ್ಯರ ಮುಖ ಗಂಭೀರವಾಯಿತು. ತಮ್ಮ ಪತ್ನಿಗೆ ಏನೂ ಉತ್ತರ ಹೇಳಲಿಲ್ಲ. ದೊಡ್ಡದಾದ ನಿಟ್ಟುಸಿರೊಂದು ಅವರ ವ್ಯಥೆಯ ಆಳದಿಂದಲೇ ಹೊರ ಬಿದ್ದಿತು. "ಎಲ್ಲಾ ಶ್ರೀಹರಿ ಇಚ್ಛಾ" ಎಂದಿಷ್ಟು ತಮಗೆ ತಾವೇ ಹೇಳಿಕೊಂಡರು. ಮರುಮಾತಾಡದೆ ಕಾಲು ತೊಳೆದುಕೊಂಡು, ಮಡಿಯುಟ್ಟು ಸಂಧ್ಯಾವಂದನೆಗೆ ಕುಳಿತರು.

ಆ ಅವಧಿಯಲ್ಲಿ ಯಾರೂ ಮಾತಾಡುವಂತಿರಲಿಲ್ಲ. ಶೇಷಪ್ಪನ ಹೆಂಡ ತಿಯೂ ಅಳುವದನ್ನು ನಿಲ್ಲಿಸಿದ್ದಳು. ನಿರೀಕ್ಷೆಯಿಂದ ತುಂಬಿದ ಮೌನ ಗಂಭೀರ ವಾಗಿತ್ತು. ಸಂಧ್ಯಾವಂದನೆ ಮುಗಿಯುವ ಹೊತ್ತಿಗೆ ಅವರ ಪತ್ನಿ ಉಪಾಹಾರದ ತಟ್ಟೆಯನ್ನು ಅವರೆದುರು ತಂದಿಟ್ಟರು. ಆಚಾರ್ಯರು ತಟ್ಟೆಯನ್ನು ಸರಿಸಿ, "ತುಳ ಸಕ್ಕಾ ನೀನೂ ಅಷ್ಟು ತೊಗೊಂಡು ನೀರು ಕುಡಿ" ಎಂದು ನುಡಿದರು.

"ಅವರಲ್ಲೆ ನರಳಿಕೋತ ಬಿದ್ದಾಗ, ನಾ ಬಾಯಾಗ ನೀರು ಹ್ಯಾಂಗ ಹಾಕಲಿ ಆಚಾರ? ನನ್ನ ಕಡಿಂದ ಸಾಧ್ಯ ಇಲ್ಲ. ಮುಂಜಾನಿಂದ ಉಪಾಸ ಇದ್ದಾರ."

ತುಳಸಕ್ಕ ಮತ್ತೆ ಬಿಕ್ಕಿದಳು.

"ಹೌದವಾ, ಸರಕಾರಿ ಅಮಲದಾರರು - ಅದರಾಗೂ ಇಂಗ್ರೇಜಿ ಸಾಹೇಬರು ಒಮ್ಮೆ ಮಾಡಿದ ಹುಕುಮು ತಿರಗಿ ತಕ್ಕೊಳ್ಳೂದಿಲ್ಲ. ಶೇಷಪ್ಪ ತನ್ನ ಕಾಲ ಮ್ಯಾಲೆ ತಾನs ಕಲ್ಲು ಹಾಕಿಕೊಂಡ್ಹಾಂಗಾಗೇದ. ಸುಮ್ಮನ ತನ್ನಷ್ಟಕ್ಕ ತಾ ಇದ್ದರ ಆಗತಿದ್ದಿಲ್ಲs? ನಾವೇನು ಮಾಡಲಿಕ್ಕಾದೀತು? ನೀನಾರೆ ತಿಳಿದಾಕಿ, ಆಗ ನಿನ್ನ ಗಂಡಗ ಬುದ್ಧಿ ಹೇಳಬಾರದಾಗಿತ್ತೇನವಾ? ಬಿತ್ತಿದ್ದು ಬೆಳಕೋಬೇಕಾಗತದ ನೋಡು. ಅವನ ಕರ್ಮಾ ಅವನ್ನ ಸುತ್ತಿಹಾಕಿಕೊಂಡದ. ಈಗ ನೀ ಉಪಾಸ ಬಿದ್ದರ ಅವಗ ಬಿಡುಗಡೆ ಆಗತಿದ್ದರ ಖುಶಾಲ ಮಾಡು" ಎಂದು ಸಮಾಧಾನ ಹೇಳಿದರು.ಆದರೆ ಇಷ್ಟು ಹೇಳಬೇಕಾದರೆ ತಮ್ಮ ಶಕ್ತಿಯನ್ನೆಲ್ಲ ವೆಚ್ಚಮಾಡಿ ತಮ್ಮ ಅಂತಃಕರಣವನ್ನು ಕಲ್ಲಾಗಿಸಿದ್ದರು.

ತುಳಸಕ್ಕನಿಗೆ ಆಚಾರ್ಯರ ವೇದಾಂತ ಬೇಕಾಗಿರಲಿಲ್ಲ. ಗಂಡನ ಬಿಡುಗಡೆ ಯಲ್ಲದೆ ಬೇರಾವುದೂ ಅವಳಿಗೆ ಸಮಾಧಾನ ತರುವಂತಿರಲಿಲ್ಲ. "ನೀವು ಹೇಳೋ ದೆಲ್ಲಾ ಖರೆ ಆಚಾರ....ಆದರ ನನಗ ಅವರ ಮಾರೀ ನೋಡದ ನೀರಕಾಳು ಗಂಟಲದಾಗ ಇಳೀದ್ಹಾಂಗ ಆಗೇದ. ಅಂತಃಕರಣಕ್ಕ ಬರೀ ಕೊಟ್ಟು ಅವರು ಹೋಧಾಂಗ ಆಗೇದ. ಅವರು ಹೀಂಗ ಆಗೂದು ನೋಡೂದಕ್ಕಿಂತಾ ದೇವರು ನನ್ನ ಕಣ್ಣು ಮುಚ್ಚಬಾರದಿತ್ತs?"

"ಸಾಕಮಾಡು ತುಳಸಕ್ಕಾ, ಅತ್ತರ ಏನ ಮಾಡಿದ್ಹಾಂಗಾತು? ಸುಮ್ಮಗ ಫಳಾರ ತೊಗೋ. ಇನ್ನೂ ಹುಡಿಗಿ, ಹೊಟ್ಟೀ ಕಟ್ಟಬಾರದು."

"ನಾ ಒಲ್ಲೆ ಆಚಾರ. ಮುದಲ ಅವರ್ನ ಕರಕೊಂಡು ಬರ್ರಿ. ನಿಮ್ಮ ಮಗಳಾ ಗಿದ್ದರ ಹೀಂಗs ಸುಮ್ಮಗs ಕೂತಗೋತಿದ್ದರೇನು?" ತುಳಸಕ್ಕ ಆಚಾರ್ಯರ ಅಂತಃಕರಣವನ್ನೇ ಕಲಕಿದಳು. ಆಚಾರ್ಯರ ಪತ್ನಿ ಇಷ್ಟೊತ್ತಿನ ವರೆಗೆ ಸುಮ್ಮ ನಿದ್ದವರು ಈಗ ಬಿಕ್ಕಿದರು. ಆಚಾರ್ಯರಿಗೆ ಪ್ರಾಣಸಂಕಟವೆನಿಸಿತು. ತಮ್ಮ ಪತ್ನಿಯ ದುಃಖದಾಳವನ್ನು ಅವರೊಬ್ಬರೇ ಬಲ್ಲರು. ತುಳಸಕ್ಕ ಇನ್ನೂ ಹುಡಿಗೆ, ತಮ್ಮ ಮಗಳೇಕೆ, ಮೊಮ್ಮಗಳಾಗಬಹುದಿತ್ತು. ಈ ದುಃಖದ ಕಡಲಿನಲ್ಲಿ ತಪ್ಪುಒಪ್ಪುಗಳೆಲ್ಲ ಮುಳುಗಿ ಪಾತಾಳ ಕಂಡಿದ್ದವು. ಇದೇ ಶೇಷಪ್ಪ, ಇದೇ ತುಳಸಕ್ಕ ಸಾವಿರ ಸಾರೆ ಆಚಾರ್ಯರ ಮನೆಗೆ ಬಂದು ಹೋಗಿದ್ದರು. ಒಂದೇ ಊರಿನಲ್ಲಿದ್ದುಕೊಂಡು ದಿನ ನಿತ್ಯ ಅವರ ಮುಖ ನೋಡುವದು ಅನಿವಾರ್ಯವಾಗಿತ್ತು. ಆದರೆ ಎಂದೂ ಈ

ಆತ್ಮೀಯತೆ ಈ ಕರುಳಿನ ಎಳೆತ ಹೊರಹೊಮ್ಮಿರಲಿಲ್ಲ. ಆಚಾರ್ಯರಿಗೆ ಎಲ್ಲವೂ ವಿಚಿತ್ರವೆನಿಸಿತು. ಇಲ್ಲದಿದ್ದರೆ ತುಳಸಕ್ಕ ತಮ್ಮ ಮಗಳಂತೆ ಎಂಬ ಭಾವನೆ ಇಂದೇ ಏಕೆ ಬರಬೇಕು? ಮಂದವಾದ ದೀಪದ ಬೆಳಕಿನಲ್ಲಿ ಆಚಾರ್ಯರು ತಮ್ಮ ಪತ್ನಿಯನ್ನು ದಿಟ್ಟಿಸಿ ನೋಡಿದರು. ಮುಪ್ಪಿನ ಮೋಡ ಕವಿದ ಕಣ್ಣುಗಳ ತುಂಬ ಕಣ್ಣೀರು ಮಡುವುಗಟ್ಟಿತ್ತು. ತುಳಸಕ್ಕನ ಈ ಹೊಸ ಸಂಬಂಧವಾದರೂ ತನಗಿರಲಿ ಎಂದು ಕೇಳುವಂತಿತ್ತು ಆ ನೋಟ. ಆಚಾರ್ಯರು ನಿರುಪಾಯರಾದರು. ತಮ್ಮ ಜೀವನದ ಪರೀಕ್ಷೆ ತೀರ ಹತ್ತಿರ ಬಂದಿದೆ ಎಂದೆನಿಸಿತು. ಹೃದಯದಲ್ಲಿ ಸಂಕಟ ಕಿಚ್ಚಾಗಿ ಸುಡುತ್ತಿತ್ತು; ಒಳತೋಟಿ ಮಸೆಯುತ್ತಿತ್ತು. ಅಂತೂ ಕೊನೆಗೊಮ್ಮೆ ನಿರ್ಧಾರ ದೃಢವಾಯಿತು. ಉಪಾಹಾರದ ತಟ್ಟೆಯ ಕಡೆಗೆ ಕಣ್ಣೆತ್ತಿ ಕೂಡ ನೋಡದೆ ಎದ್ದರು.

"ಸಮಾಧಾನ ಮಾಡಿಕೋ ತುಳಸಕ್ಕಾ. ದೇವರ ಮ್ಯಾಲೆ ಹೊರಿ ಹಾಕಿ ಇಲ್ಲೇ ಮಲಗಿಕೋ. ಉಪಾಸ ಮಾತ್ರ ಮಲಕೋಬ್ಯಾಡ. ನಾನೂ ಈಗ ವಾಡೇಕ ಹೋಗಬೇಕು. ಬೆಳಗುಮುಂಜಾನೆ ಸ್ನಾನಕ್ಕಂತ ನದೀಗೆ ಹೋಗೂಮುಂದ ಮನೀಕಡೆ ಬಂದು ಹೋಗತೀನಿ. ಮಹಾರಾಜರ ಕಿವಿಮ್ಯಾಲೂ ನಿನ್ನ ಮಾತು ಹಾಕ ತೀನಿ. ಏನೋ ನಿನ್ನ ಪುಣ್ಯಾ ಬಲವತ್ತರ ಇದ್ದರ, ಮಹಾರಾಜರ ಮಾತು ಸಾಹೇಬರ ಮನಸ್ಸಿಗೆ ನಾಟಬಹುದು" ಎಂದು ಹೇಳಿದವರೇ ಅಲ್ಲಿ ಕೂಡುವದ ಕ್ಕಾಗದೆ ಅಲ್ಲಿಂದ ಹೊರಬಿದ್ದರು.

ಆಚಾರ್ಯರ ಮನಸ್ಸು ದುಃಖದ ಭಾರದಿಂದ ಕಲ್ಲಾಗಿತ್ತು. ವಾಡೆಯಲ್ಲಿ ತಮ್ಮನ್ನು ಕಾಯುತ್ತಿದ್ದ ಕೆಲಸದ ನೆನಪಾಯಿತು. ಮಹಾರಾಜರು ಮರುದಿನ ಮಧ್ಯಾಹ್ನ ಇಂದುಪುರಕ್ಕೆ ಹೋಗುವವರಿದ್ದರು. ಅವರು ಪಾದಳ್ಳಿಗೆ ಬಂದದ್ದೇ ಮೊದಲ ಸಲ. ಆದ್ದರಿಂದ ಹೋಗುವ ಮುನ್ನ ಹುಲಿಬ್ಯಾಟೆ ಹೆಳಬರಿಗೆ, ರೈತರಿಗೆ ಮತ್ತು ಇನ್ನಿತರ ಬಾಬುದಾರರಿಗೆ ಅವರು ಬಿದಾಗಿ (ಉಡುಗೊರೆ)ಯನ್ನು ಮುಟ್ಟಿಸಬೇಕೆಂದು ಮಾಡಿದ್ದರು. ಬಿದಾಗಿಯನ್ನು ತೆಗೆದುಕೊಳ್ಳುವವರ ಯಾದಿ ಯನ್ನು ಸಿದ್ಧಪಡಿಸಲು ಯಶವಂತರಾಯರಿಗೆ ತಿಳಿಸಿದ್ದರು. ಶ್ಯಾಮರಾಯ ನೊಡನೆ ಕೂಡಿಕೊಂಡು ಯಶವಂತರಾಯರು ಯಾದಿಯನ್ನೇನೋ ತಯಾರಿ ಸಿದ್ದರು. ಅದಕ್ಕೆ ಆಚಾರ್ಯರ ಒಪ್ಪಿಗೆಯನ್ನು ಪಡೆಯುವದು ಅವಶ್ಯವಿತ್ತು. ಅದಕ್ಕೆಂದೇ ಈಗ ಆಚಾರ್ಯರು ವಾಡೆಗೆ ನಡೆದದ್ದು.

ಆಚಾರ್ಯರು ಬಂದದೊಡನೆ ಯಶವಂತರಾಯರು ಅವರ ಕೈಯಲ್ಲಿ ಯಾದಿ

ಯನ್ನಿಟ್ಟರು. ಆಚಾರ್ಯರು ಅದರ ಮೇಲೆ ಕಣ್ಣಾಡಿಸಿದರು. ರಾಜಪುರೋಹಿತರಿಗೆ ಒಂದು ಜರದ ಶಾಲು ಹಾಗೂ ದಕ್ಷಿಣೆ ಎಂದು ಬರೆದದ್ದು ಕಂಡಿತು. (ದೇವನಾಗರಿ ಲಿಪಿಯಲ್ಲಿಯೇ ಯಾದಿಯನ್ನು ಬರೆಯಲಾಗಿತ್ತು). ಆಚಾರ್ಯರಿಗೆ ಅದು ಒಪ್ಪಿಗೆ ಯಾಗಲಿಲ್ಲ. ತಮ್ಮ ದಟ್ಟ ದರಿದ್ರ ಬ್ರಾಹ್ಮಣನಿಗೆ ಇಂಥ ಸನ್ಮಾನವೇಕೆಂದು ಹಟ ಹಿಡಿದರು. ಯಶವಂತರಾಯರು ಅದಕ್ಕೊಪ್ಪಲಿಲ್ಲ. ಯಾದಿಯ ಉಳಿದ ಭಾಗ ವನ್ನೋದುವದಾದ ಮೇಲೆ ಮಹಾರಾಜರಿಗೆ ಅದನ್ನು ತೋರಿಸಿ ಖಾಸಗಿ ಕಾರ ಭಾರಿಯ ಕಡೆಗೆ ಅದನ್ನು ಒಪ್ಪಿಸುವದಿತ್ತು.

ಬಾಳಾಚಾರ್ಯರು ಹಟ ಹಿಡಿದ ಸಂಗತಿ ಮಹಾರಾಜರಿಗೂ ಗೊತ್ತಾಯಿತು. ಬಾಳಾಚಾರ್ಯರನ್ನು ಮಹಾರಾಜರೇ ಮತ್ತೊಮ್ಮೆ ಮಾತಾಡಿಸಬೇಕಾಯಿತು. ಮತ್ತೆ ಆಚಾರ್ಯರಿಂದ ಅದೇ ಉತ್ತರ ಬಂತು. "ರಾಜಪುರೋಹಿತರಿಗೆ ಸನ್ಮಾನ ಮಾಡದೆ ಹೋಗೋವಷ್ಟು ದಾರಿದ್ರ್ಯ ಸಂಸ್ಥಾನಕ್ಕ ಬಂದಿಲ್ಲ ಆಚಾರ‍್ಯ. ನಿಮಗೆ ಏನು ಬೇಕು ತಿಳಸರಿ ಅದನ್ನು ಪೂರೈಸಿಕೊಡತೇವು." ಮಹಾರಾಜರು ಅಂತಃ ಕರಣಪೂರ್ವಕವಾಗಿ ಕೇಳಿದರು. ಮಹಾರಾಜರ ಪ್ರೀತಿಯ ಹಟದ ಮುಂದೆ ಬಾಳಾಚಾರ್ಯರ ಹಟ ಸಾಗುವಂತಿರಲಿಲ್ಲ.

ಬಾಳಾಚಾರ್ಯರು ಯೋಚಿಸಲೇಬೇಕಾಯಿತು. ಶೇಷಪ್ಪನ ಬಿಡುಗಡೆಯ ಪ್ರಶ್ನೆಯೇ ಅವರನ್ನೀಗ ಕಾಡುತ್ತಿತ್ತು. ಮಹಾರಾಜರಿಗೆ ಅದರ ಬಗ್ಗೆ ಒಂದು ಮಾತನ್ನು ಹೇಳಬೇಕಾಗಿತ್ತು. ಆದರೆ ಸಂಕೋಚ ಅವರ ಬಾಯನ್ನು ಕಟ್ಟಿತ್ತು. ಶೇಷಪ್ಪನ ಅಪರಾಧಗಳು ಸಾಮಾನ್ಯವಾಗಿರಲಿಲ್ಲ. ಕಾಯದೆಯ ದೃಷ್ಟಿಯಿಂದ ಅವೆಲ್ಲ ಅಕ್ಷಮ್ಯವಾಗಿದ್ದವು. ಮಾನವೀಯ ಅಂತಃಕರಣವೊಂದನ್ನು ಬಿಟ್ಟರೆ ಬೇರೆ ಯಾವ ನೆವವನ್ನು ಮುಂದೊಡ್ಡಿಯೂ ಅವನ ಬಿಡುಗಡೆಗಾಗಿ ಪ್ರಯತ್ನಿಸುವಂತಿರ ಲಿಲ್ಲ. ಆದರೆ ಶೇಷಪ್ಪನ ಹೆಂಡತಿಯ ಕರುಣಾಜನಕ ಚಿತ್ರ ಎಲ್ಲ ತತ್ವಗಳನ್ನೂ ಮೀರಿ ಆಳವಾಗಿತ್ತು; ಹೃದಯಸ್ಪರ್ಶಿಯಾಗಿತ್ತು. ಅದರ ಬಿಸಿ ತಾಕಿದ ಅನುಭವ ಆಚಾರ್ಯರಿಗಾಗಿತ್ತು. ಆದರೆ ಇನ್ನೊಬ್ಬರಿಗೆ ಅದನ್ನು ತಿಳಿಯಪಡಿಸುವದೆಂತು? ಶುದ್ಧ ಭಾವನೆ ಪ್ರಕಟವಾಗುವಾಗ ಸ್ವಭಾವದ ಬಣ್ಣವನ್ನು ತಳೆದೇ ಬರುತ್ತದೆ. ಆಗ ಇನ್ನೊಬ್ಬರು ಅದನ್ನು ಅಪಾರ್ಥ ಮಾಡಿಕೊಂಡರೆ ?

ಬಹಳ ಹೊತ್ತಿನ ವರೆಗೆ ಮೀನ ಮೇಷ ಮಾಡಿದಮೇಲೆ ಹೃದಯದ ಕರೆ ಗೆದ್ದಿತು. ಆಚಾರ್ಯರು ಮಹಾರಾಜರಿಗೆ ತಮಗೆ ಪ್ರಾಪ್ತವಾಗಿರುವ ಉಭಯ

ಸಂಕಟವನ್ನು ವಿವರಿಸಿದರು. ಏನಾದರೂ ಮಾಡಿ ಶೇಷಪ್ಪನನ್ನು ಬಿಡುಗಡೆ ಮಾಡಿಸಿ ಅವನ ಹೆಂಡತಿಯ ಗೋಳನ್ನು ತಪ್ಪಿಸಬೇಕೆಂದು ಕೇಳಿಕೊಂಡರು.

"ಇದು ಮನಸ್ಸಿನ ತೊಡಕು ಅಂತಃಕರಣಕ್ಕ ಬರಿ ಕೊಟ್ಟಹಾಂಗ ಆದಾಗ ನ್ಯಾಯ ಅನ್ಯಾಯ ಅನ್ನೂ ಪ್ರಶ್ನಿ ಏಳೂದುಲ್ಲ. ದಯವಿಟ್ಟು ಆ ಹೆಣಮಗಳ ಗೋಳು ಕಡಿಮೆ ಮಾಡಬೇಕು" ಎಂದು ಬೇಡಿಕೊಂಡರು.

ಮಹಾರಾಜರೂ ಆಲೋಚನಾಪರರಾದರು. ಬಾಳಾಚಾರ್ಯರ ದನಿಯಲ್ಲಿಯ ಪ್ರಾಮಾಣಿಕತೆ ಅವರ ಹೃದಯಕ್ಕೂ ತಾಕಿತು. ಕೊನೆಗೆ ಅವರು ಹೇಳಿದುದನ್ನು ಮಾಡಲು ಒಪ್ಪಿಕೊಂಡರು. ಅವರಿಗೆ ಗಿಬ್ಸನ್‌ಸಾಹೇಬರ ಬಗ್ಗೆಯೇ ಸ್ವಲ್ಪ ಅನುಮಾನವಿತ್ತು. ಎಲ್ಲಿ ಆ ಇಂಗ್ರೇಜಿಸಾಹೇಬ ನ್ಯಾಯಾನ್ಯಾಯಗಳ ಚರ್ಚೆಗೆ ತೊಡಗುತ್ತಾನೋ ಎಂಬ ಭೀತಿಯಿತ್ತು. ಆದರೂ ಪ್ರಯತ್ನಮಾಡಲು ಆಶ್ವಾಸನವಿತ್ತರು. ಆಚಾರ್ಯರ ಮುಖ ಕೃತಜ್ಞತೆಯಿಂದ ಅರಳಿತು. ಹೋಗುವಾಗ ಬಿದಾಗಿಯ ಯಾದಿಯಲ್ಲಿ ಆಚಾರ್ಯರ ಹೆಸರಿನ ಮುಂದೆ ಒಂದು ಜರದ ಶಾಲು ಹಾಗೂ ದಕ್ಷಿಣೆ ಎಂದು ಬರೆದದ್ದು ಅಚ್ಚಳಿಯದೆ ಇದ್ದಿತು.

ಮಹಾರಾಜರ ಸಂಶಯವೇನೂ ನಿರಾಧಾರವಾಗಿರಲಿಲ್ಲ. ಗಿಬ್ಸನ್ ಮೊದಮೊದಲು ಒಪ್ಪಲೇ ಇಲ್ಲ. ತಗಾಯಿ ಸಾಲದ ಹಣವನ್ನು ಎತ್ತಿಹಾಕಿದ ಅಪರಾಧ ತಲೆತಿರುಗಿಸಿತ್ತು. ಮಹಾರಾಜರು ತಮ್ಮ ಸ್ನೇಹವನ್ನೆಲ್ಲ ಪಣಕ್ಕೆ ಹಚ್ಚಿ ಕೇಳಬೇಕಾಯಿತು. ಕೊನೆಗೆ ಶೇಷಪ್ಪನ ಬಿಡುಗಡೆಯನ್ನು ಮಾಡಲು ಸಾಹೇಬರು ಒಪ್ಪಿದರು.

ಅವರಿಬ್ಬರ ಚರ್ಚೆಯಲ್ಲಿ ಒಂದು ಸತ್ಯ ಮಾತ್ರ ಹೊರಬಿದ್ದಿತು. ತಗಾಯಿ ಸಾಲದ ಹಣವನ್ನು ಕುಲಕರ್ಣಿ ಎತ್ತಿಹಾಕಿದ್ದಕ್ಕೆ ಸರಬರಾಯಿಯ ವೆಚ್ಚವೇ ಕಾರಣ ಎಂದು ಮಹಾರಾಜರ ವಾದವಾಗಿತ್ತು. ಅದನ್ನು ಕೇಳಿ ಸಾಹೇಬರು ಅವಾಕ್ಕಾದರು. ತಮ್ಮ ಸರಬರಾಯಿಯ ಹಣವನ್ನು ಅವರು ಪೈ–ಪಾವ– ಆಣೆ ಚುಕ್ತಾಮಾಡಿ ಕ್ಯಾಂಪು ಕಿತ್ತುವ ಪದ್ಧತಿಯನ್ನೇ ಇಟ್ಟುಕೊಂಡಿದ್ದರು. ಆದರೆ ವಸ್ತುಸ್ಥಿತಿ ವಿಪರೀತವಾಗಿದ್ದದ್ದು ಈಗ ಮನವರಿಕೆಯಾಯಿತು. ಅಧಿಕಾರಿಗಳ ತೃಪ್ತಿಗಾಗಿ ಯಾರಾರಿಂದಲೋ ಅನ್ಯಾಯದಿಂದ ಕಸಿದುಕೊಂಡ ಹಣ ವಿನಿಯೋಗವಾಗುತ್ತಿರುವದರಿಂದ ಅವರಿಗೆ ವ್ಯಥೆಯೆನಿಸಿತು.

ಮಹಾರಾಜರನ್ನು ಬೀಳ್ಕೊಂಡು ಗಿಬ್ಸನ್‌ಸಾಹೇಬರು ನೇರವಾಗಿ

ಚಾವಡಿಗೇ ಬಂದು ಮಾಮಲೇದಾರರನ್ನು ಕಂಡರು. ಶೇಷಪ್ಪನ ಪ್ರಕರಣ ಎಲ್ಲಿಗೆ ಬಂದಿದೆ ಎಂದು ವಿಚಾರಿಸಿದರು. "ಅವನ್ನ ನಜರಬಂದಿಯೊಳಗ ಇಟ್ಟಿದ ಸಾಹೇಬರ. ಪುರಾವೆ ಎಲ್ಲಾ ಕೂಡಿಸಿದ ಮ್ಯಾಲ ಚಾರ್ಜಶೀಟ ಹಾಕಲಿಕ್ಕೆ ಪೋಲೀಸರಿಗೆ ತಿಳಿಸೀನಿ" ಎಂದು ಮಾಮಲೇದಾರರು ತಮ್ಮ ಕರ್ತವ್ಯಪ್ರಜ್ಞೆಯನ್ನು ಪ್ರಕಟಗೊಳಿಸಿದರು. ಗಿಬ್ಸನ್‌ಸಾಹೇಬರು ಅವನನ್ನು ಕೂಡಲೆ ಬಿಡುಗಡೆ ಮಾಡಲು ಆಜ್ಞೆಯಿತ್ತರು. "ಮಹಾರಾಜರಿಗೇನೋ ಅವನ ಅಗತ್ಯವಿದೆಯಂತೆ" ಎಂದು ತೋರಿಕೆಗಾಗಿ ಕಾರಣವನ್ನು ಕೊಟ್ಟರು. ಮಾತಿನ ಓಘದಲ್ಲಿಯೇ ಬಾಳಾಚಾರ್ಯರು ಮಹಾರಾಜರಿಗೆ ಹೇಳಿದ್ದನ್ನೂ ಹೇಳಬೇಕಾಯಿತು.

ಸಾಹೇಬರು ಎದ್ದು ಹೋದ ಮೇಲೆ ಮಾಮಲೇದಾರರು ಶೇಷಪ್ಪನನ್ನು ಕರೆಸಿ, "ಹೋಗು ಮಹರಾಯಾ, ನಿನ್ನ ಬಿಡುಗಡಿ ಆಗೇದ. ಅಷ್ಟಾಗಬೇಕಾದರ ನಮ್ಮ ಅಪ್ಪಾ ಅವ್ವನ ಪುಣ್ಯಾ ಎಲ್ಲ ಖರ್ಚಾಗಬೇಕಾತು" ಎಂದು ತಾವೇ ಅವನನ್ನು ಬಂಧಮುಕ್ತಗೊಳಿಸಿದ ಉಪಕಾರಿ ಎಂಬಂತೆ ಹೇಳಿದರು. ಶೇಷಪ್ಪ ಅಲ್ಲಿಂದೆದ್ದ ಮೇಲೆ ಕಾರಕೂನ ಗೋಪಾಳರಾಯ ಗಿಬ್ಸನ್‌ಸಾಹೇಬರಿಂದ ಒಂದು ಪತ್ರವನ್ನು ತಂದು ಮಾಮಲೇದಾರರೆದುರಿಗೆ ಇಟ್ಟ. ಸರಬರಾಯಿಯ ಬಿಲ್ಲುಕೊಟ್ಟು ಪಾವತಿ ಹಾಜರಪಡಿಸಲು ಸಾಹೇಬರು ಆ ಪತ್ರದಲ್ಲಿ ಸೂಚಿಸಿದ್ದರು. ಅದನ್ನೋದಿ ಮಾಮಲೇದಾರರ ಪಿತ್ತ ನೆತ್ತಿಗೇ ಅಡರಿತು.

"ಇದೇನು, ತಮ್ಮಪ್ಪನ ಮನಿಗಂಟು ಖರ್ಚಾದವರ್ಹಾಂಗ ಪಾವತಿ ಕೇಳತಾನಲ್ಲ. ಹೋಗು ಮಹರಾಯಾ, ಶೇಷಪ್ಪನಿಂದ ಬಿಲ್ಲು ತಯಾರಮಾಡಿ ಕಳಿಸು. ನಮ್ಮ ಭತ್ತೆ ರಕಮಿಗೆ ಸರಿಹೋಗುವಷ್ಟು ಬಿಲ್ಲು ತಯಾರಮಾಡಲಿಕ್ಕೆ ಹೇಳು" ಎಂದು ನುಡಿದರು.

ಶೇಷಪ್ಪ ಮನೆಯ ಕಡೆಗೇ ಹೊರಟವನು, ಇನ್ನೂ ಗೋಪಾಲಕೃಷ್ಣನ ಗುಡಿಯ ಹತ್ತಿರವೇ ಇದ್ದ. ಅಷ್ಟರಲ್ಲಿ ಡಗಲಿ ವೇಷದ ಉಸ್ಮಾನ ಅವನೆದುರು ಪ್ರಕಟವಾಗಿ ಸಾಹೇಬರು ಕರೆದಿದ್ದಾರೆಂದು ಹೇಳಿದ. ಅದನ್ನು ಕೇಳಿದೊಡನೆ ಶೇಷಪ್ಪನ ಕೈಕಾಲೇ ಹೋದವು. ಮತ್ತೊಂದು ಅನಿಷ್ಟ ಕಾದಿರಲೇಬೇಕೆಂದು ಖಾತ್ರಿಯಾಯಿತು. ನಿರ್ವಾಹವಿಲ್ಲವೆಂದು ಜೋಲುಮೋರೆ ಹಾಕಿಕೊಂಡೇ ಚಾವಡಿಗೆ ಬಂದ. ಸರಬರಾಯಿಯ ವೆಚ್ಚದ ಬಿಲ್ಲು ಕೇಳಿದಾಗ ಮಾತ್ರ ಧೈರ್ಯ ಬಂತು.

"ಮತ್ತ ನನ್ನ ಕಡೆ ಕುಲಕರ್ಣಿಕಿ ದಪ್ತರ ಇಲ್ಲ. ಶ್ಯಾಮರಾಯನ ಕಡಿಂ

ದನs ಬಿಲ್ಲು ಬರೆಸಿದರ ನೆಟ್ಟಗಾಗಲಿಕ್ಕಿಲ್ಲ?" ಎಂದು ಈ ತೊಡಕೇ ಬೇಡವೆಂದ
ನುಡಿದ.

"ಸರಬರಾಯಿಗೆ ಸಾಮಾನು ಒದಗಿಸಿದವ ನೀನು. ಅದಕ ನೀನs ಬಿಲ್ಲ
ಕೊಡಬೇಕು. ಪ್ರಾಂತ ಸಾಹೇಬರಿಗೆ ಅದನ್ನು ಕಳಿಸಬೇಕಾಗೇದ. ಆದಷ್ಟು
ಕಾಯದೇಶೀರ ರೀತಿಯಿಂದ ಬಿಲ್ಲು ತಯಾರ ಮಾಡೋ ಪ್ರಸಂಗ ಅದ ಅಂತ ನಿನ
ಕರಿಸಬೇಕಾತು " ಎಂದು ಗೋಪಾಳರಾಯ ಹೇಳಿದ.

"ಬೇಕಾಯಿದೇಶೀರ ರೀತಿಯಿಂದ ಕೆಲಸಾಮಾಡೂದs ಬೇಕಾಗಿ
ರಾಯರs. ಸಾಮಾನು ಕೊಟ್ಟಾವಾ ಕಿರಾಣಿ ಅಂಗಡಿ ಈರಪ್ಪ. ಅವನಲ್ಲಿರೊ
ಖಾತೇದ ಉತಾರಾ ಕೊಡಿಸಿಬಿಟ್ಟರ ತೀರಿತಲ್ಲ." ಎಂದು ಹೇಳಿ ವಾಲೀಕಾ
ಮಲ್ಲನಿಗೆ ಅಂಗಡಿಯಿಂದ ಬಿಲ್ಲು ತರಲು ಆಜ್ಞೆಯಿತ್ತು. ಶೇಷಪ್ಪ ಚಾವಡಿಯ
ಲ್ಲಿಯೇ ಹರಟೆ ಹೊಡೆಯುತ್ತ ಕುಳಿತ.

ಅಂಗಡಿಯಿಂದ ಬಿಲ್ಲು ಬಂದ ಮೇಲೆ ಸಾಮಾನಿನ ಯಾದಿಯನ್ನು ನೋ
ಗೋಪಾಳರಾಯನಿಗೆ ದಿಗಿಲೇ ಬಿದ್ದಿತು. ಸಾಹೇಬರ ಮನೆಯ ಲಗ್ನಕ್ಕಾದರೂ
ಇಷ್ಟು ಸಾಮಾನಿನ ಅವಶ್ಯಕತೆಯುಂಟೇ ಎಂದು ಅವನ ಸಂಶಯ. " ಮಾಮಲೇ
ದಾರರನ್ನು ಕೇಳಿ ಬರತೀನಿ ತಡಿ" ಎಂದು ಮಾಮಲೇದಾರರ ಬಿಡಾರಕ್ಕೆ ಹೋದ.

ಅದೇ ಹೊತ್ತಿಗೆ ಬಾಳಾಚಾರ್ಯರು ವಾಡೆಯಿಂದ ತಮ್ಮ ಮನೆಗೆ ಹೊರಟಿ
ದ್ದರು. ಶೇಷಪ್ಪನ ಬಿಡುಗಡೆಯಾದ ಸುದ್ದಿ ಈಗಾಗಲೇ" ಅವರಿಗೆ ತಿಳಿದಿತ್ತು
ಈಗ ಚಾವಡಿಯಲ್ಲಿ ಅವನನ್ನು ನೋಡಿದವರೇ ತಡೆದರು. " ಯಾಕ ಶೇಷಪ್ಪಾ
ಇನ್ನೂ ಇಲ್ಲೇ ಕೂತೀದಿ?" ಎಂದು ಆರ್ದ್ರವಾಗಿಯೇ ಕೇಳಿದರು. ಆಚಾರ್ಯ
ದರ್ಶನದಿಂದ ಶೇಷಪ್ಪನಿಗೆ, ಸುಪ್ತವಾಗಿದ್ದ ಕೋಪವೆಲ್ಲ ಜಾಗೃತವಾಯಿತು.
ಆಚಾರ್ಯರ ಮಾತಿಗೆ ವಿಪರೀತ ಅರ್ಥ ಕಂಡಿತು. ಅವನ ಬುದ್ಧಿಗೆ ಸರಳ ಅರ್ಥ
ವನ್ನು ಗ್ರಹಿಸುವ ರೂಢಿಯೇ ಇರಲಿಲ್ಲ. ಅವರು ತನ್ನನ್ನು ಮೂದಲಿಸಲೆಂದೇ
ಹಾಗೆ ಕೇಳಿರಬೇಕೆಂದು ತಿಳಿದ. ಅದಕ್ಕೆ ತಕ್ಕ ಉತ್ತರವನ್ನು ಕೊಡಬೇಕೆಂಬ
ಚಪಲದಿಂದ " ಇಲ್ಲೇ ಕೂಡದ ಏನು ಜೇಲಿಗೆ ಹೋಗತೇನಿ ಅಂತ ತಿಳದಿದ್ದ
ರೇನು"? ಎಂದು ಹುಬ್ಬು ಕೊಂಕಿಸಿ ಕೇಳಿದ. ಆಚಾರ್ಯರು ಬೇಕೆಂವೇ ಸಿಟ್ಟಿಗೇಳ
ಲಿಲ್ಲ. ಈ ಪ್ರಕರಣದ ಅಂತರಾರ್ಥವೆಲ್ಲ ಅವರಿಗೆ ಸಂಪೂರ್ಣವಾಗಿ ವಿದಿತ
ವಾಗಿತ್ತು.

"ಪಾಪ, ತುಳಸಕ್ಕ ಭಾಳ ಚಡಪಡಸತಿದ್ದಳು. ಬಿಡುಗಡಿಯಾದ ಕೂಡಲೇ ನೀನು ಮನೀಗೆ ಹೋಗಬೇಕಾಗಿತ್ತು, ಈ ಹಾಳಕಚೇರಿ ಜನರ ಸಹವಾಸ ಇನ್ನೂ ಬಿಟ್ಟಿಲ್ಲ?" ಎಂದು ಕೇಳಿದರು.

"ಅವರ ಪುಣ್ಯಾದಿಂದನಽ ನಾ ಮನಿಕಾಣೋಹಂಗ ಆಗೀನಿ ಆಚಾರ. ಅಂದವ್ಯಾಲೆ ಅವರ ಸಹವಾಸಬಿಟ್ಟು, ಏನಕೇನ ಕಾರಸ್ಥಾನ ನಡೆಸಿ ಮಂದಿನ್ನ ಜೇಲಿಗಟ್ಟುವವರ ಬೆನ್ನು ಹತ್ತಲ್ಯಾ?" ಎಂದ. ಅವನ ಪ್ರತಿ ಶಬ್ದದಲ್ಲಿಯೂ ನಂಜು ತುಂಬಿತ್ತು.

"ನಿನ್ನ ಕರ್ಮಾ, ನಿನ್ನ ಪೇಚಿಗೆ ಹಾಕಿತು. ಯಾಕ ಇನ್ನೊಬ್ಬರಿಗೆ ದೋಷ ಕೊಡತೀ? ನಿನ್ನ ಹೆಂಡತೀ ಪುಣ್ಯಾದಿಂದ ಬಂದ ಕುತ್ತಿನ್ಯಾಗಿಂದ ಪಾರಾಗೀದಿ. ಅವರಿವರ ಪುಣ್ಯಾದಿಂದ ಮೋಕಳೀಕ ಆಗೀನಿ ಅಂತ ತಿಳೀಬ್ಯಾಡ" ಎಂದು ನುಡಿದರು. ಶೇಷಪ್ಪ ತಿರುಗಿ ಏನೋ ಮಾತಾಡುವ ಆವೇಶದಲ್ಲಿದ್ದ. ಆದರೆ ಅದನ್ನು ಕೇಳಿಕೊಳ್ಳಲು ಆಚಾರ್ಯರು ಅಲ್ಲಿಗಲಿಲ್ಲ. ಅಷ್ಟರಲ್ಲಿ ಮಾಮಲೇದಾರರ ಕಡೆಗೆ ಹೋಗಿದ್ದ ಕಾರಕೂನ ಗೋಪಾಳರಾಯ ತಿರುಗಿ ಚಾವಡಿಗೆ ಬಂದಿದ್ದ.

ಗೋಪಾಳರಾಯ ಬಂದ ಮೇಲೆ ಇಬ್ಬರಲ್ಲಿಯೂ ಮತ್ತೆ ಚರ್ಚೆ ಪ್ರಾರಂಭವಾಯಿತು. ಇಬ್ಬರೂ ಹಣವನ್ನು ಉಳಿಸಿಕೊಳ್ಳಬಲ್ಲ ಶೂರರು. ಅಂತೂ ತಾಸು ಹೊತ್ತಿನ ವರೆಗೆ ಗೊಂದಲ ಹಾಕಿದ ಮೇಲೆ ಒಂದು ನಿರ್ಣಯಕ್ಕೆ ಬಂದಂತಾಯಿತು. ಶೇಷಪ್ಪ ಈಗ ಪಾವತಿಯನ್ನು ಬರೆದುಕೊಟ್ಟು ಮಾಮಲೇದಾರರಿಂದ ಹಣವನ್ನು ಪಡೆಯಬೇಕೆಂದು ಗೊತ್ತಾಯಿತು. ಏನು ಮಾಡಿದರೂ ಆ ಹಣ ಕೈಗೆ ಬರಲಾರದೆಂಬ ಸತ್ಯ ಗೋಪಾಳರಾಯನಿಗೆ ಗೊತ್ತಿಲ್ಲದಿರಲಿಲ್ಲ.

"ಶೇಷಪ್ಪ ಕನ್ಯಾದಾನ ಮಾಡಿಕೊಟ್ಟ ಹೆಣ್ಣು, ಅಧಿಕಾರಿಗಳ ಕೈಯಾಗಿನ ಹಣ ಇನ್ನ ತಿರುಗಿ ದಕ್ಕೂದಿಲ್ಲ ಅಂಬೋ ಶಾಸ್ತ್ರ ನಿನಗ ಗೊತ್ತಿಲ್ಲಽ? ಈಗಂತೂ ಪಾವತಿ ಬರದುಕೊಟ್ಟು ಬಿಡು. ರೊಕ್ಕಾ ವಸೂಲು ಮಾಡೂದು, ಏನರ ಮಾಡಲಿಕ್ಕೆ ಬಂದೀತು" ಎಂದು ಬೆನ್ನು ಚಪ್ಪರಿಸಿದ.

ಶೇಷಪ್ಪ ಮನೆಯನ್ನು ಮುಟ್ಟಿದಾಗ ತುಳಸಕ್ಕ ದೇವರ ಮುಂದೆ ದೀಪ ಹಚ್ಚಿಟ್ಟುಕೊಂಡು ಕುಳಿತಿದ್ದಳು. ಅದನ್ನು ನೋಡಿದಾಗ ಶೇಷಪ್ಪನ ಮನಸ್ಸಿನಲ್ಲಿ ಕಾರಣವಿಲ್ಲದೆ "ನಿನ್ನ ಹೆಂಡತಿ ಪುಣ್ಯಾದಿಂದನಽ ನೀ ಈ ಕುತ್ತಿನ್ಯಾಗಿಂದ ಪಾರಾದ್ಯು" ಎಂದು ಹೇಳಿದ ಬಾಳಾಚಾರ್ಯರ ಮಾತು ನೆನಪಾದವು.

:: ೩೬ ::

ಸರಿಯಾಗಿ ಮಧ್ಯಾಹ್ನ ಒಂದು ಗಂಟೆಗೆ ಮಹಾರಾಜರು ವಾಡೆಯಿಂದ ಹೊರಟರು. ಅವರನ್ನು ನದಿಯ ವರೆಗೆ ವಾದ್ಯವೈಭವಗಳಿಂದೊಡಗೂಡಿ ಮೆರವಣಿಗೆಯಲ್ಲಿ ಕರೆದೊಯ್ಯುವ ವ್ಯವಸ್ಥೆಯನ್ನು ರೈತರು ಮೊದಲೇ ಮಾಡಿದ್ದರು. ಮಹಾರಾಜರು ಪಾದಳ್ಳಿಯಲ್ಲಿ ಇದ್ದಷ್ಟು ದಿನ ಊರಿಗೇ ಒಂದು ಮಹೋತ್ಸವದ ಸ್ವರೂಪ ಬಂದಿತ್ತು. ಇಂದು ಆ ಉತ್ಸವದ ಕೊನೆಯ ದಿನವಾಗಿತ್ತು. ಊರಿಗೂರೇ ಮೆರವಣಿಗೆಯಲ್ಲಿ ಭಾಗವಹಿಸಿ ಈಗ ನದಿಯಂಚಿಗೆ ಕೂಡಿತ್ತು.

ಕಳೆದ ನಾಲ್ಕುದಿನಗಳಲ್ಲಿ ನದಿಗೆ ದೊಡ್ಡ ನೆರೆ ಬಂದಿತ್ತು. ಮಳೆಗಾಲದಲ್ಲಿ ಮೊದಲೇ ಸೊಕ್ಕಿ ಹರಿಯುವ ನದಿ, ನೆರೆಯಿಂದ ಇನ್ನಿಷ್ಟು ಉಬ್ಬಿತ್ತು. ನದಿಯ ನೀರು ಊರಿನ ಪೂರ್ವ ಮತ್ತು ಪಶ್ಚಿಮ ದಿಕ್ಕುಗಳ ಒತ್ತಿನಲ್ಲಿ ಬಹುದೂರದ ವರೆಗೆ ಏರಿ ಬಂದಿದ್ದರಿಂದ ಪಾದಳ್ಳಿ ಈ ನೀರಿನ ನಡುವೆ ಒಂದು ದ್ವೀಪಕಲ್ಪವಾಗಿತ್ತು. ನದಿಯ ಈ ಅತಿಕ್ರಮಣ ವರ್ಷದ ವೈಶಿಷ್ಟ್ಯಗಳಲ್ಲೊಂದಾಗಿತ್ತು. ನದಿಗೆ ಪೂರ ಬಂದಾಗ ಈ ಒತ್ತಿನಲ್ಲಿ ನಾವೆ ಬಂದು ಮೂರು ಮೈಲು ಹಬ್ಬಿದ ಜಲರಾಶಿಯಲ್ಲಿ ಮಾರ್ಗಕ್ರಮಣ ಮಾಡಬೇಕಾಗುವದು. ನದಿ ಈ ಸ್ವರೂಪದಲ್ಲಿರುವಾಗ ಜಲಪರ್ಯಟನ ಮಾಡುವ ಸಂದರ್ಭ ಮಹಾರಾಜರಿಗೆ ಅನಾಯಾಸವಾಗಿ ಒದಗಿದಂತಾಗಿತ್ತು. ಮಹಾರಾಜರು ನಾವೆಯನ್ನು ಹತ್ತುವಾಗ ಈ ಮೊದಲು ನಡೆದಂತೆ ಮತ್ತೊಮ್ಮೆ ದುರ್ಘಟನೆಯಾಗದಿರಲು ಅಂಬಿಗರು ವಿಶೇಷ ದಕ್ಷತೆಯನ್ನು ವಹಿಸಿದ್ದರು.

ಮಹಾರಾಜರು ರೈತರ ವಂದನೆಗಳನ್ನೂ ಪೋಲೀಸರ ಗೌರವರಕ್ಷೆಯನ್ನೂ ಹರ್ಷದಿಂದ ಸ್ವೀಕರಿಸಿದರು. ಬಾಳಾಚಾರ್ಯರಿಗೆ ನಮಸ್ಕರಿಸಿ ಅವರಿಂದ ಆಶೀರ್ವಾದವನ್ನೂ ಪಡೆದರು. ಗಿಬ್ಸನ್‌ಸಾಹೇಬರ ಹಸ್ತಾಂದೋಲನ ಕೇವಲ ಔಪಚಾರಿಕವಾಗಿರದೆ, ಎರಡು ಜೀವಗಳು ಒಂದಕ್ಕೊಂದು ಮಾತಾಡಿದಂತೆ ಹಾರ್ದಿಕವಾಗಿತ್ತು. ಬೀಳ್ಕೊಡುಗೆಯ ಈ ಸಮಾರಂಭದಲ್ಲಿ ವಿಲಕ್ಷಣ ಮಾನವೀಯತೆ ತುಂಬಿ ತುಳುಕುತ್ತಿತ್ತು. ಒಂದು ದೃಷ್ಟಿಯಿಂದ ಪಾದಳ್ಳಿಯೊಡನೆ ಮಹಾರಾಜರ ಸಂಬಂಧ

ಕೇವಲ ಐತಿಹಾಸಿಕವಾಗಿತ್ತು. ಅವರ ಪೂರ್ವಜರು ಇಲ್ಲಿಂದಲೇ ಎತ್ತಿಬಂದವರಾಗಿದ್ದರು. ಮಹಾರಾಜರು ಪಾದಳ್ಳಿಯನ್ನು ನೋಡಿದ್ದೇ ಇದು ಮೊದಲಸಲವಾಗಿತ್ತು. ಮೊದಲಸಲವೇ ಪಾದಳ್ಳಿಯ ಜನರು ಮಹಾರಾಜರನ್ನು ಕಂಡಿದ್ದರು. ನಾಲ್ಕು ದಿನಗಳಿಗಿಂತ ಹೆಚ್ಚು ಕಾಲ ಅವರ ವಾಸ್ತವ್ಯ ಪಾದಳ್ಳಿಯಲ್ಲಿರಲಿಲ್ಲ. ಆದರೂ ಎಷ್ಟು ಅಲ್ಪಕಾಲದಲ್ಲಿ ಎಂಥ ಧೃಢವಾದ ಆತ್ಮೀಯತೆ ಬೆಳೆದು ಬಂದಿತ್ತು ! ನಮಸ್ಕಾರ ಚಮತ್ಕಾರಗಳೆಲ್ಲ ಮುಗಿದ ಮೇಲೆ ಮಹಾರಾಜರು ನಾವೆಯನ್ನು ಹತ್ತಬೇಕಾಗಿತ್ತು. ಆದರೂ ತಡೆದರು. ನಡಿಗೆಯಲ್ಲಿ, ನೋಟದಲ್ಲಿ ಅನುಮಾನ ಕಾಣುತಿತ್ತು. ಏನನ್ನೋ ಹುಡುಕುವಂತೆ, ಏನನ್ನೋ ನೆನಪು ಮಾಡಿಕೊಳ್ಳುವವರಂತೆ ಸುತ್ತಲೂ ಕಣ್ಣಾಡಿಸಿದರು. ಈ ಚೇಷ್ಟೆಯಲ್ಲ ನಿರುದ್ದಿಶ್ಯವಾಗಿತ್ತು. ಅವ್ಯಕ್ತವಾದ ಭಾವನೆಯೊಂದು ಉನ್ಮೀಳಿಸಿ ಬಂದಾಗ ಈ ಚೇಷ್ಟೆಗಳು ಅವರ ವಿಭಾವವಾಗಿ ಬಂದಿದ್ದವು, ಅಷ್ಟೇ.

ದಾದಾ ಮಹಾರಾಜರ ಜೊತೆಗೇ ಹೋಗಬೇಕಾಗಿದ್ದುದರಿಂದ ಅವರ ಬೆನ್ನಿಗೇ ಇದ್ದ. ತಲೆಯ ಮೇಲಿನ ಪೇಟಾದಿಂದ ಹಿಡಿದು ಕಾಲಲ್ಲಿಯ ಕೆರವುಗಳವರೆಗೆ ಎಲ್ಲವೂ ಹೊಸದಾಗಿದ್ದವು. ವೇಷಭೂಷಣದ ಹೊಸತನ, ಬಣ್ಣಗಾರಿಕೆಯೆಲ್ಲ ಅಗಲಿಕೆಯ ನೋವಿಗೇ ಬಣ್ಣ ಹಾಕಿದಂತಿತ್ತು. ಬಣ್ಣದ ವೇಷ ಹೃದಯ ಸಂಭ್ರಮದ ಪ್ರತೀಕವಾಗಿರಲಿಲ್ಲ. ಮದುಮಗಳ ಹೊಸ ಸೀರೆಯಂತೆ ಜೀವನದಲ್ಲಿಯ ಸಂಧಿಕಾಲದ ನೋವನ್ನು ಸ್ಫುಟಗೊಳಿಸಲು ಕಾರಣವಾಗಿತ್ತು. ದಾದಾನ ಎದೆ ಅಗಲಿಕೆಯ ನೋವಿನಿಂದ ಹಿಂಡಿಹೋಗಿತ್ತು. ಆದರೆ ಅವನ ದುಃಖ ಮಾತಿಗೂ ಮೀರಿ ಆಳವಾಗಿತ್ತು. ಸುಮ್ಮನೆ ಎಡಕ್ಕೆ ಬಲಕ್ಕೆ ಕಣ್ಣು ಹೊರಳಿಸುತ್ತ, ತ್ರಸ್ತನಾಗಿ ದಾದಾ ನಿಂತಲ್ಲಿ ನಿಲ್ಲದೆ ಹೊಯ್ದಾಡುತ್ತಿದ್ದ.

ಮಹಾರಾಜರು ನಾವೆಯನ್ನು ಹತ್ತಿದ್ದರಿಂದ ದಾದಾ ಅವರನ್ನು ಅನುಸರಿಸಿದ. ಅಷ್ಟರಲ್ಲಿ ಜನಸಂದಣಿಯೊಳಗಿಂದ ಧಾವಿಸಿ ಬಂದ ಲಕ್ಷ್ಮಣ ಮಗನನ್ನು ಹಿಡಿದು ಬಿಗಿಯಾಗಿ ಅಪ್ಪಿಕೊಂಡುಬಿಟ್ಟ. ತಂದೆಯ ಕರುಳಿನ ಚೂರು ದಾದಾನ ಮೈಯನ್ನೆಲ್ಲ ತಡವಿ ಸುಖದುಃಖಗಳ ಸಂವೇದನೆಯನ್ನು ಒಮ್ಮೆಲೇ ತಂದು ಕೊಟ್ಟಿತು. ಮಾತಿಲ್ಲದ ಕಣ್ಣೀರು ಹೊಳೆಯಾಗಿ ಹರಿದು ಮಗನ ತಲೆಗೆ ಅಭಿಷೇಕ ಮಾಡಿತು. ಹೀಗೆಯೇ ಇಬ್ಬರೂ ಎಷ್ಟು ಹೊತ್ತು ನಿಲ್ಲುತ್ತಿದ್ದರೋ ಏನೋ! ಕರುಳಿನ ದೃಢವಾದ ಅಪ್ಪುಗೆಯಲ್ಲಿ ಕಾಲಪ್ರಜ್ಞೆ ಕರಗಿಹೋಗಿತ್ತು. ಅಷ್ಟರಲ್ಲಿ

ಕಾಶೀಮಸಾಹೇಬ ಲಕ್ಷ್ಮಣನ ರಟ್ಟೆಯನ್ನು ಹಿಡಿದೆಳೆದ. ಲಕ್ಷ್ಮಣನಿಗೆ ಆಘಾತ ವಾಯಿತು. ಮಗ ಮತ್ತೊಮ್ಮೆ ಹೊಟ್ಟೆಯಲ್ಲಿ ಮೂಡಿ ಬಂದ ಅನುಭವವಾಗಿತ್ತು. ಸುಖವೋ ದುಃಖವೋ ಆ ಅನುಭವದ ಮೊನೆ ತೀಕ್ಷ್ಣವಾಗಿತ್ತು, ಹೃದಯಗಮ್ಯ ವಾದ ಸತ್ಯವಾಗಿತ್ತು. ಅದರಿಂದ ಈ ಜಗತ್ತಿಗೆ ಬರುವದೇ ಅವನಿಗೆ ಬೇಡವಾಗಿತ್ತು.

"ಏನ ಪ್ಯಾಲಿ ಅದೀಲೇ ಲಕ್ಷ್ಮಣ? ಎಂದ ಬುದ್ಧಿ ಬರಬೇಕ ನಿನಗ? ನಿನ್ನ ಮಗನ್ನ ಮಾರಾಜರು ಜೇಲಿಗೆ ಹಾಕಲಾಕ ಒಯ್ಯತಾರಂತ ತಿಳಿದೀ ಏನು?" ಎಂದು ಕಾಶೀಮಸಾಹೇಬ ಅಂತಃಕರಣವ ಸಿಟ್ಟನಿಂದಲೇ ಬುದ್ಧಿ ಹೇಳಿದ. ಲಕ್ಷ್ಮಣ ಇನ್ನೂ ಬಿಕ್ಕಿಬಿಕ್ಕಿ ಅಳುತ್ತಿದ್ದ. ಕಾಶೀಮಸಾಹೇಬನ ಕೈ ತನಗರಿಯ ದಂತೆಯೇ ಲಕ್ಷ್ಮಣನ ಬೆನ್ನನ್ನು ಸವರಲಾರಂಭಿಸಿತ್ತು. "ಸಣ್ಣ ಹುಡುಗರಂಪಾಗ ಹೀಗ್ಯಾಕ ಅಳತೀಲೇ ಲಕ್ಷ್ಮಣ? ಹುಡುಗಗ ಮಹಾರಾಜರ ಆಸರ ಸಿಕ್ಕಿತೂ ಅಂತ ನಗನಗತ ಕಳಸೂದ ಬಿಟ್ಟ ಇಲ್ಲೆ ಅತಕೊಂತ ನಿಂತಾನ" ಕಾಶೀಮಸಾಹೇ ಬನ ಸಾಂತ್ವನ ಇನ್ನೂ ನಡೆದೇ ಇತ್ತು.

ದಾದಾ ಮಾತಾಡದೆ ನಾವೆಯನ್ನೇರಿದ. ಮಹಾರಾಜರು ಅದಕ್ಕೂ ಮೊದಲೇ ನಾವೆಯಲ್ಲಿದ್ದರು. ದಡದಿಂದ ಬಂಧನ ಹರಿದುಕೊಳ್ಳುವವರಂತೆ ಚಿಮ್ಮಿ, ಒತ್ತಿನ ಪ್ರಶಾಂತವಾದ ಜಲರಾಶಿಯಲ್ಲಿ ನಾವೆ ಸಾಗಿತು. ತೆರೆಗಳ ಮೂಲಕವಾಗಿ ಹಿಂದಕ್ಕೆ ಮುಂದಕ್ಕೆ ಹೊಯ್ದಾಡುತ್ತ ನಡೆದ ನಾವೆ ದಡವನ್ನು ಬಿಡಲು ಅನು ಮಾನಿಸುವಂತಿತ್ತು. ಮಹಾರಾಜರ ನೋಟವೆಲ್ಲ ದಂಡೆಯ ಕಡೆಗಿತ್ತು. ದಂಡೆ ಯಲ್ಲಿ ನಿಂತವರ ಲಕ್ಷ್ಯವೆಲ್ಲ ಮಹಾರಾಜರ ಕಡೆಗೆ ಕೇಂದ್ರೀಕೃತವಾಗಿತ್ತು. ಮಹಾರಾಜರು ಹಾಗೂ ದಾದಾ ಇಬ್ಬರೂ ಕೈಮುಗಿದು ನಿರೋಪ ತೆಗೆದುಕೊಳ್ಳುವ ರೀವಿಯಲ್ಲಿಯೇ ನಿಂತಿದ್ದರು. ನೀರಿನಲ್ಲಿಯಂತೆಯೇ ಜೀವನಕ್ಕಿರುವ ತರಂಗ-ಗತಿ ಹೃದಯಸ್ಪರ್ಶಿಯಾಗಿತ್ತು. ಭೂತ ಭವಿಷ್ಯತ್ತುಗಳೆರಡನ್ನೂ ಅಡಗಿಸಿಕೊಂಡ ಅಗಲಿಕೆಯ ಈ ಒಂದು ಕ್ಷಣ ಕಾಲನ ಸೀಮೆಯನ್ನೇ ವ್ಯಾಪಿಸಿದಂತಿತ್ತು.

ದಾದಾ ನೆಟ್ಟನೋಟದಿಂದ ಪಾದಳ್ಳಿಯ ಕಡೆಗೇ ನೋಡುತ್ತ ನಿಂತಿದ್ದ. ಕೆಳಗೆ ನೀರು ಹೊಯ್ದಾಡುತ್ತಿತ್ತು; ಅದರ ಮೇಲೆ ನಾವೆಯೂ ಹೊಯ್ದಾಡುತ್ತಿತ್ತು. ನಿತ್ಯ ಪರಿಚಯದ ಮೂಲಕವೋ ಏನೋ ಒಂದಕ್ಕೊಂದು ಪ್ರತಿಸ್ಪಂದಿಯಾಗಿದ್ದವು. ಪಾದಳ್ಳಿಯ ದಂಡೆ ವರ್ತುಲಾಕಾರವಾಗಿ ತಿರುಗುತ್ತಿರುವಂತೆ ಕಣ್ಣಿಗೆ ಕಂಡಿತು. ದಾದಾನ ಕಣ್ಣಾಲಿಗಳು ನೀರಿನಿಂದ ತುಂಬಿದವು. ಊರನ್ನು ಬಿಟ್ಟು ದೂರ

ೋಗಬೇಕಾಯಿತಲ್ಲ ಎಂಬ ಭಾವನೆ ಹೃದಯವನ್ನು ಹಿಂಡಿತು.

ನಾವೆ ವೇಗವನ್ನು ಪಡೆಯಿತು. ಅಂಬಿಗರು ನಾವೆಯಲ್ಲಿ ನಿಂತುಕೊಂಡ ರಿಗೆಲ್ಲ ಕುಳಿತುಕೊಳ್ಳಬೇಕೆಂದು ಕೂಗಿ ಹೇಳಿದರು. ನಾವೆ ಈಗ ಒತ್ತಿನ ಾಟನಿಂದ ಮುಖ್ಯ ಪ್ರವಾಹದ ಸಮೀಪಕ್ಕೆ ಬಂದಿತ್ತು. ನಾವೆಯಲ್ಲಿ ಜನರು ಂತು ನಿಂತುಕೊಂಡಿದ್ದರೆ, ಯಾವ ಅಡೆತಡೆ ಇಲ್ಲದೆ ಬೀಸುವ ಗಾಳಿ ನಾವೆಯನ್ನು ಪ್ರವಾಹದಗುಂಟ ದೂರ ಸಾಗಿಸಬಹುದಿತ್ತು. ನದಿಯ ಪಾತ್ರದಲ್ಲಿ ಪ್ರವಾಹದ ಳವು ನಾವೆಯನ್ನು ಪೂರ್ವದಿಕ್ಕಿಗೆ ವೇಗದಿಂದ ಎಳೆದೊಯ್ಯುವಾಗ, ಗಾಳಿಯ ರಿಣಾಮದಿಂದ ಅದರ ವೇಗ ಇನ್ನೂ ಹೆಚ್ಚಬಾರದೆಂಬ ಮುಂಜಾಗ್ರತೆಯಿಂದ ಮಹಾರಾಜರ ಪರಿವಾರದವರಲ್ಲಿ ಯಾರೂ ಎದ್ದು ನಿಲ್ಲುವ ಸಾಹಸಮಾಡಲಿಲ್ಲ.

ನದಿಯ ಸೆಳವು ನಾವೆಯನ್ನು ತಬ್ಬಿಕೊಳ್ಳುವಂತೆ ಜಗ್ಗಿತು. ರಭಸದಿಂದ ರಗೋಲಿನ ಹುಟ್ಟುಗಳು ಆಡಹತ್ತಿದವು. ಒಂದು ಹುಟ್ಟಿಗೆ ಇಬ್ಬರಂತೆ ಕುಳಿತಿದ್ದ ಂಬಿಗರು ತಮ್ಮ ರಟ್ಟೆಯಲ್ಲಿದ್ದ ಶಕ್ತಿಸರ್ವಸ್ವವನ್ನೆಲ್ಲ ವೆಚ್ಚಮಾಡಿ, ಪ್ರವಾಹದ ತ್ವವನ್ನು ಕಡೆಯುವಂತೆ ಹುಟ್ಟುಕಟಿದು, ಸೆಳವಿನಲ್ಲಿ ನಾವೆ ಪೂರ್ವಕ್ಕೆ ಲಿಪೋದರೂ ಹುಟ್ಟಿನ ಬಲದಿಂದ ಪ್ರವಾಹದಲ್ಲಿ ಆಚೆಯ ತೀರವನ್ನು ಸೇರು ಂತೆ ಪ್ರಯತ್ನಿಸಿದರು, ಎದುರಿಗೇ ನಡುಗಡ್ಡೆಯಿತ್ತು. ಪ್ರವಾಹ ತುಂಬಿಬಂದದ್ದ ಂದ ಅಲ್ಲಿಯ ಗಿಡಗಳೆಲ್ಲ ನೀರಿನಲ್ಲಿ ಮುಳುಗಿದ್ದರೂ ಅವು ನೀರಿನ ಸೆಳೆತವನ್ನು ಪ್ರತಿಬಂಧಿಸಿ ತಿರುಗಣಿ ಮಡುವುಗಳನ್ನು ಸೃಷ್ಟಿಸಿದ್ದವು. ನದಿಯಲ್ಲಿ ಏಳುವ ಸುಳಿ ಳಿಂದಲೆ ಆ ಸ್ಥಳಗಳನ್ನು ಗುರುತಿಸಿದ್ದ ಅಂಬಿಗರ ಶಿವಲಿಂಗ ಚುಕ್ಕಾಣಿಯನ್ನು ಥಟ್ಟನೆ ತಿರುಗಿಸಿ, ತಿರುಗಣಿಮಡುವಿನಿಂದ ನಾವೆಯನ್ನು ಪಾರುಮಾಡಿದ.

ಈಗ ಮಾತ್ರ ನಾವೆ ಪ್ರವಾಹದ ಮಧ್ಯದಲ್ಲಿ ಸ್ವಚ್ಛಂದವಾಗಿ ಸಾಗಿತು. ಡುಹೊಳೆಯ ಸೆಳವಿನ ಮೂಲಕ ವೇಗವೂ ಹೆಚ್ಚಾಗಿತ್ತು. ಪಾದಳ್ಳಿಯ ಗಿಡ, ನೆ, ತೋಟಗಳೆಲ್ಲ ಪೂರ್ವದಿಂದ ಕಿತ್ತಿಕೊಂಡು ಪಶ್ಚಿಮಕ್ಕೆ ಭರದಿಂದ ತಿರುಗಿ ಂತೆ ಕಾಣುತ್ತಿದ್ದವು.

ದಾದಾನ ಲಕ್ಷ್ಯ ಪ್ರವಾಹದ ಕಡೆಗಾಗಲಿ ನಾವೆಯ ಕಡೆಗಾಗಲಿ ಇರಲಿಲ್ಲ. ಈ ರೀತಿಯ ಜಲಪರ್ಯಟನ ಅವನಿಗೇನೂ ಹೊಸದಲ್ಲ. ಅವನ ಲಕ್ಷ್ಯವೆಲ್ಲ ತೀರದ ಮೇಲೆ ಕಟ್ಟಿತ್ತು. ದಂಡೆಯ ಮಣ್ಣು ಸಡಿಲಾಗಿ ಬಿದ್ದು, ಪ್ರವಾಹದ ಗುಂಟ ಸಾಗಿತ್ತು. ವರ್ಷವರ್ಷವೂ ನದಿ ಹೀಗೆ ಪಾದಳ್ಳಿಯ ಭೂಮಿಯನ್ನು ಕೊಚ್ಚಿ

ಕೊಂಡೇ ಹೋಗುತ್ತಿತ್ತು. ಪಾದಳ್ಳಿಯ ಭೂಮಿ ಕಾಲಾನುಕ್ರಮದಲ್ಲಿ ಬಂಜೆಯೂ ಆಗ ಬಹುದಾಗಿತ್ತು. ಪ್ರವಾಹದ ಗುಂಟ ದೊಡ್ಡದೊಡ್ಡ ಮರಗಳು ತೇಲಿಹೋಗುತ್ತಿದ್ದವು. ಅವಕ್ಕೆ ದಿಕ್ಕೆಲ್ಲೋ, ಗುರಿಯೆಲ್ಲೋ?

ದಾದಾನ ಮನಸ್ಸೂ ನದಿಯ ಪ್ರವಾಹದಂತೆಯೇ ಕ್ಷುಬ್ಧವಾಗಿತ್ತು; ಎದೆ ಬಡಿತಗಳು ಕಿವಿಗೆ ಕೇಳಿಸುವಂತಿದ್ದವು. ಇನ್ನು ಪಾದಳ್ಳಿಯನ್ನು ಕಾಣಬೇಕಾದ್ದು ಯಾವಾಗೋ ಏನೋ! ಅಸ್ಪಷ್ಟವಾಗಿ ಮೂಡಿ ಮಸುಳುವ ವಿಚಾರಗಳು ತೆರೆಗಳಂತೆ ಚಂಚಲವಾಗಿದ್ದವು. ಅಷ್ಟರಲ್ಲಿ ಅಂಬಿಗರು ಕೂಗಿಕೊಂಡ ದನಿ ಕೇಳಿತು. "ಎಚ್ಚರಪೋ ಎಚ್ಚರ! ಗಡ್ಡೀದೊಳಗ ನಾವು ಬಂದ್ಯೆತಿ. ನೀರಾಗಿನ ಗಿಡಾ ಕಂಡು ಗಕ್ಕನ ಅದರ ಟೊಂಗೀ ಹಿರೀಬ್ಯಾಡ್ರಿ. ಗಿಡದ ಟೊಂಗ್ಯಾಗ ಹಾವು ಕುಂತಿರತಾವು. ಎಚ್ಚರಪೋ ಎಚ್ಚರ!" ಎಂದು ನಾವೆಯಲ್ಲಿ ಕುಳಿತವರಿಗೆ ಮುನ್ನೆಚ್ಚರಿಕೆಯನ್ನು ಕೊಟ್ಟರು.

ಪಾದಳ್ಳಿಯ ದಂಡೆ ದೂರವಾಯಿತು. ದಂಡೆಯಲ್ಲಿ ಇನ್ನೂ ಜನರ ಹಿಂಡು ಕದಲದೆ ನಿಂತಿದ್ದರೂ ಒಬ್ಬರ ಮುಖವೂ ಗುರುತು ಹತ್ತುವಂತಿರಲಿಲ್ಲ. ಅಂತರದ ಮೂಲಕ ಜನಸಮೂಹವೆಲ್ಲ ನೀರಿನಂತೆಯೇ ಒಂದಾಗಿತ್ತು. ದಾದಾ ಅಂಥದರಲ್ಲಿಯೂ ಲಕ್ಷ್ಮಣನ ಮುಖವನ್ನು ಹುಡುಕುವ ಸಾಹಸ ಮಾಡಿ ಸೋತ. ಯಾರಾರೋ ಹೇಗೆಹೇಗೋ ಕಾಣುತ್ತಿದ್ದರು. ದಾದಾನ ಮನಸ್ಸು ಮತ್ತೊಮ್ಮೆ ಹಿಂಡಿದಂತಾಯಿತು.

ಅಂಬಿಗರ ಧ್ವನಿ ಮತ್ತೊಮ್ಮೆ ಕೇಳಬಂತು. "ದಡಾ ಹತ್ತಿತು. ಹಗ್ಗಾ ಹಿಡಕೋಳ್ರಿಪೋ!" ಎಂದು ಎಚ್ಚರಿಕೆ ಕೊಟ್ಟರು. ದಾದಾನಿಗೆ ನೆಲವನ್ನು ಕಂಡು ಸಮಾಧಾನವೆನಿಸಿತು. ಅರ್ಧ ತಾಸಿನ ಈ ನೀರ ಮೇಲಿನ ಪಯಣದಲ್ಲಿ ನೆಲಕ್ಕಂಟಿಕೊಂಡಿದ್ದ ಜೀವ ಪರದೇಶಿಯಾಗಿತ್ತು. ಮಹಾರಾಜರ ಕುದುರೆಗಳನ್ನು ನಾವೆಗೆ ಕಟ್ಟಿದ್ದರಿಂದ, ತುಂಬಿದ ನದಿಯಲ್ಲಿ 'ಭುರ್‌ಭುರ್' ಎಂದು ಉಸಿರು ಬಿಡುತ್ತ ನಾವೆಯೊಡನೆ ಈಸಿ ಈಸಿ ದಣಿದಿದ್ದವು. ಈಗ ನೆಲ ಮುಟ್ಟಲು ಅವೂ ಆತುರವಾಗಿದ್ದವು. ನಾವೆ ಎರೆಭೂಮಿಯ ದಂಡೆಗೆ ಹತ್ತಿತು. ಅಲ್ಲಿ ಇಳಿಯಲು ಸುಲಭವಾಗುವಂತೆ, ತೀರ ದಂಡೆಗೇ ನಾವೆ ನಿಲ್ಲುವಂತೆ ಹಗ್ಗವನ್ನು ಹಿಡಿದು ದಂಡೆಗುಂಟ ಒಂದು ಸಿರಕಲದ ವರೆಗೆ ಅದನ್ನು ಅಂಬಿಗರು ಎಳೆದೊಯ್ದರು. ಕುದುರೆಗಳ ಹಗ್ಗವನ್ನು ನಾವೆಯ ಗೂಟಕ್ಕೆ ಹಾಕಿ ಹಿಡಿದುಕೊಂಡಿದ್ದ ಸವಾರರು, ಈಗ

ಸಡಿಲುಬಿಟ್ಟದ್ದೇ ತಡ, ಕುದುರೆಗಳು ಆತುರದಿಂದ ಧಾವಿಸಿ ನೆಲಕ್ಕೆ ಜೋಲಿ ಕೊಟ್ಟವು. ನೀರಿನಲ್ಲಿ ನೆನೆದು ಹೋಗಿದ್ದ ಎರೆ ನೆಲದಲ್ಲಿ ಮೊಳಕಾಲು ಮಟ್ಟದ ಕೆಸರಿನಲ್ಲಿ ಅವುಗಳ ಕಾಲು ಸಿಕ್ಕವು. ಅವುಗಳನ್ನು ಮೊದಲು ಹುದುಲಿನಿಂದ ಕಿತ್ತಿ ಅಂಬಿಗರು ಪಾರು ಮಾಡಬೇಕಾಯಿತು.

ನಾವೆ ಸುಸೂತ್ರನಾಗಿ ಆಚೆಯ ದಡವನ್ನು ಮುಟ್ಟಿದ್ದನ್ನು ನೋಡಿ ಈಚೆಯ ದಡದಲ್ಲಿ ನಿಂತ ಪಾದಳ್ಳಿಯ ಜನರಿಗೆ ಹಗುರೆನಿಸಿತು. ಇಷ್ಟೊತ್ತಿನ ವರೆಗೆ ಎಲ್ಲಿ ಪ್ರವಾಹದಗುಂಟ ಸೆಳವಿಗೆ ಸಿಕ್ಕ ನಾವೆ ಅಂಬಿಗರ ಆಟೋಪ ತಪ್ಪಿ ಸಾಗುತ್ತದೋ ಎಂದು ವಿವಂಚನೆಗೆ ಒಳಗಾಗಿದ್ದರು. ಈಗ ಅದು ದೂರವಾಗಿ ಎಲ್ಲರೂ ತಿಳಿಮನಸ್ಸಿನಿಂದ ಹರಟಿ ಹೊಡೆಯುತ್ತ ಮನೆಯ ದಾರಿ ಹಿಡಿದರು.

ಯಶವಂತರಾಯ, ಶ್ಯಾಮರಾಯ ಹಾಗೂ ಬಾಳಾಚಾರ್ಯರು ವಾಡೆಯಲ್ಲಿ ಕಾಲಿಟ್ಟರು. ಕಳೆದ ಮೂರುದಿನಗಳಿಂದ ವಾಡೆಗೆ ಹೊಸ ಜೀವ ಬಂದಂತಾಗಿತ್ತು. ವಾಡೆಯ ಪೂರ್ವವೈಭವವೆಲ್ಲ ಮರುಕಳಿಸಿದಂತಾಗಿತ್ತು. ಆದರೆ ಈಗ ಮಹಾ ರಾಜರ ನಿರ್ಗಮನದಿಂದ ಇಮ್ಮಡಿಯಾಗಿ ಶೂನ್ಯತೆ ತುಂಬಿದಂತೆನಿಸಿತು.

"ಮಹಾರಾಜರು ಇದ್ದಾಗ ಹ್ಯಾಂಗ ವಾಡೆ ತುಂಬಿಧಾಂಗ ಕಾಣತಿತ್ತು? ಈಗ ಒಂದಃ ಸವನೆ ಭಣಗುಡತೈತಿ" ಎಂದು ಯಶವಂತರಾಯರು ನಿಟ್ಟುಸಿರಿಟ್ಟರು. "ಬರೇ ವಾಡೆಯೊಂದಃ ಯಾಕ ಪಾಟೀಲರ? ಇಡೀ ಊರಃ ಬರೇದಾದ್ಹಾಂಗ ನನಗನಸತದ. ಸಣ್ಣವನಿದ್ದಾಗಿನಂದನೂ ವಾಡೆ ತುಂಬಿದ್ದರ ಊರು ತುಂಬಿರತದ ಅಂತ ನನ್ನ ತಿಳವಳಿಕಿ" ಎಂದು ಬಾಳಾಚಾರ್ಯರು ತಮ್ಮ ಭಾಷ್ಯವನ್ನೂ ಜೋಡಿಸಿ ದರು.

ಮೂವರು ಇಂಥವೇ ಭಾವನಾತ್ಮಕ ಮಾತುಕತೆಗಳಲ್ಲಿಯೇ ನಿರತರಾದರು. ಯಶವಂತರಾಯರ ಮನಸ್ಸಿನಲ್ಲಂತೂ ಎಲ್ಲಿಲ್ಲದ ಬೇಸರ ತುಂಬಿದಂತಾಗಿತ್ತು. ಮಹಾರಾಜರು ಬಂದ ಈ ಪ್ರಸಂಗದಲ್ಲಿ ಅವರು ತಮ್ಮ ಇಳಿ ವಯಸ್ಸಿನ ದಣಿ ವನ್ನೂ ಮರೆತು ದುಡಿದಿದ್ದರು. ಈಗ ಕೆಲಸವಿಲ್ಲದಂತಾಗಿತ್ತು. ಬಾಳಾಚಾರ್ಯರಿಗೆ ಒಂದೆರಡು ದಿನ ತಲೆತಿನ್ನುವ ವಿಚಾರಗಳಿಂದ ಬಿಡುಗಡೆ ಪಡೆದಂತೆನಿಸಿತ್ತು. ಈಗ ಮತ್ತೆ ವಿಚಾರಗಳು ದಾಳಿಯಿಟ್ಟವು. ಜೀವನದ ಕೊನೆಗಾಲದಲ್ಲಿದ್ದ ಇವ ರಿಬ್ಬರಿಗೂ ಇಂಥ ಬೇಸರ ಸಹಜವಾಗಿತ್ತು. ಇನ್ನೂ ಯುವಕನಾದ ಶ್ಯಾಮರಾಯ ಮಾತ್ರ ಏನೇನೋ ಯೋಜನೆಗಳಲ್ಲಿಯೇ ತೊಡಗಿದ್ದ. ಆದರೆ ಉತ್ಸವ ಮುಗಿದ

ಮೇಲೆ ಕವಿಯುವ ಬೇಸರ ಅವನ ಮೇಲೂ ನೆರಳು ಕೆಡವಿತ್ತು.

ಅಷ್ಟರಲ್ಲಿ ಕಾಶೀಮಸಾಹೇಬರನ್ನು ಮೊದಲುಗೊಂಡು ಜಾಗೀರದಾರರ ರೈತರೆಲ್ಲ ಬಂದು ಮುಜುರೆ ಮಾಡಿ ಪಡಸಾಲೆಯ ಒಂದು ಭಾಗದಲ್ಲಿ ಕುಳಿತು ಕೊಂಡರು. ತಮ್ಮ ಮುಂದಿರುವ ಕೆಲಸವೇನೆಂಬುದನ್ನು ಅವರು ಶ್ಯಾಮರಾಯ ನಿಂದ ತಿಳಿದುಕೊಳ್ಳಬೇಕಾಗಿತ್ತು; ಮಹಾರಾಜರು ತಮಗಿತ್ತ ಆದೇಶವನ್ನೂ ಅರಿತುಕೊಳ್ಳಬೇಕಾಗಿತ್ತು. ಶ್ಯಾಮರಾಯ ಅದನ್ನೆಲ್ಲ ವಿವರಿಸತೊಡಗಿದ. ರೈತರ ಹಿಂದಿನ ಬಾಕಿ ಎಷ್ಟೇ ಇದ್ದರೂ ಅದನ್ನೆಲ್ಲ ಸೂಟು ಬಿಡಬೇಕು. ಸ್ವಂತ ಕಮತ ಕ್ಕೆಂದು ಇದ್ದ ನಂಬರುಗಳನ್ನು ಕಬುಲಾಯತಿ ತೆಗೆದುಕೊಂಡು ರೈತರಿಗೆ ಲಾವಣಿ ಸಾಗಿಸಲು ಕೊಡಬೇಕು. ಮಹಾರಾಜರ ಅಭಿಪ್ರಾಯಗಳನ್ನು ಶ್ಯಾಮರಾಯ ತಿಳಿಸಿದ.

ಜಾಗೀರದಾರರ ಸ್ವಂತ ಕಮತಕ್ಕೆಂದಿಟ್ಟುಕೊಂಡಿದ್ದ ಭೂಮಿಗಳ ರೈತ-ಬಾಪೂಸಾಹೇಬನೆಂದು ಸರಕಾರಿ ಲೆಕ್ಕದಲ್ಲಿ ಶೇಷಪ್ಪ ಬರೆದದ್ದು ಕೆಲರೈತರಿಗೆ ತಿಳಿದ ಮಾತಾಗಿತ್ತು. ಈಗ ಆ ಹೊಲಗಳನ್ನು ಕೂಡ ಲಾವಣಿಗೆ ಕೊಡಲು ಮಹಾರಾಜರು ನಿರ್ಧರಿಸಿದ್ದನ್ನು ಕೇಳಿ ಕೆಲರೈತರಿಗೆ ಸಂತೋಷವಾಯಿತು. ಆದರೆ ವಾಡೆಯ ಕಮತದಲ್ಲಿ ದುಡಿಯುತ್ತ ಬರದಿದ್ದ ಆಳು-ಹೋಳುಗಳಿಗೆ ಮಾತ್ರ ತಮಗೆ ಇನ್ನು ಮೇಲೆ ವಾಡೆಯ ಆಧಾರ ತಪ್ಪಿತೆಂದು ಅಸಮಾಧಾನವಾಗ ತೊಡಗಿತು.

ವಾಡೆಯ ಕಮತಿಗನಾದ ಕರಿಯಪ್ಪ ಈಗ ಮುಂಪೆ ಬರದೆ ನಿರ್ವಾಹವಿರ ಲಿಲ್ಲ. "ಧನ್ಯಾರ, ಆನಬುನಾದಿಯಿಂದ ನಡಕೊಂತ ಬಂದ ವಾಡೇದ ಕಮತ ನಿಂತರ, ವಾಡೇದ ಸಿರೀನ‌ಃ ಹೋಗತತಿ. ಕಮತಿಗ್ಯಾರಿಗೆಲ್ಲ ಬಾಪೂಸಾಬರು ಎತ್ತು, ಗಳೇದ ಸ್ವಾಮಾನಾ ಎಲ್ಲಾ ಕೊಡಿಸಿ, ಒಂದ ರೀತೀಲೆ ಕಮತಾನೂ ಇಟ್ಟೆರಬೇಕು. ಇನ್ನೊಂದು ರೀತೀಲೆ ಕೋರಿನಿಂದಲೂ ಸಾಗಸಬೇಕು ಅಂತ ಹಂಚಿಕಿ ಹಾಕಿದ್ದು ಇನ್ನೂ ಕಣ್ಣ ಮುಂದ ಐತಿ. ಅವರು ಕೊಟ್ಟ ಅನ್ನಾ ಹಾರ ಹೊಡದು ಬಡವರ್ನ ಅನ್ನಾನ್ನಗತಿ ಮಾಡಬಾರದು ಅಂತ ನಮ್ಮ ಹೇಳಿಕಿ ಐತಿ." ಎಂದು ತನ್ನ ಬೇಡಿಕೆಯನ್ನು ಮುಂಡಿಸಿದ.

ಅದಕ್ಕೆ ಶಾಮರಾಯ ಮತ್ತೆ ತನ್ನ ವಾದವನ್ನೇ ಹೇಳಿದ. ಮಹಾರಾಜರ ಮಾತು ನಡೆಸುವದೇ ತನ್ನ ಕರ್ತವ್ಯ. ಮೇಲಾಗಿ ಇಷ್ಟು ದಿನ ಕಮತದ ಆಳು

ಗಳಾಗಿ ದುಡಿದವರಿಗೆ ರೈತರಾಗೆಂದರೆ ಏನು ಕೇಡು? ಎತ್ತು ಹಾಗು ಗರೇದ ಸಾಮಾನುಗಳನ್ನು ಮಹಾರಾಜರ ಹೆಸರಿನಿಂದ ಒಂದು ಯಾದಿ ಮಾಡಿ ಲೆಕ್ಕವಿಡಬೇಕು. ಆಳುಗಳೆಲ್ಲ ರೈತರಾಗಿ ದುಡಿಯಬೇಕು ಎಂದು ಹೇಳಿದ.

ಆದರೆ ಕರಿಯಪ್ಪನಿಗೆ ಈ ಮಾತು ಹಿಡಿಸಲಿಲ್ಲ. ಭೂಮಿಯನ್ನೇನೋ ಕೊಟ್ಟದ್ದಾಯಿತು. ಆದರೆ ಅದಕ್ಕೆ ಮುಂದೇನೂ ವೆಚ್ಚವಿಲ್ಲವೇ? ಬೀಜ, ಗೊಬ್ಬರ, ಹರಗಿ ಬಿತ್ತುವ ಕೂಲಿ ಇವಕ್ಕೆಲ್ಲ ಏನು ಮಾಡಬೇಕು? ಬಡವರಿಗೆ ರೈತರಾಗಿ ದುಡಿಯಲು ತ್ರಾಣವಿಲ್ಲ ಎಂದು ಅಡ್ಡ ಮಾತಿಗೆ ಪ್ರಾರಂಭಿಸಿದ. ಕಾಶೀಮ ಸಾಹೇಬನಿಗೆ ಕರಿಯಪ್ಪನ ಮಾತು ಕೇಳಿ ಸಿಟ್ಟೇ ಬಂತು. "ಅಲ್ಲೋ ಕರಿಯಾ, ಕೈಲಾಗದವರ್ಹಾಂಗ ಮಾತಾಡಿದರ ಏನ ಹೇಳಬೇಕು? ನಮ್ಮ ಅಪ್ಪ ವಾಡೇದ ಜೀತಾ ಮಾಡಿಕೊಂತನs ರೈತ ಆದ. ನಿಮಗ ಹಾಗ ರೈತರಾಗಿ ಬಾಳೇ ಮಾಡೂದು ಬ್ಯಾಡಾಗಿದ್ದರ ಬಿಡರಿ. ರಟ್ಟೆ ಮುರದು ದುಡಿಯಾವಗ ಹೊಟ್ಟೆ ತುಂಬ ಲೆಕ್ಕೆ ಇಡೀ ದೇಶಾನs ಬಿದ್ದೈತಿ. ನೀವು ಮಾಡತೀವಂದರ ನಿಮಗ ನೀಗೂವಟು ಕೊಡಾಕ ಬಂದೀತು. ಇಲ್ಲದಿದ್ದರ ಉಳಿದ ರೈತರಾಗ ಹಂಚಬೇಕಾಗತೈತಿ" ಎಂದು ಖಂಡತುಂಡವಾಗಿಯೇ ಹೇಳಿಬಿಟ್ಟ. ಕರಿಯಪ್ಪನಿಗೂ ಸಿಟ್ಟು ಬಂತು. "ಅಂದರ? ನಾವೆಲ್ಲಾ ಹೊತ್ತ ಅರಬೀಲೆ ಹೊರಬಿದ್ದು ಹೋಗಬೇಕಂತ ಹೇಳಿದ್ಹಾಂಗ ಆತಲಾ ನಿನ್ನ ಮಾತಿನ ಮರ್ಮ?" ಎಂದು ಕೆಣಕಿದ.

ಯಾರು ಎಷ್ಟು ಹೇಳಿದರೂ ಕರಿಯಪ್ಪ ತನ್ನ ವಾದವನ್ನೇನೂ ಬಿಡಲಿಲ್ಲ. ವಾಡೆಯ ಕಮತವನ್ನೇ ಮುಂದುವರಿಸಬೇಕೆಂದು ಹಟ ಹಿಡಿದ. ಶ್ಯಾಮರಾಯ ಅದನ್ನು ಕೇಳಲೇ ಇಲ್ಲ. ಉಳಿದ ರೈತರಿಗೂ ಅದು ಒಪ್ಪಿಗೆಯಾಗಿರಲಿಲ್ಲ. ರೈತರೆಂದು ಕರೆಸಿಕೊಳ್ಳುವ ಹಂಬಲ ಅವರಿಗೂ ಬಲವಾಗಿತ್ತು. ಅನಾಯಾಸವಾಗಿ ಒದಗಿ ಬಂದ ಈ ಅವಕಾಶವನ್ನು ಕಳೆದುಕೊಳ್ಳಲು ಅವರು ಸಿದ್ಧರಿರಲಿಲ್ಲ.

ಕರಿಯಪ್ಪನ ವಾದದಿಂದ ಹುಟ್ಟಿದ ಬೇಸರದಲ್ಲಿಯೇ ಆ ಸಭೆ ಮುಕ್ತಾಯಗೊಂಡಿತು. ಯಾರಿಗೂ ಮಾತು ಬೆಳೆಸುವ ಇಚ್ಛೆಯಾಗಲಿಲ್ಲ. ಸಭೆ ಇನ್ನೂ ನಡೆದಿರುವಾಗಲೇ ಬಾಳಾಚಾರ್ಯರು ಹೊರಟು ಬಿಟ್ಟರು. ಮುಂದೆ ಸ್ವಲ್ಪ ಹೊತ್ತಿಗೆ ಶ್ಯಾಮರಾಯನೂ ಎದ್ದ. ರೈತರಿಗೂ ಅಲ್ಲಿ ಕೂಡಬೇಕೆಂದು ಮನಸ್ಸಾಗಲಿಲ್ಲ. ಎಲ್ಲರೂ ಎದ್ದು ಹೊರಟರು.

ಕರಿಯಪ್ಪ ವಾಡೆಯಿಂದ ಎದ್ದು ತನ್ನ ಮನೆಗೆ ಹೊರಟಿದ್ದ. ಮಠದ

ಮುಂದೆ ಹಾದು ಹೋಗುವಾಗ ಮಠದಲ್ಲಿ ಜನರ ಹಿಂಡು ಸೇರಿದ್ದನ್ನು ನೋಡಿ ತಾನೂ ಒಳಗೆ ಬಂದ. ಪಡದಪ್ಪ ಲಿಂಗಪ್ಪನವರಿಬ್ಬರೂ ಮಠದ ಸದರಿನಲ್ಲಿ ಚಕ್ಕಂದವಾಗಿ ಕುಳಿತಿದ್ದರು. ಗಾಂಜೀ ಭಕ್ತರ ಪರಿವಾರ ಎಂದಿನಂತೆ ಭಕ್ತಿಯಿಂದ ಅವರ ಸುತ್ತ ಸೇರಿ ಊರ ಹರಟೆಯಲ್ಲಿ ತೊಡಗಿತ್ತು.

ಹಿಂದಕ್ಕೆ ಕೆಂಚನಿದ್ದಾಗ ಮಠದಲ್ಲಿ ಸೇರುತ್ತಿದ್ದ ಸಭೆಯೇ ಇಂದು ಸೇರಿತ್ತು. ಒಬ್ಬಿಬ್ಬರು ಕಣ್ಮರೆಯಾಗಿದ್ದರು. ಮತ್ತೆ ಕೆಲವರು ಬಂದಿರಲಿಲ್ಲ. ಆದರೆ ಸತ್ತವರ ಸ್ಥಳಗಳನ್ನು ತುಂಬುವ ವೀರರಿಗೇನೂ ಕೊರತೆ ಇರಲಿಲ್ಲ. ವಾತಾವರಣದಲ್ಲಿ ಯಾವ ರೀತಿಯ ಬದಲಾವಣೆಯೂ ಕಾಣುತ್ತಿರಲಿಲ್ಲ. ಪಡದಪ್ಪನವರಿದ್ದಾಗ ನಡೆಯುವ ಹರಟೆಯೇ ಸಾಗಿತ್ತು; ಅವೇ ರೀತಿಯ ನಗೆಮಾತುಗಳು ಬಾಯಿಂದ ಬಾಯಿಗೆ ಹಾರಿಹೋಗಿ ನಗೆಯ ತೆರೆಗಳನ್ನೆಬ್ಬಿಸುತ್ತಿದ್ದವು. ಆದರೆ ಕೆಂಚನಿಲ್ಲದ್ದರಿಂದ ಗಾಂಜಿಯನ್ನು ಮಿದ್ದಿ ಸ್ವಾರಸ್ಯವಾಗಿ ಹದಗೊಳಿಸಿ ಚಿಲುಮೆಯನ್ನು ತಯಾರಿಸಿ ಕೊಡುವ ಕೆಲಸ ನಡೆದಿರಲಿಲ್ಲ. ಅದರೊಡನೆ ಕೆಂಚನ ಅಷ್ಟೇ ಸ್ವಾರಸ್ಯವಾದ ಹರಟೆಯೂ ಮಾಯವಾಗಿತ್ತು. ಪಡದಪ್ಪನವರಿಗೆ ಅದರಿಂದ ತಮ್ಮ ಬಲಗೈಯೇ ಕಡಿದು ಹೋದಷ್ಟು ದುಃಖವೂ ಆಗಿತ್ತು.

ಕರಿಯಪ್ಪ ವಾಡೆಯ ಕಮತಿಗರಲ್ಲಿಯೇ ಹಿರಿಯವನೆಂದು ಅವನಿಗೆ ಕಮತಿಗರ ಕೆಲಸದ ಮೇಲ್ವಿಚಾರಣೆಯ ಹೊಣೆಯೂ ಇರುತ್ತಿತ್ತು. ಅಂತೆಯೇ ಅವರು ಮಠದ ಸಭೆಗಳಲ್ಲಿ ನಿತ್ಯವೂ ಭಾಗವಹಿಸುತ್ತಿರಲಿಲ್ಲ. ಪಡದಪ್ಪನವರು ಬಿಟ್ಟು ಹೋದ ಮೇಲೆ ತಿರುಗಿ ಇಂದೇ ಅವನು ಮಠದಲ್ಲಿ ಕಾಲಿಟ್ಟದ್ದು.

ಅವನನ್ನು ಬಾಗಿಲಲ್ಲಿ ನೋಡಿದ ಕೂಡಲೇ ಪಡದಪ್ಪನವರ ಮುಖ ಕುತೂಹಲದಿಂದ ಅರಳಿತು. "ಬಾರಪಾ ಕರಿಯಾ ಬಾ. ಜಾಗಾ ಬಿಡ್ರೆಲೇ ಅವಗ. ಮ್ಯಾಗ ಬಾ ಕರಿಯಾ, ಕೆಂಚನ ಜಾಗಾ ಖಾಲಿ ಬಿದ್ದದ್ದು ನಿನ್ನ ಕೈಮಾಡಿ ಕರೀತೈತಿ ಬಾ" ಎಂದು ಎಂದಿಲ್ಲದ ಆತ್ಮೀಯತೆಯಿಂದ ಅವನಿಗೆ ಆಮಂತ್ರಣವಿತ್ತರು. ಕರಿಯಪ್ಪ ಈ ಸುಸ್ವಾಗತದಿಂದಲೇ ದಿಂಗುಬಡೆದು, ಹುಚ್ಚುಚ್ಚು ನಗೆಯಿಂದ ವಿಸ್ಮಯವನ್ನು ಅಡಗಿಸಲು ಪ್ರಯತ್ನಿಸಿದ.

"ಈಗೇನರಿ, ಅಂವಾ ಮಹಾರಾಜರ ಕಮತಿಗ, ಕೆಂಚನ ಜಾಗಾ ಕೈಮಾಡಿ ಕರದರೂ ಅಲ್ಲಿ ಕುಂಡ್ರಾಕ ಅಂವಾ ಒಪ್ಯಾನರೇ?" ಎಂದು ಹೊಲೆಯರ ರುದ್ರ ಬಾಯಿಬಿಟ್ಟ. "ಕಮತಾ ತಗದು ಹೊಲಾ ರೈತರಿಗೆ ಸಾಗ ಹಾಕಿದ ಬಳಿಕ

ಮಠಾನss ಅಲ್ಲರೇ ನಮಗೆಲ್ಲಾ ಆಸರ?" ಎಂದು ಅದಕ್ಕೆ ನಿಟ್ಟುಸಿರಿನ ಉತ್ತರ ವನ್ನು ಕೊಟ್ಟು, ಕರಿಯಪ್ಪ ಪಡದಪ್ಪನವರ ಪಾದಮುಟ್ಟಿ ನಮಸ್ಕರಿಸಿ, ಅವರು ಕೈಮಾಡಿ ತೋರಿದ ಸ್ಥಳದಲ್ಲಿ ಬಂದು ಕುಳಿತುಕೊಂಡ.

ಇದನ್ನು ಕೇಳಿದೊಡನೆ ಎಲ್ಲರ ಕುತೂಹಲ ಬಾಯಿ ತೆರೆಯಿತು. ಹೊಸ ಸುದ್ದಿ ಹೊಸ ಹೆಂಡದಷ್ಟು ರುಚಿಕರವಾಗಿತ್ತು. ಅಂತೂ ಒಂದು ದಿನದ ಹರಟಿ ಸ್ವಾರಸ್ಯವಾಗುವದರಲ್ಲಿ ಏನೂ ಸಂಶಯ ಉಳಿದಿರಲಿಲ್ಲ. "ಅದ್ಯಾಕರಿ? ಕಮತಾ ತಗದು ನಮ್ಮ ಹೊಲಿಗೇರಿ ಜನರ ಬಾಯಿಗೆ ಗಡ್ಡಿ ಕೊಡಬೇಕಂತ ನಡಸ್ಯಾರೇನರಿ ಕರಿಯಪ್ಪನೋರ?" ಎಂದು ಹೊಲೆಯರ ರುದ್ರ ತಡೆಯಲಾರದೆ ಕೇಳಿದ. ತಾನು ಬಿಟ್ಟ ಬಾಣ ತನ್ನೆಡೆಗೇ ತಿರುಗಬಹುದೆಂದು ಅವನು ಊಹಿಸಿರಲಿಲ್ಲ. ಜಾಗೀರ ದಾರರ ಕಮತದ ಭೂಮಿಯಲ್ಲಿ ಬಿಡಿ ಆಳುಗಳಾಗಿ ದುಡಿಯುವದು ಹೊಲೆಯರಿ ಗೆಲ್ಲ ಕಾದಿಟ್ಟ ಕೆಲಸವಾಗಿತ್ತು. ಅವರೆಲ್ಲ ಬಿಟ್ಟಿ ಕೆಲಸದವರು. ಅವರನ್ನು ಕೂಲಿಗೆ ಹಚ್ಚಿ ದುಡಿಸಿಕೊಂಡರೆ ಕೆಲಸ ಚನ್ನಾಗಿ ನಡೆಯದೆಂದು ಯಾವ ರೈತನೂ ಅವರನ್ನು ಕೆಲಸಕ್ಕಿಟ್ಟುಕೊಳ್ಳುತ್ತಿರಲಿಲ್ಲ. ಜಾಗೀರದಾರರ ಭೂಮಿಯಲ್ಲಿ ಮಾತ್ರ ಅವರೇ ಯಜಮಾನರಾಗಿರುತ್ತಿದ್ದರು. ಭೂಮಿಯ ಬೆಳೆಯಲ್ಲಿ ಅವರು ತೆಗೆದು ಕೊಂಡಷ್ಟು ಸ್ವಾತಂತ್ರ್ಯವಿರುತ್ತಿತ್ತು. ವಾಡೆಯ ಕಮತ ಹೊಲೆಯರಿಗೆಲ್ಲ ಜೀವನಾಧಾರವಾಗಿತ್ತು. ಆದರೆ ಕರಿಯಪ್ಪನ ಸುದ್ದಿ ಎದೆಯೊಡೆಸುವಂಥದಿತ್ತು. ಅದ್ದರಿಂದಲೇ ಹೊಲೆಯರ ರುದ್ರ ಗಾಬರಿಗೊಂಡು ಅದರ ಸತ್ಯಾಸತ್ಯತೆಯನ್ನು ಒರೆಗೆ ಹಚ್ಚಲು ಈ ಪ್ರಶ್ನೆಯನ್ನು ಆತುರದಿಂದ ಕೇಳಿದ್ದ.

"ಇದss ಮಾತಿಗೇ ಈಟೊತ್ತನಾ, ವಾಡೇದೊಳಗ ರೈತರ ಗೂಡಾ, ಸ್ವಾಮಣ್ಣವರ ಗೂಡಾ ಮಾದಸ್ಯಾಡಿ ಇತ್ತ ಬಂದೀನು. ಏನ್ಮಾದರೂ ಕಮತಾ ಮುರದss ತೀರಬೇಕಂತ ಕುಂತಾರ ಅವರೆಲ್ಲ" ಎಂದು ಬೇಸರದಿಂದಲೇ ಕರಿಯಪ್ಪ ನುಡಿದ.

"ಬಡವರ ಬಾಯಿಗೆ ಮಣ್ಣುಹಾಕಲಾಕss ಮಹಾರಾಜರು ಈ ಊರಿಗೆ ಬಂದಿದ್ದರನಬಾರದು ಹಾಗಾರ?" ಎಂದು ರುದ್ರ ಸಂಕಟದಿಂದಲೇ ತನ್ನ ಭಾವನೆ ಯನ್ನು ವ್ಯಕ್ತಗೊಳಿಸಿದ.

"ನಾ ಹೇಳಿದರ ಎಲ್ಲಿ ಕೇಳತೀರಿಪಾ ಮಕ್ಕಳ? ಬಡವರ ತಂದಿ ಅಂತ ಮಹಾರಾಜರ ಸಂತ್ಯಾಕ ಹೋದಷ್ಟಕ್ಕ ಬೇನ್ಯಾತೋ ಇಲ್ಲೋ" ಎಂದು ನುಡಿದು

ಪಡದಪ್ಪನವರು ಕರಿಯಪ್ಪನ ಕಡೆಗೆ ಹೊರಳಿ, "ಹೀಂಗ್ಯಾಕ ಕೈಸೋತವರಹಾಗ ಕುಂತೆಲೇ? ಸುಮ್ನಾಕ ಚಿಲಮಿ ಸಜ್ಜ ಮಾಡಬಾರದ?" ಎಂದು ಆಜ್ಞೆಯಿತ್ತರು.

"ಏ ಇಲ್ಲ ತಗೀರಿ. ಚಿಲಮಿ ಸಜ್ಜ ಮಾಡಲಾಕ ಆಗದs ಕೈಸೋತು ಕುಂಡರೂ ಹೇಡಿ ಅಂತ ತೀಳಿಬ್ಯಾಡ್ರಿ. ಹುಟ್ಟಿಸಿದ ದೇವರು ಹುಲ್ಲು ಮೇಯಿಸ ತಾನೇನರಿ?" ಎಂದು ಹೇಳಿ ಕರಿಯಪ್ಪ ಚಿಲುಮೆಗೆ ಕೈನೀಡಿದ.

ಪಡದಪ್ಪನವರು ಈಗ ಲಿಂಗಪ್ಪನ ಕಡೆಗೆ ತಿರುಗಿದರು. "ನೋಡಿದಿರಿಲ್ಲೊ ಗೌಡರ? ನಮ್ಮ ಜನಾ ಎಲ್ಲಾ ಹುರಪಿನದೈತಿ. ಅವರ್ನ ಯೋಗ್ಯದಾರಿಗೆ ಹಚ್ಚೂದು ನಿಮ್ಮನ್ನ ಕೂಡೈತಿ. ಕರಿಯಾ ಕಾಳಜಿ ಮಾಡಬ್ಯಾಡಲೇ. ಗೌಡರು ತಮ್ಮ ಭೂಮಿ ಕಮತಾ ನಿನಗs ಒಪ್ಪಿಸಿಕೊಡತಾರು. ಗೌಡರ ಹೊಲದ ಕಮತಾ ವಾಗಾತ್ಯದಿಂದ ಮಾಡಿಸಿಗೊಂತ ಇದ್ದಬಿಡು. ಮಹಾರಾಜರ ಭೂಮಿ ನೀನಿಲ್ಲದ ಬೀಜಾ ಹ್ಯಾಗ ಕಾಣತೈತಿ ನೋಡೂಣು." ಎಂದು ದ್ವೇಷದ ಮತ್ತೊಂದು ಬೀಜ ವನ್ನು ಬಿತ್ತಿದರು.

"ಗೌಡರ ಭೂಮಿ ಗೌಡರ ತಾಬೇದಾಗ ಬಂದಮ್ಯಾಗ ಅವರು ಕಮತಾ ಇಡತಾರು. ಆದರ ಪಾರ್ವತೆವ್ವ ಸುಸೂತ್ರ ಭೂಮಿ ತಾಬೇ ಕೊಟ್ಟಾಳರೇ?" ಕರಿಯಪ್ಪ ಅನುಮಾನಿಸಿದ.

"ಬಡಜನರು ಬದಕಬೇಕು ಅಂತ ಆ ಭೂಮಿ ಕಬಜಾ ತೊಗೋಬೇಕಾಕೈತಿ. ಬಡಜನರಿಗೆ ಅನ್ನಾಹಾಕೂ ಧೊರೀ ಲಿಂಗಪ್ಪ ಗೌಡರು ಕಬಜಾ ತೊಗೊಣ್ಣಾಕ ನಿಂತರ ಅದೇಟೊತ್ತಿನ ಮಾತು? ನೀವೆಲ್ಲಾ ಮನಸು ಮಾಡಿದರ ನಾಳಿಗೇ ಆ ಭೂಮ್ಯಾಗ ಕುಂಟಿ ಕಟ್ಟಿಬಿಡಬಹುದು. ಯಾಕಲೇ ರುದ್ರ್ಯಾ, ಹೊಲೆಗೇರಿ ಜನಾ ಏನಂತೈತಿ?" ಎಂದು ಸೂಚ್ಯವಾಗಿ ಪಡದಪ್ಪನವರು ನುಡಿದು ರಣರಂಗವನ್ನು ಸಜ್ಜುಗೊಳಿಸಿದರು.

"ಮಾರಾಜರು ಕೊಟ್ಟ ಕಾಳು ಒಂದು ತಿಂಗಳ ಆದಾವರೀ. ಅಲ್ಲೀಮಟಾ ಹೊಲೆಗೇರಿ ಜನಾ ಯಾವ ಚಿಂತಿನೂ ಮಾಡೂದುಲ್ಲ. ಅದಾದ ಮ್ಯಾಗ ಬಡವರ ತಾಯಿತಂದಿ ನೀವದೀರಲ್ಲರಿ? ಏನಾರ ಹಾದೀ ತಗದು ಮುಂದಿನ ರೊಟ್ಟಿ ಕಾಣಿಸ ತೀರಿ ಅಂತ ನೆಂಬಿಕೊಂಡು ಅದಾವರ್ರಿ" ರುದ್ರ ಹೊಲೆಗೇರಿಯಲ್ಲಿಯ ಜನರ ಬಾಳಿನ ಹೊಣೆಯನ್ನೆಲ್ಲ ಪಡದಪ್ಪನವರ ಮೇಲೆಯೇ ತೂರಿದ.

"ಗೌಡರ ಹಗೇದಾಗ ಇನ್ನೂ ನೂರು ಚೀಲ ಕಾಳ ಅದಾವು. ಅವನ್ನೆಲ್ಲಾ

ಲಿಂಗಪ್ಪ ಗೌಡರು ಬಡವರಿಗೆ ಕಡಾ ಕೊಡಬೇಕೂ ಅಂತ ನಿನ್ನೆ ಅವರಿಗೆ ಹೇಳಿ ಬಿಟ್ಟೇನು. ಯಾಕರಿ ಗೌಡರ ಹಗೇದಾಗಿನ ಕಾಳ ತಗಿಸಿ ಬಡವರಿಗೆ ಹಂಚಿ ಕೊಡಾಕ ನಿಮ್ಮ ಕಬೂಲಿ ಇದ್ದರ ಹೇಳ್ರಿ. ಈ ಜನಾ ಏನ ಬೇಕಾದದ್ದು ಮಾಡಾಕ ತಯಾರದಾರ. ಅವರ ಹೊಟ್ಟೆಬಟ್ಟೆ ನೋಡೂದು ನಿಮ್ಮ ಧರ್ಮ." ಪಡದಪ್ಪನವರು ಲಿಂಗಪ್ಪಗೌಡನನ್ನು ಕಾರ್ಯಪ್ರವೃತ್ತನನ್ನಾಗಿ ಮಾಡಬೇಕೆಂದು ಹವಣಿಸಿದರು.

ಲಿಂಗಪ್ಪನಿಗೆ ಏನುಮಾಡಬೇಕೆಂಬುದೇ ತಿಳಿಯಲಿಲ್ಲ. ತಾನಿನ್ನೂ ಊರ ಗೌಡನೆಂದು ಅವನಿಗೇ ಅನಿಸಿರಲಿಲ್ಲ. ಆದರೆ ಪಡದಪ್ಪನವರ ಮಾತನ್ನು ಹೇಗೆ ಅಲ್ಲಗಳೆಯುವದು? "ನನಗಾಗಿ ಈ ಗೌಡಕಿ ಪಟ್ಟ ಎಲ್ಲಿ ಬೇಕಾಗೇತಿ? ಅದು ಬ್ಯಾಡಾ ಅಂತ ಹೋದಾವನ್ನ ಕರದ ತಂದೀರಿ, ನಿಮ್ಮ ಮಾತು ನಡಸಾಕ ನಾ ಒಲ್ಲೆ ಅಂತ ಹ್ಯಾಗ ಹೇಳಲಿ?" ಲಿಂಗಪ್ಪ ಅನಾಸಕ್ತನಾಗಿಯೇ ಮಾತಾಡಿದ.

"ಕೇಳಿದಿರಿಲ್ಲೋ? ಗೌಡರು ಬಡವರ ಕೈಬಿಡೂದುಲ್ಲ. ಅವರ ಕೈ ನೀವು ಬಿಡಬಾರದು. ಯಾರಿಗೆ ಭೂಮಿ ಸೀಮಿ ಅದಾವು ಅವರು ಮಹಾರಾಜರ ರೈತರಾಗಿ ಮೆರೀಲಿ. ಪಾರ್ವತೆವ್ವನ ಬೆನ್ನಕಟ್ಟಿ ಉಡಿ ತುಂಬಿಕೊಳ್ಳಲಿ. ಬಡವರು ಲಿಂಗಪ್ಪಗೌಡರ ಬೆನ್ನಿಗೆ ನಿಂತು, ಏನು ಮಾಡ್ಯಾರು ಎನು ಮಾಡಲಿಕ್ಕಿಲ್ಲ ಇದನ್ನ ತೋರಿಸಿಕೊಡಲಿ" ಎಂದು ಗಂಭೀರವಾಗಿ ಪಡದಪ್ಪನವರು ಕಣಿಹೇಳಿದರು.

ಕೂಡಿದ ಜನರಲ್ಲಿ ಕಾರ್ಯೋತ್ಸಾಹ ಒಮ್ಮೆಲೆ ಜಾಗೃತವಾಯಿತು. ಪಡದಪ್ಪನವರ ಮಾತಿನಸರಣಿಯಲ್ಲಿ ಯಾವ ಲಾಭದ ಆಸೆ ಮಿನುಗಿತ್ತೋ ಹೇಳಬಲ್ಲವರಾರು? ಪರಿವಾರದಲ್ಲಿಯೇ ಮಿಂಚು ಹರಿದಾಡಿದಂತಾಯಿತು.

"ಅಪ್ಪನವರು ಹೇಳೂಮಾತ ಸೈ. ನಾವು ಹೊಲಿಗೇರಿಯುವರೆಲ್ಲಾ ಅಪ್ಪನವರು ಹೇಳಿದ ಮಾತು ನಡಸತೀವೆಂತ ತಿಳೀರಿ" ಹೊಲೆಯರ ರುದ್ರ, ಉತ್ಸಾಹಿತನಾಗಿ ಹೊಲಿಗೇರಿಯ ಪರವಾಗಿ ತನ್ನ ಅಭಿಪ್ರಾಯವನ್ನು ಸೂಚಿಸಿದ. ಪಡದಪ್ಪನವರ ಅಗಾಧವಾದ ಕರ್ತೃತ್ವ ಶಕ್ತಿಗೆ ಅವನು ಸಲ್ಲಿಸಿದ ಮೆಚ್ಚಿಕೆಯೂ ಅದಾಗಿತ್ತು.

ಇಷ್ಟೊತ್ತಿನವರೆಗೆ ಚಿಲುಮೆಯನ್ನು ಸಜ್ಜುಗೊಳಿಸುತ್ತಿದ್ದ ಕರಿಯಪ್ಪನ ಕಾರ್ಯ ಈಗಲೇ ಮುಗಿಯಬೇಕೆ? ಹದಗೊಳಿಸಿದ ಗಾಂಜಿಯಿಂದ ಚಿಲುಮೆಯನ್ನು ತುಂಬಿ ಪಡದಪ್ಪನವರ ಕೈಗೆ ನೀಡುತ್ತಲೇ, "ನಾವು ಮಾಡೇದ ಕಮತಿಗ್ಯಾರಿಲ್ಲ ನಿಮ್ಮ ಗೂಡಾಸ್ತ್ರ ಅದೇವೆಂತ ತಿಳೀರಿ" ಎಂದು ಹುರುಪಿನಿಂದಘೋಷಿಸಿದ.

---

:: ೩೭ ::

ದಾದಾ ಪಾಪಳ್ಳಿಯನ್ನು ಬಿಟ್ಟು ಇಂದುಪುರಕ್ಕೆ ಹೋದ ಕೆಲದಿನಗಳಲ್ಲಿಯೇ ಅವನ ಬಗ್ಗೆ ಒಂದು ಸುದ್ದಿ ಬಂದು ಅವನ ಕೀರ್ತಿಯನ್ನು ಹೆಚ್ಚಿಸಿತು. ದಾದಾ ಅಲ್ಲಿಯ ಗರಡಿಮನೆಯಲ್ಲಿ ತರಬೇತನ್ನು ಪಡೆಯಬೇಕೆಂದು ಮಹಾರಾಜರ ಆಸೆಯಿತ್ತು. ಕುಸ್ತಿಗಡಿಗಳಿಗೆ ತರಬೇತು ಕೊಡಲು ಪಂಜಾಬದ ಗುಲಾಬನೆಂಬ ಪೈಲವಾನನೊಬ್ಬನನ್ನು ನಿಯಮಿಸಲಾಗಿತ್ತು. ಅವನಿಗೋ ಅಸಾಧ್ಯವಾದ ದರ್ಪ. ಕುಸ್ತಿಯಾಡಿದರೆ ಪಂಜಾಬಿಗಳೇ, ಉಳಿದವರೆಲ್ಲ ಅವರ ಚೇಲಾ ಆಗಿಯೇ ಇರಬೇಕೆಂಬುದು ಅವನ ಸಿದ್ಧಾಂತವಾಗಿತ್ತು. ತನ್ನ ಜೊತೆಗಿದ್ದ ಪಂಜಾಬಿ ಪೈಲವಾನರಿಗೆ ಕೊಡುವ ಖುರಾಕನ್ನು ಅವನು ಉಳಿದ ಕುಸ್ತೀ ಗಡಿಗಳಿಗೆ ಕೊಡುತ್ತಿರಲಿಲ್ಲ. ಉಳಿದವರು ಕೇವಲ ಪಂಜಾಬಿ ಪೈಲವಾನರ ಮೈ ತಿಕ್ಕಿ ಅವರ ಸೇವೆ ಮಾಡಲಿಕ್ಕೇ ಯೋಗ್ಯರೆಂದು ಅವನು ದೃಢವಾಗಿ ನಂಬಿದ್ದನು.

ದಾದಾ ಗರಡಿಮನೆಯನ್ನು ಸೇರಿದೊಡನೆ ಗುಲಾಬನ ಮೈ ತಿಕ್ಕುವ ಕೆಲಸವೇ ಅವನ ಪಾಲಿಗೆ ಬಂದಿತು. ದಾದಾ ಕಿಡಿಕಿಡಿಯಾದ. ಕೊಟ್ಟ ಕೆಲಸವನ್ನು ತಿರಸ್ಕರಿಸಿದ. ತನ್ನಂಥ ಪೈಲವಾನನಿಗೆ ಇದು ಅಪಮಾನವೆಂದು ವಾದಿಸಿದ. ಗುಲಾಬನೂ ಇದರಿಂದ ರೇಗಿದ. ದಾದಾ ಕುಸ್ತಿಯ ಕಣದಲ್ಲಿ ತನ್ನನ್ನು ಸೋಲಿಸಿದರೆ ಮಾತ್ರ ಅವನು ತನ್ನ ಸಮಾನಧರ್ಮಿಯಾಗಬಲ್ಲನೆಂದು ಸಾರಿದ. ದೂರು ಮಹಾರಾಜರ ವರೆಗೆ ಹೋಯಿತು. ದಾದಾನ ಮರಾಠಾ ರಕ್ತ ಕುದಿದೆದ್ದು, ಅವನು ಗುಲಾಬನೊಡನೆ ಕುಸ್ತಿಯಾಡಲು ಒಪ್ಪಿಕೊಂಡ. ಗುಲಾಬನ ಶಕ್ತಿಸಾಮರ್ಥ್ಯಗಳನ್ನು ಚೆನ್ನಾಗಿ ಬಲ್ಲ ಕೆಲ ಪೈಲವಾನರು ದುಡುಕಬಾರದೆಂದು ದಾದಾನಿಗೇ ಬುದ್ಧಿ ಹೇಳಿದರು. ಇನ್ನೊಂದು ಗರಡಿಮನೆಯನ್ನು ಇಂದುಪುರದ ಗಡಿಗಳಿಗೇ ಕಟ್ಟಿಸಿಕೊಡುತ್ತೇನೆಂದು ಹೇಳಿ ಮಹಾರಾಜರು ದಾದಾನ ಮನಒಲಿಸಲು ಪ್ರಯತ್ನಿಸಿದರು. ದಾದಾ ಯಾವುದಕ್ಕೂ ಜಗ್ಗಲಿಲ್ಲ. ದ್ವೇಷ ಮನೆಮಾಡಿದ್ದರಿಂದ ಅವನು ಹುಚ್ಚನಾಗಿದ್ದನು. ಕುಸ್ತಿ ಗರಡಿಮನೆಯಲ್ಲಿಯೇ ನಡೆಯಬೇಕೆಂದು

ಗೊತ್ತಾಗಿತ್ತು.

ನಿಶ್ಚಿತವಾದ ದಿನ, ದಾದಾ ಎಲ್ಲರೂ ಬೆರಗುಗೊಳ್ಳುವಂತೆ ಗುಲಾಬನನ್ನು ಸೋಲಿಸಿ, ಪಂಜಾಬಿಗಳ ಸೊಕ್ಕನ್ನಿಳಿಸಿದ. ಮಹಾರಾಜರು ಹರ್ಷದಿಂದ ಅವನನ್ನು ತಬ್ಬಿಕೊಂಡುಬಿಟ್ಟರು. ಗುಲಾಬ ತನ್ನ ಜೊತೆಗಾರರೊಡನೆ ಹೇಳದೆ ಕೇಳದೆ ಊರು ಬಿಟ್ಟು ಹೋಗಿಬಿಟ್ಟ. ಇಂದುಪುರದ ಗರಡಿಮನೆ ಒಮ್ಮೆ ಪಂಜಾಬಿಗಳ ಕಾಟದಿಂದ ಬಿಡುಗಡೆಯನ್ನು ಪಡೆಯಿತು. ಗರಡಿಮನೆಯ ಉಸ್ತಾದಪಟ್ಟ ದಾದಾ ನಿಗೇ ಲಭಿಸಿತು.

ಪಂಜಾಬಿ ಪೈಲವಾನನನ್ನು ದಾದಾ ಸೋಲಿಸಿದನೆಂಬ ವಾರ್ತೆ ಸುತ್ತಲಿನ ಹಳ್ಳಿ ಗಳಲ್ಲೆಲ್ಲ ಕರ್ಣೋಪಕರ್ಣವಾಗಿ ಹಬ್ಬಿತು. ಪಾದಳ್ಳಿಗೆ ಈ ಸುದ್ದಿಯನ್ನು ಮಹಾ ರಾಜರು ಮುದ್ದಾಂ ಸ್ವಾರನನ್ನು ಕಳಿಸಿ ಮುಟ್ಟಿಸಿದರು. ಅಂದಮೇಲೆ ಮಹಾ ರಾಜರ ದರ್ಬಾರದಲ್ಲಿ ಅವನ ಪ್ರಸ್ಥ ಚನ್ನಾಗಿ ಬೆಳೆಯಿತೆಂದು, ಅವನನ್ನು ಇಂದು-ಪುರಕ್ಕೆ ಕಳಿಸಿದ ಬಾಳಾಚಾರ್ಯರಿಗೆ ಸಮಾಧಾನವಾಯಿತು. ಶ್ಯಾಮರಾಯನಿಗೂ ಈ ಸುದ್ದಿಯನ್ನು ಕೇಳಿ ಸಂತೋಷವಾಗಿತ್ತು. ಊರಲ್ಲೆಲ್ಲ ದಾದಾನ ಮೆಚ್ಚಿಕೆಯ ಮಾತುಕತೆಗಳೇ ನಡೆದವು. ಇದರಿಂದ ಹರ್ಷಿತರಾದ ಗರಡಿಮನೆಯ ದಾದಾನ ಗೆಳೆಯರು ಇಂದುಪುರಕ್ಕೇ ಹೋಗಿ ಅಲ್ಲಿಯೇ ಆಶ್ರಯ ಪಡೆದರು.

ಮೊದಲು ದಾದಾನನ್ನು ಕಂಡರೆ ಆಗದ ಪಡದಪ್ಪನವರಿಗೂ ಈ ಸುದ್ದಿ ಯನ್ನು ಕೇಳಿ ಆನಂದವಾಗಿತ್ತು. ಮಠದಲ್ಲಿ ಸೇರಿದ್ದ ಕುಡುಕರ ಸಭೆಯಲ್ಲಿ ಅವರೇ ಮೊದಲು ಮಾತೆತ್ತಿದರು. "ದಾದಾ ಮಾರಾಜರ ಗರಡಿಮನ್ಯಾಗ ಉಸ್ತಾದ ಆಗ್ಯಾನಂತರಲೇ. ಪಾದಳ್ಳೀ ಹುಡುಗ ನಾಕ ಮಂದಿಗೆ ಅನ್ನಾಹಾಕಿ ಅವರ್ನ ತರ ಬೇತ ಮಾಡೂ ತಾಕತ ಪಡದಾನ. ನಾವೂ ಈ ಸಾಣಸ್ವಾಮಾರದಾಗ ಊರಾಗ ಕುಸ್ತಿ ಆಡಿಸಿ ಊರ ಗರಡಿಮನಿ ಮುಂದ ತರಾಕ್ಕಬೇಕು. ಏನಂತೀರಿ?" ಎಂದು ಕೇಳಿ ಎಲ್ಲರನ್ನೂ ಪ್ರಶ್ನಾರ್ಥಕ ದೃಷ್ಟಿಯಿಂದ ನೋಡಿದರು.

"ಅಪ್ಪಾಅವರು ಹೇಳೂ ಮಾತಿನ್ಯಾಗ ಒಂದಕ್ಷರ ತಗದು ಹಾಕ್ಹಾಂಗ ಇಲ್ಲ. ಅವರ ಮಾತಅ ಹಾಗ, ಕೆಸರಿನ್ಯಾಗ ಹಳ್ಳ ನಟ್ಟಾಂಗ. ಆದರ ಯಪ್ಪಾ, ಕುಸ್ತಿ ಆಡಿಸಿದರ ಗೆದ್ದ ಗಡಿಗೋಳಿಗೆ ಮಾನ-ಪಾನ ಮಾಡೂ ಧಣಿ ಬಾಪೂಸಾಬ ಇರತಿದ್ದ. ಈಗ, ಬರಿಗೈ ಕುಸ್ತಿ ಅಂದರ ಪರವೂರಿನ ಗಡಿಗೋಳು ಯಾಕ ಬಂದಾರು? ಅದಕ್ಕ ನೀವು ಮುಂದಾಗಿ ಏನಾರ ಯವಸ್ತಾ ಮಾಡಿದರ ಕುಸ್ತಿ

ನಡದಾವು. ಮಾತಿನಿಂದ ಕುಸ್ತಿ ಮಾಡಸೂ ಚಮತು ಕುಸ್ತಿ-ಫಳಿಯಾಗ ನಡ್ಯಾ ಕಿಲ್ಲ." ಎಂದು ಅಂಬಿಗರ ಬಸೂ ಕುಸ್ತಿಗಡಿಗಳ ಮುಖಂಡ ತಾನೇ ಎಂಬ ಹೆಮ್ಮೆ ಯಿಂದ ಹೇಳಿದ.

ಪಡದಪ್ಪನವರಿಗೆ ಅಪಮಾನವೆನಿಸಿತು. ಬಸೂ ಹೇಳಿದ್ದರಲ್ಲಿ ತಥ್ಯವಿಲ್ಲದೆ ಇರಲಿಲ್ಲ. ಹಾಗೆ ನೋಡಿದರೆ ಕುಸ್ತಿ ನಡೆಸಲೇಬೇಕೆಂಬ ಉತ್ಸಾಹವೇನೂ ಅವ ರಲ್ಲಿರಲಿಲ್ಲ. ದಾದಾ ಇಂದುಪುರದಲ್ಲಿ ಪಡೆದ ವಿಜಯದ ಸುದ್ದಿಯನ್ನು ಕೇಳಿದಾಗ ಸಂತೋಷವೇನೋ ಆಗಿತ್ತು. ಆದರೆ ಅದು ಕೇವಲ ಪಾದಳ್ಳಿಯ ಬಗ್ಗೆ ಅಭಿಮಾ ನವೇ ಹೊರತು ದಾದಾನ ವಿಷಯವಾಗಿ ಆತ್ಮೀಯತೆಯೇನೂ ಅಲ್ಲ. ಸುಮ್ಮನೆ ಹರಟೆಗೆ ಒಂದು ವಿಷಯ ಬೇಕೆಂದು ಆ ಮಾತು ತೆಗೆದಿದ್ದರು. ತಾವೂ ಕುಸ್ತಿ ಆಡಿಸಿ ಶ್ರೇಯಸ್ಸು ಪಡೆಯಬಹುದೆಂದು ಆಶಿಸಿದ್ದರು. ಆದರೆ ಅಂಬಿಗರ ಬಸೂ ಈ ಮಾತನ್ನಾಡಿ ಅವರ ಅಭಿಮಾನವನ್ನೇ ಕೆಣಕಿದ್ದ.

"ತಡೀರಲೆ. ಅಳಬುರಕ ಬಾಪೂಸಾಬ ಊರಬಿಟ್ಟು ಹೋದರ ಊರಗಾರಿಕಿ ಕೆಲಸ ನಿಂದರತಾವೇನೋ ಮಕ್ಕಳಿರಾ? ಗೌಡಕಿ ನೇಮಣೂಕ ಆಗಿ ನಮ್ಮ ಲಿಂಗಪ್ಪ ಬರಲಿ. ನಾಳೆ ಬರತಾನಂತ ಕಾಣತೈತಿ. ಅವನ ಕೊಳ್ಳಿಗೆ ಕುಸ್ತೀ ಖರ್ಚ ಹಾಕಿಬಿಡೂಣಂತ. ನೀವೆಲ್ಲಾ ಹೇಳಿದರ ಲಿಂಗಪ್ಪ ಕುಣಕೊಂತ ಈ ಕೆಲಸಾ ಕೈಯಾಗ ತಗೊಂತಾನ." ಪಡದಪ್ಪನವರು ತಾವು ಬರಿಗೈ ಕುಸ್ತಿ ಆಡಿಸುವವರಲ್ಲ ವೆಂಬುದನ್ನು ದೃಢಪಡಿಸುವಂತೆ ಹೇಳಿದರು.

ಆ ಮಾತು ಈ ಮಾತು ಆಡುತ್ತ ಮಠದಲ್ಲಿಯ ಹರಟೆ ಕೊನೆಮೊದ ಲಿಲ್ಲದೆ ಸಾಗಿತು. ರಾತ್ರಿ ಬಲಿಯುತ್ತಲೇ ನಡೆದಿತ್ತು. ಕೊನೆಗೆ ಎಲ್ಲರಿಗೂ "ತೀರ್ಥ"ಪ್ರಾಶನವನ್ನು ಮಾಡಿಸಲಾಯಿತು. 'ತೀರ್ಥ'ದ ಗುಂಗು ಎಲ್ಲರಿಗೂ ಅಡರಿತು. ಪಡದಪ್ಪನವರು ಧ್ಯಾನಸ್ಥರಾದರು. ಭಕ್ತಾದಿಗಳೂ ಹಾಗೆಯೇ ಧ್ಯಾನ ದಲ್ಲಿ ಮುಳುಗಬಹುದಿತ್ತು. ಆದರೆ ಕುಡುಕರಿಗೂ ಮನೆಯಿರುವದರಿಂದ, ಅದರ ಎಚ್ಚರ ಸಂಪೂರ್ಣವಾಗಿ ಮಾಸಿರಲಿಲ್ಲವಾದ್ದರಿಂದ ಅವರೆಲ್ಲ ತೂರಾಡುತ್ತಲೇ ತಮ್ಮ ಮನೆಗಳಿಗೆ ಹೊರಟುಹೋದರು.

ಪಡದಯ್ಯನವರಿಗೆ ಅಲ್ಲಿಯೇ ನಿದ್ದೆಹತ್ತಿತ್ತು. ನಸುಕಿನಲ್ಲಿ ಅದೇಕೋ ಎಚ್ಚರವಾಯಿತು. ಮೂಲೆಯಲ್ಲಿ ದೀಪ ಇನ್ನೂ ಉರಿಯುತ್ತಿತ್ತು. ಪಡದಯ್ಯ ನವರು ಕಣ್ಣು ಬಿಟ್ಟು ನೋಡಿದರು. ನಿನ್ನೆ ಭಕ್ತಾದಿಗಳಲ್ಲಿ ಒಬ್ಬರೂ ಇಲ್ಲ. ಕೆಂಚ

ಮಲಗುತ್ತಿದ್ದ ಸ್ಥಳದಲ್ಲಿಯೇ ಕರಿಯಪ್ಪ ಗೊರಕೆ ಹೊಡೆಯುತ್ತ ಬಿದ್ದಿದ್ದ. ಮಠವೆಲ್ಲ ಶೂನ್ಯವಾಗಿತ್ತು. ಸನ್ಯಾಸಿಗೆ ಯಾರು ಜೊತೆಯಾಗಬೇಕು?

ಪಡದಪ್ಪನವರಿಗೆ ಯಾಕೋ ಹೆದರಿಕೆಯಾದಂತೆನಿಸಿತು. ಮಲಗುವ ಮುನ್ನ ತಾವು ಮಾತಾಡುತ್ತಿದ್ದುದನ್ನೆಲ್ಲ ನೆನಪು ಮಾಡಿಕೊಂಡರು. ಲಿಂಗಪ್ಪ ಇನ್ನೂ ಊರಿಗೆ ಬಂದಿರಲಿಲ್ಲ. ಕುಸ್ತಿಯಾಡಿಸಲೇಬೇಕು. ಆದರೆ ಬರಿಗೈ ಕುಸ್ತಿಯಾಗಬಾರದು. ಪಾದಳ್ಳಿಯ ಮರ್ಯಾದೆಗೆ ಒಪ್ಪುವಂತಿರಬೇಕು. ದಾದಾನನ್ನೇ ಕರೆಸಬೇಕು. ಹುಡುಗ ಪಾದಳ್ಳಿಯ ಕೀರ್ತಿಯನ್ನು ಸುತ್ತಲೆಲ್ಲ ಹರಡಿದ್ದಾನೆ. ಪಡದಯ್ಯನವರಿಗೆ ಆಶ್ಚರ್ಯವಾಯಿತು. ದಾದಾನನ್ನು ತಾವು ಮೆಚ್ಚಿದ್ದೇಕೆ? ಎಲ್ಲರಿಗಿಂತ ಹೆಚ್ಚಾಗಿ ಅವನ ಮೇಲೆ ತಮಗೆ ದ್ವೇಷವಿತ್ತು! ಅಂದಮೇಲೆ ಈ ಸಲ್ಲದ ಪ್ರೀತಿ ಅವನ ಬಗ್ಗೆ ಹೇಗೆ ಹುಟ್ಟಿಕೊಂಡಿತು? ಪಡದಯ್ಯನವರು ಇನ್ನೊಂದು ಮಗ್ಗುಲಿಗೆ ಹೊರಳಿ ನಿದ್ದೆ ಮಾಡುವ ಪ್ರಯತ್ನ ಮಾಡಿದರು. ಆದರೆ ಯೋಚನೆ ಅಧಿಕಪ್ರಸಂಗಿಯಂತೆ ಅಲ್ಲಿಯೂ ಬೆನ್ನಟ್ಟಿತು. ಹೌದು, ತಾವೇಕೆ ದಾದಾನನ್ನು ಮೆಚ್ಚಿದ್ದು? ಹಾಂ ಚಿಮಣಾ! ಅವಳೀಗ ಮಠದಲ್ಲಿದ್ದರೆ? ಎಂಬ ವಿಚಾರ ಮಿಂಚಾಗಿ ಹೊಳೆಯಿತು. ಏಕಾಕಿಯಾಗಿ ಹೀಗೆ ಮಠದಲ್ಲಿ ಬಿದ್ದುಕೊಂಡಿರುವದು ಅಸಹನೀಯವೆನಿಸಿತು. ಅವಳ ರೂಪ ಕಣ್ಣಿಗೆ ಕಟ್ಟಿದಂತಾಯಿತು. ತನ್ನ ಮರ್ಯಾದೆ ತೆಗೆದ ಡಾಕಿನಿ ಎಂದೊಮ್ಮೆ ಅವಡುಗಚ್ಚಿದರು. ಸಿಟ್ಟು ತಡೆಯಲಾಗದೆ ಹಾಸಿಗೆಯ ಮೇಲೆ ಎದ್ದು ಕುಳಿತು ಒಮ್ಮೆ ಆಕಳಿಸಿದರು.

ಚಿಮಣಾಳೊಡನೆ ತಾವಿಟ್ಟುಕೊಂಡ ಸಂಬಂಧವೆಲ್ಲ ಪಡದಯ್ಯನವರಿಗೆ ಮರುಕಳಿಸಿ ಬಂದಂತಾಯಿತು. ತನ್ನ ಮಗನ ತಂದೆ ಪಡದಯ್ಯನವರೇ ಎಂದು ಅವಳು ಜನನರಜಿಸ್ಟರದಲ್ಲಿ ಹಚ್ಚಿಸಿ ಜಗತ್ತಿಗೇ ಸಾರುವಾಕೆ! ಮೇಲಾಗಿ ತಮ್ಮಿಬ್ಬರ ಸಂಬಂಧದಲ್ಲಿ ರಹಸ್ಯವೆಂಬುದೇನೂ ಉಳಿದೇ ಇಲ್ಲ. ಅಂದಮೇಲೆ ತಾವು ಇನ್ನೊಂದು ಸಾಹಸವನ್ನೇಕೆ ಮಾಡಬಾರದು ? ಚಿಮಣಾಳನ್ನು ಢಾಣಾಡಂಗುರವಾಗಿ ಮಠದಲ್ಲಿಯೇ ತಂದಿಟ್ಟುಕೊಂಡರೆ? ಸನ್ಯಾಸಿಯ ಸಂಸಾರವನ್ನು ನೋಡಿ ಜನರು ನಗಬಹುದು. ಆದರೆ ಈಗೇನು ಬಿಟ್ಟಿದ್ದಾರೆ? ಮೇಲಾಗಿ ಅವರು ನಗುವದಾದರೂ ಎಷ್ಟು ದಿನ? ಅವರಿಗೇನು ಇದೊಂದೇ ಕೆಲಸವೇ ?

ಆಡುತ್ತಾಡುತ್ತ ಈ ವಿಚಾರ ಪಡದಯ್ಯನವರನ್ನು ಬಲವಾಗಿ ಹಿಡಿಯಿತು. ಎಷ್ಟು ದಿನ ಚಿಮಣಾ ಯಶವಂತರಾಯರ ಹತ್ತಿರ ಇರಬೇಕು ? ಮುದುಕ ಅವ

ಳನ್ನು ಯಾರಿಗಾದರೂ ಕೊಟ್ಟು ಲಗ್ನಮಾಡಿಬಿಡುವ ಬಂಟ. ಅದಕ್ಕೆ ಅವಕಾಶ ಕೊಟ್ಟರೆ ತಮ್ಮ ಮರ್ಯಾದೆ ಇನ್ನೂ ಕೆಳಗಿಳಿದೀತು! ಪಡಪ್ಪನವರು ಅನಮರ್ಯಾದೆ ಗೀಡಾಗುವ ಹೇಡಿಯಲ್ಲ ಎಂದು ಜನಕ್ಕೆ ಗೊತ್ತಾಗಬೇಕು. ಕೂಸಿನ ಮೇಲೆ ಅನಾಯಾಸವಾಗಿ ತನಗೆ ಈಗ ಹಕ್ಕು ಬಂದಿದೆ. ಕೂಸನ್ನೇ ಇಲ್ಲಿ ತಂದಿಟ್ಟರೆ ಚಿಮಣಾ ತಾನಾಗಿಯೇ ಇಲ್ಲಿಗೆ ಬರಬಹುದು.

ಪಡದಯ್ಯನವರಿಗೆ ವಿಚಾರಮಾಡಿ ಮಾಡಿ ತಲೆನೋವು ಎದ್ದಿತು. ರಾತ್ರಿಯ ಭಯಾನಕ ನೀರವತೆಯಲ್ಲಿ ಅವರು ಕೂಸಿನಷ್ಟು ದುರ್ಬಲರಾಗಿದ್ದರು. ಏಕಾಕಿತನ ಸಹಿಸಲು ಬಾರದಷ್ಟು ತೀವ್ರವೇದನೆಯನ್ನುಂಟುಮಾಡಿತ್ತು. ಒಂದು ಕ್ಷಣ ತಮ್ಮ ಸನ್ಯಾಸಿಯ ಸ್ಥಿತಿ ಒಂದು ಶಾಪವೆಂದೆನಿಸಿತು. ಮೈಯೆಲ್ಲ ಉರಿಯುತ್ತಿತ್ತು. ಅದಕ್ಕೆ ಔಷಧವೆಂದು ಮತ್ತೊಂದು ಪರಟಿ ಸೆರೆ ಬಿಗಿದು ಮಲಗಿದ್ದ ಕರಿಯನನ್ನು ಕೂಗಿದರು.

“ಲೇ ಕರಿಯಾ, ಲಗೂ ಏಳಲೇ. ಕುದುರಿ ಸಜ್ಜಮಾಡು” ಎಂದು ಒದರಿಕೊಂಡರು. ಕರಿಯ ಒಡಮುರಿದು ಎದ್ದು ಸ್ವಾಮಿಗಳನ್ನು ನೋಡಿದ. ಮುಖ ಕಿವುಚಿ ಕಣ್ಣು ಮುಚ್ಚಿಕೊಂಡೇ ಕುಳಿತ. ಪಡದಯ್ಯನವರು ಮತ್ತೊಮ್ಮೆ ಹೇಳಬೇಕಾಯಿತು. ಕರಿಯನಿಗೆ ಆಶ್ಚರ್ಯವಾಗಿ ಹೊರಗೆ ನಡೆದು ಆಕಾಶದತ್ತ ನೋಡಿದ. ಮೋಡ ಮುಸುಕಿದ್ದರಿಂದ ಚಿಕ್ಕೆಗಳೊಂದೂ ಕಾಣುತ್ತಿರಲಿಲ್ಲ. ಹೊತ್ತು ಎಷ್ಟಾಗಿದೆ ಎಂದು ತಿಳಿಯಲು ಅವಕಾಶವೇ ಇರಲಿಲ್ಲ. ಅಷ್ಟರಲ್ಲಿ ಕೋಳಿಯೊಂದು ಕೂಗಿ ಬೆಳಕು ಹರಿಯಲು ಬಂದಿದೆಯೆಂದು ಸೂಚಿಸಿತು. ಕರಿಯ ಕುದುರೆಗೆ ಥಡಿ ಹಾಕಿ ಸಜ್ಜುಗೊಳಿಸಿದ.

ಪಡದಯ್ಯನವರು ತಯಾರಾಗಿ ನಿಂತ ಕುದುರೆಯನ್ನೇರಿ ಹೊರಹೊರಟರು. ಹೋಗುವಾಗ ಒಂದು ಮಾತನ್ನೂ ಕರಿಯನಿಗೆ ಹೇಳಲಿಲ್ಲ. ಎಲ್ಲಿಗೆ ಹೊರಟಿರೆಂದು ಕೇಳುವ ಬಯಕೆ ಕರಿಯನಿಗಾಗಿತ್ತು. ಆದರೂ ಪ್ರಶ್ನೆಮಾಡಿ ಅಡ್ಡಬಾಯಿ ಹಾಕಬಾರದೆಂದು ಪ್ರಯತ್ನಪೂರ್ವಕವಾಗಿ ಅದನ್ನು ತಡೆದುಕೊಂಡ. ಸುಮ್ಮನೆ ಮೂಕ ಪ್ರೇಕ್ಷಕನಾಗಿ ಮಠದ ತಲೆಬಾಗಿಲಲ್ಲಿ ನಿಂತುಬಿಟ್ಟ. ಪಡದಪ್ಪನವರೂ ಅವರ ಕುದುರೆಯೂ ನಸುಕಿನ ಮುಂಗಾಳಿನಲ್ಲಿ ಕರಗಿಹೋದರು.

ಪಾದಳ್ಳಿಗೆ ಬೇಕಾದಷ್ಟು ಡೋಲು ಹಾಗೂ ತಗಾಯಿ ಸಾಲವನ್ನು ಮಂಜೂರ ಮಾಡುತ್ತೇವೆಂದು ಗಿಬ್ಸನ್ ಸಾಹೇಬರು ಕೊಟ್ಟ ಆಶ್ವಾಸನವನ್ನು ಹೊತ್ತುಕೊಂಡೇ

ಲಿಂಗಪ್ಪ ಪಾದಳ್ಳಿಗೆ ಬಂದ. ಅವನ ಗೌಡಿಕಿ ಪಾಳಿಯ ನೇಮಣೂಕಿಯ ಕೆಲಸವೂ ಆದಂತಾಗಿತ್ತು. ಆದರೆ ಪಡದಯ್ಯನವರು ಊರಲ್ಲಿಲ್ಲವೆಂದು, ಲಿಂಗಪ್ಪ ಮಠದಲ್ಲಿ ಕಾಲಿಟ್ಟಕೂಡಲೆ ಕರಿಯ ಅವನಿಗೆ ಹೇಳಿದ. ಲಿಂಗಪ್ಪಗೌಡನ ಉತ್ಸಾಹಕ್ಕೆ ಬಂದ ಉಕ್ಕು ಜರ್‍ರನೆ ಇಳಿದಂತಾಯಿತು. ಪಡದಪ್ಪನವರು ಎಲ್ಲಿಗೆ ಹೋಗಿರುವರೆಂಬುದೂ ತಿಳಿಯದು. ಮರಳಿ ಬರುವದೂ ತಿಳಿಯದು. ಹೀಗಾಗಿ ಲಿಂಗಪ್ಪನ ಮನಸ್ಸಿನಲ್ಲಿ ತುಂಬಿದ ಹಿಗ್ಗು ಅಲ್ಲಿಯೇ ಉಳಿದು ಹಳಸುವಂತಾಯಿತು. ಈ ಮನಸ್ಥಿತಿಯಲ್ಲಿ ಆ ಒಂದು ದಿನವನ್ನು ಕಳೆಯುವದೇ ಅಸಾಧ್ಯವೆನಿಸಿತು.

ಆದರೆ ಗೌಡರು ಬಂದಿರುವರೆಂಬ ಸುದ್ದಿ ಆಗಲೇ ಪಾದಳ್ಳಿಯ ತುಂಬ ಹರಡಿತ್ತು. ಗೌಡರನ್ನು ಕಾಣಲು ಜನರು ಮಠಕ್ಕೆ ಬರತೊಡಗಿದರು. ಹಿರೇ ಕುರುಬ ಮಾಯಪ್ಪ ಬಂದು 'ರಾಮ-ರಾಮ' ಮಾಡಿ, "ಹೋದ ಕೆಲಸ ಗಂಡೋ ಹೆಣ್ಣೋ?" ಎಂದು ಕೇಳಿದಾಗ ಲಿಂಗಪ್ಪನಿಗೆ ಆಪ್ತಮಿತ್ರನೊಬ್ಬನನ್ನು ಕಂಡಂತೆ ಹರ್ಷ ಉಕ್ಕಿತು; ಮುಖ ಅರಳಿತು. ಮೀಸೆ ಸ್ವಲ್ಪ ಉದ್ದವಾದಂತೆನಿಸಿ ಅವುಗಳನ್ನು ಮಿದುವಾಗಿ ಸವರಿದ. "ಗಂಡ ಕೆಲಸ ಮಾಡಿಕೊಳ್ಳದೆ ಬರಲಿಕ್ಕೆ ಈ ಲಿಂಗಪ್ಪ ಗೌಡ ಕೈಯಾಗ ಬಳಿ ಇಟ್ಟಿಲ್ಲ ಮಾಯಪ್ಪ! ಇನ್ನಮ್ಯಾಗ ಪಾರ್ವತೆವ್ವ ಮೂಗು ಏರಿಸಿಕೊಂಡು ಅಡ್ಡಾಡದ್ಹಾಂಗ ಕೆಲಸಾ ಮಾಡಿಕೊಂಡು ಬಂದೀನು" ಎಂದು ಹೇಳಿ ಮನಸೋಕ್ತ ನಕ್ಕುಬಿಟ್ಟ.

"ಹಾಗಾರ ಗೌಡರ, ಊರಿಗೆಲ್ಲ ಸಕ್ಕರಿ ಹಂಚಾಕಽಬೇಕಾತಲ್ಲರಿ?" ಎಂದು ಮಾಯಪ್ಪ ಗೌಡಿಕೆಯ ಪಟ್ಟ ಸ್ಥಿರವಾಗಲು ಉಪಾಯ ಹೇಳಿದ. ಲಿಂಗಪ್ಪ ವಿಧಿಯಿಲ್ಲದೆ ಒಪ್ಪಬೇಕಾಯಿತು. ಆದರೆ ವಾಸ್ತವಿಕ ಸಂಗತಿಯೆಂದರೆ ಅವನ ಹತ್ತಿರ ಒಂದು ಕಾಸು ಕೂಡ ಇರಲಿಲ್ಲ. ಪಡದಯ್ಯನವರಿದ್ದಿದ್ದರೆ ಹತ್ತಿಪ್ಪತ್ತು ರೂಪಾಯಿಯ ವ್ಯವಸ್ಥೆಮಾಡಬಹುದಿತ್ತು. ಆದ್ದರಿಂದ ಮಾಯಪ್ಪನ ಸೂಚನೆಯನ್ನು ಒಪ್ಪಿದ್ದರೂ ತನ್ನ ತತ್ಕಾಲೀನ ಅಸಾಮರ್ಥ್ಯವನ್ನು ಪರ್ಯಾಯವಾಗಿ ಯಾದರೂ ತಿಳಿಸಬೇಕಾಗಿತ್ತು.

"ಮಾಯಪ್ಪ, ಏನ ಆಗಬಾರದ್ದು ಆಗೇತಿ ಅಂತ ಸಕ್ಕರಿ ಹಂಚಬೇಕು? ಹಿಂದಕ ಮಾಮಲೇದಾರರು ವಾರಸಾ-ಹಕ್ಕ ಕಾಯಮ ಮಾಡಿದ್ದಕ್ಕ ಸಕ್ಕರಿ ಹಂಚಿದಿವಿ. ಅದಕ್ಕ ಪಾರ್ವತೆವ್ವ ಅಪೀಲು ಮಾಡಿದಳು. ಸಕ್ಕರಿ ಹಂಚಿದ್ದು ನನಗ ಆಗಿಬರೂದಿಲ್ಲೋ." ಎಂದು ಲಿಂಗಪ್ಪ ರಾಗವೆಳೆದ.

"ಛೇ ತಗೀರಿ, ಎಂತಾ ಮಾತ ಆಡತೀರಿ? ಸಕ್ಕರಿ ಹಂಚಿದ್ದಕ್ಕs, ಅಸೀಲಿ ನ್ಯಾಗ ನಿಮ್ಮ ಗೌಡಿಕಿ ಗರಸಿನ್ಯಾಗ ಗೂಟಾಬಡದ್ಹಾಂಗ ಕಾಯಮು ಆಗಿ ಬಂತು ಆಗಿಬಂದಿಲ್ಲ ಅಂತ ಯಾತರ ಮ್ಯಾಗ ಅಂತೀರಿ ಗೌಡರ? ನಿಮುಗ ಬ್ಯಾಡಾಗಿದ್ದರೂ ನಮ್ಮ ಊರ ಗೌಡರ ಮರ್‍ಯಾದಿ ನಮುಗ ಬ್ಯಾಡs? ಬಾಳಾರಾಮನ ಅಂಗಡಿಗೆ ಹೋಗಿ ನಾಲ್ಕು ಮಣಾ ಸಕ್ಕರಿ ತಂದು ನಾನs ಹಂಚಬಿಡತೀನು, ಆತಿಲ್ಲೋ?" ಮಾಯಪ್ಪ ಹಟದಿಂದ ವಾದಿಸುವವರಂತೆಯೇ ಹೇಳಿದ.

"ಎಂದಿಲ್ಲದ ಈಗೇನ ಅಂತಾ ಹುರಪು ಬಂದೈತಿ ಮಾಯಪ್ಪ ನಿನಗ? ನನ ಗೀಗ ಆಗೈತೆರೆ ಏನು?" ಲಿಂಗಪ್ಪ ಇನ್ನೂ ಅವರನ್ನು ವಿಮುಖಗೊಳಿಸಲು ನುಡಿದ.

"ಇನ್ನೇನಾಗಬೇಕಂತೀರಿ ಗೌಡರ? ಊರ ಭೂಮಿಯೊಳಗ ಚಾರಾಣೆ ಭಾಗದ ಭೂಮಿಗೆ ಮಾಲಕ ಆದಿರಿ. ಊರ ಧೊರಿತನ ನಡಸೂ ಗೌಡಿಕಿ ದಪ್ತರ ಕೈಯಾಗ ಬಂತು. ಲೇ ಕರಿಯಾ, ಬಾಳಾರಾಮನ ಅಂಗಡಿಗೆ ಹೋಗಿ ನಾಲ್ಕು ಮಣಾ ಸಕ್ಕರಿ ತತಾರಲೇ. ಸುತ್ತೂಕಡೆ ದೇವರಿಗೊಂದೊಂದರಂತೆ ಹದನಾರ ಟೆಂಗಿನಕಾಯಿ, ಪೂಜಾರಿಗೋಳಿಗೆ ಕೊಡಲಾಕ ಮೂರು ರೂಪಾಯಿ ಚಿಲ್ಲರು, ಗೌಡರು ಹೇಳ್ಯಾರಂತ ಹೇಳಿ ಬರೆಸಿ ತೊಗೊಂಡ ಬಾ. ಹಾಗs ಹಲಗಿಯವರಿಗೆ, ತಾಸೆ-ಬಜಂತ್ರಿಯವರಿಗೆ ಹೇಳಿ ಬಾ. ಗೌಡರ ಮೆರವಣಿಗಿ ತಗಿಯೂದೈತಿ ಗಡಾನ ಮಠಕ್ಕ ಬರ್ರಿ ಅಂತ ಹೇಳಿ ಅಂಗಡಿಗೆ ಹೋಗು." ಮಾಯಪ್ಪ ಅಧಿಕಾರವನ್ನೆಲ್ಲ ಕೈಯಲ್ಲಿ ತೆಗೆದುಕೊಂಡು ಆಜ್ಞೆಮಾಡಿದ. ಅವರ ಉತ್ಸಾಹದ ಮಾತಿಗೆ ಪ್ರತಿ ಯಾಡದೆ ಲಿಂಗಪ್ಪ ಸಮ್ಮತಿ ಕೊಟ್ಟಂತೆ ಮಾಡಿ ಕುಳಿತುಬಿಟ್ಟ.

ಲಿಂಗಪ್ಪಗೌಡನ ಮೆರವಣಿಗೆ ಮಠದಿಂದ ಹಣಮಂತದೇವರ ಗುಡಿಗೆ ಹೋಗಿ, ಅಲ್ಲಿಂದ ಗ್ರಾಮಪ್ರದಕ್ಷಿಣೆ ಮಾಡಿಕೊಂಡು ಗೋಪಾಳಕೃಷ್ಣನ ಗುಡಿಗೆ ಬಂದಾಗ ಆಗಲೇ ಸಾಯಂಕಾಲವಾಗಿತ್ತು. ಅಂದು ಆಷಾಢ ವದ್ಯ ಏಕಾದಶಿ ಯಾದ್ದರಿಂದ ಬಾಳಾಚಾರ್‍ಯರು ಪುರಾಣ ಹೇಳಿ ಇನ್ನೂ ಅಲ್ಲಿಯೇ ಕುಳಿತಿದ್ದರು. ಗೌಡರ ಓಣಿಯಿಂದ ನೀರಗಸೆಯ ಮಾರ್ಗವಾಗಿ ಗುಡಿಯ ಕಡೆಗೇ ಬರುತ್ತಿರುವ ಲಿಂಗಪ್ಪನ ಮೆರವಣಿಗೆಯನ್ನು ನೋಡಿಯೂ ನೋಡದವರಂತೆ ಕುಳಿತಿದ್ದರು.

ಮೆರವಣಿಗೆ ಗುಡಿಗೆ ಬಂದಿತು. ಲಿಂಗಪ್ಪಗೌಡ ದೇವರಿಗೆ ನಮಸ್ಕರಿಸಿದ. ಅವನ ಬದಿಗೇ ನಿಂತಿದ್ದ ಮಾಯಪ್ಪ, "ದೇವರಿಗೆ ಕಾಯಿ ಒಡೀಬೇಕು. ಆಚಾರೆಪ್ಪಾ

ಕುಂತೀರ್‍ಯಾಕ ಏಳ್ರಿ" ಎಂದು ಸ್ವಲ್ಪ ಒರಟಾಗಿಯೇ ಹೇಳಿದ.

ಆಚಾರ್ಯರು ಗೋಣೆತ್ತಿ ನೋಡಿದರು. ಅವರಿಗೆಲ್ಲ ತಿಳಿದಿತ್ತು. ಆದರೆ ಪರಿಸ್ಥಿತಿಯ ವಿರುದ್ಧವಾಗಿ ಹೋರಾಡುವದರಲ್ಲಿ ಅರ್ಥವಿಲ್ಲವೆಂದೆನಿಸಿತ್ತು. "ಇವೊತ್ತ ಏಕಾದಶಿ. ದೇವರಿಗೆ ಕಾಯಿ ಒಡದು ನೈವೇದ್ಯ ಕೊಡಲಿಕ್ಕೆ ಬರೂದುಲ್ಲ. ಅದು ನಿಷಿದ್ಧ" ಎಂದು ತಮಗೇ ಹೇಳಿಕೊಳ್ಳುವಂತೆ ನುಡಿದರು. "ನಿಮಗ ಬ್ಯಾಡಾದರ ಬಿಡರಿ. ಕಾಯಿ ಒಡದು, ಕಪ್ಪರಾ ಹಚ್ಚಿದರ ದೇವರೇನು ಒಲ್ಲೆ ಅಂತಾನs ?" ಎಂದು ಲಿಂಗಪ್ಪ ಕೆಣಕಿದ.

ಆಚಾರ್ಯರು ಅವನ ಮಾತಿಗೆ ನಕ್ಕು ಚೇಷ್ಟೆಗೆಂಬಂತೆಯೇ ಹೇಳಿದರು: "ಅಲ್ಲೋ ಲಿಂಗಪ್ಪ, ಮಾಯಪ್ಪನಂಥೂ ಜಾತ್ಯಾ ಕುರುಬ. ನಾ ಹೇಳಿದ್ದು ಅವನಿಗೆ ತಿಳಿಯೂದಿಲ್ಲ. ಅಂತ ಅವಗ ತಿಳಿಸಿ ಹೇಳಬೇಕಾತು. ಆದರ ನೀನೂ ಹೀಂಗ ಮಾತಾಡತೀ ಅಂತಂದವ್ಯಾಲೆ, ಅವನಕಿಂತಾ ಹೆಚ್ಚಿನ ಕುರುಬ ನೀನs ಆದೆಲ್ಲಾ !" ಎಂದು ಮಾತನ್ನು ಹಾಸ್ಯದಲ್ಲಿ ತೇಲಿಸಿದರು.

ಹಿಂದೆ ಎಷ್ಟೋ ಬಾರಿ ಆಚಾರ್ಯರು ಹೀಗೆ ಚೇಷ್ಟೆ ಮಾಡಿದ್ದರು. ಆಗೆಲ್ಲ ಲಿಂಗಪ್ಪ ನಕ್ಕುಬಿಡುತ್ತಿದ್ದ. ಆದರೆ ಈಗ ಪರಿಸ್ಥಿತಿ ಬದಲಾಗಿತ್ತು. ಮುದುಕ ತನ್ನ ಹುಟ್ಟನ್ನೇ ಬಯಲಿಗೆಳೆದನೆಂದು ಸಿಟ್ಟು ಬಂದಿತು. ಆದರೂ ಅದನ್ನು ತೋರಗೊಡದೆ "ನಿಮ್ಮಂತವರ ಮುಂದ ಎಲ್ಲಾರೂ ಕುರುಬರs ಅಲ್ಲರೇ ?" ಎಂದು ನಕ್ಕು, "ಆಚಾರೆಪ್ಪಗ ಸಕ್ಕರಿ ಕೊಡರೆಲೇ" ಎಂದು ಆಜ್ಞಾಪಿಸಿದ.

"ಇಲ್ಲಿ ನೋಡು ಲಿಂಗಪ್ಪಾ, ಇಂದ ಏಕಾದಶಿ. ದಾನ, ಪರಿಗ್ರಹ ವರ್ಜ್ಯ" ಎಂದು ಆಚಾರ್ಯರು ಹೇಳಿ ಕೈಸನ್ನೆಯಿಂದಲೇ ಸಕ್ಕರೆಯನ್ನು ಬೇಡವೆಂದರು.

"ಆಚಾರೆಪ್ಪ, ಇನ್ನಮ್ಯಾಗ ಹಿಂದಿನವರನ್ನೆಲ್ಲ ಮರೀಬೇಕು. ಊರ-ಗೌಡ ಆಗಿ ಬಂದೀನು, ನನ್ನ ಮಾತಿಗೆ ಬೆಲಿ ಕೊಡಬೇಕಾಕ್ಕೈತಿ" ಎಂದು ಲಿಂಗಪ ದರ್ಪಯುತವಾಗಿಯೇ ಮಾತಾಡಿದ.

"ಈ ಮೆರವಣಿಗಿ, ಈ ಸಕ್ಕರಿ ಹಂಚೂದು ಇದನ್ನ ನೋಡೇ ನನಗ ಗೊತ್ತಾಗೇದ ಲಿಂಗಪ್ಪ. ಅದನ್ನೇನು ಬಾಯಿ ಬಿಚ್ಚಿ ಹೇಳೋ ಕಾರಣ ಇಲ್ಲ. ಆದರೂ, ಅಧಿಕಾರ ಬಂದರೂ ಸ್ವಲ್ಪ ತಗ್ಗಿ ಮಾತಾಡಬೇಕಾಗತದ. ಹಾದೀ ಹಿಡದು ನೀತಿಸಮ್ಮತವಾಗಿ ಯಾರು ಮಾತಾಡಿದರೂ ಬೆಲಿ ಕೊಡಬೇಕಾಗತದ. ಆದರ ಸಿಕ್ಕಸಿಕ್ಕಾಂಗ ಮಾತಾಡಿದರ ಗೌಡ ಇದ್ದರೂ ನಾ ಏನು ಬೆಲಿ ಕೊಡೂ

ದಲ್ಲ. ಇವ್ರೊತ್ತ ಏಕಾದಶಿ ಅಂತ ಹೇಳೀನಿ. ನಾ ಎರಡನೇ ಮಾತಾಡಲಿಕ್ಕೆ ತಯಾರಿಲ್ಲ" ಆಚಾರ್ಯರು ಗಟ್ಟಿಯಾಗಿಯೇ ಹೇಳಿದರು.

"ಆಚಾರ್ರೆಪ್ಪ ಏಕಾದೋಶಿ ಮಾಡ್ಯಾನಂತರೆಪ್ರೋ. ಹಸದ ಹಾರವನ್ನ ತಡವ ಬಾರದು ಅಂತಾರು ನಡೀರಿಲೆ" ಎಂದು ಲಿಂಗಪ್ಪ ಪರಿವಾರವನ್ನೆಲ್ಲ ಗುಡಿಯಿಂದ ತಿರುವಿಕೊಂಡು ನಡೆದ.

ಮಠದಲ್ಲಿ ಲಿಂಗಪ್ಪಗೌಡನಿಗೆ ಗೌರವ ಸಲ್ಲಿಸಲು ತಕ್ಕವರಾರೂ ಬಂದಿರಲಿಲ್ಲ. ಬಿರಾದಾರ ಗೌಡರು, ಗೌಡರ ಭೂಮಿಗಳನ್ನು ಸಾಗುವಳಿಗೆ ಹಿಡಿದ ರೈತರು, ಜಾಗೀರದಾರರ ರೈತರು ಇವರಲ್ಲಿ ಒಬ್ಬರಾದರೂ ಅಲ್ಲಿರಲಿಲ್ಲ. ಭೂಮಿಯಿಲ್ಲದ ಕುರುಬರು, ಹೊಲೆಮಾದಿಗರು, ಉಪ್ಪಾರರು ಮೊದಲಾದವರೇ ನೆರೆದಿದ್ದರು. ಲಿಂಗಪ್ಪಗೌಡನಿಗೆ ಈ ಸಂಗತಿ ಲಕ್ಷ್ಯದಲ್ಲಿ ಬರದೆ ಹೋಗಲಿಲ್ಲ. ಮೆರವಣಿಗೆಯಲ್ಲಿ ಭಾಗವಹಿಸದಿದ್ದವರೆಲ್ಲ ಪಾರ್ವತೆಪ್ಪನ ಪಕ್ಷಕ್ಕೆ ಸೇರಿದವರಿರಬೇಕೆಂದು ತರ್ಕ ಕಟ್ಟಿದ.

ಮೆರವಣಿಗೆಯ ಅಬ್ಬರ ಮುಗಿದು, ಸಕ್ಕರೆ ಹಂಚುವದಾದ ಮೇಲೆ ಲಿಂಗಪ್ಪ-ಗೌಡನ ಪರಿವಾರ ಮಠದಲ್ಲಿ ಸೇರಿತು. ಲಿಂಗಪ್ಪ ಅವರಿಗೆಲ್ಲ ಗಿಬ್ಸನ್‌ಸಾಹೇಬರು ಕೊಟ್ಟ ಆಶ್ವಾಸನದ ಸುದ್ದಿಯನ್ನು ಹೇಳಿದ. ಪರಿವಾರಕ್ಕೆಲ್ಲ ಸಂತೋಷವಾಯಿತು. ಪಾದಳ್ಳಿಯ ದೈವ ತೆರೆಯಿತೆಂದು ಲಿಂಗಪ್ಪನನ್ನು ಕೊಂಡಾಡಿದರು.

ಪಡದಪ್ಪನವರಿಲ್ಲದ್ದರಿಂದ ಗಾಂಜಿ ಮಿದ್ದುವ ಕೆಲಸವಿಲ್ಲದೆ ಕರಿಯಪ್ಪ ಅದ್ದಾಗಿಬಿಟ್ಟಿದ್ದ. ತೀರ್ಥಪ್ರಾಶನದ ಆಸೆಗಾಗಿಯೇ ಅಲ್ಲಿ ನೆರೆಯುವ ಭಕ್ತ ಪರಿವಾರವೆಲ್ಲ ನೊಣ ಜಾಡಿಸುತ್ತ, ತೇಲುಗಣ್ಣು ಮೇಲುಗಣ್ಣು ಹಾಕುತ್ತ ಕುಳಿತಲ್ಲಿಯೇ ಕುಳಿತಿತ್ತು. ಯಾರೊಬ್ಬರ ಮುಖದ ಮೇಲೂ ಚಿವುಟಿದರೆ ಒಂದು ಹನಿ ರಕ್ತ ಕೂಡ ಚಿಮ್ಮುವಂತಿಲಿಲ್ಲ. ಲಿಂಗಪ್ಪಗೌಡನ ಬಾಯುಪಚಾರದಿಂದ 'ತೀರ್ಥಭಕ್ತ'ರ ಚಾತಕ-ಹೃದಯ ಹೇಗೆ ತಣಿಯಬೇಕು?

ಅಷ್ಟರಲ್ಲಿ ಹೊಲೆಯರ ರುದ್ರ ತಡೆಯಲಾರದೆ ಬಾಯ್ತೆರೆದ: "ಯಪ್ಪಾ, ಮಧ್ಯಾನದಿಂದ ಓಡಾಡಿ ಓಡಾಡಿ, ಜನಾ ಕೈಕಾಲು ಸದವುಗಟ್ಟಿ ಕುಂತೈತಿ. ಸೊಲಪ ತೀರ್ಥಾ ಮಂಜೂರಿ ಮಾಡಿಸಿಬಿಟ್ಟರ ಮಜಾ ಆದೀತ ಯಪ್ಪಾ" ಎಂದು ನೆನಪು ಮಾಡಿಕೊಟ್ಟ.

"ಅಪ್ಪನವರು ಇಲ್ಲದಾಗ ತೀರ್ಥದ ನೆನಪು ತಗೂದಂದರೇನಲೆ ರುದ್ರ್ಯಾ?

ಆಸ್ಯಾಡ (ಆಷಾಢ)ದಾಗ ಹೊಲ್ಯಾ ಸೀ ತೆನಿ ಜೇಡಿ ಅತ್ತನಂತ, ಕೇಳೀದಿಲ್ಲೋ?" ಮಾಯಪ್ಪ, ಪಡದಪ್ಪನವರಿಲ್ಲದಾಗ ತೀರ್ಥದ ನೆನಪೂ ಕೂಡ ಪಾಪವೆಂಬಂತೆ ರುದ್ರನನ್ನು ಜಬರಿಸಿದ.

"ಗೋತ್ತಿಲ್ಲದ ಏನ ಯಪ್ಪಾ? ಆದರ ವೈಯುಂಡ ಚಟಾ ಏನೇನೋ ನುಡಸತೈತಿ. ಹಾಗಾರ ಈ ಜನಾ ಎಲ್ಲಾ ಇನ್ನ ಮನೀಗೆ ಹೋಗಲಿ ಅಂತ ಅಪಣಿ ಕೊಟ್ಟಬಿಡರಿ" ಎಂದು ರುದ್ರ ನಿರಾಶೆಯಿಂದ ಬೆಂದ ಹೃದಯದವನಾಗಿ ಹೇಳಿದ. ಅವನ ಈ ಒಡಕು-ನುಡಿಗಳನ್ನು ಕೇಳಿ ಲಿಂಗಪ್ಪನಿಗೇ ಕೆಡುಕೆನಿಸಿತು. ತನ್ನ ನಿಷ್ಕಾಂಚನತ್ವವನ್ನು ನೆನೆದು ನಾಚಿಕೆಯೂ ಆಯಿತು. ಆದರೆ ತೀರ್ಥವಿಲ್ಲದೆ ಇಂಥ ಉತ್ಸವ ಪ್ರಸಂಗದಲ್ಲಿ, ಹಾಗೆಯೇ ಮಲಗಬೇಕೇ? ಒಂದು ಪ್ರಯತ್ನ ಮಾಡಿ ನೋಡೋಣವೆಂದು ಅವನಿಗನಿಸಿತು. "ಲೇ ಕರಿಯಾ, ಕಾಯಿ ಏನಾದರೂ ಕಾದಿದ್ದರ ದೈವಕ್ಕ ತಂದು ನೀಡಲೇ?" ಎಂದು ಸುಮ್ಮನೆ ಹರಳೊಗೆದು ನಿರೀಕ್ಷಿಸಿದ.

"ಒಂದು ಜಾಗಾದಾಗ ಅದಾವು ಕರೆ. ಆದರ ರೋಖ ದುಡ್ಡು ಕೊಟ್ಟರ ಸಿಗತಾವು. ರೂಪಾಯಿ ಕೊಡ್ರಿ ಗೌಡರ, ಗಸಗ್ಗನ ಹೋಗಿ ತಂದ ಕೊಡತೀನು" ಎಂದು ಮಾಯಪ್ಪ ಹೇಳಿದಾಗ ಲಿಂಗಪ್ಪನ ಮುಖ ಕಳೆಗುಂದಿತು. ಗೌಡರ ಕೈಯಲ್ಲಿ ಹಣವಿಲ್ಲವೆಂದು ಮಾಯಪ್ಪನಿಗೆ ಕೂಡಲೆ ಗೊತ್ತಾಯಿತು. ಆದರೂ ಉದ್ದರಿ ತರುವ ಪ್ರಯತ್ನವನ್ನು ಮಾಡಿ ನೋಡೋಣವೆಂದು ಎದ್ದ. ಹೊಲೆಯರ ರುದ್ರ ಅವನ ಸಂಗಡ ತಾನೂ ಹೊರಟ. "ನೀನ್ಯಾಕಲೇ? ಸುಮಾಕ ಕೂಡ ಬಾರದ?" ಎಂದು ಲಿಂಗಪ್ಪ ಗದ್ದರಿಸಿದ. ಆದರೂ ಅವನು ಅದನ್ನು ಕಿವಿಗೆ ಹಾಕಿ ಕೊಳ್ಳಲೇ ಇಲ್ಲ.

ಮಾಯಪ್ಪ ಹೊರಟದ್ದು ತನ್ನ ಮನೆಯಲ್ಲಿಯ ಕಾಯಿಗಳನ್ನು ತರುವ ದಕ್ಕಾಗಿ. ನಾಗರಪಂಚಮಿ ಸಮೀಪಕ್ಕೆ ಬಂದದ್ದರಿಂದ ಕುಡುಕರಿಗೆ ನಾಲ್ಕು ಬಾಟ್ಲಿ ಸೆರೆ ಮಾರಿ ದುಡ್ಡು ಗಳಿಸ ಬಹುದೆಂದು ಅವನು ಭಟ್ಟಿಯಿಟ್ಟು ಆರು ಬಾಟ್ಲಿ ಸೆರೆ ತಯಾರಿಸಿದ್ದ. ರುದ್ರನ ಅವಿವೇಕದಿಂದ ಈ ಗುಟ್ಟು ರಟ್ಟಾಗಬಹುದೆಂಬ ಭೀತಿಯಿಂದ "ರುದ್ರ್ಯಾ, ನಿನಗೊಂದು ಕಾಯಿ ಬ್ಯಾರೆ ಮುಟ್ಟಿಸತೀನು. ಆದರ ನನ್ನ ಮನ್ಯಾಗಿನ ಕಾಯಿ ತಂದೈತಿ ಅಂತ ಯಾರ ಮುಂದೂ ಉಸಲ ಒಡೀಬಾರದಲೇ!" ಎಂದು ಎಚ್ಚರಿಸಿದ. "ನೀವು ಎದ್ದು ಹೊಂಟಾಗs ತಿಳಿದಿತ್ತರಿ. ಆದರ ಅಲ್ಲಿ

ಕುಂತ ಜನಕ್ಕೆ ಹ್ಯಾಗ ತೀಳಿಧಾಂಗ ಮಾಡಿ ಬಂದೆ ನೋಡಿದಿರಿಲ್ಲೋ? ನಿಮ್ಮ ಮಾತು ಮೀರಾಣರೆ" ಎಂದು ಜಂಬ ಕೊಚ್ಚಿಕೊಂಡು ರುದ್ರ ಹಿಂಬಾಲಿಸಿದ.

ಮಾಯಪ್ಪ ಊರ ಹೊರಗೆ ಒಟ್ಟಿದ ಹೊಟ್ಟಿನ ಬಣಿವೆಯಲ್ಲಿ ಕೈ ಹಾಕಿ ಸೆರೆ ತುಂಬಿದ ಎರಡು ಬಾಟಲಿಗಳನ್ನು ತೆಗೆದು, ಒಂದನ್ನು ರುದ್ರನ ಕೈಗಿತ್ತು ಇನ್ನೊಂದನ್ನು ವಲ್ಲಿಯ ಸೆರಗಿನಲ್ಲಿ ಮರೆಮಾಡಿಕೊಂಡು ಮಠಕ್ಕೆ ನಡೆದ. ಆದರೆ ರುದ್ರ ಅವನ ಹಿಂದೆ ಬರಲೇ ಇಲ್ಲ. ಸೆರೆಯ ಬಾಟಲಿಯನ್ನು ಮನೆಗಿಟ್ಟು ಬರಲು ಹೋಗಿರಬಹುದೆಂದು ಸುಮ್ಮನಿದ್ದ. ರುದ್ರ ಹೊಟ್ಟಿನ ಬಣಿವೆಯಲ್ಲಿಟ್ಟಿದ್ದ ಉಳಿದ ನಾಲ್ಕು ಬಾಟಲಿಗಳನ್ನೂ ತಾನು ಹೊತ್ತ ಗೊಂಗಡಿಯಲ್ಲಿ ಮರೆಮಾಡಿಕೊಂಡು ಬಂದು,ಮಠದ ಹೊರಗೆ ತಲೆಬಾಗಿಲ ಹತ್ತಿರಿರುವ ಕಲ್ಲ ಮೇಲೆ ಗೊಂಗಡಿಯನ್ನಿಟ್ಟು ಒಳಗೆ ನಡೆದ. ಅಲ್ಲಿ ತೀರ್ಥವಿತರಣಕಾರ್ಯದಲ್ಲಿ ದಂಗಾಗಿದ್ದ ಮಾಯಪ್ಪನ ಕಡೆಯಿಂದಲೇ ತನ್ನ ಪಾಲಿನ ತೀರ್ಥವನ್ನೂ ಪಡೆದು ಗುಟುಕರಿಸಿದ. ಅದಾದ ಮೇಲೆ ಮನೆಗೆ ನಡೆದ.

ಅಲ್ಲಿ ಕುಡಿದ ಸೆರೆಯ ಅಮಲು ತಲೆಗೇರಿತ್ತು. ತಾನು ಕದ್ದು ತಂದ ಕಾಯಿಗಳನ್ನು ಗೊಂಗಡಿಯಲ್ಲಿ ಬಚ್ಚಿಟ್ಟ ಎಚ್ಚರವಿಲ್ಲದೇ ರುದ್ರ ಮನೆಗೆ ನಡೆದ. ರುದ್ರನ ಹೆಂಡತಿ ದುರಗವ್ವ, ಗೊಂಗಡಿಯೆಲ್ಲಿ ಎಂದು ಕೇಳಿದಾಗಲೇ ಅವನಿಗೆ ನೆನಪು. ತಿರುಗಿ ಮಠಕ್ಕೆ ಧಾವಿಸಿ ಬಂದು ನೋಡಿದರೆ ಗೊಂಗಡಿ ಅಲ್ಲಿರಲಿಲ್ಲ. ಮಾಯಪ್ಪ ಅದನ್ನೆತ್ತಿಕೊಂಡು ಹೊಟುಹೋಗಿದ್ದನೆಂದು ಕರಿಯ ಹೇಳಿದ. ಮರುಮಾತಾಡದೆ ಮಾಯಪ್ಪನ ಮನೆಗೋಡಿದ. ಮಾಯಪ್ಪ ಕೆಂಡವಾಗಿಯೇ ಕುಳಿತಿದ್ದ. ಅವನ ಗೊಂಗಡಿಯನ್ನು ಅವನ ಮುಖಕ್ಕೇ ಬೀಸಾಡಿದ. ರುದ್ರನಿಗೆ ನಾಚಿಕೆಯೆನಿಸಿತು. ತನ್ನ ಕಳ್ಳತನ ಬಯಲಿಗೆ ಬಂತೆಂದುಕೊಂಡು ತಲೆ ಬಾಗಿ, "ಯಪ್ಪಾ ಅದನ್ನೆಲ್ಲ ಮರತಬಿಡ್ರಿ" ಎಂದು ಬೇಡಿಕೊಂಡು ತೆಪ್ಪಗೆ ಗೊಂಗಡಿಯನ್ನು ಹೊತ್ತುಕೊಂಡು ನಡೆದ.

ಆಷಾಢದ ಕಾರ್ಮುಗಿಲು ಆಕಾಶದ ತುಂಬ ಹರಡಿಕೊಂಡಿದ್ದವು. ನಡುನಡುವೆ ವಾತಾವರಣ ನಡುಗುವಂತೆ ತಣ್ಣನ್ನ ಗಾಳಿಯ ಸೆಳಕು ಸುಳಿಯುತ್ತಿದ್ದವು. ಪಿಟಿಪಿಟಿಯಾಗಿ ಮಳೆ ತನ್ನ ಮನಸ್ಸಿಗೆ ಬಂದಂತೆ, ಒಮ್ಮೆ ಜೋರಾಗಿ ಒಮ್ಮೆ ಮೆಲ್ಲಗೆ ಸುರಿಯುತ್ತಿತ್ತು. ತಡವಿ ನೋಡಿದರೆ ಕೈಯಿಂದ ಮುಟ್ಟುವಷ್ಟು ಕತ್ತಲೆ ಘನವಾಗಿತ್ತು. ಮಳೆ ಹನಿಗಳಿಂದ ತನ್ನ ಬಟ್ಟೆ ತೊಯ್ಯಬಾರದೆಂದು ರುದ್ರ ಗೊಂಗಡಿ

ಯನ್ನು ಹೊತ್ತುಗೊಂಡೇ ಸಾಗಿದ್ದ. ದೂರದಿಂದ ಕೆರವಿನ ಸಪ್ಪಳ ಕೇಳಬಂದಿತು. ಅದರ ಬೆನ್ನಹಿಂದಿನಿಂದಲೇ "ಯಾರಲೆ ಅವರು ?" ಎಂಬ ಗುಡುಗು ಕೇಳಿಬಂತು. ರುದ್ರ ವಾತಾವರಣಕ್ಕಿಂತ ತಣ್ಣಗಾದ; ಕೈಕಾಲು ನಡುಗಹತ್ತಿದವು. ವಾಲೀಕಾರ ಮಲ್ಲ ಗಸ್ತಿಗೆ ಹೊರಟಿದ್ದವನು ರುದ್ರನ ಮೇಲೆ ಸಂಶಯ ತೆಗೆದುಕೊಂಡು ಕೂಗಿದ್ದ.

"ನಾನರೀ ಹೊಲ್ಯಾರ ರುದ್ರ" ಇಷ್ಟು ಹೇಳಬೇಕಾದರೆ ನಾಲಿಗೆಯು ದ್ರವ ವಾರಿ ತಡವರಿಸಬೇಕಾಯಿತು.

"ರುದ್ರ ಆದರ ಸರಿರಾತ್ರ್ಯಾಗ ಯಾಕ ಹೊಂಟೇಯಪಾ ಮಗನ?" ವಾಲೀಕಾರ ಮಲ್ಲ ಬೇಟೆ ಸಿಕ್ಕ ಆನಂದದಲ್ಲಿಯೇ ಕೇಳಿದ. "ಮಾಯಪ್ಪನವರ ಮನೀಗೆ ಹೋಗಿದ್ದೀನರಿ?" ಎಂದು ಮತ್ತೆ ನಡುಗುವ ಉತ್ತರವೇ ಬಂತು. ಆದರೆ ಸರಿರಾತ್ರಿಯ ಕತ್ತಲೆಯಲ್ಲಿ ಒಬ್ಬರ ಮುಖದ ಗುರುತು ಇನ್ನೊಬ್ಬರಿಗೆ ಹತ್ತುವಂತಿರಲಿಲ್ಲ. ಸ್ನೇಹಿತರೂ ತಪ್ಪು ತಿಳುದುಕೊಳ್ಳುವಂತೆ ಕತ್ತಲೆ ವ್ಯಾಪಿಸಿತ್ತು. "ಸುಳ್ಳ ಹೇಳಬ್ಯಾಡ ಮಗನ! ಮಾಯಪ್ಪನ ಹತ್ತರ ಏನ ಕಾರೇವ ಇಂತ್ತಂತ ಈ ರಾತ್ರ್ಯಾಗ ಹೋಗಿದ್ದೆಪಾ? ನಡಿ ಚಾವಡಿಗೆ. ಬೆಳತನಾ ಕೂಡಿಸಿ, ರಾತ್ರಿ ಎಲ್ಲ್ಯಾ ಕಳವ ಆಗಿಲ್ಲದಿದ್ದರ ನಿನ್ನ ಬಿಡತೈತಿ" ಎಂದು ಮಲ್ಲ ಜಬರಿಸಿದ. "ಊರಾಗ ಗೌಡರು ಇಲ್ಲಧಾಂಗ ಜಬರ ಮಾಡಬ್ಯಾಡ" ಹೊಲೆಯರ ರುದ್ರ ಲಿಂಗಪ್ಪನ ನೆನ ಪಾಗಿ ತಾನೂ ಗದರಿಕೊಂಡ. "ಹೀಗಽ, ನಡಿ ಚಾವಡಿಗೆ. ಶ್ಯಾಮರಾಯರು, ಸಂಶೇ ಬಂದವರನೆಲ್ಲಾ ಚಾವಡ್ಯಾಗ ತಂದು ಕುಂದರಸು ಅಂತ ಹೇಳ್ಯಾರು" ಮಲ್ಲ ದನಿ ಏರಿಸಿ ಹೇಳಿದ.

ಇಬ್ಬರೂ ವಾದ ಹಾಕುತ್ತಲೇ ಇಷ್ಟರಲ್ಲಿ ಮಠದ ಮುಂದೆ ಬಂದಿದ್ದರು. ಲಿಂಗಪ್ಪಗೌಡನಿಗೆ ಇನ್ನೂ ನಿದ್ದೆ ಹತ್ತಿರಲಿಲ್ಲ. ಇವರಿಬ್ಬರ ಏರುದನಿ ಅವನ ಕಿವಿಗೂ ಬಿದ್ದು, ಹೊರಗೆ ಬಂದು ಇಬ್ಬರನ್ನೂ ಕರೆದ. ಮಲ್ಲನನ್ನು ನೋಡಿ ಅದೇಕೋ ಅವನಿಗೆ ಸಿಟ್ಟು ಕೆರಳಿತು. "ಹೀಗೆಲ್ಲಾ ರಾತ್ರಿ ಅಡ್ಡಾಡವರ್ನ ಹಿಡಿದರ ನನಗ ಸರಿಬರಾಕಿಲ್ಲ" ಎಂದು ಅವನಿಗೇ ಬೈದನು.

ಮಲ್ಲಪ್ಪನ ಕರ್ತವ್ಯಪ್ರಜ್ಞೆಗೆ ಇದರಿಂದ ಅಪಮಾನವೆನಿಸಿತು. ಅವನು ಲಿಂಗಪ್ಪನಿಗೆ ಎಷ್ಟೋ ವಿವರಿಸಿ ಹೇಳಿದ. ರುದ್ರನ ಪೂರ್ವಚರಿತ್ರೆಯನ್ನೆಲ್ಲ ನಿವೇದಿಸಿಕೊಂಡ. ಆದರೆ ಅದರಿಂದೇನೂ ಉಪಯೋಗವಾಗಲಿಲ್ಲ. ರುದ್ರನಿಗೆ

ಮನೆಗೆ ಹೋಗಲು ಅಪ್ಪಣೆಯಾಯಿತು. ಕುಡಿದಿದ್ದ ರುದ್ರನಿಗೆ ಆ ಅಮಲಿನ ಜೊತೆಗೆ ನಿದ್ದೆಯ ಅಮಲೂ ಹಿಡಿದಿತ್ತು. ಗೌಡರಿಗೆ ಹೇಳಿ ಹೋಗುವಷ್ಟು ತ್ರಾಣ ಅವನಲ್ಲಿ ಉಳಿದಿರಲಿಲ್ಲ. ಹಾಗೆಯೇ ಕಾಲು ತಡವರಿಸುತ್ತ ನಡೆದೇ ಬಿಟ್ಟ.

ವಾಲೀಕಾರ ಮಲ್ಲನಿಗೆ ಮುಖಭಂಗವಾದಂತಾಯಿತು. ಶಂಕರಪ್ಪಗೌಡ ರಿದ್ದಾಗಿನಿಂದ ಅವನು ಗಸ್ತಿ ತಿರುಗುತ್ತಲೇ ಬಂದಿದ್ದ. ಅಮಾವಾಸ್ಯೆಯ ಮುಂದೆ ಚಿಕ್ಕ-ಪುಟ್ಟ ಕಳವುಗಳಾಗುತ್ತವೆಂದು ಅವನು ಎಚ್ಚರಿಕೆ ವಹಿಸುತ್ತಿದ್ದ. ಪಾದಳ್ಳಿ ಯಲ್ಲಿ ಪ್ರತಿವ್ಯಕ್ತಿಯ ಅಪರಾಧಗಳ ಇತಿಹಾಸ ಅವನಿಗೆ ಗೊತ್ತಿತ್ತು. ಆದರೆ ಈಗ ಕಾಲ ಬದಲಾಗಿತ್ತು. ಏನೂ ಹೇಳದೆ ಸುಮ್ಮನೆ ಚಾವಡಿಗೆ ಬಂದು ಮಲಗಿಬಿಟ್ಟ.

ಆದರೂ ಮಲ್ಲನಿಗೆ ನಿದ್ದೆಹತ್ತಲಿಲ್ಲ. ಚಾವಡಿ ಕಟ್ಟೆಯ ಮೇಲೆ ಹೊರಳಾಡಿ ಹೊರಳಾಡಿ ಬೇಸತ್ತ. ವತನದಾರ ವಾಲೀಕಾರನಾದ ತನಗಿಂತ, ಗೌಡರಿಗೆ ಹೊಲೆಯರ ರುದ್ರ ಬೇಕಾದವನೆನಿಸಿದನಲ್ಲ ಎಂದು ಅವನಿಗೆ ಕೆಡುಕೆನಿಸಿತು. ಅಷ್ಟರಲ್ಲಿ ಗೂಗೆಯೊಂದು ಘೂಕ್ ಎಂದು ಕೂಗಿತು. ಮಲ್ಲನ ಎದೆ ನಡುಗಿತು. ಚಾವಡಿಯ ಮುಂದಿರುವ ಗಿಡದಿಂದ ಆ ಕೂಗು ಕೇಳಿ ಬಂದಿತ್ತು. "ಎಲಾ ಇವನ, ಈ ಅಿಷ್ಟನನಮಗಂದು, ಮತ್ತೇನು ಕೆಡಗಾಲ ಬರೂದೈತೆಂತ ಹೇಳತೈತೊ !" ಎಂದು ತನಗೆ ತಾನೇ ಹೇಳಿಕೊಂಡ. ಹಿಂದಕ್ಕೆ ಕಾ:ಲರಾ ಪಿಡುಗಿನಲ್ಲಿ ಶಂಕರಪ್ಪ ಗೌಡರು ಸಾಯುವ ಹಿಂದಿನ ರಾತ್ರಿ ಇದೇ ಗೂಗೆ ಕೂಗಿ ಕಣಿಹೇಳಿತ್ತು. ಈ ಗೂಗೆಗೆ ಸಾವೇ ಇಲ್ಲವೆಂದು ಪಾದಳ್ಳಿಯಲ್ಲಿ ಜನಜನಿತವಾದ ವಾರ್ತೆಯಿತ್ತು. ಪಾದಳ್ಳಿಯ ಪಾಸನಾಜೀವಿಯೊಂದು ಆ ಗೂಗೆಯ ಶರೀರದಲ್ಲಿ ಕುಳಿತು, ಕೆಡು ಗಾಲದ ಸೂಚನೆಯನ್ನು ಮೊದಲೇ ಕೊಡುತ್ತದೆಂದು ಅಲ್ಲಿಯ ಜನರಿಗೆಲ್ಲ ನಂಬಿಕೆ ಯಾಗಿತ್ತು. ಮರುದಿನ ಬಾಳಾಚಾರ್ಯರಿಗೆ ಈ ಸುದ್ದಿಯನ್ನು ತಿಳಿಸಿ ವಿವರಣೆ ಯನ್ನು ಕೇಳಿಕೊಳ್ಳಬೇಕೆಂಬ ವಿಚಾರದಲ್ಲಿಯೇ ವಾಲೀಕಾರ ಮಲ್ಲ ನಿದ್ದೆಹೋದ.

:: ೩೮ ::

ಪಡದಯ್ಯನವರು ತಿರುಗಿ ಬರುವಾಗ ಚಿಮಣಾಳನ್ನು ತಮ್ಮ ಜೊತೆಗೆ ಕರೆದುಕೊಂಡೇ ಬಂದದ್ದನ್ನು ನೋಡಿ ಲಿಂಗಪ್ಪಗೌಡನಿಗೆ ಸಿಡಿಲು ಬಡಿದಂತಾಯಿತು. ಅವರಿಬ್ಬರ ಸಂಬಂಧ ಅವನಿಗೂ ಗೊತ್ತಿತ್ತು. ಹಿಂದೊಮ್ಮೆ ಪಡದಯ್ಯನವರು ಆ ಮಾತನ್ನು ಲಿಂಗಪ್ಪನೆದುರು ಒಪ್ಪಿಕೊಂಡೂ ಇದ್ದರು. ಆದರೆ ಚಿಮಣಾ ಅವರಿಗೊಂದು ಅನವಶ್ಯವಾದ ಹೊರೆಯಾಗಿರಲಿಲ್ಲವೇ? ಅಂತೆಯೇ ಬಾಪೂ ಸಾಹೇಬನೇ ಅವಳ ಪ್ರಿಯಕರ ಎಂದು ಅವರು ಸಾಧಿಸಿರಲಿಲ್ಲವೇ? ಮೊದಲಿನಿಂದಲೂ ಸ್ತ್ರೈಣರಾದ ಸ್ವಾಮಿಗಳು ಯಾವ ಹೆಣ್ಣಿನ ಭಾರವನ್ನು ಹೊತ್ತುಕೊಳ್ಳಲೂ ಒಪ್ಪಿರಲಿಲ್ಲ. ಜನರಲ್ಲಿ ಹುಟ್ಟಿದ ತಮ್ಮ ಪ್ರತಿಷ್ಠೆ ಕುಗ್ಗಬಹುದೆಂದು ಸ್ವಾಮಿಗಳೇ ಅನೇಕ ವೇಳೆ ಹೇಳಿದ್ದರು. ಅಂಥವರು ಈಗ ಒಮ್ಮಿಂದೊಮ್ಮೆಲೇ ಚಿಮಣಾಳನ್ನು ಕರೆದುಕೊಂಡು ಬರುವದಕ್ಕೆ ಕಾರಣವಾದರೂ ಏನು? ಅನಾಯಾಸವಾಗಿಯೇ ದೂರ ಹೋಗಿದ್ದಳು; ಯಾರೂ ಕರೆದುಕೊಂಡು ಹೋಗೆಂದು ಜುಲುಮೆ ಮಾಡಿರಲಿಲ್ಲ. ಹೀಗಿದ್ದಾಗಲೂ ಪಡದಯ್ಯನಪರು ತಾವಾಗಿಯೇ ಮೇಲೆ ಬಿದ್ದು ಚಿಮಣಾಳನ್ನು ಕರೆದುಕೊಂಡು ಬಂದದ್ದೇಕೆ?

ಲಿಂಗಪ್ಪಗೌಡನಿಗೆ ಈ ಸಂಗತಿಯ ರಹಸ್ಯವನ್ನು ತಿಳಿದುಕೊಳ್ಳುವ ಕುತೂಹಲ ತಡೆಯದಾಯಿತು. ಅಂತರಂಗದ ಕೋಣೆಯಲ್ಲಿ ಪಡದಪ್ಪನವರು ಪವಡಿಸಿದ್ದುದನ್ನು ಕಂಡು ಒಳಗೆ ಹೋಗಿ, "ಇದೇನು? ವಿರಕ್ತಮಠದಾಗ ತೊಟ್ಟಿಲ ತೂಗಾಕ ಹತ್ತೈತಲ್ಲ?" ಎಂದು ನಗೆಯಾಡಿದ.

ಪಡದಯ್ಯನವರು ಇದನ್ನು ಮೊದಲು ಊಹಿಸಿಯೇ ಇದ್ದರು. ಮಠದಲ್ಲಿ ಚಿಮಣಾಳ ವಾಸ್ತವ್ಯ ಜನರ ಅವಾಸ್ತವ ಕುತೂಹಲವನ್ನು ಕೆರಳಿಸಿಯೇ ತೀರುತ್ತದೆಂದು ಅವರಿಗೆ ಮೊದಲೇ ಗೊತ್ತಾಗಿತ್ತು. ಅದಕ್ಕಾಗಿ ಅವರು ಮಾಡಿಕೊಂಡ ಪೂರ್ವಸಿದ್ಧತೆ ಅಷ್ಟಿಷ್ಟಲ್ಲ. ಜನರ ಸಲುವಾಗಿಯೇ ಅವರ ಕಲ್ಪಕಬುದ್ಧಿ ಕತೆಯೊಂದನ್ನು ಸೃಷ್ಟಿಸಿತ್ತು. ಅದೊಂದು ಕರುಣರಸದ ಕಥಾನಕ. ಚಿಮಣಾ ಜೀವ

ಜೇಡಾಗಿ ಬಾವಿಬಿದ್ದದ್ದು, ಆಕಸ್ಮಿಕವಾಗಿ ತಾವೇ ಅಲ್ಲಿಗೆ ಹೋಗುವಂತೆ ವಿಧಿ ನಿಯಮಿಸಿದ್ದು, ಚಿಮಣಾಳನ್ನು ಮೃತ್ಯುವಿನ ದವಡೆಯಿಂದ ಪಾರುಮಾಡಿದ್ದು, ಅವಳು ಕಾಲಿಗೆ ಬಿದ್ದು ಆಶ್ರಯವನ್ನು ಬೇಡಿದ್ದು, ತಾವು ಮಠದಲ್ಲಿ ಈ ಅನಾಥ ಳಿಗೆ ಇರಲು ಅನುಕೂಲ ಮಾಡಿಕೊಟ್ಟದ್ದು – ಮೊದಲಾದ ಸಂಗತಿಗಳನ್ನೆಲ್ಲ ಅವರು ಬಣ್ಣದುಂಬಿ ಹೇಳುವಾಗ ಜನರು ನಂಬಲೇಬೇಕಿತ್ತು.

ಆದರೆ ಎಲ್ಲ ವೃತ್ತಾಂತವನ್ನೂ ಮೊದಲಿನಿಂದಲೂ ಬಲ್ಲ ಲಿಂಗಪ್ಪ ಇದನ್ನು ನಂಬುವಂತಿರಲಿಲ್ಲ. ಆದ್ದರಿಂದ ಈ ಕತೆಯನ್ನು ಹೇಳಿ ಮನವೊಲಿಸುವದರಲ್ಲಿ ಏನೂ ಅರ್ಥವಿಲ್ಲವೆಂದರಿತು "ಗೌಡರ, ನಿಮಗೆಲ್ಲಾ ಹಕೀಕತು ಮೊದಲಿನಿಂದಲೂ ಗೊತ್ತsಐತಿ. ಆದರ ಊರ ಜನಕ್ಕೆಲ್ಲಾ ನಾ ಹೇಳೂ ಮಾತು ಸೈ ಅನಿಸೀತೋ ಇಲ್ಲೋ ಹೇಳ್ರಿ" ಎಂದು ಈ ಕತೆಯನ್ನು ಮೊಟ್ಟಮೊದಲು ಅವನಿಗೇ ಹೇಳಿದರು. ಲಿಂಗಪ್ಪ ಸ್ವಾಮಿಗಳ ಕಲ್ಪನಾಶಕ್ತಿಗೆ ಬೆಕ್ಕಸಬೆರಗಾದ. "ಸ್ವಾಮೇರ, ನೀವು ಸುಳ್ಳಿಗೆ ಬಣ್ಣಾ ಬಡದರ ಖರೇ ಮಾತಿನಕಿಂತಾ ಖರೇ ಅನಸೂ ಹಾಗ ಆಗತೈತಿ. ನೀವು ಸ್ವಾಮೇರಾಗದ ಎಲ್ಲೆರ ವಕೀಲರಾಗಿದ್ದರs ಪಾಡಿತ್ತು" ಎಂದು ತನ್ನ ಚೇಷ್ಟೆಗೆ ತಾನೇ ನಕ್ಕ.

ಪಡದಯ್ಯನವರು ಈ ಮಾತು ಕೇಳಿ ಉಬ್ಬಿದರು. ಚಿಮಣಾಳನ್ನು ಕರೆದು ಕೊಂಡು ಬಂದದ್ದು ಅವರ ಪಾಲಿಗೊಂದು ವಿಜಯವೇ ಆಗಿತ್ತು. ಅದಕ್ಕಾಗಿ ಅವರು ಶ್ರಮಪಟ್ಟದ್ದೇನೂ ಸುಳ್ಳಲ್ಲ. "ಯಶವಂತರಾಯ ಪಾಟೀಲಂದರ ಸಾಮಾನ್ಯ ಮನಶ್ಯಾ ಅಲ್ಲ. ನಿಮಗ ಗೊತ್ತಿಲ್ಲೇನು ಗೌಡರs ಅವಂದು? ಅಂತ ಪಗೂ ನನ್ನ ಮಾತು ಕೇಳಿ ಮಬ್ಬುಹಿಡೀತು. 'ಚಿಮಣಾ ಬರತಿದ್ದರ ಕರಕೊಂಡು ಹೋಗು' ಅಂದಾ. ನಾನೂ ಆದಕ್ಕ ಪೇಚು ಹಾಕಿದ್ದೆ. 'ಚಿಮಣಾ ಬರದಿದ್ದರ ನಂದೇನೂ ಜುಲುಮಿ ಇಲ್ಲ. ಆದರ ಅನ್ಯಾಯದಿಂದ ಕೂಸಿನ ತಂದಿ ನಾನು ಅಂತ ಸರಕಾರಿ ಲೆಕ್ಕದಾಗ ನಮೂದ ಮಾಡಿಬಿಟ್ಟೇರಿ. ಕೂಸು ನನ್ನದು ಅಂದ ಬಳಿಕ ಅದು ಮಠಕ್ಕ ಸೇರಿದ್ದು. ಕೂಸು ಮಠದಾಗs ಬೆಳೀಲಿ ಅಂತ ಊರ ದೈವ ದವರು, ಮಠದ ಕಬಜಾ ನನಗ ಬಂದದ್ದರಿಂದ ಹಟಾ ಹಿಡದಾರು. ಈಗ ಕೂಸಿನ ಬಿಟ್ಟು ಹೋದರ ನಾ ಮಠದಾಗ ಕಾಲ ಹಾಕದ್ಹಾಂಗ ಆಗತೈತಿ. ಅದಕ್ಕ ಕೂಸ ಕೊಡಬೇಕು; ಇಲ್ಲಾಂದರ ಸರಕಾರಿ ಲೆಕ್ಕದಾಗ ಕೂಸಿನ ತಂದಿ ನಾನಲ್ಲ ಅಂತ ಬರಸ ಬೇಕು' ಅಂತ ಜಳಾಜಳಾ ಹೇಳಿಬಿಟ್ಟೆ. ಚಿಮಣಾನ್ನ ಕೇಳಿ ಬರತೀನೆಂದಾ.

ಚಿಮಣಾ, 'ಕೂಸು ಮಠದಾಗ ಒಂದs ಹ್ಯಾಗ ಇರಬೇಕೂ? ನಾನೂ ಬರತೀನಿ' ಅಂತ ಅಂದಳು. ನಡೀ ಅಂತ ಹೇಳಿ ಕರಕೊಂಡ ಬಂದೀನು" ಎಂದು ಹೇಳಿ ಪಡದಯ್ಯನವರು ಹೆಮ್ಮೆಯ ಮುಗುಳುನಗೆಯೊಂದನ್ನು ಬೀರಿದರು.

ಪಡದಯ್ಯನವರು ಹೇಳಿದ್ದರಲ್ಲಿ ಏನೂ ಸುಳ್ಳಿರಲಿಲ್ಲ. ಯಶವಂತರಾಯರಿಗೆ ಚಿಮಣಾಳನ್ನು ಅವನ ಜೊತೆಗೆ ಕಳಿಸುವ ಮನಸ್ಸಿರಲಿಲ್ಲ. ಒಂದಿಲ್ಲೊಂದು ದಿನ ದಾದಾ ಬಂದುತನ್ನ ತಂಗಿಯನ್ನು ಕರೆದೊಯ್ಯಬಹುದೆಂದು ಅವರಿಗೆ ಇನ್ನೂ ಆಸೆಯಿತ್ತು. ಆದರೆ ದಾದಾ ತಿರುಗಿ ಇತ್ತಕಡೆಗೆ ಹಾಯಲಿಲ್ಲ. ಈಗ ಪಡದಪ್ಪ ಕಾಲಸ್ವರೂಪಿಯಾಗಿ ನಿಂತು ಜನ್ಮಾಂತರದ ಸಾಲವನ್ನು ಕೇಳುವವರಂತೆ ತನ್ನ ಹಕ್ಕನ್ನು ಬೇಡುತ್ತಿದ್ದಾನೆ. ಯಶವಂತರಾಯರಿಗೆ ಆ ಕಾಲಕ್ಕೇನೋ ದುಃಖವೆನಿಸಿತು. ಆದರೆ ಎಷ್ಟು ಒಳ್ಳೆಯ ರೀತಿಯಿಂದ ನೋಡಿಕೊಂಡರೂ ತನ್ನ ಮನೆ ಚಿಮಣಾಳ ಮನೆಯಾಗಲಾರದೆಂದೆನಿಸಿತು. ಪಡದಪ್ಪ ಎಷ್ಟೇ ಕೆಟ್ಟವನಾಗಿದ್ದರೂ ವಿಧಿ ಅವರಿಬ್ಬರನ್ನೂ ಒಂದುಗೂಡಿಸಿತ್ತು. ಒಂದು ಜೀವದ ಮೇಲೆ ಇನ್ನೊಂದು ಒಳ್ಳೆಯ ಜೀವವೇ ಅಧಿಕಾರವನ್ನು ನಡೆಸಬೇಕೆಂದೇನು ಬರೆದುಕೊಟ್ಟದೆಯೇ? ಹಾಗಿದ್ದರೆ ಜಗತ್ತಿನಲ್ಲಿ ಕೆಟ್ಟವರು ಮದುವೆಯಾಗುತ್ತಿರಲೇ ಇಲ್ಲ. ಎಂಥ ಕೆಟ್ಟವರೂ ತನ್ನ ಕುಟುಂಬದ ಮಟ್ಟಿಗೆ ತಾನು ಒಳ್ಳೆಯವನೇ ಅಲ್ಲವೇ? ಕರುಳಿನ ಒಲುಮೆ ಪಾಪಪುಣ್ಯಗಳೆರಡನ್ನೂ ಮೀರಿ ಹರಿಯುವಂಥದು. ಇದನ್ನೆಲ್ಲ ನೆನೆದೇ ಯಶವಂತರಾಯರು ಚಿಮಣಾಳಿಗೇ ಅದರ ಹೊಣೆಯನ್ನೆಲ್ಲ ಬಿಟ್ಟುಕೊಟ್ಟಿದ್ದರು.

ಚಿಮಣಾಳಿಗಂತೂ ತನ್ನ ಬಾಳು ಎಂದೋ ದೈವ-ದುರ್ವಿಲಾಸಕ್ಕೆ ಆಹುತಿಯಾಗಿದೆಯೆಂದು ಗೊತ್ತಾಗಿತ್ತು. ಅಶುಭವನ್ನು ಸೆರಗಿನಲ್ಲಿ ಕಟ್ಟಿಕೊಂಡೇ ಹುಟ್ಟಿದವಳು, ಬಾಳುವೆಯುದ್ದ ಅದನ್ನು ಬಿಚ್ಚಿ ಉಣ್ಣಬೇಕಾಗಿತ್ತು. ತಾಯಿಯನ್ನು ಕಳೆದುಕೊಂಡು ಬೇರಿಲ್ಲದ ಸಸಿಯಾಗಿದ್ದಳು; ತಂದೆಯ ಒಲುಮೆಯ ನೀರಿನಿಂದ ಅದಷ್ಟು ಜೀವ ಹಿಡಿದಿದ್ದಳು. ಪುಣ್ಯವಶದಿಂದ ಇನ್ನೊಂದು ಗಿಡಕ್ಕಂಟಿಕೊಂಡಿದ್ದರೆ ಹೊರವಾಗಿ ಬೆಳೆಯಬಹುದಿತ್ತು. ಆದರೆ ತನ್ನ ರೂಪವೇ ತನಗೆ ಶತ್ರುವಾಗಿತ್ತು. ಪಾದಳ್ಳಿಯ ಕಾಮುಕರ ದೃಷ್ಟಿದೋಷವೆಲ್ಲ ನಂಜಾಗಿ ಆ ರೂಪವನ್ನು ಎಂಜಲುಗೊಳಿಸಿತ್ತು. ಪಡದಪ್ಪ ನಿಮಿತ್ತಮಾತ್ರವಾಗಿದ್ದ. ಅಂದೇ ಸತ್ತು ಹೋಗಿದ್ದ ಚಿಮಣಾ, ಮುಂದೆ ತನ್ನ ಕೂಸಿನ ತೊಟ್ಟಿಲಾಗಿ ಮಾತ್ರ ಬದುಕಿದ್ದಳು. ಬೇಕಾದಾಗ ದೈವ ತೂಗುತ್ತಿತ್ತು; ಬೇಡವಾದಾಗ ಬಿಡುತ್ತಿತ್ತು. ಚಿಮಣಾಳಿಗೆ

ಅದರ ಅರಿವೂ ಇರಲಿಲ್ಲ.

ಹೌದು, ದಾದಾನ ಬಗ್ಗೆ ಮಾತ್ರ ಆಸೆ ಇನ್ನೂ ಮಿಂಚುತ್ತಿತ್ತು. ಆದರೆ ದಾದಾನ ಹೃದಯ ಇನ್ನೂ ಅವಳ ಬಗ್ಗೆ ಕರಗಿರಲಿಲ್ಲ. ಅವನ ಆಶ್ರಯ ತನಗೆ ದೊರೆಯಬೇಕೆಂದು ದೈವದ ಅಪೇಕ್ಷೆಯೇ ಇರಲಿಕ್ಕಿಲ್ಲವೆನೋ! ಆದರೆ ಯಶವಂತರಾಯರ ಮನೆಯಲ್ಲಿದ್ದುಕೊಂಡು ಅವನ ಸಲುವಾಗಿ ಕೊನೆಯಿಲ್ಲದ ನಿರೀಕ್ಷೆಯಲ್ಲಿ ಚಿಮಣಾ ಇದ್ದಳು. ಈಗ ಮತ್ತೆ ಪಡದಪ್ಪ ತನಗಾಗಿ ಹಾತೊರೆದು ಬಂದಿದ್ದ. ಅವನ ಬಗ್ಗೆ ತನಗೇನೂ ಪ್ರೀತಿಯಿಲ್ಲಿಲ್ಲ. ಅವನನ್ನು ಮದುವೆಯಾಗಬಹುದೆಂಬುದೇ ವಿಧಿಯ ಕ್ರೂರಹಾಸ್ಯವಾಗಿ ಪರಿಣಮಿಸಿತ್ತು. ಸರಕಾರಿಯ ಲೆಕ್ಕದಲ್ಲಿ ಕೂಸಿನ ತಂದೆಯೆಂದು ಅವನ ಹೆಸರು ಬಂದಮೇಲಂತೂ ಲೋಕದ ಕಣ್ಣಿಗೆ ಅವನೇ ಪತಿಯಾಗಿದ್ದ. ಮೇಲಾಗಿ ಪ್ರೀತಿಯೆಂಬುದಾದರೂ ಏನು? ಒಲಿದ ಜೀವಗಳು ಕೂಡುವವೆಂದರೇನು? ಆ ಅನುಭವದ ದೂರ ಪ್ರಜ್ಞೆ ಕೂಡ ಬಾರದಷ್ಟು ಚಿಮಣಾಳ ಹೃದಯ ಸುಟ್ಟುಹೋಗಿತ್ತು. ಜೀವನದ ನೂರಾರು ಹೊಳವುಗಳನ್ನು ಕಂಡು ನಲಿದರೂ ನಾವು ಆರಿಸಿಕೊಳ್ಳುವದು ಒಂದನ್ನೇ ಅಲ್ಲವೇ? ಈಗ ಚಿಮಣಾ ಪಡದಪ್ಪನನ್ನೇ ಗಂಡನೆಂದು ಆರಿಸಿಕೊಳ್ಳುವದು ಅನಿವಾರ್ಯವಾಗಿತ್ತು. ತನ್ನದಲ್ಲವೆಂದೆನಿಸಿದ್ದರಿಂದ ಯಶವಂತರಾಯರ ಕರುಣೆ ಕೂಡ ಅವಳ ಪಾಲಿಗೆ ವಿಷವಾಗಿತ್ತು. ಸುಖವಂತೂ ತನ್ನ ಮಡಲಿಗೆ ಇಲ್ಲವೇ ಇಲ್ಲ. ಇಲ್ಲಿಂದ ಪಾರಾದರೂ ಅಷ್ಟೇ ಸಮಾಧಾನವಾದೀತೆಂದು ಅವಳ ಅಭಿಪ್ರಾಯ.

ಚಿಮಣಾಳ ಅಂತರಂಗದ ಕನ್ನಡಿ ಎಂದೋ ಒಡೆದು ಚೂರಾಗಿತ್ತು. ಯಶವಂತರಾಯರು ಹುಚ್ಚು ಮೋಹದಿಂದ ಆ ಚೂರಗಳನ್ನು ಕೂಡಿಸಿ ಒಂದುಗೊಳಿಸುವ ವ್ಯರ್ಥಸಹಾಸದಲ್ಲಿ ನಿರತರಾಗಿದ್ದರು. ಚಿಮಣಾಳಿಗೆ ಅದರಲ್ಲೇನೂ ನಂಬಿಕೆ ಮಿಗಲಿಲ್ಲ. ಏನೇ ಆಗಲಿ, ಪಡದಪ್ಪ ಹಳೆಯ ಸಂಬಂಧವೊಂದನ್ನು ನೆನೆಸಿಕೊಂಡು ಬಂದಿದ್ದ. ಮದುವೆಯಲ್ಲದಿದ್ದರೂ ಸಂಬಂಧ ಸುಳ್ಳೇ? ಹೀಗೆಲ್ಲ ವಿಚಾರಮಾಡಿ ಚಿಮಣಾ ಎರಡೂ ಕಣ್ಣು ತೆರೆದುಕೊಂಡೇ ಈ ಭೀಕರ ಪರಿಸ್ಥಿತಿಯನ್ನು ಅಪ್ಪಿಕೊಂಡಿದ್ದಳು. ಜೀವನಪ್ರವಾಹ ಒಯ್ದತ್ತ ಸಾಗುವದೇ ಈಗ ಅವಳ ಗುರಿಯಾಗಿತ್ತು. ತನ್ನ ಜೀವನದ ಪಾಪ-ಪುಣ್ಯಗಳ ಹೊಣೆಯನ್ನೆಲ್ಲ ಪಡದಪ್ಪನ ಮೇಲೆಯೇ ಹೊರಿಸಿಬಿಡಬೇಕೆಂಬ ಅಮಾನುಷ ನಿಶ್ಚಯದಿಂದಲೇ ಈಗವಳು ಹೊರಟಿದ್ದು. ಚಿಮಣಾ ಕೂಸನ್ನು ಬಗಲಲ್ಲಿತ್ತಿಕೊಂಡು ಹಿಂದುಮುಂದೆ ನೋಡದೆ

ವಿರಕ್ತಿಯಿಂದ ನಡೆದಾಗ ಯಶವಂತರಾಯರ ಕರುಳಿಲ್ಲ ಕಣ್ಣಲ್ಲಿ ತುಂಬಿದ್ದವು. ಚಿಮಣಾಳ ವಿರಕ್ತಿ ಪಡದಯ್ಯನವರಂಥ ಸನ್ಯಾಸಿಯ ಆಸಕ್ತಿಯನ್ನೂ ಅಣಕ ಮಾಡುವಂತಿತ್ತು.

ಈ ಕತೆಯನ್ನೆಲ್ಲ ಕೇಳಿದ ಲಿಂಗಪ್ಪ ಗರಹೊಡೆದಂತಿದ್ದ. ಪಡದಯ್ಯನವರು ವಿರಕ್ತರಾಗಿದ್ದರಿಂದಲೋ ಏನೋ, ಮಾನವೀಯ ಗೌರವವನ್ನೂ ಕೂಡ ಕಳೆದು ಕೊಂಡಂತೆ ಕಂಡರು. ಚಿಮಣಾಳನ್ನು ಕರೆತಂದು ಮಠದಲ್ಲಿಟ್ಟ ಈ ಸನ್ಯಾಸಿ, ನಾಳೆ ಜನರನ್ನು ಹೇಗೆ ಎದುರಿಸಬಹುದೆಂದು ಅವನ ಸಂಶಯ. ಆದರೆ ಜನತೆಯ ಮನೋಧರ್ಮವನ್ನೇ ಅಡಿಗಲ್ಲಾಗಿರಿಸಿ ಪಡದಯ್ಯನವರು ತಮ್ಮ ಸ್ವಾರ್ಥದ ಮಠವನ್ನು ಕಟ್ಟಿಕೊಂಡಿದ್ದರು. ಯಾವ ಪಾಪವನ್ನೂ ಪುಣ್ಯವಾಗಿ ಬೆಳಗಿಸುವ ಮಾಟಗಾರಿಕೆ ಅವರಲ್ಲಿತ್ತು. "ನಾವು ಮಾಡೂದೆಲ್ಲಾ ನೀತಿ ಧರ್ಮಾ ಕಾಯಾಕ ಅಂತ ಜನರಿಗೆ ತೋರಿಸಿಕೊಟ್ಟರ ಸಾಕು ಗೌಡರ! ಜನಾ ಕುರಿಹಿಂಡು ಬರ್‍ರೂ ಹಾಗ ಬೆನ್ನಹತ್ತತಾರು" ಎಂದು ಹೇಳಿ ಲಿಂಗಪ್ಪನ ಬೆರಗಿನ ಬಾಯನ್ನು ಮುಚ್ಚಿದರು.

ಇವರಿಬ್ಬರ ಮಾತು ನಡೆದಿರುವಾಗಲೇ ಬಾಳಾರಾಮ ಮಾರವಾಡಿ ಅಲ್ಲಿಗೆ ಬಂದಿದ್ದ. ಅವನೊಬ್ಬ ವಿಲಕ್ಷಣ ವ್ಯಾಪಾರಿ. ಪಾದಳ್ಳಿಯಲ್ಲಿಯೇ ಅವನ ವ್ಯಾಪಾರದ ಸಾಹಸ ಗಾದೆಯ ಮಾತಾಗಿತ್ತು. ಒಂದು ಲೋಟಾ ಹಿಡಿದುಕೊಂಡು ತನ್ನ ದೇಶದಿಂದ ಕೂಳಿಲ್ಲದೆ ಬಂದಿದ್ದ ಈ ಮಾರವಾಡಿ, ಜನರ ಕಣ್ಣೆದುರಿನಲ್ಲಿಯೇ ಸಾಲಕೊಡುವ ಶ್ರೀಮಂತನಾಗಿ ಬೆಳೆದಿದ್ದ. ಜೀವನದಲ್ಲಿಯ ಯಾವ ಸಂಗತಿಯನ್ನೂ ವ್ಯಾಪಾರಕ್ಕಾಗಿ ಬಳಸಿಕೊಳ್ಳುವ ವಿದ್ಯೆ ಅವನಿಗೆ ರಕ್ತಗತವಾಗಿ ಬಂದಿತ್ತು. ಈಗ ಲಿಂಗಪ್ಪ ಗೌಡನಾಗಿ ನೆಮಣೂಕಿ ಹೊಂದಿದ ಸುದ್ದಿ ಅವನಿಗೂ ತಿಳಿದಿತ್ತು. ಅದರ ಜೊತೆಗೆ ಹಳ್ಳಿಗೆ 'ಡೋಲು' ಕೊಡುವ ಆಶ್ವಾಸನವನ್ನು ತಂದಿರುವದಾಗಿ ತಿಳಿಯಿತು. ಅಂದಮೇಲೆ ತಾನೇಕೆ ಲಿಂಗಪ್ಪನಿಗೆ ಹೇಳಿಕೊಂಡು ಡೋಲಿನ ಗುತ್ತಿಗೆಯನ್ನು ಪಡೆಯಬಾರದು ಎಂದು ಅವನ ಹಂಚಿಕೆ. ನೂರಾರು ಚೀಲದಷ್ಟು ಜೋಳದ ಸಂಗ್ರಹ ಅವನಲ್ಲಿತ್ತು. ಸರಕಾರದಿಂದ ಗುತ್ತಿಗೆಯನ್ನು ಪಡೆದು ಜೋಳವನ್ನು ತಾನೇ ಹಂಚಿ ಲಾಭಪಡೆಯಬೇಕೆಂದು ಉಪಾಯ ಹೂಡಿ, ಈಗ ಪಡದಪ್ಪನವರ ಕಾಲು ಬೀಳಲು ಬಂದಿದ್ದ. ಪಡದಪ್ಪನವರು ಅವನಿಗೂ ಒಂದು ಆಶ್ವಾಸನವನಿತ್ತು ಕಳಿಸಿದರು.

ಅಷ್ಟರಲ್ಲಿ ಎರಡು ತಾಸು ಹೊತ್ತೇರಿತ್ತು. ವಾಲೀಕಾರ ಮಲ್ಲಪ್ಪ ಒಳಗೆ ಬಂದು ಶ್ಯಾಮರಾಯರು ಕರೆದಿರುವದಾಗಿ ಲಿಂಗಪ್ಪನಿಗೆ ಹೇಳಿದ. ಶ್ಯಾಮರಾಯ ಶೇಷಪ್ಪನಿಂದ ಗೌಡಿಕಿ ದಪ್ತರದ ಚಾರ್ಜನ್ನು ತೆಗೆದುಕೊಂಡಿದ್ದ. ಅದನ್ನೀಗ ಲಿಂಗಪ್ಪನಿಗೆ ಕೊಟ್ಟು ಆ ಹೊಣೆಯಿಂದ ಮುಕ್ತನಾಗಬೇಕಿತ್ತು. ಮಲ್ಲಪ್ಪನಿಂದ ಈ ಸುದ್ದಿಯನ್ನು ಕೇಳಿದೊಡನೆ ಪಡದಯ್ಯನವರು, ತಾವೇ ಚಾರ್ಜು ತೆಗೆದುಕೊಳ್ಳುವವರಂತೆ, "ಗೌಡರು ಊಟಾ ಮಾಡಿ ಚಾವಡಿಗೆ ಬರತಾರಂತ ತಿಳಿಸಪಾ" ಎಂದು ಹೇಳಿ ಅವನನ್ನು ಕಳಿಸಿಕೊಟ್ಟರು. ಆಮೇಲೆ ಲಿಂಗಪ್ಪನ ಕಡೆಗೆ ತಿರುಗಿ "ನೋಡಿದಿರಿಲ್ಲ ಗೌಡರ? ಯಾಳೇ ಅನುಕೂಲ ಇದ್ದರ ಜೇಡಿದ್ದೆಲ್ಲ ಕೈಗೂಡತೈತಿ. ಗೌಡಿಕಿ ದಪ್ತರ ಸಿಗಾಣಿಲ್ಲ ಅಂತ ಆಶೇ ಬಿಟ್ಟು ಕುಂತಿದ್ದಿರಿ. ಈಗ ಬರೇ ಗೌಡಿಕಿ ಒಂದs ಯಾಕ, ತಗಾಯಿಸಾಲ, ಡೋಲು ಎಲ್ಲಾ ಹೇಳದ ಕೇಳದ ಹ್ಯಾಗ ಬಂದವು? ಇನ್ನ ಹೊನ್ನಿನ ಮಳೀನs ನಿಮ್ಮ ತೆಲಿಮ್ಯಾಗ ಸುರಿಯೂದು. ಆಗ ಈ ಬಡಸ್ವಾಮಿನ್ನ ಮರೀಬ್ಯಾಡ್ರಿ ತೀರ್ತು" ಎಂದು ಸುಳ್ಳು ವಿನಯದ ಸೋಗಿನಲ್ಲಿ ನುಡಿದ.

ಲಿಂಗಪ್ಪನಿಗೆ ಈ ಮಾತು ಕೇಳಿ ನೋವಾದಂತೆನಿಸಿತು. ಮುಖವನ್ನು ಕಹಿ ಮಾಡಿಕೊಂಡು, "ನಿಮ್ಮ ಯಾವ ಮಾತು ನಡಸಾಕಿಲ್ಲ ಅಂತ ನಿಮಗ ಅನಸತೇತಿ?" ಎಂದು ದೈನ್ಯದಿಂದ ಪ್ರಶ್ನೆಮಾಡಿದ.

ಪಡದಯ್ಯನವರಿಗೆ ಅವಕಾಶ ಹದಕ್ಕೆ ಬಂದಿದೆಯೆಂದೆನಿಸಿತು. "ಮತ್ತೇನಿಲ್ಲ ಗೌಡರ, ಒಂದು ಮಾತು ನಮ್ಮ ಮನಸ್ಸಿನ ತಕ್ಕಹಾಗ ನಡೀಬೇಕು. ನಮ್ಮನ್ನ ಮಠದಿಂದ ಹೊರಗ ಹಾಕಿದ ಜನಕ್ಕೆಲ್ಲ ಈಗ ಪಾರ್ವತೆವ್ವ ಆಧಾರಾಗ್ಯಾಳು. ಆಕಿನ್ನ ಗೌಡರ ವಾಡೇದಿಂದ ಹೊರಗ ಹಾಕಿ, ವಾಡೇದ ಕಬಜಾ ತೊಗೊಂಡು, ನಿಮ್ಮ ದರಬಾರ ಅಲ್ಲಿ ನಡಿಯೂದನ್ನು ಈ ಕಣ್ಣು ಕಾಣಬೇಕಾಗೇತಿ" ಎಂದು ತಮ್ಮ ಮನೋಗತವನ್ನು ತಿಳಿಸಿದರು.

ಲಿಂಗಪ್ಪನಿಗೂ ಈ ಆಸೆಯಿಲ್ಲದಿರಲಿಲ್ಲ. ಆದರೆ ಕಬಜಾ ತೆಗೆದುಕೊಳ್ಳಲಿಕ್ಕೆ ಹೋದರೆ ಇದ್ದ ವಾರಸಾ ಹೋದೀತೆಂಬ ಭಯವಿತ್ತು. ಕೋರ್ಟಿಗೆ ಹೋಗದೆ ಭೂಮಿ ಹಾಗೂ ವಾಡೇದ ಕಬಜಾ ತೆಗೆದುಕೊಳ್ಳುವದು ಅಸಾಧ್ಯವೆಂದು ವಕೀಲರು ಈಗಾಗಲೇ ತಿಳಿಸಿದ್ದರು. "ಊರ ಜನರು ಬೆಂಬಲಿಕ್ಕಿದ್ದರ ಮುಂಗೈಜೋರಿನಿಂದ ಕಬಜಾ ತೊಗೊಂಡು ಅವರೇ ಕೋರ್ಟಿಗೆ ಹೋಗೂ ಹಂಗ ಮಾಡಾಕ ಬರತೈತಿ"

ಎಂದು ಅವನ ವಾದ.

ಪಡದಯ್ಯನವರು ಅದರ ಹೊಣೆಯನ್ನೆಲ್ಲ ಹೊತ್ತರು. ಜನರ ಬೆಂಬಲ ವನ್ನು ನಿಮಿಷದಲ್ಲಿ ಪಡೆಯುವ ಸಾಮರ್ಥ್ಯ ಅವರಿಗಿತ್ತು. ಊರಗೌಡರ ಮಾನ ಕಾಯುವದು ಎಲ್ಲರ ಧರ್ಮವಾಗಿತ್ತು. ಗೌಡ ಸನ್ಯಾಸಿಯಂತೆ ಮಠದಲ್ಲಿ ಬೀಳುವ ದೆಂದರೆ ಅಪಮಾನವೇ ಅಲ್ಲವೇ? ಪಾದಳ್ಳಿಯಲ್ಲಿ ಗೌಡಗ ಗೌರವ-ಪ್ರತಿಷ್ಠೆಗಳು ಅಚಲವಾಗಿ ಉಳಿಯುವಂತೆ ಪ್ರಯತ್ನಿಸಲು ತಾವು ಯಾವಾಗಲೂ ಸಿದ್ಧರಿರುವ ರೆಂದು ಪಡದಯ್ಯನವರು ನಂಬುಗೆಯಿತ್ತರು. ಅವರ ಈ ನಂಬುಗೆಯ ಮಾತಿನ ಹಿಂದೆ ಯಾವ ಒಳಸಂಚಿನ ಮೊಟ್ಟೆಯೊಡೆಯಲಿತ್ತೋ ದೇವರೇ ಬಲ್ಲ !

ಪುನಃ ವಾಲೀಕಾರ ಮಲ್ಲಪ್ಪ ಓಡುತ್ತ ಬಂದು ಈ ಸಾರೆ ಫೌಜದಾರರು ಚಾವಡಿಗೆ ಬಂದು ಕರೆಕಳಿಸಿರುವರೆಂದು ವರದಿಮಾಡಿದ. ಪಡದಪ್ಪನವರಿಗೆ ಹಳೆಯ ನೆನಪುಗಳೆಲ್ಲ ಕೆರಳಿದವು. ಫೌಜದಾರ ಫಕರುದ್ದೀನಸಾಹೇಬರ ಆಗಮನ ವೆಂದಮೇಲೆ ವಿಶೇಷವೇನೋ ನಡೆದಿರಲೇಬೇಕೆಂದು ಊಹಿಸಿದರು. “ಬರತೀವಂತ ತಿಳಿಸಲೇ” ಎಂದು ಕೂಗಿ ಹೇಳಿ ಹೊರಡಲು ಸಿದ್ಧರಾದರು. ವಿಭೂತಿಯನ್ನು ಹೊಸದಾಗಿ ಧರಿಸಿಕೊಂಡು, ಕಡಾವಿಗೆಗಳನ್ನು ಮೆಟ್ಟಿಕೊಂಡು ಪಡದಪ್ಪನವರು ಲಿಂಗಪ್ಪನನ್ನು ಜೊತೆಮಾಡಿಕೊಂಡು, ಚಾವಡಿಗೆ ನಡೆದರು.

ಫೌಜದಾರ ಫಕರುದ್ದೀನಸಾಹೇಬರು ಪಡದಯ್ಯನವರನ್ನು ಹರ್ಷದಿಂದ ಸ್ವಾಗತಿಸಿ, “ಇವರ್‍ಯಾರು?” ಎಂದು ಲಿಂಗಪ್ಪನನ್ನು ನೋಡಿ ಕೇಳಿದರು. ಆಗ ಪಡದಯ್ಯನವರು ಲಿಂಗಪ್ಪನ ವೃತ್ತಾಂತವನ್ನೆಲ್ಲ ಸಾದ್ಯಂತವಾಗಿಯೇ ಹೇಳಬೇಕಾ ಯಿತು.

ಫೌಜದಾರರು ಹಳೆಯ ಪ್ರಕರಣವೊಂದರ ಬೆನ್ನುಹತ್ತಿ ಈ ಊರಿಗೆ ಬಂದಿ ದ್ದರು. “ಆ ಪುಂಡ ದಾದಾ ಈಗ ಇಂದುಪುರದ ಮಹಾರಾಜರ ಗರಡೀಮನ್ಯಾಗ ‘ವಸ್ತಾದಿ’ ಆಗ್ಯಾನಂತ ಹೌದೇನು?” ಎಂದು ಪ್ರಶ್ನೆ ಮಾಡಿದರು. “ಈಗ ಅಂವಾ ಇಲ್ಲಿದ್ದರ ಜೇಲಿಗೆ ಅಟ್ಟಬೇಕಂತಽ ತಯಾರಿ ಮಾಡಿಕೊಂಡು ಬಂದಿದ್ದೆ. ಏನ ಮಾಡೂದು, ಮಹಾರಾಜರ ಬೆನ್ನಿಗೆ ಬಿದ್ದು ಬದಕಿಕೊಂಡಾನ. ಇಲ್ಲಾ ಅಂದರ ಪುತಳಾಬಾಯಿಯ ದುರ್ಮರಣದ ಝಳಾ ಅವಗ ಬಡಿಯೂಹಾಂಗ ಕಾಗದ ಪತ್ರಾ ರಂಗಾಯಿಸತಿದ್ದೆ.” ಎಂದು ಫಕರುದ್ದೀನಸಾಹೇಬರು ನಿರಾಶೆಯ ನಿಟ್ಟುಸಿ ರೊಂದನ್ನು ಬಿಟ್ಟರು.

೩

"ಅಂತೂ ಪುತಳಾಬಾಯಿ ಪ್ರಕರಣ ಇನ್ನೂ ನೀರ ಕಂಡಿಲ್ಲೇನ ಸಾಹೇಬರ?" ಎಂದು ಪಡಪಯ್ಯನವರು ಕುತೂಹಲದಿಂದ ಕೇಳಿದರು.

ಪುತಳಾಬಾಯಿಯ ಪ್ರಕರಣ ಹಲವಾರು ರೂಪ ತಾಳಿ ಕೊನೆಗೆ ಧೂಳು ತಿನ್ನುತ್ತ ಬಿದ್ದಿತ್ತು. ಆದರೆ ಗಿಬ್ಸನ್‌ಸಾಹೇಬರು ಬಂದ ಮೇಲೆ ಅದಕ್ಕೆ ಜೀವಕಳೆ ತುಂಬಿಸಿ, ಮತ್ತೆ ತಪಾಸಣೆಗೆಂದು ಕಳಿಸಿದ್ದರು. ಫಕರುದ್ದೀನಸಾಹೇಬರಿಗೆ ಈ ಪ್ರಕರಣದ ಬೆನ್ನುಹತ್ತಿ ತೇಕುಹತ್ತಿತ್ತು. ಆದ್ದರಿಂದ ದಾದಾ ಸಿಕ್ಕಿದ್ದರೆ ಅವನ ಮೇಲೆ ಸುಲಭವಾಗಿ ಕೊಲೆಯ ಆರೋಪವನ್ನು ಹೊರಿಸಿ ಪ್ರಕರಣವನ್ನು ಕೊನೆಗಾಣಿಸಬೇಕೆಂದು ಅವರೆಣಿಸಿದ್ದರು. ಈಗ ಅದೂ ನಿರಾಶೆಯಾದಂತಾಯಿತು.

ಪಡಪಯ್ಯನವರು ಮೆಲ್ಲಗೆ ಮತ್ತೊಂದು ಮಾತು ತೆಗೆದರು. ತಮ್ಮ ತಲೆಯಲ್ಲಿ ವಾಡೇದ ಕಬಜಾ ತೆಗೆದುಕೊಳ್ಳುವ ವಿಚಾರ ಸುಳಿದೊಡನೆಯೇ ಫಕರುದ್ದೀನರು ಬಂದದ್ದು ಶುಭಶಕುನವಾದಂತೆನಿಸಿತ್ತು. ಅಂತೆಯೇ ಸಾವಧಾನವಾಗಿ ಎಲ್ಲ ಪರಿಸ್ಥಿತಿಯನ್ನೂ ಅವರಿಗೆ ನಿವೇದಿಸಿದರು. ಲಿಂಗಪ್ಪನೂ ನಡುವೆ ಮಾತಾಡಿ ತನಗೆ ಸಹಾಯ ನೀಡಬೇಕೆಂದು ಬೇಡಿಕೊಂಡ. ಆದರೆ ಸಾಹೇಬರೇ ಒಪ್ಪುವಂತಿರಲಿಲ್ಲ. "ಈ ಔರತ್‌ಲೋಕದ ಭಾನಗಡೀ ನಮಗ ಬ್ಯಾಡ. ಮಾಫ್‌ಕರೋ" ಎಂದೇ ಹೇಳಿದರು. ಇತ್ತೀಚಿನ ಒಂದು ಕ್ಯಾಂಪಿನಲ್ಲಿ ಒಬ್ಬ ಹೆಣ್ಣುಮಗಳ ಸಲುವಾಗಿ ಸಾಹೇಬರು ಸಾಕಷ್ಟು ಪೆಟ್ಟು ತಿಂದಿದ್ದರು. ಆ ಹೆಣ್ಣುಮಗಳ ಮಗ ಖೂನಿ ಆರೋಪಿಯಾಗಿದ್ದ. ಫೌಜದಾರರು ಮುದ್ದೇಮಾಲನ್ನು ಜಪ್ತಿಮಾಡಲು ಹೋದಾಗ ಅವಳನ್ನು ಚಾವಡಿಗೆ ಕರೆಸಬೇಕಾಯಿತು. ಅವಳು ಪೋಲೀಸರ ಹಿಂದಿನಿಂದ ನಡೆಯುತ್ತ ಬಂದವಳು, ಅವರ ಕಣ್ಣು ತಪ್ಪಿಸಿ ಹಾಳುಬಾವಿಯಲ್ಲಿ ಹೋಗಿ ಬಿದ್ದಿದ್ದಳು. ಅದರಿಂದ ಸಾಹೇಬರ ಪ್ರಾಣವೇ ಹೋಗುವಂತಾಗಿತ್ತು. ಈ ಪ್ರಕರಣದಲ್ಲಿ ಕೈಸುಟ್ಟುಕೊಂಡ ಸಾಹೇಬರು ಇನ್ನೊಮ್ಮೆ ಹೆಣ್ಣುಮಕ್ಕಳ ಗೊಡವೆಗೆ ಹೋಗಬಾರದೆಂದು ಖುದಾನ ಹೆಸರಿನಿಂದ ಆಣೆಮಾಡಿದ್ದರು.

ಸಾಹೇಬರಿಂದ ಕೆಲಸವಾಗುವದಿಲ್ಲವೆಂದು ತಿಳಿದ ಇಬ್ಬರೂ ನಿರಾಶರಾದರು. ಶಿವಪೂಜೆಯ ನೆವಮಾಡಿಕೊಂಡು ಪಡಪ್ಪನವರು ಅಲ್ಲಿಂದ ಕಾಲ್ದೆಗೆದರು. ಲಿಂಗಪ್ಪ ಅವರ ನೆರಳಾಗಿ ಅವರನ್ನು ಅನುವರ್ತಿಸಿದ. ಊಟ ಮಾಡಿದ ನಂತರ ಲಿಂಗಪ್ಪ ಶ್ಯಾನುರಾಯನಿಂದ ದಸ್ತಾನದ ಚಾರ್ಜು ಪಡೆದು ಅಂದಿನಿಂದ ಅನಭಿಷಿಕ್ತ ರಾಜನಾದ. ಅಂದು ರಾತ್ರಿ ಮಠದಲ್ಲಿ ಸೇರಿದ ಭಕ್ತಪರಿವಾರವೆಲ್ಲ ಅವನನ್ನು

ಮನಮೆಚ್ಚಿ ಕೊಂಡಾಡಿತು.

ಪಡದಪ್ಪನವರಿಗೆ ಇದು ಒಳ್ಳೆಯ ಸಂಧಿಯೆಂದೆನಿಸಿತು. "ಮಕ್ಕಳಿರಾ, ಬರೇ ಗೌಡರಂತ ಹೊಗಳಿ ಅಟ್ಟಕ್ಕೇರಿಸಿದರ ಆಗಲಿಲ್ಲ. ನಿಮ್ಮ ಸಲುವಾಗಿ ಗೌಡರು ಬೇಕಾದ್ದು ಮಾಡಾಕೂ ತಯಾರ ಅದಾರು. ತಮುಗ ಆದವರನ ಅವರು ಕಾಯತಾರು. ಆದರ ನೀವು ಅವರ ಸಲುವಾಗಿ ಏನ ಮಾಡಾವರದೀರಿ ಹೇಳಿರಿ? ಶಂಕರಪ್ಪಗೌಡರ ಮಕ್ಕಳು ಅಂತ ಅವರಿಗೆ ಮರ್ಯಾದಿ ಮಾಡತೀರಿ. ಆದರ ಶಂಕರಪ್ಪಗೌಡರ ಮನ್ಯಾಗs ಅವರಿಗೆ ಪಾಲಿಲ್ಲ. ಗೌಡರ ವಾಡೇದಾಗಿನ ಒಂದ ಕ್ವಾಣೀ ಕೋಡಸೂ ತಾಕತ್ತೂ ಒಬ್ಬರಲ್ಲಿ ಇಲ್ಲ. ಊರ ಗೌಡಗ ತನ್ನ ಮನೀ ಕಬಜಾ ತನಗ ಸಿಗಬಾರದಂದರ? ನಾಳೆ ಹರ್‍ಯಾಗೆದ್ದು, ಗೌಡರನ ಅವರ ಮನ್ಯಾಗ ಕುಂದರಿಸಿ ಮುಜುರಿ ಮಾಡತೀವಿ ಅಂತ, ನನ್ನ ಪಾದಾ ಮುಟ್ಟಿ ಆಣೀ ಮಾಡ್ರಿ. ನಾಳೆ ಗೌಡರ ವಾಡೇದ ಕಬಜಾ ತೋಗೊಳಾಕ ಯಾರ್‍ಯಾರ ಬರತೀರಿ, ಅವರು ಕೈ ಮ್ಯಾಗ ಮಾಡ್ರಿ" ಎಂದು ಆವೇಶಯುಕ್ತವಾದ ಒಂದು ಭಾಷಣವನ್ನೇ ಕುಟ್ಟಿದರು.

ಜನರೆಲ್ಲ ಕೈಗಳನ್ನು ಮೇಲಕ್ಕೆತ್ತಿ ತಮ್ಮ ಒಪ್ಪಿಗೆಯನ್ನು ವ್ಯಕ್ತಪಡಿಸಿದರೂ ಪಡದಯ್ಯನವರಿಗೆ ಇನ್ನೂ ಸಮಾಧಾನವಿದ್ದಂತೆ ತೋರಲಿಲ್ಲ. "ಮಕ್ಕಳಿರಾ, ನಿಮ್ಮಂಥ ನಾಲ್ಕೆಂಟು ಜನರಿಂದ ಇಂಥಾ ಕೆಲಸ ಆದೀತು ಅಂತ ಅನಸತೈತs? ರುದ್ರಾ, ಹೊಲಗೇರಿ ಜನಾ ಎಲ್ಲಾ ನಿನ್ನ ಹಿಂದ ನಾಳೆ ಬರೂಹಾಗ ಮಾಡಬೇಕು. ಮಾಯಪ್ಪ, ಕುರುಬರನ್ನ ತರೂದು ನಿನ್ನ ಕೂಡಿತು. ಕರಿಯಾ, ವಾಡೇದ ಕಮು ತದ ಆಳು ಎಲ್ಲಾ ಗೌಡರ ಬೇನ್ನಹಿಂದ ಅದಾರಂತ ನೀ ತೋರಿಸಿಕೊಡಬೇಕು. ಊರಿಗೂರs ಹೊಡೆದೆದ್ದು ಬಂದರs ಗೌಡರು ವಾಡೇದಾಗ ಕಾಲ ಹಾಕ್ಯಾರು." ಎಂದು ಮತ್ತೆ ಹೇಳಿದರು.

"ಅದರಕಾಳಜೀನ ಬಿಡರಿ ಯಪ್ಪಾ" ಎಂದು ಪರಿವಾರವೆಲ್ಲ ಏಕಕಂಠದಿಂದ ಕೂಗಿ ತಮ್ಮ ಒಪ್ಪಿಗೆಯನ್ನು ಸೂಚಿಸಿತು. ಅಷ್ಟರಲ್ಲಿ ವಾಲಿಕಾರ ಮಲ್ಲಪ್ಪ ಗೌಡ ರೊಡನೆ ಗಸ್ತಿತಿರುಗುವ ಬಗ್ಗೆಮಾತು ಕತೆಯಾಡಲು ಬಂದವನು, ಈ ಮಾತು ಕೇಳಿ ಅಲ್ಲಿಯೇ ತಡೆದು ಎಲ್ಲವನ್ನೂ ಕೇಳಿಕೊಂಡ. ಆಮೇಲೆ ನೆಟ್ಟಗೆ ಅಲ್ಲಿಂದ ಪಾರ್ವತೆವ್ವನ ಮನೆಗೆ ಹೋಗಿ ಎಚ್ಚರಿಕೆಯಿಂದಿರಲು ಹೇಳಿ, ಅಲ್ಲಿಂದ ಬಾಳಾ ಛಾರ್ಯರ ಮನೆಗೆ ಬಂದ.

ಶ್ಯಾಮರಾಯನೊಡನೆ ವಾಡೀದ ಕಮತಿಗರು ಹೊಡಿದ ಬಂಡಿನ ವಿಷಯ
ವಾಗಿ ಮಾತಾಡಿ ಆಚಾರ್ಯರು ಅದೇ ಮಲಗಿದ್ದರು. ಮಲ್ಲನ ಧ್ವನಿ ಕೇಳಿ ಎದ್ದು
ಬಾಗಿಲ ತೆಗೆದರು. ಮಲ್ಲ ಗಾಬರಿಯಿಂದಲೇ ಅವರಿಗೆ ಎಲ್ಲ ಸಂಗತಿಗಳನ್ನು ಅರಿಕೆ
ಮಾಡಿಕೊಂಡ.

ಬಾಳಾಚಾರ್ಯರು ನಿಟ್ಟುಸಿರಿಟ್ಟು, “ಎಲ್ಲಾ ಶ್ರೀಹರಿ ಇಚ್ಛಾ. ಇದ್ಧಾಂಗ ಆಗ
ತದ” ಎಂದು ತಮ್ಮೊಳಗೇ ಒಟಗುಟ್ಟಿದರು. ಆಮೇಲೆ ಮಲ್ಲನ ಕಡೆಗೆ ತಿರುಗಿ
“ನೀನು ಗಸ್ತಿಗೆ ಹೋಗೋದಿಲ್ಲೇನು?” ಎಂದು ಕೇಳಿದರು. ಮಲ್ಲನಿಗೋ ತನ್ನ
ಕೆಲಸವೇ ತನಗೆ ಬೇಸರ ಬಂದಿತ್ತು. “ಊರ ಗೌಡರಽ ಕುಂತಗೊಂಡು ಲೂಟಿ
ಮಾಡರಿ ಅಂತ ಜನರ ತೆಲ್ಯಾಗ ತುಂಬಾಕ ಹತ್ತ್ಯಾರ. ಅಂದಮ್ಯಾಗ ನಾ ಯಾಕ
ಗಸ್ತೀ ತಿರಗಬೇಕರಿ?” ಎಂದು ಕೈಚಲ್ಲಿ ನುಡಿದ.

“ಯಾರು ಏನಽ ಮಾಡಲಿ ಮಲ್ಲಾ, ಗಸ್ತೀ ತಿರಗೂದು ನಿನ್ನ ಕರ್ತವ್ಯ.
ನಿನ್ನ ಕೆಲಸಾ ನೀ ಮಾಡು ಹೋಗು”ಎಂದು ಆಚಾರ್ಯರು ಅವನನ್ನು ಕಳಿಸಿ ಹಾಸಿ
ಗೆಯ ಮೇಲೊರಗಿದರು.

ಮಲ್ಲ ಹೇಳಿ ಹೋದ ಸುದ್ದಿಯಿಂದ ಆಚಾರ್ಯರ ಮನಸ್ಸು ವಿಚಲಿತವಾಗಿತ್ತು.
ಸಾಯುವ ಮುಂಚೆ, ಗೌಡರ ಮನೆತನದ ಮರ್ಯಾದೆ ಕಾಯುತ್ತೇವೆಂದು ಶಂಕ
ರಪ್ಪಗೌಡರಿಗೆ ವಚನ ಕೊಟ್ಟಿದ್ದರು. ಅದನ್ನು ಪಾಲಿಸುವ ಕಾಲವೀಗ ಬಂದಿದೆ.
ಜಗತ್ತಿನಲ್ಲಿಯ ಪುಂಡತನವನ್ನು ನಿಲ್ಲಿಸಲು ತಾವೇನೂ ಪಣಮಾಡಿ ಹೊರಟಿಲ್ಲ;
ನಿಲ್ಲಿಸಲು ಅಧಿಕಾರವೂ ತಮಗಿಲ್ಲ. ಆದರೆ ಪುಂಡತನ ತಲೆಬಾಗಿಲಿಗೇ ಬಂದರೆ
ಅದನ್ನು ಪ್ರತಿಭಟಿಸದೇ ಬೇರೆ ಗತಿಯಿಲ್ಲ. ಬೆಳೆದ ಹೊಲ, ತುಂಬಿದ ಮನೆ
ತಿಳಿಯಾದ ನೀರು, ಬೆಳೆಯುತ್ತಿರುವ ಬಾಳು ಇವನ್ನೆಲ್ಲ ಈ ಜೇಟಿ-ನಾಯಿಗಳ
ದವಡೆಯಿಂದ ಪಾರುಮಾಡುವ ದಾರಿಯಾದರೂ ಯಾವುದು? ಬಾಳಿನ ಹೃದ
ಯಕ್ಕೇ ಅನ್ಯಾಯ ದಾಳಿಯಿಡುತ್ತಿದ್ದರೆ ಅದನ್ನು ಎದುರಿಸಲೇಬೇಕಲ್ಲವೇ?

ಆಚಾರ್ಯರಿಗೆ ಬೆಳತನಕ ನಿದ್ದೆಹತ್ತಲಿಲ್ಲ. ಸಾತ್ವಿಕ ಜೀವಕ್ಕೇ ಸತ್ವವೇಕೆ
ಇಲ್ಲ ಎಂಬುದೇ ಗೂಢಸಮಸ್ಯೆಯಾಯಿತು. ಅಸುರಶಕ್ತಿ ದೈವಶಕ್ತಿಗಿಂತ ಬಲ
ವಾದದ್ದೆಂದು ಪುರಾಣದಲ್ಲಿ ತಾವು ಓದಿದ್ದು ಜೀವನದಲ್ಲಿಯೂ ಸತ್ಯವಾಗಬೇಕೆ?
ದೇವರ ಅವತಾರದ ಅಗತ್ಯ ಎಲ್ಲಿಯ ವರೆಗೆ ಇರಬೇಕು? ಹೀಗೆಯೇ ವಿಚಾರ
ಮಂಥನದಲ್ಲಿ ಆಚಾರ್ಯರ ಜೀವ ಒದ್ದಾಡಿತು. ಅಷ್ಟರಲ್ಲಿಯೇ ಕೋಳಿ ಕೂಗಿ

ಬೆಳಗಾಯಿತೆಂದು ಸೂಚಿಸಿತು. ಆಚಾರ್ಯರು ಎದ್ದು ಸ್ನಾನಕ್ಕಾಗಿ ನದಿಗೆ ನಡೆದರು. ಸ್ನಾನ ಆಹ್ನಿಕಗಳನ್ನು ಮುಗಿಸಿಕೊಂಡು ನೆಟ್ಟಗೆ ಗೌಡರ ಮನೆಗೇ ಬಂದರು.

ಪಾರ್ವತೆವ್ವ ಅದೇ ಎದ್ದು ಆಕಳಿಗೆ ಮೇವು ಹಾಕಲು ಆಳಿಗೆ ಹೇಳುತ್ತ ನಿಂತಿದ್ದಳು. ಎಷ್ಟೋ ದಿನಗಳಾದ ಮೇಲೆ ತಾವಾಗಿಯೇ ಕರೆಸಿದಂತೆ ಆಚಾರ್ಯರು ಬಂದದ್ದು ನೋಡಿ ಅವಳಿಗೆ ಹರ್ಷ ಮಿತಿಮೀರಿತು. ಅವರ ಕಾಲಿಗೆ ಬಿದ್ದು "ನಿಮ್ಮ ಮಾತ ಮೀರಿ, ಏನೇನೋ ಮಾಡಿ ಹೀಗ ಕುಂತೀನು. ಆದ ತೆಪ್ಪು ಹೊಟ್ಯಾಗ ಹಾಕ್ಕೊಂಡು ಸಲವಬೇಕು. ನಿನ್ನ ಮಗಳಂತ ನೋಡು" ಎಂದು ಬೇಡಿಕೊಂಡಳು.

ಆಚಾರ್ಯರು ಮಾತನಾಡುವ ಮನಸ್ಥಿತಿಯಲ್ಲಿರಲಿಲ್ಲ. ಕ್ಷಣಹೊತ್ತು ಸುಮ್ಮ ನಿದ್ದು ಹೇಳಿದರು. ಮನಸ್ಸನ್ನೇ ಬಹಳ ಪ್ರಯತ್ನಪೂರ್ವಕವಾಗಿ ದಾರಿಗೆ ಹಚ್ಚು ವಂತಿತ್ತು ಅವರ ರೀತಿ. "ಮೊದಲ ವಾಡೇದ ತಲೆಬಾಗಲ ಹಾಕಸು. ನಾನು ಹೊರಗ ಕೂತುಗೊಂಡು ಬಂದದ್ದನ್ನೆಲ್ಲಾ ನೋಡಿಕೋತೀನಿ. ಧೈರ್ಯಾ ಇರಲಿ. ಏನ ಬಂದರೂ ದೇವರು ಕಾಯತಾನ" ಎಂದು ತಡೆತಡೆದು ಹೇಳಿದರು. ಮರು ಮಾತಾಡದೆ ಅಲ್ಲಿಂದ ತಲೆಬಾಗಿಲ ಕಡೆಗೆ ನಡೆದರು. ಅವರ ಮಾತು, ಮುಖ ಮುದ್ರೆ, ನಡಿಗೆ ಎಲ್ಲದರಲ್ಲಿಯೂ ದಾರುಣವಾದ ನಿಶ್ಚಯವೊಂದು ವಜ್ರಲಿಖಿತ ವಾದಂತಿತ್ತು.

ಎಂದೂ ಗೌಡರ ವಾಡೆಯ ತಲೆಬಾಗಿಲನ್ನು ಹಾಕಿರಲಿಲ್ಲ. ನೂರಾರು ವರ್ಷ ಗಳಿಂದ ಹಗಲು ರಾತ್ರಿ ಆ ಮಹಾದ್ವಾರ ತೆರೆದೇ ಇರುತ್ತಿತ್ತು. ಇಂದು ತಲೆಬಾಗಿಲು ಹಾಕಬೇಕೆಂದು ಪಾರ್ವತೆವ್ವ ಹೇಳಿದ್ದನ್ನು ಕೇಳಿ ಆಳುಗಳಿಗೆಲ್ಲ ವಿಸ್ಮಯವಾಯಿತು; ವಾಗತ್ಯವೆನಿಸಿತು. ಪಾರ್ವತೆವ್ವನಿಗೂ ಆ ಭಾವನೆ ಬರದೆ ಹೋಗಿರಲಿಲ್ಲ. ಗೌಡರ ಮನೆತನದ ವೀರಸತ್ವ ಬಾಗಿಲನ್ನು ತೆರೆದಿಟ್ಟುಕೊಂಡೇ ಜಗತ್ತನ್ನು ಎದುರಿಸಲು ಸಮರ್ಥವಾಗಿತ್ತು. ಆದರೆ ಇಂದು ಆಚಾರ್ಯರ ಮಾತನ್ನು ಮೀರುವಂತಿರಲಿಲ್ಲ.

ತಲೆಬಾಗಿಲು ಮುಚ್ಚಲು ಆಳುಗಳು ಹೊರಗೆ ಬಂದಾಗ ಆಚಾರ್ಯರು ಅಲ್ಲಿ ನಾಲ್ಕೆಂಟು ಜನರೊಡನೆ ವಾದಿಸುತ್ತ ನಿಂತಿದ್ದರು. ಆಳುಗಳಿಗೂ ಬಂದ ಗಂಡಾಂ- ತರದ ಕಲ್ಪನೆಯಾಯಿತು. ಮರುಮಾತಾಡದೆ ಬಾಗಿಲನ್ನು ಮುಚ್ಚಿದರು. ಬಾಗಿಲ ತಿರುಗಣಿ ಕಿರ್ರೆಂದು ಸಪ್ಪಳ ಮಾಡಿತು. ಆಳುಗಳು ಅದರ ಹಿಂದೆ ನಿಂತು ಕೇಳ ಹತ್ತಿದರು. ಆಚಾರ್ಯರೊಡನೆ ವಾದಿಸುತ್ತಿದ್ದ ಜನರು ಹೊರಟು ಹೋದೊಡನೆ

ಆಳುಗಳು ಮತ್ತೆ ಬಾಗಿಲು ತೆರೆದು ಹೊರಗೆ ನೋಡಿದರು. ಆಚಾರ್ಯರು ನರಸಿಂಹ ನಂತೆ ಮೊಣಕಾಲೆತ್ತರದ ಹೊಸ್ತಿಲದ ಮೇಲೆ ಕುಳಿತಿದ್ದರು.

"ನಿಮಗ ಬಾಗಲಾ ಹಾಕೂ ಮನಸ್ಸಿರದಿದ್ದರ ಬಾಗಲಾ ತಗದsss ಹೋಗರಿ. ಆದರ ಇಲ್ಲೆ ಬಂದು ನಿಲ್ಲಬ್ಯಾಡ್ರಿ. ನಿಮ್ಮ ನಿಮ್ಮ ಕೆಲಸಾ ಮಾಡಹೋಗ್ರಿ" ಎಂದು ಆಳುಗಳ ಅನುಮಾನವನ್ನು ಲಕ್ಷ್ಯದಲ್ಲಿ ತಂದುಕೊಂಡು ಆಚಾರ್ಯರು ನುಡಿದರು. ಆಳುಗಳು ಸುಮ್ಮನೆ ಹೊರಟುಹೋದರು. ನಾಲ್ಕು ಜನರು ಸುಖ ವಾಗಿ ಮಲಗಬಹುದಾದಷ್ಟು ದೊಡ್ಡದಾಗಿದ್ದ ಹೊಸ್ತಿಲ ಮೇಲೆ ಆಚಾರ್ಯರೊಬ್ಬರೇ ನಿರೀಕ್ಷಿಸುತ್ತ ಕುಳಿತರು. ಕುಳಿತಲ್ಲಿಂದ ಕದಲುವಂತಿರಲಿಲ್ಲ. ಹೊಸ್ತಿಲಕ್ಕೇ ಬೇರು ಬಿಟ್ಟವರಂತೆ ಅಚಲರಾಗಿ ಕುಳಿತುಬಿಟ್ಟರು. ನಾಲ್ಕು ತಾಸು ಹೊತ್ತೇರಿದ ಮೇಲೆ ಪಡದಪ್ಪ ಹಾಗೂ ಲಿಂಗಪ್ಪಗೌಡ, ಅವರ ಬೆನ್ನುಹಿಂದಿನಿಂದ ನೂರಾರು ಜನರು ಅಲ್ಲಿಗೇ ಬಂದರು.

ಅವರಾರೂ ಆಚಾರ್ಯರನ್ನು ಅಲ್ಲಿ ನಿರೀಕ್ಷಿಸಿರಲಿಲ್ಲ. ಹೊಸ್ತಿಲ ಮೇಲೆ ಪ್ರತಿಭಟನೆಯ ಮೂರ್ತಿಯಾಗಿಯೇ ಕುಳಿತ ಆಚಾರ್ಯರನ್ನು ಕಾಣುತ್ತಲೆ ಜನ-ಪ್ರವಾಹ ಮುಗ್ಗರಿಸಿತು. ಅವರನ್ನೆಲ್ಲ ಕಿಡಿಗಣ್ಣುಗಳಿಂದಲೇ ನೊಡುತ್ತ "ಇಕಾ, ನನ್ನ ಪ್ರಾಣ ಹೋದ ಮ್ಯಾಲೇ ನೀವೆಲ್ಲ ವಾಡೇದೊಳಗ ಕಾಲಿಡಬೇಕಾಗತದ" ಎಂದು ಗುಡುಗಿನಂತೆ ಹೇಳಿದರು.

"ಲಿಂಗಪ್ಪ ತನ್ನ ಮನೀಗೆ ತಾ ಹೋಗತಾನು. ನಡಕ ಬಂದು ನೀವ್ಯಾಕ ಹರಕತ್ತ ಮಾಡತೀರಿ?" ಎಂದು ಪಡದಪ್ಪನವರು ಅಡ್ಡಬಾಯಿ ಹಾಕಿ ಕೇಳಿದರು.

"ಅವನ ಮನಿ ಅಜರಾಣಿ ಕುರುಬಗೇರ್ಯಾಗ ಅದ, ಇಲ್ಲಿಲ್ಲ. ಬೇಕಾರ ಅವಾ ಅಲ್ಲೆ ಹೋಗಲಿ, ಯಾರು ಬ್ಯಾಡಂತಾರ!" ಆಚಾರ್ಯರು ನಿರ್ಲಕ್ಷ್ಯರಾಗಿಯೇ ಮಾತಾಡಿದರು.

"ಅಂವಾ ಶಂಕರಪ್ಪಗೌಡರ ಮಗನss ಅಂತ ಸರಕಾರದಿಂದ ಬರದ ಬಂದೈತಿ ಅಚಾರೆಪ್ಪಾ. ಗೌಡಿಕಿ ನೇಮಣೂಕಿ ಅಂವಗಾದದ್ದು ಗೊತ್ತೈತೋ ಇಲ್ಲೋ?" ಪಡದಯ್ಯನವರು ಸ್ವಲ್ಪ ಜಬರಿನಿಂದಲೇ ಕೇಳಿದರು.

"ಸರಕಾರದ ಮಾತು ಆಧಾರಾಗಿದ್ದರ ವಾಡೇದ ಕಬಜಾ ಸರಕಾರದಿಂದನಂ ತೊಗೋಬೇಕು. ಅಂಥಾ ಸರಳಮಾರ್ಗ ಬಿಟ್ಟು ಈ ಪುಂಡತನಾ ಯಾಕ?" ಆಚಾರ್ಯರ ಮರು ಪ್ರಶ್ನೆ.

ಪಡದಯ್ಯನವರ ವಾದ ಇನ್ನೂ ಹೆಚ್ಚು ಗಂಭೀರವಾಯಿತು. "ಊರ ಜನರಿಗೆ ತಮ್ಮ ಗೌಡ ದಿಕ್ಕಿಲ್ಲದವನಂಗ ಮಠದಾಗಿರೋದು ಪಾಡ ಕಾಣೂದಿಲ್ಲ, ಅದು ಊರಿಗೇ ಅಪಮಾನ. ಆದ್ದರಿಂದ ಗೌಡರು ತಮ್ಮ ಮನ್ಯಾಗ ತಾವು ಬಂದಿರಾಕ, ಪಾರ್ವತೆವ್ವನ್ನ ಒಪ್ಪಿಸಬೇಕಾಗೇತಿ. ಇದರಾಗ ಪುಂಡತನಾ ಏನು ಐತಿ?" ಎಂದು ಗದ್ದರಿಸಿದರು.

ಆಚಾರ್ಯರು ಅದಕ್ಕೆನೂ ಉತ್ತರ ಹೇಳದೆ ಕಲ್ಲಿನಂತೆ ಕುಳಿತಿದ್ದರು. ಪಡದಯ್ಯನವರಿಗೆ ಏನು ಮಾಡಬೇಕೆಂಬುದು ಒಮ್ಮೆಲೆ ಹೊಳೆಯದಾಯಿತು. ಆಚಾರ್ಯರನ್ನು ಮನವೊಲಿಸುವದು ಅಸಾಧ್ಯವೆಂದು ಅವರಿಗೆಂದೋ ಅನುಭವವಾಗಿತ್ತು. "ಇಲ್ಲೆ ನೋಡ್ರಿ ಆಚಾರೆಪ್ಪ, ತಮ್ಮ ಗೌಡರು ಎಲ್ಲಿ ಇರಬೇಕನ್ನೂದು ಜನರಿಗೆ ಗೊತ್ತಾಗೇತಿ. ಸುಮಾಕ ದಾರಿ ಬಿಡ್ರಿ. ಜನಾ ಸಿಟ್ಟಗೆದ್ದಿತೂ ಅಂದರ ಏನಾದೀತು ಹೇಳಾಕ ಬರಾಣಿಲ್ಲಾ" ಎಂದು ಬೆದರಿಕೆ ಹಾಕಿದರು. ಲಿಂಗಪ್ಪನೂ ಅದೇ ರೀತಿಯಲ್ಲಿ ಟಬರಿನಿಂದ ಮಾತಾಡಿದ.

"ನೋಡು ಲಿಂಗಪ್ಪ, ನೀನು ಶಂಕರಪ್ಪಗೌಡರ ಮಗಾ ಅಂತ ನನ್ನ ಪಾದಾ ಮುಟ್ಟಿ ಆಣಿಮಾಡು. ಆಮ್ಯಾಲೆ ಖುಶಾಲ ಒಳಗ ಹೋಗು. ನಾ ಏನು ಅಡ್ಡ ಬರೂದುಲ್ಲ. ಇಲ್ಲಾಂದರ ನನ್ನ ಕೊಂದು ನನ್ನ ಹೆಣಾ ತುಳದು ಒಳಗ ಹೋಗಬೇಕಾಗತದ" ಎಂದು ನಿಷ್ಠುರರಾಗಿಯೇ ಆಚಾರ್ಯರು ಉತ್ತರವಿತ್ತರು.

ಕಾಯದೆಯಿಂದ ದೊರೆತ ಹಕ್ಕಿಗೆ ಆಣೆ ಮಾಡುವದೆಂದರೇನು? ಸುಳ್ಳು ಆಣೆ ಮಾಡಿ ಒಳಗೆ ಹೋದರೆ? ಇದು ಪಡದಪ್ಪನವರ ವಾದ. "ಲಿಂಗಪ್ಪಗೌಡರ, ನೀವು ಶಂಕರೆಪ್ಪಗೌಡರ ಮಗಾ ಅಂತ ಆಣೀಮಾಡರಿ. ಅದರಾಗೇನೈತಿ" ಎಂದು ಲಿಂಗಪ್ಪನನ್ನು ಪ್ರೇರೇಪಿಸಿದರು. "ಗೌಡರು ಸುಳ್ಳು ಆಣೀ ಮಾಡಾಕ ತಯಾರ ಅದಾರೇನ್ರಿ?" ಎಂದು ನೆರೆದ ಜನ ಕೂಗಿತು.

ಲಿಂಗಪ್ಪ ಅನುಮಾನಿಸಿದ. ಆಣೆಮಾಡಲು ಅವನಿಗೆ ಧೈರ್ಯ ಬರಲಿಲ್ಲ. ಅದರ ಬದಲಾಗಿ ತನ್ನ ಅಸಹಾಯತೆಯನ್ನು ನೆನೆದು ಸಿಟ್ಟು ಬಂತು. ಎಲ್ಲವೂ ಅನಾಯಾಸವಾಗಿ ಕೈಗೂಡಿರುವಾಗ ಈ ಮುದುಕನೊಬ್ಬ ಅಡ್ಡವಾಗಬೇಕೆ? ಪಟ್ಟಶ್ರಮವೆಲ್ಲ ನೀರಿನಲ್ಲಿ ಹೋಮ ಮಾಡಿದಂತಾಗುವದಲ್ಲ! "ಲೇ ಏನ ನೋಡತೀರಿ? ಆ ಆಚಾರೆಪ್ಪನ್ನ ನೂಕಿ ಒಳಗ ನಡೀರಿ!" ಎಂದು ಕೂಗಿಕೊಂಡ.

"ಯಾರವರು ಬಾಳಾಚಾರನ್ನ ನುಗಿಸಿಕೊಡೋವರು.? ಹಾಂಗೇನಾದರೂ

ಮಾಡಿವರ ನಿಮ್ಮನ್ನೆಲ್ಲಾ ಸಾಲಜೇಡಿ ಹಾಕಿಸಿ ಜೇಲಿಗೆ ಅಟ್ಟಬೇಕಾದೀತು? ಪಡ ದಪ್ಪ, ಜೆಂಕೀಮುಟ್ಟ; ಮುಟ್ಟ ಬದಕತೀಯಾ? ನಡೀರಿ ಸುಮ್ಮನೆ" ಎಂದು ಶೇಷಪ್ಪ ಜನರ ಹಿಂಡಿನಲ್ಲಿ ನುಗ್ಗಿಬಂದು ಕೂಗಿದ.

ಶೇಷಪ್ಪನ ಈ ಮಾತನ್ನು ಕೇಳಿ ನೆರೆದವರೆಲ್ಲ ಅಪ್ರತಿಭರಾದರು. ಅವರಿಗೆ ಶೇಷಪ್ಪನ ವೈರ ಕಟ್ಟಿಕೊಳ್ಳುವ ಮನಸ್ಸಿರಲಿಲ್ಲ. ಲಿಂಗಪ್ಪನ ವಾರಸಾ-ಪ್ರಕರಣದ ರಹಸ್ಯವೆಲ್ಲ ಅವನಿಗೆ ಗೊತ್ತಾಗಿತ್ತು. ನಿರುಪಾಯರಾಗಿ ಏನೊಂದು ಮಾತನ್ನೂ ಹೇಳದೆ ಎಲ್ಲರೂ ಅಲ್ಲಿಂದ ಚದರಿದರು.

ಅವರೆಲ್ಲ ಹೋದಮೇಲೆ ಆಚಾರ್ಯರು ನಿಟ್ಟುಸಿರಿಟ್ಟು ತಮ್ಮ ಮನೆಗೆ ಹೋದರು. ಮನೆಯೊಳಗೆ ಬಾರದೆ ಹಾಗೆಯೇ ಹೋದದ್ದನ್ನು ನೋಡಿ ಪಾರ್ವತೆವ್ವನಿಗೆ ದುಃಖ ಒತ್ತರಿಸಿ ಬಂದಿತು.

:: ೩೯ ::

ಪಾದಳ್ಳಿಯ ಮಠ ಅನವಸ್ಥೆಗೀಡಾದಂತಿತ್ತು. ಊರು ಬಿಟ್ಟು ಓಡಿ ಹೋಗಿದ್ದ ಪಡದಯ್ಯನವರು, ಅದಾವ ಮಾಯದಿಂದಲೋ ತಿರುಗಿಬಂದು ಮತ್ತೆ ಮಠದಲ್ಲಿ ತಮ್ಮ ಕಾಯಕವನ್ನು ಪ್ರಾರಂಭಿಸಿದ್ದರು. ಮಠದ ಮರಿಯಾಗಿದ್ದ ಶಿವ-ಯೋಗಿಸ್ವಾಮಿಗಳು ತಿರುಗಿ ತಮ್ಮ ಮನೆ ಕಾಣಬೇಕಾಯಿತು. ಗಿಬ್ಸನ್‌ಸಾಹೇಬರ ಅಲಕ್ಷ್ಯ, ಪಡದಯ್ಯನವರ ದುಷ್ಟಪ್ರಯತ್ನ, ಊರ ಹಿರಿಯರ ಹೊಣೆಗೇಡಿತನಗಳಿಂದಾಗಿ, ಕಟ್ಟಿಯ ಕಲ್ಲು ಕಟ್ಟಿಗೆ ಕೂತಂತೆ ಪಡದಯ್ಯನವರು ಮಠದ ಪೀಠದ ಮೇಲೆ ವಿರಾಜಮಾನರಾಗಿದ್ದರು.

ಆದರೆ ಶಿವಯೋಗಿಸ್ವಾಮಿಗಳ ಭವಿತವ್ಯವೇನೆಂಬ ಚಿಂತೆ ಗಂಗಾಧರಯ್ಯನವರಿಗಿತ್ತು. ಸದಾಶಿವಯೋಗಿಗಳಿದ್ದಾಗಿನಿಂದಲೇ ಮಠದೊಡನೆ ಅವರ ಸಂಬಂಧವಿತ್ತು. ಅಣ್ಣ ಸ್ವಾಮಿಗಳಾಗಿದ್ದರೆ ತಮ್ಮ ವ್ಯವಸ್ಥಾಪಕರಾಗಿ ಕೆಲಸ ಮಾಡುತ್ತಿದ್ದರು. ಮಠಕ್ಕೆ ಕೃತಯುಗವಿದ್ದ ಕಾಲವದು. ಈಗ ತಮ್ಮ ಮಗನೇ ಪೀಠಕ್ಕೆ ಬಂದಿದ್ದರಿಂದಂತೂ ಆ ಹೊಣೆ ಇನ್ನೂ ಹೆಚ್ಚಾಗಿತ್ತು. ಗಂಗಾಧರಯ್ಯನವರ

ಪಾಲಿಗೆ ಮಠ ಅವರ ತತ್ವಾಭಿಮಾನದ ಕೇಂದ್ರವಾಗಿತ್ತು. ಆದರೆ ಪಡದಯ್ಯ ನಂಥವರು ಪೀಠಕ್ಕೆ ಕುಳಿತದ್ದರಿಂದ ಮಠದ ಪಾವಿತ್ರ್ಯಕ್ಕೇ ಮೈಲಿಗೆಯಾಗಿತ್ತು. ಕಣ್ಣುಮುಚ್ಚಿ ಸುಮ್ಮನೆ ಕುಳಿತಿರಲು ಸಾಧ್ಯವಿಲ್ಲವೆಂದು ಗಂಗಾಧರಯ್ಯನವರು ಈ ವಿಷಯವನ್ನು ಚರ್ಚಿಸಲು ಆಚಾರ್ಯರೆಡೆಗೇ ಬಂದರು.

ಬಾಳಾಚಾರ್ಯರು ಊಟಕ್ಕೆ ಕುಳಿತದ್ದರಿಂದ ಅಯ್ಯನವರು ತಿರುಗಿದ್ದರು. ಆದರೆ ಆಚಾರ್ಯರೇ ಆಗ್ರಹಪಡಿಸಿದ್ದರಿಂದ ಕೂಡಬೇಕಾಯಿತು. ಆಚಾರ್ಯರು ಊಟಮಾಡಿ ಬಂದು ಗಂಗಾಧರಯ್ಯನವರನ್ನು ಸ್ವಾಗತಿಸಿದರು. ಅವರು ಆಚಾರ್ಯರ ಮನೆಗೆ ಬಂದದ್ದೇ ಅಪರೂಪವಾಗಿತ್ತು.

"ನೀವು ಯಾವ ಕಾರಣಕ್ಕ ಬಂದೀರಿ ಅಂಬೂದು ಗೊತ್ತಾಗೇದ ಅಯ್ಯನೋರ. ನಿನ್ನೆ ಶ್ಯಾಮರಾಯನ ಜೋಡೀ ಇದರ ಬಗ್ಗೇನಽ ನಾ ವಿಚಾರ ಮಾಡಿದ್ದೆ. ಮಹಾರಾಜರು ಇಲ್ಲಿಗೆ ಬಂದಾಗ ಶಿವಯೋಗಿಸ್ವಾಮಿಗಳ ಶಿಕ್ಷಣದ ವ್ಯವಸ್ಥಾ ಮಾಡತೀವಿ ಅಂತ ಹೇಳಿ ಹೋಗ್ಯಾರ. ನಿಮ್ಮನ್ನ ಕರೆಸಿ ನಾನಽ ಇದನ್ನ ಹೇಳಬೇಕೂ ಅಂತ ಮಾಡಿದ್ದೆ. ಅದಕ್ಕ ನಿಮ್ಮ ವಿಚಾರ ಏನು ?" ಎಂದು ಕೇಳಿದರು.

ಶಿವಯೋಗಿಸ್ವಾಮಿಗಳ ಶಿಕ್ಷಣದ ಭಾರವನ್ನು ಮಹಾರಾಜರು ಹೊತ್ತದ್ದನ್ನು ಕೇಳಿ ಗಂಗಾಧರಯ್ಯನವರಿಗೆ ಸಂತೋಷವಾಗಿತ್ತು. ಆದರೆ ಅದಕ್ಕಿಂತ ಮೊದಲು ಮಠದ ಪಾವಿತ್ರ್ಯವನ್ನು ಕಾಪಾಡಬೇಕಾಗಿತ್ತು. ಅದರ ಬಗ್ಗೆ ಮಹಾರಾಜರು ಏನೂ ಹೇಳಿರಲಿಲ್ಲ. "ಮಠದ ಬಗ್ಗೆ ಏನಾರ ಮಾತು ನಡೆದಿದ್ದವೇನ್ರಿ ? ಏಟ ದಿನಾ ಅಂತ ಈ ಹೊಲೆಗೇರಿ ನೋಡಬೇಕು ? ಊರ ಹಿರ್ಯಾರೂ ಕಣ್ಣು ಮುಚ್ಚಿಗೊಂಡು ಕುಂತಾರು. ಮಠದಾಗಿನ ಗೊಂದಲಾ ತಪ್ಪಿಸಾಕ ಏನ ಹಾದೀ ತಗದೀರಿ ಹೇಳ್ರಿ ?" ಎಂದು ಸರಳವಾಗಿಯೇ ಕೇಳಿದರು.

ಅದಕ್ಕೆ ಆಚಾರ್ಯರಾದರೂ ಏನು ಹೇಳಬೇಕು ? ಊರ ಹಿರಿಯರು ಕಣ್ಣು ಮುಚ್ಚಬಾರದು ನಿಜ. ಆದರೆ ಅವರಲ್ಲಿಯೇ ಹೊಂದಿಕೆ ಇರಲಿಲ್ಲ. ಮಠದ ಬಗ್ಗೆ ಯಾರಿಗೂ ಆಸ್ಥೆಯಿರಲಿಲ್ಲ. ಜೀವನದ ಕ್ರಮವೇ ಬದಲಾಗಿರಬೇಕು. "ಅದಕ್ಕೇನು ಮಾಡೂದದ ಅಯ್ಯನೋರ ? ಪ್ರವಾಹ ಕೊಚಿಗೊಂಡು ಹೋಗೂಮುಂದ ಅದರ ವಿರುದ್ಧ ಎಷ್ಟಂತ ಈಸಬೇಕು ? ಪರಿಸ್ಥಿತಿ ಕೈಮೀರಿ ಹೋಗೇದ. ಸುಮ್ಮಗ ನೋಡಿಕೋತ ಕೂಡೂದೊಂದಽ ಹಾದಿ." ಎಂದು ಉದಾಸೀನತೆಯಿಂದಲೇ ಉತ್ತರವಿತ್ತರು.

ಗಂಗಾಧರಯ್ಯನವರಿಗೆ ಇದೇನೂ ಸರಿಬರಲಿಲ್ಲ. ಮಠದ ಪಾವಿತ್ರ್ಯಭಂಗ ಅವರಿಗೆ ಅಸಹನೀಯವಾಗಿತ್ತು. ಪಡದಪ್ಪ ಹೇಳಿ ಕೇಳಿ ಅಯೋಗ್ಯ. ಈಗ ಚಿಮಣಾಳನ್ನು ತಂದಿಟ್ಟುಕೊಂಡು ಸಂಸಾರ ಜೇರೆ ಹೂಡಿದ್ದಾನೆ. ಸಂಸಾರಿಗೆ ವಿರಕ್ತರ ಮಠದಲ್ಲಿ ಸ್ಥಾನವೇಕೆ? ಕುಡುಕರು, ಲಫಂಗರು ಇವರೇ ಅವನ ಸಂಗಾತಿ ಗಳಾಗಿದ್ದಾರೆ ಮಠದಲ್ಲಿ ಹಗಲೂ ರಾತ್ರಿ ಕುಡಿತ, ಜೂಜುಗಳೇ ನಡೆದಿವೆ. ಮೇಲಾಗಿ ಪೀಠ ಒಳಸಂಚುಗಳ ಮೊಟ್ಟೆಯಾಗಿದೆ. ಇದನ್ನು ಕಂಡೂ ಕಂಡೂ ಸುಮ್ಮನಿರಬೇಕೆಂದರೆ? ಊರ ಹಿರಿಯರೆಲ್ಲ ಒಂದುಗೂಡಿ ವಿಚಾರ ಮಾಡದಷ್ಟು ಈ ವಿಷಯ ಕ್ಷುಲ್ಲಕವಾಯಿತೇ?

ಆಚಾರ್ಯರಿಗೂ ಇದರ ಅರಿವಾಗಿತ್ತು. ಆದರೆ ಅವರ ದೃಷ್ಟಿಪಥದಲ್ಲಿ ಆಸೆಯ ಒಂದು ಕಿರಣವೂ ಹೊಳೆದಿರಲಿಲ್ಲ. ಊರ ಹಿರಿಯರೆಂದರೆ ಯಾರು? ಅಜರಾಣಿಯ ಅಯೋಗ್ಯನೊಬ್ಬ ಗೌಡನಾಗಿ ಬಂದಿದ್ದಾನೆ. ಪಡದಪ್ಪನೇ ಅವನಿಗೂ, ಊರಿಗೂ ಮಾರ್ಗದರ್ಶಿಯಾಗಿದ್ದಾನೆ. ಪಾರ್ವತೆವ್ವನಿಗೆ ತನ್ನ ಮನೆ, ಭೂಮಿಗಳನ್ನು ಕಾಯುವದೇ ದುಸ್ತರವಾಗಿದೆ. ಶ್ಯಾಮರಾಯ ಊರಿಗೇ ಹೊಸಬ. ಅವನ ಮಾತನ್ನು ಕೇಳುವದಂತಿರಲಿ, ಅವನ ಪರಿಚಯ ಕೂಡ ಎಷ್ಟೋ ಜನರಿಗಿರಲಿಲ್ಲ. ಇನ್ನು ತಾವು? ದಿನವೂ ಪ್ರವಾಹದ ವಿರುದ್ಧ ಈಸಿ ಈಸಿ ಕೈಸೋತು ಹೋಗಿವೆ. ಬರಿಯ ಶೀಲಕ್ಕೆ ಶಕ್ತಿ ಎಲ್ಲಿಂದ ಬಂದೀತು?

"ಅದಕs ಹೇಳತೀನಿ. ಸುಮ್ಮನ ಜಗತ್ತಿನ ಕೈ ಬಿಡೂಣು. ಪಾಪದ ಕೊಡಾ ತುಂಬಿದಾಗ ದೇವರs ಅವರಿಗೆ ಶಿಕ್ಷಾ ಮಾಡತಾನ. ಇದ್ದ ಒಂದ ಪುಣ್ಯದ ಅಂಶ ಕಾಯೋ ಕೆಲಸಾ ಅಷ್ಟs ನಾವು ಮಾಡೋದು. ಅಷ್ಟ ಮಾಡೋಣು. ಶಿವಯೋಗಿಸ್ವಾಮಿಗಳು ನಿಮ್ಮ ಮಗಾ ಇದ್ದರೂ ನಾಳೆ ಗುರುಪೀಠಕ್ಕ ಬರತಾರ. ಆ ಯೋಗ್ಯತಾ ಅವರಿಗೆ ಬರೋ ಹಂಗ ಈಗಿನಿಂದನs ಪ್ರಯತ್ನ ಮಾಡಬೇಕಾಗ ತದ. ಅವರನ್ನ ಇಂಥಾ ವಾತಾವರಣದಾಗ ಬೆಳಸಬಾರದು. ಅನಾಯಾಸ ಮಹಾ ರಾಜರು ಹೇಳಿಕಳಿಸ್ಯಾರ. ನಾಳೆ ಶ್ಯಾಮರಾಯನ ಜೋಡಿ ಅವರನ್ನ ಕಳಿಸಿ ಬಿಡ್ರಿ." ಎಂದು ಆಚಾರ್ಯರು ತಮ್ಮ ಮನೋಗತವನ್ನು ತಿಳಿಸಿದರು.

ಗಂಗಾಧರಯ್ಯನವರು ಚಿಂತೆಗೊಳಗಾದರು. "ನೀವು ಹೇಳೂದೆಲ್ಲಾ ಖರೇ ಆಚಾರೆಪ್ಪ. ಆದರ ಮುಪ್ಪಿನ ಕಾಲದಾಗ ಮಗನ್ನ ದೂರ ಕಳಿಸಿ ನಾ ಹ್ಯಾಗ ಇರಬೇಕು? ಇಲ್ಲೇ ವಿದ್ಯಾ ಕಲಿಸಿದರ ಪಾಡ ಆಗಾಕಿಲ್ಲs?" ಎಂದು ಪ್ರಶ್ನೆಮಾಡಿದರು.

"ಇಂಥಾ ಪರಿಸ್ಥಿತಿಯೊಳಗ ಅವರಿಲ್ಲೆ ಇರೋದs ಯೋಗ್ಯ ಅಲ್ಲ. ನಿಮಗ ಈ ಮಾತು ಹೇಳಬೇಕs ನಾನು? ಕೆಟ್ಟ ಜನರು ಬದಕೋದು ಭಾಳ ಸುಲಭ ಅಪನೋರ. ಆದರ ಪುಣ್ಯ ಬೆಳೀಬೇಕಾದರ ಅದಕ್ಕ ನಾವೆಲ್ಲಾ ದಂಡಾ ಕೊಡs ಬೇಕಾಗತದ. ಮಠದ ಕಲ್ಯಾಣ ಆಗಬೇಕೂ ಅಂತ ನಿಮಗ ಮನಸ್ಸಿದ್ದರ ಅವ ರನ್ನ ಕಳಿಸಲಿಕ್ಕೇಬೇಕು" ಆಚಾರ್ಯರು ನಿರ್ಧಾರದಿಂದಲೇ ಹೇಳಿದರು.

"ನಿಮ್ಮ ಮಾತು ಎಂದಾರ ತಗದ ಹಾಕತೀವೇ? ಅಂದ ಮಠಕ್ಕ ಮರಿ ಮಾಡಲಿಕ್ಕೆ ಮಗನ್ನ ಕೊಡೂ ಅಂದಿರಿ. ಕೊಟ್ಟೆ. ಈಗ ಊರು ಬಿಟ್ಟು ಕಳಸೂ ಅಂತೀರಿ. ಕಳಸತೀನಿ ಆತs? ಆ ಮಾತೇನು ದೊಡ್ಡದಲ್ಲ" ಎಂದು ಗಂಗಾ ಧರಯ್ಯನವರು ತಮ್ಮ ಒಪ್ಪಿಗೆಯನ್ನು ಸೂಚಿಸಿದರು.

ಆದರೂ ಒಂದು ಮಾತು ಅವರ ಮನಸ್ಸಿನಲ್ಲಿ ಇನ್ನೂ ಕಟಿಯುತ್ತಿತ್ತು. ಪಡದಯ್ಯನಂಥವರನ್ನು ಊರಲ್ಲಿಯೇ ಇರಗೊಡಬಾರದು. ಪ್ರಸಂಗ ಬಿದ್ದರೆ ವೀರಶೈವ ಸಮಾಜದ ಪ್ರಮುಖರೆಲ್ಲ ಹೋಗಿ ಅವನನ್ನು ಕೆಳಗುರುಳಿಸಲೇಬೇಕು. ಆಚಾರ್ಯರಿಗೆ ಈ ಮಾತು ಒಪ್ಪಿಗೆಯಿರಲಿಲ್ಲ. ಪಡದಯ್ಯ ಚಿಮಣಾಳನ್ನು ಮಠ ದಲ್ಲಿ ತಂದಿಟ್ಟದ್ದು ಒಳ್ಳೆಯದೆಂತಲ್ಲ. ಆದರೆ ಇದೇ ಪಡದಯ್ಯನಿಗೆ ದ್ಯಾನವ್ವ ಪ್ರೇಯಸಿಯಾಗಿ ಮಠದಲ್ಲಿ ಇರಲಿಲ್ಲವೇ? ಆಗ ಅದನ್ನು ನೋಡಿಯೂ ಜನರು ಒಂದು ತುಟಿ ಎರಡು ಮಾಡಿರಲಿಲ್ಲ. ಅಂದಮೇಲೆ ಈಗೇಕೆ ಅದರಗೊಡವೆ?

ಗಂಗಾಧರಯ್ಯನವರು ಏನೂ ಮಾತಾಡದೆ ಅಲ್ಲಿಂದೆದ್ದರು. ಮತ್ತೊಮ್ಮೆ ಶಿವ ಯೋಗಿಗಳನ್ನು ಕಳಿಸಲು ನೆನಪು ಮಾಡಿ ಆಚಾರ್ಯರು ಅವರನ್ನು ಬೀಳ್ಕೊಂಡರು. ಗಂಗಾಧರಯ್ಯನವರಿಗೆ ಇನ್ನೂ ಮಠದ ಹುಚ್ಚು ಬಿಟ್ಟಿರಲಿಲ್ಲ. ಪಡದಯ್ಯನವ ರಂಥವರು ಗುರುಪೀಠದ ಪಾವಿತ್ರ್ಯವನ್ನೇ ಹಾಳುಮಾಡಲು ಹುಟ್ಟಿದವರು. ಅಂಥವರನ್ನು ಏನು ಮಾಡಿದರೂ ಅಲ್ಲಿ ಇರಗೊಡಬಾರದೆಂಬ ವಿಚಾರದಲ್ಲಿಯೇ ಅವರು ಹೊರಬಿದ್ದರು.

ಅವರು ಹೊದ ಸ್ವಲ್ಪ ಹೊತ್ತಿನಲ್ಲಿಯೇ ಶಿಲೇದಾರ ಲಕ್ಷ್ಮಣ ಅಳುತ್ತ ಅಲ್ಲಿಗೆ ಬಂದ. ಆಚಾರ್ಯರಿಗೆ ಅದೇನೂ ಹೊಸದಲ್ಲ. ಪಾದಳ್ಳಿಯಲ್ಲಿ ಏನು ಬದ ಲಾದರೂ ಲಕ್ಷ್ಮಣನ ಅಳುಬುರುಕ ಮುಖ ಮಾತ್ರ ಚಿರಂತನವೆಂದು ಅವರಿಗೆ ಗೊತ್ತಿತ್ತು. "ಏನಪಾ ಲಕ್ಷ್ಮಣ, ಮತ್ತೇನು ಸುದ್ದೀ ತಂದಿ ?" ಎಂದು ಕೇಳಿದರು.

"ನಾನು ಕೂರಿಗಿ ದಿಂಡು ಹಾಯಿಸಾಕ ಬಡಿಗೇರ ಕಟ್ಟಿಗೆ ಹೋಗಿ ಕುಂತಿ

ದ್ದೆನರಿ. ಹೊಲ್ಯಾರ ರುದ್ರ ಅಲ್ಲೇ ಇದ್ದ. 'ಯಾಕ ಕೂರಿಗೀ ದಿಂಡು ಹಾಯಿಸತೀರಿ. ನೀವು ಮರಡೀಹೊಲಾ ಬಿತ್ತೂಗರಜs ಇಲ್ಲಾ. ನಾಳೆ ಪಡದಪ್ಪನೋರು ಚಿಮಣಾ ಬಾಯಿ ಪಾಲಿನ ಹೊಲದ ಕಬಜಾ ತೊಗೊಂಡು ಬೀಜಾ ಕಾಣಸೂ ಯವಸ್ತಾ ಮಾಡತಾರು.' ಅಂತ ಹೇಳಿದನರಿ. ನಾ ಇವೆಲ್ಲಾ ನಗಿಚಾಟಿಕಿ ಅಂತ ನಂಬಲಿಲ್ಲ ಬಿಡ್ರಿ. ಬಡಿಗೇರ ಸತ್ಯಪ್ಪನೂ ಅದs ಮಾತ ಅಂದಾ! ಬ್ಯಾಸಗೀ ದಗದಾ ಮಾಡಿಟ್ಟ ಮರಡೀಹೊಲಾ ಪಡದಪ್ಪನ ಬಾಯಿಗೆ ಇಟ್ಟು ಕುಂದಳಕಿ ಕರೆ? ನಾಳೆ ದಾದಾ ಏನಂದಾನು?" ಎಂದು ಲಕ್ಷ್ಮಣ ಮತ್ತೆ ಗೋಳಾಡಿದ.

ಆಚಾರ್ಯರು ಅವನ ಮಾತುಗಳನ್ನೆಲ್ಲ ಸಮಾಧಾನದಿಂದಲೇ ಕೇಳಿಕೊಂಡಿದ್ದರು. ಗೌಡರ ಮನೆಯ ಕಬಜಾ ಸಿಗಲಿಲ್ಲವೆಂಬ ಸಿಟ್ಟಿನಲ್ಲಿ ಪಡದಪ್ಪ ಇನ್ನೊಂದು ಹೊಂಚು ಹಾಕಿರುವನೆಂದು ತಿಳಿಯಿತು. ಗೊಂದಲವೆಬ್ಬಿಸದಿದ್ದರೆ ಅವನ ಜೀವ ಸುಮ್ಮನೆ ಕೂಡಲಾರದು. "ಇಷ್ಟs ಹೌದಲ್ಲೋ? ವಾರಸಾ-ರಜಿಸ್ಟರದಾಗ ಚಿಮಣಾನ ಹೆಸರು ಹಚ್ಚಲಿಕ್ಕೆ ನೀನs ಕಬೂಲಿ ಕೊಟ್ಟು, ಈಗ ಆಕಿ ಪಾಲಿನ ಹೊಲಾ ಆಕಿಗೇ ಕಬಜಾ ಕೊಡೂದಿಲ್ಲಾಂದರ?" ಎಂದು ಆಚಾರ್ಯರು ಅವನನ್ನೇ ಪ್ರಶ್ನೆಮಾಡಿದರು.

ಲಕ್ಷ್ಮಣನಿಗೆ ಈ ವ್ಯಂಗ್ಯ ತಿಳಿಯುವಂತಿರಲಿಲ್ಲ. ಆದರೆ ಅವನು ಅಳುಬುರುಕನಿದ್ದಷ್ಟೇ ಹಟಮಾರಿಯಾಗಿದ್ದ. ಆಡಿದ ಮಾತನ್ನೇ ತಿರುತಿರುಗಿ ಆಡಿ ಗಟ್ಟಿಗೊಳಿಸುತ್ತಿದ್ದ. ಈಗಲೂ ಹಾಗೆಯೇ ಆಯಿತು. "ಚಿಮಣಾ ಭೂಮಿಗೆ ಬರಲಿ. ನಾ ಹರಕತ್ತ ಮಾಡಿದರ ನನ್ನ ನಾಲಿಗಿ ಸೀಳರಿ. ಆದರ ಪಡದಪ್ಪ ಬರತಾನ ಅಂದರ ಹ್ಯಾಗ ಸುಮ್ಮಗ ಕೂಡಬೇಕರಿ? ಚಿಮಣಾನ್ನ ಕರಕೊಂಡು ಬಂದು ಭೂಮ್ಯಾಗ ಕಾಲ ಹಾಕು, ಇಲದಿರಕ ಕಾಲುಮುರದು ಕೈಯ್ಯಾಗ ಕೊಡತೀನು ಅಂತ ನಾ ಹೇಳಾವರಿ" ಎಂದ ಲಕ್ಷ್ಮಣ.

"ಹುಚ್ಚ ಇದ್ದೀ ನೋಡು ಲಕ್ಷ್ಮಣಾ. ಅಲ್ಲೋ ನಾಳೆ ಚಿಮಣಾನs ಬಂದು, ತನ್ನ ಪಾಲಿನ ಹೊಲಾ ಪಡದಪ್ಪಗ ಬರದುಕೊಟ್ಟೀನಿ ಅಂದರ ನೀ ಏನು ಮಾಡಾವಾ? ಚಿಮಣಾನs ಪಡದಪ್ಪನ ಪಾಲಿಗೆ ಬಿದ್ದಾಗ, ಆಕಿ ಹೊಲಾನೂ ಅವನ ಪಾಲಿಂದs ಅಲ್ಲ? ಸುಮ್ಮಗ ಇಲ್ಲದ್ದೊಂದು ಮಾಡಲಿಕ್ಕೆ ಹೋಗಬ್ಯಾಡ" ಎಂದು ಬುದ್ಧಿ ಹೇಳಿದರು.

ಲಕ್ಷ್ಮಣ ಹಗೆಹಣೆ ಗಟ್ಟಿಸಿಕೊಂಡ. ನಾನಾನ ಮಗಳಿಗೆ ಈ ಗತಿಯಾಯಿ

ತಲ್ಲ ಎಂದು ಅವನಿಗೆ ದುಃಖವಾಗಿತ್ತು. ವಾಸ್ತವಿಕವಾಗಿ ನಾನಾ ಸತ್ತಮೇಲೆ ಚಿಮಣಾಳನ್ನು ತಾನು ಸಾಕಬೇಕಾಗಿತ್ತು. ಆದರೆ ಮಠದಲ್ಲಿ ಆವಳು ಬಂದಮೇಲೆ ಅವಳನ್ನು ಭೆಟ್ಟಿಯಾಗಲೂ ಕೂಡ ಹೋಗದಂತೆ ಪರಿಸ್ಥಿತಿ ವಿಪರೀತವಾಗಿತ್ತು. ಚಿಮಣಾ ತನಗೆ ಎರವಾದಂತೆಯೇ ಎಂಬ ವಿಚಾರ ಲಕ್ಷ್ಮಣನ ಕರುಳನ್ನು ಅಲುಗಿಸಿತು. ನಿರುಪಾಯನಾಗಿ ಮರುಮಾತಾಡದೆ ಅಲ್ಲಿಂದ ಎದ್ದು ಹೊರಟ.

ಬೆಳಗಿನಲ್ಲಿ ಗೌಡರ ವಾಡೆಯ ಕಬಜಾ ತೆಗೆದುಕೊಳ್ಳುವ ಯೋಜನೆ ಸಫಲವಾಗದ್ದರಿಂದ ಮಠದ ಪರಿವಾರ ನಿರುತ್ಸಾಹದಿಂದ ತುಂಬಿತ್ತು. ಅಂದು ರಾತ್ರಿ ಮಠದಲ್ಲಿ ಕೂಡಿದ ಯಾರೊಬ್ಬರ ಮುಖದ ಮೇಲೂ ಕಳೆಯಿರಲಿಲ್ಲ. ಪಡದಯ್ಯನವರು ಮಾತ್ರ ಅದನ್ನು ಆತ್ಮವಿಶ್ವಾಸದಿಂದ ಇನ್ನೂ ಹುರಿದುಂಬಿಸುತ್ತಿದ್ದರು. ಇಂದು ಬೆಳಿಗ್ಗೆ ಮಾಡಿದ್ದ ಪ್ರಯತ್ನದಲ್ಲಿ ಕಾಲು ಜಾರಿದ್ದರೆ ತಪ್ಪೇನೂ ಇಲ್ಲ. ಎಲ್ಲ ಪ್ರಯತ್ನಗಳೂ ಸಫಲವಾಗಬೇಕೆಂದೇನು ಬರೆದುಕೊಟ್ಟದೆಯೇ? ಆದರೆ ಹಾಗೆಂದು ಪ್ರಯತ್ನವನ್ನೇ ಬಿಟ್ಟುಕೊಡುವದು ಜಾಣತನವಾಗಲಾರದು. ಪಡದಯ್ಯನವರು ಆಡುತ್ತಾಡುತ್ತ ಇನ್ನೊಂದು ಯೋಜನೆಯ ಹೊಂಚನ್ನು ರೂಪಿಸುತ್ತಿದ್ದರು. ಭಾವನೆಯ ಆವೇಶದಲ್ಲಿ ಅವರ ಮಾತಿಗೆ ದೊಡ್ಡಾಟದ ಭಾಷಣದ ಉತ್ಕಟತೆ ಬಂದಿತ್ತು.

"ಒಬ್ಬರ ತಾಬೇದಾಗಿದ್ದ ಆಸ್ತಿ ಕಬಜಾ ತೊಗೊಳ್ಳೂದು ಅಂದರ ಏನ ಸಣ್ಣ ಮಾತs? ಅದೂ ಒಂದು ಲಢಾಯಿ ಮಾಡಿದ್ಹಾಂಗ ಐತಿ. ಲಢಾಯಿ ಮಾಡಬೇಕಾದರ ಎದುರಿಗೆ ಬಂದವರ ಬಲಾ ಎಷ್ಟು ಅನ್ನೂದನ್ನ ತೂಗಿ ನೋಡಬೇಕಾಗ್ತೈತಿ. ನಾವು ಅದನ್ನ ನೋಡಲಿಲ್ಲಾ ಅಂತs ಸೋತಿವಿ. ಅದೇನು ದೊಡ್ಡ ಮಾತಲ್ಲ. ಯಾಕಂದರ ಗೌಡರ ವಾಡೇದ ಕಬಜಾ ಗೆಲ್ಲೂದಂದರ ಪಾದಳ್ಳೀನ ಗೆದ್ಹಾಂಗ. ಅದನ್ನ ಈಗ ಬಿಟ್ಟುಬಿಡೂನು. ಲಢಾಯಿಗೆ ಹೊಸಾ ಜಾಗಾ ನೋಡಿಟ್ಟೇನು. ನಾಳೆ ನಾವೆಲ್ಲಾ ನಾನಾನ ಮರಡೀ ಹೊಲಾ ಬಿತ್ತಾಕ ಹೋಗಬೇಕೂ ಅಂತ ವಿಚಾರ ಐತೇನ್ರೆಪಾ. ಕರಿಯ ಕೂರಿಗಿ ದಿಂಡು ಹಾಯಿಸಿ ಸಜ್ಜುಮಾಡಿ ಇಟ್ಟಾನ.ನಾಳೆ ಲಕ್ಷ್ಮಣಾ ಭೂಮೀ ಕಬಜಾ ತನ್ನ ಕಡೆ ಐತಿ ಅಂತ ಹರಕತ್ತು ಮಾಡಬಹುದು. ಬಾಳಾಚಾರಿ, ಶಿವಪ್ಪ, ಬಿರಾದಾರ ಗೌಡರು, ಗೌಡರ ಆಳು ಎಲ್ಲಾ ಅವನ ಬೆಂಬಲಕ್ಕ ಬಂದು ನಿಲ್ಲಬಹುದು. ನಮ್ಮ ಜನರು ಹೆಚ್ಚಿಗಿದ್ದ ಅವರನ್ನ ಒದ್ದು ಓಡಿಸಿ ಕಬಜಾ ಪಡೆಯೊಡೆದು ಸಾಧ್ಯ ಆಗತೈತಿ." ಎಂದು ಸಾ

ಧಾನವಾಗಿ ಹೇಳಿ ಎಲ್ಲರ ಮುಖಗಳನ್ನೂ ಪರೀಕ್ಷಿಸಿದರು.

ಪಡದಪ್ಪನವರ ಈ ಹೊಸ ಯೋಜನೆ ಕ್ರಮಬದ್ಧವಾಗಿತ್ತು. ಮೊದಲು ನಾನಾನ ಮರಡಿಯ ಹೊಲ, ಆಮೇಲೆ ಗೌಡರ ಹಗೆಗಳು, ಕೊನೆಗೆ ಗೌಡರ ವಾಡೆ ಹೀಗೆ ಅವರ ವಿಜಯ ನಡೆಯಬೇಕಾಗಿತ್ತು. ಬೆಳಗಿನ ಸೋಲು ಅವರಲ್ಲಿ ಈರ್ಷ್ಯೆಯನ್ನು ಕೆರಳಿಸಿತ್ತು, ಎಚ್ಚರಿಕೆಯನ್ನೂ ಕಲಿಸಿತ್ತು. ಮೇಲಾಗಿ ಸೋತು ಬಂದ ಜನರಿಗೆ ಹೊಸ ಹುರುಪು ತುಂಬುವ ಕೆಲಸವನ್ನೂ ಅವರು ಮಾಡಬೇಕಾಗಿತ್ತು ಏನೇ ಆದರೂ ಇಂದಿನ ಸೋಲನ್ನು ಮತ್ತೊಮ್ಮೆ ಆಗಗೊಡದಂತೆ ನೋಡಿಕೊಳ್ಳಬೇಕೆಂಬ ನಿರ್ಧಾರದಿಂದಲೇ ಅವರು ಮಾತಾಡಿದ್ದರು.

ಹೊಲೆಯರ ರುದ್ರ ಮೇಲೆದ್ದು, "ಯಪ್ಪಾ, ನಮ್ಮ ಹೊಲಗೇರಿ ಜನಾ ನಿಮ್ಮ ಹಿಂದ ಐತಿ ಅಂತ ತಿಳಕೋರಿ. ಅವರ ಇಂದಿನ್ಹಾಂಗ ತಿರಗಿ ಬರೂದಾದರ, ತಿರಗಿ ಜನರಿಗೆ ಮಾರೀತೋರಿಸೂದು ಜಡಾ ಆಗತೈತಿ. ವಾಡೇ ಕಬಜಾ ತೊಗೊಳ್ಳೂದು, ಹಗೇ ಲೂಟಿ ಮಾಡೂದು ಅನ್ನಾಣಾ ಜನಾ ಬಲೇ ಹುರುಪ ಆಗಿ ಬಂದಿತ್ತ ಬಿಡರಿ. ಹೊಟ್ಟೆಗೆ ಒಂದ ಮುಕ್ಕ ಕಾಳ ಇಲ್ಲಾ. ನಾಳೆ ನಾನಾಸಾಬನ ಮರಡಿ ಬಿತ್ತಿಸಿ ಬರಿಗೈಲೆ ಮಂದಿನ್ನ ಮನಿಗೆ ಕಳಸಬಾರದರಿ. ತಿರಗಿ ಬರೂ ಮುಂದ ಗೌಡರ ಹಗೆ ಹಾರಹೊಡೆದು ಕಾಳ ಹಂಚಿಬಿಡರಿ. ಅಂದರ ಜನಾ ಕಿತ್ತೆದ್ದು ಬರತೈತಿ ನೋಡ್ರಿ" ಎಂದು ತನ್ನ ಅಭಿಪ್ರಾಯವನ್ನು ಹೇಳಿದ.

ಕುರುಬರ ಮಾಯಪ್ಪ ಇನ್ನೂ ಗಾಂಜಿಯ ಗುಂಗಿನಲ್ಲಿಯೇ ಕುಳಿತವ, "ಯಪ್ಪಾ, 'ನಾನಾಸಾಬನ ಮರಡಿ ಬಿತ್ತಲಾಕ ನೀವ್ಯಾರಲೇ ಮಕ್ಕಳಿರ್ಯಾ' ಅಂತ ಯಾರಸೀ ಕೇಳಿದರ ಏನಂತ ಹೇಳಬೇಕರಿ?" ಎಂದು ವ್ಯಾವಹಾರಿಕವಾದ ಅಡಚಣಿಯೊಂದನ್ನು ನಿವೇದಿಸಿದ.

ಪಡದಪ್ಪನವರು ಈ ವಿಘ್ನವನ್ನು ಮೊದಲೇ ಊಹಿಸಿದ್ದರು. ಅದಕ್ಕೆ ಅವರ ಉತ್ತರ ಸಿದ್ಧವಾಗಿಯೇ ಇತ್ತು. "ಮಗನೇ ಆ ಮಾತು ಬಂದರ, ನನ್ನ ತೋರಿಸಿ ನೀವು ಪಾರಾದರಾತಪಾ! ಬಂದು ನನ್ನ ಕೇಳಲಿ ಅವರು. ಮಾರಿಮ್ಯಾಗಿನ ನೀರು ಇಳಿಸೂ ಹಾಂಗ ಉತ್ತರಾ ಕೊಡತೀನು?" ಎಂದು ತಮ್ಮ ವ್ಯಕ್ತಿತ್ವದ ಅಭಯವನ್ನು ನೀಡಿದರು. ಏನು ಮಾಡಿದರೂ ನಂಬಿದವರನ್ನು ಎಂದಿಗೂ ಕೈಬಿಡಬಾರದೆಂದು ಪರಮಾತ್ಮನೇ ಹೇಳುವ ಶೈಲಿಯಲ್ಲಿ ನುಡಿದು, ಪರಟಿಯನ್ನೆತ್ತಿ ಆ ಮದ್ಯವನ್ನು ಗುಟುಕರಿಸಿದರು. ಅವರ ಮಾತು ಕೇಳಿ ಜನರೆಲ್ಲ ನಿಶ್ಚಿಂತರಾದರು.

ಆದರೆ ಅದೇ ಹೊತ್ತಿಗೆ ಮಠದ ಬಾಗಿಲದಲ್ಲಿ ಪ್ರತ್ಯಕ್ಷರಾದ ಗಂಗಾಧರಯ್ಯನವರೇ ಪಡದಪ್ಪನವರನ್ನು ಮಾತಾಡಿಸಿದರು. "ಇಗಾ ಈಗ ನಾನs ಆ ಪ್ರಶ್ನಿ ಮಾಡತೀನು. ಯಾರ ಮಾರಿಮ್ಯಾಗಿನ ನೀರು ಹ್ಯಾಗ ಇಳಸತೀಯೋ, ಅದೆಂತಾ ಉತ್ತರ ಐತ್ಯೋ ಹೇಳು?" ಎಂದು ಕೂಗಿದರು.

ಗಂಗಾಧರಯ್ಯನವರ ಆಗಮನ ಅನಿರೀಕ್ಷಿತವಾಗಿತ್ತು. ಊರಲ್ಲಿ ಬಾಳಾಚಾರ್ಯರ ತರುವಾಯ ಗೌರವದ ಸ್ಥಾನದಲ್ಲಿದ್ದವರೆಂದರೆ ಅವರೇ. ಅವರನ್ನು ಕಂಡರೆ ಎಲ್ಲರಿಗೂ ಭಯಭಕ್ತಿ ತುಂಬಿರುತ್ತಿದ್ದವು. ಅಂಥವರು ಮಠದಲ್ಲಿ ಕಾಲಿಟ್ಟದ್ದನ್ನು ನೋಡಿ ಪಡದಯ್ಯನವರ ಎದೆ-ಗುಂಡಿಗೆ ಕೂಡ ನಡುಗಿತು. ಮದ್ಯದ ಪರಟಿಗಳೆಲ್ಲ ಎಲ್ಲೆಲ್ಲಿಗೋ ಮುಖಮುಚ್ಚಿಕೊಳ್ಳಲು ಸರಿದಾಡಿದವು. ಪರಿವಾರದಲ್ಲಿ ಎಷ್ಟೋ ಜನರು ನಡುಗುತ್ತ ಎದ್ದು ಕೂಡ ನಿಂತರು. ಅದಲ್ಲದೆ ಗಂಗಾಧರಯ್ಯನವರು ಒಬ್ಬರೇ ಬಂದಿರಲಿಲ್ಲ. ಅವರ ಹಿಂದೆ ವೀರಶೈವ ಸಮಾಜದ ಪ್ರಮುಖರೆಲ್ಲ ಬಂದಿದ್ದರು.

ಪಡದಯ್ಯನವರು ಅಷ್ಟರಲ್ಲಿಯೇ ಸಾವರಿಸಿಕೊಂಡಿದ್ದರು. ಮೈಮೇಲಿನ ಕೇವೆವಸ್ತ್ರವನ್ನು ಸರಿಮಾಡಿಕೊಂಡು, ಕುಳಿತಿದ್ದ ಆಸನವನ್ನು ಬದಲಿಸಿ, "ಯಾರದು ನನ್ನ ಕೇಳಾವರು ?" ಎಂದು ತಾತ್ವಿಕ ಗಾಂಭೀರ್ಯದಿಂದ ಕೇಳಿದರು.

"ನಾನು – ಈ ಮಠದ ಶಿಷ್ಯಾ – ಕೇಳತೇನು. ಸನ್ಯಾಸಿಯಾದ ಗುರುವಿಗೆ ನಾನಾನ ಮರಡಿ ಬಿತ್ತೂ ಅಧಿಕಾರ ಹ್ಯಾಗ ಬಂತು ಅಂತ ಕೇಳತೇನು? ನಾ ಒಬ್ಬನs ಅಲ್ಲಾ, ಮಠದ ಶಿಷ್ಯರೆಲ್ಲಾ ಕೇಳತಾರು. ಗುರುವಿನ ಬಾಯಿಂದ ಏನ ವಾಕ್ಯ ಬಂದೀತೋ ಕೇಳಾಕ ತಯಾರದೀವಿ. ಒಳ್ಯಾಕ ಬರ್ರಿ ಎಲ್ಲಾರು." ಎಂದು ಗಂಗಾಧರಯ್ಯನವರು ತಮ್ಮ ಹಿಂದೆ ಬಂದಿದ್ದ ಜನರನ್ನೆಲ್ಲ ಒಳಗೆ ಕರೆದರು. ದೊಡ್ಡ ದೊಡ್ಡ ರೈತರೆಲ್ಲ ಒಳಗೆ ಬಂದು ನಿಂತುಕೊಂಡರು.

ಪಡದಯ್ಯನವರು ಒಮ್ಮೆ ಎಲ್ಲರನ್ನೂ ಚನ್ನಾಗಿ ನಿರೀಕ್ಷಿಸಿದರು. ಅಂದು ಚಾವಡಿಯಲ್ಲಿ ಮಠ ಬಿಟ್ಟು ಹೋಗೆಂದು ಹೇಳಿದ ಮುಖಗಳೇ ಇಂದು ಮತ್ತೆ ಕಂಡವು. ಎದುರಿಗೆ ತಮ್ಮ ಪ್ರತಿಸ್ಪರ್ಧಿಯಾದ ಗಂಗಾಧರಯ್ಯನವರು ಬೇರೆ ನಿಂತಿದ್ದರು. ಅವರು ಒಟ್ಟಾಗಿ ಬಂದಿರುವ ಕಾರಣವೇನಿರಬಹುದೆಂದು ಅವರಿಗೆ ಕೂಡಲೆ ಹೊಳೆಯಿತು. "ಬರ್ರಿಪಾ, ಇಂತಾ ಸರಿರಾತ್ರ್ಯಾಗ ಮತ್ತೇನು ದಗದಾ ಹೂಡಿಕೊಂಡು ನಮ್ಮನ್ನ ಕಾಣಾಕ ಬಂದೀರಿ? ಅದನ್ನೀಟು ತಿಳಿಸಿಬಿಡಿರಿ. ಬರ್ರಿ ಮ್ಯಾಗ

ಕೂಡಬರ್ರಿ ಎಲ್ಲಾರು." ಎಂದು ಹೇಳಿ ಅರ್ಥವಿಲ್ಲದ ನಗೆಯೊಂದನ್ನು ಬೀರಿದರು.

ಅಂಗಡಿ ವೀರಯ್ಯ ಮುಂದೆ ಬಂದು "ಇದು ಆನಬುನಾದಿಯಿಂದ ವಿರಕ್ತರ ಮಠಾ ಆಗೇ ಐತಿ. ನೀವು ಸಂಸಾರ ಹೂಡಿದರ ನಾವು ಹ್ಯಾಗ ಸುಮ್ಮಗಿರಬೇಕು? ಸಂಸಾರಾ ಮಾಡೋ ಸನ್ಯಾಸಿಗೆ ಪೀಠದ ಮ್ಯಾಗ ಕುಂಡರಾಕ ಅಧಿಕಾರ ಹ್ಯಾಗ ಬರತೈತಿ? ಇದು ಪರಊರಾಗ ತಿಳಿದರ ಯಾರೂ ನಮ್ಮಗೂಡ ಹೆಣಗಂಡಿನ ವ್ಯವಹಾರಾ ಮಾಡಾಕಿಲ್ಲ. ಅದನ್ನ ಕೇಳಾಕ ನಾವಿಲ್ಲೆ ಬಂದದ್ದು. ನೀವು ಸಂಸಾರಾ ಮಾಡೂಹಾಗಿದ್ದರ ಮಠಾ ಬಿಡಬೇಕಾಕ್ಕೈತಿ. ಇಲದಿರಕ ಸಂಸಾರಾ ಬಿಡಬೇಕಾಕ್ಕೈತಿ" ಎಂದು ನಿರ್ದಾಕ್ಷಿಣ್ಯವಾಗಿ ಹೇಳಿದ.

ಒಂದಿಲ್ಲೊಂದು ದಿನ ಇಂಥ ಪ್ರಸಂಗವನ್ನು ಎದುರಿಸಲೇಬೇಕಾಗುವದೆಂದು ಪಡದಯ್ಯನವರಿಗೆ ಅನಿಸಿತ್ತು. ಅಂತೆಯೇ ಇದಕ್ಕೆಲ್ಲ ಸಿದ್ಧರಾಗಿಯೇ ಅವರು ಚಿಮಣಾಳನ್ನು ಮಠದಲ್ಲಿ ಕರೆದುಕೊಂಡು ಬಂದಿದ್ದರು. ಆದರೆ ಅನಿರೀಕ್ಷಿತವಾಗಿ ಹೀಗೆ ಮೈಮೇಲೆ ಬಂದರೆ ಏನು ಹೇಳಬೇಕೆಂಬುದನ್ನು ಅವರು ಯೋಚಿಸಿರಲಿಲ್ಲ. ಆದರೂ ಈಗ ಅವರು ಧೈರ್ಯಗೆಡಲಿಲ್ಲ. ಒಂದು ನಿಮಿಷ ಯೋಚಿಸಿದರು. ಫಕ್ಕನೆ ಏನೋ ಹೊಳೆದಂತಾಗಿರಬೇಕು. ದೊಡ್ಡದಾಗಿ ನಕ್ಕು ಮಗ್ಗುಲಲ್ಲಿದ್ದ ಲಿಂಗಪ್ಪ ಗೌಡನ ಭುಜವನ್ನು ಚಪ್ಪರಿಸಿದರು. ಇದೇನು ಹುಚ್ಚೋ ಮಬ್ಬೋ ಎಂದು ಕೂಡಿ ದವರೆಲ್ಲ ತಬ್ಬಿಬ್ಬಾದರು. ಪಡದಯ್ಯನವರ ಪರಿವಾರ ಕೂಡ ಮೂಕವಿಸ್ಮಿತ ವಾಗಿತ್ತು.

"ಗೌಡರಽ ನಾ ನಿಮಗ ಈ ಮಾತು ಮುಂಚೇಕ ಹೇಳಿದ್ದಿಲ್ಲs? ಯಾಕ ವ್ಯರ್ಥ ನನ್ನಮ್ಯಾಗ ಅಪವಾದಾ ತರತೀರಿ ಅಂತ ಹೇಳಿದೆ. ಆಗ ನೀವೇನಂದಿರಿ? 'ನಾ ಗೌಡ. ಊರಾಗ ನಾ ಮಾಡಿದ್ದು ನಡೀತೈತಿ' ಅಂತ ಅಂದಿರಿಲ್ಲೋ? ಈಗ ಏನ ಉತ್ತರಾ ಕೊಡತೀರಿ ಕೊಡ್ರಿ. ಈಗ ಬಂದಿರೋ ಶಿಸಮಕ್ಕಳೆಲ್ಲಾ ಮಠದ ಜೀವ ಇದ್ದಾಂಗ. ಚಿಮಣಾನ್ನ ತಂದಿಟ್ಟವರು ನೀವಽ ಅಂತ ನಾ ಹೇಳಿದರೂ ಅವರು ನಂಬಾಣಿಲ್ಲ. ಕರೇ ಏನೈತಿ ಅದನ್ನ ಅವರಿಗೆ ನೀವಽ ಹೇಳಿಬಿಡ್ರಿ." ಎಂದು ನಗುನಗುತ್ತಲೇ ಹೇಳಿಬಿಟ್ಟರು.

ಲಿಂಗಪ್ಪ ಈ ಮಾತುಗಳನ್ನು ಕೇಳಿ ಅಪ್ರತಿಭನಾದ. ಏನು ಹೇಳ ಬೇಕೆಂಬುದು ತಿಳಿಯದೆ ಮಂಕಾಗಿ ಅತ್ತಿತ್ತ ನೋಡಹತ್ತಿದ. ಅದೇ ಹೊತ್ತಿಗೆ ಆಕಸ್ಮಿಕವಾಗಿ ಅಡಿಗೆಮನೆಯ ಬಾಗಿಲಲ್ಲಿ ಮರೆಗೆ ನಿಂತುಕೊಂಡಿದ್ದ ಚಿಮಣಾ

ಅವನ ಕಣ್ಣಿಗೆ ಬಿದ್ದಳು. ಅವನು ಮಠದಲ್ಲಿಯೇ ಇರುತ್ತಿದ್ದರೂ ಈ ಮೊದಲು ಅವಳನ್ನೆಂದೂ ನೋಡಿರಲಿಲ್ಲ. ಕೂಸು ಅಳುವ ದನಿ ಕೇಳಿದಾಗೊಮ್ಮೆ ಅತ್ತಿತ್ತ ನೋಡಿ ಚಿಮಣಾಳನ್ನು ನೋಡಬೇಕೆಂದು ಬಯಸಿ ನಿರಾಶನಾಗಿದ್ದ. ಸಾಮಾನ್ಯವಾಗಿ ಹೆಣ್ಣನ್ನು ನೋಡಬೇಕೆಂಬ ಆಸೆ ಅವನಲ್ಲಿಯೂ ಇತ್ತು. ಅದರಲ್ಲಿಯೂ ಪಡದಪ್ಪನಂಥ ವಿರಕ್ತ ಹುಚ್ಚೆದ್ದು ಹೋಗಿ, ಮುಂದಿನ ಗಂಡಾಂತರದ ಪರಿವೆ ಇಲ್ಲದೆ ಕರೆದು ತರುವ ಸಾಹಸವನ್ನು ಪ್ರೇರೇಪಿಸಿದ ಅವಳ ಚಲುವಿನ ಬಗ್ಗೆ ಅವನಿಗೂ ಕುತೂಹಲವಿತ್ತು. ಈಗ ಆ ಕನಸು ನನಸಾಗಿತ್ತು. ಲಿಂಗಪ್ಪನ ಮನಸ್ಸಿನಲ್ಲಿ ಮಲಗಿದ ಹಾವಿನಂತೆ ಸುಪ್ತವಾಗಿದ್ದ ಆಸೆ ಈಗ ಹೆಡೆ ಬಿಚ್ಚಿತು.

ಲಿಂಗಪ್ಪನ ಈ ಮಂಕನ್ನು ಕಂಡು ಪಡದಪ್ಪನವರು ಮತ್ತೊಮ್ಮೆ ಎಚ್ಚರಿಸಿದರು. "ಗೌಡ್ರು ಎನನ್ನೂದು ಗಡಾನು ಹೇಳಿಬಿಡ್ರಿ. ಈ ಜನರು ನನ್ನ ಬಗ್ಗೆ ತಪ್ಪು ತಿಳವಳಿಕಿ ಮಾಡಿಕೊಂಡು ಬಂದಾರು. ನಿಮ್ಮದೇನೂ ಇದರಾಗ ತೆಪ್ಪೈತಿ ಅಂತ ನನಗ ಅನಸೂದುಲ್ಲ. ಇನ್ನೂ ಹರೇದವರು, ಮ್ಯಾಗ ಊರ ಗೌಡರು. ಚಿಮಣಾನಂತಾ ಹೆಣ್ಣು ತಂದು ಇಟ್ಟರೆ ನಿಮಗ ಯಾರೂ ಹೆಸರಿಡೂದುಲ್ಲ. ಅದರ ಬದಲು ನನಗು ಅಂತಾರು. ಮಠದ ಹೆಸರಿಗೆ ಬಂದ ಈ ಅಪವಾದ ತೊಳದು ಹಾಕಬೇಕು." ಎಂದು ಲಿಂಗಪ್ಪನ ಮೇಲಿನ ಕಟ್ಟುಕತೆಯನ್ನೇ ಜೀವದುಂಬಿ ನಿಜವಾಗಿಸಿದರು.

ಲಿಂಗಪ್ಪನ ಮೈ ಬೆವತಿತ್ತು. ಹಾಕಿಕೊಂಡ ಬಗಲಗಸಿ ಅಂಗಿಯ ಒಳಭಾಗ ತೊಯ್ದು ಚಳಿ ಅನಿಸಿದ್ದರಿಂದ ನಡುಗು ಬಂತು. ಪಡದಪ್ಪನವರ ಮುಖ ನೋಡಿ ಧೈರ್ಯ ಬಂತೋ, ಅಥವಾ ಚಿಮಣಾಳ ಚಲುವು ಸಾಹಸವನ್ನು ಪ್ರೇರೇಪಿಸಿತೋ ಗೊತ್ತಿಲ್ಲ. ಅಂತೂ ಪಡದಪ್ಪ ಹೇಳಿದ್ದನ್ನೇ ಅಕ್ಷರಶಃ ಆ ದೈವದೆದುರು ಒಪ್ಪಿಕೊಂಡುಬಿಟ್ಟ. ಯಾರಿಗೋ ಸುಳ್ಳುಮಗನಾಗಿ ಬಂದು ಇನ್ನೊಬ್ಬರ ಆಸ್ತಿ ಸಹಜವಾಗಿ ಮಡಿಲಲ್ಲಿ ಬಿದ್ದಿತ್ತು. ಈಗ ಯಾರಿಗೋ ಸುಳ್ಳುಗಂಡನಾಗಿ ಹೆಣ್ಣನ್ನು ಪಡೆಯಬೇಕಾಗಿತ್ತು. ಲಿಂಗಪ್ಪ ಆಗಲೂ ಹೆದರಿದ್ದ. ಈಗಲೂ ಹೆದರಿದ್ದ. ಆದರೆ ಫಲವನ್ನು ನಿರಾಕರಿಸುವ ಧೈರ್ಯವಾಗಲಿ ವಿರಕ್ತಿಯಾಗಲಿ ಅವನಲ್ಲಿರಲಿಲ್ಲ. ಅದಕ್ಕೆಂದೇ ಒಪ್ಪಿಕೊಂಡ. ಅದರ ಜೊತೆಗೇ ಇನ್ನೊಂದು ಮಾತನ್ನೂ ಜೋಡಿಸಿದ. 'ನಾಳೇ ತನಗೆ ಗೌಡರ ವಾಡೆಯಲ್ಲಿ ಪಾಲು ಸಿಕ್ಕರೆ ತಾವಿಬ್ಬರೂ ಹೋಗಿ ಅಲ್ಲಿ ಇರುವದಾಗಿ ಹೇಳಿದ.

ಜಂಪರಲ್ಲಿ ಯಾರೂ ಮಾತನಾಡುವಂತಿರಲಿಲ್ಲ. ಆವೇಶದಿಂದ ಹೊಡೆಯ ಲೆಂದೆತ್ತಿದ ಕೈಯನ್ನು ಯಾರೋ ತಡೆದಂತೆ ಅವರ ಸ್ಥಿತಿಯಾಗಿತ್ತು. ಆದರೂ ಯಾರೋ ಒಬ್ಬರು ಮಾತಾಡಿದರು; "ಅಲ್ರೀ ಅಪಸೋರ, ಕೂಸಿನ ತಂದಿಯ ಹೆಸರು ನಿಮ್ಮದು ಹಚ್ಚ್ಯಾರಂತಲ್ರಿ?"

"ಇಲ್ಲ ಅಂತ ನಾ ಎಲ್ಲಿ ಹೇಳೀನು? ಕೈಯಾಗ ಸರಕಾರಿ ದಪ್ತರು ಇದ್ದವರು ಬೇಕಾದ್ದು ಹಚ್ಚತಾರು. ಬಾಪೂಸಾಹೇಬನ ಮಾವನಃ ಗೌಡ. ತನ್ನ ಆ ಅಳಿಯನ ಹೆಸರು ಅಂಥಾ ಹಚ್ಚೂದು ಸಾಧ್ಯ ಐತೇನು? ತನ್ನ ಅಳಿಯಾ ಸಂಭಾವಿತ ಅಂತ ತೋರಬೇಕಾದರ ಈ ಪಾಪದ ಹೊರೀ ಒಬ್ಬ ಸನ್ಯಾಸಿ ಮ್ಯಾಗ ಹೊರಿಸಿಬಿಟ್ಟಾ ತೀರಿತು" ಎಂದು ವಿವರಣೆಯಿತ್ತನು.

ಪಡಪ್ಪನವರು ಹೇಳಿದ ಮಾತನ್ನು ಅಲ್ಲಿ ಬಂದ ಮರ್ಯಾದೆವಂತರಾರೂ ನಂಬುವಂತಿರಲಿಲ್ಲ. ಆದರೆ ನಾಚಿಕೆಯಿಲ್ಲದ ಈ ಸುಳ್ಳಿನ ಎದುರು ಹೇಗೆ ವಾದ ಮಾಡಬೇಕು? ವಾದ ಹಾಕಿದರೂ ಪ್ರಯೋಜನವಾದರೂ ಏನು? ತಾವು ಇಂಥ ಲ್ಲಿಗೆ ಬರಲೇಬಾರದಿತ್ತೆಂದು ಅವರಿಗೆಲ್ಲ ಎನಿಸಿತು. ಗಂಗಾಧರಯ್ಯನವರಿಗೆ ಆಚಾ ರ್ಯರ ಮಾತು ನೆನಪಾಗದೆ ಇರಲಿಲ್ಲ. ಪಡಪ್ಪನ ಹೀನತೆ ಇಲ್ಲಿಯ ವರೆಗೂ ಹಬ್ಬಬಹುದೆಂದು ಅವರಿಗನಿಸಿರಲಿಲ್ಲ. ಈಗ ಅದರ ಪ್ರತ್ಯಕ್ಷ ಅನುಭವ ಬಂದಂತಾ ಗಿತ್ತು. ಇನ್ನುಮೇಲೆ ಇಲ್ಲಿ ನಿಲ್ಲುವದರಲ್ಲಿ ಅರ್ಥವಿಲ್ಲವೆಂದರಿತು ಅವರೆಲ್ಲ ಹೊರಟರು. ಆಗ ಪಡಯ್ಯನವರು ಅವರನ್ನು ತಡೆದು, "ಇಗಾ ಈಗ ಇನ್ನೊಂದು ಮಾತೂ ನಿಮ್ಮ ಕಿವಿಗೆ ಹಾಕೇಬಿಡತೀನಿ. ನಾಳೆ ಲಿಂಗಪ್ಪಗೌಡರು ಚಿಮಣಾನ ಹೊಲದ ಕಬಜಾ ತೊಗೊಳ್ಳಾಕ ಹೋಗೋವರದಾರ. ಅವರಿಗೋಟು ಬೆಂಬಲ ಆಗಲಿ ಅಂತ ನಾನೂ ಹೋಗಿರತೇನಿ. ಆಗ ಅದೂ ಒಂದು ನಂಡಃ ಕಾಯಕಾ ಅಂತ ತಿಳಿಬ್ಯಾಡ್ರಿ. ರೈತರೆಲ್ಲಾ ಗೌಡರಿಗೆ ನೆರವಾಗಿರೂದು ಪಾಡ" ಎಂದು ಮುಂದಿನ ತಮ್ಮ ಕಾರ್ಯಕ್ರಮದ ಬಗ್ಗೆಯೂ ಹೇಳಿ ಜನಾಪವಾದವನ್ನು ತಪ್ಪಿಸಿ ಕೊಂಡರು.

ಎಲ್ಲರೂ ಮರುಮಾತಾಡದೆ ಹೊರಟುಹೋದರು. ಪಡಯ್ಯನವರ ಶಿಷ್ಯ ವೃಂದವೂ ಕರಗಿತು.

ಆ ರಾತ್ರಿ ಲಿಂಗಪ್ಪಗೌಡನಿಗೆ ನಿದ್ದೆಯೇ ಹತ್ತಲಿಲ್ಲ. ತನ್ನ ಧೈರ್ಯದ ಬಗ್ಗೆ ತನಗೇ ಆಶ್ಚರ್ಯವಾಗಿತ್ತು. ಅಜರಾಣಿಯ ಕುರುಬಗೇರಿಯಲ್ಲಿ ಬೆಳೆದ ಅವನಿಗೆ

ಈ ಸುಖದ ಕಲ್ಪನೆ ಕೂಡ ಬಂದಿರುವದು ಸಾಧ್ಯವಿದ್ದಿಲ್ಲ. ಆದರೆ ಈಗ ಕಲ್ಪ ವೃಕ್ಷದ ನೆರಳಿನಲ್ಲಿಯೇ ಕುಳಿತಂತೆ ಅವನ ಸ್ಥಿತಿಯಾಗಿತ್ತು. ಬಾಹ್ಯವೈಭವದ ಗುರುತು ಅವನ ಅಂತರಂಗಕ್ಕೇ ಹತ್ತುವಂತಿರಲಿಲ್ಲ. ಪಾದಳ್ಳಿಯ ಗೌಡಿಕೆ ಅವನ ಕಲ್ಪನೆಗೂ ಮೀರಿ ದೊಡ್ಡದಾಗಿತ್ತು. ಗೌಡನಾಗುವ ಯೋಗ್ಯತೆ ಅವನಲ್ಲಿರಲಿಲ್ಲ. ಅಂತಲೇ ಹೆದರಿದ್ದ. ಪಡದಯ್ಯನವರ ಸ್ನೇಹ ಅವನ ಪಾಲಿಗೆ ವಜ್ರರಕ್ಷೆಯಾಗಿ ಬಂದಿತ್ತು. ಪಡದಯ್ಯನವರ ಅವಿಶ್ರಾಂತ ಪ್ರಯತ್ನವೋ, ಅಥವಾ ತನ್ನ ದೈವ ಹಣ್ಣಾಗುವ ಕಾಲ ಬಂದಿದ್ದರಿಂದಲೋ ಪಾದಳ್ಳಿಯ ಗೌಡಿಕೆ ಅವನ ಪಾಲಿಗೆ ಬಂದಿತ್ತು. ಅದನ್ನು ನಿಸ್ತರಿಸಿಕೊಳ್ಳುವ ಯೋಗ್ಯತೆಯಿಲ್ಲದಿದ್ದರೂ ಪಡೆದಷ್ಟೇ ಲಾಭವೆನ್ನುವ ಮನಸ್ಥಿತಿಯಲ್ಲಿ ಅವನಿದ್ದ.

ಇನ್ನು ಚಿಮಣಾ! ಪಡದಯ್ಯನವರ ಸನ್ನಿಧಿಯಲ್ಲಿ ಎಷ್ಟು ಗೊತ್ತಾಗ ಬೇಕೋ ಅಷ್ಟೇ ಅವಳ ಬಗ್ಗೆ ಪರಿಚಯವಿದ್ದದ್ದು. ಅವಳು ಜಾರಿಣಿ ಎಂಬ ಇತಿ ಹಾಸವೇ ಅವನ ಕಾಮವನ್ನು ಕೆರಳಿಸಿತ್ತು. ಇಂದು ಕಂಡ ಅವಳ ರೂಪ ಅವನ ಯೋಗ್ಯತೆಗೂ ಮೀರಿ ಶ್ರೇಷ್ಠವಾಗಿತ್ತು. ಪಡದಯ್ಯನವರ ಕಾರಸ್ಥಾನವೇ ಅದನ್ನೂ ತನಗೆ ತಂದುಕೊಟ್ಟಿತ್ತು. ಲಿಂಗಪ್ಪ ತನ್ನ ದೈವವನ್ನು ತಾನೇ ಹೊಗಳಿದ. ತಾನು ಬೇಡದೆ, ಈ ಐಶ್ವರ್ಯವೆಲ್ಲ ತನ್ನದಾಗಬೇಕಾದರೆ ತನ್ನ ಯೋಗ್ಯತೆಯೇ ದೊಡ್ಡ ದಿರಬಹುದೆಂದು ಭಾವಿಸಿದ. ಅದರಲ್ಲಿಯೂ ಚಿಮಣಾಳ ರೂಪ ಜ್ವಾಲೆಯಾಗಿ ಅವನ ಮನಸ್ಸನ್ನು ಸುಡಹತ್ತಿತು. ಆ ಆಸೆ ಅವನ ಕೀಳರಿಮೆಯನ್ನೂ ಮೆಚ್ಚಿ ಕುಣಿಯಹತ್ತಿತು. ಇವೊತ್ತು ಪಡದಯ್ಯನವರು ನಾಲ್ಕು ಜನರೆದುರು ಹೇಳಿದ ಮಾತನ್ನೇ ಆದಷ್ಟು ಬೇಗ ಗಟ್ಟಿಮಾಡಿಬಿಡಬೇಕೆಂದು ಸಂಕಲ್ಪ ಮಾಡಿಕೊಂಡ.

ಆದರೂ ಹೊರಗಿನ ಈ ವೈಭವವೆಲ್ಲ ಅವನ ವ್ಯಕ್ತಿತ್ವಕ್ಕೆ ತಲೆಭಾರವಾಗಿತ್ತು. ಅವನ ಅಂತರಂಗ ಇಂಥ ಹರ್ಷದ ಮಧ್ಯದಲ್ಲೂ ನರಳುತ್ತಿತ್ತು. ಆದರೆ ಆ ನೋವಿನ ಅರಿವು ಅವನಿಗಾಗುತ್ತಿದ್ದರೆ ಅವನ ಯೋಗ್ಯತೆ ಇನ್ನೂ ಹೆಚ್ಚ ಬೇಕಾಗಿತ್ತು.

:: ೪೦ ::

ಮರುದಿನ ನಾಗರಚವತಿ. ಶ್ರಾವಣಮಾಸದ ನಿರ್ವರ್ಣವಾದ ನಸುಕು ಮೂಡಿತು. ಹಿಂದಿನ ರಾತ್ರಿ ಸ್ವಲ್ಪ ಮಳೆಯಾಗಿದ್ದರಿಂದ ಇನ್ನೂ ಚಳಿಗಾಳಿ ಸುಳಿಯುತ್ತಿತ್ತು. ಅರುಣೋದಯದ ಕಾಲದಲ್ಲಿ ಬೆಳಗಿಗೆ ನಿತ್ಯದ ಉತ್ಸಾಹವಿರಲಿಲ್ಲ. ಬೂದಿಬೆಳಕು ಬಿಟ್ಟಬೇಸರದಿಂದಲೇ ಎಲ್ಲ ಕಡೆಗೂ ಪಸರಿಸಿತ್ತು. ಕಪ್ಪುಬಣ್ಣದ ಮೋಡಗಳು ಬಾನ ತುಂಬ ಹರಡಿಕೊಂಡಿದ್ದವು. ನಸುಕು ಒಂಟಿಯಾಗಿ ಕುಳಿತು ಅಳುತ್ತಿರುವಂತೆ ಕಾಣುತ್ತಿತ್ತು.

ಕೋಳಿ ಕೂಗಿತು. ಬೀಸುವಕಲ್ಲಿನ ಸಪ್ಪಳದೊಂದಿಗೆ ಅಲ್ಲಲ್ಲಿ ಹಾಡುವ ದನಿಯೂ ಕೇಳತೊಡಗಿತು. ಅಂದು ನಾಗರಚವತಿಯಾದ್ದರಿಂದ ಹೆಣ್ಣುಮಕ್ಕಳಿಗೆಲ್ಲ ಅವಸರದ ಕೆಲಸ ಕಾದಿತ್ತು. ಅತ್ತೆಯ ಮನೆಯಲ್ಲಿಯೇ ತವರು-ಮನೆಯ ನೆನಪು ಕಲಕುವ ದಿನ. ನಾಗರಚವತಿಯ ಭಾವಲಹರಿ ವಾತಾವರಣದಲ್ಲಿಯೇ ತೇಲಿ ಬಂದಂತಿತ್ತು.

ಪಡದಪ್ಪನವರ ಮಠದಲ್ಲಿ ಇದಾವ ಭಾವಲಹರಿಗೂ ಅವಕಾಶವಿರಲಿಲ್ಲ. ಬೆಳತನಕ ನಿದ್ದೆಯಿಲ್ಲದೆ ಉರಿಯುವ ಕಣ್ಣುಗಳಿಂದಲೇ ಲಿಂಗಪ್ಪಗೌಡ ನಸುಕನ್ನು ನೋಡಿದ. ಬೂದಿಬೆಳಕು ಮಠದಲ್ಲಿ ಸಾವಕಾಶವಾಗಿ ಪ್ರಕಟವಾಗುತ್ತಿತ್ತು. ಚಿಮಣಾಳ ನೆನಪು ಎದೆಯಲ್ಲಿ ಉರಿ ಹೊತ್ತಿಸಿದಂತಾಯಿತು. ಪಡದಯ್ಯನವರು ಆಗಲೇ ಎದ್ದು ಮೂಲೆಯಲ್ಲಿ ಮಲಗಿದ್ದ ಕರಿಯನನ್ನು ಕೂಗಿ ಎಬ್ಬಿಸುತ್ತಿದ್ದರು. 'ಕಮತಿಗ್ಯಾ ಅಂತ ಹೇಳಿಕೊಂತೀದಿ. ಭೂಮಿ ಬಿತ್ತಲಾಕ ಹೋಗೂ ದಿನಾ ಇಂದ. ನೀ ಇನ್ನೂ ಬಿದ್ದೀಯಲ್ಲಲೇ? ಏನ ಹೇಳಬೇಕಲೆ ನಿನಗ?" ಎಂದು ಗದರಿಸಿದರು.

ಕರಿಯ ಕಣ್ಣು ತೆರೆದು, ಮತ್ತೆ ಮುಚ್ಚಿದ. ಒಮ್ಮೆ ಜೋರಾಗಿ ಆಕಳಿಸಿದ. ಮೈ ಒಡಮುರಿದು ಎದ್ದ. "ನಿನ್ನೆ ಶೀತಾರ್-ಓಟು ಜಡಾ ಆತರಿ. ಅದಕ್ಕ ನಿದ್ದೀನ ಹೋಗಲಿಲ್ಲದು" ಎಂದು ಏನೇನೋ ಕಾರಣ ಹೇಳಿದ.

"ಹಾಂದಲೇ, ಬಿತ್ತಾಕ ಯಾವಾಗ ಹೋಗೂದು ಇನ್ನಮ್ಯಾಗ? ಈಟೊತ್ತಿಗೆ

ಎತ್ತು ತೊಗೊಂಡು ಸಜ್ಜಾಗಿರಬೇಕೋ, ಏನ ಹಾಸಿಗಿ ಹಿಡಿದು ಬೀಳಬೇಕೋ?" ಪಡದಯ್ಯನವರು ಮತ್ತೆ ಜಬರಿಸಿದರು. ಕುಂಟನೆವಗಳನ್ನು ಹೇಳುವದರಲ್ಲಿ ಕರಿಯನಿಗೆ ಸಮಾನರಾದವರೇ ಇರಲಿಲ್ಲ. "ಯಪ್ಪಾ, ನಮ್ಮದೂ ಖಾಸಗತ ಜಮೀನ ಆಗಿದ್ದರ ಹೊಂಡತಿದ್ದಿವಿ. ಯಾರದೋ ಹೊಲಾ ಬಿತ್ತಾಕ ಯಾಕರಿ ಇಷ್ಟ ತರಾತುರಿ? ಆತು ನಡೀರಿ, ನಾನೂ ಹೊಂಟೂಬಿಟ್ಟೆ"ಎಂದು ನಗೆಯಲ್ಲಿ ತೇಲಿಸಿಯೇ ನುಡಿದ.

"ನಾ ಯಾಕ ಬರಬೇಕೋ ಹೊಲಾ ಬಿತ್ತಾಕ? ಲಿಂಗಪ್ಪಗೌಡರು ನಿಮ್ಮ ಸಂಗಾಟ ಬರತಾರು. ಅವರು ಮುಂದಿರತಾರು,ನೀವ ಹಿಂದ ಹೋಗಿ ಬಿತ್ತಿ ಬರ್ರಿ."

ಲಿಂಗಪ್ಪಗೌಡನಿಗೆ ಪಡದಯ್ಯನವರು ತಮ್ಮ ಹೊಣೆಹಾರಿಸಿಕೊಳ್ಳುತ್ತಿದ್ದಾರೆಂದು ಅನಿಸಿತು. ಅಂತಲೇ ಎದ್ದು ಬಂದು, "ಸ್ವಾಮೇರ, ನನಗ ತಗಾಯಿ ಸಾಲದ ಯಾದೀ ಮಾಡೋದು ಓಟು ಕೆಲಸ ಐತಿ. ನನಗ ಬರಾಕ ಆಗೂದಿಲ್ಲ. ಹೋಲಾ ನೀವೂ ಬಿತ್ತಿ ಬರೂದೂ." ಎಂದು ಹೇಳಿಬಿಟ್ಟ.

"ಆತು ಗೌಡಿಕಿ ದಪ್ತರ ಹೊಸದಾಗಿ ಬಂದೈತಿ. ಹೊಸಾ ಹುರುಪಿನ್ಯಾಗ ಕೆಲಸಾ ಮಾಡದಿದ್ದರ ಹ್ಯಾಗ? ಮಾಡ್ರಿ. ನಾವ ಹೋಗಿ ಹೊಲಾ ಕಬಜಾ ತೊಗೊಂಡು ಬರತೇವು" ಎಂದು ಪಡದಪ್ಪನವರು ಅವನ ಮಾತಿಗೆ ಒಪ್ಪಿದರು.

ಲಿಂಗಪ್ಪಗೌಡ ಮತ್ತೆ ತನ್ನ ಹಾಸಿಗೆಯಲ್ಲಿ ಉರುಳಿ ಮುಸುಕು ಹಾಕಿಕೊಂಡ. ತಲೆಯಲೆಲ್ಲ ಚಿಮಣಾಳ ವಿಚಾರಗಳೇ ತುಂಬಿದ್ದವು. ಹೇಗೆ ಮಾಡಿ ಅವಳನ್ನು ತನ್ನ ಕಡೆಗೆ ಒಲಿಸಿಕೊಳ್ಳಬೇಕೆಂದು ಹಂಚಿಕೆ ಹಾಕಹತ್ತಿದ. ಹಾಗೆಯೇ ಜೊಂಪು ಹತ್ತಿತು. ವಾಲಿಕಾರ ಮಲ್ಲಪ್ಪ ಬಂದು ಕೂಗಿದಾಗಲೇ ಅವನಿಗೆ ಎಚ್ಚರವಾಯಿತು. ಪಡದಪ್ಪನವರು ಆಗ ಸ್ನಾನದ ಗಡಿಬಿಡಿಯಲ್ಲಿದ್ದರು. ಲಿಂಗಪ್ಪನೇ ಎದ್ದು ಹೊರಗೆ ಬರಬೇಕಾಯಿತು.

"ಕುಲಕರ್ಣ್ಯಾರು ಊರಿಗೆ ಹೊಂಟು ನಿತಾರರೀ. ಡೋಲಿಗೆ ಲಾಯಖ ಇದ್ದವರ ಯಾದಿ ತಯಾರ ಮಾಡ್ಯಾರಂತ. ಅದನ್ನ ನಿಮ್ಮ ಕೈಯಾಗ ಕೊಡಬೇಕಾಗೈತಂತರಿ. ಅದಕ ನಿಮ್ಮನ್ನ ಕರಕೊಂಡು ಬಾ ಅಂತ ಹೇಳಿಕಳಿಸ್ಯಾರ್ರಿ" ಎಂದು ಮಲ್ಲಪ್ಪ ವರದಿ ಮಾಡಿದ.

ಈಗ ಬರುತ್ತೇನೆಂದು ಹೇಳಿಕಳಿಸಿ ಲಿಂಗಪ್ಪಗೌಡ ಹೊರಡಲು ಸಿದ್ಧನಾದ. ಪಡದಪ್ಪನವರಿಗೆ ತಾನು ಹೊರಡುವ ಉದ್ದೇಶವನ್ನು ತಿಳಿಸಿದಾಗ ಅವರು "ಇಗಾ,

ಆ ಶ್ಯಾಮರಾಯ ಮಾಡಿದ ಯಾದಿಗೆ ನನ್ನ ಕೇಳದ ಸಹಿ ಹಾಕಬ್ಯಾಡ್ರಿ. ನನಗ ತೋರಿಸದ ಡೋಲಿನ ಯಾದಿ ಕಳಿಸಬಾರದು" ಎಂದು ಮುನ್ನೆಚ್ಚರಿಕೆ ಕೊಟ್ಟರು.

"ಈ ಮಾತು ನೀವು ಹೇಳಬೇಕೇನ್ರಿ?" ಎಂದು ಲಿಂಗಪ್ಪ ಔಪಚಾರಿಕವಾಗಿ ನುಡಿದು ಹೊರಬಿದ್ದ. ದಾರಿಯಲ್ಲಿ ಅವನಿಗೂ ವಿಚಾರ ಬಿತ್ತು. ಪಡದಪ್ಪನವರು ಮಾತುಮಾತಿಗೆ ಅಡ್ಡಬರುತ್ತಾರಲ್ಲ! ಎಷ್ಟು ದಿನ ಇವರ ಕೈಗೊಂಬೆಯಾಗಿ ಬಾಳಬೇಕು? ಗೌಡಿಕೆ ದೊರೆಯುವ ವರೆಗೆ ಅವರ ಮಾತು ಕೇಳಿದ್ದು ಸಾಕಾಗಲಿಲ್ಲವೇ? ಗೌಡನಾದ ಮೇಲೂ ಅವರ ಮಾತು ಕೇಳುವವೆಂದರೆ ಅವನಿಗೇ ನಾಚಿಕೆಯೆನಿಸಿತು. ಇದೇ ವಿಚಾರದಲ್ಲಿ ಲಿಂಗಪ್ಪ ಶ್ಯಾಮರಾಯನ ಮನೆಯ ಕಡೆಗೆ ಸಾಗಿದ.

ಶ್ಯಾಮರಾಯನ ಮನೆಯಲ್ಲಿ ಯಾರೂ ಇರಲಿಲ್ಲ. ಅವನು ಮನೆಯ ಕೀಲಿ ಹಾಕಿ ಹೊರಬಿದ್ದಿದ್ದ. ಅವನನ್ನು ನೋಡಿ ಲಿಂಗಪ್ಪ "ಎದ್ದಿರಾ?" ಎಂದು ನುಡಿದು ವಂದನೆ ಸಲ್ಲಿಸಿದ. "ಬಂದಿರಿ ನೆಟ್ಟಗಾತು" ಎಂದು ಶ್ಯಾಮರಾಯ ತನ್ನ ಕಿಸೆಯಿಂದ ಒಂದು ಕಾಗದವನ್ನು ತೆಗೆದು "ಇದು ನಾ ಮಾಡಿದ ಡೋಲಿನ ಜನರ ಯಾದಿ, ಮತ್ತು ತಗಾಯಿಸಾಲ ಬೇಕಾದ ರೈತರ ತಗಾಯಿಸಾಲದ ಪತ್ರಿಕೆ. ಇದಕ್ಕ ಸಹಿ ಹಾಕಿ ಕಳಿಸಿಕೊಡ್ರಿ." ಎಂದು ಹೇಳಿ ಆ ಯಾದಿಯನ್ನು ಲಿಂಗಪ್ಪನ ಕೈಗೆ ಕೊಟ್ಟು ಅವಸರದಿಂದ ಹೊರಡುವವನಿದ್ದ. ಆದರೆ ಲಿಂಗಪ್ಪ ಅವನನ್ನು ತಡೆದು ಹುಂಬತನದಿಂದ "ಅಲ್ರೀ ಕುಲಕರ್ಣ್ಯಾರ, ನಾ ಭೆಟ್ಟಿಯಾಗಿರದಿದ್ದರ ಈ ಯಾದಿ ಯಾರ ಕೈಯಾಗ ಕೊಡತಿದ್ದಿರಿ?" ಎಂದು ಕೇಳಿದ. ಶ್ಯಾಮರಾಯ ಅದರಿಂದೇನೂ ವಿಚಲಿತನಾಗದೆ "ಅದರಾಗೇನದ? ಮಾಮಲೇದಾರರ ಹೆಸರ್ಲೆ ಪತ್ತೆ ಬರದು ಟಪಾಲಿಗೆ ಹಾಕಿ ಬಿಡತಿದ್ದೆ." ಎಂದು ಸಹಜವಾಗಿ ಉತ್ತರವಿತ್ತನು.

"ಅಂದರ ನನ್ನ ಸಹಿಯಾಗದಃ ಯಾದಿ ಕಳಸಾಕ ಬರತೈತೇನು?" ಲಿಂಗಪ್ಪ ಮತ್ತೆ ಕೇಳಿದ. ಶ್ಯಾಮರಾಯ ಅವನಿಗೆ ವಿವರಿಸಿ ಹೇಳುವಂತೆ, "ನೋಡ್ರಿ ಗೌಡರ, ಗೌಡರು ಸಹಿಮಾಡಿ ಕಳಿಸೋ ಕಾಗದ ಬ್ಯಾರೆ ಇರತಾವ. ಆದರ ಇವನ್ನ ಕುಲಕರ್ಣಿ ಸಹಿಮಾಡಿ ಕಳಿಸಿದರೂ ನಡೀತದ." ಎಂದು ತಿಳಿಸಿದ.

"ನೀವು ಮಾಡಿದ ಯಾದಿ ಬರಾಬರಿ ಇದ್ದಿಲ್ಲ ಅಂದರ ಹ್ಯಾಗರಿ?" ಲಿಂಗಪ್ಪ ಬಿಡುವಂತೆ ಕಾಣಲಿಲ್ಲ.

"ಅದರ ಜವಾಬದಾರಿ ನನ್ನ ಮ್ಯಾಲೆ."

"ಹಾಂ, ಹಾಡ್ಯೆಶೆಲ್ಲ! ನಂದೇನೂ ಜವಾಬ್ದಾರಿ ಇಲ್ಲಃ ಇಲ್ಲೇನು ಹಗಾದ?

ಇಗಾ, ಈಗಽ ನಿಮಗ ಹೇಳಿಟ್ಟಿರತೀನಿ. ನನ್ನ ಸಹಿ ಮಾಡಸದ, ನನಗ ತೋರಸದ ನೀವೇನೂ ಕಳಸೂದು ಮಾಡಬ್ಯಾಡ್ರಿ. ಹೀಗ ಅಂದೆ ಅಂತ ಸಿಟ್ಟಿಗೆ ಬರಬ್ಯಾಡ್ರಿ" ಲಿಂಗಪ್ಪನ ದನಿಯಲ್ಲಿ ಆವೇಶವೂ ಇತ್ತು, ಹೆದರಿಕೆಯೂ ಇತ್ತು.

ಶ್ಯಾಮರಾಯನಿಗೆ ಇದೆಲ್ಲ ಮೋಜೆನಿಸಿತು. ತನ್ನ ವೃತ್ತಿಯ ವ್ಯಾಪ್ತಿಯಲ್ಲಿ ಅವನೆಷ್ಟೋ ಗೌಡರನ್ನು ಕಂಡಿದ್ದ. ಒಬ್ಬೊಬ್ಬರೂ ಒಂದೊಂದು ಮಾದರಿಯಾಗಿ ದ್ದರು. ಲಿಂಗಪ್ಪನದೂ ಇನ್ನೊಂದು ಮಾದರಿಯಷ್ಟೇ. ಹೊಸದಾಗಿ ಬಂದ ಅಧಿಕಾರ ಅವನಲ್ಲಿಯ ಸ್ವಾಭಾವಿಕ ವಿನಯವನ್ನೇ ಹಾಳುಮಾಡಿದೆಯೆಂಬುದನ್ನು ತಿಳಿದು ಕೊಳ್ಳಲು ತಡವಾಗಲಿಲ್ಲ. ಹುಂಬತನದೊಡನೆ ಅಧಿಕಾರದ ಉನ್ಮಾದವೊಂದು ತಲೆಗೇರಿತ್ತು. ಆದರೂ ವ್ಯಕ್ತಿತ್ವದ ಹೀನತೆ ಪ್ರತಿಕ್ಷಣಕ್ಕೂ ವ್ಯಕ್ತವಾಗುವಂತಿತ್ತು. ಶ್ಯಾಮರಾಯ ಅದನ್ನೇನೂ ಮನಸ್ಸಿಗೆ ಹಚ್ಚಿಕೊಳ್ಳದೆ, "ಛೇ ಅದಕ್ಯಾಕರಿ ಸಿಟ್ಟು? ನೀವು ಜವಾಬ್ದಾರಿ ತೊಗೋತೀನಿ ಅಂದಮ್ಯಾಲೆ ಕೇಳೋದೇನು? ನೀವಽ ಇಂದಿನಿಂದ ಎಲ್ಲಾ ನೋಡಿಕೋಳ್ರಿ" ಎಂದು ಹೇಳಿ ನಮಸ್ಕರಿಸಿ ಹೊರಟ.

ನಿನ್ನಿನ ದಿನವೇ ಗಂಗಾಧರಯ್ಯನವರು ಶಿವಯೋಗಿಸ್ವಾಮಿಗಳನ್ನು ಶ್ಯಾಮ ರಾಯನ ಜೊತೆಗೆ ಇಂದುಪುರಕ್ಕೆ ಕಳಿಸಬೇಕೆಂದು ನಿರ್ಧರಿಸಿದ್ದರು. ಈ ವಿಚಾರ ವನ್ನು ತಮ್ಮ ಜೊತೆಗೆ ಮಠಕ್ಕೆ ಬಂದಿದ್ದ ಎಲ್ಲ ಜನರಿಗೂ ತಿಳಿಸಿಬಿಟ್ಟಿದ್ದರು. ಬಾಳಾಚಾರ್ಯರ ಮಾತಿನಲ್ಲಿ ಅವರಿಗೆ ಅಮಿತ ವಿಶ್ವಾಸವಿತ್ತೆಂದೇ ಈ ದೃಢನಿಶ್ಚಯ ವನ್ನು ಅವರು ಕೈಕೊಂಡಿದ್ದರು. ಆದರೂ ಒಬ್ಬನೇ ಒಬ್ಬ ಮಗನನ್ನು ದೂರದ ಊರಿಗೆ ಕಳಿಸಿಕೊಡುವದೆಂದರೆ ಅವರ ಜೀವದ ಸುತ್ತು ಬಂದಿತ್ತು. ಮಠದ ಅಭಿ ಮಾನರಕ್ಷಣೆಯ ಕಾರಣವೊಂದಿರದಿದ್ದರೆ ಅವರು ಈ ಮಾತಿಗೆ ಒಪ್ಪುತ್ತಿದ್ದರೋ ಇಲ್ಲವೋ ಹೇಳುವದು ಬಿಗಿಯಾಗಿತ್ತು.

ಶಿವಯೋಗಿಸ್ವಾಮಿಗಳು ಊರು ಬಿಟ್ಟು ಹೊರಡಲಿರುವರೆಂಬ ಸುದ್ದಿ ಈಗಾಗಲೇ ಊರ ತುಂಬ ಹರಡಿತ್ತು. ಜನರಿಗೆಲ್ಲ ಶಿವಯೋಗಿಗಳ ವಿಷಯದಲ್ಲಿ ವಿಲಕ್ಷಣವಾದ ನಂಬಿಕೆಯಿತ್ತು. ಅವರ ಮಹಿಮೆಯನ್ನು ಯಾರೂ ಧಿಕ್ಕರಿಸು ವಂತಿರಲಿಲ್ಲ. ಹಾಗೆ ಧಿಕ್ಕರಿಸಿದ ಸಂಗತಿಗಳಾಗಿರಲಿಲ್ಲವೆಂತಲ್ಲ. ಮೊನೆಮೊನ್ನೆ ಶಿವಯೋಗಿಗಳು ಎಂದಿನಂತೆ ಕೋರಾನ್ನಭಿಕ್ಷೆಗೆ ಹೋಗಿದ್ದಾಗ ಬಾಳಾರಾಮ ಮಾರವಾಡಿಯು ಅವರ ಜೋಳಿಗೆ ಕಸಿದುಕೊಂಡುಬಿಟ್ಟಿದ್ದ. ಮಠದಲ್ಲಿ ಪಡ ದಯ್ಯನವರು ತಿರುಗಿ ಬಂದ ಮೇಲೆ, ಶಿವಯೋಗಿಗಳು ಮಠದ ಹೆಸರಿನಲ್ಲೇಕೆ

ಭಿಕ್ಷೆಬೇಡುತ್ತಾರೆಂದು ಅವನ ವಾದವಾಗಿತ್ತು. ಜನರಿಗೆ ಈ ಸುದ್ದಿ ತಿಳಿದಾಗ ಮುರಮುರನೆ ಮರುಗಿದ್ದರು. ಕೆಲವು ತಲೆತಿರುಕರು ಮಾರವಾಡಿಯ ಅಂಗಡಿಯ ಹಗೆ ಹೋಗಿ ಅವನನ್ನು ಬೈದೂ ಬಂದಿದ್ದರು. ಊರಲ್ಲಿ ಇಂಥ ಸಂಗತಿಗಳಾಗು ತ್ತಿರುವುದರಿಂದಲೇ ಗಂಗಾಧರಯ್ಯನವರು ಶಿವಯೋಗಿಗಳನ್ನು ಕಳಿಸಲು ಒಪ್ಪಿ ಕೊಂಡದ್ದು. ಈ ಸಂಗತಿಯೂ ಊರವರಿಗೆ ತಿಳಿದಿತ್ತು. ಶಿವಯೋಗಿಗಳು ಊರು ಬಿಟ್ಟು ಹೋಗುವುದೆಂದರೆ ಕೆಡುಗಾಲದ ಸೂಚನೆಯೆಂದೇ ಅವರು ಭಾವಿಸಿದರು.

ಶಿವಯೋಗಿಗಳನ್ನು ಕಳಿಸಿಬರಲು ಜನರು ಹಿಂಡು-ಹಿಂಡಾಗಿ ಹೋಗುತ್ತಿರು ವದು ಲಿಂಗಪ್ಪಗೌಡನ ಕಣ್ಣಿಗೆ ಬಿತ್ತು. ಹೋಗುತ್ತಿದ್ದವರಲ್ಲಿ ಒಬ್ಬ ಅಧಿಕಪ್ರಸಂಗಿ ಸುಮ್ಮನಿರಲಾರದೆ, “ಗೌಡರು ದೊಡ್ಡ ಸ್ವಾಮೇರ್ನ ಕಳಿಸಿಕೊಡತಾರು. ನಮ್ಮ ಮರಿಸ್ವಾಮಿಗಳು ಅವರ ಗುರು ಅಲ್ಲ ಕಾಣತೈತಿ” ಎಂದು ವ್ಯಂಗ್ಯವಾಗಿ ಇನ್ನೊಬ್ಬ ನೆದುರು - ಆದರೆ ಲಿಂಗಪ್ಪನಿಗೆ ಕೇಳಿಸುವಂತೆಯೇ - ನುಡಿದಿದ್ದ. ಈ ಮಾತು ಕೇಳಿ ಲಿಂಗಪ್ಪನಿಗೆ ನೊಣ ಕಡಿದಂತಾಯಿತು. ಊರಗೌಡನನ್ನು ಪಡದಪ್ಪನ ಬಾಲ ಎಂದು ಜನರು ತಿಳಿದಿರುವರೇ ಎಂಬ ಸಂಶಯವೂ ಬಂದಿತು. ಅವನು ನಿಜ ವಾಗಿಯೂ ಊರಿಗೆ ಹೊಸಬನಾಗಿದ್ದ. ಶಿವಯೋಗಿಗಳ ಬಗ್ಗೆ ಜನರಿಗೆ ಇಷ್ಟೊಂದು ಶ್ರದ್ಧೆಯಿರಬೇಕಾದರೆ ಅವರ ಮಹಿಮೆ ದೊಡ್ಡದಿರಬೇಕೆಂದೆನಿಸಿತು. ಹಾಗಾದರೆ ತಾನೂ ಮಠದ ಶಿಷ್ಯನೆಂದು ಜನರ ಮೇಲೆ ‘ಛಾಪು’ ಹಾಕುವ ಈ ಸುಸಂಧಿಯ ನ್ನೇಕೆ ಕಳೆದುಕೊಳ್ಳಬೇಕೆಂದು ಲೆಕ್ಕಹಾಕಿದ. ಬಹಳವಾದರೆ ಒಂದು ನಮಸ್ಕಾರ ಖರ್ಚಾದೀತು, ಎಂದುಕೊಂಡು ತಾನೂ ನದಿಗೆ ಹೊರಟ.

ಶ್ರಾವಣದ ನದಿ ಎರಡೂ ದಡ ತುಂಬಿ ಸೂಸಿ ಹರಿಯುತ್ತಿತ್ತು. ಶ್ಯಾಮ ರಾಯ ಆಗಲೇ ನಾವೆಯನ್ನು ಹತ್ತಿ ಕುಳಿತಿದ್ದ. ದಂಡೆಗುಂಟ ಜನರು ಸಾಲು ಸಾಲಾಗಿ ನಿಂತಿದ್ದರು. ಶಿವಯೋಗಿಗಳು ಬರುವರೆಂದು ಅಂಬಿಗರು ದಾರಿಕಾಯು ತ್ತಿದ್ದರು. ಅಷ್ಟರಲ್ಲಿ ಗಂಗಾಧರಯ್ಯನವರು ಮಗನ ಕೈಹಿಡಿದುಕೊಂಡು ಅಲ್ಲಿಗೆ ಬಂದರು. ಅವರ ಹಿಂದೆ ದೊಡ್ಡದೊಂದು ಪರಿವಾರವೇ ಬರುತ್ತಿತ್ತು. ಮೈಮೇಲಿ ಕೇಸರಿ ಬಟ್ಟೆಯ ಒಂದು ಕಫನಿ, ತಲೆಗೊಂದು ಕಿವಿಟೊಪ್ಪಿಗೆ, ಕಾಲಲ್ಲಿ ಪುಟ್ಟ ಕಪಾವಿಗೆಗಳನ್ನು ಧರಿಸಿಕೊಂಡು ಬಂದ ಶಿವಯೋಗಿಗಳು ಶಿವನ ಬಾಲ್ಯವನ್ನೇ ನೆನಪು ತರುವಂತಿದ್ದರು. ಶುಭ್ರವಾದ ವಿಭೂತಿ, ತೇಜಃಪುಂಜಗಳಾದರೂ ಆರ್ದ್ರ ಕುತೂಹಲದಿಂದ ತುಂಬಿದ ಕಣ್ಣುಗಳು, ಪ್ರಸನ್ನವಾದ ಮಂದಹಾಸ, ಸಾತ್ವಿಕತೆ

ಶಿಶುವೇಷದಲ್ಲಿ ಈ ಲೋಕವನ್ನು ನೋಡಬಂದಂತೆ ಅವರ ನಿಲುವು ಕಂಗೊಳಿಸುತ್ತಿತ್ತು.

ಜನರೆಲ್ಲ ಒಬ್ಬೊಬ್ಬರಾಗಿ ಬಂದು ಸ್ವಾಮಿಗಳ ಪಾದ ಮುಟ್ಟಿ ನಮಸ್ಕರಿಸುತ್ತಿದ್ದರು. ಹೆಣ್ಣುಮಕ್ಕಳು ಮಾತ್ರ ಬಿಕ್ಕಿಬಿಕ್ಕಿ ಅಳುತ್ತಿದ್ದರು. ಉಳಿದವರೆಲ್ಲರೂ ಮೌನವಾಗಿದ್ದರು. ನದಿಯ ಆಚೆಯ ದಂಡೆಗೂ, ನದಿಯ ವಿಶಾಲವಾದ ಪಾತ್ರದ ಮೇಲೂ ಒರಗಿದ್ದ ಶ್ರಾವಣ-ಮೇಘಗಳಂತೆ, ವಾತಾವರಣದ ಮೇಲೆಯೇ ಮೌನದ ಭಾರ ಮಲಗಿತ್ತು. ಅದನ್ನು ಮೀರಿಸುವ ಪ್ರಸನ್ನತೆಯಿಂದ ಸ್ವಾಮಿಗಳು ಎಲ್ಲರ ನಮಸ್ಕಾರಗಳನ್ನೂ ಸ್ವೀಕರಿಸಿದರು. ಲಿಂಗಪ್ಪಗೌಡ ತಾನೇಕೆ ಹಿಂದುಳಿಯಬೇಕೆಂದು ನಮಸ್ಕರಿಸಲು ಮುಂದೆ ಬಂದ. ಆದರೆ ಸ್ವಾಮಿಗಳು ಅವನಿಗೆ ಪಾದ ಮುಟ್ಟಲು ಅವಕಾಶ ಕೊಡದೆ ಮುಂದೆ ಸಾಗಿಬಿಟ್ಟರು. ಲಿಂಗಪ್ಪನಿಗೆ ಸಿಡಿಲು ಬಡಿದಂತಾಯಿತು. "ಸ್ವಾಮೇರ್ಽ, ಗೌಡರು ಪಾದಕ್ಕ ಬೀಳಲಿಕ್ಕೆ ಬಂದಾರ್ರಿ!" ಎಂದು ಕೂಡಿದವರಲ್ಲೊಬ್ಬ ಕೂಗಿ ಹೇಳಿದ. ಸ್ವಾಮಿಗಳು ಹಿಂತಿರುಗಿ, ಅದೇ ಪ್ರಸನ್ನತೆಯಿಂದ, "ಅಂವಾ ಬೀಳಬೇಕಾದ ಪಾದ ಇಲ್ಲಿಲ್ಲ. ಮಠದಾಗ ಅದಾವು" ಎಂದು ಹೇಳಿ ನಾವೆಯನ್ನು ಹತ್ತಿದರು.

ನಾವೆ ಗಂಭೀರವಾಗಿ ನದಿಯ ನೀರನ್ನೊದ್ದು ಮುಂದೆ ಸಾಗಿತು. ನಾವೆಯ ಮೇಲೆ ಜನರ ಕಡೆಗೆ ತಿರುಗಿ ಶಿವಯೋಗಿಗಳು ಮುಗುಳುನಗೆ ಬೀರುತ್ತ ನಿಂತಿದ್ದರು. ದಂಡೆಯಲ್ಲಿದ್ದವರೆಲ್ಲ ಕೈಮುಗಿದರು. ನಾವೆ ಕಣ್ಣುಮರೆಯಾಗುವ ವರೆಗೆ, ಶಿವಯೋಗಿಗಳ ತೇಜೋಮೂರ್ತಿ ಮಿಂಚಿನ ಎಳೆಯಾಗಿ ಕಾಣುವ ವರೆಗೆ ಜನರು ಎವೆಯಿಕ್ಕದೇ ನೋಡಿಯೇ ನೋಡಿದರು. ಪಾದಳ್ಳಿಯ ಪುಣ್ಯವೇ ತೇಲಿ ಹೋಗುತ್ತಿರುವಂತೆ ಕೆಲವರಿಗನಿಸಿತು. ಮತ್ತೆ ಕೆಲವರು ಧೋತರದ ಚುಂಗಿನಿಂದ ಕಣ್ಣನ್ನು ಒರೆಸಿಕೊಳ್ಳುತ್ತ "ಕಲಿಕಾಲ, ಏನ ಮಾಡೂದೈತಿ? ಇಂಥಾ ಸ್ವಾಮೇರ್ನ ಊರಾಗ ಉಳಿಸಿಕೊಳ್ಳೊ ಪುಣ್ಯೇವು ನಮ್ಮದಲ್ಲ!" ಎಂದು ಉದ್ಗಾರ ತೆಗೆದರು.

ಜನರು ಒಬ್ಬೊಬ್ಬರಾಗಿ ಮನೆಗೆ ತೆರಳಿದರು. ಲಿಂಗಪ್ಪನೂ ತಿರುಗಿದ. ಆದರೆ ಅವನ ಮನಸ್ಸು ಮಾತ್ರ ಚಿಂತೆಗೀಡಾಗಿತ್ತು. ಮೊದಲಿನಿಂದಲೂ ಹುಂಬರ ಸಹವಾಸದಲ್ಲಿಯೇ ಬಾಳು ಕಳೆದ ಅವನಿಗೆ ಧರ್ಮದ ವಿಷಯವಾಗಿ ಭಯ ಮಾತ್ರ ಇತ್ತು. ಈಗ ಈ ಹೊಸ ಊರಲ್ಲಿ, ತನ್ನ ಬಾಳುವೆ ಇನ್ನೂ ನೆಲೆಗೆ ಬರಬೇಕಾದ ಕಾಲದಲ್ಲಿ, ಈಗ ನಡೆದ ಸಂಗತಿ ರಹಸ್ಯಮಯವಾಗಿಯೇ ಕಂಡಿತು. ಶಂಕರಪ್ಪ

ಗೌಡರ ಆಸ್ತಿಗೆ ತಾನು ವಾರಸದಾರನಾದದ್ದು, ಮಗನೆಂದು ಸುಳ್ಳು ಹೇಳಿದ್ದು, ಚೆನ್ನಮ್ಮಣ್ಣಿಯ ವಿಷಯವಾಗಿ ಮನಸ್ಸಿನಲ್ಲಿ ಮೂಡಿದ ಬಯಕೆ ಇವೆಲ್ಲ ಪಾಪವೆಂದು ಅವನಿಗೆ ಮಸುಕಾಗಿ ಮನವರಿಕೆಯಾಗಿತ್ತು. ಈಗ ಸ್ವಾಮಿಗಳು ತನ್ನನ್ನು ತಿರಸ್ಕರಿಸಿದ್ದಕ್ಕೆ ಅದೇ ಕಾರಣವಿರಬಹುದೇ ಎಂದು ತಿಳಿದುಕೊಳ್ಳುವ ಕುತೂಹಲವೂ ಹುಟ್ಟಿತು.

"ಅಂತಾದ್ದೇನು ಗುಣಾ ಅವರಲ್ಲಿ ಕಂಡೀರಿ?" ಎಂದು ಅಲ್ಲಿ ನೆರೆದ ಒಬ್ಬಿಬ್ಬರನ್ನು ಪ್ರಶ್ನೆಮಾಡಿದ. ಅವರಿಗೂ ಹೇಳುವದೇ ಬೇಕಾಗಿತ್ತು. ಶಿವಯೋಗಿಗಳನ್ನು ಕಳಿಸುವ ಈ ಪ್ರಸಂಗದಲ್ಲಿ ಅವರೆಲ್ಲರಲ್ಲಿಯೂ ಧಾರ್ಮಿಕಭಾವನೆ ಜಾಗೃತವಾಗಿತ್ತು. ಅದರಲ್ಲಿ ಪರವೂರಿನವನೊಬ್ಬ ಈ ವಿಷಯಕ್ಕೆ ಕೇಳಿದಾಗ ಸುಮ್ಮನಿರಲಾದೀತೇ? ಶಿವಯೋಗಿಗಳ ಮಹಿಮೆ ಊರ ಅಭಿಮಾನದ ಸೊತ್ತು. ಪಾದಳ್ಳಿಯಲ್ಲಿ ಯಾರನ್ನು ಕೇಳಿದರೂ ಅವರ ಬಗ್ಗೆ ಬೇಕಾದಷ್ಟು ಕತೆಗಳನ್ನು ಹೇಳುತ್ತಿದ್ದರು. ಈಗಲೂ, ಹಾಗೆಯೇ ಆಯಿತು.

"ಅವರು ಯಾರಂತ ತಿಳದೀರಿ ಯಪ್ಪಾ? ನಮ್ಮ ಹಿಂದಿನ ಸ್ವಾಮೇರಿದ್ದಿಲ್ಲರಿ ಸದಾಶಿವಯೋಗಿಗಳೂ ಅಂತ. ಅವರs ಅವತಾರ ಆಗಿ ಬಂದಾರು. ಪಾದಳ್ಳಿ" ಬಿಟ್ಟು ನಾ ಎಲ್ಲ್ಯೂ ಹೋಗಾಣಿಲ್ಲಾ ಅಂತ ಅವರು ಮುಕ್ಕಟ್ಟs ಹೇಳಿದ್ದರರೀ ಎಂದು ಭಯಭಕ್ತಿಗಳಿಂದ ಕೂಡಿ ಒಬ್ಬ ಭಕ್ತ ನುಡಿದ. ಉಳಿದವರಿಗೂ ಆವೇಶ ತುಂಬಿತು. ತಲೆಗೊಬ್ಬರು ಒಂದೊಂದು ಕತೆ ಹೇಳಿದರೂ ಅವರೆಲ್ಲ ಹೇಳಿದ ಕತೆ ಪಾದಳ್ಳಿಯ ಗುರುಪರಂಪರೆಯ ಇತಿಹಾಸವನ್ನೇ ರೂಪಿಸುವಂತಿತ್ತು. ಲಿಂಗಪ್ಪ ಬೆರಗಿನಿಂದ ಅಗಲವಾದ ಕಣ್ಣು ತೆರೆದು ಕೇಳಿದ. ಅವರು ಹೇಳಿಯೇ ಹೇಳಿದರು.

ಪದವಯ್ಯನಿಗಿಂತಲೂ ಮೊದಲು ಮಠದ ಸ್ವಾಮಿಗಳಾಗಿದ್ದ ಸದಾಶಿವ ಯೋಗಿಗಳು ಐಕ್ಯವಾಗುವ ಕಾಲಕ್ಕೆ ಅವರ ಭಕ್ತರೆಲ್ಲ ಗೋಳಿಟ್ಟರು. ಆಗ ಅವರೇ ಅಪ್ಪಣೆ ಕೊಡಿಸಿದರಂತೆ: "ಯಾಕ ಅಳತೀರಿ. ನಾನು ಈ ದೇಹ ಬಿಟ್ಟರೂ ಮತ್ತ ಹುಟ್ಟಿ ಬಂದು ನಿಮ್ಮ ಸೇವಾ ಮಾಡತೀನಿ. ನಾನು ಹುಟ್ಟಿದ್ದಕ್ಕ ಗುರುತು ಅಂದರ ನಮ್ಮ ಮಠದಾಗಿನ ಆಕಳಾ ಹೋರಿ ಕರಾ ಈಯತೈತಿ. ಯಾವ ಕೂಸಿಗೆ ಆಕಳ ಮೊಲಿ ಉಣಸತೈತೋ ಅದs ನಾನು ಅಂತ ತಿಳೀರಿ" ಈ ಮಾತನ್ನು ಭಕ್ತರೆಲ್ಲರೂ ನೆನಪಿನಲ್ಲಿಟ್ಟಿದ್ದರು. ಶಿವಯೋಗಿಗಳು ಹುಟ್ಟಿದಾಗ ಮಠದ ಆಕಳು ಹೋರಿಯನ್ನೇ ಈದಿತ್ತು. ಆದರೆ ಹುಟ್ಟಿದ ಕೂಡಲೆ ಹೋರಿ

ಬಿದ್ದು ಸತ್ತೂ ಹೋಯಿತು. ಅದೇ ವೇಳೆಗೆ ಶಿವಯೋಗಿಗಳ ತಾಯಿಯೂ ಕೈಲಾಸ ಕಂಡಳು. ಹಾಲಿಲ್ಲದ ಕೂಸು ಅಳುವದನ್ನು ನೋಡಲಾರದೆ, ಗಂಗಾಧರ ಯ್ಯನವರು ಕೂಸನ್ನೊಯ್ದು ಆಕಳ ಮೊಲೆಗೆ ಹಚ್ಚಿದರು. ತೊರೆದು ನಿಂತ ಮೊಲೆಗಳಿಂದ ಆಕಳೂ ಬಾಯ್ಬಿಡುತ್ತಿತ್ತು. ಕೂಸನ್ನು ಕಂಡ ಕೂಡಲೆ, ಕೂಸಿನ ನೆತ್ತಿಯನ್ನು ಚರಚರ ನೆಕ್ಕಿತಂತೆ. ಕೂಸು ಅಳುವದನ್ನು ಬಿಟ್ಟು, ಆಕಳ ಮೊಲೆ ಯುಂಡು ತಣಿದು ಆಡಹತ್ತಿತು.

ಲಿಂಗಪ್ಪನಿಗೆ ಶಿವಯೋಗಿಗಳ ಮಹಿಮೆಯ ಬಗ್ಗೆ ಖಾತ್ರಿಯಾಯಿತು. ಈ ಕತೆ ಅವನ ಹೃದಯದ ಮೇಲೆ ಮರೆಯುಲಾಗದ ಪ್ರಭಾವವನ್ನು ಬೀರಿತು. "ಅದು ಅಷ್ಟs ಅಲ್ಲರಿ! ಇನ್ನೂ ಮುಂದೈತಿ ಕೇಳರಿ. ಸ್ವಾಮೇರ ಪರಬಾವ ಈಟs ಅಂತ ಮಾತಿಲೆ ಹ್ಯಾಗ ಹೇಳಬೇಕರಿ ಅದನ್ನ?" ಎಂದು ಮತ್ತೊಬ್ಬ ಇನ್ನೊಂದು ಕತೆಯ ಎಳೆಯನ್ನು ಜಗ್ಗಿ ನಿರೂಪಿಸಹತ್ತಿದ. ಲಿಂಗಪ್ಪ ಅದಕ್ಕೂ ಕಿವಿ ನೀಡಿದ.

ಶಿವಯೋಗಿಗಳಿಗೆ ಮಾತು ಬಂದೊಡನೆ ಅವರ ಮಾತುಗಳಿಗೆ ಕಣಿ ಹೇಳುವ ಸಾಮರ್ಥ್ಯ ಬಂದಿತ್ತು. ಅವರು ಹೇಳಿದ ಮಾತುಗಳೆಲ್ಲ ಹಿರಿಯ ಸ್ವಾಮಿಗಳು ಹೇಳಿದ ಮಾತುಗಳೇ ಆಗಬೇಕೆ? ಪುಣ್ಯದ ಅಂಶ ಆನುವಂಶಿಕವಾಗಿ ಇಳಿದು ಬಂದಂತಿತ್ತು. ಅವರಾಡಿದ ಮಾತುಗಳಿಗೆ ಅರ್ಥ ಹಚ್ಚಹೋಗಿ ಒಳ್ಳೊಳ್ಳೆಯವರೂ ಮಣ್ಣುಮುಕ್ಕಿದ್ದರು. ಗಂಗಾಧರಯ್ಯನವರು ಈ ಪುಣ್ಯದ ಬೀಜವನ್ನು ಜೋಕೆ ಯಿಂದ ಕಾಪಾಡುತ್ತಿದ್ದರು.

ಒಮ್ಮೆ ಹೀಗಾಯಿತು. ಶಂಕರಪ್ಪಗೌಡರು ಸಾಯುವದಕ್ಕಿಂತ ಮೊದಲು ಕೆಲ ದಿನಗಳಿರಬೇಕು. ಕಾ:ಲರಾ ಪಿಡಗು ಅದೇ ಪ್ರಾರಂಭವಾಗಿತ್ತು. ಹೊಲೆಗೇರಿ ಯಲ್ಲಿ ಬಾಳ್ಯಾ ಒಬ್ಬನೇ ಆ ಪಿಡುಗಿಗೆ ಆಹುತಿಯಾಗಿದ್ದ. ಶಿವಯೋಗಿಗಳು ಅಂಗಳದಲ್ಲಿ ಆಟವಾಡುತ್ತಿದ್ದವರು, ತಟ್ಟನೆ ಏನೋ ನೆನಪಾದಂತಾಗಿ, "ಬೆಳದದ್ದು ಅಳೀತೈತಿ; ಅಳದದ್ದು ಬೆಳೀತೈತಿ; ಉಳಿದದ್ದೆಲ್ಲಾ ಹಳ್ಳಾಕೂಡತೈತಿ" ಎಂದು ನುಡಿದುಬಿಟ್ಟರು. ಸಂಬಂಧಸೂತ್ರವಿಲ್ಲದ ಈ ಮಾತು ಕೇಳಿ ಅಲ್ಲಿದ್ದವರಿಗೆಲ್ಲ ಆಶ್ಚರ್ಯವಾಯಿತು. ಗಂಗಾಧರಯ್ಯನವರಿಗೂ ಅದರರ್ಥ ಹೊಳೆದಿರಲಿಲ್ಲ. ಆದರೆ ಅದರ ಪರಿಣಾಮ ಮಾತ್ರ ಜನರ ಮನಸ್ಸಿನ ಮೇಲಾಯಿತು. ಮೋಡಿ ಹಾಕಿ ದಂತೆ ಕೇಳಿದವರಿಗೆಲ್ಲ ಆ ಮಾತಿನ ಗುಂಗು ಹಿಡಿಯಿತು.

ಆಗ ಯಾರೋ ಬಂದು ಬಾಳಾಚಾರ್ಯರಿಗೆ ಈ ಮಾತಿನ ಅರ್ಥವೇನಿರ

ಬಹುದೆಂದು ಕೇಳಿದರು. ಆಚಾರ್ಯರಿಗೂ ಬಹಳ ಹೊತ್ತು ತಲೆ ತುರಿಸಿಕೊಳ್ಳ
ಬೇಕಾಯಿತು. ಅವರು ಸದಾಶಿವಯೋಗಿಗಳ ಜೊತೆಯವರಾದ್ದರಿಂದ ಒಂದು
ಸಂಗತಿ ಅವರ ನೆನಪಿಗೆ ಬಂದು ಹೇಳಿದರು: "ಹಾಂ, ನೆನಪಾತು ನೋಡು ! ಹಿರೇ
ಸ್ವಾಮಿಗೋಳು ಆಡಿದ ವಾಕ್ಯ ಇದು. ಅವೊತ್ತ ಮಠದಾಗ ಪುರಾಣ ಅದೇ
ಮುಗಿಸಿದ್ದರು. ಆಗ ಕಣ್ಣುಮುಚ್ಚಿದವರಽ ತಟ್ಟನ ಇದಽ ಮಾತು ಆಡಿದ್ದರು.
ಊರಾಗ ಬೆಳದವರು ಹೋಗತಾರ. ಕವಡೀ ಕಿಮತ್ತಿನಾವ ದೊಡ್ಡ ಮನಶ್ಯಾ ಆಗಿ
ಮೆರೀತಾನ. ಅವನ ಪುಂಡಾಟಿಕಿಯೊಳಗ ಊರು ಹಳ್ಳಾಹಿಡಿದುಹೋಗತದ
ಅಂತ ಅರ್ಥಾನೂ ಹೇಳಿದ್ದರು. ಆಗಽ ಜಾಗೀರದಾರ ರಾಣೋಜಿರಾಯ ಕುದುರಿಯ
ಮ್ಯಾಲಿಂದ ಬಿದ್ದು ಸತ್ತ. ಇನ್ನೇನಾಗುವದದನೋ ನೋಡಬೇಕು !" ಎಂದು
ಹೇಳಿದರು. ಮುಂದೆ ನಾಲ್ಕಾರು ದಿನಗಳಲ್ಲಿಯೇ ಶಂಕ್ರಪ್ಪಗೌಡ್ರು ಕಾ:ಲರಾ ಬಂದು
ತೀರಿಕೊಂಡರು. ಆ ಒಂದು ವಾಕ್ಯ ರಾಣೋಜಿರಾಯನ ಮರಣ ಹಾಗೂ ಶಂಕರಪ್ಪ
ಗೌಡರ ಮರಣವನ್ನು ಸಂಬಂಧಿಸುವ ದೈವಸೂತ್ರವಾಗಿತ್ತು.

"ಅವರನ್ನು ದೇವರೆಂತ ಜನಾ ಸುಮ್ಮಗಽ ನಂಬಿಲ್ಲರೀ ಯಪ್ಪಾ ! ಅವರು
ಯಾರ ಮನಿಗೆ ಊಟಕ್ಕ ಹೋಕ್ಕಾರ ನೋಡ್ರಿ, ಆ ಮನಿಗೆ ಮುಂದ ಅನ್ನದ
ಚಿಂತೀನಽ ಆಗಾಣಿಲ್ಲರಿ" ಮತ್ತೊಬ್ಬ ಅವರ ಮಹಿಮೆಯನ್ನು ವಿಸ್ತರಿಸಿದ. ಅವರು
ಕರೆವರೆ ಯಾರ ಮನೆಗೂ ಹೋಗುತ್ತಿರಲಿಲ್ಲ. ಯಾರಿಗಾದರೂ 'ದುಡ್ಡು ತಾ' ಎಂದು
ಕೈನೀಡಿದಾಗ, ಅವನು ಕೊಟ್ಟರೆ ಅವನ ಕೈ ಹಣದ ಅಕ್ಷಯಪಾತ್ರೆಯಾಗುವ
ದೆಂದು ಜನರು ನಂಬಿದ್ದರು. 'ಇಲ್ಲ' ಎಂದವರ ಮನೆಯಲ್ಲಿ ಮಾತ್ರ ಎಲ್ಲವೂ
ಇಲ್ಲದಾಗುತ್ತಿತ್ತು. ಬಾಪೂಸಾಹೇಬನನ್ನೇ ಒಮ್ಮೆ ದುಡ್ಡು ಕೇಳಿದ್ದರು. ಅವನು
ಇಲ್ಲವೆಂದಿದ್ದ. ನಾನಾ ಸತ್ಸಂದಿನಿಂದ ಅವನ ಕೈಯಿಂದ ಹಣ ಹೊಳೆ ಹರಿದಂತೆ
ಹರಿದುಹೋಯಿತು. ಕೊನೆಗೆ ಹೊತ್ತ ಅರಿವೆಯ ಮೇಲೆ ಅವನು ಊರು ಬಿಟ್ಟು
ಹೋಗುವಾಗ ದಾರಿಯ ಖರ್ಚಿಗೆ ನಾಲ್ಕಾಣೆ ಕೂಡ ಅವನಲ್ಲಿರಲಿಲ್ಲ. ಒಂದು
ಕೃತಿಯ ಮೇಲಿಂದಲೇ ವ್ಯಕ್ತಿಯ ದೈವವನ್ನೇ ಅಳೆಯಬಲ್ಲ ದೃಷ್ಟಿ ಅವರಿಗಿತ್ತು.

"ಇಂತಾ ಮಹಿಮಾರಿ ನಮ್ಮಪ್ಪಂದು ! ಆದರ ಈಗ ಮೂರು ದಿನಾ ಆಗಿರ
ಬೇಕು ನೋಡ್ರಿ, ಒಂದಽಸವನ ಝಳಾ ಅನಸತೈತಿ ಅಂತ ಹೇಳತಿದ್ದರು." ಎಂದು
ಮಠದ ಸಚ್ಚಿನ ಶಿಷ್ಯರಲ್ಲೊಬ್ಬ, ಶಿವಯೋಗಿಗಳು ಊರು ಬಿಡುವದಕ್ಕೆ ಕಾರಣ
ವನ್ನು ಹೇಳತೊಡಗಿದ. ಶಿವಯೋಗಿಗಳು ಮೂರು ದಿನಗಳಿಂದ ಮೈಯೆಲ್ಲ

'ಝುಳ'ವೆಂದು ಗೋಳಿಟ್ಟದ್ದು ನಿಜವೇ! ಅದಕ್ಕೆ ಕಾರಣ ಮಾತ್ರ ಯಾರಿಗೂ ಗೊತ್ತಾಗಿರಲಿಲ್ಲ. ಮಠದಲ್ಲಿ ಚಿಮಣಾ ಕಾಲಿಟ್ಟಾಗಿನಿಂದ ಈ ಅವಸ್ಥೆ ಪ್ರಾರಂಭ ವಾಗಿತ್ತು. ಅಂತೆಯೇ ಎಲ್ಲರೂ ಕೂಡಿ ಪಡದಯ್ಯನವರಲ್ಲಿಗೆ ಬಂದು, ಚಿಮಣಾ ಳನ್ನು ದೂರವಿಡಲು ಕೇಳಿಕೊಂಡದ್ದು, ಅದು ಸಫಲವಾಗಿರಲಿಲ್ಲ. ಶಿವಯೋಗಿಗಳು ಊರನ್ನೇ ಬಿಟ್ಟು ಹೋಗುತ್ತೇವೆಂದು ಹಟಹಿಡಿದರು. "ಅಂದ ಏಟ ಕೇಳಿ ಕೊಂಡರೂ ಪಡದಯ್ಯನವರು ಒಪ್ಪಲಿಲ್ಲರಿ. ಮತ್ತ ನೀವೂ ಅದಕ ಅಡ್ಡ ಬಂದಿ ರೆಲ್ಲರಿ! ಮತ್ತ ಮರಿಸ್ವಾಮೇರು ಹಟಾಹಿಡಿದಲ್ಲೇ ಈಗ ಕಳಿಸಿಕೊಟ್ಟವಿರಿ" ಎಂದು ಕೂಡಿದವರಲ್ಲಿಯೇ ಹಿರಿಯನಾದವನೊಬ್ಬ ಮಾತು ಮುಗಿಸಿದ.

ಇದು ಜನರು ಹೇಳಿದ ಕತೆ. ಆ ಕತೆಯಲ್ಲಿ ಅವರೆಲ್ಲರಿಗೂ ಅಕ್ಷರಶಃ ನಂಬಿಕೆಯಿತ್ತು, ಶ್ರದ್ಧೆಯಿತ್ತು. ಸಾವಿರಾರು ವರ್ಷಗಳಿಂದ ನಡೆದು ಬಂದ ಆ ಪರಂಪರೆ ಅವರಲ್ಲಿ ಬೀರಿದ ಪ್ರಭಾವ ಆನುವಂಶಿಕವಾಗಿ ಇಳಿದುಬಂದಿತ್ತು. ಯಾರೂ ಅದರ ಸತ್ಯಾಸತ್ಯತೆಯನ್ನು ಒರೆಗೆ ಹಚ್ಚುವ ಗೋಜಿಗೆ ಹೋಗಿರಲಿಲ್ಲ. ಅದರ ಅವಶ್ಯಕತೆಯೂ ಅವರಿಗಿರಲಿಲ್ಲ. ಅವರ ತಾತ್ವಿಕ ತೃಷ್ಣೆಗೆ ಅಷ್ಟೇ ನೀರು ಸಾಕಾಗಿತ್ತು. ಸದಾಶಿವಯೋಗಿಗಳನ್ನು ಕಂಡವರು, ಅವರ ಮಹಿಮೆಯನ್ನು ಪ್ರತ್ಯಕ್ಷವಾಗಿ ಅನುಭವಿಸಿದವರು ಇನ್ನೂ ಪಾದಳ್ಳಿಯಲ್ಲಿದ್ದರು. ಅವರೇ ತಾವು ಅವತರಿಸಿ ಬರುವೆನೆಂದು ಹೇಳಿದಾಗ ಅದನ್ನು ನಂಬದಿರುವದು ಹೇಗೆ ? ಸದಾ ಶಿವಯೋಗಿಗಳ ಶೀಲ ಒರೆಸಿಟ್ಟ ಕನ್ನಡಿಯಂತೆ ಶುಭ್ರವಾಗಿತ್ತು. ಅವರ ಅನು ಭಾವ ಮಾತ್ರ ಗೂಢವಾಗಿಯೇ ಇತ್ತು. ಗೂಢವಾಗಿರದಿದ್ದರೆ ಅದೆಂಥ ಅನುಭಾವ? ಅವರ ಅವತಾರವೇ ಆದ ಶಿವಯೋಗಿಗಳ ಬಗ್ಗೆಯೂ ಜನರು ಅದೇ ಪೂಜ್ಯ ಭಾವನೆಯನ್ನೇ ತಳೆದಿದ್ದರು. ಈಗ ಅವರು ಊರು ಬಿಟ್ಟು ಹೋದದ್ದು ಮಾತ್ರ ಅಶುಭ ಸೂಚನೆಯಂತೆ ಕಂಡಿತು. ಶಿಷ್ಯವೃಂದದ ಭಾವನೆಗಳಿಗೆ ಬರೆಯಿಟ್ಟಂತೆ ಆಗಿತ್ತು.

ಜನರು ಈ ಕತೆ ಹೇಳಿ ಮುಗಿಸಿದರು. ನಾವೆ ಆಗಲೆ ನದಿಯ ಪಾತ್ರದಿಂದ ಅದೃಶ್ಯವಾಗಿತ್ತು. ಆಚೆಯ ದಂಡೆಗೆ ಮಾತ್ರ ಶಿವಯೋಗಿಗಳನ್ನು ಬಂಡಿಯಲ್ಲಿ ಕೂಡಿಸಿ ಶ್ಯಾಮರಾಯ ನಡೆದಿದ್ದ. ಅದನ್ನೂ ನೋಡಿಕೊಂಡು ಜನರು ಜಡ ಮನಸ್ಸಿನಿಂದ ತಿರುಗಿದರು. ಶಿವಯೋಗಿಗಳು ಊರು ಬಿಟ್ಟು ಹೋದರೂ ಅವರ ಪ್ರಭಾವ ಮಾತ್ರ ವಾತಾವರಣದಂತೆ ಸುತ್ತೆಲ್ಲ ಹರಡಿತ್ತು. ಶ್ರಾವಣದ ಜಡವಾದ

ಹಿನ್ನೆಲೆಯೂ ಈ ಪ್ರಭಾವಕ್ಕೆ ಪೋಷಕವಾಗಿತ್ತು.

ಲಿಂಗಪ್ಪಗೌಡ ತಿರುಗಿದ್ದೂ ಜಡವಾದ ಮನಸ್ಸಿನಿಂದಲೇ! ಕೇಳಿದ ಕತೆ ಅವನಲ್ಲಿ ಅನೇಕ ಅಸ್ಪಷ್ಟ ವಿಚಾರಗಳನ್ನು ಮೂಡಿಸಿತ್ತು. ತನ್ನ ದೈವ ಫಲವಾಗುವ ಕಾಲ ಇದು. ಪಾದಳ್ಳಿಯಲ್ಲಿ ತಾನಿನ್ನೂ ಗೌಡನಾಗಿ ಮೆರೆಯಬೇಕಾಗಿದೆ. ಚಿಮಣಾಳಂಥ ರೂಪವತಿ ತನ್ನ ಹೆಂಡತಿಯಾಗಬೇಕಾಗಿದೆ. ಇಷ್ಟು ದಿನ ಅಜ್ಞಾತವಾಸದಲ್ಲಿದ್ದವನು ಈಗ ದೊಡ್ಡ ಮನುಷ್ಯನಾಗಿ, ಗಣ್ಯ ವ್ಯಕ್ತಿಯಾಗಿ ಅಡ್ಡಾಡಬೇಕು. ಅಂಥ ಹೊತ್ತಿಗೆ ಗುರುಹಿರಿಯರ ಆಶೀರ್ವಾದವಿದ್ದರೆ ಒಳ್ಳೇಯದೇ ಅಲ್ಲವೇ? ಅದಕ್ಕಾಗಿಯೇ ತಾನು ಸ್ವಾಮಿಗಳಿಗೆ ನಮಸ್ಕರಿಸಲು ಹೋದದ್ದು. ಆದರೆ ಅದರಿಂದ ತನಗೆ ದೊರೆತದ್ದೇನು? “ಅಂವಾ ಬೀಳಬೇಕಾದ ಪಾದ ಇಲ್ಲಿಲ್ಲ; ಮಠದಾಗದಾವು!” ಎಂದಿದ್ದರು ಸ್ವಾಮಿಗಳು. ಮೊದಲೇ ಅವರ ಮಾತಿಗೆ ಮಂತ್ರಶಕ್ತಿಯಿದೆಯೆಂದು ಅನೇಕರು ಇದೇ ಈಗ ಹೇಳಿದ್ದರು. ಅದಕ್ಕೆ ಜೀವಂತ ನಿದರ್ಶನಗಳನ್ನೂ ಕೊಟ್ಟಿದ್ದರು.

ಲಿಂಗಪ್ಪನಿಗೆ ಇದರ ಅರ್ಥವೇನಿರುಬಹುದೆಂದು ಗೊಂದಲ ಬಿತ್ತು. ತಾನು ಬೀಳಬೇಕಾದ ಪಾದಗಳು ಮಠದಲ್ಲಿವೆ ಎಂದರೇನು? ಪಡದಯ್ಯನವರ ಪಾದಗಳೋ ಅಥವಾ ಚಿಮಣಾಳ ಪಾದಗಳೋ? ಇಷ್ಟು ದಿನ ಪಡದಯ್ಯನ ಪಾದಗಳಿಗೆ ಬಿದ್ದದ್ದಾಯಿತಲ್ಲ! ಇನ್ನುಮೇಲೆ ಬಹುಶಃ ಚಿಮಣಾಳ ಪಾದಗಳೇ ತನಗೆ ಗತಿಯಾಗಿರುಬಹುದು. ಅಂದಮೇಲೆ ಅದೂ ಆಶೀರ್ವಾದವೇ ಇರುಬಹುದೇ? ಲಿಂಗಪ್ಪ ತನ್ನ ಅಜ್ಞಾನಕ್ಕೆ ಬಯಕೆಯ ಜೀವ ತುಂಬಿ ಗುರುಗಳ ವಾಕ್ಯವನ್ನು ಅರ್ಥ ಮಾಡಿದ್ದ.

ಮನಸ್ಸಿನ್ನೂ ವಿಚಾರದ ಹಿಡಿತದಲ್ಲಿರುವಾಗಲೇ ಲಿಂಗಪ್ಪ ಮಠಕ್ಕೆ ಬಂದಿದ್ದ. ಆಗ ನಾಲ್ಕುತಾಸು ಹೊತ್ತೇರಿತ್ತು. ಪಡದಪ್ಪನವರು ನಾನಾನ ಮರಡಿಹೊಲದ ಕಬಜಾ ತೆಗೆದುಕೊಳ್ಳುವ ಬಗ್ಗೆ ತಮ್ಮ ಅನುಯಾಯಿಗಳೊಡನೆ ಹೋಡುವ ಸಿದ್ಧತೆಯಲ್ಲಿದ್ದರು. ಕೊಂಬಿನ ಶಿಂಗ್ಯಾ ಸ್ವಯಂಸೇವಕನಾಗಿ ಕೊಂಬನ್ನು ಬಗಲಲ್ಲಿ ಹಿಡಿದುಕೊಂಡು ಮಠದ ಮುಂದೆ ಕುಳಿತಿದ್ದ.

:: ೪೧ ::

ಲಿಂಗಪ್ಪ ಮಠದಲ್ಲಿ ಬಂದದ್ದನ್ನು ನೋಡಿ ಅಲ್ಲಿ ಕೂಡಿದವರೆಲ್ಲ ಎದ್ದು ಮುಜುರೆ ಮಾಡಿದರು. ಪದದಪ್ಪನವರು ಲಿಂಗಪ್ಪನನ್ನು ಕರೆದು ತಮ್ಮ ಹತ್ತರ ಕೂಡಿಸಿಕೊಂಡರು. ಆಗ ನಡೆದ ಚರ್ಚೆ ಮಹತ್ವದ್ದಾಗಿತ್ತು. ಗೌಡರ ಹಗೆಗಳನ್ನು ಹಾರುಹೊಡೆದು ಕಾಳು ಹಂಚುವ ಬಗ್ಗೆ ಉಪಾಯಗಳನ್ನು ಯೋಜಿಸಬೇಕಾಗಿತ್ತು.

ಲಿಂಗಪ್ಪ ಅದಕ್ಕೆ ತನ್ನ ಅಭಿಪ್ರಾಯವನ್ನು ಹೇಳಿಬಿಟ್ಟ. ಗೌಡರ ಹಗೆಗಳನ್ನು ಹಗಲು ಹಾಡೇ ಲೂಟಿ ಮಾಡಿದರೆ ನಾಳೆ ಪೋಲೀಸಪಾಟೀಲನಾದ ಅವನೇ ಆ ಬಗ್ಗೆ ಸರಕಾರಕ್ಕೆ ವರದಿ ಮಾಡಬೇಕಾಗುತ್ತಿತ್ತು. ಪೋಲೀಸರು ಬಂದು ಗೌಡಿತಿಯ ಹೇಳಿಕೆಯ ಮೇರೆಗೆ ಅಪರಾಧಿಗಳನ್ನು ಹಿಡಿಯಬೇಕಾದಾಗ ಲಿಂಗಪ್ಪನೇ ಅವರಿಗೆ ನೆರವಾಗಭೇಕಾಗುತ್ತಿತ್ತು. ಏನೇ ಮಾಡಿದರೂ ತಾನು ಈ ಪೇಚಿನಿಂದ ಪಾರಾಗಬೇಕು, ಸುಲಭವಾಗಿ ಎಲ್ಲರಿಗೂ ಕಾಳು ದೊರೆಯಬೇಕು, ಇಂಥ ಉಪಾಯವನ್ನೇ ಹುಡುಕಬೇಕೆಂದು ಲಿಂಗಪ್ಪ ಸೂಚಿಸಿದ.

ಪಡದಯ್ಯನವರು ಹಂಚಿಕೆಯನ್ನು ಹೇಳದಿರಲಿಲ್ಲ. ಗೌಡರವು ಒಟ್ಟು ಆರು ಹಗೆಗಳು. ಅವುಗಳಲ್ಲಿ ಮೂರು ಹಗೆಗಳನ್ನು ಖಾಲಿ ಮಾಡಿ ಶಂಕರಪ್ಪಗೌಡರು ಕಾಳು ಹಂಚಿದ್ದು ಊರಿಗೆಲ್ಲ ಗೊತ್ತಿದ್ದ ಮಾತಾಗಿತ್ತು. ಉಳಿದ ಮೂರು ಹಗೆಗಳಲ್ಲಿ ಕಾಳು ಇರುವ ಸಂಗತಿ, ಗೌಡಿತಿ ಹಾಗೂ ಕೆಲವು ಆಳುಗಳಿಗೆ ಮಾತ್ರ ಗೊತ್ತಿತ್ತು. ರಾತ್ರಿಯಲ್ಲಿ ಕಾಳು ಲೂಟಿ ಮಾಡಿಸಿಬಿಟ್ಟರೆ ಗೌಡಿತಿ ಫಿರ್ಯಾದಿ ಮಾಡುವದೇ ಕಠಿಣವಾಗುವದು. ಫಿರ್ಯಾದಿ ಮಾಡಿದರೂ ಇಂಥವರೇ ಹಗೆಗಳನ್ನು ಲೂಟಿ ಮಾಡಿದರೆಂದು ಸಾಕ್ಷಿ ಹೇಳಲು ಜನರು ಸಿಗುವದು ಕಠಿಣ. ಒಂದು ವೇಳೆ ಸಾಕ್ಷಿ-ಪುರಾವೆ ಹುಟ್ಟಿಸಿ ಫಿರ್ಯಾದಿ ಕೊಟ್ಟರೆ ತನ್ನ ಪಾಲಿನ ಕಾಳು ತಾನು ಬಡವರಿಗೆ ಹಂಚಿದ್ದೇನೆಂದು ಲಿಂಗಪ್ಪಗೌಡ ಹೇಳಿಕೆಯನ್ನು ಕೊಡಬೇಕು. ಪೋಲೀಸರ ಕೈ ಬೆಚ್ಚಗೆ ಮಾಡಲು ಒಂದು ಗಿರಾಕಿಯನ್ನು ತಯಾರುಮಾಡಬೇಕು. ನಾಲ್ಕೆಂಟು ಚೀಲದಷ್ಟು ಜೋಳವನ್ನು ಬಾಳಾರಾಮುನ ಅಂಗಡಿಗೆ

ಒಯ್ದು ಮುಟ್ಟಿಸಿದರಾಯಿತು. ಪೋಲೀಸರು ಬಂದರೆ ಅವರ ಕೈಯಿಂದ ಪಾರಾ
ಗಲು ಅವನು ದುಡ್ಡು ಖರ್ಚು ಮಾಡಿಯೇ ಮಾಡುತ್ತಾನೆ. ಪಡದಪ್ಪನವರ ಬಲಿ
ಬಹಳ ಬೀಸಾಗಿತ್ತು. ಅಂದು ರಾತ್ರಿಯೇ ಲೂಟಿಯ ಕಾರ್ಯಕ್ರಮವೆಂದು
ಗೊತ್ತಾಗಿ ಹಾಗೆ ಹೊಲೆಯರ ರುದ್ರನಿಗೆ ಹೇಳಿಯೂ ಇಟ್ಟಿದ್ದರು.

ಲಿಂಗಪ್ಪನಿಗೂ ಈ ಹಂಚಿಕೆ ಸಮಂಜಸವೆನಿಸಿತು. ಬರಗಾಲದ ಪರಿಸ್ಥಿತಿಯಲ್ಲಿ
ಹೊಟ್ಟೆಗಿಲ್ಲದ ಬಡವರು ಗೌಡರ ಹಗೆಗಳನ್ನು ಲೂಟಿ ಮಾಡಿದ್ದಾರೆಂದು ವರದಿ
ಕಳಿಸಿ ಗೌಡನ ಕರ್ತವ್ಯವನ್ನೂ ಪಾಲಿಸಿದರಾಯಿತು. ಆರೋಪಿಗಳಾರೂ ಶಿಕ್ಷೆಗೆ
ಗುರಿಯಾಗದಂತೆ ಮಾಡಲು ಈ ಉಪಾಯವೇ ಯೋಗ್ಯವೆನಿಸಿತು.

ಹೊಲೆಯರ ರುದ್ರನಿಗೆ ಮಾತ್ರ ಈ ವಿಚಾರ ಸರಿದೋರಲಿಲ್ಲ. "ಅಲ್ರೀ
ಯಪ್ಪಾ, ಕಳ್ಳರ್ಹಂಗ ರಾತ್ರೀ ಹಗೇ ತಗದು ನಾಳೆ ತುರಂಗ ಕಾಣಂತೀರೇನರಿ?
ಅದೇನ ಪಾಡ ಕಾಣೂದಿಲ್ಲ. ಹಗಲ ಹೊತ್ತು ಕೊಯಿಬು ಹಚ್ಚಿ ಹಗೇ ತಗದು ಕಾಳು
ಸಾಗಸೂದು ನಮಗ ಪಸಂತ ಕಾಣತೈತಿ." ಅಂದ.

" ಹಗೇ ಹಾರಹೊಡದು ಕಾಳು ನಿಮಗ ಸಿಗೂಹಾಂಗ ಮಾಡಿದರಾತಪಾ!
ಹಗಲೇನು ರಾತ್ರಿ ಏನಲೇ ಮಗನ?" ಪಡದಯ್ಯನವರು ಅವನನ್ನು ಸುಮ್ಮ
ನಿರಿಸಲು ಪ್ರಯತ್ನಿಸಿದರು. ಆದರೆ ರುದ್ರ ತನ್ನ ಹಟವನ್ನು ಬಿಡಲಿಲ್ಲ. ಅವನು
ಮತ್ತೊಂದು ಕಾರಣವನ್ನು ಮುಂದೊಡ್ಡಿದ. " ನಮ್ಮ ಜನಕ್ಕ ತುಣಕ ರೊಟ್ಟಿ
ಸಿಕ್ಕಿಲ್ಲರಿ; ಮನ್ಯಾಗ ಹಿಡಿ ಕಾಳಿಲ್ಲರಿ. ಇಂದಃ ಹಗೇ ತಗದು ಕಾಳ ಕೊಟ್ಟರ
ಹಬ್ಬಾ! ಮಾಡತಾವರೀ" ಎಂದು ದನಿಯೆಳೆದು ಹೇಳಿದ.

"ಬಾಳಾರಾಮನ ಅಂಗಡ್ಯಾಗ ನಿಮ್ಮ ಜನಕ್ಕೆಲ್ಲ ಬೆಲ್ಲಾ, ಬ್ಯಾಳಿ, ಗೋದಿ
ಉದ್ರಿ ಕೊಡಲಾಕ ತಿಳಿಸಿಬಿಡತೈತಿ. ನೀವು ಸಾಮಾನ ಒಯ್ದು ಮನ್ಯಾಗ ಇಟ್ಟಿ
ಬರ್ರಿ ಈಗ. ಇಂದ ರಾತ್ರಿ ಹಗೇ ತಗದಮ್ಯಾಗ, ಅವನ ಲೆಕ್ಕಾ ಕೇಳಿ, ಅಷ್ಟ ಚೀಲ
ಜ್ವಾಳಾ ಅವನ ಅಂಗಡ್ಯಾಗ ಹಚ್ಚಿಬಿಡರಿ" ಎಂದು ಪಡದಯ್ಯನವರು ತಮ್ಮ ಹಟ
ವನ್ನೇ ಸಾಧಿಸಿದರು. ಅವರದೇ ಕೊನೆಯ ನಿರ್ಣಯವಾಯಿತು.

ಬಾಳಾರಾಮನ ಅಂಗಡಿಗೆ ಮುತ್ತಿಗೆಯೇ ಬಿದ್ದಂತಾಯಿತು. ತಲೆಗೊಬ್ಬರಿಗೆ
ಧಡೆ ಬೆಲ್ಲ, ಬೇಳೆ, ಗೋದಿಗಳನ್ನು ಬಾಳಾರಾಮ ಕೊಟ್ಟ. ಅಂಗಡಿ ಬರಿದಾದರೂ
ಗೌಡರೊಂದಿಗೆ ತನ್ನ ಸ್ನೇಹ ಸ್ಥಿರವಾಯಿತೆಂದು ಹಿಗ್ಗಿದ.

ಭರತೀ ಮಧ್ಯಾಹ್ನವಾಗಿತ್ತು. ಬಿಸಿಲು ಸುಡುತ್ತಿರಲಿಲ್ಲವಾದರೂ ಮೋಡ

ಗಳು ಮುಸುಕಿದ್ದರಿಂದ ಸೆಕೆಯಾಗುತ್ತಿತ್ತು. ಪಡದಪ್ಪನವರು ತಮ್ಮ ವಿಜಯ
ಯಾತ್ರೆಗೆ ಅನುಯಾಯಿಗಳೊಂದಿಗೆ ಹೊರಟರು. ಅವರ ಗುರಿ ಈಗ ನಾನಾ
ಮರಡಿಯ ಕಡೆಗೆ ಇತ್ತು. ಅಗಸೆಯ ಮುಂದೆ ಬಂದಾಗ ಕರಿಯಪ್ಪ,"ಅಪನೋರ
ಲಕ್ಷ್ಮಣನ ಮನೀ ಮುಂದ ಕೊಂಬು ಬಾರಿಸಿ ಹೊಲಕ್ಕ ಬಾ ಅಂತ ಹೇಳಿ ಬ
ತೀನ್ರಿ" ಎಂದು ಹೇಳಿದ. ಹಾಗೆಯೇ ಹೇಳಕೇಳದೆ ಹೊಲಕ್ಕೆ ಹೋಗುವದು
ತುಡುಗು ಮಾಡಿದಂತೆ ಎಂದು ಅವರೆಲ್ಲರ ಅಭಿಪ್ರಾಯವಾಗಿತ್ತು.

ಅದನ್ನು ಕೇಳಿ ಹಿರೇಕುರುಬ ಮಾಯಪ್ಪ, " ಲೇ ಹುಚ್ಚಪ್ಯಾಲಿ, ಅವನ
ಮನೀಗೆ ಕೀಲಿ ಬಿದ್ದೈತಿ. ಮುಂಜಾನೆ ಮಠದಾಗ ಕೂಡಿದ ಮಂದಿನ್ನ ನೋಡಿ
ಗಾಬರ್ಯಾಗಿ, ತಾಸಗಾವಿ ಬೀಗರ ಕಡೆಗೆ ಓಡಿ ಹೋತಂತ. ಅಂವಾ ಎಂದರೆ ಇಂತಾ
ಕೆಲಸಕ್ಕ ಆಳಾದಾನಃ? ನಿನಗ ಗೊತ್ತೇ ಇಲ್ಲೇನು?" ಎಂದು ನುಡಿದ.

"ಗೊತ್ತಿಲ್ಲದಿದ್ದರೇನಾತರಿ? ಕಳವಿಲೆ ಹೊಲಾ ಕಬಜಾ ತೊಗೊಂಡರು ಅಂತ
ನಾಳೆ ತಕರಾರು ಎದ್ದಿರಬಾರದು ನೋಡ್ರಿ. ಕೊಂಬ ಹಚ್ಚಿ ಅವನ್ನ ಕರದು ಕಬಜಾ
ತೊಗೊಳ್ಳೂದು ನಮ್ಮ ಧರ್ಮ. ನಾವು ಮಾಡೂದು ಮಾಡಬೇಕಲ್ಲರಿ?" ಎಂದು
ಕರಿಯ ಹಟಮಾರಿತನದಿಂದಲೇ ನುಡಿದು, ಕೊಂಬಿನ ಶಿಂಗ್ಯಾನಿಗೆ ಕೊಂಬು
ಊದಲು ಹೇಳಿದ. ಅಗಸೆಯ ಮುಂದೆ ಡೌಲಾಗಿ ನಿಂತು ಶಿಂಗ್ಯಾ ದಶದಿಕ್ಕುಗಳಿಗೂ
ಕೇಳುವಂತೆ ಕೊಂಬು ಊದಿದ. ಮಧ್ಯಾಹ್ನದ ನಿಶ್ಶಬ್ದತೆಯಲ್ಲಿ ಕೊಂಬಿನ ಚೀತ್ಕಾರ
ದುಮುದುಮಿಸಿತು. ಹಿಂಡು ಜನ ಲಕ್ಷ್ಮಣನ ಮನೆಯ ಮುಂದೆ ನಿಂತು, "ಹೊಲಾ
ಉಳಿಸಿಕೊಳ್ಳೂದಿದ್ರ ಬೇಕಾದವರು ಬರ್‍ರಲೇ" ಎಂದು ಕೂಗಿ ಪಾದಳ್ಳಿಗೇ ಆಹ್ವಾನ
ವಿತ್ತರು. ಅವರು ಆಗ ಹೊಡೆದ ಕೇಕೆ ಕೊಂಬಿನ ಚೀತ್ಕಾರಕ್ಕಿಂತ ತೀಕ್ಷ್ಣ
ವಾಗಿತ್ತು; ಕರ್ಣಪಟಲಗಳನ್ನೇ ಹರಿಯುವಂತೆ ಅಸಹ್ಯವಾಗಿತ್ತು. ಕೊಂಬಿನ ದನಿ
ಗಾಗಲಿ, ತಮ್ಮ ಕೇಕೆಗಾಗಲಿ ಉತ್ತರ ಬಾರದಿರಲು, ಎಲ್ಲರೂ ಸೀದಾ ಹೊಲದ
ದಾರಿಯನ್ನು ಹಿಡಿದರು.

ಶ್ಯಾಮರಾಯ ಡೋಲಿನ ಜನರ ಯಾದಿ ಹಾಗೂ ತಗಾಯಿ ಸಾಲದ
ಪತ್ರಿಕೆಗಳನ್ನು ಈ ಮೊದಲೇ ತಯಾರಿಸಿಟ್ಟಿದ್ದರಿಂದ ಲಿಂಗಪ್ಪಗೌಡನಿಗೇನೂ ಅದರ
ಕಾಟವಿರಲಿಲ್ಲ. ಪಡದಪ್ಪನವರು ತಮ್ಮ ಅನುಯಾಯಿಗಳೊಡನೆ ಊರು ದಾಟಿ
ಹೋಗುವವರೆಗೆ ಅವನೂ ಅವರ ಜೊತೆಗೆ ಬಂದ. ಆದರೆ ಮುಂದೆ ಹೋಗುವ
ಮನಸ್ಸಾಗಲಿಲ್ಲ. ಪಡದಯ್ಯನವರಿಗೆ, "ಹಾಗಾರ ಜ್ವಾಕಿಲೆ ಹೋಗಿ ಬರ್‍ರಿ. ನೀವು

ತಿರುಗಿ ಬರೂದರಾಗ ನಾನೂ ನನ್ನ ಕೆಲಸಾ ಮುಗಿಸಿರತೀನು." ಎಂದು ತನ್ನ ಕೆಲಸದ ನೆವ ಹೇಳಿ ತಿರುಗಿದ. ಪಡಪ್ಪನವರೂ ತಮ್ಮ ಜೊತೆಗೆ ಅವನು ಬರ ಬೇಕೆಂದು ಆಗ್ರಹಪಡಿಸಲಿಲ್ಲ. ಲಿಂಗಪ್ಪಗೌಡ ಮಠದ ಕಡೆಗೆ ಹೊರಟ.

ಲಿಂಗಪ್ಪನ ಮನಸ್ಸು ಅನೇಕ ಭಾವನೆಗಳ ಸಿಡಿಮದ್ದಾಗಿತ್ತು. ಚಿಮಣಾಳ ವಿಚಾರ ಬಂದಾಗಲೆಲ್ಲ ಅವನ ದೇಹಾದ್ಯಂತ ಮಿಂಚು ಹರಿದಂತಾಗುತ್ತಿತ್ತು. ಈಗ ಚಿಮಣಾ ಮಠದಲ್ಲಿ ಒಬ್ಬಳೇ ಇದ್ದಳು. ಅದೇ ನೆನಪು ಲಿಂಗಪ್ಪನ ಎದೆಯಲ್ಲಿ ಉಕ್ಕಿ ಇಳಿಯುತ್ತಿತ್ತು. ಅವಸರ ಮಾಡಿದಷ್ಟೂ ನಡಿಗೆ ನಿಧಾನವಾಗುತ್ತಿತ್ತು. ಮಠ ಮುಟ್ಟುವವರೆಗಾದರೂ ಆ ವಿಚಾರದಿಂದ ತಪ್ಪಿಸಿಕೊಳ್ಳಬೇಕೆಂದು ಮನಸು ಒದ್ದಾಡಿತು. ಸಾಧ್ಯವಾಗಲಿಲ್ಲ. ಸುತ್ತಲೂ ಒಮ್ಮೆ ನೋಟ ಬೀರಿದ. ಅಂದು ನಾಗರ ಚವತಿಯಾದ್ದರಿಂದ ಹೆಣ್ಣುಮಕ್ಕಳೆಲ್ಲ ಹೊಸ ಸೀರೆಯುಟ್ಟುಕೊಂಡು ಹಾವಿನ ಹುತ್ತಿಗೆ ಹಾಲೆರೆಯುವ ಸಂಭ್ರಮದಲ್ಲಿ ನಡೆದಿದ್ದರು. ಮತ್ತೆ ಚಿಮಣಾ ದೃಷ್ಟಿಪಥ ದಲ್ಲಿ ಗೋಚರಿಸಿದಳು. ಅವಳೂ ಹೀಗೆಯೇ ಹೊಸ ಸೀರೆಯುಟ್ಟುಕೊಂಡಿದ್ದರೆ? ಅವಳ ಲಾವಣ್ಯ ಇಮ್ಮಡಿಯಾಗಿ ಹೊಳೆಯಬಹುದಿತ್ತಲ್ಲ! ಲಿಂಗಪ್ಪನ ಎದೆ ಬಡಿದು ಕೊಳ್ಳಹತ್ತಿತು. ಕಾಲು ತಡವರಿಸಹತ್ತಿದವು. ಎಲ್ಲಿ ನೋಡಿದರೂ, ಏನು ಕೇಳಿ ದರೂ, ಚಿಮಣಾಳ ನೆನಪಿನ ಹೊರತಾಗಿ ಬೇರಾವುದೂ ಅರಿವಾಗುತ್ತಿರಲಿಲ್ಲ. ಕಾಮದ ದೊಡ್ಡ ಕಣ್ಣು ಅವನ ಮನಸ್ಸಿನ ತುಂಬ ವ್ಯಾಪಿಸಿತ್ತು. ಯಾವ ಅನುಭವವನ್ನೇ ಆಗಲಿ ಅದೇ ಕಣ್ಣಿನ ಮೂಲಕ ಈಗ ನೋಡಬೇಕಾಗಿತ್ತು.

ಲಿಂಗಪ್ಪ ನೇರವಾಗಿ ಬಾಳಾರಾಮನ ಅಂಗಡಿಗೇ ಬಂದ. ತನ್ನ ರುಚಿಗೆ ಒಪ್ಪುವಂತೆ ಒಂದು ರಬ್ಬುನೀಲೀಬಣ್ಣದ ಸೀರೆಯನ್ನು ಖರೀದಿ ಮಾಡಿದ. ಗೌಡರ ವ್ಯಾಪಾರವೆಲ್ಲ ಉದ್ದರಿ ಎಂದು ಬಾಳಾರಾಮನಿಗೂ ಗೊತ್ತಾಗಿತ್ತು. ಪುಣ್ಯಕ್ಕೆ ಸೀರೆಯನ್ನೇಕೆ ಕೊಂಡದ್ದು ಎಂದು ಮಾತ್ರ ಕೇಳಲಿಲ್ಲ. ಸೀರೆಯ ಮಡಿಕೆಯನ್ನು ಬಗಲಲ್ಲೆತ್ತಿಕೊಂಡು ಲಿಂಗಪ್ಪ ಮಠದೊಳಗೆ ಪ್ರವೇಶಿಸಿದ.

ಮಠದಲ್ಲಿ ಯಾರೂ ಇರಲಿಲ್ಲ. ಇದು ಗೊತ್ತಿದ್ದರೂ ಲಿಂಗಪ್ಪ ಒಮ್ಮೆ ಎಲ್ಲ ಕಡೆಗೂ ಅಡ್ಡಾಡಿ ನೋಡಿಕೊಂಡು ಬಂದ. ಮಧ್ಯಾಹ್ನದ ಹೊತ್ತಾದ್ದರಿಂದ ಹೊರಗೂ ಯಾರೂ ಓಡಾಡುತ್ತಿರಲಿಲ್ಲ. ಲಿಂಗಪ್ಪ ಮತ್ತೆ ಪಡಸಾಲೆಯಲ್ಲಿ ಯೋಚಿಸುತ್ತ ಕುಳಿತ. ಚಿಮಣಾಳನ್ನು ಹೇಗೆ ಕಾಣಬೇಕೆಂಬುದೇ ಈಗ ಅವನ ಮುಂದಿದ್ದ ಸಮಸ್ಯೆಯಾಗಿತ್ತು. ಅವನ ಪ್ರಣಯಲೀಲೆಗಳೆಲ್ಲ ಹೊಲದಲ್ಲಿ ಕೆಲಸ

ಮಾಡಲು ಬಂದ ಹೆಣ್ಣುಮಕ್ಕಳೊಡನೆ ನಡೆದಿದ್ದವು. ಚಿಮಣಾ ತನಗಿಂತ ಹತ್ತು ಪಾಲು ಸುಸಂಸ್ಕೃತಳಾಗಿ ಕಂಡಿದ್ದಳು. ಅದಕ್ಕೆಂದೇ ತಾನಾಗಿ ಅವಳನ್ನು ಕಾಣಲು ಹೆದರಿಕೆಯಾಗಿತ್ತು. ಆದರೆ ಅವಳು ಜಾರಿದ ಸಂಗತಿಯೇ ಅವನ ಕಾಮವನ್ನು ಕೆರಳಿಸಿತ್ತು.

ಲಿಂಗಪ್ಪ ತನ್ನ ಇರುವಿಕೆಯನ್ನು ವ್ಯಕ್ತಪಡಿಸಲು ಒಮ್ಮೆ ಕೆಮ್ಮಿದ. ಕೆಮ್ಮು ಜೋರಾಗಿಯೇ ಬಂದದ್ದರಿಂದ ಬರಿದಾಗಿದ್ದ ಮಠ ಪ್ರತಿಧ್ವನಿ ಕೊಟ್ಟಿತು. ಅದನ್ನು ಕೇಳಿ ಲಿಂಗಪ್ಪನೇ ಭಯದಿಂದ ನಡುಗಿದ. ಮತ್ತೆ ಸ್ವಲ್ಪ ಹೊತ್ತು ಸುಮ್ಮನಿದ್ದ ಕಳ್ಳತನದಿಂದ ಚಿಮಣಾಳ ಕೋಣೆಯತ್ತ ಕಣ್ಣುಹೊರಳಿಸಿದ. ಬಾಗಿಲು ಹಾಕಿತ್ತು. ಏನು ಮಾಡಿ ಒಳಗೆ ಹೋಗಬಹುದೆಂದು ಎಣಿಕೆ ಹಾಕಹತ್ತಿದ.

ಆದರೆ ತಡಮಾಡುವಂತಿರಲಿಲ್ಲ. ಈಗಾಗಲೇ ಸಾಕಷ್ಟು ಹೊತ್ತಾಗಿತ್ತು. ಪಡದಯ್ಯನವರು ಕೆಲಸ ಸಾಧಿಸದಿದ್ದರೆ ಬೇಗ ತಿರುಗಿ ಬರುವ ಸಂಭವವೂ ಇತ್ತು. ಅದು ನೆನಪಾದೊಡನೆ ಲಿಂಗಪ್ಪ ಜಗ್ಗನೆ ಎದ್ದ. ಸೀರೆಯ ಮಡಿಕೆಯನ್ನು ಕೈಯಲ್ಲಿ ಹಿಡಿದುಕೊಂಡು, ಅನಿವಾರ್ಯವಾದ ಸಾಹಸಕ್ಕೆ ಸಿದ್ಧನಾದ ಹೇಡಿಯಂತೆ, ಚಿಮಣಾಳ ಕೋಣೆಯ ಬಾಗಿಲನ್ನು ತಟ್ಟಿದ.

ಸುದೈವಕ್ಕೆಂಬಂತೆ ಕೋಣೆಯ ಬಾಗಿಲು ತೆರೆಯಿತು. ಲಿಂಗಪ್ಪನಿಗೆ ಭಯ ಇನ್ನೂ ಹೆಚ್ಚಾಗಿ ಒಮ್ಮೆ ಗದಗದ ನಡುಗಿದ. "ಯಾರವರು?" ಎಂದು ಚಿಮಣಾ ಕೇಳಿದಾಗ ಮಾತ್ರ ನಿರ್ವಾಹವಿಲ್ಲದೆ ಕೈಯಲ್ಲಿ ಹಿಡಿದಿದ್ದ ಹೊಸಸೀರೆಯನ್ನು ಮುಂದೆ ಚಾಚಿ, ಕಣ್ಣುಮುಚ್ಚಿಕೊಂಡೇ ಕೋಣೆಯೊಳಗೆ ನಡೆದ. ಇದೆಲ್ಲ ಆಕಸ್ಮಿಕ ಸಂಗತಿಯಿಂದ ಚಿಮಣಾ ಗಾಬರಿಗೊಂಡಳು. ಬಂದವನು ಲಿಂಗಪ್ಪಗೌಡನೆಂದು ಅರಿತಾಗ, ಈ ಘಟನೆಯ ಅರ್ಥವೆ ಅವಳಿಗಾಗದಂತಾಯಿತು. ಸುಮ್ಮನೆ ಪಿಳಿಪಿಳಿ ಕಣ್ಣು ಬಿಟ್ಟು ಅವನನ್ನು ನೋಡಿದಳು. ಕೂಸು ಜೋಳಿಗೆಯಲ್ಲಿ ನಿಶ್ಚಿಂತವಾಗಿ ಮಲಗಿತ್ತು.

"ಚಿಮಣಾ....ನಿನ್ನದಶಿಂದ....ಇಗಾ....ಸೀರಿ ತಂದೀನಿ...ತೊಗೋ" ಎಂದು ಲಿಂಗಪ್ಪ, ಹುಚ್ಚುನಗೆಯನ್ನು ಬೀರುತ್ತ, ನಾಲಿಗೆಯನ್ನು ಸವರ್ಯಾಡುತ್ತ ಉಗುಳು ನುಂಗಿ ಹೇಳಿದ. ಅವನ ಮುಖ ಭಯದಿಂದ ವಿವರ್ಣವಾಗಿತ್ತು; ಹಣೆಯ ಮೇಲೆ ಬೆವರಿನ ಹನಿಗಳು ಸಾಲುಗಟ್ಟಿದ್ದವು. ತಲೆಯ ಮೇಲಿನ ರೂಮಾಲೂ ತೊಯ್ಯುವಷ್ಟು ಬೆವೆತಿದ್ದ.

ಅವನ ಕಣ್ಣಿನಲ್ಲಿಯ ಹಸಿವೆ ಚಿಮಣಾಳಿಗೆ ಅರ್ಥವಾಯಿತು. ಮೊನ್ನೆ ರಾತ್ರಿಯೇ ಊರ ಪ್ರತಿಷ್ಠಿತರ ಎದುರಿನಲ್ಲಿ ಪಡದಪ್ಪ ತನ್ನ ಪಾಪವನ್ನು ಮುಚ್ಚಿ ಕೊಳ್ಳಲು ಗತ್ತುಗಾರಿಕೆಯ ಮಾತುಗಳನ್ನಾಡಿದ್ದರ ಫಲ ಈಗ ಪ್ರತ್ಯಕ್ಷವಾಗಿ ಎದುರು ನಿಂತಿತ್ತು. ಗಂಡಿನ ಕಾಮತೃಷ್ಣೆಯೆಲ್ಲ ಹೆಣ್ಣಿನೆದುರು ಕೆರಳಿ ನಿಂತಾಗ ಏನು ಹೇಳಬೇಕು? ಚಿಮಣಾ ಇಂಥ ಪ್ರಸಂಗದಲ್ಲಿ ಎಂದೋ ಕೈಸುಟ್ಟುಕೊಂಡವಳು. ಕಾಮು ಅವಳ ಪಾಲಿಗೆ ಚಿಕ್ಕಂದಿನಲ್ಲಿಯೇ ದೃಷ್ಟಿ ತಾಕಿದ ಕೂಳಾಗಿತ್ತು. ಅದನ್ನು ನೆನೆದರೆ ಓಕರಿಕೆ ಬರುವಂತಿತ್ತು. ಈಗ ಲಿಂಗಪ್ಪನನ್ನು ನೋಡಿದಾಗಲೂ ಅದೇ ಭಾವನೆ ಅವಳಲ್ಲಿ ಮೂಡಿತು.

"ಹೀಗ ನಾ ಒಬ್ಬಾಕೇ ಇರುವಾಗ ಹತ್ತರ ಬರೂದು ರೀತಿ ಅಲ್ಲ. ಸುಮಾಕಽ ಹೊರಗ ಹೋಗು. ಹೀಗ ಕುಂದರೂದು ನನಗೂ ಪಾಡಲ್ಲ, ನಿನಗೂ ಪಾಡಲ್ಲ" ಎಂದು ಚಿಮಣಾ ವಿನಯದಿಂದಲೇ ಈ ಶನಿಯನ್ನು ಹೊರಗೆ ಹಾಕುವ ಪ್ರಯತ್ನ ಮಾಡಿದಳು. ಆದರೆ ಲಿಂಗಪ್ಪನ ಕಾವೇರಿದ ಮನಸ್ಥಿತಿ ಇಥ ಸವಿಮಾತುಗಳಿಗೆ ಮಣಿಯುವಂತಿರಲಿಲ್ಲ. ಸುಮ್ಮನೆ ಹಸಿದ ಕಣ್ಣುಗಳಿಂದ ನಾಚಿಕೆ ತೊರೆದು ಅವ ಳನ್ನೇ ನೋಡಹತ್ತಿದ. "ಯಾಕ, ನಾ ಹೇಳಿದ್ದು ಕೇಳಿಸಲಿಲ್ಲೇನು ನಿನಗ?" ಚಿಮಣಾ ಸ್ವಲ್ಪ ಏರಿದ ದನಿಯಿಂದಲೇ ಕೇಳಿದಳು.

ಲಿಂಗಪ್ಪ ಮತ್ತೆ ವಾಡಿಕೆಯ ಹುಚ್ಚುನಗೆಯನ್ನು ನಕ್ಕ. ಇಷ್ಟೊತ್ತಿನ ವರೆಗೆ ಅವಳನ್ನು ನೋಡಿ ನೋಡಿ ಅವನಿಗೆ ಏನೇನೋ ನೆನಪಾಗಿದ್ದವು. ಜಾಗೀರ ದಾರ ಬಾಪೂಸಾಹೇಬ ಇವಳನ್ನು ಕಾಮಿಸಿದ್ದು, ಪಡದಯ್ಯನಂಥ ಸನ್ಯಾಸಿ ಇದೇ ಮಠದಲ್ಲಿ ಅವಳನ್ನು ಬಲಾತ್ಕರಿಸಿದ್ದು, ಈ ಸಂಗತಿಗಳೆಲ್ಲ ಅವಳ ರೂಪವನ್ನು ಇನ್ನೂ ಹೆಚ್ಚು ಸ್ಪೃಹಣೀಯವಾಗಿಸಿದವು. "ನಿನ್ನ ಸಲುವಾಗಿ ಹೊಸಾ ಸೀರಿ ತಂದೇನಿ ಚಿಮಣಾ! ಅದನ್ನು ಉಟಗೊಂಡು ಒಮ್ಮೆ ನಿಲ್ಲಬಾರದಽ?" ಎಂದು ತನಗೆ ಸಾಧ್ಯವಿದ್ದಷ್ಟು ವಾಚ್ಯವಾಗಿ ತಿಳಿಸಿದ.

"ನನಗೇನು ಸೀರಿ ಬ್ಯಾಡ; ನೀ ಯಾರು ನನಗ ಸೀರಿ ತಂದು ಕೊಡಾಕ?" ಚಿಮಣಾ ಅವಡುಗಚ್ಚಿಯೇ ಕೇಳಿದಳು. ಪ್ರಸಂಗ ಅತಿಯಾಗುವದೆಂದು ಅವಳು ಊಹಿಸಿದಳು. ಸಿಟ್ಟಿಗೇಳಬಿದ್ದರೆ ಅವನೇನು ಸುಮ್ಮನೆ ಹೊರಟುಹೋಗುವ ಲಕ್ಷಣ ಕಾಣಲಿಲ್ಲ. ರೋಷ ಹೆಚ್ಚಿತು. ಕಣ್ಣು ಕೆಂಪಗಾದವು. ಕಲ್ಲಿನಂಥ ನೋಟದಿಂದ ಅವನನ್ನು ನೋಡುತ್ತ, ಅವನು ಹೊರಡುವದನ್ನೇ ಕಾಯಹತ್ತಿದಳು.

“ಯಾಕ, ನಿನ್ನೆ ಅಪನೋರು ಹೇಳಿದ್ದನ್ನ ಕೇಳಲಿಲ್ಲೇನು? ನಾನಽ ನಿನ್ನ ಮದಿವ್ಯಾಗಾವದೀನಿ ಅಂತ ಊರಿಗೆಲ್ಲಾ ಗೊತ್ತಾಗೇತಿ. ಅಂದಮ್ಯಾಗ ಅನುಮಾನ ಯಾಕ ?” ಎಂದು ಕುಳಿತಲ್ಲಿಯೇ ಕಾಲು ಜಾಡಿಸುತ್ತ ಲಿಂಗಪ್ಪ ಹೇಳಿದ. ಆದಕ್ಕೆ ಉತ್ತರ ಬರದಿರಲು, ವಿವರಿಸಿ ಹೇಳುವವರಂತೆ, “ಇಗಾ ನೋಡು ಚಿಮಣಾ, ಈಗ ಏನ ಮಾಡಾಕಿ ಅದೀ ನೀನು? ಒಮ್ಮೆ ಕಾಲು ಜಾರಿದರ ಮುಗದಽಹೋತು. ಇನ್ನ ಅಪನೋರದರ ಏನ ನೆಚ್ಚಿಗಿ? ಸುಮಾಕ ನನ್ನಗೂಡ ಬಾ. ಮದಿವ್ಯಾಗ ತೇನು. ಊರ ಗೌಡಿತಿ ಆಗಿ ಸುಕದ್ಲೆ ಬಾಳೇ ಮಾಡಬಾರದ್ಽ?” ಎಂದು ಹೇಳಿದ.

ಅವನನ್ನು ನೋಡಿಯೇ ಪಿತ್ತ ಕೆರಳಿದ ಚಿಮಣಾಳಿಗೆ ಈ ಮಾತು ಕೇಳುವದೂ ಅಸಹ್ಯವೆನಿಸಿತು. ಆ ಒಂದು ಕ್ಷಣ ಜೀವನದಲ್ಲಿಯ ಎಲ್ಲ ಉತ್ಕಟಭಾವನೆಗಳೂ ಕೂಡಿ ಬಂದು ಮನಸ್ಸಿನಲ್ಲಿ ಗುದುಮುರಿಗೆ ಹಾಕಹತ್ತಿದವು. ಸಿಟ್ಟಿನಿಂದ ತುಟಿಗಳು ಕಂಪಿಸಿ, ಶೋಕದಿಂದ ಕಣ್ಣಲ್ಲಿ ನೀರೂ ಬಂದವು. “ಏನ ಮಾಡತೀನೇ? ಇಲ್ಲಿ ಮುಂದಕರ ಬಾ. ಗೊತ್ತಮಾಡಿ ಕೊಡತೀನು” ಎಂದು ಕೂಗಿದಳು.

ಲಿಂಗಪ್ಪ ಪೂರ ನಾಚಿಕೆ ಬಿಟ್ಟದ್ದ. “ಮುಂದಕ ಯಾಕ, ಹತೀಲೇನಽ ಬರತೀನು” ಎಂದು ಹೇಳಿ ಚಿಮಣಾಳ ತೀರ ಸನಿಯಕ್ಕೇ ಬಂದ. ಎಲ್ಲಿ ಹೊತ್ತು ಮೀರುತ್ತದೋ, ಎಲ್ಲಿ ಈ ಸುಸಂಧಿ ತಪ್ಪಿ ಹೋಗುವದೋ ಎಂಬ ಚಡಪಡಿಕೆ ಅವನಲ್ಲಿ ಕುದಿಯುತ್ತಿತ್ತು. ಕಾಲು ತಡವರಿಸುತ್ತಿರುವಾಗಲೇ ಎದ್ದು ಬಂದ. ಉಳಿದ ಹೊತ್ತಿನಲ್ಲಿ ನಗೆಯನ್ನು ಹುಟ್ಟಿಸುತ್ತಿದ್ದ ಅವನ ಸ್ಥೂಲಕಾಯ ಈಗ ಹೆದರಿಕೆಯ ಕಪ್ಪುನೆರಳನ್ನು ಚಲ್ಲಿತು. ಅವನು ಹತ್ತಿರ ಬಂದಂತೆ ಚಿಮಣಾಳ ಕಣ್ಣೆದುರಲ್ಲಿ ಅವನ ದೇಹವೇ ತುಂಬಿಬಿಟ್ಟಿತು. ಅವಳು ಭಯಗೊಂಡು ಚೀರಬೇಕೆಂದಿದ್ದವಳು, ಅದಾವ ಶಕ್ತಿ ಮೈಯಲ್ಲಿ ಸಂಚರಿಸಿತ್ತೋ, ಕೈ ಸಡಿಲುಬಿಟ್ಟು ಅವನ ಕೆನ್ನೆಗೆ ಒಂದೇಟು ಬಿಗಿದಳು. ಅವನ ಕೆನ್ನೆಯ ಬಿರುಸು ಅವಳ ಕೈಗೆ ಕೂಡ ಹೇಸಿಗೆ ತರುವಂತಿತ್ತು.

ಲಿಂಗಪ್ಪನಿಗೆ ಇದೆಲ್ಲ ಅನಿರೀಕ್ಷಿತವಾಗಿತ್ತು. ಮನಸ್ಸು ಕುಕ್ಕರಬಡಿದಂತಾಯಿತು. ಕೈಯಿಂದ ಕೆನ್ನೆಯನ್ನು ಹಿಡಿದುಕೊಂಡೇ ನೆಲಕ್ಕೆ ಕುಳಿತ. ಅದೇಕೋ ಬೆಳಿಗ್ಗೆ ಶಿವಯೋಗಿಗಳು ಹೇಳಿದ್ದ ಮಾತುಗಳು ನೆನಪಾದವು. “ಅಂವಾ ಬೀಳಬೇಕಾದ ಪಾದ ಇಲ್ಲಿಲ್ಲ; ಮಠದಾಗ ಅದಾವು” ಸ್ವಾಮಿಗಳ ಭವಿಷ್ಯವಾಣಿ ನಿಜವೆಂದೆನಿಸಿತು. ಕುಳಿತಲ್ಲಿಂದಲೇ ಚಿಮಣಾಳೆದುರು ಸಾಷ್ಟಾಂಗ ನಮಸ್ಕಾರ ಹಾಕಿ

ಮಲಗಿಬಿಟ್ಟ. ಚಿಮಣಾಳಿಗೆ ಅದರಿಂದಲೂ ರೋಷ ಹೆಚ್ಚಾಯಿತು. ಕಾಲಿನಿಂದ ಅವನನ್ನು ಒದ್ದು ದೂರ ಸರಿಸಿ, "ಸುಮನಾಕ ಹೊರಗ ನಡಿ." ಎಂದು ಚೀರಿದಳು. ಅವಳ ಚೀರುವಿಕೆಗೋ, ಅಥವಾ ನಡೆದ ಗೊಂದಲಕ್ಕೋ ಜೋಳಿಗೆಯಲ್ಲಿ ಮಲಗಿದ್ದ ಕೂಸಿಗೆ ಎಚ್ಚರಾಗಿ ಚೀರಹತ್ತಿತು. ಚಿಮಣಾ ಅವಸರದಿಂದ ಹೋಗಿ ಕೂಸನ್ನೆತ್ತಿಕೊಂಡಳು.

ಲಿಂಗಪ್ಪನ ಅಭಿಮಾನ ಕರಗಿ ನೀರಾಗಿತ್ತು. ಚಿಮಣಾಳ ಒದೆತವನ್ನು ತಿಂದ ರುಮಾಲ ಚಲ್ಲಾಪಿಲ್ಲಿಯಾಗಿ ಹರಡಿತ್ತು. ರುಮಾಲಿಲ್ಲದ ಬೋಳುತಲೆ ಹಾಸ್ಯಾಸ್ಪದವಾಗಿತ್ತು. ಕೆನ್ನೆಗೆ ಬಿದ್ದ ಏಟಿಗಿಂತ ಹೃದಯಕ್ಕಾದ ಆಘಾತ ಬಲವಾಗಿತ್ತು. ಸಣ್ಣಹುಡುಗರಂತೆ ಕಣ್ಣೀರು ಸುರಿಸುತ್ತ ಕೆಳಗೆ ಬಿದ್ದ ರುಮಾಲನ್ನು ತಲೆಗೆ ಸುತ್ತಹತ್ತಿದ. ಅದು ಮುಗಿದ ಮೇಲೆ ಅಂಗಲಾಚುವ ದನಿಯಲ್ಲಿ ಮತ್ತೆ ಹೇಳತೊಡಗಿದ: "ಚಿಮಣಾ, ನಿನ್ನ ಸಲುವಾಗಿ ನನ್ನ ಜೀವ ಎಷ್ಟ ತಳಮಳಿಸತೈತಿ ಅನ್ನೂದು ನಿನಗ ಗೊತ್ತಿಲ್ಲ. ಇದ್ದಬಿದ್ದದ್ದೆಲ್ಲಾ ನಿನ್ನ ಉಡ್ಯಾಗ ಹಾಕತೀನು. ಸುಕದ ಸಂಸಾರಾ ಮಾಡತೀನು. ನಿನ್ನ ಬಾಳೇವು ಹಾಳಗೆಡವಿದ್ದನ್ನು ನೋಡಿ ಜೀವಾ ಮರಮರಾ ಮರಗತೈತಿ" ಎಂದು ಗೋಳಿಟ್ಟ.

ಚಿಮಣಾ ಸುಮ್ಮನೇ ಇದ್ದಳು. ತಾನು ಮಾಡಿದ್ದೂ ತಪ್ಪಾಯಿತೆಂದು ಅವಳಿಗೆ ಅನಿಸದಿರಲಿಲ್ಲ. ಅವಳಿಗೂ ಕಣ್ಣು ತುಂಬಿಬಂದಿದ್ದವು. ಆದರೆ ಅದನ್ನು ತೋರಗೊಡಲಿಲ್ಲ. ಅವಳು ಸುಮ್ಮನಿದ್ದದ್ದನ್ನು ಕಂಡು ಲಿಂಗಪ್ಪ ಮತ್ತೆ ಪ್ರಾರಂಭಿಸಿದ: "ನಾ ಮಾಡಿದ್ದರಾಗ ತಪ್ಪಿದ್ದರ ಹೇಳು ಚಿಮಣಾ. ಒಪ್ಪಿಗೊಂತೀನು. ಗಂಡಸಾದವ ಹೆಂಗಸಿನ ಮ್ಯಾಗ ಪಿರೂತಿ ಮಾಡೂದು ತೆಪ್ಪs?"

"ಲಗ್ನ ಆಗಿ ಗುಳದಾಳಿ ಕಟಿಗೊಂಡು ಹೇಣತಿನ್ನ ತಂದು ಬಾಳೇ ಮಾಡಿದರ ದೇವರು ಮೆಚ್ಚತಾನು. ಹೀಗೆಲ್ಲಾ ಹರಕೊಂಡು ಬಿದ್ದರ ಅದು ತೆಪ್ಪs?" ಚಿಮಣಾ ಇನ್ನೂ ಗುರ್ರೆನ್ನುತ್ತಿದ್ದಳು.

ಲಿಂಗಪ್ಪ ತಾನು ಮಾಡಿದ್ದು ತಪ್ಪಾಯಿತೆಂದೇ ಒಪ್ಪಿಕೊಂಡ. ಇನ್ನೂ ಒಂದು ವಾರದ ಅವಧಿಯನ್ನು ತನಗೆ ಕೊಡಬೇಕೆಂದು ಕೇಳಿಕೊಂಡ. ಅಷ್ಟರಲ್ಲಿ ತನ್ನ ಮನಸ್ಸು ಬದಲಾದರೆ ಮುಗಿದು ಹೋಯಿತು. ಆದರೆ ಆಸೆ ಇನ್ನೂ ಉಳಿದಿದ್ದರೆ ಚಿಮಣಾ ತನ್ನನ್ನು ಮದುವೆಯಾಗಲು ಒಪ್ಪಬೇಕು. ಹೀಗೆ ಎಂಜಲೆಲೆಯಂತೆ ಬಾಳುವೆ ಕಳೆಯುವುದು ಒಳ್ಳೆಯದಲ್ಲವೆಂದು ಅವಳಿಗೆ ಉಪದೇಶ ಮಾಡಿದ.

ಹೇಗೂ ಕಾಲ ಅನುಕೂಲವಾಗಿತ್ತು. ಪಡದಯ್ಯನ ಸೆರೆಯಿಂದ ಬಿಡಿಸಿಕೊಂಡು ಹೋಗಿ, ಅವಳನ್ನು ತನ್ನ ಮನೆಗೆ ಕರೆದೊಯ್ಯುವದಾಗಿ ಹೇಳಿದ.

ಚಿಮಣಾ ನೋಡೋಣವೆಂದು ಹೇಳಿ ಸುಮ್ಮನಾದಳು. ಅವಳಿಗೆ ಹೆಚ್ಚು ಮಾತು ಬೆಳೆಸುವದು ಬೇಕಾಗಿರಲಿಲ್ಲ. ಒಮ್ಮೆ ಹೊರಗೆ ಹೋದರೆ ಸಾಕೆಂದು ಬೇಡಿಕೊಂಡಳು. ಲಿಂಗಪ್ಪ ಆಜ್ಞಾಧಾರಕನಂತೆ ಹೊರಗೆ ನಡೆದ. ಹೋಗುವಾಗ ಸೀರೆಯನ್ನು ಮಾತ್ರ ಒಯ್ಯಲಿಲ್ಲ. ಅವಳ ಮನಸ್ಸು ಬದಲಾದರೆ ಇರಲಿ, ಎಂದು ಅವನ ವಿಚಾರವಾಗಿತ್ತು.

ಲಿಂಗಪ್ಪ ಹೊರಟು ಹೋದ ಮೇಲೆ ಚಿಮಣಾಳ ಜೀವಕ್ಕೆ ಬಿಡುಗಡೆ ಬಂದಂತಾಯಿತು. ಇತ್ತೀಚೆಗೆ ಅವಳಿಗೆ ಏಕಾಂತವೊಂದೇ ಪ್ರಿಯವಾಗಿತ್ತು. ದಾದಾ ಅವಳನ್ನು ಕೈಬಿಟ್ಟ ಮೇಲೆ ಜಗತ್ತಿನ ಮುಖವನ್ನು ನೋಡಲು ಕೂಡ ಅವಳಿಗೆ ಇಷ್ಟವಿರಲಿಲ್ಲ. ಜಗತ್ತು ಅವಳ ಗೊಡವೆಗೂ ಬರುತ್ತಿರಲಿಲ್ಲ. ಆದರೆ ಇಂಥ ಪ್ರಸಂಗಗಳಲ್ಲಿ ಮಾತ್ರ ಹೊರಜಗತ್ತಿನ ಸಂಬಂಧ ಅವಳಿಗೆ ಬರುತ್ತಿತ್ತು. ಅದೂ ಎಂಥ ಸಂಬಂಧ? ಚಿಮಣಾಳಿಗೆ ಬಾಳುವೆಯ ರುಚಿಯೇ ಕಹಿಯಾಗಿತ್ತು. ಅಜರಾಣಿಯ ಸೆರೆಮನೆಯನ್ನು ಬಿಟ್ಟು ತನ್ನ ಕೂಸನ್ನು ಕಾಯ್ದುಕೊಳ್ಳಲು, ತನಗೆ ಒಲ್ಲದವನ ಕೂಡ ಈ ಮಠಕ್ಕೆ ಬಂದಿದ್ದಳು. ಇಲ್ಲಿ ಕೋಣೆಯೊಳಗೆ ಹೊಕ್ಕವಳು ಹೊರಗೆ ಬಂದಿರಲಿಲ್ಲ. ಆದರೂ ಜಗತ್ತು ತನ್ನ ರೂಪವನ್ನು ಈ ಸೆರೆಯ ಹೊರಗಿನಿಂದಲೇ ನೋಡುತ್ತಿತ್ತು. ಕತ್ತಲೆಯಲ್ಲಿ ಹುಗಿದುಕೊಂಡಿದ್ದರೂ ಲೋಕದ ಕಣ್ಣಿಗೆ ಅವಳ ರೂಪ ಕಾವಲಿಲ್ಲದ ಹೊಲದ ಬೆಳೆಯಾಗಿತ್ತು. ಪಡದಯ್ಯನಂಥ ಸನ್ಯಾಸಿಗೂ ಈ ಆಸೆ ಬಿಟ್ಟಿರಲಿಲ್ಲ. ಮೊದಲು ಬಾಪೂಸಾಹೇಬನಿಗೆ ತಾನೊಲಿದಿದ್ದೇ ತಪ್ಪೆಂದೆನಿಸಿತು. ಒಲಿದ ಹೆಣ್ಣು ಬಾಗಿದ ಬಳ್ಳಿಯಂತೆ ಎಲ್ಲರ ಕೈಯಳತೆಗೂ ನಿಲುಕಬಲ್ಲದು.

ಇಂಥ ಪ್ರಸಂಗಗಳಲ್ಲೆಲ್ಲ ಅವಳಿಗೆ ಹಳೆಯ ದುಃಖಗಳು ಮರುಕಳಿಸಿ ಬರುತ್ತಿದ್ದವು. ನಾನಾನ ಸಾವು, ಪುತಳಾಬಾಯಿಯ ದುರ್ಮರಣ, ದಾದಾನ ಎದೆಯುರಿ ಇವುಗಳಿಗೆಲ್ಲ ತನ್ನ ರೂಪವೇ ತಳಹದಿಯಾಗಿತ್ತು. ತಾನು ಹುಟ್ಟಿದ್ದೇ ಇದರ ಸಲುವಾಗಿಯೇ ಎಂದು ದುಃಖ ಒತ್ತರಿಸಿ ಬಂತು. ಈಗ ಲಿಂಗಪ್ಪನೊಬ್ಬ ಆಶಿಸಿ ಬಂದಿದ್ದಾನೆ. ಪಡದಯ್ಯನಂತೆ ಇವನೇನೂ ಅತ್ಯಾಚಾರಿಯಲ್ಲ! ಆದರೂ ಗಂಡಿನ ಬಲಕ್ಕೆ ಹೆಣ್ಣು ಈಡಾಗಬಲ್ಲದೇ? ಈಗೇನೋ ತನ್ನ ರೋಷಕ್ಕೆ ಹೆದರಿ

ಹೋದದ್ದು ನಿಜ. ಮತ್ತೆ ಬರುವ ಸೂಚನೆಯನ್ನೂ ಕೊಟ್ಟು ಹೋಗಿದ್ದಾನೆ. ಮುಂದೆ ತನ್ನ ಗತಿಯೇನೆಂದು ಚಿಮಣಾ ಯೋಚಿಸತೊಡಗಿದಳು. ಒಟ್ಟು ಜೀವನವೇ ಬೇಸರಾಗಿತ್ತು. ಬಾಳುವೆಯ ಅಗ್ನಿಪಥವೆಲ್ಲ ತನ್ನ ಕೊನೆ, ದುರ್ಮರಣವೆಂದೇ ಸಾರಿ ಹೇಳುವಂತಿತ್ತು.

ಹೊರಗೆ ಪಡಸಾಲೆಯ ಕಂಬಕ್ಕಾತು ಲಿಂಗಪ್ಪನೂ ಯೊಚಿಸುತ್ತಿದ್ದ. ಇಂದಿನ ಎರಡೂ ಅನುಭವಗಳು ಅವನ ಅಭಿಮಾನದ ಬೆನ್ನೆಲುಬನ್ನೇ ಮುರಿದಿದ್ದವು. ಮನಸ್ಸು ಛಿದ್ರಛಿದ್ರವಾಗಿ ಹರಿದು ಹೋದಂತಾಗಿತ್ತು. ಯೋಚನೆ ಒಂದೇ ದಿಕ್ಕಿನಲ್ಲಿ ಹರಿಯುತ್ತಿರಲಿಲ್ಲ. ಆದರೂ ಮನಸ್ಸಿನ ಚೂರುಗಳ ಬುಡದಲ್ಲಿಯೇ ಚಿಮಣಾನ ಬಗ್ಗೆ ಆಸೆ ಜೀವಂತವಾಗಿ ಉರಿಯುತ್ತಿತ್ತು. ಒಂದು ವಾರದ ಅವಧಿಯಾದರೂ ಸಿಕ್ಕಿತಲ್ಲ, ಅಷ್ಟೇ ಸಾಕೆಂದುಕೊಂಡ. ಒಮ್ಮೆ ಪಡದಯ್ಯನವರಿಗೆ ಈ ಮಾತನ್ನು ಹೇಳಿ ಚಿಮಣಾಳನ್ನು ವಶಪಡಿಸಿಕೊಂಡರೆ ಹೇಗೆ ಎಂದು ವಿಚಾರವೂ ಬಂದಿತು. ಆದರೆ ಮರುಕ್ಷಣದಲ್ಲಿಯೇ ಬೇಡವೆನ್ನಿಸಿತು. ಅವರ ಸ್ವಭಾವವೇನೂ ಅರಿಯದ್ದಲ್ಲ. ತನ್ನ ಸ್ವಾರ್ಥಕ್ಕಾಗಿ ಯಾರನ್ನೂ ಬಲಿಗೊಡಬಲ್ಲ ಕ್ರೌರ್ಯ ಅವರಲ್ಲಿತ್ತು. ಪಾದಳ್ಳಿಗೆ ಬಂದ ಮೇಲೆ ಗೌಡನಾಗಿದ್ದ. ಒಂದರ ಮೇಲೊಂದು ವಿಜಯಗಳು ಅವನಿದಿರು ಸಾಲುಗಟ್ಟಿದ್ದವು. ಅವುಗಳ ಜೊತೆಗೆ ಚಿಮಣಾಳ ವಿಜಯವೂ ಬಂದು ಸೇರಿಬಿಟ್ಟರೆ ಮುಂದೆ ತನ್ನ ಕೈಹಿಡಿಯುವವರಾರು? ಆದರೆ ಚಿಮಣಾ? ನೆನೆದಷ್ಟೂ ಅಪ್ರಾಪ್ಯಳಾಗಿ ಕಾಣತೊಡಗಿದ್ದಳು. ತಾನು ತಿಳಿದಿದ್ದೇನು, ಅವಳಿಂದ ಪಡೆದದ್ದೇನು? ಕೆನ್ನೆ ಇನ್ನೂ ಉರಿಯುತ್ತಿತ್ತು. ಹೊಡೆಸಿಕೊಂಡ ಹುಡುಗನಂತೆ ಅಳುಮೋರೆ ಮಾಡಿಕೊಂಡು ಗಲ್ಲದ ಮೇಲೆ ಕೈಯಾಡಿಸಿಕೊಂಡ. ಅಪಮಾನ ಅಸಹನೀಯವಾಗಿತ್ತು; ತನ್ನ ಕ್ಷುದ್ರ ವ್ಯಕ್ತಿತ್ವವನ್ನೇ ಪ್ರಕಟಿಸಿ ತೋರಿಸಿತ್ತು. ಸೇದುವ ಬಾವಿಯನ್ನು ಕಂಡು, ನೀರಡಿಸಿದ ನಾಯಿಯೊಂದು ವ್ಯರ್ಥವಾಗಿ ಒದರಿಕೊಂಡಂತೆ ಅವನ ಸ್ಥಿತಿಯಾಗಿತ್ತು.

ಹಸಿವೆಯಾಗಿದ್ದರೂ ಲಿಂಗಪ್ಪನಿಗೆ ಊಟಮಾಡುವ ಮನಸ್ಸಾಗಲಿಲ್ಲ. ಅಸ್ಪಷ್ಟ ಚಿಂತೆಗಳು ಮಾತ್ರ ಒಂದೇ ಸಮನೆ ಬೆನ್ನುಹತ್ತಿದ್ದವು. ಒಳಗೆ ಚಿಮಣಾ, ಹೊರಗೆ ಲಿಂಗಪ್ಪ ಇಬ್ಬರೂ ದೀರ್ಘವಿಚಾರಮಂಥನದಲ್ಲಿಯೇ ತೊಡಗಿದ್ದರು. ಹೊಲಕ್ಕೆ ಹೋದವರು ಇನ್ನೂ ಏಕೆ ಮರಳಲಿಲ್ಲವೆಂದು ಲಿಂಗಪ್ಪನಿಗೆ ಅನಿಸಿತು. ಅಷ್ಟರಲ್ಲಿ ಹೊರಗೆ ನಡೆದು ಬಂದ ಸಪ್ಪಳ ಕೇಳಿಸಿತು. ಕಡಾವಿಗೆಗಳನ್ನು

ಸದ್ದು ಮಾಡುತ್ತ ಮಠದ ಪಾವಟಿಗೆಗಳನ್ನೇರಿ ಬಂದ ಪಡದಪ್ಪನವರು, ಬಾಗಿಲಲ್ಲಿ ನಿಂತೇ, "ಗೌಡರ‍್ರ, ಚಿಮಣಾಳ ಹೊಲದ ಕಬಜಾ ತೊಗೊಂಡೆವಲ್ಲ!" ಎಂದು ವಿಜಯದಿಂದ ಸೊಕ್ಕಿದ ದನಿಯಲ್ಲಿ ಕೂಗಿ ಹೇಳಿದರು.

:: ೪೨ ::

ಶ್ರಾವಣಸೋಮವಾರ ದಿನ ರೈತರಿಗೆಲ್ಲ ಬಿಡುವು. ಅಂದೇ ನಾಗರ ಪಂಚಮಿಯೂ ಆದ್ದರಿಂದ ಎಲ್ಲೆಡೆಗೂ ಹಬ್ಬದ ಉಬ್ಬು ಪಸರಿಸಿತ್ತು. ಜೋಕಾಲಿ ಕಟ್ಟದ ಗಿಡಗಳೇ ಉಳಿದಿರಲಿಲ್ಲ. ಊರ ಹೆಣ್ಣುಮಕ್ಕಳೆಲ್ಲ ತಂಡತಂಡವಾಗಿ, ಹೊಸ ಸೀರೆಯುಟ್ಟುಕೊಂಡು ಜೋಕಾಲಿಯಾಡಲು ನಡೆದಿದ್ದರು. ಅಗಸೆಯಲ್ಲಿ ನೆರೆದ ಜನರ ಹಿಂಡನ್ನು ನೋಡಿ ತಾರವ್ವ, "ಇಂದೇನು ಕುಸ್ತಿ ಆಡತಾರೇನ‍್ರ ಚಿಗವ್ವಾ?" ಎಂದು ಬಿರಾದಾರ ನಿಂಗವ್ವನನ್ನುದ್ದೇಶಿಸಿ ಕೇಳಿದಳು.

"ಹೂಂ ಕುಸ್ತಿ ಆಡೂದುಲ್ಲ. ಕುಸ್ತಿ ನಡೀಬಾರದು ಅಂತ‍್ರ ಊರ ದೈವ ದವರು ಕೂಡಿ ನ್ಯಾಯಾ ಮಾಡಲಾಕ ಛಾವಡೀಗೆ ಬಂದಾರು" ಎಂದು ಹೇಳಿ ನಿಂಗವ್ವ ಅವಸರದಿಂದ ಮುಂದೆ ನಡೆದಳು. ಅವಳಿಗೋ ನೂರೆಂಟು ಕೆಲಸಗಳು ಕಾದಿರುತ್ತಿದ್ದವು. "ಹೀಗ್ಯಾಕ ಓಡತೀ ಚಿಗವ್ವಾ? ನಿನ್ನೇನು ಅವರೆಲ್ಲ ಕರದು ನಿನ್ನ ಮಗಾ ಏಟ ಜ್ವಾಳಾ ತಂದ ಹಾಕ್ಯಾನಂತ ಕೇಳೂದುಲ್ಲ. ತಮ್ಮ ಹಗೇದಾಗಿದ್ದ ಜ್ವಾಳಾ ಬಡವರಿಗೆ ಹಂಚಿ ಕೊಟ್ಟೀವಂತ ಹೇಳಿ ಗೌಡರು ಈಗಾಗಲೇ ದೈವದವರ ಬಾಯಿ ಕಟ್ಟಿಬಿಟ್ಟಾರಂತ" ಎನ್ನುತ್ತ ಹಿರೇ ಕುರುಬ ನಿಂಬೆಕ್ಕ ನಿಂಗವ್ವನನ್ನು ಉದ್ದೇಶಪೂರ್ವಕವಾಗಿಯೇ ಕೆಣಕಿದಳು. ನಿನ್ನೆ ರಾತ್ರಿ ಲಿಂಗಪ್ಪಗೌಡ ಪಾರ್ವತೆವ್ವ ಗೌಡಿತಿಯ ಹಗೆಗಳಲ್ಲಿಯ ಕಾಳು ಹಂಚಿದ ಸುದ್ದಿಯನ್ನು ಪೂರ್ಣ ತಿಳಿದುಕೊಳ್ಳ ಬೇಕಾಗಿತ್ತು.

ನಿಂಗವ್ವನಿಗೂ ಅಷ್ಟೇ ಬೇಕಾಗಿತ್ತು. ಆದರೂ ಆಡಿದ್ದಕ್ಕೆ ಎದುರು ವಾದಿಸ ದಿದ್ದರೆ ಅವಳಿಗೆ ಸಮಾಧಾನವಿರುತ್ತಿರಲಿಲ್ಲ. "ಏನ ನನ್ನ ಮಗಾ ಕಾಳ ತುಡುಗು ಮಾಡಿ ತಂದವರ‍್ಹಾಂಗ ಕೇಳತೀಯಲ್ಲ ಬೇ? ಸ್ವತಾ ಗೌಡರ‍್ರ ಮನೀಮುಟಾ ಬಂದು

'ಕಾಳ ಇಲ್ಲದ ಸಾಯಬ್ಯಾಡ್ರಿ' ಅಂತ ಕಾಳು ಮುಟ್ಟಿಸಿ ಹೋಗ್ಯಾರು. ಗೌಡರು ತನ್ನ ಜ್ವಾಳಾ ಬಡವರಿಗೆ ಹಂಚಿದರ ದೈವದವರ ಹೊಟ್ಟಿ ಯಾಕ ಕಡೀಬೇಕು?" ಎಂದು ಮರುಪ್ರಶ್ನೆಯನ್ನೇ ಹಾಕಿದಳು.

ಆದರೆ ಇದು ಅಂಥ ಸಾಮಾನ್ಯವಿಷಯವಾಗಿರಲಿಲ್ಲವೆಂದು ಹಿರೇ ಕುರುಬ ನಿಂಬೆಕ್ಕನಿಗೆ ಗೊತ್ತು. ಪಡದಪ್ಪ-ಲಿಂಗಪ್ಪರು ಸೇರಿ ಹಗೆಗಳನ್ನು ಲೂಟಿ ಮಾಡಿದ ರೆಂಬೇ ಸಾಧಿಸಬೇಕಾಗಿತ್ತು. "ಹ್ವಾದ ವರ್ಷ ಶಂಕರೆಪ್ಪಗೌಡರೂ ಬಡವರಿಗೆ ಕಾಳು ಹಂಚಿದರು. ಅವರೇನು ಇವರ್ಹಾಂಗ ಸರಿ ರಾತ್ರ್ಯಾಗ ಹಗೇ ತಗಿಸಿ ಕೈಗೆ ಬಂದಷ್ಟು ತುಂಬಿಕೊಂಡು ಹೋಗರಿ ಅಂತ ಹೇಳಲಿಲ್ಲ. ನಿನಗ ಗೊತ್ತಿರಾಕಿಲ್ಲ ಏನಬೇ? ನಿನ್ನೆ ಹೊಲಗೇರಿ ಜನಾ ಮುಗಿಬಿದ್ದು ಕೈಗೆ ಬಂದ್ಹಾಂಗ ತೂರಿಕೊಂಡ ರಂತ! ಆ ಬಾಳಾರಾಮ ಏನು ಬಡವನs? ಹೊಟ್ಟಿಗಿಲ್ಲದ ಸಾಯುತಿದ್ದನs? ಅಂತಾವ ಹನ್ನೆರಡು ಚೀಲದ ನಿಟ್ಟ ಹಚ್ಯಾನ. ಅದಕ್ಕs ದೈವದರು ಕೂಡಿ ಕೇಳಿದರ, 'ನನ್ನ ಪಾಲಿನ ಜ್ವಾಳಾ ನಾ ಹಂಚಿದರ ನಿಮಗೇನಾತು?' ಅಂತ ಲಿಂಗಪ್ಪ ಗೌಡ ಹೇಳಿದನಂತ" ನಿಂಬೆಕ್ಕ ತನಗೆ ತಿಳಿದಷ್ಟು ವಾರ್ತೆಯನ್ನು ಹರಡಿದಳು.

"ಮನೀ ಬಿಟ್ಟು ಕುರೀ ದಡ್ಡಿಗೆ ಹೋಗೂದ್ರಾಗ ನಿನ್ನ ಜನಮ ಹೋಗೇತಿ. ಊರ ಕಾರಬಾರ ಎಲ್ಲಾ ಗೊತ್ತಿದ್ದವರ್ಹಾಂಗ ಹೇಳತೀಯಲ್ಲಬೇ?" ಎಂದು ನಿಂಗವ್ವ ಅವಳ ಟೀಕೆ ಮಾಡಿದಳು. ಇಬ್ಬರೂ ಮಾತಾಡುತ್ತಾಡುತ್ತ ಗೌಡರ ಓಣಿಯ ಜೋಕಾಲಿಯ ಹತ್ತರ ಬಂದಿದ್ದರು. ಅಲ್ಲಿ ನೆರೆದ ಹೆಣ್ಣುಮಕ್ಕಳಿಗೆ ಇವರ ವಾದವಿವಾದ ಕೇಳಿ ತಾವೂ ಇದರಲ್ಲಿ ಕೂಡಬೇಕೆಂದು ಮನಸ್ಸಾಯಿತು.

ತಳವಾರ ನಾಗವ್ವ ಮೊದಲಾದರಿಗೆ ತಮಗೆ ಜೋಳ ಸಿಕ್ಕಿರಲಿಲ್ಲವೆಂದು ಅಸಮಾಧಾನವಾಗಿತ್ತು. ಬಿರಾದಾರ ನಿಂಗವ್ವನ ಮನೆಯಲ್ಲಿ ಬೆಳಗಾಗುವದ ರೊಳಗೆ ಆರು ಚೀಲದಷ್ಟು ಜೋಳದ ನಿಟ್ಟು ಹಚ್ಚಿದ್ದನ್ನು ಕೇಳಿ ಅವರೆಲ್ಲರಿಗೆ ಸಂಕಟವಾಗಿತ್ತು.

"ಅಲ್ಲ ನಿಂಗವ್ವಾ, ಹತ್ತಮಕ್ಕಳು ಮನ್ಯಾಗ ಇದ್ದು ಉಪಾಸ ಬೀಳೂ ಹೊತ್ತು ನಮಗ ಬಂತು. ತಾಯಿ ಮಗಾ ಇಬ್ಬರs ಅದೀರಿ; ಆದರೂ ಗೌಡರ ಹಗೇದಾಗಿನ ಆರು ಚೀಲ ಜ್ವಾಳಾ ತಂದು ಮನ್ಯಾಗ ತುಂಬಿಕೊಂಡೀದಿ. ಹೊಸಾ ಗೌಡನ ಚೆಗವ್ವ ಆದದ್ದಕ್ಕೂ ಸಾರ್ಥಕ ಆತೇಳು!" ಎಂದು ತಳವಾರ ನಾಗವ್ವ ಚುಚ್ಚಿ ಮಾತಾಡಿದಳು.

ನಿಂಗವ್ವ ಈಗ ವಿವರಣೆ ಕೊಡಲೇಬೇಕಾಗಿ ಬಂತು. "ಆ ಕಾಳೆಲ್ಲ ನಮಗs ಅಂತ ತಿಳೀಬ್ಯಾಡ ನಾಗವ್ವಾ. ಲಿಂಗಪ್ಪಗೌಡರು ತಮಗs ಬೇಕೂ ಅಂತ ಹೇಳಿ ನಮ್ಮ ಮನ್ಯಾಗ ಕಾಳ ಹಚ್ಚ್ಯಾರು" ಎಂದು ಸಮರ್ಥಿಸಿಕೊಂಡಳು. "ಪಾಡಾತೇಳ ಚಿಗವ್ವಾ. ಮನೀಗೆ ಮಗಾ-ಸೋಸೀ-ಮೊಮ್ಮಗಾ ಎಲ್ಲಾರೂ ಬಂದು ಮನೀ ತುಂಬಿ ದ್ಹಾಂಗಾತೇಳು" ಎಂದು ನಾಗವ್ವ ಇನ್ನಷ್ಟು ಆ ರಹಸ್ಯವನ್ನು ಬಯಲಿಗೆಳೆದಳು. ಅವಳ ಮಾತಿನಲ್ಲಡಗಿದ್ದ ಅಪೂರ್ವ ಧ್ವನಿಸಾಮರ್ಥ್ಯ ಚಿಮಣಾಳ ಕತೆಯನ್ನೂ ಹೊರಗೆ ತರುವಂತಿತ್ತು. ಎಲ್ಲರಿಗೂ ಆ ಮಾತು ಒಂದಿಲ್ಲೊಂದು ತೆರನಾಗಿ ಗೊತ್ತಿದ್ದದ್ದೇ. ಪಡದಯ್ಯನವರು ಮಠಕ್ಕೆ ಬಂದ ಜನರೆದುರಿಗೇ ತಮ್ಮ ಪಾಪವನ್ನು ಮುಚ್ಚಿಡಲು ಹೇಳಿದ ಸಂಗತಿಯಾಗಿತ್ತು ಅದು.

ನಿಂಗವ್ವನಿಗೆ ಅದರ ಬಗ್ಗೆ ಮಾತಾಡುವ ಇಷ್ಟವಿರಲಿಲ್ಲ. "ಅಂತಾ ಮಾತೇನು ನನ್ನ ಕಿವಿಗೆ ಬಿದ್ದಿಲ್ಲವ್ವ. ಅಲ್ಲs ನಿಂಬೆಕ್ಕಾ, ಆ ದಾನವ್ವ ಮತ್ತ ಮಠಕ್ಕ ಬರಾಕಿ ಅದಾಳ ಅಂತ? ನೀ ಏನರ ಕೇಳೀಯೇನು?" ಎಂದು ವಿಷಯಾಂತರ ಮಾಡಿದಳು.

"ಆಕ್ಯಾಕ ಇಲ್ಲೆ ಬಂದಾಳು ಚಿಗವ್ವಾ? ವಿಜಾಪುರದಾಗ ಒಬ್ಬ ಅಡತಿ ಅಂಗಡಿ ಸಾವಕಾರನ ಯಜಮಾನತಿಯಾಗಿ ಬಲೆ ಮಜಾದಾಗ ಅದಾಳಂತ. ಮನ್ನಿನ ವಾರ ನಮ್ಮ ಹಿರಿಯಾ ವಿಜಾಪುರದ ಸಂತಿಗೆ ಹೋದಾಗ, ದಾನವ್ವ ಅಂವಗ ಊಟಾ ಉಪಚಾರ ಮಾಡಿ ಕಳಿಸಿದಳಂತ. ಒಮ್ಮೆ ಬಿಟ್ಟು ಹೋದಾಕಿ, ಮತ್ತೇನು ಬಳಕೊಳ್ಳಾಕ ತಿರುಗಿ ಬರಬೇಕು ?"

ಹೀಗೆಯೇ ಅವರ ಹರಟೆ ಚಿಮಣಾಳ ಕತೆಯಿಂದ ಅಡ್ಡಾಡಿ ಲಿಂಗಪ್ಪ ಗೌಡನ ಗುಣಸಂಪನ್ನತೆಯ ವರೆಗೂ ಬಂದು ಮುಟ್ಟಿತು. ಪಡದಪ್ಪನವರ ಆಸರದಿಂದಲೇ ಲಿಂಗಪ್ಪ ದೊಡ್ಡಮನುಷ್ಯನಾದದ್ದು ಎಂದು ನಿಂಬೆಕ್ಕನ ವಾದ. ನಿಜವಾಗಿ ನೋಡಿದರೆ ಇವನೂ ಇನ್ನೊಬ್ಬ ಬಾಪೂಸಾಹೇಬ ಅಷ್ಟೇ. ನಾಗವ್ವನೂ ಅದೇ ಮಾತನ್ನೇ ಅನುಮೋದಿಸಿದಳು. ಅವಳಿಗೆ ಅದು ಸ್ವಾನುಭವದ ಮಾತಾಗಿತ್ತು. "ಇಂತಾ ಗೌಡ ಇದ್ದರ ಊರಾಗ ದೈವುಳ್ಳವರೂ ಬಡವರೂ ಕೂಡೇ ಸಾಯಬೇಕಾದೀತು. ತುಡುಗರು ಮಾತ್ರ ತುರಾಯಿ ಹಚ್ಚತಾರು. ನಮ್ಮ ಹಿರಿಯಾ ಮೊದಲಿನ ಗುಣಾ ಬಿಟ್ಟು ಸಂಭಾಯತ ಆಗಿದ್ದ. ಈಗ ಗೌಡರು ಬರಾಣಾ ಮತ್ತ ಕುಡಿಯೂದು, ನನ್ನ ಹೊಡಿಯೂದು ನಡಿಸ್ಯಾನ."

"ನಿನ್ನ ಗಂಡನ ಗುಣಾ ಹಾಂಗೆಲ್ಲರೆ ನೆಟ್ಟಗಿದ್ದರ, ಎಷ್ಟು ಹೇಳಿಕೊಂತಿ

ದ್ದೆಬೇ? ಬಾಪೂಸಾಬನ ದರಬಾರದಾಗ ಅವನ್ನ ಹಿಡಿದವರು ಇರಲಿಲ್ಲ. ಪಡೆದಪ್ಪನವರ ಶಿಷ್ಯಾ ಆಗಿ, ಜಿನ್ನಪ್ಪನ ಬಣವಿಗೆ ಬೆಂಕೀ ಹಚ್ಚಿದಾ. ಊರ ಮುಂದೀ ಕಡಿಂದ ಉಗಳಿಸಿಕೊಂಡ!" ನಿಂಗವ್ವ ಹಿಂದಿನ ಸಂಗತಿಯನ್ನು ನೆನೆದು ಮತ್ತೆ ಕೆಣಕಿದಳು.

"ಊರ ಮುಂದಿ ಉಗಳಿದ್ದು ಪಾಡ ಆಗಿತ್ತಬೇ. ಅಂದಿನಿಂದ ಅಂವಾ ಸೆರೆ ಮುಟ್ಟಿದ್ದಿಲ್ಲ. ಮನ್ನೆ ಲಿಂಗಪ್ಪಗೌಡರು ಊರಿಗೇ ಸಕ್ಕರಿ ಹಂಚಿದರಲ್ಲ, ಅಂವ ಮಠಕ್ಕ ಹೋಗಿ ಬರತೀನೆಂದಾವಾ, ಕುಡದು ದುಂವ ಆಗೇ ಬಂದಾ." ನಾಗವ್ವ ನಿಟ್ಟುಸಿರುಬಿಟ್ಟು ಹೇಳಿದಳು.

ನಿಂಬೆಕ್ಕನದೂ ಅದೇ ಕತೆ. ಮನೆಯೊಳಗೇ ಅನುಭವಿಸಿ ತಡೆದಿಟ್ಟ ದುಃಖ ಈಗ ಸಹಾನುಭೂತಿಯ ಕಾವಿಗೆ ಕರಗುತ್ತಿತ್ತು. "ಕುಡುಕರದೆಲ್ಲಾ ಏನ ಹೇಳತಿ ತಂಗೀ! ನನ್ನ ಮಗಾ ಮಾಯಾ, ಕುಂತ ತಿಂದರ ಭೂಮಿ ಬೀಜಗಂಡೀತs? ಈಗ ಕುಡೀಲಾಕ ಕಲತಾನ. ಮಠಾ ಬಿಟ್ಟ ಮನೀಗೆ ಬರೂದs ದೊಡ್ಡ ಮಾತು ಆಗೇತಿ. ನಡರಾತ್ರಿ ನೀರಿ ಬರತಾನು, ಮಲಗಿದಾ ಅಂದರ ಇಳಿಹೊತ್ತಿಗೆ ಏಳತಾನು. ನಮ್ಮೂರ ಹುಡುಗರೆಲ್ಲಾ ಗರಡೀಮನಿ ಬಿಟ್ಟ ಮಠದಾಗ ಬೀಳಾಕ ಹತ್ಯಾವು. ನಮ್ಮ ಮಾಯಾ, ಹಬ್ಬಕ್ಕ ಸೈತ ಮನೀಗೆ ಊಟಕ್ಕ ಬಂದಿಲ್ಲಾ. ಏನ ಮಾಡೂದೈತಿ? ಪಡದಪ್ಪನವರು ಊರಿಗೆ ನೆಟ್ಟಗೇನು ಮಾಡಲಿಲ್ಲ ತಗಿ! ಗೌಡರ ಮನೀ ಮಾನಾ ಕಳದರು. ಅವರ ಬದುಕು-ಭಾಗ್ಯೇವು ಎಲ್ಲಾ ಗಾಳೀಪಟಾ ಮಾಡಾಕ ಹತ್ಯಾರು. ಇನ್ನೇನು ಉಳದೈತಿ? ಅವರ ಭೂಮಿಗೆ ನಾಳೆ ಕೂರಿಗಿ ಕಳಿಸತಾರಂತ!' ನಿಂಬೆವ್ವ ತಡೆಯಲಾರದೆ ಕಣ್ಣೀರೊರೆಸಿಕೊಂಡಳು.

ಹಾಗೆ ನೋಡಿದರೆ ಯಾರ ಬಾಳುವೆ ದುಃಖವಿಲ್ಲದೆ ಇತ್ತು? ನಿಂಗವ್ವನದೂ ಅದೇ ಹಾಡು. ಅವಳ ಮಗ ಮೊದಲು ಲಿಂಗಪ್ಪನನ್ನು ಕಂಡರೆ ಆಗದವನು ಈಗ ಅವನ ಬೆನ್ನುಹತ್ತಿಯೇ ತಿರುಗಾಡುತ್ತಿದ್ದ. ಅದಕ್ಕಾಗಿ ಪಾರ್ವತೆವ್ವಗೌಡತಿಗೆ ಮುಖ ತೋರಿಸುವದು ಕಠಿಣವಾಗಿತ್ತು. ಎಷ್ಟೆಂದರೂ ಗೌಡರ ಮನೆತನದ ಉಪ್ಪು ತಿಂದೇ ಬೆಳೆದಿಲ್ಲವೇ? ಅದೂ ಅಲ್ಲದೆ ಮಗ ಎಲ್ಲಿ ಕುಡಿಯಲಿಕ್ಕೆ ಕಲಿತು ತಂದೆಯ ಮುಖಕ್ಕೆ ಮಸಿ ಬಳಿಯಲಿರುವನೋ ಎಂದು ನಿಂಗವ್ವನಿಗೆ ಚಿಂತೆಯಾಗಿತ್ತು. ಅವಳ ಒಬ್ಬನೇ ಮಗ, ಅವನ ಜೊತೆಗೂ ಕೆಡಿಸಿಕೊಳ್ಳುವಂತಿಲ್ಲ. ಅವನಿಗೆ ಬೇಕಾದ ಲಿಂಗಪ್ಪಗೌಡ ತನಗೂ ಬೇಕಾದವನಾಗಬೇಕಾಗಿತ್ತು. ಮುಂದೆ

ಎಲ್ಲಿ ಚಿಮಣಾಳನ್ನು ಕರೆದು ತರುವನೋ ಎಂದು ನಿಂಗವ್ವನಿಗೆ ಭೀತಿಯಾಗಿತ್ತು. ಮೊದಲೊಮ್ಮೆ ಒಪ್ಪಿ ಈಗ ನಾಲ್ಕು ಜನರಲ್ಲಿ ತಲೆಯೆತ್ತಿ ತಿರುಗಾಡುವಂತಿರಲಿಲ್ಲ.

ಜೋಕಾಲಿಗಳು ಮುಗಿಲಲ್ಲಿ ಏರಿ ಇಳಿಯುತ್ತಿರುವದನ್ನು ನೋಡುತ್ತ ನಿಂತಿದ್ದ ಈ ಹೆಂಗಳೆಯರಿಗೆ ಅತ್ತ ಲಕ್ಷ್ಯವೇ ಇರಲಿಲ್ಲ. ಉಸುಕಿನ ಬುಡದಲ್ಲಿ ಹರಿಯುವ ಹಳ್ಳದಂತೆ ಅವರೆಲ್ಲರ ಬಾಳಿನಲ್ಲೂ ನೋವು ಹರಿಯುತ್ತಿತ್ತು. ಉಳಿದ ಹೊತ್ತಿನಲ್ಲಿ ಗುಪ್ತವಾಗಿದ್ದದ್ದು ಇಂಥ ಪ್ರಸಂಗಗಳಲ್ಲಿ ಉಕ್ಕಿ ಹೊರಚಲ್ಲುತ್ತಿತ್ತು.

ಹಿಂದಿನ ರಾತ್ರಿ ಪಡದಯ್ಯನವರು ಹಾಗೂ ಲಿಂಗಪ್ಪ ಇಬ್ಬರೂ ಕೂಡಿ ಗೌಡರ ಹಗೆಗಳ ಲೂಟಿ ಮಾಡಿದ್ದಕ್ಕಾಗಿ ವಿಚಾರಣೆ ನಡೆಸಲು ಇಂದು ದೈವದವರ ಸಭೆ ಸೇರಿತ್ತು. ಅಲ್ಲಿಯೂ ಅದೇ ಗೊಂದಲವೇ. ಜನರು ತಲೆಗೊಂದರಂತೆ ಮಾತಾಡಿ ಸಭೆ ಸುಸೂತ್ರವಾಗಿ ಸಾಗದಂತೆ ಮಾಡಿದ್ದರೂ ಪಾರ್ವತೆವ್ವನ ಪಂಗಡದವರು ಲಿಂಗಪ್ಪ ಮಾಡಿದ್ದು ತಪ್ಪೆಂದೇ ಕೊನೆಯವರೆಗೆ ಸಾಧಿಸಿದ್ದರು. ಲಿಂಗಪ್ಪನ ಪಕ್ಷದವರಿಗೆ ಅವನು ದೇವರೆಂದೇ ಕಂಡಿದ್ದ. ಬಡವರಿಗೆ ಕಾಳು ಹಂಚುವದರಲ್ಲಿ ತಪ್ಪೇನು ಬಂತು? ಒಂದು ದೃಷ್ಟಿಯಿಂದ ಶಂಕರಪ್ಪಗೌಡರ ಸತ್ಸಂಪ್ರದಾಯವನ್ನೇ ಅವನು ಮುಂದುವರಿಸಿದ್ದ. ಹೀಗೆ ವಾದ-ಪ್ರತಿವಾದಗಳಿದ್ದದ್ದರಿಂದ ನಿರ್ಣಯ ಹೇಳುವದು ಬಿಗಿಯಾಗಿತ್ತು. ಬಾಳಾಚಾರ್ಯರು, ಶೇಷಪ್ಪ ಎಷ್ಟೇ ವಾದಿಸಿದ್ದರೂ ಅದರಿಂದೇನೂ ಪರಿಣಾಮವಾಗಿರಲಿಲ್ಲ. ತಾವು ಮಾಡಿದ್ದು ಲೂಟಿಯೇ ಅಲ್ಲವೆಂದು ವಾದಿಸುವವರಿಗೆ ಹೇಗೆ ಮನಗಾಣಿಸಬೇಕು? ಆದರೂ ಬಾಳಾಚಾರ್ಯರು ಇನ್ನೂ ಒಂದೆರಡು ಮಾತು ಹೇಳಬೇಕೆಂದಿದ್ದಾಗ ಯಾವನೋ ಒಬ್ಬ ಅವರಿಗೆ ಹಗುರಾಗಿ ಮಾತಾಡಿಬಿಟ್ಟ. ಇಲ್ಲಿಯ ವರೆಗೆ ಬಾಳಾಚಾರ್ಯರಿಗೆ ಯಾರೂ ಹೀಗೆ ನುಡಿದಿರಲಿಲ್ಲ. ಅವರಿಗೆ ಅಪಮಾನವೆನಿಸಿತು. ಅದಕ್ಕಿಂತ ಹೆಚ್ಚಾಗಿ ದುಃಖವೂ ಆಯಿತು. ಮರುಮಾತಾಡದೆ ಹೆಗಲ ಮೇಲೆ ಪಂಜೆಯನ್ನು ಹಾಕಿಕೊಂಡು ಚಾವಡಿಯಿಂದ ಹೊರಬಿದ್ದಿದ್ದರು. ಲಿಂಗಪ್ಪನ ಪರಿವಾರವೆಲ್ಲ ಅವರು ಹಾಗೆ ಹೋಗುವದನ್ನು ನೋಡಿ ದೊಡ್ಡದಾಗಿ ನಗುವದಕ್ಕೂ ಹಿಂದೆಮುಂದೆ ನೋಡಿರಲಿಲ್ಲ. ಲಿಂಗಪ್ಪ ನಿರಪರಾಧಿಯಾಗಿಯೇ ಉಳಿದ.

ಲಿಂಗಪ್ಪನಿಗೆ ದೈವ ಅನುಕೂಲವಾಗಿತ್ತೆಂದೇ ಹೇಳಬಹುದು. ಅವನಿಗೆ ಇತ್ತೀಚಿಗೆ ಆ ಆತ್ಮವಿಶ್ವಾಸವೂ ಹುಟ್ಟಿತ್ತು. ಅದನ್ನೇ ಹೆಚ್ಚಿಸುವ ಇನ್ನೊಂದು ಘಟನೆಯೂ ನಡೆಯಿತು. ನಾಗರಪಂಚಮಿಯ ಮರುದಿನ ಮುದ್ದಾಂ ಮುಲ್ಕಿ-

ಸಿಪಾಯಿ ತಂದ ಹುಕುಮಿನಿಂದ ಲಿಂಗಪ್ಪನ ಪ್ರಸ್ಥ ಪಾದಳ್ಳಿಯಲ್ಲಿ ಚಿರಸ್ಥಾಯಿ ಯಾಗಿ ಮೆರೆಯಲು ಮತ್ತೊಂದು ಅವಕಾಶ ಹುಟ್ಟಿತು.

ಬರಗಾಲ-ಪೀಡಿತ ಪಾದಳ್ಳಿಯ ರೈತರಿಗೆ ಮುಕ್ತಹಸ್ತದಿಂದ ತಗಾಯಿ ಸಾಲ ಕೊಟ್ಟು ಅದರ ಒಟ್ಟು ಹಣದ ಅಂಕಿಯನ್ನು ಕೂಡಲೆ ವರದಿ ಮಾಡಲು ಗಿಬ್ಸನ್ ಸಾಹೇಬರಿಂದ ತಾಲೂಕ-ಕಚೇರಿಗೆ ಆದೇಶ ಬಂದಿತ್ತು. ಆದ್ದರಿಂದ ತಗಾಯಿಸಾಲ ಪಡೆಯಲು ಇಷ್ಟವಿರುವ ರೈತರನ್ನು ಕರೆದುಕೊಂಡು ಕೂಡಲೇ ತಾಲೂಕ-ಕಚೇರಿಗೆ ಬರಲು ಮಾಮಲೇದಾರರ ಅವಸರದ ಕರೆಯನ್ನು ಮುಲ್ಕೀ ಸಿಪಾಯಿ ತಂದಿದ್ದ. ಶ್ಯಾಮರಾಯ ತನ್ನ ಹೆಂಡತಿ-ಮಕ್ಕಳನ್ನು ಕರೆತರಲು ಇಂದುಪುರಕ್ಕೆ ಹೊರಟು ಹೋಗಿದ್ದ. ಅದೂ ಒಳ್ಳೆಯದೇ ಎಂದೆನಿಸಿತು ಲಿಂಗಪ್ಪನಿಗೆ. ಇಂಥ ಸುಲಭವಾದ ಕೆಲಸದ ಶ್ರೇಯಸ್ಸು ತನ್ನ ಪದರಿಗೆ ಬೀಳಲಿರುವಾಗ, ಅದನ್ನು ಇನ್ನೊಬ್ಬರಿಗೇಕೆ ಕೊಡಬೇಕು? ಲಿಂಗಪ್ಪಗೌಡ ಸಂತೋಷದಿಂದ ಉಬ್ಬಿಹೋಗಿದ್ದ. ಒಂದೊಂದಾಗಿ ಇಂಥ ಕೆಲಸ ಮಾಡುತ್ತ ಹೋಗುವದರಿಂದಲೇ ತನ್ನ ಗೌಡಿಕೆಯ ಪಟ್ಟ ಸ್ಥಿರ ವಾಗಬಹುದೆಂದು ಅವನ ಆಸೆಯಾಗಿತ್ತು.

ತಗಾಯಿಸಾಲ ಪಡೆಯಲೆಳಸುವ ಖಾತೆದಾರರು ಹಾಗೂ ರೈತರು ಮಧ್ಯಾಹ್ನ ದೊಳಗಾಗಿ ಚಾವಡಿಗೆ ಬರಬೇಕೆಂದು ಲಿಂಗಪ್ಪಗೌಡನ ಹೆಸರಿನಲ್ಲಿ ಡಂಗುರ ಸಾರಿತು. ಅದಕ್ಕೆ ಸಂಬಂಧವಿಲ್ಲದವರಿಗೂ ಲಿಂಗಪ್ಪನ ಅಧಿಕಾರದ ಬಗ್ಗೆ ಸಂಶಯ ಉಳಿಯಲಿಲ್ಲ. ಡಂಗುರದವನು ಊರಲ್ಲೆಲ್ಲ ತಿರುಗಾಡಿ, ಡಂಗುರ ಹೊಡೆದು ತಿರುಗಿ ಚಾವಡಿಯನ್ನು ಮುಟ್ಟುವದರೊಳಗಾಗಿಯೇ ರೈತರು ಚಾವಡಿಗೆ ಬಂದು ಕುಳಿತಿದ್ದರು. ಚಾವಡಿಯ ಮುಂದಿನ ಬಯಲೆಲ್ಲ ಅವರಿಂದಲೇ ತುಂಬಿಹೋಗಿತ್ತು. ಲಿಂಗಪ್ಪಗೌಡನೂ ಅಲ್ಲಿ ಬಂದು, ಅವರೆಲ್ಲರಿಗೂ ಊರಿಗೆ ಬರುವ ಸಿದ್ಧತೆಯಿಂದ ಬರಬೇಕೆಂದು ತಿಳಿಸಿ ತಾನು ಮಠಕ್ಕೆ ನಡೆದ.

ಪಡದಯ್ಯನವರಿಗೆ ಯಾವ ಮಾತನ್ನೂ ತಿಳಿಸದೆ ಕೆಲಸ ಮಾಡುವ ಸ್ಥಿತಿ ಯನ್ನು ಇನ್ನೂ ಲಿಂಗಪ್ಪ ಮುಟ್ಟಿರಲಿಲ್ಲ. ಈಗಲೂ ಈ ಮಾತನ್ನು ತಿಳಿಸಬೇಕಾ ಯಿತು. ಇಷ್ಟು ಸುಲಭವಾಗಿ ರೈತರಿಗೆ ತಗಾಯಿಸಾಲದ ಉಪಕಾರ ಮಾಡಬಾರ ದೆಂದು ಅವರ ಅಭಿಪ್ರಾಯವಾಗಿತ್ತು. ಈ ಸಂದರ್ಭದ ಪ್ರಯೋಜನವನ್ನು ಸಂಪೂರ್ಣವಾಗಿ ಪಡೆಯಲೇಬೇಕೆಂದು ಅವರು ನಿರ್ಣಯಿಸಿದರು. ಲಿಂಗಪ್ಪ ಪಾರ್ವತೆವ್ವನ ಭೂಮಿಯ ಕಬಜಾ ಪಡೆಯುವಾಗ ರೈತರಿಂದ ಹಾರ್ದಿಕ ಸಹಾಯ

ವನ್ನು ಪಡೆಯುವ ಕರಾರನ್ನು ಹಾಕಲೇಬೇಕು. ಲಿಂಗಪ್ಪಗೌಡನೂ ಪಡದಯ್ಯ ನವರ ಮಾತಿಗೊಪ್ಪಿದ.

ಇನ್ನು ತಾಲೂಕಿಗೆ ಹೊರಡಬೇಕೆಂದು ರೈತರೆಲ್ಲ ಗುಂಪಾಗಿ ಗೌಡರನ್ನು ಕರೆಯಲು ಮಠಕ್ಕೆ ಬಂದರು. ಪಡದಯ್ಯನವರನ್ನು ಕಾಣದೆ ಹೇಗೆ ಹೋಗುವ ದೆಂದು ಒಳಗೆ ಬಂದರು. ಪಡದಯ್ಯನವರು ಎಂದಿಲ್ಲದ ಆದರದಿಂದ ಅವರನ್ನೆಲ್ಲ ಸ್ವಾಗತಿಸಿ ಕೂಡಿಸಿದರು. ಮೆಲ್ಲಗೆ ತಮ್ಮ ಉದ್ದೇಶವನ್ನೂ ಸುತ್ತುಸುತ್ತಾಗಿ ವಿವರಿಸ ತೊಡಗಿದರು. ಗೌಡರು ಈಗ ಮಾಡಲಿರುವ ಉಪಕಾರಕ್ಕೆ ರೈತರಿಂದ ಯಾವ ಪ್ರತ್ಯುಪಕಾರವನ್ನು ಅಪೇಕ್ಷಿಸಬೇಕೆಂಬುದೇ ಅವರ ಮಾತಿನ ತಿರುಳಾಗಿತ್ತು. ಅದಕ್ಕೆ ಪ್ರತಿಯಾಗಿ ರೈತರು ಗೌಡರಿಗೆ ಸಹಾಯಮಾಡಬೇಕೆಂಬುದಾಗಿ ಕೇಳಿ ದರು. ಅಷ್ಟೇ ಅಲ್ಲ, ಗೌಡರಿಗೆ ನೆರವಾಗುವದಾಗಿ ಅವರೆಲ್ಲ ಆಣೆಮಾಡಬೇಕೆಂದೂ ನಿರ್ಣಯವಾಯಿತು. ಆಣೆ ಮಾಡದ ರೈತನಿಗೆ ತಗಾಯಿಸಾಲ ಕೊಡಿಸಲು ಗೌಡರು ಹೊಣೆಗಾರರಲ್ಲ ಎಂದು ಸ್ಪಷ್ಟವಾಗಿ ತಿಳಿಸಿಬಿಟ್ಟರು.

ತಗಾಯಿಸಾಲ ಸಿಗುವದೆಂದು ಕೇಳಿ ಊರಲ್ಲಿ ಒಂದು ಎಕರೆಯಷ್ಟು ತುಂಡು ಭೂಮಿಯ ಖಾತೆದಾರನೂ, ಏನೂ ಭೂಮಿ ಇಲ್ಲದವನು ಅಂಥ ಖಾತೆದಾರನ ರೈತ ತಾನೆಂದು ಹೇಳಿಕೊಂಡು ಸಾಲಕ್ಕಾಗಿ ಬಂದಿದ್ದರು. ಅವರೆಲ್ಲರಿಗೂ ಪಡ ದಯ್ಯನವರು ಹೇಳಿದ್ದು ಒಂದೇ ಮಾತು: "ಇಗಾ, ನಿಮ್ಮನ್ನೆಲ್ಲಾ ಉದ್ಧಾರ ಮಾಡ ಬೇಕಂತಽ ಗೌಡರು ಈ ಊರಾಗ ಕಾಲಿಟ್ಟಾರು. ಅವರು ಪ್ರಯತ್ನ ಮಾಡಿದ್ದಕ್ಕಽ ಸರಕಾರದವರು ಕರೆಸಿ ತಗಾಯಿಸಾಲ ಕೊಡಾಕ ಹತ್ಯಾರು. ಅವರು ಮಾಡಿದ ಉಪಕಾರಕ್ಕ ತಿರುಗಿ ನೀವೇನು ಮಾಡಬೇಕಂತೀರೆಪಾ?" ಎಂದು ಪ್ರಶ್ನೆಹಾಕಿದರು.

ಗೌಡರು ತಿರುಗಿ ತಮ್ಮಿಂದ ಏನು ಕೇಳಬಹುದೆಂಬುದು ಅನುಭವದಿಂದ ರೈತ ರಿಗೆ ಗೊತ್ತಾಗಿತ್ತು. ಕೂಡಿದವರಲ್ಲೊಬ್ಬನು ಎದ್ದು ನಿಂತು ಸಹಜವಾಗಿಯೇ ಹೇಳಿ ಬಿಟ್ಟ: "ಅದರಾಗೇನರಿ, ಗೊತ್ತಽ ಐತೆಲ್ರಿ? ಹಿಂದ ಕೊಟಗೋತ ಬಂದದರ ಹ್ಹಾಂಗ ಗೌಡರ ಮಾಮೂಲಿ ಅವರಿಗೆ ಮುಟ್ಟಸಲಾಕ ನಾವು ಅದೀವಲ್ಲರಿ!" ಉಳಿದವರೂ ಈ ಮಾತಿಗೆ ಒಪ್ಪಿದರು.

ಜನರ ಅಜ್ಞಾನಕ್ಕಾಗಿಯೆಂಬಂತೆ ಪಡದಪ್ಪನವರು ಒಂದು ತಿರಸ್ಕಾರದ ನಗೆ ಯನ್ನು ಬೀರಿದರು. ಕೈ ಮುಂದಕ್ಕೆ ಚಾಚಿ "ಹುಚ್ಚಪ್ಪ ಗೋಳ್ಯಾ! ಬುದ್ಧಿ ಎಲ್ಲಿಟ್ಟಿ ದ್ದೀರಿ? ಬಡವರು ಬದಕಲಿ ಅಂತ ತಮ್ಮ ಹಗೆ ತಗಿಸಿ ಕಾಳು ಹಂಚಿದ ಗೌಡರು,

ನಮ್ಮ ಕಡಿಂದ ಲಂಚಾ ತಿಂದು ಬದಕತಾರು ಅಂತ ತಿಳದೀರೇನ್ರಲೆ? ಅವರ ಕೈಯಾಗ ದುಡ್ಡಿದ್ದಿದ್ದರ ಇಲ್ಲೇ ನಿಮುಗೆಲ್ಲಾರಿಗೂ ಹಂಚಿಕೊಡತಿದ್ದರು. ಅವರು ಊರಿಗೇ ತಂದಿ. ಅಂತಾ ಗೌಡರ ಉಪಕಾರ ತೀರಸೂ ದಾರೀನಃ ಬ್ಯಾರೇ ಐತಿ" ಎಂದು ಹೇಳಿ ಎಲ್ಲರ ಮುಖಮುದ್ರೆಗಳ ಮೇಲೂ ತಮ್ಮ ಮಾತಿನಿಂದಾದ ಪರಿಣಾಮವನ್ನು ನಿರೀಕ್ಷಿಸಿದರು.

"ಅಪನೋರ, ಆ ಹಾದೀನಾರ ಹೇಳ್ರಿ. ಇಂಥಾ ನಮ್ಮ ಗೌಡರ ಉಪಕಾರ ತೀರಸದ ಮುಡದಾರ ಅನಿಸಿಗೋಳೋ ಜಾತಿ ನಮ್ಮದು ಅಲ್ಲ ತಗೀರಿ!" ಎಂದು ರೈತರು ಉತ್ತರವಿತ್ತರು.

ಪಡದಯ್ಯನವರು ಅದನ್ನು ಮೆಚ್ಚಿ ತಮ್ಮ ಮಾತನ್ನು ಪ್ರಾರಂಭಿಸಿದರು: "ನಾ ಹೇಳೂ ಮಾತಲ್ಲ; ನಿಮುಗs ತಿಳೀಬೇಕಾಗಿತ್ತು. ಊರ ಗೌಡರು ಗೇಣ ಭೂಮಿ ಇಲ್ಲದ ಊರಾಗ ಇರೂದರೆ ಹ್ಯಾಗ? ಅದು ಅವರಿಗೂ ಮರ್ಯಾದಿ ಅಲ್ಲ, ನಿಮುಗೂ ಅಲ್ಲ. ಸೊಟ್ಟ ಚಿಮಣಾನಂತಾ ಹೆಣಮಗಳು ತನ್ನ ಪಾಲಿನ ಭೂಮಿ ಕಬಜಾ ತೊಗೊಳ್ಳೊಮುಂದ ಊರ ಜನರು ಬೆನ್ನಕಟ್ಟಿದರು. ಗೌಡರಿಗೆ ಅವರ ಪಾಲಿನ ಭೂಮಿ ಕಬಜಾ ಕೊಡಸಿದರ, ಅವರ ಉಪಕಾರಾ ತೀರಿಸಿದರು ಅಂತ ನಾ ಅಂತೇನಿ" ಎಂದು ಹೇಳಿದರು.

ರೈತರಿಗೆ ಈಗ ಎಲ್ಲ ಲಕ್ಷ್ಯಕ್ಕೆ ಬಂದಂತಾಯಿತು. ಅವರೂ ಸ್ವಲ್ಪ ಹೊತ್ತು ವಿಚಾರ ಮಾಡಿದರು. ಪಡದಯ್ಯನವರು ಹೇಳಿದ್ದು ಅಲ್ಲವೆನ್ನುವಂತಿರಲಿಲ್ಲ. ಆದರೂ ಕೆಲ ಅಡಚಣಿಗಳಿದ್ದವು. ರೈತನೊಬ್ಬ ಎದ್ದು, "ಯಪ್ಪಾ, ನೀವು ಹೇಳೂದು ಎಲ್ಲ ಕರೇರಿ ತಂದೆ. ಆದರ ನಾನಾನ ಮರಡಿಹೊಲಾ ಇನ್ನೂ ಬಿತ್ತಿಗಿ ಕಂಡಿದ್ದಿಲ್ಲಾ. ನೀವು ಬಿತ್ತಿಸಿ ಭೂಮಿ ಕಬಜಾ ತೊಗೊಂಡಿರಿ. ಅದು ಪಾಡ ಆತು. ಆದರ ಗೌಡರ ಮಸಾರಿಭೂಮಿಗೆ ಪಾರ್ವತೆವ್ವನೋರು ಮುಕ್ಕಟ್ಟ ಬಿತ್ತಿಗಿ ಮಾಡಿಸ್ಯಾರರಿ. ಇನ್ನ ಬೆಳೀ ಕೊಯ್ಯೂಮಟಾ ಆ ಹೊಲದ ಕಬಜಾ ತೊಗೊಳ್ಳಾಕ ಹ್ಯಾಗ ಬಂದೀತರಿ?" ಎಂದು ಕೇಳಿದ.

ಈ ರೀತಿಯ ಸೂಕ್ಷ್ಮ ಪಡದಯ್ಯನವರಿಗೆ ಗೊತ್ತಿರಲಿಲ್ಲವೆಂತಲ್ಲ. ಆದರೆ ಕಾಲು ಕೆದರುವದೇ ಅವರಿಗೀಗ ಬೇಕಾಗಿತ್ತು. "ಬಿತ್ತಿದ್ದರ ಏನಾತಲೇ? ಈಗ ಆ ಬಿತ್ತಿದ್ದನ್ನು ನಾವು ಹರಗಿದರ ಬಿತ್ತಿದರ ಭೂಮಿ ನಮುಗ ಕಬಜಾ ಸಿಕ್ಕಹಾಂಗ ಆಗ ತೈತಿಲ್ಲ?" ಎಂದು ನುಡಿದರು. ಲಿಂಗಪ್ಪಗೌಡನೂ ಅದೇ ಮಾತನ್ನೇ ಆಡಿ

ತೋರಿಸಿದ.

ಅಲ್ಲಿ ನೆರೆದವರೆಲ್ಲರೂ ರೈತರು. ಕಲಿತವರಲ್ಲವಾದರೂ ಸುಸಂಸ್ಕೃತರು, ಬಡವರಾಗಿದ್ದರೂ ಅಭಿಮಾನಿಗಳು. ಭೂಮಿ ಕೇವಲ ಅವರಿಗೆ ಹೊಟ್ಟೆಯ ಸಾಧನವಾಗಿರಲಿಲ್ಲ, ದೇವತೆಯಾಗಿತ್ತು. ಪಡದಯ್ಯನವರಾಡಿದ ಮಾತುಗಳನ್ನು ಕೇಳಿ ಅವರಿಗೆ ಸಿಡಿಲು ಬಡಿದಂತಾಯಿತು. ಯಾವ ರೈತನೂ ಈ ಮಾತಿಗೊಪ್ಪು ವದು ಸಾಧ್ಯವಿರಲಿಲ್ಲ. ಬಿತ್ತಿದ್ದ ಭೂಮಿಯನ್ನು ಹರಗುವದು ಹಾದರದಷ್ಟೇ ಪಾಪ ವಾಗಿತ್ತು.

"ಚೀ, ಚೀ, ನಾವು ಬೂಮ್ಯಾಗಽ ಬದುಕು ಮಾಡೋ ಒಕ್ಕಲಿಗ್ಯಾರ್ರೀ ಯಪ್ಪಾ! ರೈತ ಭೂಮಿತಾಯಿಯ ಮಗಾ. ಆಕಿ ಹೊಟ್ಟ್ಯಾಗಽ ಬದಕೂದು, ಅಲ್ಲೆ ಸಾವೂದು ನಮ್ಮದು. ಬಿತ್ತಿದ ಭೂಮಿ ಮುರದು ಬಿತ್ತಿ ತಾಯಿಗ್ಗಂಡತನಾ ಮಾಡಾಕಿಲ್ಲರಿ. ಅದು ರೈತನ ಧರ್ಮ ಅಲ್ಲ. ಅದೊಂದು ಬಿಟ್ಟು ಬೇಕಾದ್ದು ಹೇಳ್ರಿ, ನಡಿಸಿಕೊಡತೇವು." ಎಂದು ರೈತರೆಲ್ಲ ನಿಟ್ಟುಸಿರುಗರೆದು ಹೇಳಿದರು.

"ಆ ಧರ್ಮ ನಮಗೂ ಗೊತ್ತಿಲ್ಲೇನ್ರೆಪಾ ದೈವಾ? ಆದರ ಪರಸಂಗ ನೋಡಿ ಧರ್ಮಾ ಮಾಡಬೇಕಾಕ್ಕೈತಿ. ಮುರದು ಬಿತ್ತೂದು ಪಾಪ, ಖರೆ. ಆದರ ಊರ ಗೌಡನ್ನ ಉಪಾಸ ಕೆಡವೂದು ಅದಕಿನ್ನಾ ಹೆಚ್ಚಿನ ಪಾಪ ಅಲ್ಲಽ? ಮುಂಗಾರಿ ಮಳಿ ಆಗಿರದಿದ್ದರ, ಹಿಂಗಾರಿಗೆ ಮುರದು ಬಿತ್ತತೀರಿಲ್ಲೊ? ಈಗೂ ಹಾಗಽ ಅಂತ ತಿಳೀರಿ. ಇಲ್ಲದ ವಿಚಾರಾ ತೆಲ್ಯಾಗ ತುಂಬಿಕೊಂಡು ಮಾತಾಡಬಾರದು. ಅದೇನಽ ಪಾಪ ಬಂದರೂ ನಾವು ಹೊಟ್ಟ್ಯಾಗ ಹಕ್ಕೊಳ್ಳಾಕ ತಯಾರ ಅದೀವೆಲ್ಲ! ನಿಮ್ಮ ತಾಬೇದಾಗಿನ ಭೂಮ್ಯಾಗ ಮತ್ತ್ಯಾರರ ಬೀಜಾ ಬಿತ್ತಿದರ ನೀವು ಸುಮ್ಮಾಕಽ ಇರತೀರ್ಯಾ? ಗೌಡರ ಪಾಲಿನ ಭೂಮಿ ಗೌಡರಿಗೆ ಬರಾಕಽಬೇಕು. ಅದಕ ನೀವೆಲ್ಲಾ ಇದರಾಗ ಸಹಾಯ ಮಾಡಾಕಽಬೇಕು." ಇಷ್ಟು ಹೇಳುವಾಗ ಪಡ ದಯ್ಯನವರ ದನಿ ಆವೇಶದಿಂದ ತುಂಬಿತ್ತು. ಬಿತ್ತಿದ ಭೂಮಿಯನ್ನು ಮುರಿದು ಬಿತ್ತುವದು ಈಗ ಅವಶ್ಯವಾಗಿದೆಯೆಂದೇ ಸಾಧಿಸಿದರು. ಅದಕ್ಕೆ ಒಪ್ಪಿಗೆ ಇರುವ ರೈತರೆಲ್ಲ ಪಡದಯ್ಯನವರ ಪಾದಮುಟ್ಟಿ ಆಣೆ ಮಾಡಬೇಕು. ಒಪ್ಪಿಗೆಯಿಲ್ಲದವರು ಸ್ಪಷ್ಟವಾಗಿ ಹಾಗೆ ಹೇಳಿಬಿಡಬೇಕು. ತಮ್ಮ ವಿರುದ್ಧ ನಿಂತ ಜನರಾದರೂ ಯಾರು ಎಂದು ಗೌಡರಿಗೆ ಒಮ್ಮೆ ತಿಳಿಯಲಿ ಎಂದರು.

ರೈತರಲ್ಲಿ ಭಿನ್ನಾಭಿಪ್ರಾಯ ಪ್ರಾರಂಭವಾಯಿತು. ಭೂಮಿಯಲ್ಲಿ ಶ್ರದ್ಧೆ

ಯಿಲ್ಲದವರು ಒಪ್ಪಬಾರದೇಕೆ ಎಂದು ವಾದಿಸಿದರು. ಆದರೆ ಇನ್ನಿತರರ ಹಟ-ಮಾರಿತನವೂ ಅಷ್ಟೇ ಗಟ್ಟಿಯಾಗಿತ್ತು. ಪಡದಯ್ಯನವರ ಮಾತಿನಿಂದ ಅವರ ಸುಪ್ತವಿನಯಕ್ಕೇ ಆಘಾತವಾಗಿತ್ತು. ಇಂಥ ಮಾತುಗಳನ್ನಾಡುವದೂ ಕೂಡ ಪಾಪವೆಂದು ಬಾಯಿಂದ ಹೇಳಲಾಗದಿದ್ದರೂ ಅವರ ಅಂತರಂಗಕ್ಕೆ ವೇದ್ಯವಾಗಿತ್ತು. ಸ್ವಲ್ಪ ಹೊತ್ತು ಅವರಲ್ಲಿಯೇ ಗುಜುಗುಜು ನಡೆಯಿತು.

ಹಿರೇಕುರುಬ ಮಾಯಪ್ಪ ಗುಂಪಿನಿಂದೆದ್ದು ಬಂದು ಪಡದಪ್ಪನವರ ಪಾದ ಮುಟ್ಟಿ, "ಗುರುವಿನ ಪಾದಾ ಮುಟ್ಟಿ ಆಣೀ ಮಾಡತೀನು. ಗೌಡರ ಭೂಮಿ ಕಬಜಾ ಅವರಿಗೆ ಕೊಡಸಲಾಕ ಅವರು ಹೇಳಿದ್ದೆಲ್ಲಾ ಮಾಡಾಕ ನಾ ತಯಾರ ಅದೀನು" ಎಂದು ಸಾರ್ವಜನಿಕವಾಗಿ ಘೋಷಿಸಿದ. ಪಡದಯ್ಯನವರು ಹಸನ್ಮುಖ ರಾದರು. ಅಕ್ಕರೆಯಿಂದ ಅವನ ತಲೆಯನ್ನೆತ್ತಿ, ಅವನ ಬೆನ್ನು ಚಪ್ಪರಿಸುತ್ತ, "ಇದಕ್ಕಂತಾರು ಗುರುಭಕ್ತಿ ಅಂತ. ಇಂಥಾ ಹತ್ತುಜನಾ ಊರಾಗ ಇದ್ದರ ಊರೇ ಆಳಬಹುದು. ಸ್ವಾರ್ಥಿಗಳು ಸಾವಿರಜನಾ ಇದ್ದರೂ ಅವರನ್ನ ತೊಗೊಂಡೇನು ಹುಗಿಯೂದೈತಿ? ತಗಾಯಿ ಸಾಲ ಕೊಡಸಲಾಕ ಗೌಡರು ಬರಬೇಕು. ಎತ್ತು ಕೂರಿಗಿ ತೊಗೊಂಡು, ಅವನ ಭೂಮಿ ಬೀಜಾ ಕಾಣಸಾಕ ಬರ್‍ರ್‍ಯೀ ಅಂದರ ಧರ್ಮ ಕರ್ಮ ಅಂತ ಶಾಸ್ತ್ರ ಓದತೀರ್‍ಯಾ? ಇಂಥಾ ಜನರಿಂದ ಏನಾಗಬೇಕಾಗೇತಿ? ಮಾಯಪ್ಪಾ, ನೀನೊಬ್ಬನs ನೋಡು ಭಂಟಶಿಷ್ಯಾ!" ಎಂದು ಪಡದಯ್ಯನವರು ಅವನನ್ನು ಹೊಗಳುವ ನೆವದಲ್ಲಿ ಉಳಿದವರನ್ನೆಲ್ಲ ಮೂದಲಿಸಿದರು.

"ಅಲ್ರೀ ಅಪನೋರ, ಇಂದ ನಾವು ಮುರದು ಬಿತ್ತಿದ್ದನ್ನ ಪಾರ್ವತೆವ್ವನ ಆಳು ಬಂದು ಹರಗಿಬಿಟ್ಟರ ಭೂಮಿ ಪಡಾ ಬೀಳಾಕಿಲ್ಲರೇ ?" ಎಂದೊಬ್ಬ ರೈತ ಅಡ್ಡಮಾತು ತೆಗೆದ.

"ಒಳ್ಳೇ ಕೆಲಸ ಆಗಬೇಕಾಗಿದ್ದರ ಭೂಮಿ ಪಡಾ ಬಿದ್ದರೂ ದಾದಮಾಡ ಬಾರದು. ಬೇಕಂತs ಪಡಾಕೆಡವಿದರ ಅದು ಪಾಪ. ಗೌಡರಿಗೆ ಸಹಾಯ ಮಾಡಾಕ ಹೊಂಟಾವರು ಇವನ್ನೆಲ್ಲಾ ಲಕ್ಷ್ಯದಾಗ ತರಬಾರದು. ಪಡಾಬಿದ್ದರ ಮುಂದೇನು ಗತಿ ಅನ್ನೊ ಚಿಂತಿ ನಿಮಗ ಬ್ಯಾಡ. ಈ ವರಸದ ತಂಟೀದಾಗ ಭೂಮಿ ಪಡಾಬಿದ್ದರ ಯಾರೇನು ಸಾಯೂದಿಲ್ಲ." ಎಂದು ಅವರಿಗೇ ಸಮಾಧಾನ ಹೇಳಿದರು.

ಇಷ್ಟಾದರೂ ರೈತರಲ್ಲಿ ಕೆಲವರಿಗೆ ಪಡದಯ್ಯನವರ ವಿಚಾರ ಸರಿಬರಲೇ ಇಲ್ಲ. ತಲೆತಲಾಂತರದಿಂದ ಗೌಡರ ಮನೆತನದ ಉಪ್ಪು ಅವರ ರಕ್ತ-ಮಾಂಸ ಗಳಲ್ಲಿ ಒಂದಾಗಿತ್ತು. ತಿಂದ ಕೂಳಿಗೆ, ಇದ್ದ ಮನೆಗೆ, ಕೆಲಸಮಾಡುವ ಹೊಲಕ್ಕೆ ಅಪಮಾನ ಮಾಡುವದು ಒಕ್ಕಲಿಗನ ಸಂಸ್ಕೃತಿಯಲ್ಲವೆಂದು ಅವರಿಗೆ ಗೊತ್ತಿತ್ತು. ಸಾವಿರಾರು ವರ್ಷಗಳಿಂದ ಅವರು ನಂಬಿದ ನೀತಿಗೆ ಈ ಮಾತು ಸಮ್ಮತವಾಗು ವಂತಿರಲಿಲ್ಲ. ಸ್ಪಷ್ಟವಾಗಿ ತಮ್ಮ ಕೈಯಿಂದ ಇಂಥ ಕೆಲಸವಾಗಲಾರದೆಂದು ಅವರು ಹೇಳಿಬಿಟ್ಟರು. ಹಾಗಾದರೆ ಅವರು ತಗಾಯಿ ಸಾಲದ ಆಸೆಯನ್ನೂ ಬಿಡಬೇಕಾದೀ ತೆಂದು ಪಡದಯ್ಯನವರೂ ಅಷ್ಟೇ ಸ್ಪಷ್ಟವಾಗಿ ಹೇಳಿಬಿಟ್ಟರು. ಉಳಿದವರು, ಈ ಮಾತಿಗೆ ನಿರಾಕರಿಸಿದ ರೈತರನ್ನೇ ತೆಗಳಹತ್ತಿದರು. "ಊರ ಗೌಡ, ಅವನ ವಿರುದ್ಧ ನಿಂತು ಬಾಳೇ ಮಾಡಾಕ ಆದೀತs? ಅವರು ಭೂಮಿ ಪಡಾಕೆಡವಲಿ, ಬೇಕಾರ ಬಿಡಲಿ. ನಮ್ಮದೇನು ಹೋಗೂದೈತಿ? ನಮಗ ಸಾಲಾ ಕೊಡಸತಾರು, ಅವರು ಹೇಳಿದಷ್ಟು ನಾವು ಕೇಳಿದರಾತು." ಎಂದು ಹೇಳಿ ಮಾಯಪ್ಪನಂತೆ ಪಡದಯ್ಯ ನವರ ಪಾದಮುಟ್ಟಿ ಆಣೆಮಾಡಿದರು.

ಆಣೆಮಾಡಲು ಒಲ್ಲೆಂದವರು ನಿರಾಶರಾಗಿ ತೆರಳಿದರು. ಅವರ ಮನಸ್ಸು ಅಸ್ಪಷ್ಟ ಭೀತಿಗಳಿಂದ ತುಂಬಿತ್ತು. ಆದದ್ದಾಗಲೆಂದು ತಿರುಗಿದರು. ಲಿಂಗಪ್ಪ ಗೌಡನ ಬೆಂಬಲಕ್ಕೂ ಸಾಕಷ್ಟು ಜನರಿದ್ದರು. ಅವನು ಈ ಹಿಂಡಿನೊಡನೆ ತಾಲೂಕಿಗೆ ಪ್ರಯಾಣ ಬೆಳೆಸುವ ಮೊದಲು, ಪಡದಯ್ಯನವರಿಗೆ ನಮಸ್ಕರಿಸಿ ಅವರ ಆಶೀರ್ವಾದವನ್ನು ಪಡೆಯಲು ಮರೆಯಲಿಲ್ಲ. ಊರಿನಿಂದ ತಿರುಗಿ ಬಂದ ಮೇಲೆ ಗೌಡರ ಹೊಲದ ಕಬಜಾ ಪಡೆಯಬೇಕೆಂದು ಗೊತ್ತಾಗಿತ್ತು.

ಮಠದಲ್ಲಿ ನಡೆದ ಈ ವರ್ತಮಾನ ಬೇಗನೆ ಊರಲ್ಲಿ ಹರಡಿತು. ಕೇಳಿದ ವರೆಲ್ಲ ಕಳವಳಕ್ಕೀಡಾದರು. ಚಿಮಣಾಳ ಹೊಲದ ಕಬಜಾ ತೆಗೆದುಕೊಂಡಾಗಲೇ ಕೆಲವರು ಹಳಹಳಿಸಿದ್ದರು. ಈಗಂತೂ ಪಾದಳ್ಳಿಯ ಅಭಿಮಾನಕ್ಕೇ ಪಡದಯ್ಯ ನವರು ಕೈಹಾಕಿದ್ದರು. ಸಾಮಾನ್ಯ ಜನರ ಭಾವನೆಗಳೆಲ್ಲ ಈ ಸುದ್ದಿಯನ್ನು ಕೇಳಿ ಉದ್ದೀಪಿತವಾದವು.

ಗೌಡರ ಮನೆತನದ ವತನೀ ಭೂಮಿ ಇನ್ನು ಕೈಬಿಡುವದೆಂದು ಅವರಿ ವರು ಬಂದು ಪಾರ್ವತೆವ್ವನಿಗೆ ಸುದ್ದಿ ಮುಟ್ಟಿಸಿದರು. ತನ್ನ ಅಪೀಲು ಸೋತಂದಿ ನಿಂದ ಪಾರ್ವತೆವ್ವ ನಿರ್ವಿಣ್ಣಳಾಗಿದ್ದಳು. ಆಳುಗಳನ್ನು ಬಿಟ್ಟರೆ ಹೊರಗಿನ

ಜಗತ್ತಿನ ಸಂಪರ್ಕವೇ ಅವಳಿಗಿರಲಿಲ್ಲ. ಇನ್ನುಮೇಲೆ ಎಂದಿಗೂ ಈರ್ಷ್ಯೆ ಅಭಿಮಾನಗಳಿಗೆ ಮನಸೋತು, ಬಣಕಟ್ಟಿ ಹೋರಾಡಬಾರದೆಂದು ನಿಶ್ಚಯಿಸಿ ಕೊಂಡಿದ್ದಳು. ಈಗ ಆದ ಅಪಮಾನವೇ ಸಾಕಾಗಿತ್ತು. ಒಮ್ಮೆ ಈ ಊರು ಬಿಟ್ಟು, ಮಕ್ಕಳೊಡನೆ ಅಣ್ಣನ ಮನೆಗೇ ಹೋಗಬೇಕೆಂದಿದ್ದಳು. ಆದರೆ ಅದು ಅವಳ ಹೃದಯ ಕ್ಕೊಪ್ಪಿದ ಮಾತಲ್ಲ. ಶಂಕರಪ್ಪಗೌಡರಿದ್ದಾಗಲೇ ಊರು ಬಿಡದವಳು, ಅವರು ಸತ್ತ ಮೇಲೆ, ಮನೆತನವನ್ನು ಹಾಳುಗೆಡವಿ ಹೋಗಬೇಕೇ? ಮನೆತನವನ್ನು ಮುಂದು ವರಿಸುವಷ್ಟು ತ್ರಾಣವಿಲ್ಲದವಳಾಗಬೇಕೇ ಎಂದು ಆಲೋಚಿಸಿ ಆ ವಿಚಾರವನ್ನೂ ಬಿಟ್ಟುಕೊಟ್ಟಿದ್ದಳು. ಕ್ರಮೇಣ ಮನೆಯ ಹೊಸ್ತಿಲದಾಚೆಗೆ ಏನು ನಡೆದಿದೆ ಯೆಂಬುದರ ಬಗ್ಗೆ ಯೋಚಿಸುವದನ್ನೇ ಬಿಟ್ಟುಬಿಟ್ಟಳು. ಮನೆಯ ದನಕರು, ಆಳು ಕಾಳು ಇವುಗಳ ಕೆಲಸವೇ ಬೇಕಾದಷ್ಟಿತ್ತು. ಮಕ್ಕಳನ್ನು ಸಾಕುವದಿತ್ತು. ಪಾರ್ವ ತೆವ್ವ ಸಂಪೂರ್ಣವಾಗಿ ಮನೆಯ ವ್ಯವಹಾರದಲ್ಲಿಯೇ ಮುಳುಗಿದ್ದಳು.

ಆದರೆ ತಾನು ಮರೆತರೂ ಜಗತ್ತು ತನ್ನನ್ನು ಮರೆತಿರಲಿಲ್ಲ. ಶಂಕರಪ್ಪ ಗೌಡರು ಸತ್ತಂದಿನಿಂದ ಗೌಡರ ಮನೆತನಕ್ಕೆ ಸಾವಿರ ವಿಘ್ನಗಳು ಹೊರಗಿನಿಂದ ಬಂದಿದ್ದವು. ಗೌಡರ ಮನೆತನವೆಂದರೆ ಪಾಡಳ್ಳಿಯ ಜೀವಕೇಂದ್ರವಾಗಿತ್ತು. ಗುರಿ ಯಿಟ್ಟಂತೆ ಅಲ್ಲೇ ಹೊಡೆತ ಬೀಳುತ್ತಿರಬೇಕೇ? ಭಾರತಹುಣ್ಣಿವೆಗೆ ತುಂಬಿದ ಬೆಳೆ ಕಳವಾಗುವದರಲ್ಲಿತ್ತು; ಹೋಳೀಹುಣ್ಣಿವೆಗೆ ಮನೆ ಲೂಟಿಯಾಗುವದರ ಲ್ಲಿತ್ತು; ಕಾರಹುಣ್ಣಿವೆಗೆ ತನ್ನ ಎತ್ತು ಕರಿಹರಿಯಲಿಲ್ಲ. ಲಿಂಗಪ್ಪ ಗೌಡನೆಂದು ನಿರ್ಣಯವಾದ ಮೇಲೆ ಮನೆಯಲ್ಲಿ ಕಬಜಾ ಕೇಳಲು ದಾಳಿಯಿಡುವವರಂತೆಯೇ ಬಂದಿದ್ದ. ಗೌಡರ ಮನೆತನದ ಪುಣ್ಯಬಲವೊಂದು ಕಾಯುತ್ತಲೇ ಬಂದಿತ್ತು. ಈಗಲೂ ಅದೇ ಪುಣ್ಯಾಂಶ ಮನೆತನವನ್ನು ಕಾಯಬಹುದಲ್ಲ, ಎಂದು ಗೌಡಿತಿಯ ಆಸೆ. ಏನು ಮಾಡಿದರೂ ಜನರು ಗೌಡರನ್ನು ಮರೆಯಲಾರರು. ಪಾಡಳ್ಳಿಗೇ ಜೀವ ವಿತ್ತು ಬದುಕಿಸಿದ ಮನೆತನ ತಮ್ಮದು. ಕಾಲರಾದಲ್ಲಿ ಆಕಸ್ಮಿಕವಾಗಿ ಮರಣ ಹೊಂದಿದ ಶಂಕರಪ್ಪಗೌಡರ ಘನತೆಯನ್ನೂ, ದಯೆಯನ್ನೂ ಜನ ಇಷ್ಟು ಬೇಗ ಮರೆಯಬಹುದೇ? ಅವರ ಸ್ಮಶಾನಯಾತ್ರೆಯ ಕಾಲಕ್ಕೆ ಊರಿಗೂರೇ ನೆರೆದಿ ತ್ತಲ್ಲ! ಇಂದಿಗೂ ಗೌಡರ ಮನೆತನದ ಸುಖ-ದುಃಖಗಳನ್ನು ತಮ್ಮವೆಂದೇ ತಿಳಿದು ಕೊಂಡ ಜನರಿದ್ದಾರಲ್ಲ! ಹಿರಿಯ್ಯನವರ ಮಾತಿಗೊಪ್ಪಿದೆ ಕೆಲ ರೈತರು ತಗಾಯಿ ಸಾಲವನ್ನೂ ಕೂಡ ಬಿಟ್ಟುಕೊಟ್ಟದ್ದೇ ಇದಕ್ಕೆ ನಿದರ್ಶನವಾಗಿತ್ತು.

ಅದೆಲ್ಲ ನಿಜ. ಆದರೂ ದೈವ ಮತ್ತೆ ಮತ್ತೆ ಇದೇ ಘನತೆತನವನ್ನೇ ಏಕೆ ಪರೀಕ್ಷಿಸಿ ನೋಡುತ್ತಿದೆ? ತಾನು ಎಷ್ಟಾದರೂ ಹೆಣ್ಣು ಮಗಳು. ಇಂಥ ಆಘಾತ ಗಳನ್ನು ಸುಲಭವಾಗಿ ಸಹಿಸಬಹುದೇ? ತನಗಾದರೂ ಆಪ್ತರಿಲ್ಲವೆಂಬುದೇ ಅವಳ ಕೊರಗಾಗಿತ್ತು. ನಂಬಿದವರೆಲ್ಲ ಹೊತ್ತಿಗೆ ಮೋಸಮಾಡಿ ಹೊರಟುಹೋಗಿದ್ದರು. ಪಾರ್ವತೆವ್ವನಿಗೆ ಭವಿತವ್ಯವೇ ನಿರಾಶಾದಾಯಕವೆನಿಸಿತು. ಏನೇ ಆಗಲಿ ಮಾತಾಡಿ ಯಾದರೂ ನೋಡೋಣವೆಂದು ಆಪ್ತಾಲೋಚನೆಗಾಗಿ, ಶೇಷಪ್ಪ ಹಾಗೂ ಬಾಳಾ ಚಾರ್ಯರನ್ನು ಕರೆಕಳಿಸಿದಳು.

:: ೪೩ ::

ಚಾವಡಿಯಲ್ಲಾದ ಅಪಮಾನಕಾರಕವಾದ ಘಟನೆಯಿಂದ ಆಚಾರ್ಯರ ಮನಸ್ಸು ಮುರಿದುಹೋಗಿತ್ತು. ಇನ್ನುಮೇಲೆ ಇಂಥ ಸಾರ್ವಜನಿಕ ಕೆಲಸ ಗಳಲ್ಲಿ ಕೈಹಾಕಲೇಬಾರದೆಂದು ನಿಶ್ಚಯಿಸಿಕೊಂಡುಬಿಟ್ಟಿದ್ದರು. ಅರುವತ್ತರ ಗಡಿ ದಾಟಿದ ತಾವು ಸಾವಿನ ನೆರಳಿನಲ್ಲಿಯೇ ಇದ್ದಾರೆ. ಅಂಥವರಿಗೆ ಜೀವಿತದ ಮೇಲೆ ಏನು ಅಧಿಕಾರ? ಅವರು ಹೇಳಿದ ಉಪದೇಶಗಳನ್ನು ಯಾರು ಕೇಳ ಬೇಕು? ಉಪದೇಶ ಹೇಳಿ ಹೇಳಿ ಚಟ ಬಿದ್ದ ಜೀವಕ್ಕೇನು ಮಾಡಬೇಕು? ಅನು ಭವಕ್ಕೆ ಬಂದ ಯಾವ ಸತ್ಯವೂ ದಾರುಣವಾಗಿದ್ದರೆ ಹೇಗೆ ತಡೆದುಕೊಳ್ಳಬೇಕು? ಆಚಾರ್ಯರು ಇದೇ ಪ್ರಯತ್ನದಲ್ಲಿದ್ದರು. ಮನಸ್ಸು ಕಲ್ಲಾಗಬೇಕಾಗಿತ್ತು. ಜೀವನ ದಲ್ಲಿ ಸಾಲುಗಟ್ಟಿಕೊಂಡು ಬಂದ ದುಃಖಗಳೆಲ್ಲ ಏಟು ಕೊಟ್ಟಿದ್ದರೂ ಮನಸ್ಸಿಗೆ ದಡ್ಡುಬಿದ್ದಿರಲಿಲ್ಲ; ಅದು ತನ್ನ ಸೂಕ್ಷ್ಮ ಸಂವೇದನೆಗಳನ್ನು ಇನ್ನೂ ಕಳೆದು ಕೊಂಡಿರಲಿಲ್ಲ. ದೇಹ ಮುಪ್ಪಾಗಿತ್ತು; ಜೀರ್ಣವಾಗಿತ್ತು. ಎಷ್ಟೋ ಕಡೆಗಳಲ್ಲಿ ತನ್ನ ಜೀವಂತತನವನ್ನು ಕಳೆದುಕೊಂಡಿತ್ತು. ಆದರೆ ಮನಸ್ಸು ಹಾಗಾಗಿರಲಿಲ್ಲ. ತಮ್ಮ ದೃಷ್ಟಿಯಲ್ಲಿ ಬದುಕು ಸುಖವಾಗಿರಲೆಂದು ಆಚಾರ್ಯರು ಇನ್ನೂ ಹಾರೈಸು ತ್ತಿದ್ದರು. ಸುಖ ಸಮೃದ್ಧವಾಗಿದ್ದರೂ, ದೇವರ ಕರುಣೆ ಅಪಾರವಾಗಿದ್ದರೂ, ಮನುಷ್ಯ ತನ್ನ ಅವಿವೇಕದಿಂದ ಎಲ್ಲವನ್ನೂ ಹಾಳುಗೆಡವಲು ಏನು ಕಾರಣ? ಈ

ಸಮಸ್ಯೆ ಆಚಾರ್ಯರಿಗೆ ಇನ್ನೂ ಗೂಢವಾಗಿಯೇ ಉಳಿದಿತ್ತು.

ಬಾಳಿನ ವ್ಯವಸ್ಥೆಯ ತಳಹದಿಯೇ ಸಡಿಲಾಗಿರುವದು ಆಚಾರ್ಯರ ಕಣ್ಣಿಗೆ ಬೀಳದೆ ಹೋಗಲಿಲ್ಲ. ದಿನನಿತ್ಯ ಕಣ್ಣಿಗೆ ಕಾಣುವ ಅವಿವೇಕಗಳೆಲ್ಲ ಅದಕ್ಕೆ ಸಾಕ್ಷಿಯಾಗಿದ್ದವು. ರಕ್ತದಲ್ಲಿ ಬೆರೆತ ವಿಷ, ದೇಹಾದ್ಯಂತವನ್ನೂ ವಿಷಮಯವಾಗಿಸಿತ್ತು. ನೋಡುವ ದೃಷ್ಟಿ ಕೂಡ ನಂಜಾಗಿತ್ತು. ಇಂಥ ಹೊತ್ತಿನಲ್ಲಿ ಒಳ್ಳೆಯದನ್ನು ಕಾಣುವದಾದರೂ ಹೇಗೆ? ಮನಸ್ಸು, ಬುದ್ಧಿ, ಹೃದಯಗಳೆಲ್ಲ ಸ್ಥಿರವಾಗಬೇಕು. ಹೊಯ್ದಾಡುವ ಮನುಷ್ಯನಿಗೆ ಜಗತ್ತೇ ಚಂಚಲವಾಗಿ ಕಂಡರೆ ಆಶ್ಚರ್ಯವೇನಿಲ್ಲ. ಪಿತ್ತಭ್ರಮಣೆಯಾಗಿರುವಾಗ ಲೋಕವೇ ತಿರುಗುತ್ತಿರುವಂತೆ ಭಾಸವಾಗುವದಿಲ್ಲವೇ? ಕಳವಳದ ಕಣ್ಣಿಗೆ ಕಳವಳವಲ್ಲದೆ ಬೇರೇನು ಕಂಡೀತು ?

ಆಚಾರ್ಯರು ಗೀತೆಯನ್ನು ಬಿಚ್ಚಿದರು. ಇತ್ತೀಚೆಗೆ ಆ ಗ್ರಂಥವನ್ನು ನೋಡುವದಾಗಿರಲಿಲ್ಲ. ಸಣ್ಣವರಿದ್ದಾಗ ಹಿರಿಯರ ಅಂಜಿಕೆಗೆ ಮನಸ್ಸಿಲ್ಲದೆ ಗೀತೆಯ ಶ್ಲೋಕಗಳನ್ನು ಬಾಯಿಪಾಠ ಮಾಡಿದ್ದರು. ದೊಡ್ಡವರಾದ ಮೇಲೆ ಹೊಟ್ಟೆಯ ಪಾಡಿಗಾಗಿ ಪುರಾಣ ಹೇಳುವಾಗ ಗೀತೆಯನ್ನು ಉಪದೇಶಿಸಿದ್ದರು. ಆದರೆ ಸ್ವಂತ ಹೃದಯದ ಸಮಸ್ಯೆಗಳನ್ನು ಬಿಡಿಸಿಕೊಳ್ಳಲು ಯತ್ನಿಸಿರಲಿಲ್ಲ. ಈಗ ಮಾತ್ರ ಸಂಕಟ ತಾನೇ ತಾನಾದಾಗ ಗೀತೆಯನ್ನು ನೋಡುವ ಮನಸ್ಸಾಯಿತು. ಸುತ್ತಲೂ ಗೊಂದಲ ಮುಸುಕಿದಾಗ, ಬುದ್ಧಿಭ್ರಮಣೆಯಾದಾಗ, ದಾಯಾದಿಗಳು ಒಬ್ಬರ ಮೇಲೊಬ್ಬರು ಶಸ್ತ್ರವೆತ್ತಿದಾಗ, ಧರ್ಮ ಅಧರ್ಮಗಳ ನಡುವಿನ ಸೀಮಾರೇಷೆಗಳೇ ಅಳಿಸಿಹೋದಾಗ ಭಗವಂತ ಉಪದೇಶ ಮಾಡಿದ್ದ. ಅರ್ಜುನನಂಥ ಪುರುಷಶ್ರೇಷ್ಠನೂ ದಾರಿ ತಪ್ಪಿರಲಿಲ್ಲವೇ?

ಆಚಾರ್ಯರು ಪುಟಗಳನ್ನು ತಿರುವಿದರು. ಒಳಗಿನ ತಳಮಳವನ್ನು ಏನು ಮಾಡಿದರೆ ನಿಲ್ಲಿಸಬಹುದೆಂಬ ತೀವ್ರ ಆತುರದಿಂದ ಹುಡುಕತೊಡಗಿದರು. ಎರಡನೆಯ ಅಧ್ಯಾಯ ಕಣ್ಣಿಗೆ ಬಿತ್ತು. ಸ್ಥಿತಪ್ರಜ್ಞನ ಲಕ್ಷಣಗಳೇನು ಎಂದು ಅರ್ಜುನ ಕೇಳಿದಾಗ ಕೃಷ್ಣ ವಿವರವಾಗಿ ಸ್ಥಿತಪ್ರಜ್ಞನನ್ನು ಬಣ್ಣಿಸಿದ ಭಾಗವನ್ನು ಏಕಾಗ್ರಚಿತ್ತದಿಂದ ಓದತೊಡಗಿದರು. ಅವರಲ್ಲಿಯ ಒಂದೊಂದು ಮಾತಿಗೂ, ಆಚಾರ್ಯರ ದೀರ್ಘವಾದ ಜೀವನಾನುಭವವೇ ಭಾಷ್ಯವನ್ನು ಬರೆಯತೊಡಗಿತು. ಮನಸ್ಸಿನ ಎಲ್ಲ ಕಾಮನೆಗಳನ್ನೂ ಕಳೆದುಕೊಂಡು ಆತ್ಮತೃಪ್ತನಾಗಿರುವವನು ಸ್ಥಿತಪ್ರಜ್ಞ ನೆನಿಸಿಕೊಳ್ಳುತ್ತಾನೆ. ತಮಗೆ ಕಾಮನೆಗಳಿಲ್ಲವೇ? ಇವನ್ನು ಖಚಿತವಾಗಿ

ಹೇಳುವದು ಹೇಗೆ ಸಾಧ್ಯ? ಜೀವವಿರುವ ವರೆಗೆ ಒಂದಿಲ್ಲೊಂದು ಆಸೆ ಅದಕ್ಕೆ ಅಂಟಿಕೊಂಡು ಬಂದೇ ಬರುತ್ತದೆ. ಒಂದು ದೃಷ್ಟಿಯಿಂದ ತಮಗೆ ವೈಯಕ್ತಿಕವಾಗಿ ಆಸೆಯಿಲ್ಲ. ದೇವರು ತಮ್ಮ ಬಾಳನ್ನೇ ಹಾಗೆ ರೂಪಿಸಿದ್ದಾನೆ. ಆದರೆ ಸೂಕ್ಷ್ಮ ವಾಗಿ ಆ ಆಸೆ ಬಾಹ್ಯಜೀವನದಲ್ಲಿ ಹರಡಿಕೊಂಡಿರಲಿಲ್ಲವೇ? ಸುತ್ತುಮುತ್ತಲಿನ ಜನ ತಮ್ಮ ಮಾತಿನಂತೆ ನಡೆಯಬೇಕೆಂದು ಆಸೆಯಿರಲಿಲ್ಲವೇ? ಕಾಮ ಯಾವ ರೂಪದಲ್ಲಿಯೂ ದುಃಖವನ್ನೇ ತರುವದೆಂಬುದೇ ಗೀತೆಯ ಆದೇಶವಾಗಿತ್ತು. ಅದನ್ನು ಹೇಗೆ ಬಿಟ್ಟುಕೊಡಬೇಕು? ಇಂದ್ರಿಯಗಳು ಮನಸ್ಸನ್ನು ನುಂಗುತ್ತವೆ; ಮನಸ್ಸು ವಿವೇಕವನ್ನು ನುಂಗುತ್ತದೆ. ಮುಂದೆ? ಮುಂದೇನು, "ಬುದ್ಧಿನಾಶಾತ್ ಪ್ರಣಶ್ಯತಿ!"

ಸುಖ ಬಂದಾಗ ಹಿಗ್ಗಬಾರದು, ದುಃಖ ದಾಳಿಯಿಟ್ಟಾಗ ಕುಗ್ಗಬಾರದು. ಆದರೆ ಮನಸ್ಸಿನ ರಚನೆಯೇ ಹಿಗ್ಗು-ಕುಗ್ಗುಗಳನ್ನು ಒಳಗೊಂಡಿದೆಯಲ್ಲ? ಸಂಯಮದಿಂದಿರಬೇಕು, ಆದರೆ ಅದನ್ನು ಎಲ್ಲಿಂದ ಪ್ರಾರಂಭಿಸಬೇಕು? ಸಾವಿರಾರು ಹೊಳೆಗಳು ಹರಿದು ಬಂದರೂ ಗಂಭೀರವಾಗಿರುವ ಸಾಗರದಂತೆ ಸ್ಥಿತಪ್ರಜ್ಞ ನಾದವನು ತುಂಬಿಯೂ ತುಳುಕದಂತಿರುತ್ತಾನೆ. ಆಚಾರ್ಯರು ಬಹಳ ಹೊತ್ತು ಈ ರೂಪಕದ ಬಗ್ಗೆಯೇ ವಿಚಾರ ಮಾಡಿದರು. ಮನಸ್ಸು ಹೊಳೆಯಂತಾಗ ಬಾರದು. ಮಲೆನಾಡಿನಲ್ಲಿ ಮಳೆಯಾದರೂ, ಪಾದಳ್ಳಿಯ ಮಗ್ಗುಲಿಗೆ ಹರಿಯುವ ಹೊಳೆ ಒಡಲು ಹರಿದು, ಆಕ್ರೋಶಮಾಡುವದನ್ನು ಅವರು ಕಂಡಿದ್ದರು. ಇಂಥ ನೂರಾರು ಹೊಳೆಗಳು ಸಂತತವಾಗಿ ತಮ್ಮ ನೀರನ್ನು ಸುರುವಿದರೂ ಆನೆ ಯುದ್ಧದ ತೆರೆಗಳು ಅಪ್ಪಳಿಸಿದರೂ ಸಮುದ್ರ ಹೊರಚಲ್ಲುವದಿಲ್ಲ. ಆಚಾರ್ಯರು ತಮ್ಮ ಜೀವನದಲ್ಲಿ ಎಂದೂ ಸಮುದ್ರವನ್ನು ನೋಡಿರಲಿಲ್ಲ. ಆದರೆ ಅದರ ಕಲ್ಪನೆ ಬರದೆ ಹೋಗಲಿಲ್ಲ. ಸುತ್ತಲಿನ ದಾರುಣ ಪರಿಸ್ಥಿತಿಯಲ್ಲಿ ಸಂಯಮದಿಂದಿರಲೇ ಬೇಕಾಗಿತ್ತು. ಮೊದಲು ಇಂಥ ಎಷ್ಟೋ ಸಂಕಲ್ಪಗಳನ್ನು ಅವರು ಮಾಡಿ ಸೋತಿದ್ದರು. ಈಗ ನಿರ್ಧಾರ ಅಚಲವಾಗಬೇಕಿತ್ತು. ತಾವೇನೂ ಹಾಗೆ ತಪ್ಪು ಮಾಡಿರಲಿಲ್ಲ ನಿಜ. ತಮ್ಮ ಕೈಯಿಂದ ಯಾರೂ ಹಾಳಾಗಿರಲಿಲ್ಲ. ತಪ್ಪುಮಾಡ ದಿದ್ದರೂ ಮನಸ್ಸು ಸ್ತಿಮಿತ ತಪ್ಪುತ್ತಿತ್ತು, ಒಮ್ಮೊಮ್ಮೆ ಮೋಹವಶವಾಗುತ್ತಿತ್ತು; ಮತ್ತೊಮ್ಮೆ ವಿಕಾರಗಳಿಂದ ಕೂಡಿರುತ್ತಿತ್ತು. ಪಾದಳ್ಳಿಯಲ್ಲಿ ನಡೆದ ಘಟನೆ ಗಳೆಲ್ಲ ಅವರ ಅಂತರಂಗವನ್ನು ಕಲಕುತ್ತಿದ್ದವು. ಇನ್ನು ಮೇಲೆ ಅಂಥದಕ್ಕೂ

ಆಸ್ಪದವೀಯಬಾರದು.

ಗೀತೆಯನ್ನು ತೆರೆದಿಟ್ಟು ಆಚಾರ್ಯರು ತಮ್ಮ ಜೀವನವನ್ನೇ ಅದರ ಮೂಲಕ ನಿರೀಕ್ಷಿಸುತ್ತಿದ್ದರು. ಅದೆಷ್ಟು ಶೂನ್ಯವಾಗಿತ್ತೆಂಬುದು ಅವರಿಗೇ ಗೊತ್ತು. ಆಚಾರ್ಯರ ದುಃಖವಿಷ್ಟೇ, ತಮ್ಮ ಕೈಯಿಂದ ಬೊಟ್ಟುಮಾಡಿ ತೋರಿಸುವಂಥ ಯಾವ ಒಳ್ಳೆಯ ಕಾರ್ಯವೂ ಆಗಲಿಲ್ಲವಲ್ಲ ! ಕರ್ಮ ಅನಿವಾರ್ಯವಾದದ್ದೆನ್ನೋ ದಿಟ. ಆದರೆ ವಿವೇಕದಿಂದ ಮಾಡಿದ ಕರ್ಮಕ್ಕೆ ಆಸಕ್ತಿಯ ಹೆದರಿಕೆಯಿಲ್ಲ; ಅದರಿಂದ ಕೂಡಲೇ ಬಿಡುಗಡೆಯುಂಟಾಗುತ್ತದೆ. ಮೊದಲು ಆಚಾರ್ಯರಿಗೆ ಇದೆಲ್ಲ ವೇದಾಂತದ ಪರಿಭಾಷೆಯಾಗಿತ್ತು. ಈಗ ಅದಕ್ಕೆ ಜೀವಂತತನ ಬಂದಿತ್ತು, ಹೊಸ ಅರ್ಥ ಅವುಗಳಲ್ಲಿ ಮಿಡಿಯತೊಡಗಿತ್ತು. ಇಲ್ಲಿಯ ವರೆಗೆ ಏನೂ ಅರಿವಿಲ್ಲದೆ ವ್ಯರ್ಥ ಜೀವನವನ್ನು ಕಳೆದದ್ದಾಯಿತು. ಇನ್ನುಮೇಲಾದರೂ ಅರಿವು ಜಾಗೃತವಾಗಬೇಕು.

ಈ ಕಾರಣಗಳ ಮೂಲಕವಾಗಿಯೇ ಪಾರ್ವತೆವ್ವಗೌಡಿತಿ ಹೇಳಿಕಳಿಸಿದ್ದರೂ ಆಚಾರ್ಯರು ಅಲ್ಲಿಗೆ ಹೋಗಿರಲಿಲ್ಲ. ಒಮ್ಮೆ ಈ ಜಂಜಾಟಗಳಿಂದ ಮುಕ್ತರಾಗಬೇಕಿತ್ತು. ಮತ್ತೆ ಮತ್ತೆ ಕರುಳು ಕರಗಿ, ಹೋಗಿ ಆ ಜಾಲದಲ್ಲಿ ಸಿಗುವದು ಅವರಿಗೆ ಬೇಡವಾಗಿತ್ತು. ಗಿತೇಯಲ್ಲಿ ಸಂಪೂರ್ಣ ತಮ್ಮನ್ನು ತೊಡಗಿಸಿಕೊಂಡು ಆಚಾರ್ಯರು ಸುತ್ತು ಜಗತ್ತಿನ ವ್ಯಾಪದಿಂದ ದೂರವಾಗಿದ್ದರು. ಅಂತೇಯೇ ಅವರನ್ನು ಕಾಣಬಂದ ಶೇಷಪ್ಪ ಎರಡು ಸಾರೆ ಅವರ ಹೆಸರು ಹಿಡಿದು ಕೂಗಬೇಕಾಯಿತು.

ಆಚಾರ್ಯರು ತಲೆಯೆತ್ತಿ ನೋಡಿದರು. ಶೇಷಪ್ಪ! ಅವನ ಬಿಡುಗಡೆ ತಮ್ಮಿಂದಲೇ ಆಗಿದ್ದರೂ ಅವನೇನು ತಮ್ಮ ಮನೆಯ ಕಡೆಗೆ ಹಾದಿರಲಿಲ್ಲ. ಶ್ಯಾಮರಾಯ ಕುಲಕರ್ಣಿಯಾದಂದಿನಿಂದ ಶೇಷಪ್ಪ ಹೊರಗೆ ಅಡ್ಡಾಡುವದನ್ನೇ ಪರಿಮಿತಗೊಳಿಸಿದ್ದನೆಂದು ಅವರು ಕೇಳಿದ್ದರು. ಕೆಲ ದಿನ ಹಾಗಾಗಿ ಆಮೇಲೆ ತಾನೇ ಹಾದಿಗೆ ಬರಬಹುದೆಂದು ಅವರು ತಿಳಿದಿದ್ದರು. ಈಗ ನೋಡಿದರೆ ಹೇಳದೆ ಕೇಳದೆ ಬಂದು ನಿಂತಿದ್ದಾನೆ. ಆಚಾರ್ಯರಿಗೆ ಆಶ್ಚರ್ಯವಾಯಿತು. ಕರೆದು ಕೂಡಿಸಿಕೊಂಡರು. ಶೇಷಪ್ಪ ಯಾಂತ್ರಿಕವಾಗಿ ನಸ್ಯವನ್ನು ನೀಡಿದ.

ಈಗಾಗಲೇ ಅವನು ಪಾರ್ವತೆವ್ವನ ಮನೆಗೆ ಹೋಗಿ ಬಂದಿದ್ದ. ಆಚಾರ್ಯರು ಬಾರದಿದ್ದುದಕ್ಕೆ ಪಾರ್ವತೆವ್ವನಿಗೆ ದುಃಖವಾಗಿತ್ತು. ಅದನ್ನು ನೋಡಲಾರದೆ ಆಚಾರ್ಯರನ್ನು ಕರೆಯಲು ತಾನು ಬಂದಿರುವದಾಗಿ ತಿಳಿಸಿದ. "ನಾ ಎಲ್ಲಾ ಉಪಾಯ ಹೇಳೂವಷ್ಟು ಹೇಳಿ ಬಂದೇನಿ ಆಚಾರ! ನಾಳೆ ಊರ ಪ್ರಂಡರು

ದಾಂಡಗಾಯಿ ಮಾಡಿ ಬಿತ್ತಿದ ಹೊಲಾ ಹೆರಗಿಬಿಡೋ ಸಂಭವ ಅದ. ಅದಕ್ಕ ಪೋಲೀಸಪಾರ್ಟಿ ತರಿಸಲಿಕ್ಕೆ, ಅರ್ಜಿ ಮಾಡಲಿಕ್ಕೆ ಹೇಳಿ ಬಂದೀನಿ. ಅರ್ಜಿ ಕೊಡೂ ಅಂತ ನೀವು ಹೇಳಿದರ ಅರ್ಜಿಗೆ ಸಹಿ ಮಾಡಲಿಕ್ಕೆ ಒಪ್ಪಿಗೊಂಡಾಳ. ಹಿಂದಕ್ಕೊಮ್ಮೆ ಅರ್ಜಿಗೆ ಸಹಿ ಮಾಡಿದ್ದಕ್ಕ ನೀವು ಸಿಟ್ಟಿಗೆದ್ದಿದ್ದಿರಿ ಅಂತ ಆಕಿ ಬಹಳ ನೊಂದುಕೊಂಡಾಳ. ಮನಸ್ಸಿಗೆ ನೋವಾಗೇದ. ಪಾಪ, ಹೆಣ್ಣುಮಗಳು. ಊರ ಜನಾ ಲಿಂಗಪ್ಪನ ಬೆನ್ನುಹತ್ತಿದ್ದನ್ನು ನೋಡಿ ಗಾಬರಿ ಆಗ್ಯಾಳ. ನಾವಿಬ್ಬರೇ ಆಕಿ ಹಿತಾ ನೋಡವರು ಅಂತ ಧೈರ್ಯಾಹಿಡಿದಾಳ ಆಚಾರ" ಎಂದು ಶೇಷಪ್ಪ ಗೌಡಿತಿಯ ಪರವಾಗಿ ಹೇಳಿದ.

ಆಚಾರ್ಯರು ಏನೂ ಹೇಳಲಿಲ್ಲ. ಕೈಬೆರಳಿನಿಂದ ನೆಲ ಬರೆಯುತ್ತ ಸುಮ್ಮನೆ ಕುಳಿತುಬಿಟ್ಟರು. ಶೇಷಪ್ಪನೂ ದಾರಿ ನೋಡಿದ; ಕೆಮ್ಮಿದ, ನಶ್ಯ ಏರಿಸಿದ. ಆಚಾರ್ಯರು ಮಿಟ್ಟಮಿಸುಕಲಿಲ್ಲ. ಮತ್ತೊಮ್ಮೆ ಅದೇ ಮಾತನ್ನೇ ಹೇಳಬೇಕಾಯಿತು.

"ಇದಕ್ಕೆಲ್ಲಾ ಏನ ಹೇಳಬೇಕೆಂಬೂದು ನನಗ ತಿಳೀದ್ಹಾಂಗ ಆಗೇದ ಶೇಷಪ್ಪ. ನೀ ಹೇಳಿದ ಉಪಾಯ ನಿನ್ನ ದೃಷ್ಟಿಯಿಂದ ಬರೋಬರಿ. ಆದರ ಅದು ನನಗ ಸರಿ ಕಾಣಿಸೋದಿಲ್ಲ. ಊರಾಗ ಒಬ್ಬಿಬ್ಬರು ಪುಂಡಾಟಿಕಿ ನಡಿಸಿದ್ದರ ನಿನ್ನ ಹ್ವಾದಿ ಸರಿಯಾಗತಿತ್ತು. ಈಗ ಊರಿಗೂರs ಪುಂಡಾಟಿಕಿ ನಡಸೇದ" ಆಚಾರ್ಯರು ಪರಿಸ್ಥಿತಿಯನ್ನು ತೂಗುವವರಂತೆ ಹೇಳಿದರು.

"ಅಂದರೇನು ಮಾಡಬೇಕಂತೀರಿ ಆಚಾರ? ಈ ಹುಂಬ ಲಿಂಗಪ್ಪ, ಈ ಪಡದಪ್ಪ, ಅವನ ಬೆನ್ನಿಗೆ ಬಿದ್ದ ಪುಂಡರು ಇವರಿಗೆಲ್ಲಾ ಅಂತಃಕರಣ ಅದ ಅಂತ ತಿಳದೀರೇನು? ಅವರನ ಸುಧಾರಸೋದರಾಗ ಊರು ಹಾಳಾಗತದ ಊರು! ಅದಕ್ಕಂತs ಇದ್ದದ್ದರಾಗ ಒಂದು ಸುರಕ್ಷಿತ ಉಪಾಯ ನಾ ಹೇಳಿದೆ. ಅದು ಬ್ಯಾಡಂತೀರಿ. ಹಂಗಾರ ಏನರ ಮಾಡಬೇಕಂತೀರಿ ಹೇಳಿರ ಹೇಳ್ರಿಲ್ಲಾ?" ಶೇಷಪ್ಪ ಅರ್ಧ ಅಕ್ಕಸದಿಂದ ಅರ್ಧ ತಿಳಿದುಕೊಳ್ಳುವ ಕೂತೂಹಲದಿಂದ ಕೇಳಿದ.

"ಅದೇನೋಪ, ನನಗೂ ಗೊತ್ತಾಗಲೊಲ್ಲದು. ನೋಡು ಶೇಷಪ್ಪ, ಮೊದಲಿನ್ಹಾಂಗ ಈಗ ಇಂಥಾ ಉಸಾಬರಿ ಬೇಕಾಗೂದುಲ್ಲ. ಪ್ರಸಂಗ ಬಂದರ ಹೀಂಗ ಹೇಳೇನು, ಪಾರ್ವತೆವ್ವ ಆ ಭೂಮಿ ಲಿಂಗಪ್ಪಗ ಕೊಟ್ಟುಬಿಡಲಿ. ಅವನ ಖುಣಾನೂ ಇದ್ದೀತು. ಇಲ್ಲಾಂದರ ಅಂವಾ ಶಂಕರೆಪ್ಪನ ಮಗಾ ಆಗಿ ಬರತಿದ್ದನs?" ಆಚಾರ್ಯರು ಬೇಸತ್ತವರಂತೆಯೇ ನುಡಿದರು.

ಶೇಷಪ್ಪನಿಗೆ ಎಲ್ಲಿಲ್ಲದ ಆಶ್ಚರ್ಯವಾಯಿತು. ಆಚಾರ್ಯರಿಗೇನಾದರೂ ಹುಚ್ಚು ಹಿಡಿದಿರಲಿಕ್ಕಿಲ್ಲವಷ್ಟೇ ಎಂಬ ಸಂಶಯವೂ ಬಂತು. ಮೊದಲು ಅನ್ಯಾಯದ ವಿರುದ್ಧ ನಿಷ್ಠುರವಾಗಿ ಹೋರಾಡಿ, ಅನವಶ್ಯಕವಾಗಿ ವೈರಕಟ್ಟಿಕೊಂಡ ಈ ಮುದುಕ ಹೀಗೆ ಮಾತಾಡಬಹುದೇ ? ಬರಬರುತ್ತ ಆಚಾರ್ಯರೇಕೆ ಹೀಗಾಗುತ್ತಿದ್ದಾರೆ ? ಶೇಷಪ್ಪ ನಿಗೆ ಒಂದು ಕ್ಷಣ ಕನಿಕರವೂ ಉಂಟಾಯಿತು.

ಶೇಷಪ್ಪ ಅಷ್ಟಕ್ಕೇ ಬಿಡಲಿಲ್ಲ. ಮತ್ತೆ ವಾದಿಸಿದ. ಲಿಂಗಪ್ಪನ ಅನ್ಯಾಯ ವನ್ನೂ ಬಣ್ಣಿಸಿದ. ತಾನೀಗ ನಡೆದಿರುವದು ಕೇವಲ ಗೌಡಿತಿಯ ಕಲ್ಯಾಣಕ್ಕಾಗಿ ಎಂಬುದನ್ನು ಬಿಂಬಿಸಿದ. ಇಂಥ ಹೊತ್ತಿನಲ್ಲಿ ಸುಮ್ಮನಿರುವದೂ ಅನ್ಯಾಯವಾದೀ ತೆಂದು ತಿಳಿಸಿದ. ಆಚಾರ್ಯರೇನು ಜಗ್ಗಲಿಲ್ಲ. ಶೇಷಪ್ಪ ಇನ್ನೂ ಬೆರಗುಗೊಂಡ. ಆಚಾರ್ಯರ ಸ್ವಭಾವ ಸಂಪೂರ್ಣವಾಗಿ ಅವನಿಗೆ ಗೊತ್ತಿತ್ತು. ಅವರ ಆ ತ್ವೇಷ ಅಭಿಮಾನಗಳ ಪರಿಚಯವೂ ಸಾಕಷ್ಟಿತ್ತು. ಹಿಂದೊಂದು ದಿನ, ಆಚಾರ್ಯರ ಮನೆ ಯಲ್ಲಿ ಹಿಸೆಯಾಗುವ ಗಡಿಬಿಡಿ ನಡೆದಿತ್ತು. ಅವರ ತಮ್ಮನ ಮಗ ನಾರಾಯಣಾ ಚಾರಿ ತನಗೆ ಪಾಲು ಸರಿಯಾಗಿ ಸಿಗಲಿಲ್ಲವೆಂದು ನ್ಯಾಯ ಹೂಡಿದ್ದ. ಊರೊಳ ಗಿನ ಹತ್ತು ಪ್ರತಿಷ್ಠಿತರನ್ನು ಕೂಡಿಸಿ ಆಚಾರ್ಯರು ತಮ್ಮ ಪಾಲಿಗೆಂದು ತೆಗೆದು ಕೊಂಡಿದ್ದ ಐದು ಗುಂಟೆಯಷ್ಟು ಭೂಮಿ ತನಗೆ ಬೇಕೆಂದು ಹಟಹಿಡಿದಿದ್ದ.ಆಚಾ ರ್ಯರು ಅದು ದೊರೆಯಲಾರದೆಂದಿದ್ದರು. ಲಿಂಗಪ್ಪಗೌಡನಂತೆ ನಾರಾಯಣಾ ಚಾರಿಯೂ ದಾಯಾದಿಮತ್ಸರ ಉಕ್ಕಿ ಬಂದು ಆ ಭೂಮಿಯನ್ನು ಬಿತ್ತಿ ಕಬಜಾ ಪಡೆದುಕೊಂಡಿದ್ದ. ಅದಕ್ಕಾಗಿ ಸಿಟ್ಟಿಗೆದ್ದ ಆಚಾರ್ಯರು ಕೋರ್ಟಿಗೆ ಹೋಗಿ, ಆ ಹೊಲವನ್ನು ತಮ್ಮಂತೆ ಮಾಡಿಕೊಂಡಿರಲಿಲ್ಲವೇ ? ಶೇಷಪ್ಪನಿಗೆ ಈ ಕತೆ ಮರೆತಿರ ಲಿಲ್ಲ. ಈ ಸಂದರ್ಭದಲ್ಲಿ ಅದನ್ನು ನೆನಪು ಮಾಡಿಕೊಟ್ಟ.

"ಹೌದು ಶೇಷಪ್ಪ, ನೀ ಅನ್ನೊದು ಖರೆ. ಆದರ ಈಗ ಅದರಿಂದ ಆದದ್ದೇನು? ಅದು ಭೂಮಿ ನಾರಾಯಣಗ ಸಿಕ್ಕಿದ್ದರ ಅಂವಾ ಸುಖದಿಂದ ಇರತಿದ್ದನಲ್ಲ? ಮಕ್ಕ ಳೊಂದಿಗ್ಯಾ, ಈಗ ಅನ್ನಾನ್ನಗತಿಕ ಅದನೋ ಇಲ್ಲೊ? ಆ ನ್ಯಾಯದ ಸಲುವಾಗಿ ತನ್ನ ಪಾಲಿಗೆ ಬಂದಷ್ಟು ಆಸ್ತಿನೂ ಕಳಕೊಂಡ. ಈ ನ್ಯಾಯದೊಳಗ ನನಗೇನು ಸುಖಾ ಕಾಣವಲ್ಲದು. ಇಂಥಾ ನ್ಯಾಯ ನಡನಡದ ಊರ ಪರಿಸ್ಥಿತಿ ಹೀಂಗ ಗೊಂದಲಗೆಟ್ಟದ್ದ. ಅದೇನು ನನ್ನ ಮನಸ್ಸಿಗೆ ಬರವಲ್ಲದು ಬಿಡು" ಆಚಾರ್ಯರು ಅದೇ ಉದಾಸೀನತೆಯಿಂದಲೇ ಉತ್ತರವಿತ್ತರು.

ಕೊನೆಗೆ ಪಾರ್ವತೆವ್ವನ ಮನೆಗೆ ಬಂದು, ಅವಳಿಗೆ ತಿಳಿಸಿಹೇಳಬೇಕೆಂದು ಶೇಷಪ್ಪ ಹಟ ಹಿಡಿದ. ಅಂದರಾದರೂ ಅವಳ ಗಾಬರಿಗೊಂಡ ಮನಸ್ಸು ತಣಿದೀತು ಎಂದು ಅವನ ಆಸೆ. ಏನಾದರೂ ಹೆಣ್ಣುಮಗಳು! ಇಡೀ ಊರೇ ತನ್ನ ವಿರೋಧ ಕಟ್ಟಿದಂತೆ ಭಾಸವಾಗಿ ಹೌಹಾರಿದ್ದಾಳೆ. ಗೌಡರ ಮನೆತನ ಎಲ್ಲಿ ಹಾಳಾಗುವದೋ ಎಂದು ಹೆದರಿದ್ದಾಳೆ. ಅವಳಿಗೆ ಧೈರ್ಯವನ್ನಾದರೂ ಹೇಳಬಹುದಲ್ಲ? ಅದರಲ್ಲೇನೂ ಅನ್ಯಾಯವಿಲ್ಲವಲ್ಲ? ಆಚಾರ್ಯರು ಕ್ಷಣಹೊತ್ತು ಯೋಚಿಸಿ ಕೊನೆಗೆ ಈ ಮಾತಿಗೆ ಒಪ್ಪಿ ಶೇಷಪ್ಪನೊಡನೆ ಹೊರಟರು.

ಪಾರ್ವತೆವ್ವಗೌಡಿತಿ ಶೇಷಪ್ಪ ಹೇಳಿದಂತೆಯೇ ಹೌಹಾರಿ ಕುಳಿತಿದ್ದಳು. ಇವರಿಬ್ಬರೂ ಅಲ್ಲಿಗೆ ಹೋದಾಗ ಮನೆಯಲ್ಲಿ ಬೇರಾರೂ ಇರಲಿಲ್ಲ. ಆಳುಗಳೆಲ್ಲ ಕೆಲಸ ಮಾಡಿ ಮನೆಗಳಿಗೆ ಹೊರಟುಹೋಗಿದ್ದರು. ಕಾವಲಿಗೆಂದು ಇದ್ದ ಆಳು ಗಳು ಧಾಬೆಯಲ್ಲಿಯೇ ಮಲಗಿದ್ದರು. ಒಂದು ಮಂಕು ದೀಪದ ಬೆಳಕಿನಲ್ಲಿ ಪಾರ್ವ ತೆವ್ವ ಚಿಂತಿಸುತ್ತ ಕುಳಿತಿದ್ದಳು. ಆಚಾರ್ಯರು ಬಂದೊಡನೆಯೇ ಅವಳಿಗೆ ದುಃಖ ಉಕ್ಕಿ ಬಂತು. ಬಿಕ್ಕಿಬಿಕ್ಕಿ ಅಳುತ್ತ ಎದ್ದುಬಂದು ಆಚಾರ್ಯರ ಪಾದಗಳನ್ನು ಕಣ್ಣೀರಿ ನಿಂದ ತೊಳೆದಳು.

ಆಚಾರ್ಯರು ಅವಳೆದುರಿಗೇ ಕಂಬಕ್ಕಾತು ಕುಳಿತುಕೊಂಡು ತಮ್ಮ ವಿಚಾರ ಗಳನ್ನು ಹೇಳಿದರು. "ನೋಡು ಪಾರ್ವತೆವ್ವ, ಇಂಥಾ ಪ್ರಸಂಗದೊಳಗ ಈರ್ಷಾಕ ಬೀಳಬಾರದು ಅಂತ ಹೇಳಲಿಕ್ಕೇ ನಾ ಇಲ್ಲಿಗೆ ಬಂದೀನಿ. ಅದರಿಂದ ಯಾರಿಗೂ ಸುಖಾ ಆಗಿಲ್ಲ, ಆಗೂದುಲ್ಲ." ಎಂದು ಪ್ರಾರಂಭಿಸಿದರು.

ಶೇಷಪ್ಪನಂತೆಯೇ ಪಾರ್ವತೆವ್ವನಿಗೂ ಆಶ್ಚರ್ಯವಾಯಿತು. "ಹಾಗಾರ ಆ ಪಿಶಾಚಿಗೆ ನನ್ನ ಮನ್ಯಾಗ ಕಾಲು ಹಾಕಗೊಡೂ ಅಂತ ಹೇಳತೀರೇನ್ರಿ?" ಎಂದು ಸಾಶಂಕಳಾಗಿ ಕೇಳಿದಳು.

"ಅಷ್ಟs ಅಲ್ಲ, ಇದ್ದ ಎರಡು ಹಗೇ ತಗಿಸಿ, ಊರ ಜನರಿಗೆಲ್ಲಾ ಕಾಳ ಹಂಚಬೇಕೂ, ಮತ್ತ ಈ ಭೂಮಿ ಲಿಂಗಪ್ಪನ ಉಡ್ಯಾಗ ಹಾಕಬೇಕೂ ಅಂತಾರ ಆಚಾರರು. ಅಲ್ಲ ಆಚಾರ, ಇಷ್ಟು ಹೆದರಿಕೊಂಡು ನಡೀಲಿಕ್ಕೆ ನಮಗೇನಾಗೇದ?" ಶೇಷಪ್ಪ ತನ್ನ ಮಾತನ್ನೂ ಹೇಳಿದ. ಗೌಡಿತಿಯೆದುರು ತನ್ನ ವಾದ ಸುಗಮ ವಾದೀತೆಂದು ಅವನ ಆಸೆಯಾಗಿತ್ತು.

"ಹೆದರಿಕಿ-ಪದರಿಕಿ ನನಗ ಗೊತ್ತಿಲ್ಲ ಶೇಷಪ್ಪ. ಊರ ಭೂಮಿ ಪಡಾ

ಬಿದ್ದು, ಊರ ಜನರು ಹೊಟ್ಟೆಗಿಲ್ಲದ ಸಾಯಬಾರದೂ ಅಂತ ನನ್ನ ವಿಚಾರ. ಗೌಡರ ಭೂಮಿ ಊರಿಗೇ ಸೇರಿದ್ದು, ಅಂದಮ್ಯಾಲೆ ಆದರ ಸಲುವಾಗಿ ಇಷ್ಟ ಹಟಾ ಹಿಡೀಬಾರದು ಅಂತ ನನಗನಸ್ತದ." ಎಂದು ಹೇಳಿ ಆಚಾರ್ಯರು ಸುಮ್ಮನಾದರು. ಶೇಷಪ್ಪ ಹಾಗೂ ಪಾರ್ವತೆವ್ವನಿಗೆ ಆಚಾರ್ಯರ ಮಾತೇ ವಿಲಕ್ಷಣವೆನಿಸಿದವು. ಇವರ ತಲೆ ಕೆಟ್ಟಿರಬಹುದೇ ಎಂಬ ಸಂಶಯವೂ ಬಂತು. ಪಾರ್ವತೆವ್ವನಿಗೆ, ಎಲ್ಲಿ ಇವರು ಲಿಂಗಪ್ಪನ ಪಕ್ಷಕ್ಕೆ ಸೇರಿದ್ದಾರೋ ಎಂದು ಹೆದರಿಕೆಯಾಯಿತು. ಆದರೆ ಆಚಾರ್ಯರ ಮಾತಿನಲ್ಲಿಯ ಕಳಕಳಿ, ಅಂತಃಕರಣದ ಎಳೆತ ಅನ್ಯಾದೃಶವಾಗಿದ್ದವು. ಅವರ ಕಣ್ಣುಗಳಲ್ಲಿ ಕಪಟಭಾವ ಸ್ವಲ್ಪವೂ ಇರಲಿಲ್ಲ.

ಪಾರ್ವತೆವ್ವ ಅವರ ಮಾತನ್ನು ಒಪ್ಪುವಂಥ ಸ್ಥಿತಿಯಲ್ಲಿರಲಿಲ್ಲ. ಒಂದರ ಮೇಲೊಂದು ನಡೆದ ಈ ಘಟನೆಗಳು ಅವಳ ಅಭಿಮಾನವನ್ನು ಮತ್ತೆ ಕೆಣಕಿದ್ದವು. ತನ್ನ ಹಗೆ ಲೂಟಿ ಮಾಡಿಸಿ, ಭೂಮಿಯನ್ನು ವಶಪಡಿಸಿಕೊಳ್ಳಲೆಂದು ಬಂದವರ ಮೇಲೆ ಸೇಡು ತೀರಿಸಿಕೊಳ್ಳದೆ ಅವಳಿಗೆ ಸಮಾಧಾನವಿರಲಿಲ್ಲ. ಗೌಡರ ಮನೆತನ ಎಂದೋ ಈ ಕ್ಷಾತ್ರಕ್ಕೆ ಹೆಸರಾಗಿತ್ತು. ಸುಮ್ಮನೆ ಮೈಮೇಲೆ ಬಂದವರಿಗೆಲ್ಲ ಮಣಿಯುತ್ತ ಹೋಗಿ, ಇದ್ದುಬಿದ್ದದ್ದನ್ನೆಲ್ಲ ಅವರ ಪಾದಗಳಿಗೆ ಸಮರ್ಪಿಸಿಬಿಟ್ಟರೆ ಸ್ವರ್ಗದಲ್ಲಿದ್ದ ಶಂಕರಪ್ಪಗೌಡರೇನೆಂದಾರು?

"ಅದು ಸಾಧ್ಯ ಇಲ್ಲ ಆಚಾರೆಪ್ಪ. ನನ್ನ ಮನಸ್ಸು ಕುದ್ದೈತಿ. ಗೌಡಿತಿ ಸಿಟ್ಟಿಗೆದ್ದರ ಏನಾದೀತು ಅಂತ ಅವರಿಗೆಲ್ಲಾ ತೋರಿಸಿಕೊಡಬೇಕಾಗೇತಿ. ಕುಲ ಕರ್ಣ್ಯಾರು ಹೇಳಿದ್ಹಾಂಗ ಸರಕಾರಕ್ಕ ನಾ ಅರ್ಜಿ ಕೊಟ್ಟರ ನನ್ನ ಮ್ಯಾಗ ನೀವು ಸಿಟ್ಟಿಗೇಳೂದುಲ್ಲ ಹೌದಲ್ಲೊ?" ಪಾರ್ವತೆವ್ವನ ದನಿಯಲ್ಲಿ ಕೇವಲ ಆವೇಶವಿಷ್ಟೇ ಇರಲಿಲ್ಲ, ತೀವ್ರವಾದ ಕಳಕಳಿಯಿತ್ತು.

ಆಚಾರ್ಯರು ನಸುನಕ್ಕರು. ಆದರೂ ಕಣ್ಣ ಕೊನೆಗೆ ಎರಡು ಹನಿ ಉದುರಿದವು. ಅವನ್ನು ಬೆರಳಿಂದ ಮಿಡಿದು, "ನನಗ್ಯಾಕ ಸಿಟ್ಟು ಪಾರ್ವತೆವ್ವ? ನಿನ್ನ ದಾರಿ ನೀ ಹಿಡೀಲಿಕ್ಕೆ ನೀ ಸ್ವತಂತ್ರ ಇದ್ದೀದಿ. ಅದರಿಂದ ಒಳ್ಳೇದಾಗೂದುಲ್ಲ ಅಂತ ಹೇಳೋದು ನನ್ನ ಕರ್ತವ್ಯ. ನಾ ಹೇಳಿದೆ. ಆದರ ಒಂದ ಮಾತು ಇನ್ನೂ ಹೇಳತೀನಿ. ಊರ ಪರಿಸ್ಥಿತಿ ತೀರಾ ಕೆಟ್ಟದ. ಊರೊಳಗ ದೆವ್ವ ಹೊಕ್ಕಾಂಗ ಆಗೇದ. ನಾಳೆ ಏನಾದೀತು ಹೇಳಲಿಕ್ಕೆ ಬರೂದುಲ್ಲ. ಅದಕ ನೀನು ಆಸಕಾ ಕೆಲವು ದಿವಸ ಊರು ಬಿಟ್ಟು ಹೋಗಬೇಕು. ಮಕ್ಕಳು ಇನ್ನೂ ಸಣ್ಣವು, ನೀ ಒಬ್ಬಾಕೀನೆ ಇಲ್ಲಿ

ಇರೂದು ಸುರಕ್ಷಿತ ಆಗಲಿಕ್ಕಿಲ್ಲ" ಆಚಾರ್ಯರು ಕಣಿ ಹೇಳುವಂತೆ ನುಡಿದರು. ನಿಟ್ಟುಸಿರಿನ ಭಾರದಿಂದ ಮಾತುಗಳೂ ಇನ್ನೂ ಭಾರವಾಗಿ ಹೊರಬಂದವು.

ಪಾರ್ವತೆವ್ವ ಆಚಾರ್ಯರ ಮೊಗ ನೋಡಿದಳು. ಅಲ್ಲಿ ಭಯದ ಸಂಜ್ಞೆಯೊಂದನ್ನು ಬಿಟ್ಟರೆ ಬೇರೇನೂ ಕಾಣಲಿಲ್ಲ. ಶೇಷಪ್ಪನ ಮುಖ ನೋಡಿದಳು. ಅವನೂ ಗರಹೊಡೆದಂತಿದ್ದ. ತನಗೆ ಬಂದಿರುವದಾದರೂ ಏನು? ಸಂಕಟ ಉಕ್ಕಿ ಬಂದಿತು. ಕಣ್ಣೀರು ತುಳುಕಿದವು. ಸೆರಗು ಮುಖಕ್ಕೆ ಹಾಕಿಕೊಂಡು ಬಿಕ್ಕಿದಳು. ಆ ಸಂಕಟಸಮಯದಲ್ಲಿ ಶೇಷಪ್ಪ ಹಾಗೂ ಆಚಾರ್ಯರೂ ಕೂಡ ತನ್ನ ದುರ್ದೈವದ ಮೂರ್ತಿಗಳಂತೆಯೇ ಕಂಡರು. ವಾತಾವರಣ ನಿಜವಾಗಿಯೂ ಭೀಕರವಾಗಿದೆಯೇ? ಹಾಗಿದ್ದರೂ ಧೈರ್ಯ ಹೇಳುವ ರೀತಿಯೇ ಇದು? ಗೌಡರ ಮನೆತನದ ಮರ್ಯಾದೆಯನ್ನು ಅಂಗೈಯಲ್ಲಿಟ್ಟು ಸಂರಕ್ಷಿಸುತ್ತೇವೆಂದು ಶಂಕರಪ್ಪಗೌಡರಿಗೆ ಮರಣಕಾಲದಲ್ಲಿ ವಚನವಿತ್ತ ವೀರರೇ ಇವರು? ತಾನೆಂದರೆ ಕೇವಲ ಅನಾಥಳಾದ ಹೆಣ್ಣೆಂದು ಮಾತ್ರ ಇವರ ತಿಳುವಳಿಕೆಯೇ? ತಾನು ಕೇಳಿದ್ದು, ತನ್ನ ರಕ್ಷಣೆಯಲ್ಲ; ಮನೆತನದ ಮಾನರಕ್ಷಣೆ. ಅದು ಊರಿನ ಹೊಣೆಯೆಂದೇ ತಾನು ಇವರನ್ನೆಲ್ಲ ಕೇಳಿಕೊಳ್ಳುವದು. ವೈಯಕ್ತಿಕವಾಗಿ ತನ್ನನ್ನು ತಾನು ರಕ್ಷಿಸಿಕೊಳ್ಳಲು ಪಾರ್ವತೆವ್ವ ನಿರ್ಬಲಳಾಗಿಲ್ಲ ಎಂದು ಇವರಿಗೂ ತೋರಿಸಿಕೊಡಬೇಕು.

"ಲಗ್ನ ಆಗಿ ಈ ಮನಿಗೆ ಕಾಲ ಹಾಕಿದಾಕಿ ತಿರುಗಿ ತವರಮನಿಗೆ ಕೂಡಾ ಕಾಲ ಹಾಕಿಲ್ಲ ಆಚಾರೆಪ್ಪ. ನನ್ನ ಗಂಡ ಇದನ್ನೆಲ್ಲಾ ಒಪ್ಪಿಸಿ ಹೋಗ್ಯಾನು. ನಾ ಬಿಟ್ಟು ಹೋದರ ವಾಡೇದಾಗ ನಾಯಿ ಅಡ್ಡ್ಯಾಡ್ಯಾವು. ಇದಽ ಊರಾಗ ಇನ್ನೊಬ್ಬರ ಮೆಟಗಟ್ಟೇ ಮುಟ್ಟಿಲ್ಲ, ಇನ್ನ ಊರಿಗೆ ಹೋಗಬೇಕಽ? ಇನ್ನೇನು ಮಕ್ಕಳ್ನ ಕಳಸೂ ಅಂದರ ಬೇಕಾರ ಕಳಸತೀನಿ" ಗೌಡಿತಿ ಅಚಲ ನಿರ್ಧಾರದಿಂದ ಹೇಳಿದಳು.

"ಹಂಗಽ ಆಗಲಿ. ಅದನ್ನಾರ ಮಾಡು. ನಾಳಿಂದ ನಾಳೇ ಹುಡುಗರನ್ನ ಊರಿಗೆ ಕಳಿಸಿಬಿಡು. ತಡಾ ಮಾಡಬ್ಯಾಡ. ಇದೊಂದು ಮಾತು ನಡಸು."

" ನಡಸತೀನಿ ಆಚಾರೆಪ್ಪ ನಡಸತೀನಿ. ಅದು ನನ್ನ ಧರ್ಮ ಐತಿ. ಆದರ ಊರ ಬಿಟ್ಟು ಹೋಗೂ ಅನ್ನೂ ಮಾತ ಆಡಬ್ಯಾಡ್ರಿ. ಹುಡುಗರನ್ನ ನಾಳೇ ಅವರ ಸ್ವಾದರಮಾವನ ಹಂತ್ಯಾಕ ಕಳಿಸಿಬಿಡತೀನಿ. ನಾನಽ ಮನೀ ಕಾವಲಿಗೆ ನಿಲ್ಲತೀನಿ. ನನ್ನ ಎಲುಬು ಗ್ವಾಡ್ಯಾಗ ಹುಗದರೂ ಮನೀ ಬಿಟ್ಟು ಹೋಗಾಕಿಲ್ಲ. ಸಿಟ್ಟಗೇಳಬ್ಯಾರಮು ಆಚಾರೆಪ್ಪ. ಮನೆತನದ ಮಾನಾ ಕಾಯೂದು ನಂದೂ ಹೊಣೆ, ನಿಮ್ಮದೂ

ಹೊಣೆ. ಕುಲಕರ್ಣ್ಯಾರ, ಅರ್ಜಿ ಬರೀರಿ. ಲೂಟಿ ಮಾಡಿಸಿದವರ ಕೈಗೆ ಸಾಲಬೇಡಿ ಹಾಕಿದ್ವನ್ನ ಈ ಕಣ್ಣಾ ಕಾಣಬೇಕಾಗೇತಿ. ಗೌಡರ ಮನೀ ಗೊಡವಿಗೆ ಬಂದರ ಏನಾದೀತು, ಒಮ್ಮೆ ಅವರಿಗೆ ತಿಳೀಲಿ" ಎಂದು ಗೌಡಿತಿ ಅದೇ ಆವೇಶದಿಂದಲೇ ಹೇಳಿದಳು. ಏನು ಹೇಳಿದರೂ ಅವಳ ಅಭಿಮಾನ ಕರಗುವಂತಿರಲಿಲ್ಲ. ಸಾರಾಸಾರ ವಿವೇಕವನ್ನೂ ಮೀರಿದ ಉತ್ಕಟ ಆವೇಶ ಅದು. ಎಲ್ಲಿಲ್ಲದ ಧೈರ್ಯವನ್ನೂ ಅದು ತಂದುಕೊಟ್ಟಿತ್ತು. ತಾನು ಮಾತಾಡಿದ್ದೆಲ್ಲ ನಿರ್ಣಾಯಕವಾದದ್ದೇ ಎಬು ಠೀವಿಯಲ್ಲಿ ಹೇಳಿದಳು. ಅವಳ ಬಾಳಿನ ಸತ್ವವೆಲ್ಲ ಒಟ್ಟುಗೂಡಿ ಬಂದು ಈ ಮಾತುಗಳನ್ನಾಡಿಸಿತ್ತು. ಮೊದಲಿನ ಪಾರ್ವತೆವ್ವ ಈಗ ಇರಲಿಲ್ಲ. ಆ ಹೆಣ್ಣಿನ ದೈನ್ಯ, ಹೆದರಿಕೆ ಮಾಯವಾಗಿದ್ದವು. ಅವಳ ದನಿಗೆ ವಜ್ರಲೇಪವಾದಂತಿತ್ತು. ಅದು ಗೌಡರ ಮನೆತನದ ವೈಶಿಷ್ಟ್ಯವೋ ಏನೋ, ಶಂಕರಪ್ಪಗೌಡರೂ ಸಾಯುವ ಪೂರ್ವದಲ್ಲಿ ಹೀಗೆಯೇ ಮಾತಾಡಿರಲಿಲ್ಲವೇ? ಆಚಾರ್ಯರಿಗ ಆ ಸಂಗತಿಯೆಲ್ಲ, ಅದೇ ವಿವರಗಳನ್ನೊಳಗೊಂಡು ಕಣ್ಣ ಮುಂದೆ ಕಟ್ಟಿದಂತಾಯಿತು.

ಯಾರೂ ಏನೂ ಹೇಳುವಂತಿರಲಿಲ್ಲ. ಪಾರ್ವತೆವ್ವ ಸುಮ್ಮನಾದಳು. ಆಚಾರ್ಯರೂ ಮಾತನಾಡುವ ಸ್ಥಿತಿಯಲ್ಲಿರಲಿಲ್ಲ. ಶೇಷಪ್ಪನಿಗೇನೋ ತನ್ನ ಪಾಪ ಗೆದ್ದಂತಾಗಿ ಸಂತೋಷವೇ ಆಗಿತ್ತು. ಆದರೆ ಎಂಥ ಸಂತೋಷ? ಪಾರ್ವತೆವ್ವನ ಈ ರಭಸವನ್ನು ನೋಡಿದಾಗ ಅವನಿಗೂ ಒಳಗಿಂದೊಳಗೇ ಹೆದರಿಕೆಯಾಗಿತ್ತು ಸುಮ್ಮನೆ ಆಚಾರ್ಯರ ಮಾತಿನಂತೆಯೇ ಏಕೆ ನಡೆದುಕೊಳ್ಳಲಿಲ್ಲವೊ ಎಂದೆನಿಸಿತು. ಇಡೀ ಊರನ್ನೇ ಆಹ್ವಾನಿಸುವ ಅವಳ ಧೈರ್ಯ ಅಸಾಮಾನ್ಯವಾಗಿತ್ತಾದರೂ, ಅದು ಅಪಾಯವನ್ನು ಕೈಮಾಡಿ ಕರೆಯುವಂತಿತ್ತು. ಜನರ ಕೀಳುತನ ಅವಳ ಸಹನೆಯನ್ನೇ ಪರೀಕ್ಷಿಸಿತ್ತು; ಅವಳ ಸತ್ವವನ್ನೇ ಒರೆಗೆ ಹಚ್ಚಿತ್ತು. ಹೆಣ್ಣಿನ ಅಪಮಾನ ಇದಕ್ಕೂ ಹೆಚ್ಚು ಇನ್ನೇನಾಗಬೇಕು?

ಸರಿರಾತ್ರಿಯಾಗಿತ್ತು. ಶೇಷಪ್ಪ ಆಚಾರ್ಯರಿಬ್ಬರೂ ಅಲ್ಲಿಂದೆದ್ದು ಹೊರಟರು. ಓಣಿಗಳೆಲ್ಲ ನಿರ್ಜನವಾಗಿದ್ದವು. ಆದರೆ ಏನು ಹುಚ್ಚು ತುಂಬಿತ್ತೋ ಊರ ನಾಯಿಗಳೆಲ್ಲ ಸ್ಪರ್ಧೆ ಹೂಡಿದವರಂತೆ ಅಖಂಡವಾಗಿ ಬೊಗಳುತ್ತಿದ್ದವು. ಶೇಷಪ್ಪ ಆಚಾರ್ಯರಿಗೆ ಹೇಳುತ್ತ ನಡೆದಿದ್ದ.

" ಮಹಾ ಅಭಿಮಾನಿ ಹೆಣಮಗಳು! ನಿಮ್ಮ ಮಾತಿಗೆ ಆಕಿ ಒಪ್ಪಲಿಲ್ಲ! ಅಂತ ಹೇಳಿದ್ಹಾಂಗ ಆತು ನೋಡ್ರಿ ಆಚಾರ! ಏನಾs ಆಗಲಿ ಅರ್ಜಿ ಕೊಡಾಂತ

ಹೇಳ್ಯಾಳ, ಅಷ್ಟು ಕೊಡತೀನಿ. ಈ ಲಿಂಗಪ್ಪ, ಪಡದಪ್ಪ ಇವರೆಲ್ಲಾ ಜೇಲ ಕಾಣೂ ಹಾಂಗ ಮಾಡತೀನಿ. ಕುಲಕರ್ಣಿಕಿ ದಪ್ತರ ಹೋದರೆನಾತು ಆಚಾರ‍್ರ? ಅದಿಲ್ಲ ದಿದ್ದರೂ ಶೇಷಪ್ಪ ಏನ ಮಾಡಬಲ್ಲ ತೋರಸತೀನಿ."

ಆಚಾರ್ಯರು ಈ ಒಟಗುಟ್ಟುವದನ್ನು ಕಿವಿಗೆ ಹಾಕಿಕೊಳ್ಳಲೇ ಇಲ್ಲ. ಅವರ ಲಕ್ಷ್ಯವೆಲ್ಲ ಭವಿಷ್ಯದ ಮುಸುಕನ್ನು ಓಸರಿಸಿ ನೋಡುವದರಲ್ಲಿ ತೊಡಗಿತ್ತು.

:: ೪೪ ::

ಲಿಂಗಪ್ಪಗೌಡ ತಾಲೂಕಿನಿಂದ ಮರಳಿ ಬಂದಾಗ ವಾಲೀಕಾರ ಮಲ್ಲ ಊರಲ್ಲಿ ಇರಲಿಲ್ಲ. ಗೌಡಿತಿ ಬರೆಸಿಕೊಟ್ಟ ಅರ್ಜಿಯನ್ನು ಫೌಜದಾರರಿಗೆ ಮುಟ್ಟಿಸಲು ಅವನು ಹೊರಟುಹೋಗಿದ್ದ. ಈ ಸುದ್ದಿಯನ್ನು ಕೇಳಿ ಲಿಂಗಪ್ಪಗೌಡನಿಗೆ ಸಿಟ್ಟು ಬಂತು. ಭೂಮಿಯ ಕಬಜಾ ತಾನು ಪಡೆಯದಂತೆ ಗೌಡಿತಿ ಈ ಆಟವನ್ನು ಹೂಡಿರ ಬೇಕೆಂದು ಅವನ ತರ್ಕ. ಪಡದಯ್ಯನವರಿಗೆ ಈ ಸುದ್ದಿಯನ್ನು ಹೇಳಿದಾಗ ಅವರು. "ಇದಕ್ಯಾಕ ಚಿಂತಿ ಮಾಡತೀರಿ? ಫೌಜದಾರ ಅರ್ಜಿ ಮುಟ್ಟಿದ ಕೂಡಲೇ ಬಂದರೂ ನಾಳೆ ಬರತಾನು. ಇಂದ ರಾತ್ರಿನss ಗೌಡರ ಬಿತ್ತಿದ ಭೂಮಿ ಹರಗಿಸಿ ಬಿಡೂಣು. ಫೌಜದಾರ ಬಂದು ಭೂಮಿಗೆ ಕೂರಿಗಿ ಕಳಸಬ್ಯಾಡ್ರಿ ಅಂದರ, ಬೀಜ ಗಾಣದೆ ಪಡಾಬಿಳತೈತಿ ಅಂತ ಹೇಳಿ ಅವನಿಂದ ಬಿತ್ತಾಕ ಪರವಾನಿಗಿ ತೊಗೊಳ್ಳೂಣು. ರಾತ್ರಿ ಹೊತ್ತು ಮುರುದು ಬಿತ್ತೂದೂ ಪಾಡ ಆಗಾಣಿಲ್ಲ. ಇಂದ ಈಗಿಂದ ಈಗss ಹರಗಿಸಿಬಿಡೂಣು" ಎಂದು ಸಮಾಧಾನ ಹೇಳಿದರು.

ರೈತರೆಲ್ಲ ಲಿಂಗಪ್ಪಗೌಡನೊಡನೆ ಅದೇ ಬಂದಿದ್ದರು. ತಗಾಯಿ ಸಾಲದ ರೂಪಾಯಿಗಳ ಹಮ್ಮಿಣಿಯನ್ನು ಟೊಂಕದಿಂದ ಬಿಚ್ಚುವ ಮೊದಲೇ, ರಾತ್ರಿ ಕುಂಟೆ-ದಿಂಡು, ಎತ್ತುಗಳನ್ನು ತೆಗೆದುಕೊಂಡು ಹೊಲಕ್ಕೆ ಬರಬೇಕೆಂದು ಪಡದಪ್ಪ ನವರಿಂದ ಕರೆ ಬಂದಿತು. ಹಮ್ಮಿಣಿ ಬಿಚ್ಚಿಟ್ಟು ಊಟ ಮಾಡಿದ ಕೂಡಲೇ ಪಡ ದಯ್ಯನವರ ಆಜ್ಞಾನುಸಾರವಾಗಿ ಹೊರಡಲೇಬೇಕಾಗಿತ್ತು.

ಇನ್ನೇನು, ದೀಪವಾರಿಸಿ ಊರೆಲ್ಲ ಮಲಗುವ ಹೊತ್ತಾಗಿತ್ತು. ಲಿಂಗ

ಪ್ಪನೂ ಊಟ ಮಾಡಿ ಸಜ್ಜಾಗಿದ್ದ. ಅವನ ಧುರೀಣತ್ವದಲ್ಲಿ ನಾಲ್ವತ್ತು ಜತೆ ಎತ್ತುಗಳು, ಗೌಡರ ಮಸಾರಿಭೂಮಿಯಲ್ಲಿ ಬಿತ್ತಿದ್ದನ್ನು ಹರಗಿ ಸ್ವಚ್ಛಮಾಡಲು ಹೊರಟಿದ್ದವು. ಹೊಲೆಯನೊಬ್ಬ ಹಿಡಿದ ಹಿಲಾಲಿನ ಬೆಳಕಿನಲ್ಲಿ ಲಿಂಗಪ್ಪನ ಮುಖ ಕ್ರೂರವಾಗಿ ಕಾಣುತ್ತಿತ್ತು. ಗೌಡರ ವಾಡೆಯನ್ನು ವಶಪಡಿಸಿಕೊಳ್ಳಬೇಕಾದಾಗ ತೋರಿಸಿದ ಹೇಡಿತನವನ್ನು ಇನ್ನು ಮುಂದೆ ತೋರಿಸಲಾಗದೆಂದು ಅವನು ನಿಶ್ಚಯಿಸಿಕೊಂಡಂತಿತ್ತು. ತಾನೂ ಆಸ್ತಿವಂತನಾಗಿ ಮೆರೆಯಬೇಕೆಂಬ ಹಂಬಲ ದೆವ್ವವಾಗಿ ಕಾಡುತ್ತಿತ್ತು. ಅಧಿಕಾರದಿಂದ ಮೊದಲುಗೊಂಡು ಎಲ್ಲವನ್ನೂ ಗೆದ್ದೇ ಪಡೆಯಬೇಕಾಗಿತ್ತು. ಸತತಪ್ರಯತ್ನದಲ್ಲಿ ಗೆಲುವಿನ ಬೀಜ ಇದ್ದೇ ಇದೆ ಎಂಬುದು ಇತ್ತೀಚೇಗೆ ಅವನು ಅನುಭವಿಸಿದ ಸತ್ಯವಾಗಿತ್ತು.

ಅವನ ಜೊತೆಗೆ ರೈತರೂ ಹೊರಟರು. ಯಾರಿಗೂ ಉತ್ಸಾಹವಿರಲಿಲ್ಲ. ಏನೋ ಮಾಡಬಾರದ ಕೆಲಸವೊಂದನ್ನು ಮಾಡುತ್ತಿದ್ದೇವೆಂಬ ಪ್ರಜ್ಞೆ ಎಲ್ಲರಿಗೂ ಇತ್ತು. ಆದರೆ ಗೌಡರು ಕೊಡಿಸಿದ ಹಣ ವಾದದ ಬಾಯಿಯನ್ನು ಮುಚ್ಚಿತ್ತು. ಇರುಳಿನ ಕತ್ತಲಲ್ಲಿ ಪಾಪಪ್ರಜ್ಞೆಯನ್ನು ಮುಚ್ಚಿಡಬಹುದಾಗಿತ್ತು. ತಮ್ಮ ಜೊತೆಗೆ ಬಂದವರ ಸಹವಾಸದಲ್ಲಿ ಅದನ್ನು ಸಹಜವಾಗಿ ಮರೆಯಬಹುದಾಗಿತ್ತು. ಸಹವಾಸದ ಬಲ ಪಾಪಕ್ಕೆ ಅವಶ್ಯವಾಗಿರುವಂತೆ ಪುಣ್ಯಕ್ಕಿರುವದಿಲ್ಲ. ಪುಣ್ಯ ಆತ್ಮಸತ್ವದ ಮೇಲೆಯೇ ಕಾಲೂರಿ ಬೆಳೆಯಬಲ್ಲದು. ಪಾಪಿಗೆ ಇನ್ನೊಬ್ಬ ಪಾಪಿಯ ಅವಶ್ಯಕತೆ ಇದ್ದೇ ಇದೆ.

ಪಡದಪ್ಪನವರು ಮಾತ್ರ ಇವರ ಜೊತೆಗೆ ಹೋಗಲಿಲ್ಲ. ಈ ಸುದ್ದಿ ಹತ್ತಿ ಯಾರಾದರೂ ಹರಗುವವರನ್ನು ತಡೆಯಲು ಹೋಗುತ್ತಿದ್ದರೆ, ಅವರನ್ನು ತಡೆಯಲು ಇರಲಿ ಎಂದು, ಆ ಕೆಲಸವನ್ನು ನಿರ್ವಹಿಸಲು ಹೊಲೆಯರ ಹಾಗೂ ಕೂಲಿಕಾರರ ಕಾದಿಟ್ಟ ಸೈನ್ಯದೊಡನೆ ಅವರು ಮಠದಲ್ಲಿಯೇ ಇದ್ದರು. ಹರಗಲು ಹೋಗುವವರನ್ನು ಧರ್ಮಪೀಠದಿಂದ ಆಶೀರ್ವದಿಸಿ ಕಳಿಸಲು ಅವರು ಮರೆತಿರಲಿಲ್ಲ.

ಮಠದಲ್ಲಿಯೂ ಸಾಕಷ್ಟು ಜನರಿದ್ದರು. ಅವರಲ್ಲಿಯೂ ಪಡದಯ್ಯನವರ ನೆಚ್ಚಿನ ಶಿಷ್ಯರೇ ಇದ್ದರು. 'ತೀರ್ಥ'ದ ಕಾಯಿಗಳು ಒಂದರ ಮೇಲೊಂದರಂತೆ ಸುತ್ತಾಡಿದವು. ಅದರ ಜೊತೆಗೆ ಹಗುರ ಮಾತುಗಳಿಗೂ, ಕುಚೇಷ್ಟೆಗಳಿಗೂ ಕಡಿಮೆಯಿರಲಿಲ್ಲ. ತೀರ್ಥ ಕುಡಿದಾಗ, ಅದೂ ನಿಶೆಯೇರಿದಾಗ ಅಪ್ಪನವರ

ಬಾಯಿಂದ ಹೊರಡುವ ವಾಕ್ಯಗಳನ್ನು ಕೇಳಲು ಶಿಷ್ಯಗಣವೆಲ್ಲ ಆತುರವಾ
ಕುಳಿತಿತ್ತು.

ಶಿಷ್ಯೋತ್ತಮನಾದ ಕಮತಿಗರ ಕರಿಯನಿಗೆ, ಮನೆಯಲ್ಲಿ ಹೆಂಡತಿ ಹೇಳ
ಒಂದು ಮಾತಿನಿಂದ ಒಂದು ವಿಚಾರ ಹೊಳೆದಿತ್ತು. ಈ ಬಗ್ಗೆ ಅಪ್ಪನವರ ವಾ
ಏನು ಹೊರಡುತ್ತದೆಂಬುದನ್ನು ಕೇಳುವದು ಅವಶ್ಯವಾಗಿತ್ತು. ಪರಟೆಯಲ್ಲಿ ತೀ
ವನ್ನು ಸುರುವಿ ಕೊಟ್ಟೇಕೊಟ್ಟ. ಆಮೇಲೆ ವಿನಮ್ರಭಾವದಿಂದ ಅಡ್ಡಬಿದ
"ಯಪ್ಪಾ, ಗೌಡರ ಭೂಮಿ ಕಬಜಾ ಬರಾಣಾ, ವಾಡೇದ ಕಮತಿಗ್ಯಾರನೆಲ
ನೇಮಿಸಿಕೊಂಡು ಗೌಡರು ಕಮತಾ ಇಡತಾರು ಅಂತ ಹೇಳಿದ್ದಿರಿ. ಮತ್ತ ಈ
ಹರಗಾಕ ಬರೇ ರೈತರನ್ಹ ಕಳಿಸಿದಿರಿ. ನಾಳೆ ಅವರೆಲ್ಲಾ ತಮಗಃಭೂಮಿ ಕೋರ
ಕೊಡಬೇಕೂ ಅಂದರ, ಇಲ್ಲಾ ಅನಲಾಕ ಬಂದೀತರೇ? ನಮಗ ಮುಂದಿನ ಹಾ
ಏನರೀ ಯಪ್ಪಾ?" ಎಂದು ಬಿನ್ನವಿಸಿಕೊಂಡ.

ಪಡದಯ್ಯನವರು ಇಂದು ಬೇಕೆಂದೇ ಹೆಚ್ಚು ತೀರ್ಥವನ್ನು ಸೇವಿಸಿರಲಿಲ್ಲ
ಆದ್ದರಿಂದ ಅವರಿಗೆ ನಿಶೆಯೂ ಆಗುವಂತಿರಲಿಲ್ಲ. ಶಿಷ್ಯೋತ್ತಮನ ನುಡಿಗ
ನ್ನಾಲಿಸಿದರು. ಆದರೆ ಆಲಿಸದಂತೆ ಆಲಿಸಿದರು. ಅವನು ಮಾತಾಡಿದ್ದೆಲ್ಲ ಅವರಿ
ಅರ್ಥವೂ ಆಗಿತ್ತು. ನೇರವಾಗಿ ಹೇಳಿದರೆ ಪ್ರಯೋಜನವಿಲ್ಲವೆಂದೆನಿಸಿದ್ದರಿಂ
ಈಗ ಅವತಾರ ಪ್ರಕಟವಾಗಬೇಕಾಗಿತ್ತು. ಕಣ್ಣು ಅರೆತೆರೆದು ಮುಚ್ಚಿದವು; ಅಧ
ಗಳು ನಿಯಮಿತವಾಗಿ ಕಂಪಿಸಹತ್ತಿದವು; ಭ್ರೂಲತೆಗಳು ಆಕುಂಚಿತವಾದವು
ಮೊದಲು ಕೇವಲ "ಹಾಂ" ಎಂಬ ಗುಡುಗು ಮಾತ್ರ ಕೇಳಬಂತು. ಶಿಷ್ಯರೆಲ್ಲರು
ಸಾವಧಾನರಾಗಲು ಕೊಟ್ಟ ಸೂಚನೆಯಿದು. ಮರುಕ್ಷಣದಲ್ಲಿ ಕಣ್ಣು ತೆರೆದವು
ಕರಿಯನೆಡೆಗೆ ಕಟಾಕ್ಷವಿಕ್ಷೇಪವಾಯಿತು.ಅವನು ಭಕ್ತಿಭಾವದಿಂದ ಕೈಜೋಡಿಸಿದ

"ಮಗನೇ ಕೇಳು. ನಿನ್ನ ಭೂಮಿ ನಿನ್ನ ಪದರಾಗಃ ಐತಿ. ಜ್ವಾಳದ ನಿಟ್ಟ
ಹೆಚ್ಚೈತಿ" ಎಂದು ಗರ್ಜಿಸಿದರು. ಅದನ್ನು ಲಕ್ಷ್ಯಗೊಟ್ಟು ಕೇಳಿದ ಕರಿಯನಿ
ಏನೂ ತಿಳಿಯಲಿಲ್ಲ. "ಭೂಮಿ ಲಾವಣಿಗೆ ಹಿಡಿದ ರೈತರು ಕುಂಟೆ ಹೂಡಿ ಹರ
ಇಟ್ಟಾರ ಯಪ್ಪಾ. ಭೂಮಿೂನಃ ಇಲ್ಲದಾಗ ಜ್ವಾಳದ ನಿಟ್ಟ ಹೆಚ್ಚೈತಿ ಅಂತೀದಿ
ಒಡಪಕ್ಷಿ ಮಾಡಿ ಹೇಳ ಯಪ್ಪಾ" ಎಂದು ಅರ್ಥಕ್ಕಾಗಿ ಅಂಗಲಾಚಿದ.

"ಬಿತ್ತಿದಷ್ಟು ಬೆಳಿ ತಿನ್ನಾಕಿಲ್ಲ. ಹಮ್ಮಿಣಿ ಮನ್ಯಾಗ ಇಟ್ಟಾವಗ ಅದ
ಕಾಣಾಕಿಲ್ಲ. ರಾಶೀ ಮಾಡಿದವನ ಬಾಯಾಗ ಮಣ್ಣು; ನಿನ್ನ ಮನ್ಯಾಗ ಬಂ

ಬೀಳತೈತಿ ಹೊನ್ನು" ಮತ್ತೊಮ್ಮೆ ದೈವವಾಕ್ಯದ ಆರ್ಭಟ ಕೇಳಿಬಂತು.

ಇದರಿಂದ ಕರಿಯ ಮತ್ತಷ್ಟು ಗೊಂದಲದಲ್ಲಿ ಬಿದ್ದ. ಅಪ್ಪನವರ ಮಹಿಮೆಯೇ ಅಗಮ್ಯವಾದದ್ದು. ಅವರು ಹೇಳಿದ್ದನ್ನು ಮನಸ್ಸಿನಲ್ಲಿಯೇ ಸುರಿಸಿ ಸುರಿಸಿ ಅರ್ಥ ಹೀರಬೇಕು. ಈಗಲೇ ತಿಳಿದುಬಿಟ್ಟರೆ ಅದೆಂಥ ವಾಕ್ಯ? ಅದನ್ನು ನೆನಪಿನಲ್ಲಿಟ್ಟುಕೊಂಡು ಯಾರಾದರೂ ಬುದ್ಧಿವಂತರಿಗೆ ಕೇಳಿ ಅರ್ಥ ತಿಳಿದುಕೊಳ್ಳಬೇಕು. ಗೂಢಾರ್ಥವಿಲ್ಲದೆ ವಾಕ್ಯ ಹೇಳಲು ಅಪ್ಪನವರೇನು ಬಿಡಾಡಿ ಸಾಧುವೇ? ಕರಿಯ ಆ ವಾಕ್ಯವನ್ನೇ ಬಾಯಿಪಾಠ ಮಾಡಹತ್ತಿದ.

ಮುಂದೆ ಸ್ವಲ್ಪಹೊತ್ತು ವಾತಾವರಣವೆಲ್ಲ ಸ್ತಬ್ಧವಾಗಿತ್ತು. ಆಮೇಲೆ ಹೊಲೆಯರ ರುದ್ರ ಕೈಜೋಡಿಸಿದ. "ಯಪ್ಪಾ, ನಿನ್ನೆ ಕಾಳ ಕೊಡಿಸಿದಿ, ಹಬ್ಬಾ ಮಾಡಿಸಿದಿ. ಆದರ ಆಗದ ಜನಾ ಅಂತೈತಿ 'ಆ ಗೌಡಿತಿ ಹಗೇ ನೀವೆಲ್ಲಾ ಲೂಟಿ ಮಾಡಿದಿರಿ; ಅದಕ ಗೌಡಿತಿ ಅರ್ಜಿ ಮಾಡ್ಯಾಳು' ಅಂತ. ಅದರಾಗಿಂದ ಪಾರಾಗೂದಕ ಏನ ಹಾದೀ ತಗೀತಿ ಯಪ್ಪಾ?" ಎಂದು ಪ್ರಶ್ನೆ ಹಾಕಿದ.

ಈ ಮಾತು ಸಮಾಧಿಯ ಮುಸುಕಿನಲ್ಲಿಯೂ ಎಚ್ಚತ್ತಿದ್ದ ಕಿವಿಗಳಿಗೆ ಕೇಳಿಸಿತು. ಸಮಾಧಿಯನ್ನು ಇಳಿಸಬೇಕೆಂದರೆ ಅಪ್ಪನವರಿಗೆ ತೊಂದರೆಯಾಯಿತು. ಇದ್ದದ್ದರಲ್ಲಿಯೇ ಸಾವರಿಸಿಕೊಂಡು, ಎಚ್ಚರದ ಸ್ಥಿತಿಗೆ ಮರಳಿದರು. "ಯಾಕಲೇ ರುದ್ರ್ಯಾ, ಏನಂತೀ ಏನು? ಗೌಡಿತಿ ಅರ್ಜಿ ಮಾಡ್ಯಾಳಂತ ಹೆದರಿಕೊಂಡೀ ಏನ ಮಗನ?" ಎಂದು ಕೇಳಿದರು. ದನಿಯಲ್ಲಿ ದೈವದ ಆವೇಶವಿರಲಿಲ್ಲ. ಗೊಗ್ಗರ ದನಿಯೇ ಇತ್ತು.

"ಯಪ್ಪಾ, ನೀ ಇರೂ ಮಟಾ ನಾ ಯಾಕ ಹೆದರಲಿ? ಆದರ ಅರ್ಜಿ ಮಾಡಿದ್ದು ಕಠೀವು ಅಂತ ಅನಸತೈತೇನು ತಂದೇ?" ಎಂದು ರುದ್ರ ಕೇಳಿದ.

ಪಡದಯ್ಯನವರಿಗೆ ನಿಜವಾಗಿಯೂ ಈ ಸುದ್ದಿ ಗೊತ್ತಿರಲಿಲ್ಲ. ಭೂಮಿಯ ಕಬಜಾ ಪಡೆಯಲು ಬಂದವರನ್ನು ತಡೆಯಲು ಸರಕಾರದಿಂದ ಸಹಾಯ ಕೇಳಿರಬೇಕೆಂದು ಅವರೇ ಭಾವಿಸಿದ್ದರು. ಆದರೆ ರುದ್ರ ಹೇಳಿದ ಕತೆ ಬೇರೆಯಾಗಿತ್ತು. ಅರ್ಜಿ ಕೊಟ್ಟರೂ ಪಾರಾಗುವಂತೆ, ಬೇಕೆಂದೇ, ಮೂರು ಹಗೆಗಳಲ್ಲಿ, ಲಿಂಗಪ್ಪನ ಪಾಲಿನದೆಂದು ಒಂದೇ ಹಗೆಯನ್ನು ತೆಗೆಸಿ ಕಾಳು ಹಂಚಿದ್ದರು. ಆದರೂ ನಾಳೆ ಫೌಜದಾರ ಬಂದು, ಕೈಗೆ ಸಿಕ್ಕ ಜನರನ್ನು ಹಿಡಿದು ಪೀಡಿಸಿದಾಗ, ಅವರು ಕೊಡುವ ಹೇಳಿಕೆಯಿಂದ ತಾವೇ ಲೂಟಿಯ ಪ್ರೇರಕರಾಗಬಹುದೆಂಬ ವಿಚಾರ

ಈಗ ಹೊಳೆಯಿತು. ಹಾಗೆ ಸಿದ್ಧವಾದರೆ ಮುಂದೆ ಗತಿ ಏನು?

ಮದ್ಯದ ಅಮಲಿನಲ್ಲಿ ಪಡದಪ್ಪನವರ ಬುದ್ಧಿ ಚುರುಕಾಗಿ ಕೆಲಸ ಮಾಡು ತ್ತಿತ್ತು. ಈ ಮೊದಲೇ ಹಾಕಿದ ಹೊಂಚೊಂದು ಅವರ ಮನಸ್ಸಿನಲ್ಲಿ ಮೂರ್ತ ಸ್ವರೂಪವನ್ನು ತಾಳತೊಡಗಿತು. ಅನಾಯಾಸ ಊರು ಬರಿದಾಗಿತ್ತು. ತಮ್ಮ ಮಠದಲ್ಲಿ ನಚ್ಚಿನ ಸೇವಕರಿದ್ದರು. ಮನೆ ಮನೆಗಳಲ್ಲಿ ಹಣ ತುಂಬಿದ ಹಮ್ಮಿಣಿ ಗಳಿದ್ದವು. ಈ ಜನರನ್ನು ಕಳಿಸಿ ಅವನ್ನು ತರಿಸಿಬಿಡಬಹುದಲ್ಲ? ನಾಳೆ ಗೌಡಿತಿಯೇ ಲಿಂಗಪ್ಪ ಹಾಗೂ ಅವನ ರೈತರ ಮೇಲೆ ಸೇಡು ತೀರಿಸಲು ಈ ಕೆಲಸಮಾಡಿಸಿದ ಳೆಂದು ಅವಳ ಮೇಲೆಯೇ ದೂರು ಹೊರಿಸಬಹುದಲ್ಲ! ಈಗ ಸಿಕ್ಕ ಅವಕಾಶ ಇನ್ನೊಮ್ಮೆ ದೊರೆಯಲಿಕ್ಕಿಲ್ಲ. ಈ ವಿಚಾರವನ್ನೇ ಗಟ್ಟಿಗೊಳಿಸಲು ಇನ್ನೊಂದು ಪರಟಿಯಷ್ಟು ಮದ್ಯವನ್ನು ಹೀರಿದರು.

"ರುದ್ರ್ಯಾ, ಗೌಡಿತಿ ಅರ್ಜಿ ಕೊಡಲಿ ಬಿಡಲಿ ತಾ ಕೊಟ್ಟ ಅರ್ಜಿ ಹಿಂದಕ ತೊಗೊಂಡು ನಿಮ್ಮೆಲ್ಲಾರ ಕಾಲಬಿದ್ದಿರಬೇಕು ನೋಡು, ಅಂತಾ ಕೆಲಸಾ ಮಾಡಾಕ ತಯಾರ ಅದೀರ್‍ಯಾ?" ಎಂದು ಕೇಳಿದರು.

ಶಿಷ್ಯರೆಲ್ಲ ಜಾಗೃತರಾಗಿ ಏಕಾಗ್ರತೆಯಿಂದ ಪಡದಯ್ಯನವರ ಮುಖವನ್ನೇ ನಿರೀಕ್ಷಿಸತೊಡಗಿದರು. ಏನು ಉಪಾಯ ಹೇಳಬಹುದೋ ಯಾರಿಗೆ ಗೊತ್ತು?

"ಇಗಾ ಅರುವತ್ತು ರೈತರು ಮನ್ಯಾಗ ಹಮ್ಮಿಣಿ ಇಟ್ಟು ಹೊಲಕ್ಕ ಹೋಗ್ಯಾ ರಲ್ಲ? ಆ ಎಲ್ಲಾರ ಮನಿಬಾಗಲಾ ಮುರದು ಹಮ್ಮಿಣಿ ತಂದು ಇಲ್ಲಿಡರಿ. ರೈತ ರಿಗೆ ಅವನ್ನ ನಾ ಮುಟ್ಟಿಸತೀನು. ಗೌಡಿತೀನ ತಮ್ಮ ಮನಿ ಲೂಟಿ ಮಾಡಿಸ್ಯಾಳು ಅಂತ ಆವರ ಕಡಿಂದ ಅರ್ಜಿ ಕೊಡಿಸಿಬಿಟ್ಟರ ಹ್ಯಾಗ ಆದೀತಂತೀರಿ?" ಎಂದು ನಕ್ಕು ಕೇಳಿದರು.

ಕೆಲಸವಿಲ್ಲದೆ ಸುಮ್ಮನೆ ಬಿದ್ದುಕೊಂಡಿದ್ದ ಜನರಿಗೆ ಸ್ಫೂರ್ತಿ ಬಂದಂತಾ ಯಿತು. ಅತ್ತ ರೈತರೆಲ್ಲ ಸಾಹಸದ ಕೆಲಸವೊಂದಕ್ಕೆ ಹೋದಾಗ ತಾವು ಸುಮ್ಮನೆ ಕೂತಿರುವದು ಅವರ ಮನಸ್ಸಿಗೇ ಬಂದಿರಲಿಲ್ಲ. ಈಗ ಪಡದಯ್ಯನವರು ಅವರ ಒಳಗಿನ ಆಸೆಗೆ ಪುಟವಿಟ್ಟರು. ಕೂಡಿದ ಜನರು ಬಂದ ಸ್ಫೂರ್ತಿಯನ್ನು ಮದ್ಯದ ಅಮಲಿನಿಂದ ಇಮ್ಮಡಿಯಾಗಿಸಿದರು. ಹೊರಗೆ ರಾತ್ರಿ ಕೇಳುವವರಿಲ್ಲದೆ ಬಿದ್ದಿತ್ತು. ಇಂಥ ಸದವಕಾಶವನ್ನು ಸುಮ್ಮನೆ ಹೋಗಗೊಡಬೇಕೇ? ಹರಗಲು ಹೋಗಿದ್ದ ರೈತರು ಮರಳುವದಕ್ಕೆ ಇನ್ನೂ ಎಷ್ಟು ಹೊತ್ತು ಬೇಕಾದೀತೋ ಏನೋ! ತಲೆಗೊಬ್ಬ

ರಂತೆ ರೈತರ ಮನೆಗಳಿಗೆ ಹೋಗಿ ಹಮ್ಮಿಣಿಗಳನ್ನು ಕದ್ದು ತರಬೇಕೆಂದು ಗೊತ್ತಾಯಿತು. ಮನೆಯವರು ಪ್ರತಿಭಟಿಸಿದರೆ ಅವರನ್ನು ಹೆದರಿಸಿ ತರುವದೆಂದು ಗೊತ್ತಾಯಿತು. ಆದರೂ ಆದಷ್ಟು ಸದ್ದಾಗದಂತೆ, ಜೊಬ್ಬಾಟವಾಗದಂತೆ ಕೆಲಸ ನಡೆಯಬೇಕು. ಇಷ್ಟು ನಿರ್ಣಯವಾಗಿ ಪಡದಯ್ಯನ ಶಿಷ್ಯಗಣವೆಲ್ಲ ಒಬ್ಬೊಬ್ಬರಾಗಿ ಎದ್ದು ಸಾಹಸಕಾರ್ಯವನ್ನು ಮಾಡಲು ನಡೆಯಿತು.

ದರೋಡೆಯನ್ನು ಮಾಡಲು ಅವರಿಗೇನೂ ಕಲಿಸಬೇಕಾಗಿರಲಿಲ್ಲ. ಆ ಯೋಜನೆಯ ರೂಪರೇಷಗಳೆಲ್ಲ ಅವರಿಗೆ ಪರಿಚಿತವಾಗಿದ್ದವು. ನಡುರಾತ್ರಿಯ ಕತ್ತಲೆ ಮೋಡಗಳಿಂದಾಗಿ ಇನ್ನೂ ಆಳವಾಗಿತ್ತು. ಒಬ್ಬರ ಮುಖ ಒಬ್ಬರಿಗೆ ಕಾಣುತ್ತಿರಲಿಲ್ಲ. ನಾಯಿಗಳನ್ನೆಲ್ಲ ಎಲ್ಲಿ ಕಳಿಸಿದ್ದರೋ, ಒಂದೂ ಬೊಗಳುತ್ತಿರಲಿಲ್ಲ. ಒಂದು ತಾಸಿನಲ್ಲಿಯೇ ಪಾದಳ್ಳಿಯ ಓಣಿಗಳಲ್ಲಿಯ ಮನೆಗಳಿಗೆಲ್ಲ ಹೊರ ಚಿಲಕ ಬಿದ್ದವು. ರೈತರ ಮನೆಗಳ ಬಾಗಿಲಿನ ತಿರುಗಣಿ ತಪ್ಪಿಸಿ, ಬಾಗಿಲುಗಳನ್ನೆತ್ತಿ, ಸದ್ದುಮಾಡದೆ ಹಮ್ಮಿಣಿಗಳನ್ನು ಕದ್ದು ತಂದರು. ತಾಸೆರಡುತಾಸಿನಲ್ಲಿಯೇ ಅವರು ತಂದಿಟ್ಟ ಹಮ್ಮಿಣಿಗಳನ್ನು ಪಡದಯ್ಯನವರು ಮಠದ ಸಂದುಕಕ್ಕೆ ಸಾಗಿಸಿದರು. ಹಮ್ಮಿಣಿಗಳ ಜೊತೆಗೇ ದೋಚಿಕೊಂಡಿದ್ದ ಒಡವೆಗಳನ್ನು ಮಾತ್ರ ತಪ್ಪದೆ ತಂತಮ್ಮ ಮನೆಗಳಿಗೊಯ್ದರು.

ಸದ್ದಿಲ್ಲದೇ ನಸುಕು ತನ್ನ ಬೆಳಕನ್ನು ಚಲ್ಲಿತು. ರಾತ್ರಿಯೆಲ್ಲ ಹರಗಿದ್ದ ಕುಂಟೆ-ಸಾಲುಗಳು ಅಸ್ಪಷ್ಟವಾಗಿ ಗೋಚರಿಸತೊಡಗಿದ್ದವು. ಗೌಡರ ಬಿತ್ತಿದ ಭೂಮಿ ಬರಿದಾಗಿತ್ತು. ನೆಲದ ಬಸಿರು ಕದಡಿದಂತಾಗಿತ್ತು. ಹಂಟೆಗಳೊಡನೆ ಹೊರಬಿದ್ದ ಎಳೆ-ಸಸಿಗಳು ಎತ್ತುಗಳ ಕಾಲ ತುಳಿತಕ್ಕೆ ಸಿಕ್ಕು ಮಣ್ಣಾಗಿದ್ದವು. ಮಾಸದ ಮುಸುಕು ಹರಿದ ಸಾವಿರಾರು ಭ್ರೂಣಗಳಂತೆ ಕಂಡವು. ನೆಲದ ನೋಟ ಹೃದಯವಿದ್ರಾವಕವಾಗಿತ್ತು. ಕಳ್ಳ-ಬಸಿರು ಹೊರಬಿದ್ದು ಪಾಪದ ರಹಸ್ಯವೆಲ್ಲ ಬಯಲಾಗಿ, ಹೊಲಿಯುಳಿದು ತನ್ನನ್ನು ತಾನೇ ಕೊಂದುಕೊಂಡ ಹೆಣ್ಣಿನ ದೇಹದಂತೆ ನೆಲವೆಲ್ಲ ಅಸ್ತವ್ಯಸ್ತವಾಗಿತ್ತು.

ಬೆಳಗುಮುಂಜಾನೆ ಈ ಸಾಹಸವನ್ನು ಮುಗಿಸಿ ರೈತರು ಮನೆಗೆ ಮರಳಿದಾಗ ಅಲ್ಲಿ ಕಂಡದ್ದೇನು? ತಗಾಯಿಸಾಲದ ಹಮ್ಮಿಣಿಗಳೆಲ್ಲ ಮಾಯವಾಗಿದ್ದವು. ಮನೆಯವರು ಹೇಳಿದ ಸುದ್ದಿಗಳಿಂದ ಅವರಿನ್ನೂ ಕಂಗಾಲಾದರು. ಬಿತ್ತಿದ ನೆಲವನ್ನು ಹರಗುವುದಕ್ಕೆ ಇದು ಶಿಕ್ಷೆ ಎಂದು ಹೆಣ್ಣುಮಕ್ಕಳು ಗೋಳಿಟ್ಟು ಅತ್ತಾಗ

ಅವರಿಗೆ ಅದೂ ನಿಜವೆಂದೆನಿಸಿತು.

ಲಿಂಗಪ್ಪ ನಸುಕಿನಲ್ಲಿಯೇ ಮಠಕ್ಕೆ ಬಂದಾಗ ಪಡಯ್ಯನವರು ಅವನಿಗೆ ಈ ಸುದ್ದಿಯನ್ನೇನೂ ಹೇಳಲಿಲ್ಲ. ಅವನಿಂದಲೇ ಸುದ್ದಿಯನ್ನು ಸಂಗ್ರಹಿಸಿಕೊಂಡರು. ಈಗ ಮಾತ್ರ ನಿಜವಾದ ಗೌಡಿಕೆ ಬಂದಂತಾಯಿತೆಂದು ಅವನನ್ನು ಅಭಿನಂದಿಸಿದರು. ಹರ್ಷದಿಂದಲೋ, ಅಥವಾ ಬೆಳತನಕ ನಿದ್ದೆಯಿಲ್ಲದೆ ಚಳಿಯಲ್ಲಿ ತಿರುಗಾಡಿದ್ದರಿಂದಲೋ ಲಿಂಗಪ್ಪ ದಣಿದುಹೋಗಿದ್ದ. ಆ ಅಭಿನಂದನೆಯನ್ನು ಸ್ವೀಕರಿಸಿ ಬಾಯಿ ತುಂಬ ಮಾತಾಡುವ ಪರಿಸ್ಥಿತಿಯಲ್ಲಿ ಅವನಿರಲಿಲ್ಲ.

ಬೆಳಗಾಗಿತ್ತು. ಗುಂಪುಗುಂಪಾಗಿ ರೈತರೆಲ್ಲ ಮಠಕ್ಕೆ ಬರಹತ್ತಿದರು. ತಗಾಯಿಸಾಲದ ಹಮ್ಮಿಣಿ, ಹಾಗೂ ಉಳಿದ ಒಡವೆಗಳೂ ಕಳವಾಗಿರುವದನ್ನು ಪಡದಯ್ಯನವರೆದುರಿಗೆ ಹೇಳಿಕೊಂಡು ಗೋಳಿಟ್ಟು ಅತ್ತರು. ಪಡದಯ್ಯನವರು ಆಶ್ಚರ್ಯಗೊಂಡವರಂತೆ ಸೋಗು ಹಾಕಿ, ಅತ್ಯಂತ ಸಹಾನುಭೂತಿಯಿಂದ ಅವರನ್ನು ಕೇಳಿಕೊಂಡರು. ತಮಗೂ ದುಃಖವಾದಂತೆ ನಟಿಸಿದರು. ಆದರೆ ರೈತರೇನೂ ಸ್ಥಳ ಬಿಟ್ಟು ಕದಲುವ ಲಕ್ಷಣ ಕಾಣಲಿಲ್ಲ.

" ಈ ಊರ ನೆಲದ ಗುಣಾನ ಅಂತಾದ್ದೈತಿ. ಹಾದೀ ಬಡದು ದೌಲತ್ತು ನಡಸೂ ರಾಜಾನ ಊರು ಇದು. ಇಲ್ಲಿ ಹುಲಿಬ್ಯಾಟಿಹಳಬರೂ ಅದನ್ನs ಮಾಡಿದವರು. ಈಗ ಜಾಗೀರದಾರರ ಆಸರ ತಪ್ಪಿದಮ್ಯಾಗ ನೆಲಾ ಹಿಡದು ಕುಂತಿದ್ದಾರು. ಈಗ ಗೌಡಿತಿ ಅವರಿಗೆ ಸಾಮೀಲ ಆಗ್ಯಾಳು. ನಿಮ್ಮದೇನು ಕಳವು ಆಗೇತಿ ಅದೆನ್ನೆಲ್ಲಾ ಯಾದೀ ಮಾಡಿಕೋತಾರು ಗೌಡರು. ಅವರಿಗೆಲ್ಲಾ ಹೇಳಿರಿ. ನಾಳೆ ರಿಪೋರ್ಟ ಮಾಡಿ ಫೌಜದಾರರನ್ನ ಕರಸತಾರು. ಆಗ ಈ ಗೌಡಿತಿ ಪುಣ್ಯಾ ತೀರಿತು ಅಂತ ತಿಳೀರಿ" ಎಂದು ಹೇಳಿದರು.

"ಗೌಡಿತೀ ಪುಣ್ಯಾ ತೀರವಲ್ಲದ್ಯಾಕ, ಬಿಡವಲ್ಲದ್ಯಾಕ, ನಾವು ಅನ್ನಾನ್ನ ಗತಿ ಆಗಿ ಕುಂತಿವಲ್ಲರಿ? ತಗಾಯಿಸಾಲ ತಂದದ್ದು ಕರೇ ಆತು; ತಿನ್ನಾಕ ಹಿಡಿ ಕೂಳ ಇಲ್ಲದಾಂಗ ಆತು. ಏನ ಹೇಳಬೇಕು, ನಮ್ಮ ದೈವಾ?" ಎಂದು ಗೋಳು ಇಡುವ ರೈತರಿಗೆ ಸಮಾಧಾನ ಹೇಳುವದು ಲಿಂಗಪ್ಪನಿಂದಾಗಲಿಲ್ಲ. ಈ ಸುದ್ದಿಯನ್ನು ಕೇಳಿಯೇ ಅವನು ಎದೆ ಒಡೆದುಕೊಂಡಿದ್ದ. ಅವನ ಮುಖವೆಲ್ಲ ವಿವರ್ಣವಾಗಿತ್ತು. ತಾನು ಮಾಡಿದ್ದು ಅಪರಾಧವಾಯಿತೆಂದೇ ಅವನ ನಂಬಿಕೆಯಾಯಿತು. ಅದೂ ಅಲ್ಲದೆ ಈ ರೈತರ ಗೋಳಿನ ಹೊಣೆಯನ್ನೂ ತಾನು ಹೊರಬೇಕಾಗಿತ್ತು.

ಗೌಡನಾದವನಿಗೆ ಈ ಜವಾಬ್ದಾರಿಯೂ ಇರುತ್ತದೆಂದು ಅವನಿಗೆ ಕಲ್ಪನೆಯಿರಲಿಲ್ಲ. ಈಗ ಅದರ ವಾಸ್ತವಿಕ ಅನುಭವ ಅವನಿಗೆ ತಲೆಭಾರವಾಗಿತ್ತು.

ಪಡದಯ್ಯನವರ ಲಕ್ಷ್ಯದಲ್ಲಿ ಇದು ಬಂದಿತೇನೋ! "ಇಗಾ, ನಿಮ್ಮ ಮನೀಗೆ ಕಳ್ಳರು ನುಗ್ಗಿದ್ದು ಕೇಳಿ ಅವರಿಗೆ ನೋವಾಗೇತಿ. ನಿಮಗಾದ ಲುಕ್ಸಾನ ತಮ್ಮದs ಅಂತ ತಿಳಕೊಂಡು ಮಂಕಹಿಡಿದು ಕುಂತುಬಿಟ್ಟಾರು. ಅವರು ಏನರ ಮಾಡಿ, ಕಳ್ಳರ ಪತ್ತೇ ಹಚ್ಚಿ ಈಗಾದ ಲುಕ್ಸಾನದಾಗ ಸ್ವಲ್ಪ ಆದರೂ ತುಂಬಿ ಬರೂ ಹಾಗ ಮಾಡತಾರು. ಗೌಡರs, ಬೆಳತನಾ ನಿಮಗ ನಿದ್ದಿ ಆಗಿಲ್ಲ. ಈಗ ಜಳಕಾ ಮಾಡಿ, ಊಟಾ ಮಾಡಿ ಮಲಗಿರಿ. ಮುಂದ ನೋಡಾಕ ಬಂದೀತು" ಎಂದು ಹೇಳಿ ಲಿಂಗಪ್ಪನನ್ನು ಕಳಿಸಿದರು. ಸಾಧ್ಯವಿದ್ದ ಮಟ್ಟಿಗೆ ಪರಿಸ್ಥಿತಿಯನ್ನು ತಣ್ಣಗೆ ಮಾಡಲು ಪ್ರಯತ್ನಿಸಿದರು. ತಮ್ಮ ಬುದ್ಧಿಶಕ್ತಿಯನ್ನೆಲ್ಲ ಉಪಯೋಗಿಸಿ ಅವರಿಗೆಲ್ಲ ಸಮಾಧಾನ ಹೇಳಿದರು. ಆದರೂ ರೈತರೆಲ್ಲ ಇನ್ನೂ ಗೊಣಗುತ್ತಲೇ ಮನೆ ಸೇರಿದರು.

ಆ ದಿನವೆಲ್ಲ ಪಾದಳ್ಳಿಯಲ್ಲಿ ಒಬ್ಬರ ಮುಖದ ಮೇಲೂ ಕಳೆಯಿರಲಿಲ್ಲ. ಜನರೆಲ್ಲ ಅಡ್ಡಾಡುವ ಪ್ರೇತಗಳಂತೆ ಕಾಣುತ್ತಿದ್ದರು. ಮನಸ್ಸಿಲ್ಲದ ಮನಸ್ಸಿನಿಂದ ಕೆಲಸ ನಡೆದಿತ್ತು. ಹೊತ್ತು ಹೋಗುವದೇ ಭಾರವಾಗತೊಡಗಿತ್ತು. ಬಿತ್ತಿದ ಹೊಲ ಬರಿದಾಗಿ, ಬತ್ತಲೆಯಾಗಿ ಬಿದ್ದುಕೊಂಡಿತ್ತು. ತುಂಬಿದ ಮನೆಗಳೆಲ್ಲ ಬರಿದಾಗಿದ್ದವು. ಮನಸ್ಸೂ ಬರಿದಾಗಿದ್ದವು. ಅಖಂಡವಾಗಿ ಸಂಚಿತವಾದದ್ದೆಲ್ಲ ಬೆಳಗಾಗುವದರಲ್ಲಿಯೇ ಮಾಯವಾಗಿಬಿಟ್ಟರೆ ಯಾರಿಗೆ ದುಃಖವಾಗಲಿಕ್ಕಿಲ್ಲ? ಕ್ರಮ ತಪ್ಪಿದಂತಾಗಿತ್ತು. ಮನೆಯ ನೆರಳು, ನೆಲದ ಆಸರೆಯಿದ್ದರೂ ಬಟ್ಟಬಯಲಿನಲ್ಲಿ ದಿಕ್ಕು ತಪ್ಪಿ ಕುಳಿತಂತೆ ಸ್ಥಿತಿಯಾಗಿತ್ತು. ಪಾದಳ್ಳಿ ಎದ್ದೋಡಿಸುವಂತಾಗಿತ್ತು.

ಅಖಂಡ ನಾಲ್ವತ್ತು ವರ್ಷಗಳ ವರೆಗೆ, ತಪ್ಪದೆ, ಬೆಳಕು ಹರಿಯುವ ಮೊದಲೇ ಕೃಷ್ಣಾಸ್ನಾನ ಮಾಡುತ್ತ ಬಂದಿದ್ದ ಆಚಾರ್ಯರ ವ್ರತ ಇಂದು ತಪ್ಪಿಹೋಗಿತ್ತು. ಮನೆಬಾಗಿಲಿಗೆ ಹೊರಚಿಲಕ ಹಾಕಿದ್ದರಿಂದ, ನದಿಗೆ ಹೊರಡುವದಾಗಲಿಲ್ಲ. ಬೀದಿಯಲ್ಲಿ ಜನರು ಅಡ್ಡಾಡುವ ವರೆಗೆ ಅವರು ಕಾಯಬೇಕಾಯಿತು. ಶೇಷಪ್ಪನೂ ಈ ಸುದ್ದಿಯನ್ನು ಬೆಳಿಗ್ಗೆ ಎದ್ದ ಮೇಲೆ ಕೇಳಿ ಗಾಬರಿಯಾಗಿದ್ದ. ಊರಲ್ಲಿಯ ರೈತರ ಮನೆಗಳಿಗೆ ಕಳ್ಳರು ನುಗ್ಗಿದ್ದನ್ನು ಕೇಳಿ ಪಾರ್ವತೆವ್ವನೂ ಎದೆಯೊಡೆದುಕೊಂಡಿದ್ದಳು. ಅವಕ್ಕೂ ತಾನೇ ಪ್ರೇರಕಳೆಂದು ಸುದ್ದಿ ದಟ್ಟವಾಗಿ ಹರಡಿದ್ದು

ಅವಳ ಕಿವಿಗೂ ಬೀಳಲು ತಡವಾಗಲಿಲ್ಲ. ಯಾವ ದುಃಖವನ್ನು ತಡೆದುಕೊಳ್ಳ ಬೇಕೋ ತಿಳಿಯದಾಗಿತ್ತು. ರಾತ್ರಿಯೆಲ್ಲ ತನ್ನೆದೆಯ ಮೇಲೆಯೇ ನೇಗಿಲಾಡಿ ದಂತೆ, ಬಿತ್ತಿದ ಮಸಾರಿಭೂಮಿಯನ್ನು ಹರಗಿದ್ದರು. ಬೆಳಗಾಗುವದರಲ್ಲಿ ತನ್ನ ಮೇಲೆ ಕಳವು ಮಾಡಿಸಿದ ಆರೋಪವೂ ಬಂದು ಕುಳಿತಿತ್ತು. ಮನೆತನದ ಸತ್ವ ವನ್ನೇ ಆಹ್ವಾನಿಸಲು ದೈವ ಹೊಸ್ತಿಲಿಗೇ ಕುಳಿತು ಕೇಳುವಂತಿತ್ತು. ಮತ್ತೆ ಆಚಾರ್ಯರಿಗೆ ಹೇಳಿಕಳಿಸಿದ್ದಳು. ಅವರನ್ನು ಕರೆಯಲು ಹೋದ ಆಳುಮಗ ತಂದ ಸಂದೇಶವನ್ನು ಕೇಳಿ ಅವಳ ಅಂಗಾಂಗವೆಲ್ಲ ನಡುಗಿತು. “ಇನ್ನಮ್ಯಾಲೆ ಪಾದ ಳ್ಳಿಯ ಪುಣ್ಯಾ ತೀರಿತು!” ಎಂದು ಅವರು ಹೇಳಿ ಕಳಿಸಿದ್ದರು. ಏನು ಹಾಗೆಂದರೆ ? ಊರಲ್ಲಿ ರಕ್ಷಕರೇ ಇಲ್ಲವಾಯಿತೇ? ಬೆಳಗಾದ ಒಂದೊಂದು ದಿನವೂ ಪರಿಸ್ಥಿತಿಯ ಭೀಕರತೆಯನ್ನು ಹೆಚ್ಚಿಸುತ್ತಲೇ ನಡೆದಿವೆ. ರಾತ್ರಿ ಮಾಡಿದ ಪಾಪವೆಲ್ಲ ಹಗಲ ಬೆಳಕಿನಲ್ಲಿ ಭೀಕರವಾಗಿ ಬಿದ್ದುಕೊಂಡಿವೆ. ಹಿಂದಕ್ಕೆ ಮನೆತನಕ ಬಂದು ಯೋಗ ಕ್ಷೇಮವನ್ನು ಕೇಳಿಕೊಂಡು ಹೋಗುವ ಜನರೇ ಇಂದು ಈ ಹೊಲೆಗೆಲಸದಲ್ಲಿ ತೊಡಗಿದ್ದಾರೆ. ಹಾಗಾದರೆ ಸ್ವಭಾವವೆಂದರೆ ಕೇವಲ ನಮ್ಮ ದೈವ ನಮಗೆ ಹಚ್ಚುವ ಬಣ್ಣವೇ?

ಪಾದಳ್ಳಿಯ ಪುಣ್ಯ ತೀರಿಹೋಯಿತೇ ? ಹೇಗೆ ನಂಬಬೇಕು? ತಮ್ಮ ಮನೆ ತನದ ಪೂರ್ವಜರು ಮೈಯ ರಕ್ತ ಸುರಿಸಿ ನೆಲವನ್ನು ಕಾಯ್ದರು. ಅದು ದಂತಕತೆ ಯಲ್ಲ. ಶಂಕರಪ್ಪ ಗೌಡರೇ ಹಾಗಿದ್ದರಲ್ಲ! ಅವರನ್ನು ನೋಡಿದರೆ ಸಾಕು, ಕೀಳುತನ ಕಾಲಲ್ಲಿ ಕ್ರಿಮಿಯಾಗಿ ಹೊರಳಾಡುತ್ತಿತ್ತು. ಬೇಕೆಂದರೆ ಜೀವ ಕೊಟ್ಟು ಪಾದಳ್ಳಿ ಯನ್ನು ಅವರು ಬದುಕಿಸಬಲ್ಲವರಾಗಿದ್ದರು. ಅಂಥವರ ಪುಣ್ಯ ಊರನ್ನು ಕಾಯದೆ ಹೋದೀತೇ? ಬಾಳಾಚಾರ್ಯರೇ ಇದ್ದಾರಲ್ಲ! ಅವರ ಪುಣ್ಯವೇನು ಸಾಮಾನ್ಯವೇ? ಕಾ:ಲರಾ ಪಿಡುಗಿನಲ್ಲಿ ಸತ್ತವರ ಮನೆಗಳಿಗೆಲ್ಲ ಹೋಗಿ ಔಷಧ ಕೊಟ್ಟು ಬದುಕಿಸಿ ದ್ದರು; ಸಂಕಟಸಮಯಗಳಲ್ಲಿ ಸದೂಧಾನ ಹೇಳಿ ಬದುಕಿಸಿದ್ದರು. ಊರಲ್ಲಿ ಅವರನ್ನು ಕೇಳದಿದ್ದವನೇ ಪಾಪಿ! ಅಂಥವರು ಜೀವಜ್ಯೋತಿಯಂತೆ ಇನ್ನೂ ಪಾದಳ್ಳಿಯಲ್ಲಿರುವಾಗ ಪುಣ್ಯ ತೀರಿತೆಂದರೇನು ?

ಹಗೆಗಳು ಲೂಟಿಯಾದ ಬಗ್ಗೆ ಗೌಡಿತಿ ಕೊಟ್ಟ ಅರ್ಜಿಯನ್ನು ಫೌಜದಾರ ರಿಗೆ ಮುಟ್ಟಿಸಿ ಬರಲು ಹೋಗಿದ್ದ ವಾಲೀಕಾರ ಮಲ್ಲ ತಿರುಗಿಬಂದ ಮೇಲೆ ಅವನಿಗೆ ಈ ಸುದ್ದಿ ಗೊತ್ತಾಯಿತು. ತಾನು ಊರಲ್ಲಿಲ್ಲದಿದ್ದಾಗ ಒಂದೇ ಒಂದು ರಾತ್ರಿಯಲ್ಲಿ

ಎಂಥ ಅನಾಹುತವಾಯಿತಲ್ಲ ಎಂದು ಹಣೆಹಣೆ ಗಟ್ಟಿಸಿಕೊಂಡ. ವಾಲೀಕಾರ ಮಲ್ಲ ನಿಗೆ ವೈಯಕ್ತಿಕ ಜೀವನವೇ ಇರಲಿಲ್ಲವೆನ್ನಬಹುದು. ಮೊದಲಿನಿಂದಲೂ ಶಂಕರಪ್ಪ ಗೌಡರ ಸಮೀಪದ ಸೇವಕನಾಗಿ ಬೆಳೆದುಬಂದಿದ್ದ. ಅವನಿಗೆ ಗೌಡರ ಮೇಲೆ ವಿಶೇಷ ಭಕ್ತಿಯಿತ್ತು. ಬಿತ್ತಿದ ಹೊಲವನ್ನು ಹರಗಿದ್ದನ್ನು ಕೇಳಿ ಅವನಿಗೆ ಸಂಕಟ ವಾಯಿತು. ಪಾರ್ವತೆವ್ವನ ದುಃಖತಪ್ತವಾದ ಮುಖವನ್ನು ನೋಡಲಾರದೆ ಚಾವ-ಡಿಯ ಕಟ್ಟೆಗೆ ಬಂದು ಮುಂಕುಬಡಿದು ಕುಳಿತುಬಿಟ್ಟ.

ಶ್ರಾವಣದ ಆಕಾಶ ಮೋಡಗವಿದು ದುರುಗುಟ್ಟಿ ನೋಡುತ್ತಿರುವಂತಿತ್ತು. ಬೆಳಗಿನ ನಾಲ್ಕು ತಾಸು ಹೊತ್ತಾಗಿದ್ದರೂ ಗ್ರಹಣ ಹಿಡಿದಂತೆ ಎಲ್ಲ ಕಡೆಗೂ ಕತ್ತಲೆಯಾಗಿತ್ತು. ಶೂನ್ಯದೃಷ್ಟಿಯಿಂದ ನೋಡುತ್ತ ವಾಲೀಕಾರಮಲ್ಲಪ್ಪ ಕುಳಿತ ಎಡೆಯಿಂದ ಕದಲಲಿಲ್ಲ. "ಗೌಡಿತಿ ನಮ್ಮ ಮನಿ ಲೂಟ ಮಾಡಿಸಿದಳು. ಆಕಿ ಮಕ್ಕಳಿಗೆ ನಮ್ಮ ಮರಗು ಹತ್ತದ ಬಿಟ್ಟೀತೇ?" ಎಂದು ಜನರು ಆಡಿಕೊಳ್ಳುತ್ತ ಅಡ್ಡಾಡುತ್ತಿದ್ದರು. ಒಮ್ಮೊಮ್ಮೆ ಮಲ್ಲಪ್ಪನ ಕಿವಿಗೆ ಈ ಮಾತು ಬಿದ್ದಾಗ ಅವನು ಚಮಕಿತನಾಗುತ್ತಿದ್ದ. "ನಮ್ಮ ಗೌಡಿತಿ ಇಂತಾ ಕೆಲಸಾ ಮಾಡೂದುಂಟೇ!" ಎಂದು ತನಗೆ ತಾನೇ ಆಶ್ಚರ್ಯಪಡುತ್ತಿದ್ದ. ಇಂದು ಅವನಿಗೆ ಬುದ್ಧಿಭ್ರಮಣೆ ಯಾಗಿತ್ತು. ಹಿಂದೆ ಇಂಥ ಎಷ್ಟೋ ಸಂಗತಿಗಳಾಗಿದ್ದವು. ಶಂಕರಪ್ಪಗೌಡರ ಆಪ್ತಸಚಿವನಾಗಿದ್ದ ಮಲ್ಲಪ್ಪನಿಗೆ ಕೆಲವು ಪ್ರಕರಣಗಳ ರಹಸ್ಯವೂ ಗೊತ್ತಾಗು ತ್ತಿತ್ತು. ಆದರೆ ಎಂದೂ ಮನುಷ್ಯ ಇಷ್ಟು ಹೇಯಸ್ಥಿತಿಗೆ ಇಳಿದಿರಲಿಲ್ಲ. ಪಾರ್ವ ತೆವ್ವನಿಗೂ ಇದಕ್ಕೂ ಏನು ಸಂಬಂಧ?

ಕಮತಿಗರ ಕರಿಯಪ್ಪ ಆಗ ಚಾವಡಿಯ ಮುಂದೆ ಹಾಯ್ದು ಹೋಗುತ್ತಿದ್ದ. ಮಲ್ಲಪ್ಪನನ್ನು ಕಂಡು ಬೇಕೆಂದೇ ತಡೆದ. "ಯಾಕಪಾ ಮಲ್ಲಪ್ಪ, ಫೌಜದಾರನ ತಂದು ನಮಗೆಲ್ಲಾ ಸಾಲಬೇಡಿ ಹಾಕಿಸಲಾಕ ಅಂತಾದ್ದೇನ ನಾವು ಮಾಡಿದ್ದೇ ವಪಾ?" ಎಂದು ಅವನಿಗೆ ಕಿವಿದ. ಮಲ್ಲಪ್ಪನಿಗೆ ಅದು ಕೇಳಿಸಿರಲಿಲ್ಲ. ಅರಿಯ ದವನಂತೆ ತಲೆಯೆತ್ತಿ ನೋಡಿದ. ಕರಿಯಪ್ಪ ಮತ್ತೆ ಅದೇ ಮಾತನ್ನೇ ಕೇಳಿದ. "ಹಗೇ ಲೂಟಿ ಮಾಡಿದವರ ಮ್ಯಾಗ ಗೌಡಿತಿ ಅರ್ಜಿ ಕೊಟ್ಟಿದ್ದರು, ಫೌಜದಾರರಿಗೆ ಮುಟ್ಟಿಸಿಬರಾಕ. ಅದನ್ನು ಮಾಡೂದು ವಾಲೀಕಾರನ ದಗದ. ನಮಗ ಬಿಟ್ಟ ದ್ದಿಲ್ಲ. ಕರಿಯಪ್ಪಮಾವಾ, ನಿಮಗೆಲ್ಲಾ ಸಾಲಬೇಡಿ ಹಾಕೂದು ಫೌಜದಾರನ ಮರ್ಜಿ. ಯಾಕ, ಬಾಳ ಅಂಜಿಕಿ ಬಂದೈತೇನ ಕಾಕಾ?" ಎಂದು ಮಲ್ಲಪ್ಪ ಅರ್ಧ

ಉದಾಸೀನತೆಯಿಂದ, ಅರ್ಧ ಕೊಂಕು ಬೆರೆಸಿ ಕೇಳಿದ.

ಕರಿಯಪ್ಪನೂ ಮತ್ತೆ ಅದೇ ಮಾತಾಡಿದ. ಗೌಡಿತಿಯೇ ತಮ್ಮ ಮೇಲಿನ ಸಿಟ್ಟನಿಂದ ತಮ್ಮ ಮನೆಗಳನ್ನೆಲ್ಲ ಲೂಟಿ ಮಾಡಿಸಿದಳೆಂದು ಅವನಿಗೂ ನಂಬಿಕೆಯಾಗಿತ್ತು. ಮಲ್ಲಪ್ಪ ಎಷ್ಟು ವಾದಿಸಿದರೂ ನಡೆಯಲಿಲ್ಲ. ಅವನಿಗೂ ಬೇಸರವಾಯಿತು. "ಹೋಗಲಿ ಬಿಡು ಕಾಕಾ ಮತ್ತ ಮತ್ತ ಅದನ್ನs ಮಾತಾಡಿದರ ಏನ ಬಂದಹಾಂಗಾತು?" ಎಂದು ಸುಮ್ಮನಾದ. ಕರಿಯಪ್ಪನೂ ಇನ್ನು ಮಾತಾಡುವದರಲ್ಲಿ ಅರ್ಥವಿಲ್ಲವೆಂದರಿತು ಮನೆಯ ಹಾದಿ ಹಿಡಿದ.

ಹೊತ್ತು ಮುಳುಗುವ ವರೆಗೂ ಮಲ್ಲಪ್ಪ ಚಾವಡಿಯ ಕಟ್ಟೆಗೇ ಕುಳಿತಿದ್ದ. ಮನೆಗೆ ಊಟಕ್ಕೆ ಸಹ ಹೋಗಿರಲಿಲ್ಲ. ಖಾಲಿಯಾದ ಮನೆಯಲ್ಲಿ ಅಲ್ಲಿಯ ಬೆಕ್ಕೊಂದೇ ಸುಳಿದಾಡುವಂತೆ ಅವನ ಮನಸ್ಸು ಮತ್ತೆ ಮತ್ತೆ ನಿನ್ನಿನ ಘಟನೆಯ ಸುತ್ತ ತಿರುಗಾಡುತ್ತಿತ್ತು. ಕತ್ತಲಾಗುತ್ತಲೇ ಅಲ್ಲಿಂದೆದ್ದು ಗೌಡರ ವಾಡೆಗೆ ನಡೆದ. ಅಲ್ಲಿ ಬಿರಾದಾರ ನಿಂಗವ್ವನ ಮಗನೊಬ್ಬನನ್ನು ಬಿಟ್ಟು, ಉಳಿದೆಲ್ಲ ಬಿರಾದಾರ ಗೌಡರು ಕೂಡಿದ್ದರು. ಜೈನರ ಜಿನ್ನಪ್ಪ ತನ್ನ ಓಣಿಯ ಕೆಲಜನರೊಂದಿಗೆ ಅಲ್ಲಿ ಬಂದು ಕುಳಿತಿದ್ದ. ಎಲ್ಲರ ಮುಖಗಳೂ ಗಂಭೀರವಾಗಿದ್ದವು.

ವಾಲೀಕಾರ ಮಲ್ಲಪ್ಪ ಬಂದು ಮುಜುರೆ ಮಾಡಿದಾಗ ಜೈನರ ಜಿನ್ನಪ್ಪ, "ಬಾ ಮಲ್ಲಪ್ಪ ಬಾ. ಫೌಜದಾರರು ಏನು ಹೇಳಿದರು?" ಎಂದು ಕೇಳಿದ. "ಹಾಳೂರಾಗ ಇಲಿ ಬೀಳಾಕ ಹತ್ಯಾವಂತರಿ. ಅಲ್ಲೆ ಹೋಗಿ ಊರು ಖಾಲಿ ಮಾಡಿಸಿ, ನಮ್ಮ ಊರಿಗೆ ಬರತಾರಂತರಿ" ಎಂದು ಹೇಳಿದ.

ಇಲಿಗಳು ಬೀಳುತ್ತಿದ್ದರೆ ಫೌಜದಾರ ಅಲ್ಲಿಗೇಕೆ ಹೋಗಬೇಕೆಂಬುದು ಅವರಿಗೆಲ್ಲ ತಿಳಿಯದಾಯಿತು. ಆ ಪ್ರಶ್ನೆಯನ್ನು ಮಲ್ಲಪ್ಪನಿಗೇ ಕೇಳಿದರು. ಅದಕ್ಕೆ ಅವನು ಉತ್ತರ ಹೇಳಿದ: "ಇಲಿ ಬಿದ್ದs ಮನಶ್ಯಾರು ಸಾಯಾಕ ಹತಾರಂತಾರ್ರಿ. ಅದೇನೋ ಬ್ಯಾನಿ ಬರತೈತಂತರಿ. ಅದಕ ಹೋಗಬೇಕಂತರಿ" ಎಂದು ವಿವರಣೆಯಿತ್ತ.

"ಐ ಶಿವನs! ಇಲಿ ಬಿದ್ದರ ಮನಶಾರು ಸಾಯತಾರು? ನಮ್ಮ ಅಡಕಲ ಕ್ವಾಣ್ಯಾಗ ಏಸೊಂದು ಬಿದ್ದಾವು! ಇಲಿ ಬಿದ್ದದ್ದಕ್ಕ ಆಂವಾ ಬರತಿದ್ದರ ನಾನೂ ಹೇಳಿಕಳಸತಿದ್ನೆಲ್ಲಾ!" ಎಂದು ಪಾರ್ವತೆವ್ವ ನುಡಿದಳು. ಇಲಿ ಬಿದ್ದು ಮನುಷ್ಯನಿಗೆ ಬೇನೆ ಬರುವದು ಅವರಿಗೆಲ್ಲ ಮೋಜಿನ ಮಾತಾಗಿತ್ತು.

ಕೊನೆಗೆ ಅದೇ ಕಾರಣವನ್ನು ಮುಂದೊಡ್ಡಿ ಮಲ್ಲನನ್ನು ಇನ್ನೊಮ್ಮೆ ಕಳಿಸಿ ಫೌಜದಾರನನ್ನು ಕರೆಸಬೇಕೆಂದು ನಿರ್ಣಯವಾಯಿತು. ಮಲ್ಲಪ್ಪ ಆಗಲೆಂದು ಮುಜುರೆಮಾಡಿ ಹೊರಟುಹೋದ. ಗೌಡಿತಿಯ ಮೇಲೆ ಊರ ಜನರೆಲ್ಲ ಕೆಂಡ ಕಾರತೊಡಗಿದ್ದನ್ನೂ, ಅವರೆಲ್ಲ ಕೂಡಿ ವಾಡೆಯ ಕಬಜಾ ಲಿಂಗಪ್ಪ ತೆಗೆದುಕೊಳ್ಳಲು ಸಹಾಯ ನೀಡುವರೆಂದೂ ಜಿನ್ನಪ್ಪ ಹೇಳಿದ. ಫೌಜದಾರನನ್ನು ಕರೆಸಿ ಈ ಸಂಗತಿಗಳನ್ನೆಲ್ಲ ತಿಳಿಸಿ ಇನ್ನುಮುಂದೆ ದಾರಿ ಸುರಕ್ಷಿತವಾಗುವಂತೆ ಮಾಡಬೇಕೆಂದು ನಿರ್ಣಯವಾಗಿ ಎಲ್ಲರೂ ಮನೆಗೆ ಹೋಗಲು ಎದ್ದರು. ಬಾಗಿಲು ತೆರೆದಾಗ ಹೊರಗಿನ ಕತ್ತಲೆ ಚಳಿಗಾಳಿಯೊಡನೆ ನುಂಗಿತು. ಒಂದೇ ಸವನೆ ಜಡಿಮಳೆ ಸರಿಯುತ್ತಿತ್ತು. ಗೌಡರ ಹಿತ್ತಲದಿಂದ ಕಪ್ಪೆಗಳ ಅಖಂಡ ಒದರುವಿಕೆ ಕೇಳಬರುತ್ತಿತ್ತು. ರಾತ್ರಿ ಅಪಶಕುನದಿಂದ ತುಂಬಿದಂತೆ ಭೀಕರವಾಗಿತ್ತು.

## :: ೪೫ ::

ಇಲಿಗಳು ಬೀಳುವದು ಪ್ರಾರಂಭವಾಗಿದ್ದರಿಂದ ಜನರನ್ನು ಮನೆಯಿಂದ ಹೊರದೂಡಿ, ಊರ ಹೊರಗೆ ಗುಡಿಸಲು ಹಾಕಿಕೊಂಡು ಇರುವಂತೆ ಡಂಗುರ ಹೊಡೆಸಲು ಲಿಂಗಪ್ಪಗೌಡನಿಗೆ ತಾಲೂಕ-ಕಚೇರಿಯಿಂದ ಅವಸರದ ಹುಕುಮು ಬಂದಿತ್ತು. ಎಲ್ಲರಂತೆಯೇ ಅವನೂ ಅದು ಬಹಳ ಅಪಾಯಕರವೆಂದು ತಿಳಿದಿರಲೇ ಇಲ್ಲ. ಆದರೆ ಹುಕುಮಿನ ಅಮುಲಬಜಾವಣೆಯನ್ನು ಮಾಡಿಸಬೇಕೆಂದಾಗ ಒಂದು ವಿಚಾರ ಅವನಿಗೆ ಹೊಳೆದಿತ್ತು. ಇದೇ ನೆವವನ್ನು ಮುಂದೆ ಮಾಡಿ ಗೌಡಿತಿಯನ್ನು ಮನೆಯಿಂದ ಹೊರದೂಡಿ ತಾನೇಕೆ ವಾಡೆಯ ಕಬಜಾ ಪಡೆಯಬಾರದು? ಹೊಲ ಸಿಕ್ಕಿದೆ, ಇನ್ನು ಮನೆಯೊಂದು ದೊರೆತರೆ ತನ್ನನ್ನು ಹಿಡಿಯುವರಾರು?

ಬರಬರುತ್ತ ಎಲ್ಲವೂ ತನಗೆ ಅನುಕೂಲವಾಗಿರುವದನ್ನು ನೋಡಿ ಅವನಿಗೆ ಆಶ್ಚರ್ಯವಾಗಿತ್ತು. ಹೊಲ, ಮನೆ, ಹೊನ್ನು, ಹೆಣ್ಣು ಸಾಲಾಗಿ ಬಂದು ಅವನ ಪಾದದಲ್ಲಿ ಬೀಳುತ್ತಿದ್ದವು. ಇಲಿ ಬೀಳುತ್ತಿದ್ದುದೇ ನೆವವಾಗಿ ಎಲ್ಲರನ್ನೂ ಮನೆಯಿಂದ ಹೊರದೂಡಲು ಅಧಿಕಾರ ಬೇರೆ ದೊರೆತಂತಾಗಿತ್ತು. ಇನ್ನು ಚಿಮಣಾ

ತನಗೊಲಿದರೆ ತನ್ನ ಎಲ್ಲ ಇಷ್ಟಾರ್ಥಗಳೂ ಕೈಗೂಡಿದಂತಾಗುವವು. ಲಿಂಗಪ್ಪನ ಕಾಮುಕತೆ ಅನೇಕ ಊಹಾಚಿತ್ರಗಳನ್ನು ಕಲ್ಪಿಸಿಕೊಂಡಿತ್ತು. ಈಗ ಇಲಿಗಳು ಬೀಳುತ್ತಿರುವದರಿಂದ ಮಠದಲ್ಲಿಂಯೂ ಅವು ಬೀಳಬಾರದೆಂದಿಲ್ಲ—ಅದೇ ನೆವ ವನ್ನು ಮುಂದೆ ಮಾಡಿ ಚಿಮಣಾಳನ್ನು ಮಠದಿಂದ ಬೇರ್ಪಡಿಸಿದರೆ? ತಾನಂತೂ ಬಿರಾದಾರ ನಿಂಗವ್ವನ ಮನೆಯಲ್ಲಿರುವವ. ಇಲಿಗಳೇಕೆ, ಹೆಣ ಬಿದ್ದರೂ ಗೌಡನಾದ ತಾನು ಊರು ಬಿಡುವಂತಿರಲಿಲ್ಲ. ಇಲಿಗಳಿಗಂಜಿ ಪಡದಪ್ಪ ಊರು ಬಿಡಬಹುದು. ಅಥವಾ ತಾನೇ ಅಂಜಿಕೆ ತೋರಿಸಿ ಊರು ಬಿಡಿಸಬೇಕು. ಆಮೇಲೆ ಚಿಮಣಾ ಎಲ್ಲಿರಬೇಕೆಂಬ ಪ್ರಶ್ನೆ ಬಂದೇಬರುತ್ತದೆ. ಪಡದಯ್ಯನವರು ಅವಳನ್ನು ತಮ್ಮೊಡನೆ ಕರೆದುಕೊಂಡು ಹೋಗುವದಂತೂ ಸಾಧ್ಯವಿಲ್ಲ. ಅಂದಮೇಲೆ ತನ್ನೊಡನೆಯೇ ಇರಲಿ ಎಂದು ಅವರು ಹೇಳಿದರೆ? ಅಥವಾ ತಾನೇ ಅವರನ್ನು ಹಾಗೆ ಕೇಳಿದರೆ? ಏನು ತಪ್ಪು? ಊರ ದೈವದವರ ಸಮಕ್ಷಮ ತನಗೆ ಚಿಮಣಾಳನ್ನು ಅವರು ಒಪ್ಪಿ ಸಿರಲಿಲ್ಲವೇ? ಲಿಂಗಪ್ಪಗೌಡನ ಜಡಮನಸ್ಸು ಕಾಮತಪ್ತವಾಗಿದ್ದರಿಂದ ಚುರುಕಾ ಗಿತ್ತು.

ಅಂದು ರಾತ್ರಿ ಪ್ರಾರಂಭವಾದ ಮಳೆ ಅಖಂಡವಾಗಿ ಸುರಿಯುತ್ತಲೇ ಇತ್ತು. ಅದಕ್ಕೂ ಮೊದಲು ಎರಡು ದಿನ ಸುಮ್ಮನೆ ಬಿಟ್ಟು ಮೋಡಗಳು ಕಾಲು ಚಾಚಿ ಕೊಂಡು ಮುಗಿಲಲ್ಲಿ ಮಲಗಿದ್ದವು. ಈಗಲೋ ಆಗಲೋ ಮಳೆಯಾಗಬಹುದೆಂಬ ನಿರೀಕ್ಷೆ ಇದ್ದೇ ಇತ್ತು. ಗುರುವಾರ ರಾತ್ರಿ ದೊಡ್ಡದೊಂದು ಗಾಳಿ ಬೀಸಿದ್ದೇ ನೆವ ವಾಗಿ ಮಳೆ ಬಂದೇಬಿಟ್ಟಿತು. ಹೊರಗೆ ಅದು ನಡೆಸಿದ್ದ ತಾಂಡವ ಒಳಗೆ ಬೆಚ್ಚಗೆ ಮಲಗಿದವರಿಗೆ ಗೊತ್ತಾಗುವಂತಿರಲಿಲ್ಲ. ಮೊದಲೇ ಕಾದ ನೆಲವನ್ನು ಇನ್ನಷ್ಟು ಕಾಯಿಸಿದೆನಲ್ಲ ಎಂಬ ಸಂಕಟ ಹೆಚ್ಚಾಗಿತ್ತೋ ಏನೋ, ರಾತ್ರಿಯ ಏಕಾಂತದಲ್ಲಿ ಮುಗಿಲು ನೆಲವನ್ನಪ್ಪಿಕೊಂಡು ಒಂದೇ ಸವನೆ ಕಣ್ಣೀರು ಸುರಿಸಿತ್ತು. ವರ್ಷದುದ್ದದ ವಿರಹದುಃಖವೆಲ್ಲ ಕಣ್ಣೀರಾಗಿ ಹರಿಯಬೇಕಾಗಿತ್ತು. ಅಲ್ಲ, ಜನ್ಮಾವಧಿಯೂ ತಾವು ಅನುಭವಿಸಲೇಬೇಕಾಗಿರುವ ವಿರಹವ್ಯಥೆಯನ್ನು ತೋಡಿಕೊಳ್ಳಬೇಕಾ ಗಿತ್ತು. ಮುಗಿಲಿನ ಆವೇಗ ಕಡಿಮೆಯಾಗುವಂತೆಯೇ ಇರಲಿಲ್ಲ. ಇಂಥ ಉತ್ಕಟ ಭಾವಪಲ್ಲಟದಲ್ಲಿಯೂ ನೆಲ ನೀರವವಾಗಿಯೇ ಇತ್ತು. ಮೌನವಾಗಿಯೇ ಮುಗಿ ಲಿನ ಕಣ್ಣೀರನ್ನು ನುಂಗಿತು. ಕ್ಷಿತಿಜದ ಹತ್ತಿರದ ಗಾಢವಾದ ಅಪ್ಪುಗೆಯಲ್ಲಿ ಮೈಮರೆತಾಗ ನೆಲದ ಒಳಗಿನ ಜೀವಕ್ಕೂ ತಪ್ಪು ಸೋಕಿತ್ತು. ಮುಗಿಲಿಗೂ

ಹರ್ಷವಾಗಿರಬೇಕು. ಮಿಂಚಿತು, ಗುಡುಗಿತು, ವರ್ಷಧಾರೆಯು ವಿಪುಲ ಬಾಹುಗಳನ್ನು ಚಾಚಿ ಒಂದೇ ತಕ್ಕೆಯಲ್ಲಿ ನೆಲವನ್ನು ಅಪ್ಪಿಕೊಳ್ಳಲು ಹವಣಿಸಿತು. ಈ ಹರ್ಷದಲ್ಲಿಯೂ ದುಃಖ ಬಿಟ್ಟಿರಲಿಲ್ಲ. ನೆಲದ ಪಾಡನ್ನು ನೋಡಿ ಮುಗಿಲಿಗೆ ಕರುಳು ಹಿಚುಕಿದಂತಾಗಿರಬೇಕು. ಒಡಲ ದುಃಖ ಕಣ್ಣೀರಾಗಿ ಒಂದೇಸವನೆ ಸುರಿದೇ ಸುರಿಯಿತು.

ನೆಲದ ಅಂತಃಕರಣವ ಪ್ರವಾಹ ಸೊಕ್ಕಿ ಹರಿವಂತೆ ಹೊಳೆಯುಬ್ಬಿತು. ಹೊಳೆ-ನೀರಿಗೆ ಮಳೆ-ನೀರಿನೊಡನೆ ಆಟ ಹಿತಕರವಾಗಿತ್ತು. ಎರಡೂ ದಡ ತುಂಬಿ ಹರಿಯಿತು. ಹೊಳೆ ಬರಬರುತ್ತ ಅದರ ಪಾತ್ರ ದೊಡ್ಡದಾಯಿತು. ಅದರ ಮೈ ಉಬ್ಬಿತು. ತೆರೆಗಳು ದಂಡೆಗೆ ಬಂದು ಅಪ್ಪಳಿಸಿದವು. ದಂಡೆಯ ಮಣ್ಣು ಸಡಿಲಾಗಿ ಕರಗಹತ್ತಿತ್ತು. ಬಿಸಿಲ ಬೇಗೆಗೆ ನೊಂದು ಹುರಪಳಿಸಿ, ಪಾತಾಳಲೋಕವನ್ನು ಸೇರಲು ಪ್ರಯತ್ನಿಸುವ ಮಹಾಸರ್ಪವೊಂದರಂತೆ ಹೊಳೆ ನೆಲದೊಡಲನ್ನೇ ಸೀಳ ಹತ್ತಿತು.

ಬೆಳಗಾದರೂ ಮಳೆ ನಿಂತಿರಲಿಲ್ಲ. ಮಳೆಯ ಜಾಳಿಗೆಯೊಳಗಿಂದಲೇ ನಸುಕನ್ನು ಕಾಣಬೇಕಾಗಿತ್ತು. ಕಣ್ಣೀರಿಗೆ ತೊಳೆದಿಳಿಯುವ ಕಣ್ಣ ಕಾಡಿಗೆಯಂತೆ ಮೋಡಗಳು ಕರಗಿ ಇಳಿಯುತ್ತಿದ್ದವು. ಮಳೆ ನಿಲ್ಲಬಹುದಾದ ಲಕ್ಷಣವೇ ಇರಲಿಲ್ಲ. ರಾತ್ರಿ ಅಖಂಡವಾಗಿ ಮಳೆ ಸುರಿದದ್ದರ ಪರಿಣಾಮವಾಗಿ ಮನೆಮನೆಗಳೆಲ್ಲ ಜಂಪಲಿಕ್ಕಿದವು. ಮಣ್ಣು-ಮಾಳಿಗೆಗಳೆಲ್ಲ ನೆನೆದು ನೀರು-ಹನಿಗಳು ತಟಕಿಕ್ಕಿದವು. ಮೋಡ ಮುಸುಕಿ ಕತ್ತಲಾಗಿತ್ತು. ಏಕಪ್ರಕಾರವಾಗಿ ಸುರಿಯುವ ಮಳೆಯ ಸಲುವಾಗಿ ನದಿಗೆ ನೀರು ತರಲು ಹೋಗುವದೂ ದುಸ್ತರವೆನಿಸಿತು. ಮನೆಯಲ್ಲಿ ಸುಮ್ಮನೆ ಕೂಡುವಂತೆಯೂ ಇರಲಿಲ್ಲ. ಜಂಪಲಿಕ್ಕುತ್ತಿದ್ದುದರಿಂದ ಕಂಬಳಿ ಕಟ್ಟಿ ತಟಕಿಕ್ಕುವ ನೀರು ಒಂದೇ ಕಡೆಗೆ ಬೀಳುವಂತೆ ವ್ಯವಸ್ಥೆ ಮಾಡಬೇಕಾಗಿತ್ತು.

ಶನಿವಾರ ರಾತ್ರಿ ಮಳೆಯಲ್ಲಿ ನೆನೆದ ಗೋಡೆಗಳು ಬೀಳುವ ಹೊಸ ತೊಂದರೆಯನ್ನು ಜನರು ಅನುಭವಿಸಬೇಕಾಗಿ ಬಂದಿತು. ನೀರಿಳಿದು, ಮಣ್ಣು ಸಡಿಲಾಗಿ, ಯಾವುದೋ ಅನಿರೀಕ್ಷಿತ ಕ್ಷಣದಲ್ಲಿ ಇಡೀ ಗೋಡೆಯೇ ಕುಪ್ಪರಿಸಿಕೊಂಡು ಧಡಧಡವೆಂದು ಬೀಳುವಾಗ ಆ ಗಳಿಗೆಗೇ ಉತ್ಪಾತವಾಯಿತೋ ಏನೋ ಎನ್ನುವಂತೆ ಜನರ ಎದೆ ಢವಗುಟ್ಟಿ ನಡುಗುತ್ತಿದ್ದವು. ಮನೆ ಸೋರಿ ಮಲಗಲು ಸ್ಥಳವಿಲ್ಲದವರು ಗುಡಿಗುಂಡಾರಗಳಲ್ಲಿ ಮಲಗಿರುತ್ತಿದ್ದರು. ಈ ಸಪ್ಪಳ ಕೇಳಿ ಎಲ್ಲಿ

ತಮ್ಮ ಮನೆಯೇ ಬಿದ್ದಿತೋ, ಎಂದು ಗಾಬರಿಗೊಂಡು, ಕೋರಿ ಹೊತ್ತುಕೊಂ
ಮಳೆಯಲ್ಲಿಯೇ ನೆನೆದು ಹೋಗಿ, ತಮ್ಮ ಮನೆಯ ಒಂದು ನಿಟ್ಟಿನ ಅರ್ಧ ಗೋ
ಬಿದ್ದದ್ದನ್ನು ಕಂಡು ಅಳುತ್ತ ಮರಳಬೇಕಾಯಿತು.

ಮನುಷ್ಯರ ಜೀವನವೇ ಹೀಗೆ ಕೂಳು-ಕೊಬ್ಬರಿಯಾಗಿ ಹೇಗೋ ಸಾಗಿ
ವಾಗ ದನಕರುಗಳ ಗೋಳನ್ನಂತೂ ದೇವರೇ ಬಲ್ಲ. ಬಣಿವೆಯಲ್ಲಿದ್ದ ಮೇವ
ಇಂಥ ಮಳೆಯಲ್ಲಿ ತಂದು ಹಾಕುವದೂ ದುಸ್ತರವಾಗಿತ್ತು. ಉಳ್ಳವರು ಮನೆ
ಲ್ಲಿದ್ದ ಕಾಳನ್ನು ದನಕ್ಕೆ ಇಟ್ಟು ಸಾಕುತ್ತಿದ್ದರು. ಉಳಿದವರ ಮನೆಗಳಲ್ಲಿ ಅವುಗ
ಉಪವಾಸವೇ ಗತಿಯಾಗಿತ್ತು. ಉಪವಾಸದ ಜೊತೆಗೆ ಅಖಂಡವಾಗಿ ತಟಕಿಕ್ಕು
ನೀರಲ್ಲಿ ಅವುಗಳ ಬೆನ್ನು ನೆನೆದುಹೋಗಿದ್ದವು, ತೂತು ತೂತಾಗಿದ್ದವು. ಕಾಲಿ
ಲ್ಲೆಲ್ಲ ಕೆಸರಾಗಿತ್ತು. ಎತ್ತ ಸರಿದರೂ ಒಂದಂಗುಲ ಒಣ ನೆಲ ದೊರಕುವಂತಿರಲಿ
ಮೂಕಪ್ರಾಣಿಗಳು ಮೂಕವಾಗಿಯೇ ಆ ನೋವನ್ನು ಅನುಭವಿಸಬೇಕಾಗಿತ್ತು

ಶನಿವಾರ ರಾತ್ರಿ ಮಳೆ ನಿಂತಂತಾಗಿತ್ತು. ಆದರೆ ಅದರ ಬದಲಾಗಿ ಗಿಡ ಬೇ
ಸಹಿತ ಕಿತ್ತಿಬೀಳುವಂತೆ ಬಿರುಗಾಳಿ ಬೀಸಲಾರಂಭಿಸಿತು. ಅದೃಶ್ಯವಾಗಿರುವ ಗಾ
ದೃಶ್ಯವಾಗುವಂತಾಯಿತು. ಮಳೆಯೊಡನೆ ಸ್ಪರ್ಧೆ ಕಟ್ಟಿದವರಂತೆ ಪಶ್ಚಿಮ ದಿ
ನಿಂದ ಅವ್ಯಾಹತವಾಗಿ ಬೀಸುತ್ತಲೇ ಇತ್ತು. ಗಿಡಗಳೆಲ್ಲ ಈ ಅಬ್ಬರಕ್ಕೆ ಗದಗು
ನಡುಗಿದವು.

ಈ ಮಳೆಗಾಳಿಯ ಬೀಕರ ತಾಂಡವ ತೊಡಗಿದ್ದಾಗ ಬಾಳಾಚಾರ್ಯರು ಮ
ಬಿಟ್ಟು ಹೊರಗೆ ಬಿದ್ದಿರಲೇ ಇಲ್ಲ. ಅವರ ಮನೆಯ ಪಡಸಾಲೆ, ನಡುಮನೆ, ಅ
ಮನೆ ಎಲ್ಲ ಕಡೆಗೂ ಜಂಪಲಿಕ್ಕುತ್ತಿತ್ತು. ಜಂತೆಗಳಿಂದ ನಿಧಾನವಾಗಿ ಹರಿ
ಬರುವ ನೀರನ್ನು ನಿಟ್ಟಿಸುತ್ತ ಕೂಡುವದೇ ಆಚಾರ್ಯರಿಗೆ ಕೆಲಸವಾಗಿತ್ತು. ಅ
ಮನೆಯಲ್ಲಿ ಒಲೆ ಹೊತ್ತಿಸಲೂ ಸ್ಥಳವಿರಲಿಲ್ಲ. ದೇವರಮನೆಯೊಂದು ಮಾ
ಬೆಚ್ಚಗುಳಿದಿತ್ತು. ಅಲ್ಲಿ ಮಾತ್ರ ಜಂತೆ ಸೋರುತ್ತಿರಲಿಲ್ಲ.

ಶನಿವಾರ ರಾತ್ರಿ ನಾಲ್ಕು ಗಂಟೆಯಾಗಿರಬಹುದು. ಅವರ ಮನೆಯ ಪಶ್ಚಿ
ದಿಕ್ಕಿಗಿದ್ದ ಗೋಡೆ ಮಳೆಯ ಹೊಡೆತಕ್ಕೆ ಮೊದಲೇ ನೆನೆದದ್ದು, ಈಗ ಗಾಳಿ
ಹೊಡೆತದಿಂದ ಧಡಧಡವೆಂದು ನೆಲಕ್ಕುರುಳಿತು. ಗೋಪಾಲಕೃಷ್ಣನ ಗುಡಿಯ
ಆಸರೆ ಪಡೆದಿದ್ದ ಕೆಲವರು ಈ ಸಪ್ಪಳ ಕೇಳಿದವರೇ ಅಲ್ಲಿಗೆ ಧಾವಿಸಿ ಬಂದ
ಗೌಡರ ವಾಡೆಯಲ್ಲಿಯೂ ಕೆಲ ಜನರು ಆಶ್ರಯ ಪಡೆದಿದ್ದರು. ಅವರಿಗೂ

ಸಪ್ಪಳ ಕೇಳಿಸಿರಬೇಕು. ಅವರೂ ಆ ಸ್ಥಳಕ್ಕೆ ಓಡಿ ಬಂದರು.

ಜನರು ಆಚಾರ್ಯರ ಮನೆಯಲ್ಲಿ ಒಳಹೊಕ್ಕು ನೋಡಿದರು. ಪಡಸಾಲೆ, ನಡುಮನೆಯೆಲ್ಲ ಜಲಮಯವಾಗಿದ್ದವು. ಇದ್ದ ಒಂದೇ ಒಂದು ಗುಡಾರ ಮಳೆ-ನೀರನ್ನು ತಡೆಗಟ್ಟಲು ವ್ಯರ್ಥಸಾಹಸಮಾಡಿ ಒದ್ದೆಮುದ್ದೆಯಾಗಿ ಬಿದ್ದಿತ್ತು. ಆಚಾರ್ಯರು ಮನೆಯಲ್ಲಿರಲೇ ಇಲ್ಲ. ಆ ಹೊತ್ತಿಗೆಲ್ಲಿ ಹೋಗಿದ್ದರೋ ದೇವರಿಗೇ ಗೊತ್ತು. ಜನರು ದೇವರಮನೆಯಲ್ಲಿ ಹಣಿಕಿಕ್ಕಿದರು. ದೇವರೆದುರು ಹಚ್ಚಿಟ್ಟಿದ್ದ ನಂದಾದೀಪ, ಪಶ್ಚಿಮಗಾಳಿಯ ಅಬ್ಬರದಲ್ಲಿ ಒದ್ದಾಡಿ ಶಾಂತವಾಗಿತ್ತು. ಆಚಾರ್ಯರ ಪತ್ನಿ ಅಲ್ಲಿಯೇ ಮಲಗಿದ್ದರು. ಮಗ್ಗುಲಿಗೇ ಕೃಷ್ಣಾಜಿನವೊಂದು ಹಾಸಿತ್ತು. ಆಚಾರ್ಯರ ಜಪಮಣಿ, ಪಾರಾಯಣಕ್ಕೆಂದು ತೆಗೆದಿಟ್ಟ ಗೀತೆಯ ಗ್ರಂಥ ಅದರ ಮೇಲೆಯೇ ಇದ್ದವು. ಗೋಡೆ ಬಿದ್ದದ್ದರಿಂದ ಪಶ್ಚಿಮದ ಕಡೆಗೆಲ್ಲ ಬಯಲಾಗಿತ್ತು. ಅಂಥ ಬಿರುಗಾಳಿಯಲ್ಲೂ ಆಚಾರ್ಯರ ಪತ್ನಿ ಸುಖವಾಗಿ ಮಲಗಿದ್ದರು. ಜನರಿಗೆಲ್ಲ ಆಶ್ಚರ್ಯವಾಯಿತು. ಆಚಾರ್ಯರೆಲ್ಲಿ ಎಂದು ಕೂಗಿದರು. ಉತ್ತರ ಬರಲಿಲ್ಲ. ಕಳೆದ ಮೂರು ದಿನಗಳಿಂದ ಮಳೆಯ ಮೂಲಕ ನಿದ್ದೆಯಾಗಿರಲಿಕ್ಕಿಲ್ಲವೆಂದೆಣಿಸಿದರು. ಹಾಗೆಯೇ ಹೊರಗೆ ಬಂದು ಆಚಾರ್ಯರನ್ನು ಹುಡುಕಲು ಹೊರಟರು.

ನದಿಯ ದಿಕ್ಕಿನಿಂದಲೇ ಆಚಾರ್ಯರು ಬರುತ್ತಿದ್ದರು. ಆದೇ ನಸುಕಾಗಿತ್ತೆಂದು ಜನರಿಗೆ ಆಗ ಗೊತ್ತಾಯಿತು. ಮೋಡಗಳು ದಟ್ಟವಾಗಿ ಕವಿದಿದ್ದರಿಂದ ಹೊತ್ತು ತಿಳಿಯುವಂತೆಯೇ ಇರಲಿಲ್ಲ. ಸ್ನಾನಮಾಡಿದ್ದರಿಂದ ಆಚಾರ್ಯರ ಮೈಯೆಲ್ಲ ಒದ್ದೆಯಾಗಿತ್ತು. ಬಾಯಿಂದ ಗೀತೆಯ ಶ್ಲೋಕವೊಂದನ್ನು ಮರಮರಳಿ ಹೇಳುತ್ತಿದ್ದರು. "ನೈನಂ ಛಿಂದಂತಿ ಶಸ್ತ್ರಾಣಿ, ನೈನಂ ದಹತಿ ಪಾವಕಃ" ಉಳಿದವರಿಗೂ ಕೇಳುವಷ್ಟು ಗಟ್ಟಿಯಾಗಿ ಆಚಾರ್ಯರು ಅದರ ಪಾರಾಯಣವನ್ನು ನಡೆಸಿದ್ದರು.

ಅವರನ್ನು ಕಂಡವರಲ್ಲೊಬ್ಬ "ಆಚಾರೆಪ್ಪ, ನಿಮ್ಮ ಮನೀ ಪಡುವ ದಿಕ್ಕಿನ ಗ್ವಾಡಿ ಬಿತ್ತಲ್ಲರಿ!" ಎಂದು ನಿಜವಾದ ಸಂಕಟದಿಂದಲೇ ಕೂಗಿ ಹೇಳಿದ. ಅದನ್ನು ಕೇಳಿದ ಆಚಾರ್ಯರು ನಕ್ಕು, "ಹೀಂಗಽ. ಬೀಳಲಿಕ್ಕೇ ಆಗಿತ್ತಪಾ ಆ ಗ್ವಾಡಿ. ಕಡೀ ಕೊನ್ಮ್ಯಾ ಬಿದ್ದಿತಽ? ನಾ ಇದ್ದಾಗ ಬೀಳಲಿಲ್ಲಲ್ಲ?" ಎಂದು ಏನೇನೋ ಮಾತಾಡಿದರು. ಮರುಕ್ಷಣದಲ್ಲಿಯೇ ಗೀತೆಯ ನೆನಪಾಗಿ "ನಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ" ಎಂದು ಉಳಿದ ಶ್ಲೋಕಾರ್ಧವನ್ನು ಪಠಿಸಿದರು. ಮಳೆ ಬೀಳುತ್ತಿತ್ತು; ಗಾಳಿ ಮಗ್ಗುಲೆಲುಬನ್ನು ಕೊರೆಯುವಂತೆ ಬೀಸುತ್ತಿತ್ತು.

ಆಚಾರ್ಯರ ಹಿಂದಿನಿಂದಲೇ ಜನರು ಅವರ ಮನೆಯ ಬಾಗಿಲಿಗೆ ಬಂದರು. ಇನ್ನೂ ಕತ್ತಲಿದ್ದೇ ಇತ್ತು. ವಾಲೀಕಾರ ಮಲ್ಲಪ್ಪ, "ಚಕಮಕಿ ಕಡದು ಉರಿ ಮಾಡಲೇನ ಆಚಾರೆಪ್ಪ? ದೇವರ ಮುಂದಿನ ದೀಪಾನೂ ಆರಿಹೋಗೇತಿ" ಎಂದು ಕೇಳಿದ. "ನೋಡೋಣಂತೇಳು." ಎಂದು ಹೇಳುತ್ತ ಆಚಾರ್ಯರು ಮನೆಯಲ್ಲಿ ಕಾಲಿಟ್ಟರು.

ಪತ್ನಿಯ ದೇಹ ತಣ್ಣಗಾಗಿತ್ತು. ಉಸಿರು ನಿಂತುಹೋಗಿತ್ತು. ಆಚಾರ್ಯರು ಅಲ್ಲಿಯೇ ಕೆಲಹೊತ್ತು ಮೌನವಾಗಿ ಕುಳಿತುಬಿಟ್ಟರು. ಒಮ್ಮೆ ಸುತ್ತಲೂ ನೋಡಿದರು. "ನ ಚೈನಂ ಕ್ಲೇದಯಂತ್ಯಾಪೋ, ನ ಶೋಷಯತಿ ಮಾರುತಃ" ಇಲ್ಲಿ ದೇವರಮನೆಯಲ್ಲಿ ಜಂಪಲಿಕ್ಕುತ್ತಿರಲಿಲ್ಲ, ಮಳೆಯ ಒಂದು ಹನಿಯೂ ಇಲ್ಲಿ ಬಿದ್ದಿರಲಿಲ್ಲ. ಕಿಡಿಕಿಗಳೇ ಇಲ್ಲದ್ದರಿಂದ ಗಾಳಿಯೂ ಬೀಸುತ್ತಿರಲಿಲ್ಲ. ಜೀವವಿರುವ ವರೆಗೆ ಮಳೆಗಾಳಿಗಳಿಂದ ರಕ್ಷಣೆ ಬೇಕಾಗಿತ್ತು. ಈಗ? ಗೋಡೆ ಬಿದ್ದು ಗಾಳಿ ಬೀಸಿದರೂ ಅಷ್ಟೇ, ಮಳೆ ನಿರಂತರವಾಗಿ ಸುರಿದರೂ ಅಷ್ಟೇ. ಆಚಾರ್ಯರ ಪತ್ನಿ ಸಮಾಧಾನದಿಂದ ಮಲಗಿದ್ದರು.

ಆಚಾರ್ಯರು ಮಲ್ಲನನ್ನು ಕೂಗಿದರು, "ಮಲ್ಲಾ, ಮನಿ ಅರ್ಧಾ ಗ್ವಾಡಿ ಬಿದ್ಹಾಂಗ ಆತಲ್ಲಪಾ? ಹೋಗು, ಶೇಷಪ್ಪಗ, ನಮ್ಮ ನಾರಾಯಣಗ, ಹಣಮೂ ಕಾಕಾನ ಮಗ ಶೀನಪ್ಪಗ ಹೇಳಿ ಬಾ. ಅವರು ಬಂದ ಮ್ಯಾಲ ಮುಂದಿನ ಕೆಲಸ" ಎಂದು ಹೇಳಿದರು. ಆಚಾರ್ಯರ ಮುಖಭಾವ, ಮಾತು, ದನಿ ಹೆದರಿಕೆಯನ್ನು ಹುಟ್ಟಿಸುತ್ತಿದ್ದವು. ಮಲ್ಲನಿಗೆ ಗಾಬರಿ ಎನಿಸಿತು. ಏನೋ ಹೇಳಬೇಕೆಂದಿದ್ದ. ಕೈಲಾದಷ್ಟು ಆಚಾರ್ಯರಿಗೆ ಸಹಾಯ ನೀಡಬೇಕೆಂದಿದ್ದ. ಆದರೆ ಆಚಾರ್ಯರ ನಿಲುವನ್ನು ನೋಡಿಯೇ ಅವನ ಎದೆಯೊಳಗೆ ಏನೋ ಮುರಿದು ಬಿದ್ದಂತಾಗಿತ್ತು. ಅವನಿಗೆ ಏನು ಮಾತಾಡಲೂ ತಿಳಿಯದೆ, "ಹೂಂರಿ ಯಪ್ಪಾ" ಎಂದವನೇ ಹೊರಗೆ ನಡೆದ.

ವಾಲೀಕಾರ ಮಲ್ಲಪ್ಪ ಲಗುಬಗೆಯಿಂದ ಆಚಾರ್ಯರು ಹೇಳಿದೆಡೆಗಳಲ್ಲಿ ತಿರುಗಿದ. ಕುಲಕರ್ಣಿ ಶೇಷಪ್ಪ ಊರಲ್ಲಿರಲಿಲ್ಲ. ಪಾರ್ವತೆವ್ವನ ಗೌಡಿಕಿ ಪ್ರಕರಣದ ಬಗ್ಗೆ ಕಮಿಶನರರಲ್ಲಿ ಅಪೀಲು ಮಾಡುವದರ ಬಗ್ಗೆ ವಿಚಾರಿಸಲು ಬೆಳಗಾವಿಗೆ ಹೊರಟುಹೋಗಿದ್ದ. ಶೇಷಪ್ಪನ ಹೆಂಡತಿ ತುಳಸಕ್ಕನಿಗೆ ಮಾತ್ರ ಈ ಸುದ್ದಿ ಕೇಳಿ ತಡೆಯುವದಾಗಲಿಲ್ಲ. ಓಡುತ್ತೋಡುತ್ತ ಆಚಾರ್ಯರ ಮನೆಗೆ ಹೋದಳು. ವಾಲೀಕಾರ ಮಲ್ಲಪ್ಪನ ರಾವು-ಮುಖ ನಾರಾಯಣಾಚಾರಿಯನ್ನೂ

ಹೊಡೆದೆಬ್ಬಿಸಿತು.

ಮನೆಗೆ ಬಂದವರನ್ನು ಆಚಾರ್ಯರು ಸ್ವಾಗತಿಸಿದರು. "ಅಂತೂ ಬಂದಿರ್ರ್‍ಯಾ ನೆಟ್ಟಗಾತು." ಎಂದರು. ಬಾಳಾಚಾರ್ಯರ ಅಣ್ಣನ ಮಗ ನಾರಾಯಣಾಚಾರಿಯೇ ಮೊದಲು ಮಾತು ತೆಗೆದ. ಅವನ·ಮುಖ ಹೆದರಿಕೆಯಿಂದ ನಿರ್ವಿಣ್ಣವಾಗಿತ್ತು.

"ಆದದ್ದರ ಏನು ಕಾಕಾ? ಹೀಂಗ್ಯಾಕ ಕೂತೀದಿ? ಒದ್ದೀ ಹಚಿಗೊಂಡೀಯಲ್ಲ?" ಎಂದು ಅಸಂಬದ್ಧವಾಗಿಯೇ ಕೇಳಿದ.

"ಮೊದಲ ನದೀಗೆ ಹೊರಡೋ ವ್ಯವಸ್ಥಾ ಮಾಡರಿ. ನಮ್ಮಾಕಿ ಈಗ ಮುಕ್ತ ಆದಳು. ಅಂತ್ಯಸಂಸ್ಕಾರದ ವ್ಯವಸ್ಥಾ ಸಾಧ್ಯ ಆದಷ್ಟು ಲಗೂನೆ ಎಲ್ಲಾರೂ ಕೂಡಿ ಮಾಡಿಬಿಡಿರಿ." ಎಂದು ಆಚಾರ್ಯರು ದುಃಖಿಸಬಾರದೆಂಬ ನಿರ್ಧಾರದಿಂದಲೇ ನುಡಿದರು.

ನಾರಾಯಣಾಚಾರಿಗೆ ದುಃಖ ಉಕ್ಕಿ ಬಂದಿತು. ಧೋತರವನ್ನು ಮುಖಕ್ಕೆ ಹಾಕಿಕೊಂಡು ಸಣ್ಣ ಕೂಸಿನಂತೆ ದನಿ ತೆಗೆದು ಅಳಲಾರಂಭಿಸಿದ. ಕಟ್ಟೆ ಒಡೆಯಿತೇನೋ, "ಕಾಕಾ!" ಎಂದು ಚೀರುತ್ತಲೇ ಆಚಾರ್ಯರನ್ನು ತಬ್ಬಿಕೊಂಡು ಅಳ ಹತ್ತಿದ. ಅಳಬಾರದೆಂದಿದ್ದ ಆಚಾರ್ಯರ ಕಣ್ಣಿನಲ್ಲೂ ನೀರು ಧಾರೆಗಟ್ಟಿತು. ಇತ್ತೀಚೆಗೆ ಗೀತೆ ಅವರ ಎದೆಯುಸಿರಾಗಿತ್ತು. ವಿಚಾರದ ಎಳೆಗಳಲ್ಲಿಯೂ ಗೀತಾರ್ಥವನ್ನು ನೇಯ್ದು ಎದೆಯನ್ನು ಕಲ್ಲಾಗಿಸಿದ್ದರು. ಆದರೆ ಮಗನ ಶೋಕವನ್ನು ಕಂಡು ಹೃದಯವನ್ನೇ ತೋಡಿದಂತಾಯಿತು. ಅದನ್ನು ನೋಡಿ, ಇಷ್ಟೊತ್ತಿನವರೆಗೆ ಹೆದರಿಕೆಯಿಂದ ಸುಮ್ಮನೆ ಇದ್ದ ಉಳಿದವರೂ ಅಳಹತ್ತಿದರು. ಉತ್ತರೆಯ ಮಳೆಯಂತೆ ಕಣ್ಣೀರು ಸುರಿಯಲಾರಂಭಿಸಿತು.

ಆಚಾರ್ಯರಿಗೆ ಎಚ್ಚರ ಬಂತು. ನಾರಾಯಣಾಚಾರಿಯ ಕಣ್ಣನ್ನೊರೆಸುತ್ತ, "ನಾನೀ ನೀ ಕಣ್ಣೀರ ಹಾಕಬಾರದಪಾ! ಆಕೀ ಕೆಲಸ ಮುಗೀತು, ಮುಕ್ತ ಆದಳು. ನಿಮ್ಮ ಕಕ್ಕಿ ಪುಣ್ಯಾ ಬೇಡಿ ಬಂದಾಕಿ ನಾನಿ. 'ಮುಪ್ಪಿನ ಕಾಲ ಬಂತು, ಇನ್ನರ ಧರ್ಮಾ-ಕರ್ಮಾ ಮಾಡು' ಅಂತ ನಾ ಹೇಳಿದರ, 'ಅದೆಲ್ಲಾ ನಿಮಗ ಇರಲಿ. ನಿಮ್ಮ ಸೇವಾ ಮಾಡಿದ್ನೆಲ್ಲಾ ಅಷ್ಟೆ ಸಾಕು' ಅಂತಿದ್ದಳು. ಕಡಿತನಕಾ ಅದನ್ನ ಮಾಡೇ ಸತ್ತಳು. ಯಾರ ಕಡಿಂದನೂ ಮಾಡಿಸಿಕೊಳ್ಳಲಿಲ್ಲಾ. ಅಂಥಾ ಪುಣ್ಯಾ ನನಗ, ನಿನಗ ಬರೂದುಲ್ಲಾ" ಎಂದು ಮಗನನ್ನು ಸಾಂತ್ವನಗೊಳಿಸಿದರು.

ನಾರಾಯಣಾಚಾರಿಗೆ ಈ ಮಾತುಗಳಿಂದ ಸಮಾಧಾನವೇನೂ ಆಗಲಿಲ್ಲ.

ಮನೆ ಪಾಲಾದ ಮೇಲೆ ಕಕ್ಕನ ಮನೆಯಲ್ಲಿ ಕಾಲಿಟ್ಟದ್ದು ಇದೇ ಮೊದಲು. ಅಷ್ಟು ಕಕ್ಕನ ಜೊತೆಗೆ ಅವನ ದ್ವೇಷ. ಅವರೊಡನೆ ತಂಟೆ ಹೂಡಿದ್ದ. ಅವರನ್ನು ಕೋರ್ಟಿಗೂ ಎಳೆದಿದ್ದ. ಅವರ ವಿರುದ್ಧ ಅಪಪ್ರಚಾರವನ್ನೂ ಮಾಡಿದ್ದ. ಮೊನ್ನೆ ಮೊನ್ನೆ ಕನ್ಯಾಗತದ ಹೊತ್ತಿನಲ್ಲಿ ಬೇಕೆಂದೇ ಕಾಲು ಕೆದರಿ, ಜಗಳ ತೆಗೆದು, ಅವರನ್ನು ಅಪಮಾನಗೊಳಿಸಲು ಹಿಂದು ಮುಂದೆ ನೋಡಿರಲಿಲ್ಲ. ಈ ಕಕ್ಕನೇ ತಮ್ಮ ಆಸ್ತಿಯನ್ನೆಲ್ಲ ನುಂಗಿ ನೀರು ಹಿಡಿದನೆಂಬ ನಂಬಿಕೆಯೇ ಅದಕ್ಕೆ ಕಾರಣ ವಾಗಿತ್ತು. ಆಚಾರ್ಯರಿಲ್ಲದಿದ್ದಾಗ 'ಮುದುಕ' ಎಂದೇ ಅವರನ್ನು ಸಂಬೋಧಿಸು ತ್ತಿದ್ದ. ಆದರೆ ಈ ಎಲ್ಲ ಅವಿವೇಕದ ಹಿಂದೆಯೂ ಒಂದು ಅಂತಃಕರಣ ಮಿಡಿಯು ತ್ತಿತ್ತು. ಅದರ ಅರಿವು ನಾರಾಯಣಾಚಾರಿಗೇ ಇರಲಿಲ್ಲ. ಅವಿವೇಕ ಅದಕ್ಕೆ ಮುಸುಕು ಹಾಕಿತ್ತು. ಅಭಿಮಾನ ಅದನ್ನು ಹತ್ತಿರ ಹಾಯಗೊಟ್ಟಿರಲಿಲ್ಲ. ತಾನು ಅನುಭವಿಸುತ್ತಿದ್ದ ಬಡತನದ ನೂರೆಂಟು ತಾಪತ್ರಯಗಳು ಆ ಅರಿವನ್ನು ತುಳಿ ಯುತ್ತಿದ್ದವು.

ಆದರೆ ಆ ಅರಿವು ಕಕ್ಕಿಯ ನೆನವದಲ್ಲಿ ಮತ್ತೆ ಮತ್ತೆ ಬದುಕಿ ಬರುತ್ತಿತ್ತು. ಕಕ್ಕನ ಜೊತೆಗೆ ಎಷ್ಟು ತೀವ್ರ ದ್ವೇಷವೋ, ಅಷ್ಟು ಕಕ್ಕಿಯ ಬಗ್ಗೆ ಅಮಿತ ಪ್ರೀತಿ, ವಿಶ್ವಾಸ. ಸಣ್ಣವನಿದ್ದಾಗ ತಾಯಿ ಸತ್ತು ಪರದೇಶಿಯಾಗಿದ್ದ ನಾರಾಯಣಾಚಾರಿ ಯನ್ನು ಕಕ್ಕಿ ಕೈತುತ್ತು ಮಾಡಿ ಸಲಹಿದ್ದಳು. ಇಷ್ಟಾದರೂ ತಾನು ಬದುಕು ತ್ತಿರುವದು ಅವಳ ಪುಣ್ಯದಿಂದಲೇ ಎಂದು ಅವನಿಗೆ ಗೊತ್ತಿತ್ತು. ಮನೆ ಪಾಲಾಗಿ ಕಕ್ಕನೊಡನೆ ಜಗಳ ಹೂಡಿದ ಮೇಲೆ, ಕಕ್ಕನ ಮನೆಗೆ ಕಾಲಿಟ್ಟದ್ದಿಲ್ಲ. ಒಮ್ಮೆ ಮುಚ್ಚಂಜೆಯ ಮಬ್ಬಿನಲ್ಲಿ, ಗೋಪಾಲಕೃಷ್ಣನ ಗುಡಿಯ ಹತ್ತಿರ ಕಕ್ಕಿ ಭೆಟ್ಟಿ ಯಾಗಿದ್ದಳು. ಇತ್ತೀಚೆಗೆ ಅವಳಿಗೆ ಕಣ್ಣು ಸರಿಯಾಗಿ ಕಾಣುತ್ತಿರಲಿಲ್ಲ. ಅದೇ ಲಾಭ ತೆಗೆದುಕೊಂಡು ನಾರಾಯಣಾಚಾರಿ ತಪ್ಪಿಸಿ ಹೋಗಬೇಕೆಂದಿದ್ದ. ಆದರೆ ಅಂಥ ಮಬ್ಬಿನಲ್ಲಿಯೂ ಅವನನ್ನು ಗುರುತಿಸಿದ್ದಳು. ಕರೆದು, ಮನೆಗೇಕೆ ಬರುವ ದಿಲ್ಲವೆಂದು ಸಿಟ್ಟಿಗೆದ್ದು ಕೇಳಿದ್ದಳು. ನಾರಾಯಣಾಚಾರಿ ನಾಚಿಕೆಯಿಂದ ಮುಖ ಕೆಳಗೆ ಹಾಕಿ ಕಣ್ಣೀರು ಸುರಿಸುತ್ತಿದ್ದ. "ಹುಚ್ಚು ಖೋಡಿ. ಅಳಲಿಕ್ಕೇನಾತೋ? ಸಂಜಿಹೊತ್ತು, ಅಳಬಾರದು ಸುಮ್ಮನಿರು. ಬಡದಾಡಿದರೂ ನಿಮ್ಮ ಕಕ್ಕ ಸುಳ್ಳೇ ನಪಾ ಅವರು? ಇನ್ನೊಬ್ಬರಿಗೆ ಕಕ್ಕ ಅಂತ ಅನಲಿಕ್ಕೆ ಸಾಧ್ಯ ಅದ ಏನು?" ಅಂತಃಕರಣದ ಒಳಹೊಕ್ಕು ಮಾತಾಡಿ ನೀರಿಳಿಸಿದ್ದಳು. ಅಂದು ಅವಳ ಕೈಯಿಂದ

ಪಾರಾಗಬೇಕಾದರೆ ಸಾಕುಬೇಕಾಗಿ ಹೋಯಿತು.

ಅಂಥ ಕಕ್ಕಿ ಈಗ ಇಲ್ಲವಾಗಿದ್ದಳೆಂದರೆ ನಂಬುವದಾದರೂ ಹೇಗೆ? ಆ ವಿಚಾರವೇ ಅಸಹನೀಯವೆನಿಸಿತು. "ಕಾಕಾ, ಕಾಕಾ, ತಾಯಿನ್ನ ನುಂಗಿ ಕೂತ ನನಗ ತಾಯಾಗಿದ್ದಳು ಕಕ್ಕಿ. ಆ ಕಕ್ಕೀನೂ ಹೋದಳs ? ಇನ್ನೇನು ಮಾಡಲಿ ಕಾಕಾ ?" ಎಂದು ಮತ್ತೆ ಭೋರಿಟ್ಟು ಅಳಹತ್ತಿದ. ಮೈಮೇಲಿನ ಅರಿವೆಗಳ ಪರಿವೆಯಿಲ್ಲದೆ ನೆಲದ ಮೇಲೆ ಹೊರಳಾಡಹತ್ತಿದ. ಕಂಡವರಿಗೆಲ್ಲ ಸೆಡವಿನಿಂದ ಉತ್ತರವಿತ್ತು ಸಾಗುತ್ತಿದ್ದ ನಾರಾಯಣಾಚಾರಿ ಈಗ ಎಳೆಕೂಸಿನಂತೆ ಒದ್ದಾಡಿದ.

ಬಾಳಾಚಾರ್ಯರು ಪುನಃ ಅವನನ್ನು ಸಾಂತ್ವನಪಡಿಸಲು ಯತ್ನಿಸಲಿಲ್ಲ. ಅತ್ತಷ್ಟೇ ಅವನ ದುಃಖ ಕಡಿಮೆಯಾಗಲಿ ಎಂದು ಸುಮ್ಮನಾದರು. ನಾರಾಯಣಾ ಚಾರಿ ಅಳುವದನ್ನು ಸ್ವಲ್ಪಕಡಿಮೆ ಮಾಡಿ, " ಕಾಕಾ, ಕಕ್ಕಿಗೆ ಸಾಯೂ ಮುಂದ ಒಂದು ಗುಟುಕು ನೀರು ಹಾಕೋ ಪುಣ್ಯಾನೂ ನನಗಿಲ್ಲ. ಏನಾಗಿತ್ತು ಕಾಕಾ ? ನನಗ ಹೇಳಿಕಳಿಸಲಿಲ್ಲ ಯಾಕ? ಅಂತ್ಯಕಾಲಕ್ಕಾದರೂ ಆಕೀ ಸೇವಾಮಾಡಿ ಆಕೀ ಋಣಾ ಗುಂಜಿಯಷ್ಟಾದರೂ ಮುಟ್ಟಿಸತಿದ್ದೆ. ಯಾಕ ಹೇಳಿಕಳಿಸಲಿಲ್ಲ ಕಾಕಾ?" ಎಂದು ಮತ್ತೆ ಗೋಳಿಟ್ಟ.

ಆಚಾರ್ಯರು ಇದಕ್ಕೇನು ಹೇಳಬೇಕು? ಇಬ್ಬರೂ ಗಂಡ ಹೆಂಡತಿ, ಈ ಮೂರು ನಾಲ್ಕು ದಿವಸಗಳ ಅವಧಿಯಲ್ಲಿ ಪ್ರಯಾಣದ ಸಿದ್ಧತೆಯನ್ನೇ ಮಾಡಿದಂತೆ ಇತ್ತು. ಆಚಾರ್ಯರಿಗಂತೂ ಇನ್ನು ಇರುವದು ಬೇಕಾಗಿರಲಿಲ್ಲ. ತಮ್ಮ ಅವಶ್ಯ ಕತೆ ಜಗತ್ತಿಗಿಲ್ಲವೆಂದು ಅವರಿಗೆ ಗೊತ್ತಾಗಿತ್ತು. ಜಗತ್ತು ಶೀಘ್ರವಾಗಿ ಬದಲಾಗ ತೊಡಗಿತ್ತು. ಹೊಸಪ್ರವಾಹದಲ್ಲಿ ಹಳೆಯ ಕಸಕಡ್ಡಿಗಳೆಲ್ಲ ತೇಲಿ ಹೋಗಲೇ ಬೇಕಾಗಿತ್ತು. ಇದ್ದು ಜೀವನಕ್ಕೆ ತಲೆಭಾರವಾಗುವದಕ್ಕಿಂತ, ಮರ್ಯಾದೆಯಿಂದ ಹೊರಟುಹೋಗುವದೇ ಒಳ್ಳೆಯದೆಂದೆನಿಸಿತ್ತು. ಅದಕ್ಕಾಗಿಯೇ ಸಿದ್ಧತೆ ನಡೆ ಸಿದ್ದರು. ಗೀತೆಯ ಪಾರಾಯಣ ನಡೆಸಿದ್ದೂ ಅದಕ್ಕಾಗಿಯೇ. ಸಾವಿಗೆ ಹೆದರಬಾರ ದೆಂದೇ ಈ ಎಲ್ಲ ಧೈರ್ಯವನ್ನು ತುಂಬಿಕೊಂಡದ್ದು. ಇದು ಆಚಾರ್ಯರ ಪತ್ನಿಗೆ ಹೇಗೊ ಸೂಕ್ಷ್ಮವಾಗಿ ಗೊತ್ತಾಗಿತ್ತು. ಆಚಾರ್ಯರೇ ಹೊರಟುಹೋಗುತ್ತಿರು ವಾಗ ತಾನಾದರೂ ಇದ್ದೇನು ಮಾಡಬೇಕು? ಮೊದಲಿನಿಂದ ಗಂಡನ ಆಜ್ಞಾನು ವರ್ತಿನಿಯಾಗಿ ಬೆಳೆದು ಬಂದಿದ್ದರೂ, ಈ ಒಂದು ವಿಷಯದಲ್ಲಿ ಅವರ ಮಾತನ್ನು ಕೇಳುವಂತಿರಲಿಲ್ಲವೇನೋ!

“ನಾನೀ, ಆಕಿ ಪುಣ್ಯವಂತಿ ಅಂತ ನಾ ಹೇಳಲಿಲ್ಲs? ಯಾರ ಸೇವಾನೂ ಆಕಿಗೆ ಬೇಕಾಗಿರಲಿಲ್ಲ. ಏನೋ ಸ್ವಲ್ಪ ಜ್ವರಾ ಬಂದಿದ್ದವು. ದೇವರಮುನ್ಯಾಗs ಮಲಗಸರಿ ಅಂತ ಹೇಳಿದಳು. ಮಲಗಲಿಕ್ಕೆ ಬ್ಯಾರೇ ಕಡೆ ಜಾಗಾನೂ ಇರಲಿಲ್ಲ. ಆಗಲಿ ಅಂದೆ. ಅಲ್ಲೇ ಮಲಗಿದ್ದಳು. ಮೈಮುಟ್ಟಿದರ ಕೆಂಡದಂಥಾ ಜ್ವರ. ನಿದ್ದಿ ಹತ್ತಿದವರ್ಹ್ಹಂಗs ಮಲಗಿಬಿಟ್ಟಳು. ನೀರು ಹಾಕಿದರೂ ಬ್ಯಾಡಾ ಅಂದಳು. ನಿನ್ನೆ ರಾತ್ರೀನs ಇಲ್ಲೆ ತಂದು ಹಾಕಿದ್ದೆ. ಬೆಳತನಕಾ ಹತೀಲೇನs ಕೂತಿದ್ದೆ. ಮಳಿ ಹತ್ತಿದ್ದರಿಂದ ಥಂಡಿ ಆಗಿ ಜ್ವರಾ ಬಂದಿರಬೇಕೂ ಅಂತ ತಿಳಕೊಂಡಿದ್ದೆ. ಕಡಿಮ್ಯಾಗತದ ಅಂತ ತಿಳಕೊಂಡು ನಾನು ಗೀತಾ ಓದಿಕೋತ ಕೂತೆ. ನಸಕಿನ್ಯಾಗ ದಿನದ್ಹಾಂಗ ಸ್ನಾನಕ್ಕ ಹೋದೆ. ಬರೂದರಾಗ ದೇವರ ಪಾದ ಸೇರಿಬಿಟ್ಟಿದ್ದಳು. ಈಗ ಅನಸತದ, ಅವು ಥಂಡಿಜ್ವರಾ ಆಗಿರಲಿಕ್ಕಿಲ್ಲ ಅಂತ.” ಆಚಾರ್ಯರು ಸಂಕ್ಷಿಪ್ತವಾಗಿಯೇ ತಮ್ಮ ಪತ್ನಿಯ ಮರಣದ ಕತೆಯನ್ನು ಹೇಳಿದರು.

ನೆರೆದವರೆಲ್ಲ ಸಹಾನುಭೂತಿಯಿಂದ ಕೇಳಿದರು. ಆಚಾರ್ಯರ ಪತ್ನಿಯ ಮರಣ ಅವರಲ್ಲಿ ಹೆದರಿಕೆಯನ್ನೆ ಹುಟ್ಟಿಸಿತ್ತು. ಮರಣವೆಂದರೆ ಇಷ್ಟು ಆಕಸ್ಮಿಕವಾಗಿರುತ್ತದೆಯೇ? ಮಳೆ ಬಂತು, ಗಾಳಿ ಬೀಸಿತು. ಎಲ್ಲರ ಮನೆಗಳಂತೆಯೇ ಆಚಾರ್ಯರ ಮನೆಯ ಗೋಡೆಯೂ ಬಿದ್ದಿತು. ಅವುಗಳಂತೆಯೇ ಆಚಾರ್ಯರ ಪತ್ನಿಯೂ ಸೀತೆ ನೆಲದೊಡಲಿನಲ್ಲಿ ಮರೆಯಾದಂತೆ, ಯಾರಿಗೂ ಹೇಳದೆ ಕೇಳದೆ ಹೋಗಿಬಿಟ್ಟರೇ? ಬದುಕು ಸಾವುಗಳೆಲ್ಲ ಆಟವಾಗಿ ಹೋದವೇ?

ಅಂತ್ಯಸಂಸ್ಕಾರವನ್ನು ತೀವ್ರವಾಗಿ ಮಾಡಬೇಕೆಂದು ಆಚಾರ್ಯರು ಹೇಳಿದ್ದರೂ ಅವರಾರಿಗೂ ಅದಕ್ಕೆ ಮನಸ್ಸಾದಂತೆಯೇ ತೋರಲಿಲ್ಲ. ಆಚಾರ್ಯರೇ ಮತ್ತೊಮ್ಮೆ ಎಚ್ಚರಿಸಬೇಕಾಯಿತು. ವಾಲೀಕಾರ ಮಲ್ಲ ಬಿದಿರುಗಳನ್ನೂ ಉಳಿದ ಸಾಮಾನುಗಳನ್ನೂ ತಂದು ಹಾಕಿದ. ಆಗಲೇ ಸುದ್ದಿ ಊರಲ್ಲೆಲ್ಲ ಹರಡಿದ್ದು. ಯಾರ್ಯಾರೊ ಆಚಾರ್ಯರನ್ನು ಕಾಣಲು ಬಂದರು. ಬಂದ ಜನರಿಗೆ ಮನೆ ಹಿಡಿಸದಾಯಿತು. ಬಂದವರು ಮಳೆಯಲ್ಲೇ ನಿಂತರು. ಯಾರಿಗೂ ಯಾತರ ಪರಿವೆಯೂ ಇದ್ದಂತೆ ಕಾಣಲಿಲ್ಲ. ಹೊಸ ಸೀರೆ, ದಂಡೆ, ಕುಂಕುಮ ಏನೋನೋ ಬಂದವು.

ಊರ ಹೆಣ್ಣುಮಕ್ಕಳೆಲ್ಲ ಅಲ್ಲಿ ಕೂಡಿದ್ದರು. ಒಬ್ಬೊಬ್ಬರಾಗಿ ಜಾತಿಭೇದ ಕೂಡ ಇಲ್ಲದೆ ಒಳಗೆ ಹೋಗಿ ಆಚಾರ್ಯರ ಪತ್ನಿಯ ಅಂತ್ಯದರ್ಶನವನ್ನು ಪಡೆದರು. ಕಣ್ಣೀರಿಟ್ಟು ಹೊರಗೆ ಬರುತ್ತಿದ್ದರು.

ಹಣೆತುಂಬ ಕುಂಕುಮ, ಹೂಮಾಲೆ, ಕಾಡಿಗೆ, ಕಾಲುಂಗುರ ಪಿಲ್ಲಿಗಳಿಂದ ಅಲಂಕೃತಳಾಗಿ, ಸಕಲಸೌಭಾಗ್ಯಗಳಿಂದೊಡಗೂಡಿ, ಕಂಕಣಕೈಯನ್ನು ಮೇಲೆ ಮಾಡಿಕೊಂಡು ಆಚಾರ್ಯರ ಪತ್ನಿ ಕೊನೆಯ ಯಾತ್ರೆಗೆ ಸಿದ್ಧಳಾಗಿದ್ದಳು. ಊರಿಗೆ ಊರೇ ಶ್ಮಶಾನಯಾತ್ರೆಯಲ್ಲಿ ಭಾಗವಹಿಸಲು ಬಂದಿತ್ತು. ಸೂರ್ಯೋದಯಕ್ಕೆ ಸರಿಯಾಗಿ ಯಾತ್ರೆ ಹೊರಟಿತು.

ಈ ಮರಣವಾರ್ತೆಯನ್ನು ಕೇಳಿ ಆಚಾರ್ಯರನ್ನು ಸಾಂತ್ವನಗೊಳಿಸಲೆಂದು ಲಿಂಗಪ್ಪ ಹಾಗೂ ಪಡದಯ್ಯನವರಿಬ್ಬರೂ ಬಂದಿದ್ದರು. ಲೋಕೋಪಚಾರಕ್ಕಾಗಿ ನಾಲ್ಕು ಸಮಾಧಾನದ ಮಾತುಗಳನ್ನಾಡಿ ಎದ್ದರು. ಸ್ಮಶಾನಯಾತ್ರೆಯೊಡನೆ ತಾನೂ ಹೋಗಬೇಕೆಂದು ಲಿಂಗಪ್ಪನಿಗೆ ಮನಸ್ಸಾಯಿತು. ಪಡದಯ್ಯನವರು ಮಾತ್ರ ಇದನ್ನರಿತು ಮಠಕ್ಕೆ ನಡೆದೇಬಿಟ್ಟರು. ಲಿಂಗಪ್ಪಗೌಡ ನೀರಗಸೆಯ ವರೆಗೆ ಯಾತ್ರೆಯ ಜೊತೆಗೆ ನಡೆದ. ಆದರೆ ಅವನನ್ನು ಮಾತಾಡಿಸುವವರು ಯಾರೂ ಇರಲಿಲ್ಲ. ಎಲ್ಲರ ಮನಸ್ಸೂ ದುಃಖದಲ್ಲಿ ಮುಳುಗೇಳುತ್ತಿದ್ದವು. ಯಾರ ಬಾಯಲ್ಲೂ ಆಚಾರ್ಯರ ಪತ್ನಿಯ ಹೊಗಳಿಕೆಯ ಮಾತುಗಳಲ್ಲದೆ ಬೇರೇನೂ ಕೇಳುತ್ತಿರಲಿಲ್ಲ. ಆಚಾರ್ಯರ ಪತ್ನಿಯ ಜೀವನಚಿತ್ರವೇ ಅವರ ಕಣ್ಣೆದುರಿಗೆ ಬಂದಂತಾಗಿತ್ತು. ಈ ಕ್ಷಣದಲ್ಲಂತೂ ಅವಳನ್ನು ಮರೆಯುವದು ಸಾಧ್ಯವೇ ಇರಲಿಲ್ಲ. ಇಷ್ಟು ದಿನ ಮರೆಯಲ್ಲಿ, ಮೋಡಗಳ ಹಿಂದಿನ ಬೆಳಕಿನಂತೆ ಅವಳು ಬಾಳಿದ್ದಳು. ಒಂದು ದಿನವೂ ಒಬ್ಬರಿಗೂ ಬಿರುಸುಮಾತಾಡಿ ನೋಯಿಸಿರಲಿಲ್ಲ. ನೆನೆಸಿದ ಕತೆಯನ್ನೇ ಮತ್ತೆ ನೆನೆಸಬೇಕಾಗಿತ್ತು. ಇದೊಂದು ತುಂಬಿ ಬರಲಾರದ ಹಾನಿಯೆಂದು ಎಲ್ಲರಿಗೂ ಅನಿಸಿತ್ತು. “ಮುದುಕನ ಬಾಳ್ವೆ ಇನ್ನ ಕಠಿಣಾತು !” ಎಂದು ಆಚಾರ್ಯರಿಗಾಗಿ ಕೆಲವರು ಮರುಗಿದರು.

ಆಚಾರ್ಯರು ಮಾತ್ರ ವಿಚಲಿತರಾಗದೆ ಸ್ಮಶಾನಯಾತ್ರೆಯ ಜೊತೆಗೆ ನಡೆದಿದ್ದರು. ಅವರ ಬಾಯಿ ಸುಮ್ಮನಿದ್ದರೂ ಹೃದಯ ಗೀತೆಯ ಶ್ಲೋಕಗಳನ್ನು ನುಡಿಯುತ್ತಿತ್ತು. “ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ; ನಚೈನಂ ಕ್ಲೇದಯಂತ್ಯಾಪೋ, ನ ಶೋಷಯತಿ ಮಾರುತಃ.” ಆತ್ಮದ ಸ್ವರೂಪ ಇದೇ ಎಂದು ಈ ನಶ್ವರ ಜಗತ್ತಿನಲ್ಲಿ ನೆನಪುಮಾಡಿಕೊಳ್ಳಬೇಕಾಗಿತ್ತು. ಮಳೆ ಸುರಿಯುತ್ತಿತ್ತು, ಗಾಳಿ ಬೀಸುತ್ತಿತ್ತು. ದೂರದಲ್ಲಿ ನದಿಯ ತೀರದಲ್ಲಿ ಹೊತ್ತಿಸಿದ ಬೆಂಕಿ ಕಾಯುತ್ತಿತ್ತು. ಆತ್ಮ ಅವ್ಯಗಳನ್ನೆಲ್ಲ ಮೀರಿ ಅಮರವಾಗಿರುತ್ತದಂತೆ. ಅವರ

ಸ್ವರೂಪ ಕಣ್ಣಿಗೆ ಕಟ್ಟುವಷ್ಟು ನಿಚ್ಚಳವಾಗಬೇಕು. ಹೇಗೆ? ಆಚಾರ್ಯರು ದೇವರಿಗೆ ಮೊರೆಯಿಟ್ಟರು. "ದಿವ್ಯಂ ದದಾಮಿ ತೇ ಚಕ್ಷುಃ" ಈ ವರವನ್ನು ಯಾರು ಕೊಡಬಹುದು ? ಆಚಾರ್ಯರ ಮನಸ್ಸು ಒಂದೇ ಸವನೆ ಧೇನಿಸುತ್ತಿತ್ತು.

:: ೪೬ ::

ಆಚಾರ್ಯರ ಪತ್ನಿಯ ಶವವನ್ನು ಲಿಂಗಪ್ಪ ನೀರಗಸೆಯ ವರೆಗೆ ಕಳಿಸಲಿಕ್ಕೆ ಹೋದದ್ದೇ ಸಾಕಾಗಿತ್ತು. ಮಳೆ, ಕಾಲಲ್ಲಿ ಕೆಸರು, ಚಳಿ-ಗಾಳಿ ಇವುಗಳನ್ನು ನೋಡಿ ಲಿಂಗಪ್ಪನಿಗೆ ಮುಂದುವರಿಯುವ ಮನಸ್ಸಾಗಲಿಲ್ಲ. ಹಾಗೆಯೇ ಮಠಕ್ಕೆ ತಿರುಗಿ ಬಂದ. ಪಡದಯ್ಯನವರು ಅವನನ್ನು ಚೇಷ್ಟೆ ಮಾಡುವದಕ್ಕೂ ಹಿಂಜರಿಯಲಿಲ್ಲ. ಆಚಾರ್ಯರ ಪತ್ನಿ ತೀರಿಕೊಂಡದ್ದಕ್ಕೆ ಪಡದಯ್ಯನವರಿಗೇನೂ ದುಃಖವಾಗುವ ಕಾರಣವಿರಲಿಲ್ಲ. ಒಂದು ದೃಷ್ಟಿಯಿಂದ ಅವರದು ವಜ್ರಸಮ ವ್ಯಕ್ತಿತ್ವವೇ. ಈ ಅಳುಬುರುಕತನ ಅವರಲ್ಲಿ ಎಂದೂ ಇರಲಿಲ್ಲ. ಊರ ಗೌಡನಾದ್ದರಿಂದ ತಾನು ನಾಲ್ಕು ಜನರ ಸಲುವಾಗಿ ಸ್ಮಶಾನಯಾತ್ರೆಯಲ್ಲಿ ಭಾಗವಹಿಸಲೇಬೇಕಾಯಿತು ಎಂದು ಲಿಂಗಪ್ಪ ಸಮರ್ಥನೆ ಮಾಡಿಕೊಂಡ.

ಆಡುತ್ತಾಡುತ್ತ ಮಾತು ಎಲ್ಲಿಂದಲೋ ಚಿಮಣಾಳ ವಿಷಯಕ್ಕೆ ತಿರುಗಿತು. ಲಿಂಗಪ್ಪ ಸುತ್ತುಸುತ್ತಾಡಿ ಮಾತಾಡತೊಡಗಿದ. ಪಡದಪ್ಪನವರಿಗೂ ಅಷ್ಟೇ ಬೇಕಾಗಿತ್ತೇನೋ! ಲಿಂಗಪ್ಪಗೌಡನೇ ಚಿಮಣಾಳ ಶಾಶ್ವತ ಪ್ರಿಯಕರನೆಂದಾಗಿ ಬಿಟ್ಟರೆ ಅವರ ಮೇಲಿನ ಹೊಣೆ ಅರ್ಧ ಹಗುರವಾಗುತ್ತಿತ್ತು. ಚಿಮಣಾ ಅವರ ಪಾದಕ್ಕಂಟಿಕೊಂಡು, ಈಗ ಪಾಪಕ್ಕೂ ಅಂಟಿಕೊಂಡಿದ್ದಳು. ಯಾವುದೋ ತಲೆ ತಿರುಕತನದಿಂದ, ರಾತ್ರಿಯೆಲ್ಲ ನಿದ್ದೆಗೆಟ್ಟು ಅವಳನ್ನು ಹುಡುಕಿ ಕರೆದುಕೊಂಡು ಬಂದಿದ್ದರು. ಆದರೆ ಅವಳನ್ನು ಸಾಕುವದೆಂದರೆ ಒಂದು ಮುಳ್ಳಿನಂತೆ ಚುಚ್ಚುವ ಎಚ್ಚರವನ್ನೇ ಸಾಕಿಕೊಂಡಂತಿತ್ತು. ಅಂತರಂಗವನ್ನು ಮರೆಯುವದರಲ್ಲಿಯೇ ಪಡದಯ್ಯನವರಿಗೆ ಸುಖವಿತ್ತು. ಇಡೀ ಜೀವನವನ್ನೇ ಮರೆಯುವದರಲ್ಲಿ ತೊಡಗಿದ್ದರು. ನೂರೆಂಟು ಸಾರ್ವಜನಿಕ ಕಾರಭಾರಗಳಲ್ಲಿ ಅವರು ಆಸಕ್ತಿ ವಹಿಸುತ್ತಿದ್ದ

ದ್ದಕ್ಕೆ ಇದೇ ಕಾರಣ. ಸ್ವಭಾವತಃ ಧರ್ಮದಲ್ಲಿ ಅವರಿಗೆ ಆಸಕ್ತಿ ಇರಲಿಲ್ಲ. ವೈರಾಗ್ಯ ಅವರ ಪಾಲಿಗೆ ಕಹಿ ಕೂಳಾಗಿತ್ತು. ಆದರೆ ಸನ್ಯಾಸದ ಹೊಣೆಗೇಡಿತನ ಸುಖಕರವಾಗಿತ್ತು. ಆದ್ದರಿಂದ ಮಠವನ್ನು ಬಿಡುವದು ಸಾಧ್ಯವಿರಲಿಲ್ಲ.

"ಬಿಲ್ಲು ಬೆಳವಲಕಾಯ ಹಿಡಿಯಬಾರದಯ್ಯಾ" ನಿಜ. ಆದರೆ ಬುದ್ಧಿಶಕ್ತಿಯೊಂದಿದ್ದರೆ ಎಂಥ ಪಾಪದ ಮೇಲೂ ಮುಸುಕು ಹಾಕಿ ವೈರಾಗ್ಯ-ಸಂಸಾರಗಳ ಸಮನ್ವಯವನ್ನು ಸಾಧಿಸಬಹುದಲ್ಲ! ಪಡದಯ್ಯನವರು ಸಾಧಿಸಿದ್ದರು. ಇನ್ನೊಬ್ಬರ ಸಣ್ಣತನವನ್ನು ಬಯಲಿಗೆಳೆಯುವದರಲ್ಲಿ ಅವರು ನಿಷ್ಣಾತರಾಗಿದ್ದರು. ಬುದ್ಧಿಶಕ್ತಿಯ ಬಲವಾದ ಸೂತ್ರವೊಂದರಿಂದಲೇ ತಮ್ಮ ತೀರ ವಿಮುಖವಾಗಿದ್ದ ಇಬ್ಬಗೆಯ ಬಾಳುವೆಯನ್ನು ಬಿಗಿದಿದ್ದರು. ವಿರಕ್ತಿಯ ವೇಷದಲ್ಲಿ ಆಸಕ್ತಿಯ ಅಕ್ಷಯಪಾತ್ರೆಯನ್ನು ಭದ್ರವಾಗಿರುವಂತೆ ನೋಡಿಕೊಂಡಿದ್ದರು.

ಆದರೆ ಪಾಪ ಆ ಬುದ್ಧಿಶಕ್ತಿಯನ್ನೇ ಹಣ್ಣುಗೊಳಿಸುತ್ತಿತ್ತು. ಚಿಮಣಾ ತಮ್ಮ ಸೆರೆಯಲ್ಲಿದ್ದರೂ ಅವಳ ಇರವು ಅಸಹನೀಯವಾಗಿತ್ತು. ಇದೊಂದು ಆಟದಲ್ಲಿ ಪಡದಯ್ಯನವರು ಒಳಗಿಂದೊಳಗೇ ಸೋತುಹೋಗಿದ್ದರು. ಚಿಮಣಾ ಬೇಕಾಗಿದ್ದಳು, ಬೇಡವಾಗಿದ್ದಳು. ಇವೆರಡೂ ನಿಜವಿದ್ದಾಗ ಬುದ್ಧಿ-ಹೃದಯಗಳ ಒಳತೋಟಿ ಮಸಗುತ್ತಿತ್ತು. ತಿರಸ್ಕಾರ ಮೋಹಗಳೆರಡೂ ಗುದುಮುರಿಗೆ ಹಾಕಿ ಮನಸ್ಸನ್ನು ಗಾಸಿಗೊಳಿಸಿದ್ದವು.

ಇಂಥ ಹೊತ್ತಿನಲ್ಲಿಯೇ ಲಿಂಗಪ್ಪ ಅವರ ಕಣ್ಣಿಗೆ ಬಿದ್ದಿದ್ದ. ಅವನ ಮೋಹವನ್ನು ಅವರು ಸೂಕ್ಷ್ಮವಾಗಿಯೇ ಗುರುತಿಸಿದ್ದರು. ಹುಂಬತನದಿಂದಾಗಿ ಲಿಂಗಪ್ಪ ಅನೇಕ ವೇಳೆ, ಚಿಮಣಾಳ ಬಗ್ಗೆ ತನ್ನ ಆಸಕ್ತಿಯನ್ನು ಪ್ರಕಟಿಸಿದ್ದ. ಅದನ್ನು ಗುರುತಿಸಿದ್ದರಿಂದಲೇ ಪಡದಯ್ಯನವರು ಸುಲಭವಾಗಿ ತಮ್ಮ ಪಾಪದ ಹೊಣೆಯನ್ನು ಸಾರ್ವಜನಿಕವಾಗಿ ಅವನ ತಲೆಯ ಮೇಲೆ ಹೊರಿಸಿದ್ದರು. ಅವನು ಹೆದರಿದ್ದ, ಆದ್ದರಿಂದ ಅದನ್ನು ನಿರಾಕರಿಸುವ ಧೈರ್ಯ ಅವನಿಗಿರಲಿಲ್ಲ. ಅಂದಿನಿಂದ ಪಡದಯ್ಯನವರು ಈ ಹೊರ ಆಟದ ಚಿಂತೆಯಲ್ಲೇ ತೊಡಗಿದ್ದರು. ಈಗಲೂ ಅದೇ ವಿಚಾರವನ್ನೆತ್ತಿದರು.

ಲಿಂಗಪ್ಪ ಚಿಮಣಾಳ ಬಗ್ಗೆ ತನಗಿರುವ ಮೋಹವನ್ನು ಒಪ್ಪಿಕೊಂಡ. ಆ ಆಸೆ ಹೇಗೆ ಮಾಡಿದರೆ ತೃಪ್ತಿಯಾದೀತೆಂದು ಅವನ ಚಿಂತೆ. "ಅಂತೂ ಗೌಡರಿಗೆ ಒಂದು ಜೋಡು ಬೇಕಾಗೇತಿ ಅನ್ನರಿ. ಬಾಳೇವು ಒಂದು ಮೆಟ್ಟಿಗೆ ಹತ್ತಿದ ಮ್ಯಾಗ

ಬೇಕss ಬೇಕಲ್ಲಾ?" ಪಡದಯ್ಯನವರು ಅಂತರದಲ್ಲಿ ತೂಗುತ್ತಿದ್ದ ಆ ಆಸೆಗೆ ಒಂದು ಆಧಾರವನ್ನೂ ಕಲ್ಪಿಸಿಕೊಟ್ಟರು. "ಅದೇಟೊತ್ತಿನ ಮಾತರಿ. ನೀವು ಮನಸ್ಸು ಮಾಡರಿ, ಚಿಮಣಾನ್ನ ನಿಮಗೊಪ್ಪಿಸೋದು ನನಗ ಕೂಡಿತು" ಎಂದು ಅಪೂರ್ವ ವಾದ ಸಹಾಯ ನೀಡುವ ಮಾತನ್ನೂ ಆಡಿದರು.

ಲಿಂಗಪ್ಪನಿಗೆ ಅಪೂರ್ವ ಹರ್ಷವಾಯಿತು. ತನ್ನ ದೈವದ ಬಗ್ಗೆ ವಿಶ್ವಾಸ ಇನ್ನೂ ಹೆಚ್ಚಾಯಿತು. ಪಡದಪ್ಪನ ಹೆಡೆಯಲ್ಲಿ ಹುದುಗಿದ್ದ ಈ ರತ್ನ ಇಷ್ಟು ಸುಲಭವಾಗಿ ತನ್ನ ಕೈಗೆ ಬೀಳುವದೆಂಬೆಣಿಸಿರಲಿಲ್ಲ. ಆದರೆ ಸರ್ಪಕ್ಕೆ ಅದೇ ತಲೆ ಭಾರವಾಗಿತ್ತೆಂದು ಅವನಿಗೆ ಗೊತ್ತಾಗಲಿಲ್ಲ. ಆ ರತ್ನವನ್ನು ಇನ್ನೊಬ್ಬರ ಕೈಗಿತ್ತು ಸರ್ಪ ಬಿಡುಗಡೆಯನ್ನು ಪಡೆಯಬೇಕಾಗಿತ್ತು. ಒಂದೇ ಕಡೆಗೆ ಈ ನಿಧಿಯನ್ನು ಕಾಯುತ್ತ ಕೂಡುವದು ಅದರ ಸ್ವಭಾವವೂ ಅಲ್ಲ, ಆಸೆಯೂ ಇರಲಿಲ್ಲ. ಪಡ ದಯ್ಯನವರ ಪಾಲಿಗೆ ಇದೂ ಒಂದು ಸೋಲಾಗಿತ್ತು. ಸ್ವಭಾವದ ವಿರುದ್ಧವಾಗಿ ಗೆಲವನ್ನು ಪಡೆಯುವವರಲ್ಲಿ ಏನು ಪ್ರಯೋಜನ? ಲೂಟಿ, ಕಳವು, ಕಾರಸ್ಥಾನ ಗಳೆಲ್ಲ ಪಾಪಗಳೇ ಆಗಿದ್ದವು. ಆದರೆ ಅವು ದೆವ್ವವಾಗಿ ಕಾಡುತ್ತಿರಲಿಲ್ಲ. ಚಿಮಣಾ ಳನ್ನು ಕರೆದುಕೊಂಡು ಬಂದಿದ್ದೇ ತಪ್ಪಾಗಿತ್ತು. ದೂರವಿರುವದೂ ಸಾಧ್ಯವಿರಲಿಲ್ಲ ವೆಂದೇ ಕರೆದುಕೊಂಡು ಬಂದಿದ್ದರು. ಭೋಗದ ರೀತಿಯೇ ಹಾಗೆ. ಕೊಲೆ ಮಾಡಿದವನನ್ನೇ ಇನ್ನೊಮ್ಮೆ ಕೊಲೆ ಮಾಡಲು ಸಾಧ್ಯವಿಲ್ಲ. ಅಥವಾ ಇನ್ನೊಂದು ಕೊಲೆ ಮಾಡದಿರುವದೂ ಸಾಧ್ಯ. ಮನಸ್ಸು ಮಾಡಿದರೆ ಉಳಿದೆಲ್ಲ ಪಾಪಗಳಿಂದ ವಿಮುಖರಾಗಿರಬಹುದು. ಆದರೆ ಭೋಗವನ್ನು ಒಮ್ಮೆ ಬೆನ್ನುಹತ್ತಿದರೆ ಸಾಕು; ಜೀವನದುದ್ದ ಅದೇ ನಮ್ಮ ಬೆನ್ನುಹತ್ತಿ ಬರುತ್ತದೆ. ಚಿಮಣಾ ಒಳಗಿನ ಕೋಣೆ ಯಲ್ಲಿಯೇ ಸೆರೆಯಾಗಿದ್ದಳು. ಒಂದು ಮಾತನ್ನೂ ಆಡುತ್ತಿರಲಿಲ್ಲ. ಬೇಡವೆನಿಸಿ ದರೆ ಅವಳ ಮುಖವನ್ನು ನೋಡದೆಯೂ ಇರಬಹುದಾಗಿತ್ತು. ಆದರೂ ಅವಳ ನೆನಪು ಪಡದಯ್ಯನವರ ಸುತ್ತು ಓಡಾಡುತ್ತಲೇ ಇತ್ತು. ಆಕಸ್ಮಾತ್ತಾಗಿ ಕಂಡ ಅವಳ ಬೊಗಸೆಗಣ್ಣುಗಳು ಆಸಕ್ತಿಯನ್ನು ಕೆರಳಿಸುತ್ತಿದ್ದವು. ಅವಳ ದಿನನಿತ್ಯದ ಸಾಮಾನ್ಯವಾದ ಕೆಲಸಗಳೂ, ಯಾವುದೋ ದೃಷ್ಟಿಕೋನದಿಂದ ನೋಡಿದಾಗ ಅಲೌಕಿಕವಾಗಿ ಕಾಣುತ್ತಿದ್ದವು. ಆದರೆ ಅದರ ಹೊಣೆಗಾರಿಕೆ ಅಷ್ಟೇ ಅಸಹ ನೀಯವಾಗಿತ್ತು. ಅಂತೆಯೇ, ಈಗ ಲಿಂಗಪ್ಪನ ಕೊರಳಿಗೆ ಅದನ್ನು ಕಟ್ಟಿ ತಾವು ಬಿಡುಗಡೆ ಪಡೆಯಬೇಕಾಗಿತ್ತು.

ಈ ಸಂಗತಿಯೇ ದುಃಖಕರವಾಗಿತ್ತು. ತಮ್ಮ ಕ್ಷುದ್ರತನ ತಮಗೇ ಭೂತ
ವಾಗಿ ಕಂಡಿತ್ತು. ಎಷ್ಟು ಮುಸುಕುಗಳನ್ನು ಹಾಕಿಕೊಂಡರೂ ವ್ಯರ್ಥವಾಗಿತ್ತು.
ನಮ್ಮನ್ನು ನಾವೇ ಮರೆಯುವದು ಹೇಗೆ ಸಾಧ್ಯ? ಜೀವನವೇನು ದೀರ್ಘವಾದ
ಒಂದು ನಿದ್ರೆಯೇ? ಪಾಪದ ಎಚ್ಚರವಿದ್ದರೆ ನಿದ್ದೆ ಕೂಡ ಹತ್ತಲಾರದು. ಪಡದಯ್ಯ
ನವರೂ ಕೊನೆಗೂ ಈ ಜಿದ್ದಿನಲ್ಲಿ ಸೋತಿದ್ದರು; ಮರ್ಮಾಹತರಾಗಿದ್ದರು.

ಏನೇ ಆಗಲಿ, ಲಿಂಗಪ್ಪನೊಬ್ಬ ಈಗ ಕೈಗೆ ಸಿಕ್ಕಿದ್ದ. ಅನಾಯಾಸವಾಗಿ
ಇನ್ನೊಂದು ಯಜ್ಞಪಶು ಕೈಗೆ ಬಿದ್ದಂತಾಗಿತ್ತು. ಅವನ ಕೈಗೇ ಈ ಬಂಧನವನ್ನು
ತೊಡಿಸಿ ಪಾರಾಗಬಹುದಿತ್ತು. ಲಿಂಗಪ್ಪ ಉಬ್ಬಿಹೋಗಿದ್ದ. ಅವರು ಹೇಳಿದ
ಮಾತಿಗೆ ಒಪ್ಪುವದಲ್ಲದೆ, ಇನ್ನೂ ಒಂದು ಹೆಜ್ಜೆ ಮುಂದೆ ಹೋದ. ತಾನು ಚಿಮಣಾ
ಳನ್ನು ಮದುವೆಯಾಗಲು ಸಿದ್ಧನಿರುವೆನೆಂದು ಹೇಳಿಬಿಟ್ಟ. ಪಡದಯ್ಯನವರು
ಈ ಮಾತಿಗೆ ಒಪ್ಪಲಿಲ್ಲ. ಮತ್ತೊಮ್ಮೆ ಅವರ ಕ್ಷುದ್ರತನ ಹೆಡೆಯೆತ್ತಿತು. ಅವರು
ಬಯಸಿದ್ದು ತಮ್ಮ ಬಿಡುಗಡೆಯೇ ಹೊರತು, ಚಿಮಣಾಳ ಉದ್ಧಾರವನ್ನಲ್ಲ!
ಲಿಂಗಪ್ಪನ ಹುಚ್ಚುತನವನ್ನು ನೋಡಿ ಅವರಿಗೆ ನಗೆ ಬಂತು. "ಏನ ಮಾತಾಡ
ತೀರಿ ಗೌಡರ? ನಾಳೆ ನಾಕು ಮಂದಿ ಏನಂದಾರು? ಜನರು ಹೌದು ಅನ್ನೂ ಹಾಗ
ಬಾಳೇ ಮಾಡಬೇಕು. ಚಿಮಣಾನಂತಾ ಹೆಣ್ಣಿನ ಗೂಡ ಬಾಳೇ ಮಾಡೂದು
ತಮ್ಮಂತಾ ವತನದಾರರಿಗೆ ಭೂಷಣ ಅಲ್ಲ. ಚಿಮಣಾನ ಗೂಡ ಸಂಬಂಧ ಇರಲಿ,
ಆದರ ಮದವೀ ಮಾತ ಆಡಬ್ಯಾಡ್ರಿ" ಎಂದು ನೀಚ ಸಲಹೆಯೊಂದನ್ನಿತ್ತರು.

ಲಿಂಗಪ್ಪನಿಗೆ ಆಶ್ಚರ್ಯವಾಯಿತು. ಪಡದಪ್ಪನ ಮಾತಿನ ಅರ್ಥ ಅವನಿಗೆ
ತಿಳಿದಿತ್ತು, ಆದರೆ ಅದರ ರಹಸ್ಯ ತಿಳಿಯಲಿಲ್ಲ. ಚಿಮಣಾ ಹಾಗೂ ತಾನು, ಇಬ್ಬರೂ
ಮದುವೆಯಾಗಲು ಒಪ್ಪಿಕೊಂಡರೆ ಇವರೇಕೆ ಆಕ್ಷೇಪಿಸಬೇಕು? ಅದು ತಮ್ಮ
ವೈಯಕ್ತಿಕ ವಿಷಯವಲ್ಲವೇ? ಲಿಂಗಪ್ಪ ಏನೂ ತಿಳಿಯದವನಂತೆ ಮಿಕಿಮಿಕಿ
ನೋಡಹತ್ತಿದ.

"ನಾ ಹೇಳೂದು ತಿಳೀಲಿಲ್ಲ ಹೌದಲ್ಲೊ ಗೌಡರs? ಇಂತಾ ಹೆಣ್ಣಿನ ಗೂಡ
ಮದಿವ್ಯಾಗಬಾರದು ಅಂತ ನಾ ಹೇಳೂದು. ಇದರಿಂದ ನಿಮ್ಮ ಮರ್ಯಾದಿ ಉಳ್ಯಾ
ಡೆಲ್ಲ. ಮದಿವ್ಯಾಗಬಾರದಂತಲ್ಲ. ಅದಕ್ಕೂ ನಾ ಹಂಚಿಕಿ ತೆಗದೀನಿ. ನಾತೇನ
ಹಳ್ಳಿ ಗೌಡರಿಗೆ ಒಬ್ಬ ಮಗಳದಾಳ. ಗೌಡರೂ ಗಟ್ಟ್ಯಾಳ್ಳವರು. ಮನ್ಯಾಗ ಹದಿನಾ
ರೆತ್ತಿನ ಕಮತ ಐತಿ. ಅಂತವರ ಬೀಗತನಾ ನಿಮಗ ಮುಂದ ಆಸರಾದೀತು. ನಾ

ಹೋಗಿ ಗೊತ್ತಮಾಡಿಕೊಂಡು ಬರತೀನಿ. ನಿಮುಗ ಈ ಊರ ಗೌಡಿಕಿ, ವತನಾ, ಭೂಮಿ-ಸೀಮಿ ಕಾಯಂ ದಕ್ಕಬೇಕಾಗಿದ್ದರ ರುದ್ರಪ್ಪಗೌಡರ ಅಳಿಯಂದಿರಾಗ ಬೇಕು. ಇನ್ನ ಚಿಮಣಾಳ ಮ್ಯಾಗ ಮನಸ್ಸಾಗಿದ್ದರ ಹೇಳ್ರಿ, ಆಕಿನ್ನೂ ತಂದು ನಿಮುಗ ಕೊಡತೇನು. ನೀವು ನಮುಗ ಬೇಕಾದವರು. ನಿಮ್ಮ ಹಿತಾ ಅಂದರ ನನ್ನ ಹಿತಾ" ಪಡದಯ್ಯನವರು ರಸವತ್ತಾಗಿ ಲಿಂಗಪ್ಪನ ಭವಿಷ್ಯದ ವಿಶ್ವಕರ್ಮರೇ ತಾವೆನ್ನುವಂತೆ ಹೇಳಿದರು. ಲಿಂಗಪ್ಪನಿಗೆ ಆ ಕ್ಷಣದಲ್ಲಿ ಅವರು ಹಾಗೆ ಕಂಡದ್ದೂ ನಿಜ. ಇಲ್ಲದಿದ್ದರೆ ಆಜರಾಣಿಯ ಕುರುಬಗೇರಿಯಲ್ಲಿ ಏನೂ ಬೆಲೆಯಿಲ್ಲದೆ ಬಿದ್ದು ಕೊಂಡಿದ್ದ ತನ್ನನ್ನು ಮೇಲೆತ್ತಿ ತನ್ನ ಉದ್ಧಾರವನ್ನೇಕೆ ಮಾಡುತ್ತಿದ್ದರು? ಅವ ರಿದ್ದರೆಂದೇ ಪಾದಳ್ಳಿಯ ಇಂಥ ವಿಷಮ ವಾತಾವರಣದಲ್ಲೂ ತನಗೆ ಇಷ್ಟೆಲ್ಲ ವೈಭವ ಪ್ರಾಪ್ತವಾಯಿತಲ್ಲವೇ? ಮಠದ ಆಶ್ರಯವಿರದಿದ್ದರೆ ತನ್ನನ್ನು ಬೀದಿಯ ನಾಯಿ ಕೂಡ ಕಡೆಗಣಿಸಬಹುದಿತ್ತು.

"ನಿಮ್ಮ ಮಾತೂ ತಗದು ಹಾಕಾಕ ಬರಾಣಿಲ್ಲಾ. ನಿಮುಗ ಆ ಹುಡಿಗಿ ಪಸಂತ ಬಿದ್ದಿದ್ದರ ಹೋಗಿಬರ್ರಿ. ನಾ ಬರಾಕ ಆಗಾಣಿಲ್ಲಾ. ಊರಾಗ ಕಳವಿ ನಿಂದ ಜನಾ ಗಾಬರಿ ಆಗ್ಯಾರು. ಮ್ಯಾಗ ಮಳೀ ಹತ್ತಿ ಮನಿ ಬಿದ್ದು ಬಾಳೆಗೇಡಾ ಗ್ಯಾರು. ಅವರಿಗೆಲ್ಲಾ ಧೈರ್ಯೇ ಹೇಳಾಕ ನಾ ಇಲ್ಲೇ ಇರಬೇಕಾಗತೈತಿ. ಮತ್ತ ಇಲಿ ಬಿದ್ದ ಮನಿ ಯಾದಿ ಮಾಡಿ ಪೌಜದಾರರಿಗೆ ಕಳಸಬೇಕು. ಊರ ಶಾಂತ ಆದ ಮ್ಯಾಗ ಲಗ್ನದ ವಿಚಾರ. ಮತ್ತ ಇನ್ನೊಂದು ಮಾತು. ಈಗ ಚಿಮಣಾನ್ನ ನಾನೇ ತಂದು ಮಠದಾಗ ಇಟ್ಟೇನಿ ಅಂತ ಸುದ್ದಿ ಹಬ್ಬಿಸೀರಿ. ಈ ಮಾತು ಸಾತೇನಹಳ್ಳಿ ಗೌಡರಿಗೆ ತಿಳದರ ಏನಾದೀತು?" ಲಿಂಗಪ್ಪ ತನ್ನ ಮನಸ್ಸಿನಲ್ಲಿಯ ಒಂದು ಸಂಶ ಯವನ್ನು ಆಡಿತೋರಿಸಿದ.

"ಅದಕೇನಾಗತೇತಿ? ತಮ್ಮ ಅಳಿಯಾ ಖಂಬೀರ ಅದಾನ ಅಂತ ತಿಳ ಕೊಂತಾರು. ರುದ್ರಪ್ಪಗೌಡರಿಗೆ ಇಬ್ಬರು ಹೆಂಡರು. ಮತ್ತ ಮ್ಯಾಗ ಇಟಗೊಂಡ ವರೇಸೋ ಮಂದಿ. ವತನದಾರರಿಗೆ ಇವು ಇರಾಕಽಬೇಕು. ನೀವೇನೂ ಹಚಿಗೋ ಬ್ಯಾಡ್ರಿ" ಎಂದು ಪಡದಯ್ಯನವರು ಧೈರ್ಯ ಹೇಳಿದರು.

ಲಿಂಗಪ್ಪ ಸುಮ್ಮನಾದ. ಎಲ್ಲವೂ ತನ್ನ ಮನಸ್ಸಿನಂತೆಯೇ ನಡೆಯಬೇ ಕೆಂದು ದೈವಸಂಕಲ್ಪವಿತ್ತು. ಅದಕ್ಕೆ ಪಡದಯ್ಯನವರು ಕಾರಣಪುರುಷರಾಗಿ ದ್ದರು. ತನ್ನ ಜೀವನದ ಹೊಣೆಯನ್ನೇ ಅವರ ಮೇಲೆ ಹೊರಿಸಿ ನಿಶ್ಚಿಂತನಾಗಿಬಿಟ್ಟ

ರಾಯಿತು. ಚಿಮಣಾಳಿಗೂ ಈ ಮಾತನ್ನು ತಿಳಿಸುವದಾಗಿ ಅವರು ಹೇಳಿಬಿಟ್ಟಿ ದ್ದರು. ಅಂತೂ ಪಾದಳ್ಳಿಯಲ್ಲಿ ತನ್ನ ಮುಂದಿನ ಜೀವನ ನಿರಾತಂಕವಾಯಿತೆಂದು ಲಿಂಗಪ್ಪನಿಗೆ ಹರ್ಷವಾಯಿತು.

ಪಡದಯ್ಯನವರು ಈ ಹಂಚಿಕೆ ಹೂಡಿರಲು ಇನ್ನೊಂದು ಕಾರಣವೂ ಇತ್ತು. ಕಳವು ಮಾಡಿ ತಂದಿದ್ದ ಹಮ್ಮಿಣಿಗಳೆಲ್ಲ ಅವರ ಸಂದುಕದಲ್ಲಿಯೇ ಇದ್ದವು. ಅವು ತಮಗೆ ದಕ್ಕುವ ತನಕ ಅವುಗಳನ್ನು ಕಾಯುವದೇ ದೊಡ್ಡ ತೊಂದರೆಯಾಗಿತ್ತು. ನಾಳೆಯಾಗಲಿ, ನಾಡದಾಗಲಿ ಫೌಜದಾರ ಬರುವವನಿದ್ದ. ಪಾರ್ವತೆವ್ವನ ತಕರಾರು, ಊರವರ ದೂರುಗಳ ವಿಚಾರಣೆ ನಡೆದೀತು. ಆಗ ಮಠದಲ್ಲಿ ಮುದ್ದೇಮಾಲು ಸಿಕ್ಕು ಗೊಂದಲವಾದೀತು. ಇದನ್ನೆಲ್ಲ ಯೋಚಿಸಿ ದಾಗ ಕೆಲದಿನಗಳ ವರೆಗೆ ಊರು ಬಿಡುವದೇ ಒಳ್ಳೆಯದೆಂದು ಕಂಡಿತ್ತು. ಅದೇ ರಾತ್ರಿ ಲಿಂಗಪ್ಪನಿಗೆ ಹಮ್ಮಿಣಿಗಳನ್ನೆಲ್ಲ ಕೊಟ್ಟುಬಿಟ್ಟರು.

ಲಿಂಗಪ್ಪನೂ ಮಲಗಲಿಕ್ಕೆ ಹೋದ. ಪಡದಯ್ಯನವರು ಹಾಸಿಗೆಯ ಮೇಲೆಯೇ ಕುಳಿತಿದ್ದವರು ಅಲ್ಲಿಯೇ ಅಡ್ಡಾದರು. ಊರು ಬಿಡುವದರ ಬಗ್ಗೆ ಅವರು ಕೃತನಿಶ್ಚಯರಾಗಿದ್ದರು. ಯಾಕೋ ಪಾದಳ್ಳಿ ಅವರಿಗೀಗ ಬೇಸರಾಗಿತ್ತು. ಊರವರೆಲ್ಲ ಹೊರದೂಡಿದ್ದರೂ ಮತ್ತೆ ತಾವು ಈ ಮಠಕ್ಕೆ ಬಂದದ್ದೇಕೆ? ಯಾವ ಮನೋಭೀಷ್ಟವನ್ನು ಪೂರ್ತಿಗೊಳಿಸಿದಂತಾಯಿತು? ಊರೂರು ಅಲೆದಾಡಿ ಚಿಮಣಾಳನ್ನು ಹುಡುಕಿ ತಂದಿದ್ದರು. ಇಲ್ಲಿ ಬಂದ ಮೇಲೆ ತಮ್ಮ ಕಾಯಕ ಮತ್ತೆ ಪ್ರಾರಂಭವಾಗಿತ್ತು. ಹೊಲ ಹರಗಿಸಿದ್ದಾಯಿತು; ವಾಡೆಯ ಕಬಜಾ ತೆಗೆದು ಕೊಳ್ಳಲು ಪ್ರಯತ್ನಪಟ್ಟದ್ದಾಯಿತು; ಊರನ್ನು ಲೂಟಿ ಮಾಡಿಸಿದ್ದಾಯಿತು; ಲಿಂಗಪ್ಪಗೌಡನನ್ನು ಗೌಡಿಕಿಯ ಪೀಠದಲ್ಲಿ ಸ್ಥಾಪಿಸಿದ್ದಾಯಿತು. ಅದರಿಂದ ತಮಗೆ ಏನು ತೃಪ್ತಿ? ಪಡದಯ್ಯನವರ ಒಳಜೀವ ತೃಪ್ತಿಯನ್ನೇ ಕಂಡಿರಲಿಲ್ಲ. ಈಗ ಬೇಸರವೇ ಒಟ್ಟಿ ನಿಂತಿತ್ತು. ಈಗ ಬೇಕಾಗಿದ್ದು ಬಿಡುಗಡೆ. ಅದಕ್ಕಾಗಿಯೇ ಈ ಹೊಂಚನ್ನು ಹಾಕಿದ್ದರು. ಇನ್ನು ಚಿಮಣಾ? ಅವಳೇನು, ತಮ್ಮನ್ನು ನಂಬಿ ಕೊಂಡಿರಲಿಲ್ಲ. ತಮಗಂತೂ ಅವಳು ಜೀವನಕ್ಕೆ ಅವಶ್ಯವೆಂಬೆನಿಸಿರಲಿಲ್ಲ.

ಪಡದಯ್ಯನವರಿಗೆ ಅದೇ ಜೊಂಪು ಹತ್ತಿತ್ತು. ಅರೆ ಎಚ್ಚರ, ಅರೆ ನಿದ್ರೆಯ ಮಬ್ಬಿನಲ್ಲಿದ್ದರು. ಅದರಲ್ಲಿಯೇ ಒಂದು ಕನಸು. ಪಡದಯ್ಯನವರು ಕುದುರೆ ಯನ್ನೇರಿ ಹೊರಟಿದ್ದಾರೆ. ನೋಡಿದತ್ತ ಬಯಲೇ ಬಯಲು. ವಿಸ್ತಾರವಾಗಿ

ಮೈಲುದ್ದ ಚಾಚಿದೆ. ಬಿಸಿಲು ಜೋರಾಗಿ ಸುಡುತ್ತಿದೆ. ಗಿಡ-ಗಂಟೆಗಳೆಲ್ಲ ಎಲ್ಲಿ ಹಾಳಾಗಿ ಹೋಗಿದ್ದೆವೋ ಒಂದೂ ಇಲ್ಲ. ಪಡದಯ್ಯನವರು ನೀರಡಿಸಿದ್ದರು. ಆದರೆ ಎಲ್ಲಿಯೂ ನೀರು ದೊರೆಯುವಂತಿರಲಿಲ್ಲ. ಅಕಸ್ಮಾತ್ತಾಗಿ ಹಿಂದಿರುಗಿ ನೋಡಿದರು. ಸರ್ಪವೊಂದು ತಮ್ಮ ಬೆನ್ನು ಹಿಂದೆಯೇ ಬರುತ್ತಿದೆ. ಕುದುರೆಯ ಹೆಜ್ಜೆಯನ್ನು ಹಿಡಿದೇ ಬರುತ್ತಿದೆ. ಬಿಸಿಲಿನಲ್ಲಿ ಅದರ ಗೋದಿಬಣ್ಣದ ಮೈ ಮಿರಮಿರನೆ ಮಿಂಚುತ್ತಿದೆ. ಮುಚ್ಚಿದ ಹೆಡೆಯನ್ನೊಮ್ಮೆ ಅರಳಿಸಿ ಅದು ಮೇಲೆತ್ತಿದಾಗ ಹೆಣ್ಣಿನ ಕಣ್ಣೊಂದು ತೆರೆದಂತೆ ಭಾಸವಾಗುತ್ತಿದೆ. ಆದರೆ ಅದು ಸರ್ಪವೆಂದು ತಿಳಿದಾಗ ಮಾತ್ರ ಹೆದರಿಕೆಯಾಯಿತು. ಕುದುರೆಯನ್ನು ಓಡಿಸಬೇಕೆಂದರು. ಅದು ದಣಿದಿದೆ. ಬಿಸಿಲು ತಲೆಯ ಮೇಲೆ ಅಪ್ಪಳಿಸುತ್ತಿದೆ. ಕುದುರೆಯಿಂದಿಳಿದು ಓಡಿ ಹೋಗುವ ತ್ರಾಣವೂ ಉಳಿದಿಲ್ಲ. ಆದರೆ ಸರ್ಪ ಮಾತ್ರ ಅಪೂರ್ವ ಉತ್ಸಾಹದಿಂದ ಓಡಿ ಬರುತ್ತಿದೆ. ತಪ್ಪಿಸುವದಾದರೂ ಹೇಗೆ? ತಪ್ಪಿಸಲು ಸ್ಥಳವಾದರೂ ಎಲ್ಲಿದೆ? ಪಡದಯ್ಯನವರು ಚೀರಬೇಕೆಂದರು. ಸಾಧ್ಯವಾಗಲಿಲ್ಲ. ಹೆದರಿಕೆ ಮೈಯನ್ನೆಲ್ಲ ಹಿಂಡಿಬಿಟ್ಟಿತು.

ಹೌದು, ಮೈಯನ್ನೆಲ್ಲ ಹಿಂಡಿದಂತೆ ಬೆವರು ಸುರಿದಿತ್ತು. ಗಡಬಡಿಸಿ ಕಣ್ಣು ತೆರೆದಾಗ ತಾವು ಮಠದಲ್ಲಿದ್ದದ್ದು ಗೊತ್ತಾಗಿ ಪಡದಯ್ಯನವರಿಗೆ ಧೈರ್ಯ ಬಂದಿತು. ಆಮೇಲೆ ನಿದ್ದೆ ಹತ್ತುವಂತೆಯೂ ಇರಲಿಲ್ಲ. ಮತ್ತೆ ಯೋಚನೆಗೆ ಮೊದಲಾಯಿತು. ಗಟ್ಟಿಮನಸ್ಸು ಮಾಡಿ ನಿದ್ದೆ ಮಾಡಬೇಕೆಂದರು. ಆದರೆ ಬೆಳಿಗ್ಗೆ ಹೋಗಬೇಕಾಗಿತ್ತು. ಎಚ್ಚರವಾಗದಿದ್ದರೆ ಹೇಗೆಂದು ಮತ್ತೆ ಕಣ್ಣು ತೆರೆದರು. ಹಾಸಿಗೆಯ ಮೇಲೆ ಎದ್ದು ಕುಳಿತರು. ಅದೂ ಬೇಸರ ಬಂದಂತಾಗಿ ಮತ್ತೆ ಅಡ್ಡಾದರು. ಅಲ್ಲಿಯೇ ಒಂದು ಮಗ್ಗುಲಿನಿಂದ ಇನ್ನೊಂದು ಮಗ್ಗುಲಿಗೆ ಹೊರಳಾಡಿ ಉಳಿದ ರಾತ್ರಿಯನ್ನೆಲ್ಲ ಆಳಿದರು.

ಮೊದಲೇ ಗೊತ್ತಾಗಿದ್ದಂತೆ ಮುಂಜಾನೆ ಪಡದಯ್ಯನವರು ಕುದುರೆ ಏರಿ ಸಾತೇನಹಳ್ಳಿಗೆ ಪ್ರಯಾಣ ಬೆಳೆಸಿದರು. ಅವರ ಜೊತೆಗೆ ಕಮತಿಗರ ಕರಿಯಪ್ಪನೂ ಹೊರಟುಹೋದ. ಲಿಂಗಪ್ಪ ಒಬ್ಬನೇ ಮಠದಲ್ಲಿ ಉಳಿದ. ಮತ್ತೆ ಚಿಮಣಾಳ ಆಸಕ್ತಿ ಮನದಲ್ಲಿ ಮೂಡಿತು. ಸಾವಕಾಶವಾಗಿ ಅವನ ಹೃದಯವನ್ನೇ ಮೇಯಹತ್ತಿತು. ಹುದುಲಲ್ಲಿ ಕಾಲಿಟ್ಟಂತಾಗಿತ್ತು. ಒಂದು ಕಾಲನ್ನೆತ್ತಿದರೆ ಇನ್ನೊಂದು ಕಾಲು ಹೆಚ್ಚು ಆಳವಾಗಿ ಒಳಸೇರುತ್ತಿತ್ತು. ಈ ಎದೆಗುದಿಯಿಂದ

ಸಾರಾಗಲು ಲಿಂಗಪ್ಪ ಊರೊಳಗೆ ಹೊರಟ.

ಆಚಾರ್ಯರ ಪತ್ನಿಯ ಆಕಸ್ಮಿಕ ಮರಣ ಜನರಲ್ಲಿ ಕೋಲಾಹಲವನ್ನೆಬ್ಬಿಸಿತ್ತು. ಒಂದೇ ದಿನ ಜ್ವರ ಬಂದು ಸಾಯುವದುಂಟೇ? ಹೀಗಾಗಿ ಜ್ವರ ಬಂದವರಿಗೆಲ್ಲ ತಮ್ಮ ಆಯುಷ್ಯ ಕೊನೆಗಂಡಂತೆಯೇ ಎಂದು ಭೀತಿಯುಂಟಾಗಿತ್ತು. ಕಳೆದ ಮೂರು ದಿನಗಳಿಂದ ಹತ್ತಿದ ಮಳೆಯ ಪರಿಣಾಮವಾಗಿಯೋ ಏನೋ ಮನೆಮನೆಗೆ ಜನರು ಹಾಸಿಗೆ ಹಿಡಿದಿದ್ದರು. ಸಾಲದ್ದಕ್ಕೆ ಹಿಡಿದ ಜ್ವರ ವಿಪರೀತವಾಗಿ ಏರುತ್ತಿತ್ತು. ಮೈಮುಟ್ಟಿದರೆ ಕಾದ ಹಂಚಿನ ಮೇಲೆ ಕೈ ಇಟ್ಟಂತಾಗುತ್ತಿತ್ತು. ಗೆಜ್ಜೆಯಲ್ಲಿಯೋ, ಬಗಲಲ್ಲಿಯೋ ಬಾತುಕೊಂಡು ಪ್ರಾಣಾಂತಿಕ ವೇದನೆಯಾಗುತ್ತಿತ್ತು. ಕಣ್ಣು ಗುಲಗಂಜಿಯಂತೆ ಕೆಂಪಾಗಿದ್ದವು. ಹೆಚ್ಚುಕಡಿಮೆ ಎಲ್ಲರ ಸ್ಥಿತಿಯೂ ಒಂದೇ ತೆರನಾಗಿತ್ತು.

ಮಳೆ ಪೂರ್ಣವಾಗಿ ನಿಂತಿರಲಿಲ್ಲ. ಈಗ ಮೊದಲಿನಂತೆ ಎಡೆಬಿಡದೆ ಸುರಿಯುತ್ತಿರದಿದ್ದರೂ ನಿಂತು ನಿಂತು ಸುರಿಯುತ್ತಿತ್ತು. ಮಳೆ ಬೀಳದಿದ್ದರೂ, ಸೂರ್ಯನ ಬೆಳಕೇನೂ ಬಿದ್ದಿರಲಿಲ್ಲ. ಮನೆಗಳು ಜಂಪಲಿಕ್ಕಿದ್ದರಿಂದ ನೆಲವೆಲ್ಲ ತೇವು ಹಿಡಿದು ಹಸಿಯಾಗಿತ್ತು. ಜ್ವರ ಬಂದವರನ್ನು ಚಾಪೆ ಹಾಸಿ ಅಲ್ಲೇ ಮಲಗಿಸಬೇಕಾಗುತ್ತಿತ್ತು. ನಾಲ್ಕೈದು ದಿನಗಳಲ್ಲಿಯೇ ಬದುಕು ವಿಸ್ಖಲಿತವಾಗಿತ್ತು. ಜೇನೆ ಬಿದ್ದವರಿಗೂ, ಬೀಳದಿದ್ದವರಿಗೂ ಕೂಡಿಯೇ ಜ್ವರವೇರಿದಂತಾಗಿತ್ತು. ಯಾರ ಮುಖದ ಮೇಲೂ ಉತ್ಸಾಹವಿರಲಿಲ್ಲ. ಕೂಡಿದಲ್ಲಿ ಜೇನೆಬೇಸರಿಕೆಯ ಮಾತೇ ಕೇಳುತ್ತಿದ್ದವು. ಬಿದ್ದ ಮನೆಗಳನ್ನು ಸರಿಪಡಿಸುವದಕ್ಕೂ ವೇಳೆಯಿರಲಿಲ್ಲ. ದನಕರುಗಳನ್ನು ನೋಡಿಕೊಳ್ಳುವದಕ್ಕೂ ವೇಳೆಯಿರಲಿಲ್ಲ. ಬಾಗಿಲಿಗೆ ಬಂದು ನಿಂತ ಸಿಡುಗನ್ನು ಮೊದಲು ಸ್ವಾಗತಿಸಬೇಕಾಗಿತ್ತು.

ಮಳೆ, ಗಾಳಿ, ಸಿಡುಗು ಇವುಗಳಿಂದ ಹಾದಳ್ಳಿಯ ಜೀವನವನ್ನೇ ಹಿಂಡಿದಂತಾಗಿತ್ತು. ದೈವೀಪ್ರಕೋಪವಿರಬೇಕೆಂದು ಜನರು ನಿಶ್ಚಯಿಸಿದರು. ಹಿಂದಕ್ಕೊಮ್ಮೆ ಕಾಲರಾ ಬಂದು ಕಾಳ್ಗಿಚ್ಚಿನಂತೆ ಊರನ್ನು ಹುರಿದಿತ್ತು. ಈಗ ಇನ್ನೊಂದು ರೀತಿಯ ಸಿಡುಗು! ಸುತ್ತಲಿನ ಗ್ರಾಮದೇವತೆಗಳೆಲ್ಲ ಕೆರಳಿರಬೇಕು. ಅವರನ್ನು ತಣಿಸುವದೇ ಮೊದಲ ಕರ್ತವ್ಯ. ಪೂಜೆ, ನೈವೇದ್ಯಗಳನ್ನು ನಡೆಸಬೇಕು. ನಾಲ್ಕು ಜನರು ಕೂಡಿದಲ್ಲಿ ನಡೆದ ಮಾತು ಊರಿನದೇ ಯೋಜನೆಯಾಗಿ ಪರಿಣಮಿಸಿತು.

ಅಂದು ಪ್ರಥಮ ಶುದ್ಧ ಏಕಾದಶಿ. ಅಂದೇ ರಾತ್ರಿ ಜಾಗರಣೆ ಮಾಡಿ ಭಜನೆ

ಮಾಡಬೇಕೆಂದು ಗೊತ್ತಾಗಿತ್ತು. ತೀವ್ರವಾಗಿ ಹಬ್ಬುತ್ತಿದ್ದ ಹೊಸ ಪಿಡುಗಿಗೆ ಗಾಬರಿ ಗೊಂಡ ಜನರೆಲ್ಲ ಅದಕ್ಕೆ ಒಪ್ಪಿದರು. ಗೋಪಾಲಕೃಷ್ಣನ ಗುಡಿಯಲ್ಲಿ ಭಜನೆ ನಡೆಯುವದಿತ್ತು. ನಾರಾಯಣಾಚಾರಿ ಭಜನೆಯಲ್ಲಿ ಗಟ್ಟಿಗ. ಅವನೇ ಇಂಥ ಭಜನೆಗಳಲ್ಲಿ ಮುಂದಾಳುವಾಗುತ್ತಿದ್ದ. ಬೆಳತನಕ ತಾಳ ಕಟಿದರೂ ಅವನಿಗೆ ಬೇಸರ ಬರುತ್ತಿರಲಿಲ್ಲ. ಇನ್ನು ಗೋಪಾಲಕೃಷ್ಣನ ಗುಡಿಯಲ್ಲಿಯ ಭಜನೆಯ ಸುದ್ದಿಯನ್ನು ಕೇಳಿ, ಮಠದಲ್ಲಿಯೂ ಭಜನೆ ಮಾಡಲು ಜನರು ಹುರಿಯಾದರು. ಮನೆಗಳೆಲ್ಲ ಜಂಪಲಿಕ್ಕಿ ಸೋರಿದ್ದರಿಂದ, ಜನರು ಎಲ್ಲೆಲ್ಲಿ ಮಲಗುತ್ತಿದ್ದರೋ ಅಲ್ಲಲ್ಲಿ ಭಜನೆಯ ಮೇಳಗಳು ಕೂಡಿಕೊಂಡವು. ಭಜನೆಗೆ ಮನಸ್ಸಿಲ್ಲದವರೂ, ಮಲಗಲು ಸ್ಥಳವಿಲ್ಲದ್ದರಿಂದ ಒಪ್ಪಿಕೊಳ್ಳಬೇಕಾಯಿತು. ಚಾವಡಿಯಲ್ಲಿ, ಮಾರುತಿದೇವರ ಗುಡಿಯಲ್ಲಿ ಹೀಗೆ ಪಾದಳ್ಳಿಯಲ್ಲಿ ಹತ್ತೆಂಟು ಕಡೆಗೆ, ರಾತ್ರಿ ಮಲಗಲು ಮೂರು ದಿನಗಳಿಂದ ಜನರು ಸೇರುತ್ತಿದ್ದೆಡೆಗಳಲ್ಲಿ ಭಜನೆಯ ಸಾಂಕ್ರಾಮಿಕ ರೋಗ ಹರಡಿದಂತಾಗಿತ್ತು.

ಮಠದಲ್ಲಿ ಪಡದಪ್ಪನವರಿದ್ದಿದ್ದರೆ ಅಲ್ಲಿಯ ಭಜನೆಯ ಕಾರ್ಯಕ್ರಮ ರಂಗಿಗೇರುಹುದೆಂದು ಕೆಲವರಿಗನಿಸಿತು. ಗಾಂಜಿ ಹಾಗೂ ತೀರ್ಥಪ್ರಾಶನವಿದ್ದರೆ ಆ ಭಜನೆಯ ಸೊಗಸೇ ಬೇರೆ. ಆ ಉನ್ಮಾದ, ಆ ಏಕಾಗ್ರತೆ, ಆ ಭಕ್ತಿಯ ಉತ್ಕಟತೆಯಿಂದ ಆಗಿಂದಾಗ ಪರಮಾತ್ಮನನ್ನು ಒಲಿಸಬಹುದು. ಮನೆ, ಹಾಗೂ ಸಂಸಾರದ ಕಡೆಗೇ ಲಕ್ಷ್ಯವಿಟ್ಟರೆ ಅದೆಂಥ ಭಜನೆ? ಲಕ್ಷ್ಯ ಭಜನೆಯ ಕಡೆಗೇ ಕೇಂದ್ರೀಕೃತವಾಗಬೇಕಿಗಿದ್ದರೆ ಗಾಂಜಿಯ ಅಮಲು ಅಗತ್ಯವಾಗಿದೆ. ಆದರೆ ಈಗ ಅದು ದೊರೆಯುವಂತಿರಲಿಲ್ಲ. ಕೂಡಿದ ಜನರಿಗೆ ನೀರಸವೆನಿಸಿದರೂ ಒಂದು ಮಾತು ಅನಿವಾರ್ಯವಿತ್ತು. ಕೆಲವರು ಗಾಂಜಾ ಹಾಗೂ ತೀರ್ಥಸೇವನೆಯಿಲ್ಲದ್ದಕ್ಕೇ ಭಜನೆಯ ಅಗತ್ಯವಿದೆಯೆಂದರು. ಇಲ್ಲದಿದ್ದರೆ ಸುಮ್ಮನೆ ಮಠದಲ್ಲಿ ಬಿದ್ದುಕೊಳ್ಳುವದರಲ್ಲಿ ಏನು ಪ್ರಯೋಜನ?

ಅಂತೂ ಮಲಗಲು ಮನೆಯಿಲ್ಲದ್ದಕ್ಕೋ, ಮಾಡಲು ಬೇರೆ ಕೆಲಸವಿಲ್ಲದ್ದಕ್ಕೋ ಅಥವಾ ಏರಿಬರುತ್ತಿದ್ದ ಪಿಡುಗಿಗೆ ಹೆದರಿಯೋ ಭಜನೆಯ ಕಾರ್ಯಕ್ರಮ ನಿಶ್ಚಿತವಾಯಿತು. ಮಣ್ಣುತಿನ್ನುತ್ತ ಬಿದ್ದಿದ್ದ ತಾಳಗಳೆಲ್ಲ ಹೊರಗೆ ಬಂದವು. ಏಕತಾರಿಗಳನ್ನು ಶ್ರುತಿಗೊಳಿಸಲಾಯಿತು. ಕೆಲವರು ತಮ್ಮ ಕಂಠಗಳನ್ನೂ ಸರಿಪಡಿಸಿಕೊಂಡರು. ಊರಲ್ಲಿ ಇಂಥ ಸಾಮೂಹಿಕ ಕಾರ್ಯಕ್ರಮಗಳು ಇತ್ತೀಚೆಗೆ ನಡೆದಿರಲೇ ಇಲ್ಲ. ಜನರು ಹುರುಪಿನಲ್ಲಿದ್ದರು.

ಸಂಜೆಯಾಯಿತು, ಬೆಳಕಾರಿತು. ಕತ್ತಲೆ ಮೆಲ್ಲಡಿಯನ್ನಿಡುತ್ತ, ಹೆಜ್ಜೆ
ಯಿಟ್ಟ ಕಡೆಗೆಲ್ಲ ತನ್ನ ಕಪ್ಪು ನೆರಳನ್ನು ನೆಲೆಗೊಳಿಸುತ್ತ ಸಾಗಿಬಂತು. ಪಡುವಣ
ದಿಕ್ಕಿನಿಂದ ಗಾಳಿ ತಣ್ಣಗೆ ಬೀಸಲಾರಂಭಿಸಿತು. ಊರಿನ ಗದ್ದಲ ಕಡಿಮೆಯಾಗು
ತ್ತಿದ್ದಂತೆಯೇ ನದಿಯ ದಿಕ್ಕಿನಿಂದ ಭೋರ್ಗರೆಯುವ ತೆರೆಗಳ ಸಪ್ಪಳ ಕೇಳತೊಡ
ಗಿತು. ಸಾವಿರಾರು ಜೀರುಂಡೆಗಳು ಸಂಜೆಯ ಗಾನದಲ್ಲಿ ತೊಡಗಿದ್ದವು. ಮೋಡ
ಗಳ ಬಿರುಕಿನೊಳಗಿಂದ ಏಕಾದಶಿಯ ಚಂದ್ರ ತನ್ನ ಕ್ಷೀಣ ಪ್ರಕಾಶವನ್ನು ಹರಡಿದ.
ಆಕಾಶದ ಹೃದಯದಲ್ಲಿ ಏನೋ ಗೊಂದಲ ನಡೆದಿರಬೇಕು. ಇಲ್ಲದಿದ್ದರೆ ಇಂಥ
ಬದಲಾವಣೆಯೇ? ಈಗ ಗಟ್ಟಿಯಾಗಿ ತೇಲಿಬಂದ ಮೋಡವೊಂದು ಸ್ವಲ್ಪ ಹೊತ್ತಿ
ನಲ್ಲಿಯೇ ಹಿಂಜಿದಂತಾಗಿ ತೆಳ್ಳಗೆ ವ್ಯಾಪಿಸುತ್ತಿತ್ತು. ಮುಂದೆ ಸ್ವಲ್ಪ ಹೊತ್ತಿನ
ಲ್ಲಿಯೇ ಇನ್ನೊಂದು ಮೋಡದ ಪುಂಜ ಕಾಣಿಸುತ್ತಿತ್ತು. ಈಗ ಕಂಬನಿ ಉದುರಿಸಿ
ದಂತೆ ನಾಲ್ಕು ಹನಿ ಮಳೆ ಸುರಿದು, ಗಾಳಿಯ ಹೊಡೆತಕ್ಕೋ ಏನೋ ಬಯಲಾಗು
ತ್ತಿತ್ತು. ಕೈಸೋತು ದಣಿದ ಮೋಡಗಳೇ ಎಲ್ಲಕಡೆಗೂ ತುಂಬಿದ್ದವು. ಚಂದ್ರ
ಮನಸ್ಸಿಲ್ಲದೆ ಬೆಳಗುತ್ತಿದ್ದ. ಅವನ ಸುತ್ತ ಮಂಜಿನ ತೆರೆ ಹರಡಿಕೊಂಡಿತ್ತು.
ಲೋಭಾನದ ಹೊಗೆಯೊಳಗಿಂದ ದೀಪದ ಬೆಳಕನ್ನು ನೋಡಿದಂತಾಗುತ್ತಿತ್ತು.
ಒಮ್ಮೆ ಚಂದ್ರನ ಸುತ್ತಲೂ ದೊಡ್ಡದಾಗಿ ಕೆರೆ ಕಟ್ಟಿತ್ತು. ಮಾಯಾವಿ ರಾಕ್ಷಸ
ನೊಬ್ಬ ಅವನನ್ನು ಸೆರೆಹಿಡಿಯಲು ಮಂತ್ರದ ಗೆರೆ ಹಾಕಿದಂತಿತ್ತು. ಚಂದ್ರ
ಅತ್ತಿತ್ತ ನೋಡುವಂತಿರಲಿಲ್ಲ. ಚಿಕ್ಕೆಗಳಂತೂ ಅರ್ಧ ಬೆಳಕಿನಲ್ಲಿ ಅರ್ಧ ಮೋಡಗಳ
ಹಿಂದೆ ಮರೆಯಾಗಿದ್ದವು.

ರಾತ್ರಿ ಹತ್ತುಗಂಟೆಯ ಮೇಲೆ ಭಜನೆಯ ಕಾರ್ಯಕ್ರಮ ಪ್ರಾರಂಭ
ವಾಯಿತು. ಗೋಪಾಲಕೃಷ್ಣನ ಗುಡಿಯಿಂದ “ಹರೇ ಕೃಷ್ಣಾ, ಹರೇ ರಾಮ”
ಎಂಬ ಭಜನೆ ಕೇಳಬರುತ್ತಿತ್ತು. ಆಗಾಗ ದನಿಗಳು ಬದಲಾಗುತ್ತಿದ್ದರೂ ಅದೇ
ಪಲ್ಲವಿ ಮತ್ತೆ ಮತ್ತೆ ಕೇಸರಿಡುವಂತೆ ಕಪ್ಪಲಿಯ ದನಿಯಂತೆ ಕೇಳುತ್ತಿತ್ತು.
ಚಾವಡಿಯಿಂದಲೂ, ಹನುಮಂತದೇವರ ಗುಡಿಯಿಂದಲೂ ಅಂಥದೇ ನಾಕಾರು ದನಿ
ಗಳು ಕೇಳುತ್ತಿದ್ದವು. ಯಾರಿಗೂ ನಿದ್ದೆಯ ಅವಸರವಿರಲಿಲ್ಲ. ಇಂದು ಜಾಗರಣೆ,
ಸಂಪೂರ್ಣ ಎಚ್ಚರ ಅವಶ್ಯವಾಗಿತ್ತು. ದೇವರಿಗೆ ಮೊರೆಯಿಟ್ಟು ಬಂದ ಪಿಡುಗನ್ನು
ಓಡಿಸಬೇಕಾಗಿತ್ತು.

ಮಠದಲ್ಲಿಯಂತೂ ಭಜನೆಯ ರೂಪ ತೀರ ಅಸ್ತವ್ಯಸ್ತವಾಗಿತ್ತು. “ಗುರುವಿನ

ಬಜಣೀ ಮಾಡೋ ಮನುಜಾ" ಎಂದು ಅಪಧ್ವವಾಗಿಯಾದರೂ ಉತ್ಸಾಹದಿಂದಲೇ ಭಜನೆ ಪ್ರಾರಂಭವಾಯಿತು. ಕಂಚಿನ ತಾಳಗಳ ದನಿ ಅವ್ಯಾಹತವಾಗಿ ಮೌನವನ್ನು ಕುಟ್ಟುತ್ತಿದ್ದವು. ಗಂಟಲು ಹರಿಯುವಂತೆ ಭಕ್ತರು ಆವೇಶದಿಂದ ಕೂಗುತ್ತಿದ್ದರು. ಕೂಗಿ ಕೂಗಿ ಕೆಲವರ ರುಮಾಲಗಳೂ ನೆಲದ ಮೇಲೆ ಹಾಸಿದ್ದವು. ಹಾಡುವವರು ಹಾಡುತ್ತಿದ್ದರು. ಉಳಿದ ಜನರೆಲ್ಲ ಸುಮ್ಮನೆ 'ಶಿವಾಯ ನಮ ಓಂ' ಎಂದು ಅಂದದ್ದನ್ನೇ ನೂರನೆಯ ಸಾರೆ ಅಂದು ಚಪ್ಪಾಳೆ ಹೊಡೆಯುತ್ತಿದ್ದರು. ಆದರೆ ಅದೊಂದೇ "ಶಿವಾಯ ನಮ ಓಂ"ದಲ್ಲಿ ಅದೆಷ್ಟು ಭಾವಗಳು ಏರಿ ಇಳಿಯುತ್ತಿದ್ದವು! ಒಮ್ಮೆ ಉತ್ಸಾಹ, ಒಮ್ಮೆ ಭಕ್ತಿ, ಮತ್ತೊಮ್ಮೆ ಬೇಸರ, ಮಗುದೊಮ್ಮೆ ತೂಕಡಿಕೆ, ಹೀಗೆ ವಿಲಕ್ಷಣವಾಗಿ ಭಕ್ತರ ಅಂತರಂಗ ಅವರ ಭಜನೆಯಲ್ಲಿ ಪ್ರತಿಧ್ವನಿತವಾಗುತ್ತಿತ್ತು.

ಲಿಂಗಪ್ಪಗೌಡ ಅಂದು ಮಠದಲ್ಲಿ ಒಬ್ಬನೇ. ಗೌಡನಾದ್ದರಿಂದ ಅವನೂ ಈ ಭಜನೆಯಲ್ಲಿ ಭಾಗವಹಿಸಲೇಬೇಕಾಗಿತ್ತು. ಅವನಿಗೇನೂ ಮನಸ್ಸಿರಲಿಲ್ಲ. ಆದರೂ ತನ್ನ ಕರ್ತವ್ಯವನ್ನು ಮರೆಯುವಂತಿರಲಿಲ್ಲ. ಒಮ್ಮೊಮ್ಮೆ ಏನೇನೋ ಕೆಲಸದ ನೆವ ಹುಡುಕಿ ಒಳಹೊರಗೆ ಓಡಾಡುತ್ತಿದ್ದ. ಯಾರನ್ನೋ ಕರೆಯುವ ನೆವಮಾಡಿಕೊಂಡು ಮಠದ ಹೊರಗೂ ಸುತ್ತಾಡಿ ಬರುತ್ತಿದ್ದ. ಭಕ್ತವೃಂದ ನೆಲಕ್ಕೆ ಬೇರಿಳಿದಂತೆ ನಿಶ್ಚಲವಾಗಿತ್ತು. ಭಜನೆಯಲ್ಲಿ ಗರ್ಕಾಗಿತ್ತು. ಮೂಡಗಾಳಿ ಬೀಸಿದಾಗ ಹೊಲದೊಳಗಿನ ಬೆಳೆಗೆ ಬೆಳೆಯೇ ಹೊಯ್ದಾಡುವಂತೆ, ಭಜಕರು ಹಾಡಿನ ಲಯಕ್ಕೆ ತೂಗುತ್ತಿದ್ದರು. ಲಿಂಗಪ್ಪನಿಗೆ ಅದನ್ನೆಲ್ಲ ನೋಡಿ ಬೇಸರವೇ ಹೆಚ್ಚಿತು.

ಅವನ ಲಕ್ಷ್ಯವೆಲ್ಲ ಬೇರೆ ಕಡೆಗಿತ್ತು. ಅಂದು ಚಿಮಣಾ ಕೊಟ್ಟ ಅವಧಿ ಮುಗಿಯುತ್ತಿತ್ತು. ಪಡದಯ್ಯನವರೂ ಊರಲ್ಲಿರಲಿಲ್ಲ. ಮಠದ ಒಳಗಿನ ಕೋಣೆಯಲ್ಲಿ ಚಿಮಣಾ ಸೆರೆಯಾಗಿದ್ದಳು. ಪಡದಯ್ಯನವರು ಹೇಗೂ ಅವಳನ್ನು ತನಗೆ ಒಪ್ಪಿಸಿಕೊಟ್ಟಿದ್ದಾರೆ. ಕಾಲ ತನಗೆ ಅನುಕೂಲವಾಗಿಯೇ ಇದೆ. ಕೈಹಿಡಿದ ಮಣ್ಣೂ ಹೊನ್ನಾಗುವ ಕಾಲ ಇದು. ಲಿಂಗಪ್ಪಗೌಡನ ಸುತ್ತಲೂ ಬಯಸಿದ್ದೆಲ್ಲ ಕಾಲಕಸವಾಗಿ ಬಿದ್ದಿತ್ತು. ಇಂದು ತನ್ನ ಬಯಕೆಯನ್ನು ಹೇಗಾದರೂ ಪೂರೈಸಲೇಬೇಕೆಂದು ಲಿಂಗಪ್ಪಗೌಡನಿಗೆ ಹಟ ಹೊಕ್ಕಿತು. ಮನಸ್ಸಿನ ಅಡ್ಡಿಯೊಂದನ್ನು ಬಿಟ್ಟರೆ ಬೇರೆ ಯಾವ ಅಡ್ಡಿಯೂ ಇರಲಿಲ್ಲ. ಸಂಕಲ್ಪವೊಂದನ್ನು ಗಟ್ಟಿಮಾಡಿದರೆ ತೀರಿತು. ಹೊರಗೆ ಭಜನೆ ನಡೆದೇ ಇತ್ತು. ತಾಳ ಕಟಿದು 'ಓಂ ನಮಃ

ಶಿವಾಯ' ಒಂದೇ ಸವನೆ ಕೇಳುತ್ತಿತ್ತು. ಕೇಳಿ ಕೇಳಿ ಬೇಸರ ಬಂತು ಲಿಂಗಪ್ಪನಿಗೆ. ಒಂದೇ ಗತ್ತು, ಒಂದೇ ಹಾಡು, ಅದೇ ಕಂಚಿನ ತಾಳಗಳ ದನಿ – ಕಿವಿ ಕಿವುಡಾಗು ವಂತಿತ್ತು. ಲಿಂಗಪ್ಪನ ಲಕ್ಷ್ಯ ಮತ್ತೆ ಚಿಮಣಾಳ ಕಡೆಗೆ ಹಾರಿತು. ಇಂದು ಅವಳನ್ನು ಕೇಳಿಯೇಬಿಡಬೇಕು. ಅವಳನ್ನು ಮನವೊಲಿಸಿಯೇ ತೀರಬೇಕು. ಮಠದ ಸೆರೆಮನೆಯಲ್ಲಿ ಇನ್ನೆಷ್ಟು ದಿನ ಅವಳಿರಬೇಕು? ವಾಡೆಯ ಕಬಜಾ ತೆಗೆದು ಕೊಂಡು ಅಲ್ಲಿ ಅವಳೊಡನೆ ಸುಖವಾಗಿರಬೇಕು. ಸಾತೇನಹಳ್ಳಿಯ ಗೌಡರ ಮಗಳನ್ನು ಪಡದಪ್ಪನವರೇನು ಗೊತ್ತುಮಾಡುತ್ತಾರೋ ಇಲ್ಲವೋ? ಆಗದ ಮಾತನ್ನು ಕಟ್ಟಿಕೊಂಡೇನು ಫಲ? ಚಿಮಣಾ ಇಲ್ಲಿಯೇ ಕೈಯಳತೆಯಲ್ಲೇ ಇದ್ದಾಳೆ. ಅವಳು ಮನಸ್ಸು ಮಾಡುವದೊಂದೇ ಉಳಿದದ್ದು.

ಲಿಂಗಪ್ಪಗೌಡನ ಆತುರ ಹೆಚ್ಚಿತು. ಎದೆ ಬಡಿದುಕೊಳ್ಳಲಾರಂಭಿಸಿತು. ಚಿಮಣಾಳ ರೂಪ ಕಣ್ಣಿಗೆ ಕಟ್ಟಿದಂತಾಯಿತು. ಕುಳಿತಲ್ಲಿಂದಲೇ ಹೆದರಿದ ಇಲಿ ಯಂತೆ ಪಿಳಿಪಿಳಿ ಕಣ್ಣು ಬಿಟ್ಟ. ಇನ್ನು ಎಷ್ಟೊತ್ತು ದಾರಿಕಾಯಬೇಕು? ತಾನೇಕೆ ದಾರಿಕಾಯಬೇಕು? ಊರ ಗೌಡನಾಗಿ, ತನ್ನ ಸುಖ ಇನ್ನೊಬ್ಬರ ಮರ್ಜಿಯ ಮೇಲೆ ಅವಲಂಬಿಸಬೇಕೆ? ಚಿಮಣಾಳಿಗೆ ಮನಸ್ಸಿಲ್ಲದಿದ್ದರೆ ಅವಳಿಗೆ ಒತ್ತಾಯ ತರಲೇಬೇಕು. ಹೌದು, ಕೆಲ ವಿಷಯಗಳಲ್ಲಿ ತಿಳಿಹೇಳುವದು ಅಸಾಧ್ಯ.

ಭಜನೆ ರಂಗಿಗೇರಿತ್ತು. ತಾಳ ಕಟಿಯುವ ಲಯ ಕ್ರಮವಾಗಿ ದ್ರುತಕ್ಕೆ ಏರಿತು. ಕಾದ ಹಂಚಿನ ಮೇಲೆ ನಿಂತವರಂತೆ ಭಜಕರು ಚಡಪಡಿಸುತ್ತಿದ್ದರು. ಸುತ್ತಲಿನ ವಾತಾವರಣವೇ ತಲೆತಿರುಗಿದವರಂತೆ ಆ ಲಯದ ಸುತ್ತಲೂ ತಿರುಗು ವಂತಿತ್ತು. ಗತ್ತು ಮುಕ್ತಾಯಕ್ಕೇ ಬಂದಿತ್ತು.

ಲಿಂಗಪ್ಪನ ಕಿವಿಗೆ ಇದೆಲ್ಲ ಅಸಹ್ಯವಾಯಿತೇನೋ! ಭಜನೆಯ ದನಿ ಧುಮ್ಮಿ ಕ್ಕುವ ಜಲಪಾತದಂತೆ ಕಿವಿಗಳನ್ನು ತುಂಬಿತು. ಕೂಡಲೇ ಭಜನೆ ಮಾಡುತ್ತಿದ್ದ ವರ ಕಡೆಗೆ ತಿರುಗಿದ. ಭಜನೆಯ ದನಿಯನ್ನೂ ಮೀರಿಸುವ ದನಿಯಲ್ಲಿ "ರಾತ್ರಿ ಭಾಳ ಆಗೇತಿ. ಸಾಕ್ಮಾಡ್ರಿ ಭಜನಿ" ಎಂದು ಕೂಗಿಕೊಂಡ. ಭಜನೆಯಲ್ಲಿಯೇ ದಂಗಾಗಿದ್ದ ಅವರಾರಿಗೂ ಕೇಳಿಸಿದಂತಿರಲಿಲ್ಲ. ಲಿಂಗಪ್ಪ ಸಿಟ್ಟಿಗೆದ್ದ. ಮತ್ತೊಮ್ಮೆ ಅದೇ ಮಾತುಗಳನ್ನೇ ಇನ್ನೂ ಹೆಚ್ಚು ಎತ್ತರದ ದನಿಯಲ್ಲಿ ಕೂಗಿದ.

:: ೪೭ ::

ಲಿಂಗಪ್ಪನ ಮಾತು ಕೇಳಿ ಭಜನೆ ಮಾಡುತ್ತಿದ್ದವರಿಗೆಲ್ಲ ಆಶ್ಚರ್ಯವಾಯಿತು.
ತಲೆಯೆತ್ತಿ ಅವನ ಕಡೆಗೆ ನೋಡಿದರು. "ಜೇ, ಜೇ, ಊರಾಗ ಜನಾ ಉರಿ ಬಂದು
ಹುರದು ಹೋಗಾಕ ಹತ್ಯಾರು. ಅದಕ್ಕ ದೇವರ ಭಜನಿ ನಡದೈತಿ. ಇದೊಂದು
ರಾತ್ರೀನಾರ ಮಾಡಬೇಕರಿ" ಎಂದು ಬಿಳಿಮೀಸೆಯ ಮುದುಕನೊಬ್ಬ ತನ್ನ ಅಭಿ
ಪ್ರಾಯವನ್ನು ವ್ಯಕ್ತಪಡಿಸಿದಾಗ, ಕೂಡಿದ ಜನರೂ ಅದನ್ನು ಒಪ್ಪಿದರು.

ಲಿಂಗಪ್ಪ ಹುಬ್ಬುಗಂಟಿಕ್ಕಿದ. "ನನಗ ಈ ಭಜನಿ ಕೇಳೇ ತಲಿಶೂಲಿ
ಎದ್ದೈತಿ. ಕೇಳಾಕೂ ಆಗೂಣಿಲ್ಲ" ಎಂದು ನುಡಿದವನೇ ಮಲಗಲು ಹೊರಟ.

ಹಿರೇಕುರುಬ ಮಲ್ಲ ಎದ್ದು ಬಂದು ಗೌಡರ ಕೈಹಿಡಿದು ನೋಡಿ, ಗಾಬರಿ
ಯಾಗಿ, "ಮೈ ಕಾವೇರೇತಲ್ರಿ ? ಗೌಡರಿಗೂ ಉರಿ ಬಂದಾವು ಕಾಣತೈತಿ" ಎಂದು
ಹೇಳಿದ. ಆ ಒಂದು ಮಾತು ಕುಳಿತವರೆಲ್ಲರಲ್ಲಿಯೂ ನಡುಗು ಹುಟ್ಟಿಸಿತು.
ಲಿಂಗಪ್ಪನೂ ನಡುಗಿದ. ಅವನ ಮೈ ಬೆವರಿತು. ಆದರೆ ಅದನ್ನು ಒಪ್ಪುವ ಮನ
ಸ್ಥಿತಿಯಲ್ಲಿ ಅವನಿರಲಿಲ್ಲ. ಪಿಡುಗು ತನ್ನ ಹತ್ತಿರ ಕೂಡ ಹಾಯಲಾರದೆಂದು
ಅವನಿಗೆ ಹೇಗೋ ಮನವರಿಕೆಯಾಗಿಬಿಟ್ಟಿತ್ತು. "ಮಳ್ಳನನಮಗನೇ. ಕಂಬಳಿ
ಹೊತಗೊಂಡು ಬೆಚ್ಚಗ ಕುಂತಿದ್ನಿ. ಮೈ ಬಿಸಿ ಐತಿ. ನೀರ ಹಾಕಿ ಈಟೊತ್ತನಾಗ
ಗಾಂಜೀ ಮಿದ್ದಿದಿ, ಅದಕ ನಿನ್ನ ಕೈ ತಣ್ಣಗಾಗ್ಯಾವು. ಆ ಕೈಲೇ ಮುಟ್ಟಿದರ ನನ್ನ
ಬೆಚ್ಚಗ ಹತ್ತದ ಏನ ಮಾಡೀತು ?" ಎಂದು ಕಾರಣವೊಂದನ್ನು ಹುಡುಕಿ ತೆಗೆದು
ಹೇಳಿದ. ಅಲ್ಲಿ ನಿಲ್ಲುವದೂ ಅವನಿಂದಾಗಲ್ಲಿಲ್ಲ. ಮಲಗುವ ನೆವ ಮಾಡಿಕೊಂಡು
ಒಳಗೆ ಹೊರಟುಹೋದ.

ಲಿಂಗಪ್ಪನ ಮೈ ನಿಜವಾಗಿಯೂ ಕಾವೇರಿತ್ತು. ಇಡೀ ಮಧ್ಯಾಹ್ನವೆಲ್ಲ
ಚಿಮಣಾಳ ಬಗ್ಗೆ ವಿಚಾರ ಮಾಡಿ ಮಾಡಿ ತಲೆ ಕಾಯ್ದಿತ್ತು. ಪರಿತಾಪ ಮೈಯಲ್ಲೂ
ಹರಡಿತ್ತು. ಇಂದು ಬಯಕೆಯನ್ನು ಈಡೇರಿಸಲೇಬೇಕಾದ್ದರಿಂದ ಮನಸ್ಸಿನ ಆತುರ
ಜ್ವರದಷ್ಟು ತೀವ್ರವಾಗಿತ್ತು. ಭಜನೆಗೆ ಕುಳಿತಿದ್ದ ಕೆಲವು ಕಿಡಿಗೇಡಿಗಳಿಗೆ ಈ ಅರ್ಥ

ಹೊಳೆಯಿತೇನೊ! ಲಿಂಗಪ್ಪನ ಬೆನ್ನುಹಿಂದೆಯೇ ತಂತಮ್ಮ ಕಣ್ಣುಗಳಲ್ಲಿ ಮಾತಾಡಿಕೊಂಡರು. ಗೌಡರು ಒಳಗೆ ಚಿಮಣಾಳನ್ನು ಕಾಣಲೆಂದೇ ಹೋದರೆಂದು ತರ್ಕಿಸಿ, “ಇನ್ನವ್ಯಾಗ ಗೌಡರ ಉರೀ ಇಳಿತಾವಲೇ !” ಎಂದು ಹೇಳಿ ಒಬ್ಬ ಖಿಕ್ಕೆಂದು ನಕ್ಕ.

“ಹಾಗಾರ ಹರೇದವರಿಗೆ ಬರೂ ಉರಿ ಬಂದಿದ್ದವನಬಾರದಽ!” ಎಂದು ಇನ್ನೊಬ್ಬ ನಿರ್ಲಕ್ಷ್ಯದಿಂದೆಂಬಂತೆ ರಾಗವೆಳೆದು, ನಗೆ ತಡೆಯಲಾರದೆ ಕಿಸಿಕಿಸಿ ನಗುತ್ತ ಬಾಯ ಮೇಲೆ ಕೈಯಿಟ್ಟುಕೊಂಡ.

ಭಕ್ತಿಯಿಂದ ಕಣ್ಣು ಮುಚ್ಚಿ ಭಜನೆ ಮಾಡುತ್ತಿದ್ದ ಕೆಲವರಿಗೆ ಇವರ ಮಾತು ಕೇಳಿ ಸಿಟ್ಟು ಬಂತು. “ಸಾಕಮಾಡ್ರಿಲೇ ಆ ಹೊಲಸ ಮಾತು ಆಡೂದು. ಅದನ್ನ ಆಡೂದಽ ಬೇಕಾಗಿದ್ದರ, ಹೊಲೆಗೇರಿಗೆ ಇಲ್ಲಾ ಮಾದಿಗ್ಗೇರಿಗೆ ನಡೀರಿ” ಎಂದು ಗರ್ಜಿಸಿದರು. ಆದರೆ ಅವನು ಇನ್ನೂ ಮಾತಾಡುವದಿತ್ತು. ಇಬ್ಬರೂ ತಮ್ಮ ತಮ್ಮಲ್ಲಿಯೇ ಪಿಸುಗುಟ್ಟಿದರು. ಅದರಲ್ಲಿ ಒಬ್ಬ “ಕಾಕಾ, ಮಾದರ ಮಲ್ಲಿ ಹಡದು, ಕೂಸು ಹೋಗಿ ಅಳಕೊಂತ ಕುಂತಾಳು. ಇಲದಿರಕ ಈ ಗೌಡರು ಆಕೀ ಮನೀಗೆ ಹೋಗದ ಮಠದಾಗ ಕುಂತಾರಃ?” ಎಂದು ಗೌಡರ ಚರಿತ್ರೆಯನ್ನು ಸಂಕ್ಷೇಪವಾಗಿ ಗುಸುಗುಟ್ಟಿದ. ಎಷ್ಟು ಮೆಲ್ಲಗೆ ನುಡಿದರೂ ಆ ಮಾತು ಕೆಲವರಿಗೆ ಕೇಳಿಸಿತು.

“ಲೇ, ದೇವರ ಭಜನಿ ನಡದಾಗಽ ಎಂತಾ ಮಾತಾಡತೀರಲೇ? ಮನಸ್ಸಿಟ್ಟು ಭಜನಿ ಮಾಡಬಾರದಽ? ದೇವರು ಕೆಡಗಾಲ ದೂರ ಮಾಡ್ಯಾನು!” ಬಿಳಿ ಮೀಸೆಯ ಮುದುಕ ತಡೆಯಲಾರದೆ ಗುಡುಗಿದ. ಕೂಡಲೆ ಎಲ್ಲರೂ ಸುಮ್ಮಗಾದರು.

“ಕಾಕಾ, ಕುರುಬರ ಮಾಯಪ್ಪ ಒಂದ ಪದಾ ಹೇಳತಾನಂತ ಕೇಳರಿ. ಆ ಪದಾ ಮುಗದ ಮ್ಯಾಗ ಮತ್ತ ಒಂದು ಗತ್ತು ಓಂ ನಮಃಶಿವಾಯ ಆಗಲಿ” ಎಂದು ಒಬ್ಬ ಎದ್ದು ನಿಂತು ಹೇಳಿದ.

“ಆಗಲೆಪಾ ಮಾಯಪಾ, ದೇವರ ಮ್ಯಾಗಿನ ಪದಾ ಹೇಳ ಮಗನ” ಎಂದು ಬಿಳಿಮೀಸೆಯ ಮುದುಕ ಬೆನ್ನುಚಪ್ಪರಿಸುವಂತೆ ಹೇಳಿದ.

ಮಾಯಪ್ಪ ಕೆಮ್ಮಿ ಗಂಟಲು ಸಾಫಮಾಡಿಕೊಂಡು ಏಕತಾರಿಯನ್ನು ಹಿಡಿದ. “ಈ ಮಾತು ಕೇಳರಿ ಬಲು ಮಾಜಾ” ಎಂಬ ಹಾಡನ್ನು ಪ್ರಾರಂಭಿಸಿದ. ಎಲ್ಲರೂ ಆ ಹಾಡಿನ ಗುಂಗಿನಲ್ಲಿಯೇ ತಲ್ಲೀನರಾದರು. ಮಾಯಪ್ಪನದು ಕಂಚಿನಂಥ ಕಂಠ. ಮಧ್ಯರಾತ್ರಿಯ ನೀರವತೆಯಲ್ಲಿ ಹಾಡು ಎಲ್ಲ ಕಡೆಗೂ ವ್ಯಾಪಿಸಿತು.

ಲಿಂಗಪ್ಪಗೌಡ ಒಳಗೆ ದೀಪ ಹಚ್ಚಿದ. ಹಾಸಿಗೆಯ ಮೇಲೆ ಕುಳಿತು ಒವೇ
ಕೆಮ್ಮಿದ. ತಾನು ಬಂದಿರುವದನ್ನು ಗಮನಿಸಿ ಚಿಮಣಾ ತಾನಾಗಿಯೇ ತನ್ನೆಡೆ
ಬರಬಹುದೆಂದು ಅವನ ವಿಚಾರ. ಆದರೆ ಎಷ್ಟು ನಿರೀಕ್ಷಿಸಿದರೂ ಚಿಮಣಾ ಬರಲಿಲ್ಲ.
ಲಿಂಗಪ್ಪಗೌಡನಿಗೆ ಬೇಸರವೆನಿಸಿತು. ಅದನ್ನು ಕಳೆದುಕೊಳ್ಳಲು ಭಜನೆಯ ಕಡೆ
ಲಕ್ಷ್ಯ ಹಾಕಿದ. ಮಾಯಪ್ಪನ ಹಾಡು ನಡೆದೇ ಇತ್ತು. ಅಂದ ಸಾಲನ್ನೇ ತಿರು
ತಿರುಗಿ ಹಾಡುತ್ತಿದ್ದ.

"ಜೀವಕ್ಕ ಹೇಳತೈತೊ ದೇಹಾ
ಬಿಟ್ಟು ಹೋಗಬ್ಯಾಡೊ ಮಹರಾಯಾ"

ಲಿಂಗಪ್ಪನಿಗೆ ಅರ್ಥವಾಗಲಿಲ್ಲ. ಮತ್ತೆ ಚಿಮಣಾಳ ಕಡೆಗೆ ಲಕ್ಷ್ಯ ಹ
ಯಿತು. ಏನು ಮಾಡಿದರೆ ಚಿಮಣಾ ಬರಬಹುದು? ತಾನೇ ಹೋದರಾಯಿತೆಂದ
ಅಲ್ಲಿಂದ ಎದ್ದ. ಒಮ್ಮೆಲೆ ಹೋಗಲು ಧೈರ್ಯವಾಗಲಿಲ್ಲ. ಅಲ್ಲಿಯೇ ಶತಪ
ಹಾಕಹತ್ತಿದ. ಅದೂ ಬೇಸರ ಬಂತು. ಚಿಮಣಾಳ ಕೋಣೆಯ ಕಡೆಗೆ ನಡೆದ
ಬಾಗಿಲು ಹಾಕಿತ್ತು. ಹಳೆಯ ಕಾಲದ ಬಾಗಿಲವಾದ್ದರಿಂದ ಅದು ಬಿರುಕು ಬಿಟ್ಟಿತ್ತು.
ಲಿಂಗಪ್ಪ ಬಿರುಕಿನೊಳಗಿಂದ ನೋಡತೊಡಗಿದ. ಹೊರಗೆ ಮಾಯಪ್ಪನ ಹಾಡು
ಕೇಳುತ್ತಲೇ ಇತ್ತು.

ನಮ್ಮ ವಾರಿಗಿ ಗೆಳೆತನ ಲಕ್ಕ
ನಾವಿಬ್ಬರು ಮುತ್ತು ಮಾಣಿಕ್ಯ"

ಲಿಂಗಪ್ಪನ ಕಿವಿಯಷ್ಟೇ ಆ ಹಾಡನ್ನು ಕೇಳುತ್ತಿದ್ದವು. ಲಕ್ಷ್ಯವೆಲ್ಲ ಬಿರುಕಿ
ನೊಳಗಿಂದ ಕಾಣುವ ದೃಶ್ಯದ ಕಡೆಗೇ ಇತ್ತು. ಚಿಮಣಾ ಮಲಗಿರಲಿಲ್ಲ. ಕೂಸನ್ನು
ತೊಡೆಯ ಮೇಲೆ ಹಾಕಿಕೊಂಡು ತಪ್ಪಡಿಸುತ್ತ ಕುಳಿತಿದ್ದಳು. ಮುಖ ಕೂಸಿ
ನೆಡೆಗೆ ಬಾಗಿತ್ತು. ಕೈ ಕೂಸಿನ ತಲೆಯನ್ನು ನೇವರಿಸುತ್ತಿತ್ತು. ಮುಖದ ಮೇಲೆ
ಬಿದ್ದ ದೀಪದ ಬೆಳಕಿನೊಡನೆ ವಿಷಾದದ ಛಾಯೆಯೊಂದು ಪಸರಿಸಿತ್ತು. ಲಿಂಗಪ್ಪ
ಸ್ವಲ್ಪ ಹೊತ್ತು ಅವಳನ್ನೇ ದಿಟ್ಟಿಸಿ ನೋಡಿದ. ಅವನ ಆತುರ ಹೆಚ್ಚಿತು. ಬಾಗಿಲ
ಚಿಲಕವನ್ನು ಸಪ್ಪಳ ಮಾಡಿ ತಾನು ಬಂದಿರುವದನ್ನು ಸೂಚಿಸಿದ. ಮಾಯಪ್ಪ
ಹಾಡುತ್ತಿದ್ದ.

" ನಮನಿಮಗಿನ್ನ ಇಲ್ಲೋ ಕೆಡುಕ
ಈ ಕೂತಿ ಕುತಿಗಿ ಕೊಯ್ಯುವದಕ"

ಚಿಲಕದ ಸಪ್ಪಳವನ್ನು ಕೇಳಿ ಚಿಮಣಾ ಚಟ್ಟನೇ ಎದ್ದಳು. ಕೂಸನ್ನು ಜೋಳಿಗೆಯಲ್ಲಿ ಮಲಗಿಸಿ ಬಾಗಿಲೆಡೆಗೆ ಬಂದು ನಿಂತಳು. ಲಿಂಗಪ್ಪನ ಎದೆ ಧಡ ಧಡ ಬಡಿದುಕೊಂಡಿತು. ಚಿಮಣಾ ಒಳಚಿಲಕ ಹಾಕಿದ್ದನ್ನು ಖಾತ್ರಿ ಮಾಡಿ ಕೊಂಡು, ಇನ್ನೊಂದು ಬೆಣೆ ಹಾಕಿ, ತಿರುಗಿ ತನ್ನ ಹಾಸಿಗೆಯ ಮೇಲೆ ಹೋಗಿ ಕುಳಿತಳು.

ಕೂಸಿಗೆ ಇನ್ನೂ ನಿದ್ದೆ ಹತ್ತಿರಲಿಲ್ಲವೇನೋ, ತಾಯ ಮಡಿಲು ತಪ್ಪಿದ್ದಕ್ಕೆ ಅಳಹತ್ತಿತು. ಚಿಮಣಾ ಅಂತಃಕರಣ ಉಕ್ಕಿಬಂದು ಮತ್ತೆ ಅದನ್ನು ತೊಡೆಯ ಮೇಲೆ ಹಾಕಿಕೊಂಡು ತಪ್ಪಡಿಸಿದಳು. ಬೇಗ ಮಲಗಲೆಂದು ಮೊಲೆಯೂಡ ಹತ್ತಿದಳು.

ಲಿಂಗಪ್ಪನ ತಾಳ್ಮೆ ತೀರಿತು. ಅವನು ಈ ನೋಟಕ್ಕೆ ಹುಚ್ಚನಂತಾಗಿದ್ದ. ಬಾಗಿಲು ಧಡಧಡನೆ ಬಡಿದ. 'ಚಿಮಣಾ' ಎಂದು ಕೂಗಿದ. "ಯಾರವರು ?" ಚಿಮಣಾ ಗಾಬರಿಯಿಂದಲೇ ಕೇಳಿದಳು. "ನಾ ಚಿಮಣಾ, ನಾನು. ಬಾಗಲಾ ತೆರಿ" ಲಿಂಗಪ್ಪ ಅಂಗಲಾಚಿದ. ಅವನ ದನಿಯನ್ನು ಕೇಳಿ ಚಿಮಣಾ ಕಲ್ಲಾದಳು. ಮುಖದಲ್ಲಿ ನಿಷ್ಠುರತೆ ಮೂಡಿತು. ಕೂಸನ್ನು ಮತ್ತೆ ಜೋಳಿಗೆಯಲ್ಲಿ ಮಲಗಿಸಿ ದಳು. ದೃಢ ನಿರ್ಧಾರದಿಂದ ಹಾಸಿಗೆಯ ಮೇಲೆ ಕುಳಿತಳು. ಲಿಂಗಪ್ಪ ಮತ್ತೆ ಬಾಗಿಲು ನೂಕಿದ. ಚಿಮಣಾಳಿಂದ ಉತ್ತರವೇ ಬರಲಿಲ್ಲ.

ಚಿಮಣಾ ಬೇಸರಗೊಂಡಿದ್ದಳು. ಒಂದಿಲ್ಲೊಂದು ದಿನ ಈ ಪರೀಕ್ಷೆ ತನಗೆ ಕಾದಿಟ್ಟದ್ದೇ ಎಂದು ಅವಳಿಗೆ ಮನವರಿಕೆಯಾಗಿತ್ತು. ಯಶವಂತರಾಯರಲ್ಲಿಯೇ ತಾನೇಕೆ ಇರಲಿಲ್ಲವೆಂದು ಮನಸ್ಸು ಮಿಡುಕಿತು. ಒಮ್ಮೆ ಹದಗೆಟ್ಟ ಬಾಳು ಹೇಗಿದ್ದರೇನು, ಎಂಬ ಬೇಸರದಲ್ಲಿ ಪಡಪಯ್ಯನವರ ನೆರಳಾಗಿ ಬಂದುಬಿಟ್ಟಿದ್ದಳು. ಇಲ್ಲಿ ದಿನ ನಿತ್ಯವೂ ಹರಿದು ತಿನ್ನುವ ಬೇಸರದೊಡನೆ ಅವಳು ಆಟವಾಡಬೇಕಾ ಗಿತ್ತು. ವೈಯಕ್ತಿಕ ಜೀವನದ ಸುಖದುಃಖಗಳನ್ನೂ ಕಳೆದುಕೊಂಡಿದ್ದಳು. ಯಮುನಾಗಾವಿಯೊಮ್ಮೆ ದಾದಾನ ನೆನಪು ಬಂದು ಬದುಕಿನಲ್ಲಿ ಆಸೆಯನ್ನು ಹುಟ್ಟಿಸು ತ್ತಿತ್ತು. ಮಿಂಚಿನಂತೆ ಬಂದು ಮಾಯವಾಗುವ ಆಸೆ ಅದು. ಮತ್ತೆ ಉಳಿಯು ವದು ಕತ್ತಲೆಯೇ! ಆದರೆ ಇತ್ತಿತ್ತಲಾಗಿ ಆ ಬೇಸರವೂ ರೂಢಿಯಾಗಿತ್ತು. ತನ್ನ ಗತಿ ಇದೇ ಎಂದು ಮನಗಂಡಾಗ ಒಂದು ನೀರಸ ಸಮಾಧಾನ ಅವಳನ್ನು ಆವರಿಸಿ ಕೊಂಡಿತ್ತು. ಅದೂ ಬಹಳ ದಿನ ಉಳಿಯಲಿಲ್ಲ. ಅಂದು ರಾತ್ರಿ ಪಡದಯ್ಯನವರು

ತನ್ನ ತಪ್ಪನ್ನು ಮುಚ್ಚಿಕೊಳ್ಳಲು ತನ್ನನ್ನು ನಾಲ್ಕು ಜನರೆದುರಿಗೆ ಲಿಂಗಪ್ಪನಿಗೆ ಒಪ್ಪಿಸಿದಾಗ ಅವಳ ಮನಸ್ಸಿಗೆ ಮತ್ತೊಂದು ಬಲವಾದ ಆಘಾತವಾಗಿತ್ತು. ಒಮ್ಮೆ ಶೀಲವನ್ನು ಕಳೆದುಕೊಂಡ ಅವಳಿಗೆ ಪ್ರತಿಭಟಿಸಲೂ ಕೂಡ ಸ್ವಾತಂತ್ರ್ಯವಿರಲಿಲ್ಲ. ಅಂದಿನಿಂದ ಲಿಂಗಪ್ಪನ ಆಸೆಗಣ್ಣು ಗಿಡಗನಂತೆ ಅವಳ ಸುತ್ತ ಹಾರಾಡುತ್ತಿತ್ತು. ಹೊಸದೊಂದು ಭಯ ಮೂಡಿತ್ತು.

ಮೋಡಿಯಾಟವನ್ನಾಡಿ ಹೊರಟುಹೋಗುವ ಸುಡುಗಾಡಸಿದ್ಧನಂತೆ ಪಡದಯ್ಯನವರು ಮಠ ಬಿಟ್ಟು ಹೊರಟ ಮೇಲಂತೂ ಈ ಭಯ ಇನ್ನೂ ಸ್ಥಿರ ವಾಯಿತು. ತಾನು ಲಿಂಗಪ್ಪನಿಗೆ ಏಳು ದಿನಗಳ ಅವಧಿಯನ್ನು ಕೊಟ್ಟದ್ದೇನೋ ನಿಜ. ಅದರಲ್ಲಿ ಯಾವ ಬಲವೂ ಇರಲಿಲ್ಲ. ಇಂದಿನ ಸಾವನ್ನು ನಾಳೆಗೆ ದೂಡಿ ದಂತಾಗಿತ್ತು. ಆದರೆ ಸಾವನ್ನು ಕೊನೆಯವರೆಗೆ ಹೊರದೂಡುವದಾದರೂ ಹೇಗೆ? ದೂಡಿ ಮಾಡುವದಾದರೂ ಏನು ? ಅದಕ್ಕಿಂತ ಬಿಡುಗಡೆಯೇ ಸಾವಿರ ಪಾಲು ಸುಖವಾಗಿ ಕಂಡಿತು. ಲಿಂಗಪ್ಪನಿಗೆ ದುಡ್ಡಿನ ಬಲ, ಅಧಿಕಾರ, ಜನರ ಬೆಂಬಲ ಎಲ್ಲ ಇದ್ದವು. ತಾನು ಪ್ರತಿಭಟಿಸಿದರೆ ಕೇಳುವವರಾರೂ ಇಲ್ಲ. ಈ ವಿಚಾರ ದಿಂದಲೇ ಚಿಮಣಾಳ ಕಣ್ಣೀರು ತುಳುಕಿದವು.

ಬಾಗಿಲು ಮತ್ತೊಮ್ಮೆ ಧಡಧಡ ಸಪ್ಪಳ ಮಾಡಿತು. ಪ್ರತಿಭಟಿಸುವದು ಸಾಧ್ಯವೇ ಇಲ್ಲ. ಆದರೆ ಲಿಂಗಪ್ಪನಿಗೆ ಒಪ್ಪುವದೂ ಸಾಧ್ಯವಿಲ್ಲ. ಏನು ಮಾಡಿದರೂ ಅವನೇನು ಬಾಗಿಲು ಬಡಿಯುವದನ್ನು ಬಿಡಲಾರ. ಹೊರಗೆ ಭಜನೆ ನಡೆದಿದೆ. ಎಷ್ಟೋ ಜನರು ಸೇರಿದ್ದಾರೆ. ಅವನಿಗೆ ಅವರ ಭಯವೂ ಇಲ್ಲ, ನಾಚಿಕೆಯೂ ಇಲ್ಲ. ಪಾಪ ಬೀದಿಗೆ ಬಂದರೂ ಕೇಳುವವರಿಲ್ಲವಾಗಿತ್ತು. ಆದರೂ ಕೊನೆಯ ಪ್ರಯತ್ನವನ್ನು ಮಾಡಿ ನೋಡೋಣವೆಂದಳು. ಲಿಂಗಪ್ಪ ಜೋರಾಗಿ ಬಾಗಿಲು ಬಡಿದು "ಚಿಮಣಾ, ಬಾಗಲಾ ತೆರೀತಿಯೋ ಇಲ್ಲೋ?" ಎಂದು ಅವಡುಗಚ್ಚಿ ಕೇಳಿದ. "ತಗಿಯೂದಿಲ್ಲ" ಎಂದು ಚೀರಿ ಹೇಳಿದಳು ಚಿಮಣಾ. "ಹಾಗಾರ ಬಾಗಲಾ ಮುರದು ಒಳಗ ಬರತೇನ ನೋಡ" ಲಿಂಗಪ್ಪ ಹುಚ್ಚುಚ್ಚಾಗಿ ಹೇಳಿದ.

ಅವನ ಕೈಯಲ್ಲಿ ಬಾಗಿಲು ಒದ್ದಾಡಿತು, ನರಳಿತು. ಅವನ ತ್ರಾಣವೆಷ್ಟು ಎಂಬುದು ಚಿಮಣಾಳಿಗೆ ಗೊತ್ತಿತ್ತು. ಇನ್ನು ಪ್ರತಿಭಟಿಸುವದರಲ್ಲಿ ಅರ್ಥವಿಲ್ಲ ವೆಂದೆನಿಸಿತು. ಹೊರಗೆ ಭಜನೆಯಲ್ಲಿ ನಿರತರಾದ ಜನರೂ ತನ್ನ ಸಹಾಯಕ್ಕೆ ಬರಲಾರರೆಂದು ಗೊತ್ತಿತ್ತು. ಹೊರಗೆ ಎಲ್ಲಿಯಾದರೂ ಓಡಿ ಹೋಗಿ ಆಶ್ರಯ

ವನ್ನೂ ಪಡೆಯುವಂತಿರಲಿಲ್ಲ. ಈ ಸಮಯದಲ್ಲಿ ದಾದಾ ಇದ್ದಿದ್ದರೆ, ಎಂದು ಒಂದು ಕ್ಷಣ ಆಸೆ ಮಿಂಚಿತು. ಮರುಕ್ಷಣವೇ ನಿರಾಶೆಯಾಯಿತು. ಇಟ್ಟ ಒಂದೇ ಒಂದು ತಪ್ಪು ಹೆಜ್ಜೆ, ಸಂಪೂರ್ಣವಾಗಿ ತಪ್ಪುದಾರಿಗೆಳೆದಿತ್ತು. ಹಿಂದಿರುಗುವದು ಸಾಧ್ಯವಿರಲಿಲ್ಲ. ಹಿಂದಿರುಗಿದರೂ ಸರಿಯಾದ ದಾರಿ ಸಿಗುವಂತಿರಲಿಲ್ಲ. ಯಶವಂತ ರಾಯರ ಮನೆಯಲ್ಲಿರಬಹುದಾಗಿತ್ತು. ಆದರೆ ಅದು ದಾರಿಯೇ ಅಲ್ಲ. ನಿಂತಲ್ಲಿಯೇ ನಿಂತರೆ, ದಾರಿಯೇ ನಮ್ಮ ಕಡೆಗೆ ಬರುವದುಂಟೇ?

ದುರ್ದೈವ ಬೇಕೆಂದೇ ಹಟ ಹೂಡಿತ್ತು. ಬೇಕೆಂದೇ ಎಲ್ಲ ದಾರಿಗಳನ್ನೂ ಕಟ್ಟಿತ್ತು. ಈಗ ಉಳಿದಿರುವ ದಾರಿಯೊಂದೇ. ಅದನ್ನು ತಪ್ಪಿಸಲೆಂದೇ ಚಿಮಣಾ ಈ ಸೆರೆಮನೆಯಿಂದ ಹೊರಗೇ ಬಂದಿರಲಿಲ್ಲ. ಅಲ್ಲಿಗೇ ಅವಳ ಜೀವನಪ್ರಯಾಣ ನಿಂತುಬಿಟ್ಟಿತ್ತು. ಒಂದು ಹೆಜ್ಜೆಯನ್ನು ಮುಂದಿಟ್ಟರೂ ಸಾಕು, ಸಾವು ಬರ ಸೆಳೆದುಕೊಳ್ಳಲು ಆತುರವಾಗಿ ನಿಂತಿತ್ತು. ಆದ್ದರಿಂದಲೇ ಮುಂದೆ ಹೋಗಿರಲಿಲ್ಲ. ಯಾರ ಸಹಾಯವನ್ನೂ ಅಪೇಕ್ಷಿಸಿರಲಿಲ್ಲ. ಈಗ ದುರ್ದೈವ ಬಾಗಿಲನ್ನು ನೂಕ ಹತ್ತಿತ್ತು. ಹೊರಗೆ ಬರಲು ಒತ್ತಾಯಪಡಿಸುತ್ತಿತ್ತು. ಒಲ್ಲೆನೆನ್ನಲು ಬಲ ಉಳಿದಿರಲಿಲ್ಲ.

ಚಿಮಣಾಳ ನಿರ್ಧಾರ ಬಲವಾಯಿತು. "ಈಗ ತೆರೀತೇನ ತಡಿ" ಎಂದು ಕೂಗಿ ಹೇಳಿದಳು. ಲಿಂಗಪ್ಪ ಆ ಹೊತ್ತಿಗಂತೂ ಸುಮ್ಮನಾದ. ಹೊರಗಿನಿಂದ ಭಜನೆ ಕೇಳಬಂತು. ಮಾಯಪ್ಪ ಇನ್ನೂ ಅದೇ ಹಾಡನ್ನೇ ಹಾಡುತ್ತಿದ್ದ.

"ಇಲ್ಲ್ಯಾರ ಮುಂದ ಹೇಳತಿ ಅಳದಕ್ಕಿ
ನಿನ್ನ ಮನೀ ಮಾಡಿಕೋ ಜ್ವಾಕಿ.
ನಮನಿಮಗ ಇಲ್ಲೋ ಬಾಕಿ
ನಾ ಹೋಗತೇನಿ ಮನಸೋಕಿ."

ತಿರುತಿರುಗಿ ಅವೇ ಸಾಲುಗಳು ಕಿವಿಯ ಮೇಲೆ ಅಪ್ಪಳಿಸುತ್ತಿದ್ದವು. ಚಿಮಣಾ ಸುತ್ತಲೂ ನೋಡಿದಳು. ಪಡದಪ್ಪನವರು ತಮಗಾಗಿ ಕಾಯ್ದಿಟ್ಟ ಸೆರೆಯ ಬಾಟಲಿಗಳಿದ್ದವು. ಇನ್ನೊಂದು ಕಡೆಗೆ ಲಿಂಗಪ್ಪಗೌಡ ತನಗೆ ಕೊಟ್ಟು ಹೋಗಿದ್ದ ಹೊಸ ಸೀರೆ ಇತ್ತು. ಚಿಮಣಾಳಿಗೆ ಏನು ಹೊಳೆಯಿತೋ, ಹೊಸ ಸೀರೆಯನ್ನುಟ್ಟುಕೊಂಡಳು. ಕೋಣೆಯ ಒಂದು ಬದಿಗೆ ಸರಿದು ಬಾಟಲಿಯಲ್ಲಿದ್ದ ಸೆರೆಯನ್ನೆಲ್ಲ ಮೈಮೇಲೆ ಸುರಿದುಕೊಂಡಳು. ಸೆರೆಯ ವಾಸನೆ ಹೊರಗಿದ್ದ

ಲಿಂಗಪ್ಪಗೌಡನ ಮೂಗಿಗೂ ತಾಕಿತು. ಮತ್ತೆ ಬಾಗಿಲ ಬಿರುಕಿನಲ್ಲಿ ಕಣ್ಣಿಟ್ಟು ನೋಡಿದ. ರಸಿಕತೆಯ ಉನ್ಮಾದವೇರಿತು. "ಹಾಂ, ನೀನೂ ತೀರ್ಥ ಕುಡೀ ತಿರತೀ ಏನು?" ಎಂದು ಕೇಳಿದ. ಉತ್ತರವೇನೂ ಬರಲಿಲ್ಲ. ಲಿಂಗಪ್ಪ ಕಣ್ಣಿಟ್ಟು ನೋಡುತ್ತಿದ್ದ. ಹೊಸ ಸೀರೆಯನ್ನುಟ್ಟ ಚಿಮಣಾ ಈಗ ದೀಪದ ಹತ್ತಿರ ಬಂದಿದ್ದಳು. ಔಡಲ ಎಣ್ಣೆಯ ದೀಪ ನಿಧಾನವಾಗಿ ಉರಿಯುತ್ತಿತ್ತು. ಮೆಲ್ಲಗೆ ಅದನ್ನೆತ್ತಿ ಬಾಗಿಲ ವರೆಗೆ ನಡೆಯುತ್ತ ಬಂದಳು. ವರ್ಷವರ್ಷವೂ ನಿದ್ದೆಯಿಲ್ಲದ ಭೂತದಂತೆ ಕಂಡಳು. ದೀಪದ ಕುಡಿ ಕುಣಿಯುತ್ತಿತ್ತು. ಹೊಸ ಸೀರೆ ಸರಸರ ಸಪ್ಪಳ ಮಾಡುತ್ತಿತ್ತು. ಲಿಂಗಪ್ಪನ ಎದೆ ನಡುಗಿತು.

"ಆತ್ಮರಾಜನಾದ ಬಲು ಸಿಟ್ಟಾ
ಮೂರು ದಾರಿಗೇ ಕೊಳ್ಳಿ ಕೊಟ್ಟಾ"

ಮಾಯಪ್ಪ ಅದೇ ಹಾಡಿನ ಮುಂದಿನ ಪದ್ಯವನ್ನೆತ್ತಿಕೊಂಡು ಹಾಡುತ್ತಿದ್ದ. ಕೂಗಿ ಕೂಗಿ ಅವನ ದನಿ ಒಡೆದಿತ್ತು. ಆದರೂ ಹಾಡುತ್ತಿದ್ದ.

ಚಿಮಣಾ ತೀರ ಬಾಗಿಲ ಹತ್ತಿರವೇ ಬಂದಳು. ಲಿಂಗಪ್ಪ, "ಕೈಯಾಗ ದೀಪಾ ಯಾಕ ತೊಗೊಂಡೀ?" ಎಂದು ಚೀರಿದ. ಚಿಮಣಾ ಉತ್ತರವನ್ನೇ ಕೊಡಲಿಲ್ಲ. ಒಳಚಿಲಕ ಸದ್ದು ಮಾಡಿತು. ಲಿಂಗಪ್ಪನ ಎದೆ ಆತುರದಿಂದ ತೆರೆದ ಬಾಗಿಲಾಗಿತ್ತು. ಹೊರಗೆ ಮಾಯಪ್ಪನ ಹಾಡು ಒಂದೇ ಸವನೆ ಕೇಳುತ್ತಲೇ ಇತ್ತು.

ತೆರೆದ ಬಾಗಿಲಿನಿಂದಲೇ ಉರಿ, ಚಿಮಣಾಳ ಚೀರುವಿಕೆಯೊಡನೆ ಹೊರನುಗ್ಗಿತು. ಚಿಮಣಾಳ ಹೊಸ ಸೀರೆಯನ್ನು ದೀಪ ತನ್ನ ನಾಲಿಗೆಯನ್ನು ಚಾಚಿ ಕಬಳಿಸುತ್ತಿತ್ತು. ಲಿಂಗಪ್ಪ ಭಯದಿಂದ ತೆರೆದ ಬಾಯನ್ನು ಮುಚ್ಚಲೇ ಇಲ್ಲ. ಕಾಲು ಥರಥರ ನಡುಗುತ್ತಿದ್ದವು. ಕಾಲುಗಳಿಗೆ ನಿಲ್ಲಲೂ ತ್ರಾಣವಿರಲಿಲ್ಲ, ಓಡಿ ಹೋಗಲೂ ತ್ರಾಣವಿರಲಿಲ್ಲ. ಉರಿಯ ವೇಗಕ್ಕೋ, ಅಥವಾ ಮರಣದ ಭೀತಿಗೋ ಚಿಮಣಾ ಹೊರಗೇ ಬಂದಳು. ಉರಿಯ ಸೆರಗು ತೀರ ತನ್ನ ಸಮೀಪಕ್ಕೆ ಬಂದದ್ದನ್ನು ನೋಡಿ ಲಿಂಗಪ್ಪಗೌಡ ಒಮ್ಮೆಲೇ ಹೌಹಾರಿದ. ಚಟ್ಟನೇ ಚೀರಿ ಹೊರಗೆ ಓಡಿದ. ಕಟುಕನ ಕೈಯಲ್ಲಿ ಸಿಕ್ಕ ದನ ಚೀರಿದಂತೆ ಅವನ ಆಕ್ರಂದನ ಕೇಳಿತು. ಚಿಮಣಾ ಅಗ್ನಿಜ್ವಾಲೆಯ ಮೂರ್ತಿಯಾಗಿಯೇ ಅವನನ್ನು ಬೆನ್ನಟ್ಟಿದಳು.

ಹೊರಗೆ ಮಾಯಪ್ಪನ ಹಾಡು ಗಕ್ಕನೆ ನಿಂತಿತು. ಭಜನೆಗೆ ಕುಳಿತವರೆಲ್ಲ ಒಳಗೆ ಓಡಿ ಬಂದರು. ನಾಲ್ಕು ಜನರು ಬಗಲಲ್ಲಿ ಕೈಹಾಕಿ ಹಿಡಿದಿದ್ದರೂ ಲಿಂಗಪ್ಪ

ಗೌಡ ಚಳಿ ಬಂದವರಂತೆ ನಡುಗುತ್ತಲೇ ಇದ್ದ. ಇನ್ನು ಕೆಲವರು ಚಿಮಣಾಳ ಸೀರೆಗೆ ಹತ್ತಿದ ಉರಿಯನ್ನು ನಂದಿಸಬೇಕೆಂದು ಅವಳತ್ತ ಓಡಿದರು. ಆದರೆ ಜ್ವಾಲೆ ಅವರನ್ನೇ ನುಂಗುವಂತಿದ್ದದ್ದರಿಂದ ಹೆದರಿ ಹಿಂದೆ ಸರಿದರು. ಮರುಗಳಿಗೆಯಲ್ಲೇ ಚಿಮಣಾ,ಸಿಡಿಲು ನುಂಗಿದ ಗಿಡ ನೆಲಕ್ಕುರುಳುವಂತೆ ಉರಿಯಾಗಿ ನೆಲಕ್ಕೆ ಬಿದ್ದಳು.

ನೆಲಕ್ಕೆ ಬಿದ್ದಿದ್ದರೂ ಸೆರೆಯಲ್ಲಿ ತೊಯ್ದ ಸೀರೆ ದಣದಣ ಉರಿಯುತ್ತಿತ್ತು. ಮಾಳಿಗೆಯನ್ನೇ ಮುಟ್ಟಲು ಹಾತೊರೆಯುತ್ತಿದ್ದ ಆ ಉರಿಯ ಬೆಳಕಿನಲ್ಲಿ ಅಲ್ಲಿ ನಿಂತ ಜನರ ಕಷ್ಟ ದುಃಖಗಳು ಕರಾಳವಾಗಿ ಕಾಣುತ್ತಿದ್ದವು. ಮಠದಲ್ಲಿ ಭಜನೆಗೆಂದು ಸೇರಿದ್ದ ಜನ ಈ ದೃಶ್ಯವನ್ನು ಕಂಡು ಹೆದರಿಕೆಯಿಂದ ದಂಗುಬಡಿದಿದ್ದರು. ಈ ಘಟನೆಯ ಕಾರಣವನ್ನು ಕೇಳುವಷ್ಟು ಅರಿವು ಒಬ್ಬರಲ್ಲಿಯೂ ಉಳಿದಿರಲಿಲ್ಲ. ಕೇವಲ ಜೆಂಕಿಯ ಆಟವನ್ನು ನೋಡುವದೊಂದೇ ಅವರಿಗೆ ಕೆಲಸವಾಯಿತು. ಕೆಲವರಂತೂ ಅಲ್ಲಿ ನಿಲ್ಲಲೂ ಆಗದೆ 'ಜೆಂಕಿ!' 'ಜೆಂಕಿ!' ಎನ್ನುತ್ತ,ಚೀರುತ್ತ ಹೊರಗೆ ಓಡಿದರು.

ಗೋಪಾಲಕೃಷ್ಣನ ಗುಡಿಯಲ್ಲಿಯ ಭಜನೆ ಒಳ್ಳೇ ರಂಗಿಗೇರಿತ್ತು. ತಂಬೂರಿಯೊಂದನ್ನು ಕೈಯಲ್ಲಿ ಹಿಡಿದುಕೊಂಡು ನಾರಾಯಣಾಚಾರಿ ಹಾಡುತ್ತಿದ್ದ. ಉಳಿದವರು ತಾಳ ಕಟೆಯುತ್ತಿದ್ದರು. ಯಾರಿಗೂ ಎಚ್ಚರ ಉಳಿದಿರಲಿಲ್ಲ. ಬಾಳಾಚಾರ್ಯರು ಮಾತ್ರ ಭಜನೆಯಲ್ಲಿ ಸೇರದೆ ಗುಡಿಯ ಹೊರಭಾಗದ ಕಟ್ಟೆಯ ಮೇಲೆ ಕುಳಿತು ಚಿಂತಿಸುತ್ತಿದ್ದರು. ಗೀತೆಯ ಶ್ಲೋಕಗಳೇ ಮರಮುರಳಿ ಅವರ ಮನಸ್ಸಿನಲ್ಲಿ ತಿರುಗುತ್ತಿದ್ದವು. ಅವರಿಗಿಂದು ಸಂಪೂರ್ಣ ಜಾಗರಣೆ. "ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮಿ." ಹೊರಗೆ ಇರುಳಾಗಿತ್ತು; ತಾವು ಜಾಗ್ರತರಾಗಿಯೇ ಕುಳಿತಿದ್ದರು. ಇಷ್ಟಾದರೆ ಆಯಿತೇ? ಕಣ್ಣಿನಲ್ಲಿ ಎಣ್ಣೆಹಾಕಿಕೊಂಡು ಎಚ್ಚರಾಗಿದ್ದರೂ ಇರುಳು ಹೋಗಿ ಬೆಳಗಾಗುವಂತಿರಲಿಲ್ಲ. ಹಾಗಾದರೆ ಏನು ಮಾಡಿದ ಹಾಗಾಯಿತು? ಆಚಾರ್ಯರ ಮನಸ್ಸು ಈ ತೊಡಕನ್ನು ಬಿಡಿಸುವದರಲ್ಲಿಯೇ ಲೀನವಾಗಿತ್ತು.

ಅಂತೆಯೇ ಕುರುಬರ ಮಾಯಪ್ಪ "ಜೆಂಕಿ! ಜೆಂಕಿ!" ಎಂದು ಒದರಿಕೊಂಡಿದ್ದು ಅವರಿಗೆ ಕೇಳಿಸಿರಲಿಲ್ಲ. ಅವನು ಮತ್ತೊಮ್ಮೆ ಅವರ ಕಿವಿಯ ಹತ್ತಿರವೇ ಬಂದು ಕೂಗಿದ. ಆಚಾರ್ಯರು ಬೆಚ್ಚಿಬಿದ್ದರು. ಏನೂ ತಿಳಿಯದವರಂತೆ ಅವನ ಕಡೆಗೆ ತಿರುಗಿ, "ಎಲ್ಲಿ ಹತ್ತೀದ ಜೆಂಕಿ? ಎಲ್ಲಿ?" ಎಂದು ಆರ್ತರಾಗಿ ಕೇಳಿದರು. ಭಜನೆ

ಯಲ್ಲಿ ತಲ್ಲೀನರಾದವರೂ ತಿರುಗಿ ನೋಡಿದರು. "ಮಠದಾಗರಿ.... ಚಿಮಣಾನ ... ಸೀರಿಗೆ ಹತ್ತೈತಿರಿ" ಕುರುಬರ ಮಾಯಪ್ಪ ತಡವರಿಸುತ್ತಲೇ ಹೇಳಿದ.

ಬಾಳಾಚಾರ್ಯರು ಎದ್ದರು. ಏನೇನೋ ಒಟಗುಟ್ಟುತ್ತ ಎದ್ದರು. ಅವರ ಹೆಜ್ಜೆಗಳನ್ನೇ ಉಳಿದ ಜನರೂ ಹಿಂಬಾಲಿಸಿದರು. "ಹೇಣ್ತಿ ಸತ್ತಾಗಿನ ತೊಟ್ಟು ಆಚಾರೆಪ್ಪನ ತಲಿ ತಾಳದಾಗಿಲ್ಲ ಇಲ್ಲ." ಕುರುಬರ ಮಾಯಪ್ಪ ಸಂಕಟದಿಂದಲೇ ನುಡಿದು ಗುಂಪಿನೊಡನೆ ಸಾಗಿದ.

ಸ್ವಲ್ಪ ಹೊತ್ತಿನಲ್ಲಿಯೇ ಮಠದ ತುಂಬ ಜನರ ಕೋಲಾಹಲ ತುಂಬಿತು. ಲಿಂಗಪ್ಪ ಹೌಹಾರಿದವ ಇನ್ನೂ ನಡುಗುತ್ತಿದ್ದ. ಚಿಮಣಾಳ ಬೆಂದ ದೇಹ ನೆಲದ ಮೇಲೆ ಹಾಗೆಯೇ ಬಿದ್ದಿತ್ತು. ಒದ್ದಾಡಲಿಲ್ಲ; ಚೀರಾಡಲಿಲ್ಲ. ಒಮ್ಮೆ ದೊಪ್ಪನೆ ನೆಲಕ್ಕೆ ಮಾತ್ರ ಬಿದ್ದಳು. ಆಗಲೇ ಜೀವ ಹೋಗಿರಬೇಕು. ನೆರೆದ ಜನರಿಂದ ತಿಳಿದ ಸಂಗತಿ ಇದು.

ಕೋಣೆಯಿಂದ ಒಂದೇ ಸವನೆ ಗಂಟಲು ಹರಿಯುವಂತೆ ಅಳುತ್ತಿದ್ದ ಕೂಸಿನ ದನಿ ಕೇಳುತ್ತಿತ್ತು. ಹುಚ್ಚು ಹಿಡಿದವರಂತೆ ಆಚಾರ್ಯರು ಓಡಿ ಹೋಗಿ ಕೂಸನ್ನು ಆಡಿಸಹತ್ತಿದ್ದರು. ಕೂಡಿದವರಿಗೆಲ್ಲ ಏನು ಮಾಡಬೇಕೆಂಬುದೇ ಹೊಳೆಯಲಿಲ್ಲ. "ಪಡದಯ್ಯನೋರು ಎಲ್ಲದಾರ?" ಎಂದು ಯಾರೋ ಕೇಳಿದ್ದಕ್ಕೆ ಅವರು ಊರಲಿಲ್ಲವೆಂದು ಉತ್ತರ ಬಂತು. ಲಿಂಗಪ್ಪಗೌಡರಿಗೆ ಹೆಣ್ಣು ಗೊತ್ತುಮಾಡಲು ಹೋಗಿರುವದಾಗಿ ಇನ್ನೊಬ್ಬರು ಹೇಳಿದರು. ಆಚಾರ್ಯರು ಮಾತ್ರ ಏನೂ ಮಾತಾಡಲಿಲ್ಲ. ಕೈಯಲ್ಲಿ ಕೂಸನ್ನೆತ್ತಿಕೊಂಡು ತಮ್ಮಷ್ಟಕ್ಕೇ ಏನೇನೋ ಗೊಣಗುತ್ತಿದ್ದರು.

ಎಲ್ಲರ ಮುಖಗಳ ಮೇಲೂ ಅಪರಾಧದ ಕಳೆ ಇತ್ತು. ಜೀವಂತ ಪ್ರೇತಗಳಂತೆಯೇ ಎಲ್ಲರೂ ಕಾಣುತ್ತಿದ್ದರು. ಜಗತ್ತಿನಲ್ಲಿ ರಹಸ್ಯವಾಗಿ ನಡೆಯುವ ಪಾಪದ ಮುಚ್ಚಳವನ್ನೇ ತೆರೆದಂತಾಗಿತ್ತು.

ಆಚಾರ್ಯರು ಹೊರ ಹೊರಟರು. ಯಾರಿಗೂ ಅವರನ್ನು ತಡೆಯುವ ಧೈರ್ಯವಾಗಲಿ, ಎಚ್ಚರವಾಗಲಿ ಇರಲಿಲ್ಲ. ಮಠದ ತಲೆಬಾಗಿಲು ದಾಟಿ ಹೊರಗೆ ಬಂದರು. ಇರುಳ ತಂಪು ಚಳಿಗಟ್ಟಿಸುವಂತಿತ್ತು. ಆಚಾರ್ಯರ ಮೈಮೇಲೆ ಹೊದ್ದುಕೊಳ್ಳುವ ಧೋತರ ಕೂಡ ಇರಲಿಲ್ಲ. ಕೈಯಲ್ಲಿ ಹಿಡಿದಿದ್ದ ಕೂಸೂ ಬತ್ತಲೆಯಾಗಿಯೇ ಇತ್ತು. ಆಚಾರ್ಯರಿಗೆ ಯಾವುದರ ಪರಿವೆಯೂ ಇರಲಿಲ್ಲ. ಇಂದು ಅವರ ಬುದ್ಧಿ

ಸಂಪೂರ್ಣವಾಗಿ ತೂಕ ತಪ್ಪಿತ್ತು; ಭಾವನೆಗಳೆಲ್ಲ ಕಲಕುವಮಲಕಾಗಿದ್ದವು. ಮಾತಾಡುತ್ತಿರುವಾಗಲೇ ನಡುವೆ ನಗುತ್ತಿದ್ದರು. ಮರುಕ್ಷಣವೇ ಕಂಬನಿ ಧಾರೆಯಾಗಿ ಹರಿಯುತ್ತಿತ್ತು. ನಿದ್ದೆಯಲ್ಲಿ ನಡೆಯುವವರಂತೆ ನಡೆಯುತ್ತ ಹೊರಗೆ ಬಂದರು. ಹೊರಗೆ ಕೊರೆಯುವ ಚಳಿ ಕೂಡ ಅವರ ನಿದ್ದೆಯನ್ನು ಕವಲಿಸುವಂತಿರಲಿಲ್ಲ.

ಮಾವರ ಚನ್ನ ಬಂದು ತನ್ನ ತಂಪುಕೈಗಳಿಂದ ಅವರ ಕಾಲನ್ನು ಮುಟ್ಟಿದಾಗಲೇ ಅವರಿಗೆ ಎಚ್ಚರಾಯಿತು. ಏನೋ ಕಾಲಿಗೆ ತೊಡಕಿದಂತಾಗಿ ಬೆಚ್ಚಿದರು. "ಏನೋ ಚನ್ನಾ, ಯಾಕ ಬಂದೀ? ಏನ ಬೇಕು?" ಎಂದು ಅರ್ಧ ಎಚ್ಚರದಲ್ಲಿಯೇ ಕೇಳಿದರು. "ಯಪ್ಪಾ, ಇನ್ನೊಂದು ಉಪಕಾರಾ ಕೇಳಲಾಕ ಬಂದೀನ ತಂದೇ" ಎಂದು ಮಾವರ ಚನ್ನ ಆರ್ತನಾಗಿಯೇ ಹೇಳಿದ. ಆಚಾರ್ಯರು ಸಮಾಚಾರವೇನೆಂದು ಕೇಳಿದರು.

ಚನ್ನ ಹೇಳಿದ. ಅವನ ತಂಗಿ ಮಲ್ಲಿ ನಿನ್ನೆಯೇ ಹಡೆದಿದ್ದಳು. ಆದರೆ ಕೂಸು ಹುಟ್ಟಿದ ಕೂಡಲೇ ಸತ್ತುಹೋಗಿತ್ತು. ಎಷ್ಟು ಸಮಾಧಾನ ಹೇಳಿದರೂ ಮಲ್ಲಿಯ ದುಃಖ ಕಡಿಮೆಯಾಗಿರಲಿಲ್ಲ. "ನನ್ನ ಕೂಸು, ಯಪ್ಪಾ ನನ್ನ ಕೂಸು!" ಎಂದು ಹಲುಬುತ್ತಲೇ ಇದ್ದಳು. ಏನು ಮಾಡಿದರೆ ಅವಳ ದುಃಖ ಕಡಿಮೆಯಾದೀತೆಂದು ಚನ್ನ ಕೇಳಲಿಕ್ಕೆ ಬಂದಿದ್ದ. ಅವನೂ ದುಃಖದಿಂದ ಹಣ್ಣಾಗಿದ್ದ.

"ಹೌದು ಚನ್ನಾ, ಎಲ್ಲಾ ಜೀನಸು ಸಿಕ್ಕಾವು. ಆದರ ಆಕಿಗೆ ಕೂಸು ಎಲ್ಲಿಂದ ಸಿಗಬೇಕು? ಆಕಿಗೆ ಕೂಸು ಬೇಕಾಗಿದ್ದೀತು ಚನ್ನಾ. ಆದರ ಕೂಸಿನ್ನ ಕೊಡೋ ಪುಣ್ಯಾತ್ಮರು ಎಲ್ಲಿರತಾರ? ಉಪಾಯ ಇಲ್ಲ" ಎಂದು ಸುಮ್ಮನಾದರು. ಚಳಿಗೆ ಎಚ್ಚರಾಗಿದ್ದರಿಂದ ಕೈಯಲ್ಲಿ ಕೂಸು ಅಳತೊಡಗಿತು. ಆಚಾರ್ಯರು ಸಮಾಧಾನ ಮಾಡತೊಡಗಿದರು. "ಅಳಬ್ಯಾಡ ಬಾಳಾ, ಅಳಬ್ಯಾಡ! ಮನ್ಯಾಗ ಆಕೀ ಕೈಯಾಗ ನಿನ್ನ ಕೊಡತೀನಿ. ನಿನ್ನಂಥಾ ಎಷ್ಟೋ ಹುಡುಗರನ ಆಕಿ ಆಡಿಸ್ಯಾಳ. ನಡೀ ಮನೀಗೆ ಹೋಗೋಣು" ಎನ್ನುತ್ತ ಮುಂದೆ ಹೆಜ್ಜೆ ಹಾಕಿದರು.

ಚನ್ನನಿಗೆ ಆಚಾರ್ಯರ ಮಾತಿನ ಅರ್ಥವಾಗಲಿಲ್ಲ. ಮನೆಯಲ್ಲಿದ್ದ ಹೆಂಡತಿ ಸತ್ತು ಸುಡುಗಾಡು ಕಂಡಿರುವಾಗ ಆಚಾರ್ಯರು ಮಾತಾಡುತ್ತಿರುವದೇನು? ಅವನಿಗೆ ಗಾಬರಿಯಾಯಿತು. ತಡೆಯದಾಗದೆ, "ಯಪ್ಪಾ. ಕರೇ ಹೇಳಿದರೂ ಕೇಳತಿ ಸುಳ್ಳ ಹೇಳಿದರೂ ಕೇಳತಿ. ಅವ್ವಾ ಅವರು ಮನ್ಯಾಗ ಇಲ್ಲ ಯಪ್ಪಾ. ಅವರು ಇಂದ ಹೊಳಿ ದಂಡ್ಯಾಗ ..." ಎಂದು ಹೇಳಿ ಮಾತಾಡುವದಾಗದೆ ಬಿಕ್ಕಿದ.

ಆಚಾರ್ಯರ ಮರಗಟ್ಟಿದ ಹೃದಯ ಈ ನೆನಪಿನಿಂದ ಉರಿದೆದ್ದಿತು. "ಹೌದು ಚನ್ನಾ, ಆಕಿ ಮನ್ಯಾಗ ಇಲ್ಲ. ನೆನಪು ಮಾಡಿದ ಉಪಕಾರಾ ಏನು ಕೊಟ್ಟು ತೀರಸಲ್ಯೊ?" ಎಂದು ಅಂಗಲಾಚಿದರು. "ಈ ಕೂಸಿನ್ನ ಕೊಟ್ಟರ ಉಪಕಾರ ತೀರಿಹೋಗತ್ತೈತಿರಿ" ಎಂದು ಚನ್ನ ಪ್ರತಿಯಾಗಿ ಅಂಗಲಾಚಿದ. "ಯಪ್ಪಾ, ತಾಯಿನ್ನ ಕಳಕೊಂಡ ಕೂಸು, ಮಲ್ಲಿ ಬೆಳಸತ್ತಾಳ, ಯಪ್ಪಾ! ಆ ಕೂಸಿನ್ನ ದೊಡ್ಡದು ಮಾಡೋ ಹೊಣಿ ನಂದು ಯಪ್ಪಾ!" ಎಂದು ವಿವರಿಸಿದ.

ಆಚಾರ್ಯರು ಗೊಂದಲದಲ್ಲಿ ಬಿದ್ದರು. ಚನ್ನ ಹೇಳಿದ್ದು ನಿಜವಿತ್ತು. ಆದರೂ ಕೂಸನ್ನು ಕೊಡುವದಾದರೂ ಹೇಗೆ? ಆಚಾರ್ಯರಿಗೆ ಒಡಲ ಬೇಗೆ ಹುಚ್ಚೆದ್ದು ಸುಡುತ್ತಿರುವಾಗ, ಕೈಗೆ ಸಿಕ್ಕ ಕೂಸು ಅವರನ್ನು ಬೆಸೆದುಕೊಂಡಂತೆ ಇತ್ತು. ಪೂರ್ವಾಪರ ವಿಚಾರವಿಲ್ಲದೆ ಆ ಕೂಸನ್ನು ಹೊತ್ತುತಂದಿದ್ದರು. ಬೆಳೆಯುವ ಜೀವವೊಂದನ್ನು ರಕ್ಷಿಸಲೆಂದು ತಂದಿದ್ದರು. ಸರ್ವನಾಶಸನ್ನಿಹಿತವಾದಾಗ ಇದೊಂದು ಉಳಿಯಲೆಂದು ಎಣಿಸಿದ್ದರು. ಈಗ ಚನ್ನ ಅದನ್ನು ಕೇಳಿದರೆ ಹೇಗೆ ಕೊಡಬೇಕು?

ಮರುಕ್ಷಣವೇ ಇದೆಂಥ ಮೋಹ ಎಂದೆನಿಸಿತ್ತು. ಸಹಧರ್ಮಿಣಿ ತನಗಿಂತ ಮೊದಲೇ ಮುಕ್ತಳಾಗಿ ತನಗೂ ಅದೇ ದಾರಿಯನ್ನೇ ತೋರಿಸಿರಲಿಲ್ಲವೇ? ಬದುಕಬೇಕೆಂಬ ಆಸೆಯಿಂದಲೇ ಈ ಕೂಸನ್ನು ತೆಗೆದುಕೊಂಡಂತಾದೀತು. ಎಲ್ಲರನ್ನೂ ಬೆಳೆಸುವ ದೇವರಿರುವಾಗ ತಾವು ಅದನ್ನು ಬೆಳೆಸುತ್ತೇವೆನ್ನುವದು ಮೂರ್ಖತನವಾದೀತು. ಭಾಗವತದ ಕತೆ ತಮಗೆ ನೆನಪಿರಲಿಲ್ಲವೇ? ಜಡಭರತ ಸಾಯುವ ಮುನ್ನ ಜಿಗರೆಯ ಮರಿಯೊಂದನ್ನು ಸಾಕಿದ್ದು! ಹೀಗೆಯೇ ಮಳೆ ಬರುತ್ತಿದ್ದಾಗ, ಗುಡುಗಿನ ಸಪ್ಪಳಕ್ಕೆ ಗರ್ಭವತಿಯಾದ ಹರಿಣಿಯೊಂದು ಈದಿದ್ದ ಮರಿಯೊಂದನ್ನು ಕರುಣೆಯಿಂದಲೇ ಸಾಕಿದ್ದ. ಅವನ ಗತಿ ಏನಾಗಿತ್ತೆಂಬುದು ತಮಗೆ ಗೊತ್ತಿರಲಿಲ್ಲವೇ? ಹೌದು, ಚನ್ನನಿಗೆ ಕೊಟ್ಟುಬಿಡಬೇಕು. ತನ್ನ ದಾರಿ ಈಗ ನಿಶ್ಚಿಂತವಾದಂತಾಯಿತು.

ಆಚಾರ್ಯರಿಗೆ ಏನೋ ಹೊಳೆದಂತಾಯಿತು. ಒಂದು ಗಳಿಗೆಕಾಲ ಜಾಗೃತಾವಸ್ಥೆಗೆ ಅವರು ಬಂದಿದ್ದರು. ಕೈಯಲ್ಲಿ ಹಿಡಿದ ಕೂಸಿನ ಸ್ಪರ್ಶ ಹಿತವಾಗಿತ್ತು, ಜೀವಂತವಾಗಿತ್ತು. "ಇಕಾ, ಈ ಕೂಸು ಹಿಡೀ ಚನ್ನಾ. ನಿನ್ನ ತಂಗಿಗೆ ಒಯ್ದು ಕೊಡು. ಆಕಿಗೆ ಸಮಾಧಾನ ಆಗಲಿ. ಈ ಕೂಸಿನ್ನ ಛಲೋ ಜ್ವಾಪಾನ ಮಾಡಂತ ಹೇಳು. ನಡೀ ಚನ್ನಾ" ಎಂದು ಹೇಳಿದವರೇ ಕೂಸನ್ನು ಅವನ

ಕೈಯಲ್ಲಿಟ್ಟ ಗಾಳಿ ತುಂಬಿದವರಂತೆ ಬಿರಬಿರನೆ ಹೊರಟುಹೋದರು. ಏನೂ ತಿಳಿಯದೆ ಚನ್ನ ಕೂಸನ್ನೆತ್ತಿಕೊಂಡು ಅವರು ನಡೆದ ದಾರಿಯ ಕಡೆಗೇ ಮಿಕಿ ಮಿಕಿ ನೋಡುತ್ತ ನಿಂತುಬಿಟ್ಟ.

ಆಚಾರ್ಯರು ಗಾಳಿಗಿಂತ ಹಗುರಾಗಿ ದಾರಿ ಸಿಕ್ಕಲ್ಲೆಲ್ಲ ನಡೆದರು. ಅಂದು ಅವರಿಗೆ ನಿರಾಹಾರ, ಮೇಲಾಗಿ ನಿದ್ದೆಯಿರಲಿಲ್ಲ. ಮನಸ್ಸಂತೂ ತನ್ನ ಸ್ವಸ್ಥತೆಯನ್ನು ಎಂದೋ ಕಳೆದುಕೊಂಡಿತ್ತು. ಬೀಳಲಾದ ಮರದಂತೆ ದೇಹ ನಿತ್ರಾಣವಾಗಿತ್ತು. ಆಚಾರ್ಯರು ಅತ್ತಿತ್ತ ಅಲೆದಾಡಿ ಕೊನೆಗೆ ವಾಡೆಯ ಕಟ್ಟೆಯ ಮೇಲೆ ಬಂದು ಕುಳಿತರು. ಪಡುವಣ ದಿಕ್ಕಿನಿಂದ ಗಾಳಿ ಕ್ರೂರವಾಗಿ ಬೀಸುತ್ತಲೇ ಇತ್ತು. ಅದಕ್ಕೆ ಮೈಯೊಡ್ಡಿ ಕುಳಿತ ಆಚಾರ್ಯರಿಗೆ ಮಂಕು ಕವಿದಂತಾಗಿತ್ತು. ಏನೇನೋ ನೆನಪುಮಾಡಿಕೊಳ್ಳಲು ಪ್ರಯತ್ನಿಸಿದರು. ಆದರೆ ಯಾರಾರವೋ ಮುಖಗಳು ಉರಿಯ ಪರಿವೇಷದಲ್ಲಿ ಹೊಳೆದಂತಾದವು. ನೀರಲ್ಲಿ ಮುಳುಗಿದವನ ಕಣ್ಣಿಗೆ, ನೀರೂ ಕೂಡ ಮಸುಕಾಗಿ ಕಾಣುವಂತೆ, ಆಚಾರ್ಯರ ಮನಸ್ಸಿಗೆ ಇತ್ತೀಚಿನ ಘಟನೆಗಳು ಗೋಚರವಾದವು. ದೊಡ್ಡದೊಂದು ಪ್ರವಾಹ ಪಾದಳ್ಳಿಯ ಜೀವನವನ್ನೇ ಉಡುಗಿಕೊಂಡು ಹೋದಂತಾಗಿತ್ತು. ಆಚಾರ್ಯರಿಗೆ ಪ್ರಳಯದ ಕತೆ ನೆನಪಾಗಿತ್ತು. ಉಕ್ಕೇರಿದ ಸಮುದ್ರದಲ್ಲಿ ಭೂಮಿ, ನದಿಯಲ್ಲಿ ಕೊಡ ಮುಳುಗುವಂತೆ ಮುಳುಗುತ್ತಿತ್ತು. ಪ್ರಳಯ-ನಾರುತ ಕಡೆಗೋಲಾಗಿ ಈ ಕಡಲನ್ನು ಕಡೆಯುತ್ತಿದ್ದ. ಗುರುತಿಸಲಿಕ್ಕೂ ಬಾರದಂತೆ, ಆಕಾಶದ ತುಂಬ ಆವರ್ತಕ ಮೇಘಗಳು ಅಚಲವಾಗಿ ವ್ಯಾಪಿಸಿದ್ದವು. ಬೆಳಕಿನ ಒಂದು ಕಿರಣವೂ ಅಲ್ಲಿರಲಿಲ್ಲ. ಆಗ ಉದ್ಧಾರ ಮಾಡುವವರಾರು? ದೇವತೆಗಳೂ ಬೊಬ್ಬೆಯಿಡುತ್ತಿದ್ದ ಕಾಲದಲ್ಲಿ ಬದುಕಿಸುವವರು ಯಾರು?

ಆದರೆ ಬದುಕು ತನ್ನ ಬೀಜವನ್ನು ಅಂಥ ಪ್ರಳಯದ ಬಸಿರಲ್ಲೂ ಕಾಯ್ದಿರಿಸಿತ್ತು. ಯಾವುದೋ ಒಂದು ಜೊಗಸೆಯಗಲದ ಮೀನ ತಿಮಿಂಗಿಲವಾಗಿ ಕೋಡು ಮೂಡಿಸಿಕೊಂಡಿತ್ತು. ವೈವಸ್ವತ ಮನು ಅದರ ಕೋಡಿಗೇ ಹಗ್ಗಹಾಕಿ ಮೇರು-ಶಿಖರವನ್ನೇರಿದ್ದ. ಉಕ್ಕಿ ಬಂದ ಕಡಲು ಕ್ರಮವಾಗಿ ಇಳಿದಂತೆ ಹಗ್ಗದ ಗಂಟು ಅವನು ಇಳಿಯುತ್ತ ಬಂದಿದ್ದ. ಲೋಕ ಮುಂದುವರಿಯಲೆಂದು ಅವನು ಬದುಕಿ ಬಂದಿದ್ದ.

ಆಚಾರ್ಯರಿಗೆ ಅದಕ್ಕಿಂತಲೂ ಹೆಚ್ಚು ನಿರಾಶೆಯಾಗಿತ್ತು. ಮನುವಿಗೇ

ಹುಚ್ಚು ಹಿಡಿಸುವಂಥ ಪ್ರಳಯ ಈಗ ಬಂದಿತ್ತು. ಈ ಪ್ರಳಯ ಅವನದೇ? ಈಗ ಕಾಯುವವರಾರು? ಆಚಾರ್ಯರ ಮನಸ್ಸು ಸಾಮಾನ್ಯಪ್ರಜ್ಞೆಯ ಬೇಲಿಯನ್ನು ದಾಟಿತ್ತು. ಸೂತ್ರ ಹರಿದ ಪಟದಂತೆ ದಿಕ್ಕುಪಾಲಾಗಿ ಓಡುತ್ತಿತ್ತು. ವಾಡೆಯನ್ನೊಮ್ಮೆ ನೋಡಿದರು. ಬಾಗಿಲಿಗೆ ದೊಡ್ಡದೊಂದು ಕೀಲಿ ಬಿದ್ದಿತ್ತು. ಬಾಲ್ಯದಿಂದಲೂ ವಾಡೆಯ ಅವಸ್ಥಾಂತರಗಳನ್ನು ಅವರು ನೋಡುತ್ತಲೇ ಬಂದಿದ್ದರು. ಈಗ ಅದರ ನಿರ್ಜನತೆಯನ್ನು ನೋಡಲಾರದೆ ಅಲ್ಲಿಂದ ಎದ್ದರು.

ರಾತ್ರಿ ಆಳವಾಗುತ್ತಲೇ ನಡೆದಿತ್ತು. ಏಕಾದಶಿಯ ಚಂದ್ರ ಪಡುವ ದಿಕ್ಕಿನಲ್ಲಿಯೇ ಇಳಿದಿದ್ದ. ಆಚಾರ್ಯರು ಕೆಲಹೊತ್ತು ಅದನ್ನೇ ನೋಡುತ್ತ ನಿಂತಿದ್ದರು. ಮನಸ್ಸಿಲ್ಲದ ಮನಸ್ಸಿನಿಂದ ಚಂದ್ರ ಕ್ಷಿತಿಜದ ಕತ್ತಲೆಯಲ್ಲಿ ಹಾರಿಕೊಳ್ಳಬೇಕಾಗಿತ್ತು. ಕ್ಷಣಕಾಲ ಚಂದ್ರಬಿಂಬ ಹೊಯ್ದಾಡಿತು. ಪಶ್ಚಿಮದ ಕತ್ತಲೆ ಆ ಬಿಂಬವನ್ನು ತನ್ನ ಅಂಗೈಯಲ್ಲಿ ಆಟವಾಡಿಸಿ, ತೆರೆದ ಕೈಯನ್ನು ಮುಚ್ಚಿಬಿಟ್ಟಿತು. ಚಂದ್ರ ಮರೆಯಾದ. ಇಷ್ಟೊತ್ತಿನ ವರೆಗೆ ಹರಡಿಕೊಂಡಿದ್ದ ಮಂದವಾದ ಬೆಳಕೂ ಅವನೊಂದಿಗೇ ಅಡಗಿತು. ಇರುಳು ಮಂತ್ರ ಹಾಕಿತೆನ್ನುವಂತೆ ಕತ್ತಲೆ ಎಲ್ಲ ಕಡೆಗೂ, ಕುರುಡು-ನೊಣಗಳ ಜಾಲದಂತೆ ಹರಡಿಕೊಂಡಿತು.

ಆಚಾರ್ಯರು ಕುಳಿತಲ್ಲಿಯೇ ಕುಳಿತಿದ್ದರು. ಅವರ ಜೊತೆಗೆ ಬಂದವರಲ್ಲಿ ಕೆಲವರು ತೊಲಗಿದ್ದರು, ಕೆಲವರು ಗುಡಿಯ ಕಟ್ಟೆಯ ಮೇಲೆಯೇ ಮಲಗಿದ್ದರು. ಹೊತ್ತು ಸರಿಯುತ್ತಲೇ ಇತ್ತು. ಆಚಾರ್ಯರು ಅಷ್ಟೇ ಅಸ್ಪಷ್ಟವಾಗಿ ವಿಚಾರ ನಡೆಸಿದ್ದರು. ಒಮ್ಮೆ ಹೆಂಡತಿ, ಒಮ್ಮೆ ಚಿಮಣಾ, ಮತ್ತೊಮ್ಮೆ ಶಂಕರಪ್ಪಗೌಡರು ಯಾರಾರೋ ನೆನಪಾಗುತ್ತಿದ್ದರು. ಅಷ್ಟರಲ್ಲಿ ಕೋಳಿ ಕೂಗಿತು; ಮಲಗಿದ್ದ ಕತ್ತಲೆ ಒಡಮುರಿದು ಏಳುವಂತೆ ಕೂಗಿತು. ಆಚಾರ್ಯರು ತಟ್ಟನೆ ಎದ್ದರು. ದಿನನಿತ್ಯದ ರೂಢಿ ಕೈಹಿಡಿದು ಜಗ್ಗಿತು. ಗುಡಿಯಲ್ಲಿ ಹಾಸಿದ್ದ ಕಂಬಳಿಯನ್ನು ಮಡಿಚಿಟ್ಟರು. ಗೋಪಾಲಕೃಷ್ಣನಿಗೆ ವಂದನೆಯನ್ನು ಸಲ್ಲಿಸಿದರು. ಪಂಜೆಯನ್ನು ಹೆಗಲಿಗೆ ಹಾಕಿಕೊಂಡು, ತಂಬಿಗೆಯನ್ನು ಕೈಯಲ್ಲಿ ಹಿಡಿದು ನೆಟ್ಟಗೆ ನದಿಯ ದಾರಿಯನ್ನು ಹಿಡಿದರು. ದಿನನಿತ್ಯದ ದಾರಿಯಾದ್ದರಿಂದ ಕತ್ತಲೆ ಅಡ್ಡವಾಗಲಿಲ್ಲ.

ವಿಪರೀತ ಮಳೆ ಬಿದ್ದ ಪರಿಣಾಮವಾಗಿ ಹಿರಿಹೊಳೆಗೆ ಭರದಿಂದ ಪೂರ ಬರಲಾರಂಭಿಸಿತ್ತು. ಒಡಲು ಹರಿದು ನದಿಯ ಪ್ರವಾಹ ನೆಲವನ್ನು ಆಕ್ರಮಿಸಿದ್ದು ಆ ಕತ್ತಲೆಯಲ್ಲಿ ಗೊತ್ತಾಗುವಂತೆಯೇ ಇರಲಿಲ್ಲ. ಆದರೆ ತೆರೆಗಳು ಕಸುವಿನಿಂದ

ದಂಡೆಗೆ ಅಪ್ಪಳಿಸುತ್ತಿದ್ದ ಸಪ್ಪಳ ಎದೆಯೊಡೆಯುವಂತಿತ್ತು. ನದಿಗೆ ಕಂಡದ್ದನ್ನೆಲ್ಲ ಕಬಳಿಸುವ ರೋಷ ಏರಿದಂತಿತ್ತು. ನಿತ್ರಾಣವಾಗಿದ್ದ ನೆಲ, ಈ ಜಲಪ್ರಹಾರಕ್ಕೆ ಕುಸಿದು, ಕರಗುತ್ತಿತ್ತು. ಆಚಾರ್ಯರ ಕಣ್ಣಿಗೆ ಇದಾವುದೂ ಬೀಳಲಿಲ್ಲ. ಅವರ ಕಣ್ಣಿಗೆ ಬೇರೇನೋ ಕಾಣುತ್ತಿರಬೇಕು. ನದಿಯ ದಂಡೆಯನ್ನು ಬಿಟ್ಟು ಎತ್ತರ ವಾಗಿದ್ದ ದಿನ್ನೆಯೊಂದರ ಮೇಲೆ ಆಚಾರ್ಯರ ಪತ್ನಿಯ ಶವಸಂಸ್ಕಾರವಾಗಿತ್ತು. ಆಚಾರ್ಯರು ಅದನ್ನೇ ನೆನೆಯುತ್ತಿದ್ದರು. ಈಗ ಚಿತೆ ಆರಿರಬಹುದು. ಚಿಮಣಾಳ ಜೀವಂತ ಚಿತೆಯೇ ಆರಿಹೋಗಿತ್ತೆಂದ ಮೇಲೆ ಈ ಚಿತೆಯ ಪಾಡೇನು? ಆ ಸ್ಥಳವನ್ನು ನೋಡಿಕೊಂಡೇ ಆಮೇಲೆ ಸ್ನಾನ ಮಾಡಿದರಾಯಿತೆಂದು ಆ ಕಡೆಗೆ ನಡೆದರು. ಒಂದೇ ಸವನೆ ನದಿಗೆ ಪೂರ ಬಂದಿದ್ದರಿಂದ ಚಿತೆಯ ಸ್ಥಳವು ಮಧ್ಯ ಪ್ರವಾಹದಲ್ಲಿದ್ದಂತಾಗಿತ್ತು. ಪತ್ನಿಯ ಚಿತಾಭಸ್ಮ ಸಹ ಸಿಗದೆ ನದಿಯಲ್ಲಿ ತೇಲಿ ಹೋಗಿಬಿಟ್ಟಿತೇ? ಅವಳ ಅಸ್ಥಿಗಳನ್ನಾದರೂ ನದಿಗೆ ಕಾಣಿಸಬೇಕಾಗಿತ್ತು. ಅದಾಗದೆ ಅವಳ ಋಣ ತೀರುವಂತಿರಲಿಲ್ಲ. ಅಲ್ಲಿಯ ವರೆಗೆ ಈಸಿಯಾದರೂ ಹೋಗಿ ಅವುಗಳನ್ನು ತರಬೇಕೆಂದು ಆಚಾರ್ಯರು ನದಿಯಲ್ಲಿ ಈಸುಬಿದ್ದರು.

ಅಪಾರವಾದ ಜಲರಾಶಿ ಆಚಾರ್ಯರನ್ನು ತಬ್ಬಿಕೊಂಡಿತು. ಆಚೆಯ ದಂಡೆ ಯಿಂದ ಸಹಧರ್ಮಿಣಿ ಕೈಮಾಡಿ ಕರೆದಂತಾಯಿತು. "ಬಂದೆ ಬಂದೆ" ಎನ್ನುತ್ತಲೇ ಆಚಾರ್ಯರು ಈಸುಬಿದ್ದರು. ಎಣಿಕೆ ಮೀರಿ ನೀರು ಆಳವಾಗಿತ್ತು. ಸೊಕ್ಕಿನಿಂದ ಏರಿ ಬರುವ ತೆರೆಗಳ ವಿರುದ್ಧ ಈಸಿ ಹೋಗುವ ತ್ರಾಣ ಅವರಿಗಿರಲಿಲ್ಲ. ಈಸುತ್ತಿದ್ದ ಆಚಾರ್ಯರು ನದಿಯ ಸೆಳವಿಗೇ ಸಿಕ್ಕರು. ಅವರ ಹೃದಯದಲ್ಲಿ ಗೀತೆಯ ಶ್ಲೋಕ ನಿನದಿಸಿತು.

"ಆಪೂರ್ಯಮಾಣಂ ಅಚಲಪ್ರತಿಷ್ಠಂ
ಸಮುದ್ರಮಾಪಃ ಪ್ರವಿಶಂತಿ ಯದ್ವತ್
ತದ್ವತ್ ಕಾಮಾ ಯಂ ಪ್ರವಿಶಂತಿ ಸರ್ವೇ
ಸ ಶಾಂತಿಮಾಪ್ನೋತಿ ನ ಕಾಮ ಕಾಮೀ"

ಅರುಣೋದಯವಾಯಿತು. ಜನರು ಒಬ್ಬೊಬ್ಬರಾಗಿ ನದಿಗೆ ಬರಹತ್ತಿದರು. ದಂಡೆಯ ಮೇಲೆ ಆಚಾರ್ಯರ ತಂಬಿಗೆ ಮಾತ್ರ ಕಾಣಿಸಿತು. ಆದರೆ ಆಚಾರ್ಯರೋ ಅಪಾರವಾದ ಜಲರಾಶಿಯಲ್ಲಿ ಕಾಣದಂತಾಗಿದ್ದರು. ತನ್ನ ತೀರದ ಅಂಚಿಗಿದ್ದ ಬಡ ಬಡ ಗುಡಿಸಲುಗಳನ್ನೆಲ್ಲ ಒಂದೇ ರಾತ್ರಿಯಲ್ಲಿ ನುಂಗಿ ನೀರು ಕುಡಿದ ಪ್ರವಾಹಕ್ಕೆ

ಆಚಾರ್ಯರೇನು ಲೆಕ್ಕವಾಗಬೇಕು.?

ಬೆಳಗಾಯಿತು. ಪಾದಳ್ಳಿಯ ಜನರೆಲ್ಲ ಗೋಳಿಟ್ಟು ಅಳುವಂತೆ ಬೆಳ
ಗಾಯಿತು. ರಾತ್ರಿ ಮುಚ್ಚಿದ್ದ ತೆರೆಯನ್ನು ಹಗಲು ಸರಿಸಿದಾಗ ಅಲ್ಲಿ ಕಂಡದ್ದೇನು?
ಇನ್ನೂ ಕತ್ತಲಿರುವಾಗಲೇ ಚಿಮಣಾಳ ಅಗ್ನಿದಿವ್ಯದ ಮರಣದ ಸುದ್ದಿ ಮನೆ
ಮನೆಗೂ ಮುಟ್ಟಿ ಭೀತಿಯನ್ನು ಹರಡಿತ್ತು. ಬೆಳಗಾದೊಡನೆ ಆಚಾರ್ಯರ ಜಲ
ಸಮಾಧಿಯ ಸುದ್ದಿಯನ್ನು, ಏರಿ ಬರುತ್ತಿದ್ದ ನದಿಯ ಪ್ರವಾಹವೇ ಊರ ತನಕ
ಬಂದು ಮುಟ್ಟಿಸಿತು. ಜನರ ಕಣ್ಣೀರು ಪ್ರವಾಹದೊಡನೆ ಬೆರೆತವು. ಹಿಂದಿನ
ಸಂಜೆಯೇ ಹತ್ತೆಂಟು ಜನರು ಪಿಡುಗಿಗೆ ಆಹುತಿಯಾಗಿದ್ದರು.

ಮಳೆಯಾಗದಿದ್ದರೂ ನೀರಗಸೆಯೆಲ್ಲ ಜಲಮಯವಾಗಿತ್ತು. ಮೊಳಕಾಲ
ಮಟ ನೀರಲ್ಲಿ ನಡೆದೇ ಮನೆಮನೆಯ ವಾರ್ತೆಗಳನ್ನು ಸಂಗ್ರಹಿಸಬೇಕಾಗಿತ್ತು.
ಪ್ರತಿಯೊಂದು ಸ್ಥಳದಲ್ಲಿಯೂ ಹೃದಯವಿದ್ರಾವಕವಾದ ಸುದ್ದಿಯೊಂದು ಕಾದು
ಕುಳಿತಂತಿತ್ತು. ಗೌಡರ ವಾಡೆಯಲ್ಲಿ ಪಾರ್ವತೆವ್ವ ಜ್ವರದಿಂದ ನಿಶ್ಚೇಷ್ಟಿತಳಾಗಿ
ಬಿದ್ದಿದ್ದಳು. ಪಿಡುಗು ಊರನ್ನೇ ನುಂಗುವೆನೆನ್ನುವಂತೆ ಗುಡುಗುತ್ತಿತ್ತು. ಜನರೆಲ್ಲ
ಜ್ವರದಿಂದಲೋ, ಭಯದಿಂದಲೋ ಗಡಗಡನೆ ನಡುಗಿದರು.

ಅಂದು ಸಂಜೆಯೇ ಊರಿಗೆ ಬಂದ ಹವಾಲ್ದಾರ ಅದು ಪ್ಲೇಗಿನ ಜ್ವರ
ವೆಂದು ಹೇಳಿ ಭಯಕ್ಕೆ ಸಾವಿನ ಬಣ್ಣವನ್ನೇ ಕೊಟ್ಟ. ನಿಷ್ಕರುಣೆಯಿಂದ ಜ್ವರ
ಬಂದವರನ್ನೆಲ್ಲ ಮನೆಯಿಂದ ಹೊರದಬ್ಬಿದ. ಯಾರೂ ಏನೂ ಹೇಳುವಂತಿರ
ಲಿಲ್ಲ. ಭಯ ಅವರ ನಾಲಿಗೆಯನ್ನೇ ಕಟ್ಟಿಹಾಕಿತ್ತು. ಇದರಿಂದ ತಮ್ಮ ಆಪ್ತೇಷ್ಟರೆಲ್ಲ
ತಮ್ಮ ಕಣ್ಣೆದುರಿಗೇ ಇಲಿಗಳಂತೆ ಪಟಪಟ ಬಿದ್ದು ಸಾಯುವದನ್ನು ಜನರು ನೋಡ
ಬೇಕಾಯಿತು. ಅವರಿಗೆ ದಿಕ್ಕೇ ತಪ್ಪಿತು. ಸತ್ತರೂ ಅವರ ಹೆಣಗಳನ್ನು ಇದ್ದವರು
ಮುಟ್ಟುವಂತಿರಲಿಲ್ಲ. ಒಂದು ಪಿಳ್ಳೆಯೂ ಒಳಗೆ ಉಳಿಯದಂತೆ ಮನೆಗಳೆಲ್ಲ
ಖಾಲಿಯಾದವು.

ಆದರೆ ಪಾರ್ವತೆವ್ವ ಗೌಡಿತಿ ಹೊರಗೆ ಬರಲೊಪ್ಪಲಿಲ್ಲ. ಸಾವಿರ ಹೆದರಿಕೆ
ಹಾಕಿದರೂ ಒಪ್ಪಲಿಲ್ಲ. ಅವಳಿಗೆ ಯಾವ ಹೆದರಿಕೆಯೂ ಇರಲಿಲ್ಲ. ಮರುದಿನ
ಅವಳ ಹೆಣ ವಾಡೆಯಲ್ಲಿಯೇ ಬಿದ್ದಿತ್ತು. ಅವಳ ಅಂತ್ಯಸಂಸ್ಕಾರ ಮಾಡಲು
ಕೂಡ ಯಾರೂ ಬರಲಿಲ್ಲ. ಜನರ ಹಟವನ್ನೂ ಮೂಢತನವನ್ನೂ ಕಂಡಿದ್ದ
ಹವಾಲ್ದಾರ ಸಿಟ್ಟಿಗೆದ್ದಿದ್ದ. ಪ್ಲೇಗಿನ ತೊಂದರೆಯನ್ನು ತಪ್ಪಿಸಲು ವಾಡೆಗೇ ಬೆಂ

ಹೆಚ್ಚಲು ಹೇಳಿದ. ಹೊಲೆಯರ ರುದ್ರ ಅಳುತ್ತಲೇ ವಾಡೆಗೆ ಬೆಂಕಿ ಹಚ್ಚಿದ. ಪಾರ್ವತೆವ್ವ ಗೌಡಿತಿಯ ಮೃತದೇಹ ಅಲ್ಲಿಯೇ ಉರಿದು ಬೂದಿಯಾಯಿತು.

ಲಿಂಗಪ್ಪಗೌಡ ಚಿಮಣಾ ಸತ್ತ ಮರುದಿನ ಹುಚ್ಚು ಹಿಡಿದು ಊರಲ್ಲೆಲ್ಲ ತಿರುಗಾಡಿದ್ದ. ಪ್ಲೇಗಿನಕಿಂತ ಅವನ ಚೇಷ್ಟೆಗಳು ಹೆಚ್ಚು ಭೀಕರವಾಗಿದ್ದವು. ಅವನ್ನು ನೋಡಿದ ಹವಾಲ್ದಾರ ಗೌಡರ ಹತ್ತರ ಹಾಯಲಿಲ್ಲ. ಲಿಂಗಪ್ಪ ಇಡೀ ದಿನ ಹಾಗೆಯೇ ತಿರುಗಾಡಿದನಂತೆ. ಹೊಟ್ಟೆಯಲ್ಲಿ ಕೂಳಿಲ್ಲದ್ದರಿಂದ ನಿತ್ರಾಣನಾಗಿ ಗೌಡರ ವಾಡೆಯ ಹತ್ತರವೇ ಬಂದು ಬಿದ್ದುಕೊಂಡಿದ್ದನಂತೆ. ಹಿಂದಿನ ರಾತ್ರಿ ಊರನ್ನೆಲ್ಲ ಖಾಲಿ ಮಾಡಿದ್ದರೂ, ಅವನು ತಪ್ಪಿಸಿ ಗೌಡರ ವಾಡೆಯಲ್ಲಿಯೇ ಮಲಗಿಕೊಂಡಿದ್ದನಂತೆ. ಕಬಜಾ ತೆಗೆದುಕೊಳ್ಳುವ ಹುಚ್ಚು ಇನ್ನೂ ಅವನನ್ನು ಬಿಟ್ಟಿರಲಿಲ್ಲ. ಹೊಲೆಯರ ರುದ್ರ ವಾಡೆಗೆ ಬೆಂಕಿಹಚ್ಚಿದಾಗ ಮಾತ್ರ ಸಾಯುವ ಸಂಕಟಕ್ಕೆ, "ವಾಡೇ ಕಬಜಾ ತೊಗೊಂಡೀನಿ, ಬಾಗಿಲಾ ತಗೀರ್ಯೋ!" ಎಂದು ಚೀರಿದ್ದನಂತೆ. ಆದರೆ ಆ ಹೊತ್ತಿಗೆ ಕೈಮೀರಿ ಹೋಗಿತ್ತು. ಅರ್ಧವಾಡೆ ಅಗ್ನಿಗೆ ಆಹುತಿಯಾಗಿತ್ತು. ಹೀಗೆಂದು ಹೊಲೆಯರ ರುದ್ರ, ತನ್ನ ಅಪರಾಧವನ್ನೊಪ್ಪಿ ಕೊಳ್ಳುವಂತೆ ಇವನ್ನು ಕತೆಮಾಡಿ ಹೇಳುತ್ತ ತಿರುಗಾಡುತ್ತಿದ್ದ.

ಮೂರು ದಿನಗಳಲ್ಲಿ ಊರು ಬರಿದಾಯಿತು. ಅರ್ಧ ಪಿಡುಗು ನುಂಗಿತ್ತು; ಕೆಲ ಭಾಗವನ್ನು ಪಾದಳಿಯನ್ನು ಕಾಯುತ್ತ ಬಂದಿದ್ದ ನದಿ ಚಂಡಿಯಾಗಿ ನುಂಗಿತ್ತು. ಬೆಂಕಿ ಕೆಲವರನ್ನು ಆಹುತಿಗೊಂಡಿತ್ತು. ಯಾರಾರೋ ಹೇಗೆಹೇಗೋ ತಮ್ಮ ತಮ್ಮ ಕೊನೆಯನ್ನು ಕಂಡಿದ್ದರು. ಆದರೆ ಹವಾಲ್ದಾರನ ಜೊತೆಗೇ ತಿರು ಗಾಡುತ್ತಿದ್ದ ಪಾಲೀಕಾರ ಮಲ್ಲನಿಗೆ ಇದಾವುದರಲ್ಲಿಯೂ ನಂಬಿಕೆ ಇರಲಿಲ್ಲ. "ಚೇ ತಗೀರಿ, ಪಿಡುಗು ಏನು ಮಾಡೀತು? ಹಿಂದಕ ಕಾಲರಾ ಬಂದಿದ್ದಿಲ್ಲೇನರಿ? ಕರೇ ಹೇಳತೀನಿ ತಂದಿ, ಏಟ ಪಾಪ ಮಾಡಿದರ ಭೂಮಿತಾಯಿ ತಡಕೊಂಡಾಳ್ರಿ? ಆ ಪಾಪಾನs ನುಂಗಿತೋ ಯಪ್ಪಾ!" ಎಂದು ಸಹನೆಯಿಲ್ಲದ ಹವಾಲ್ದಾರನಿಗೆ ಹೇಳಿ ದ್ದನ್ನೇ ಹತ್ತುಸಾರಿ ಹೇಳುತ್ತಿದ್ದ. ಯಾವುದು ನಿಜವೋ ದೇವರಿಗೇ ಗೊತ್ತು.

ನಾಗರಚೌತಿಯ ಮುನ್ನಾದಿನ ಇಂದುಪುರಕ್ಕೆ ಹೋಗಿದ್ದ ಶ್ಯಾಮರಾಯ ಪಂಚಮಿ ಮುಗಿಸಿ ಪಾದಳ್ಳಿಗೆ ಕುಟುಂಬಸಮೇತ ಹೊರಡುವವನಿದ್ದ. ಅಷ್ಟರಲ್ಲಿ ಏನೋ ಮಹತ್ವದ ಕೆಲಸವೊಂದು ಗಂಟುಬಿದ್ದದ್ದರಿಂದ ಇನ್ನೂ ನಾಲ್ಕು ದಿನ ತಡೆಯ ಬೇಕಾಯಿತು. ಆಮೇಲೆ ಮಳೆ ಹತ್ತಿ ಪ್ರವಾಸವೇ ಅಸಾಧ್ಯವಾಯಿತು. ಮಳೆ ನಿಂತ ಮೇಲೂ ದಾರಿಗಳು ಅನುಕೂಲವಾಗಲು ಇನ್ನೂ ಹದಿನೈದು ದಿನಗಳಷ್ಟು ಬೇಕಾ ಗಿತ್ತು. ಆಮೇಲೆ ಪ್ಲೇಗಿಗೆ ಪಾದಳ್ಳಿ ಆಹುತಿಯಾದ ಸುದ್ದಿಯನ್ನು ಕೇಳಿದಾಗ ಅವನು ಇಂದುಪುರದಲ್ಲಿಯೇ ಉಳಿಯಬೇಕಾಯಿತು.

ಪಡದಯ್ಯನವರು ಸಾತೇನಹಳ್ಳಿಯಲ್ಲಿದ್ದಾಗಲೇ ಪಾದಳ್ಳಿಯ ಸುದ್ದಿ ಅವರ ಕಿವಿ ಮುಟ್ಟಿತ್ತು. ಅಲ್ಲಿ ಹೋದರೆ ಪೋಲೀಸರ ಕಾಟ ತಪ್ಪಿದ್ದಲ್ಲವೆಂದು ಮನಗಂಡು ಅವರು ಅಲ್ಲಿಂದ ನೇರವಾಗಿ ಸೊಲ್ಲಾಪುರಕ್ಕೇ ಪ್ರಯಾಣಮಾಡಿದರಂತೆ.

ಕಮಿಶನರರ ಕಡೆಗೆ ವಾರಸಾಪ್ರಕರಣದ ಅಪೀಲು ಮಾಡಲು, ವಕೀಲ ರನ್ನು ಕಾಣಲೆಂದು ಬೆಳಗಾವಿಗೆ ಹೋಗಿದ್ದ ಶೇಷಪ್ಪನಿಗೂ ಈ ಸುದ್ದಿ ಅಲ್ಲಿಯೇ ಬಡಿದಿತ್ತು. ಯಾರದೋ ಆಪ್ತರ ಬಾದರಾಯಣ ಸಂಬಂಧ ಹಚ್ಚಿಕೊಂಡು ಅವನು ಬೆಳಗಾವಿಯಲ್ಲಿಯೇ ಕೆಲದಿನ ನಿಲ್ಲಬೇಕಾಯಿತು.

ತನ್ನ ಆಪ್ತರನ್ನು ಕಾಣಲೆಂದು ಲಕ್ಷ್ಮಣ ತಾಸಗಾವಿಗೆ ಹೋಗಿದ್ದವನು ತಿರುಗಿ ಅಜರಾಣಿಗೆ ಬಂದಾಗ ಅವನಿಗೆ ಈ ಸುದ್ದಿ ತಿಳಿದಿತ್ತು. ಅಜರಾಣಿಯಲ್ಲಿಯೂ ಪ್ಲೇಗಿನ ಹಾವಳಿ ಇತ್ತು. ಆದರೆ ಅಲ್ಲಿ ಸರಕಾರದವರು ಬೇಗ ಕ್ರಮ ಕೈಕೊಂಡಿದ್ದ ರಿಂದ ಪಾದಳ್ಳಿಯಲ್ಲಿಯಂತೆ ಸಾವು ಅಲ್ಲಿ ತಾಂಡವವಾಡಿರಲಿಲ್ಲ. ಲಕ್ಷ್ಮಣ ಯಶ ವಂತರಾಯರ ಮನೆಯಲ್ಲಿಯೇ ನಿಲ್ಲಬೇಕಾಯಿತು. ಅವರ ಕಮತದ ಮೇಲ್ವಿ ಚಾರಣೆ ಅವನ ಪಾಲಿಗೆ ಬಂದಿತ್ತು.

ಪ್ಲೇಗು ಮೊದಲನೆಯ ಸಾರೆ ಬಂದಿತ್ತಾದ್ದರಿಂದ ಅಜ್ಞಾನದಿಂದ ಲೆಕ್ಕವಿಲ್ಲ ದಷ್ಟು ಜನರು ಮರಣಹೊಂದಿದ್ದರು. ಇಂದುಪುರದಲ್ಲಿಯೂ ಪ್ಲೇಗಿನ ಹಾವಳಿ

ಇಲ್ಲದಿರಲಿಲ್ಲ. ಆದರೆ ದಾದಾನಿಗೆ ಪಾದಳ್ಳಿಯ ಸುದ್ದಿಯೇ ಇರಲಿಲ್ಲ. ಪ್ಲೇಗಿನಿಂದ ಎಷ್ಟೋ ಜನರು ಸತ್ತರೆಂಬ ಸುದ್ದಿಯನ್ನು ಅವರಿವರ ಬಾಯಿಂದ ಕೇಳಿದಾಗ ಮಾತ್ರ ಊರಿಗೆ ಹೋಗಬೇಕೆಂದು ಅವನು ಚಡಪಡಿಸಿದ. ಮಹಾರಾಜರೇ ಪ್ಲೇಗಿನ ಕಾರಣವನ್ನು ಮುಂದೆ ಮಾಡಿ ಅವನನ್ನು ಹೋಗಗೊಡಲಿಲ್ಲ. ಮುಂದೆ ಗಣೇಶಚತುರ್ಥಿಯ ಉತ್ಸವಕ್ಕಾಗಿ ಮಹಾರಾಜರು ಸಾಂಗಲಿಯ ರಾಜೇಸಾಹೇಬರ ಆಮಂತ್ರಣವನ್ನು ಸ್ವೀಕರಿಸಿ ಅಲ್ಲಿಗೆ ಹೋದರು. ದಾದಾನಿಗೆ ಒಳ್ಳೆಯ ಸಂಧಿಯೊಂದು ದೊರೆತಂತಾಯಿತು.

ಆಗಲೇ ದಾದಾ ಪಾದಳ್ಳಿಗೆ ಹೊರಟ. ಇಂದುಪುರಕ್ಕೆ ಬಂದಂದಿನಿಂದ ಪಾದಳ್ಳಿಯ ಋಣವೇ ಹರಿದಂತಾಗಿತ್ತು. ನಿಜವಾಗಿ ಪಾದಳ್ಳಿ ಅವನಿಗೇನು ಸುಖವನ್ನು ಕೊಟ್ಟಿರಲಿಲ್ಲ. ಇತ್ತೀಚೆಗಿನ ಅಲ್ಲಿಯ ಜೀವನವನ್ನು ನೆನೆಸಿದರೆ, ಆ ಊರಿನ ನೆನಪು ಕೂಡ ಅವನು ತೆಗೆಯಬಾರದೆಂದು ಅವನ ಕೆಲ ಗೆಳೆಯರು ಹೇಳುತ್ತಿದ್ದರು. ಲಕ್ಷ್ಮಣನೊಬ್ಬನನ್ನು ಬಿಟ್ಟರೆ ಅಲ್ಲಿ ತನ್ನವರೆನ್ನುವವರಾರೂ ಇರಲಿಲ್ಲ. ಲಕ್ಷ್ಮಣನೂ ಈಗ ಮತ್ತೆಲ್ಲಿಯಾದರೂ ಹೋಗಿರಬೇಕು. ಆದರೂ ಹುಟ್ಟಿ, ಬೆಳೆದು, ಆಡಿದ ಪಾದಳ್ಳಿ ದಾದಾನ ಸವಿನೆನಪುಗಳಲ್ಲೊಂದಾಗಿತ್ತು. ತೀರ ಬೇಸರ ಬಂದಾಗ ಮನಸ್ಸು ಆ ನೆನಪುಗಳಲ್ಲಿಯೇ ರಮಿಸುತ್ತಿತ್ತು. ಪಾದಳ್ಳಿಯನ್ನು ಬಿಟ್ಟು ಬಹಳವಾದರೆ ಒಂದು ಒಂದೂವರೆ ತಿಂಗಳಾಗಿತ್ತು. ಆದರೂ ಎಷ್ಟೋ ವರ್ಷಗಳ ವರೆಗೆ ಆ ಊರನ್ನು ಬಿಟ್ಟು ದೂರ ಹೋದಂತಾಗಿತ್ತು. ಈಗ ಪಾದಳ್ಳಿಯನ್ನು ನೋಡಬೇಕೆಂದು ಆತುರ ಹೆಚ್ಚಿತು. ಅಂತೆಯೇ ಮಹಾರಾಜರು ಊರಲ್ಲಿಲ್ಲದ ಹೊತ್ತು ನೋಡಿಕೊಂಡು ದಾದಾ ಹೊಡೆದೆಬ್ಬಿಸಿದವರಂತೆ ಇಂದು-ಪುರದಿಂದ ಪಾದಳ್ಳಿಗೆ ನಡೆದಿದ್ದು.

ಪಾದಳ್ಳಿಯ ದಾರಿಗುಂಟ ದಾದಾ ವೇಗವಾಗಿಯೇ ಸಾಗಿದ್ದ. ಆದರೂ ಮನಸ್ಸು ಇನ್ನೂ ವೇಗ ಹೆಚ್ಚಲೆಂದು ಆತುರಪಡುತ್ತಿತ್ತು. ಹೀಗೆಯೇ ನಡೆದರೆ ಪಾದಳ್ಳಿಯನ್ನು ಎಂದು ಮುಟ್ಟಬೇಕು ಎಂದು ಗೊಣಗುತ್ತಿತ್ತು. ಈ ಮೊದಲೇ ತನಗೆ ಪರಿಚಿತವಿದ್ದ ಊಹೆಯ ಚಿತ್ರಗಳನ್ನು ಬರೆಬರೆದು ನೋಡುತ್ತಿತ್ತು. ಜಾಗೀರದಾರರ ವಾಡೆ, ಗೌಡರ ವಾಡೆ, ಬಾಳಾಚಾರ್ಯರ ಮನೆ, ಗರಡಿಮನೆ, ಚಾವಡಿ ಹೀಗೆ ಒಂದೊಂದಾಗಿ ನೋಟಗಳು ಮೂಡಿ ಮಾಯವಾಗುತ್ತಿದ್ದವು.

ಪಾದಳ್ಳಿಯ ಮುಂದಿನ ಹೊಳೆಯನ್ನು ಮುಟ್ಟಲು ಇನ್ನೂ ಮೂರು ಮೈಲು

ನಡೆಯುಬೇಕಾಗುತ್ತಿತ್ತು. ಈ ಮೊದಲೇ ಮೊಳಕಾಲು ಮಟ್ಟದ ಹುದುಲು ಕಂಡಿತು. ಕೆಸರಲ್ಲಿ ಸಿಕ್ಕ ಒಂದು ಕಾಲನ್ನು ತಪ್ಪಿಸಿಕೊಳ್ಳುವಷ್ಟರಲ್ಲಿ ಇನ್ನೊಂದು ಸಿಗುತ್ತಿತ್ತು. ದಾರಿ ನಡೆಯುವದೇ ಅಸಾಧ್ಯವಾಗಿ ಪರಿಣಮಿಸಿತು. ನದಿ ಇನ್ನೂ ಮೂರು ಮೈಲು ದೂರ. ಆದರೆ ನದಿ ಮುಳುಗಿದಂತೆ ಭೂಮಿ ಇಷ್ಟೇಕೆ ಹುದುಲು ಎಂದು ಸುತ್ತಲೂ ಪರೀಕ್ಷಿಸಲೆಂದೇ ನೋಡಿದ. ಹಿರಿಹೊಳೆ ಅಲ್ಲಿಯ ವರೆಗೆ ಬಂದು ಇಳಿದಿರಬೇಕೆಂದು, ಅಲ್ಲಿಯ ಗಿಡಗಂಟೆಗಳಿಗೆ ಹತ್ತಿಕೊಂಡ ತೆಪ್ಪಸದಿಂದ ತಿಳಿಯುವಂತಿತ್ತು.

ದಾದಾನಿಗೆ ಗಾಬರಿಯಾಯಿತು. ನದಿ ಇಷ್ಟೊಂದು ಏರಿ ಬಂದಿದ್ದರೆ ಗತಿ ಏನು? ಪ್ರತಿ ವರ್ಷ ಮಳೆಗಾಲದಲ್ಲಿ ಇದೇ ಹಾಡು. ಆದರೆ ದೊಡ್ಡ ಮಹಾಪೂರ ಬಂದದ್ದು ದಾದಾನಿಗಂತೂ ನೆನಪಿರಲಿಲ್ಲ. ಇದು ನಿಜವೇ ಆಗಿದ್ದರೆ ಪಾದಳ್ಳಿಯ ಹೊಲೆಗೇರಿ, ಮಾದರ ಕೇರಿಗಳು ಕೊಚ್ಚಿಕೊಂಡು ಹೋಗಿರಲೇಬೇಕೆಂದು ತೋರಿತು. ನೀರಗಸೆಗೂ ನೀರು ಬಡಿದಿರಬಹುದು. ಕುರುಬಗೇರಿಯ ಕೊನೆಯಂಚಿನಲ್ಲಿರುವ ಮಲ್ಲಿಯ ಮನೆಯಲ್ಲಿಯೂ ನೀರು ಹೊಕ್ಕಿರಬಹುದು. ಗೌಡರ ಮನೆ, ವಾಡೆ, ಮಠ, ಗೋಪಾಲಕೃಷ್ಣನ ಗುಡಿ, ಬ್ರಾಹ್ಮಣರ ಕೆಲ ಮನೆಗಳು ಇವಿಷ್ಟೇ ಎತ್ತರದಲ್ಲಿದ್ದದ್ದರಿಂದ ಸುರಕ್ಷಿತವಾಗಿ ಉಳಿದಿರಬೇಕು. ಊರಲ್ಲಿ ಈ ಪರಿ ನೀರು ಹೊಕ್ಕಿದ್ದರೆ ಬೀದಿಗಳಲ್ಲಿಯೂ ಹರಗೋಲು ಹಾಕಿ ದಾಟಬೇಕಾದೀತು.

ತನಗೆ ತಿಳಿದಂತೆ ದಾದಾ ಮಹಾಪೂರದ ಆ ಚಿತ್ರವನ್ನು ಕಲ್ಪಿಸಿಕೊಂಡ. ಊರ ಮಗ್ಗಲಿಗೇ ಹಗಲು ರಾತ್ರಿ ಬೇಸರವಿಲ್ಲದೆ ಹರಿಯುತ್ತ, ಅಲ್ಲಿಯ ಹೊಲಗಳಿಗೆಲ್ಲ ಮೊಲೆಹಾಲನ್ನು ಉಣ್ಣಿಸಿ ತಾಯಿಯಾಗಿದ್ದ ಈ ನದಿಗೂ ಒಮ್ಮೊಮ್ಮೆ ಹುಚ್ಚು ತಲೆಗೇರುತ್ತಿದೆ. ಚಂಡಿಯಾಗಿ ಕಂಡದ್ದನ್ನೆಲ್ಲ ನುಂಗಬೇಕೆಂದು ಹಾತೊರೆಯುತ್ತದೆ ಹೊಳೆ. ಅದರ ಪ್ರಚಂಡ ರೋಷದೆದುರು ಮನುಷ್ಯನ ಬದುಕು ತರಗೆಲೆಯಷ್ಟು ಕ್ಷುದ್ರವಾಗಿ ಕಾಣುತ್ತದೆ.

ದಾದಾ ಬಲಶಾಲಿಯೆಂದೇ ಧೈರ್ಯದಿಂದ ಆ ಬೆಂಚಿಯಲ್ಲಿ ಕಾಲಿಟ್ಟ. ನಡುಮಟ್ಟದ ಹುದುಲಿನಲ್ಲಿ ಹಾಯುವದು ಪರಾಕ್ರಮವಾಗಿಯೇ ತೋರುತ್ತಿತ್ತು. ನೆನೆದ ಮಣ್ಣು ಮೇಣದಷ್ಟು ಜಿಗುಟಾಗಿತ್ತು. ಅಂತೂ ಅತಿ ಪ್ರಯಾಸದಿಂದ ಒಮ್ಮೆ ಅದನ್ನು ದಾಟಿದ. ಬೆಂಚಿಯ ಮುಂದಿನ ದಿನ್ನೆಯು ನದಿಯ ಸೆಳವಿಗೆ ಸಿಕ್ಕು ಮಣ್ಣು ತರಿದುಹೋಗಿ ಗಟ್ಟಿಯಾದ, ಬಿರುಸಾದ ನೆಲವಷ್ಟೇ ಉಳಿದಿತ್ತು. ರಕ್ತ

ಮಾಂಸಗಳೆಲ್ಲ ಒಣಗಿಹೋಗಿ ಅಸ್ಥಿಪಂಜರವಷ್ಟೇ ಉಳಿದಂತಾಗಿತ್ತು. ಅದನ್ನು ನೋಡಿ ದಾದಾ ಮರುಗಿದ. ಪಾಡಳ್ಳಿಯ ರೈತರಿಗೆ ಬಿತ್ತಿಕೊಳ್ಳಲು ಮಣ್ಣನ್ನು ಕೂಡ ನದಿ ಉಳಿಸಿರಲಿಲ್ಲ. ಒಕ್ಕಲಿಗನ ಬಾಯಿಗೇ ಮಣ್ಣುಬಿದ್ದಂತಾಗಿತ್ತು.

ದಾದಾ ಒಮ್ಮೆ ಸುತ್ತಲೂ ಕಣ್ಣುಹರಿಯಿಸಿದ. ನದಿಯ ಸುತ್ತುಮುತ್ತಲಿನ ಭೂಮಿಯೆಲ್ಲ ಬಂಜೆಯಾಗಿತ್ತು. ಇನ್ನು ಅಲ್ಲಿ ಹೊಸ ಮಣ್ಣು ಬಂದು ಬೀಳ ಬೇಕಾದರೆ ಇನ್ನೂ ಎಷ್ಟು ಕಾಲ ಬೇಕಾಗಬಹುದೋ! ಗಿಡಗಂಟಿಗಳೆಲ್ಲ ತೇಲಿ ಕೊಂಡು ಹೋಗಿದ್ದವು. ಕೆಲವು ಅಲ್ಲಿಯೇ ಬಾಗಿಕೊಂಡಿದ್ದವು. ಕೆಲವು ಕಡೆ ಗಂತೂ ಹರಳುಗಳನ್ನು ಬಿಟ್ಟರೆ ಬೇರೇನೂ ಉಳಿದಿರಲಿಲ್ಲ.

ನದಿ ಇನ್ನೂ ಪೂರ್ತಿಯಾಗಿ ಇಳಿದಿರಲಿಲ್ಲ. ನದಿಯ ಒಡಲು ಹೊರಸೂಸಿ ಹರಿಯದೆ ಒಳಗೇ ಹರಿಯುತ್ತಿತ್ತು. ಇನ್ನೂ ಪ್ರವಾಹ ಕಸುವಾಗಿಯೇ ಇತ್ತು. ಸೆಳವಿನ ಎಳೆತವನ್ನು ಹೊರಗಿನಿಂದಲೇ ಗುರುತಿಸಬಹುದಾಗಿತ್ತು. ಅದರ ಆಳ ವನ್ನು ಕಣ್ಣಿನಿಂದಲೇ ಲೆಕ್ಕಹಾಕಿದ ದಾದಾ ದಂಡೆಯ ಮೇಲೆ ನಿಂತುಕೊಂಡು ನಾವೆ ಬರುವದನ್ನು ನಿರೀಕ್ಷಿಸತೊಡಗಿದ. ದಾದಾ ನದಿಯನ್ನು ಮುಟ್ಟಿದಾಗ ಬೆಳಗಿನ ಹತ್ತು ಗಂಟೆಯಾಗಿತ್ತು. ಆದರೆ ಮಧ್ಯಾಹ್ನದವರೆಗೆ ದಾರಿಕಾಯ್ದರೂ ನಾವೆ ಬರಲಿಲ್ಲ. ಆಚೆಯ ತೀರದಲ್ಲಿ ಒಂದು ಪಿಳ್ಳೆಯೂ ಕಾಣಿಸಿಗಲಿಲ್ಲ. ದಿನಾಲು ನೀರಗಸೆಯಿಂದ ಯಾವಾಗಲೂ ಜನರು ಬರುತ್ತಲೇ ಇರಬೇಕು. ಯಾರಾದರೂ ಬಂದರೆ, ಅವರನ್ನು ಕೂಗಿ ನಾವೆಗಾಗಿ ಹೇಳಬಹುದೆಂದು ಆಶಿಸಿದ್ದ ದಾದಾನಿಗೆ ನಿರಾಶೆಯಾಯಿತು. ಪ್ಲೇಗೆಂದರೆ ಇದೇ ಇರಬೇಕೇನೋ ಎಂದೂ ಅನಿಸಿತು. ಸುತ್ತುಮುತ್ತಲಿನ ಹೊಲಗಳಲ್ಲಿಯೂ ಯಾರೂ ಕಾಣಲಿಲ್ಲ.

ದಾದಾ ಕುಳಿತುಕುಳಿತು ಬೇಸತ್ತ. ಊರಿಗೆ ಹೋಗಿ ಅಲ್ಲಿಯ ಸಮಾ ಚಾರಗಳನ್ನೆಲ್ಲ ತಿಳಿದುಕೊಳ್ಳಲು ಆತುರನಾಗಿದ್ದ. ನಿರುಪಾಯನಾಗಿ ಚಡ್ಡಿ ಧರಿಸಿ, ಉಟ್ಟ ಧೋತರವನ್ನು ರುಮಾಲಿನೊಡನೆ ತಲೆಗೆ ಸುತ್ತಿ ನದಿಯಲ್ಲಿ ಈಸುಬಿದ್ದ. ಹುರುಪಿನಿಂದ ಈಸುಬಿದ್ದನೇನೋ ಸರಿ, ಬಿದ್ದ ಹೊಡೆತಕ್ಕೆ ತೆರೆಗಳೆಲ್ಲ ಚಲ್ಲಾ ಪಿಲ್ಲಿಯಾದವು. ಆದರೆ ನದಿಯ ಸೆಳವು ದಾದಾನ ಅಳವನ್ನೂ ಮೀರಿತ್ತು. ಮಾರುಗೈ ಹಾಕಿ ಈಸಿದಂತೆ ತಾನು ಪಾಡಳ್ಳಿಯಿಂದ ದೂರದೂರ ಹೋಗುತ್ತೇ ನೆಂದು ದಾದಾನಿಗನಿಸಿತು. ನಡುವಿಗೆ ಹಗ್ಗ ಹಾಕಿ ಎಳೆದಂತೆ ನದಿ ಎತ್ತಕಡೆಗೋ ಎಳೆಯುತ್ತಿತ್ತು. ಧಡಪಡಿಸಿ ಈಸಿ, ತನ್ನ ದಂಡೆಯನ್ನು ಮುಟ್ಟುವದಕ್ಕೆ ಪ್ರಯತ್ನಿ

ಸಿದ; ಸಾಧ್ಯವಾಗಲಿಲ್ಲ. ಸುಮ್ಮನೆ ಕೈಸೋತು ನೀರಪಾಲಾಗುವದಕ್ಕಿಂತ, ನೀರಿನ ಸೆಳವಿಗೆ ಅನುಕೂಲವಾಗಿ ಹೋಗುವದೇ ಒಳ್ಳೆಯದೆನಿಸಿತು. ಪ್ರವಾಹದ ಮಲುವನ್ನು ನೋಡಿಕೊಂಡು ಅದರ ಗುಂಟ ತಾಳ್ಮೆಯಿಂದ ಈಸುತ್ತ ಎರಡು ಮೈಲುಗಳ ವರೆಗೆ ಹೋಗಿ ಹಾವನೂರಿನ ದಡಕ್ಕೆ ಹತ್ತಿದ.

ಹಾವನೂರಿನಿಂದ ತಿರುಗಿ ಪಾದಳ್ಳಿಯನ್ನು ಸೇರಬೇಕಾದರೆ ಎರಡು ಮೈಲು ನಡೆಯಬೇಕಾಯಿತು. ದಾದಾ ಪಾದಳ್ಳಿಯನ್ನು ಸೇರಿದಾಗ ಹೊತ್ತು ಒಂದು ತಾಸು ಉಳಿದಿತ್ತು. ಅಗಸೆಯ ಹತ್ತಿರ ಬಂದಾಗ, ಚಾವಡಿಯಲ್ಲಿ ತಂಬಾಕು ಸೇದುತ್ತ ಕುಳಿತ ವಾಲೀಕಾರ ಮಲ್ಲ ತನ್ನನ್ನು ಕಂಡು ಪ್ರೀತಿಯಿಂದ ಮಾತಾಡಿಸಬಹುದೆಂದು ಒಂದು ಸವಿಯಾದ ಯೋಚನೆ ದಾದಾನ ಮನಸ್ಸಿನಲ್ಲಿ ಹಾಯ್ದು ಹೋಯಿತು. ಆದರೆ ಚಾವಡಿಯಲ್ಲಿ ಒಬ್ಬರೂ ಇರದ್ದನ್ನು ಕಂಡು ನಿರಾಶೆಯಾಯಿತು. ಚಾವಡಿಯು ತುಂಬ ಕಸಕಡ್ಡಿ ಹರವಿತ್ತು. ಪಾವಟಿಗೆಗಳ ಮೇಲೆ ಅಡವು ಹತ್ತಿದ ನಾಯಿಯೊಂದು ತೂಕಡಿಸುತ್ತ ಮಲಗಿತ್ತು. ಹಳೆಯ ಕಾಲದ ತನ್ನ ಕನಸುಗಳಲ್ಲಿ ಮುಳುಗಿದಂತಿತ್ತು ಅದು. ಅಗಸೆಯಲ್ಲಿಯೂ ಯಾರೂ ಕಾಣಲಿಲ್ಲ.

ಊರಲ್ಲಿ ಜನರೇ ಇರಲಿಕ್ಕಿಲ್ಲವೇ ಎಂದು ಗಾಬರಿಯಾದ. ಆದರೂ ನೋಡೋಣವೆಂದು ತನ್ನ ಮನೆಯ ದಾರಿಯನ್ನು ಹಿಡಿದು ಹೋದ. ದಾರಿಯಲ್ಲಿ ಒಬ್ಬರೂ ಭೆಟ್ಟಿಯಾಗಲಿಲ್ಲ. ತನ್ನ ಮನೆಗೆ ದೊಡ್ಡದೊಂದು ಕೀಲಿ ಬಿದ್ದಿತ್ತು. ಅತ್ತಿತ್ತ ನೆರೆಮನೆಗಳನ್ನು ಪರೀಕ್ಷಿಸಿದಾಗ ಅಲ್ಲಿಯೂ ಅವನ ಕಣ್ಣಿಗೆ ಮನುಷ್ಯರ ಮುಖಗಳ ಬದಲಾಗಿ ಕೀಲಿಗಳೇ ಕಂಡವು. ದಾದಾನ ಎದೆಯಲ್ಲಿ ನಿರಾಶೆ ತೊಗಲಬಾವಲಿಯಂತೆ ಪಕ್ಕ ಬಡಿಯಹತ್ತಿತು.

ಬಾಳಾಚಾರ್ಯರು ಎಂದೂ ಊರು ಬಿಟ್ಟು ಹೋಗುವವರಲ್ಲ. ಅವರ ಮನೆಗೆ ಹೋದರೆ ಎಲ್ಲ ಸಮಾಚಾರವೂ ತಿಳಿಯಬಹುದೆಂದೆನಿಸಿತು. ಆ ವಿಚಾರ ಮೂಡಿದೊಡನೆಯೇ ಅಲ್ಲಿಗೆ ನಡೆದ. ಬಾಳಾಚಾರ್ಯರ ಮನೆಯ ಬಾಗಿಲು ತೆರೆದಿತ್ತು. ಪಶ್ಚಿಮ ದಿಕ್ಕಿನ ಗೋಡೆ ಬಿದ್ದದ್ದರಿಂದ ಸಂಜೆ-ಸೂರ್ಯನ ಹೊಂಗಿರಣಗಳು ಆಚಾರ್ಯರ ಮನೆಯನ್ನೇ ಬೆಳಗಿದ್ದವು. ಮೊದಲು ದಾದಾನ ಲಕ್ಷ್ಯದಲ್ಲಿ ಈ ಸಂಗತಿ ಬರಲಿಲ್ಲ. ಹೊಸ್ತಿಲಲ್ಲಿಯೇ ನಿಂತುಕೊಂಡು, "ಆಚಾರೆಪ್ಪಾ, ಆಚಾರೆಪ್ಪಾ!" ಎಂದು ಕೂಗಿದ. ಉತ್ತರ ದೊರೆಯಲಿಲ್ಲ. ಬಾಗಿಲಲ್ಲಿ ಕೆರವನ್ನು ಬಿಟ್ಟು ಒಳಗೆ ಕಾಲಿಟ್ಟ. ಮನೆ ಬೈಲಾಗಿತ್ತು.

ತನ್ನ ಪ್ರತಿಧ್ವನಿಗೆ ತಾನೇ ಹೆದರುವಂತಾಯಿತು. ಒಳಗೆ ಯಾರೂ ಇರಲಿಲ್ಲ. ಪಡಸಾಲೆ, ನಡುಮನೆ, ಅಡಿಗೆಮನೆ, ದೇವರಮನೆ ಎಲ್ಲ ಕಡೆಗೂ ಒಳಹೊಕ್ಕು ನೋಡಿದ. ದೇವರಮನೆಯಲ್ಲಿ ಮಾತ್ರ ಆಚಾರ್ಯರು ಉಪಯೋಗಿಸುವ ವಸ್ತುಗಳೆಲ್ಲ ಬಿದ್ದಿದ್ದವು. ಕೃಷ್ಣಾಜಿನ ಒಂದು ಕಡೆಗೆ ಹಾಸಿತ್ತು. ಅದರ ಮೇಲೆಯೇ ಜಪಮಾಲೆ, ಗೀತೆಯ ಅಡ್ಡ ಓಲೆಗಳು ಬಿದ್ದಿದ್ದವು. ಎಲ್ಲದರ ಮೇಲೂ ಗೇಣು ಎತ್ತರದ ಕಸ ಬಿದ್ದಿತ್ತು. ಸೂರ್ಯನ ಕಿರಣಗಳು ತೀರ ಸಮೀಪದಲ್ಲಿಯೇ ಬಂದಿದ್ದರಿಂದ ಎಲ್ಲ ಕಡೆಗೂ ಬೆಳಕು ಝಗಝಗಿಸುತ್ತಿತ್ತು. ದೇವರ ಮುಂದಿನ ನಂದಾದೀಪ ಮಣ್ಣುಹಿಡಿದು ಹೋಗಿತ್ತು. ಅದರ ತುಂಬ ತುಂಬಿದ ಎಣ್ಣೆಯಲ್ಲಿಯೂ ಮಣ್ಣು ಬಿದ್ದಿತ್ತು.

ದಾದಾ ಅಲ್ಲಿಯೇ ಹಣೆಗೆ ಕೈ ಹಚ್ಚಿಕೊಂಡು ಕುಳಿತುಬಿಟ್ಟ. ಪಾದಳ್ಳಿಗೆ ಹಾತೊರೆದು ಬಂದರೆ ಅಲ್ಲಿ ಕಂಡದ್ದೇನು? ಬೀದಿ, ಮನೆಗಳೆಲ್ಲ ಶೂನ್ಯವಾಗಿದ್ದವು. ಇಲ್ಲಿ ಆಚಾರ್ಯರ ಮನೆಯಂತೂ ಕಳ್ಳ ಹೊಕ್ಕ ಮನೆಯಾಗಿತ್ತು. ದೇವರ ಪೆಟ್ಟಿಗೆ, ನಂದಾದೀಪ, ಕೃಷ್ಣಾಜಿನ ಎಲ್ಲ ಇವೆ. ಆದರೆ ಆಚಾರ್ಯರಾಗಲಿ ಅವರ ಪತ್ನಿಯಾಗಲಿ ಇಲ್ಲ. ದಾದಾನ ಮನಸ್ಸು ಕಳವಳಕ್ಕೀಡಾಯಿತು. ಊರು ಹಾಳಾಗಿರಬೇಕೇನೋ ನಿಜ, ಆದರೆ ಹೇಗೆ, ಯಾವಾಗ ತಿಳಿದುಕೊಳ್ಳಬೇಕಾಗಿತ್ತು. ದಾದಾ ಅಲ್ಲಿಂದೆದ್ದು ಗೌಡರ ಮನೆಯ ಕಡೆಗೆ ಹೊರಟ.

ಆಗ ಸೂರ್ಯ ಮುಳುಗಿದ್ದ. ಮಬ್ಬುಬೆಳಕು ಎಲ್ಲೆಡೆಗೂ ಹರಡಿತ್ತು. ಬೀದಿಯಲ್ಲಿ ಒಬ್ಬರೂ ಇರಲಿಲ್ಲ. ಗೌಡರ ಮನೆಯ ಕಡೆಗೆ ನೋಡಿದಾಗ ದಾದಾನಿಗೆ ತನ್ನ ಕಣ್ಣುಗಳನ್ನು ತಾನೇ ನಂಬದಂತಾಯಿತು. ಗೌಡರ ವಾಡೆ ಸುಟ್ಟು ಹೋಗಿತ್ತು. ಗೋಡೆಗಳೆಲ್ಲ ನಿತ್ರಾಣವಾಗಿ ಕುಸಿಬಿದ್ದಿದ್ದವು. ಆ ಹಾಳನ್ನು ನೋಡುವದೇ ದಾದಾನಿಗೆ ಸಾಧ್ಯವಾಗಲಿಲ್ಲ. ಕಣ್ಣೀರು ಉಕ್ಕಿಬಂದವು. ಪಾದಳ್ಳಿಗೆ ಆಗಿರುವದಾದರೂ ಏನು, ಎಂದು ಆಶ್ಚರ್ಯಪಡುತ್ತ ಅಲ್ಲಿಂದ ತಿರುಗಿದ.

ಜಾಗೀರದಾರರ ವಾಡೆಯ ಗತಿ ಏನಾಗಿರುವದೋ ಎಂದು ಗಾಬರಿಯಾಗಿ ಅತ್ತಕಡೆಗೆ ನಡೆದ. ನಿರ್ಜನವಾಗಿದ್ದ ಗ್ರಾಮದ ಬೀದಿಗಳಲ್ಲಿ ದಾದಾನಿಗೆ ತನ್ನ ಹೆಜ್ಜೆಯ ಸಪ್ಪಳ ತನಗೇ ಕೇಳತೊಡಗಿ ಗಾಬರಿಯಾಯಿತು. ಪುಣ್ಯಕ್ಕೆ ಜಾಗೀರದಾರರ ವಾಡೆ ಹಾಳಾಗಿರಲಿಲ್ಲ. ಆದರೆ ಅಲ್ಲಿಯೂ ದೊಡ್ಡದೊಂದು ಕೀಲಿಯೇ ಅವನನ್ನು ಸ್ವಾಗತಿಸಿತು. ಅಲ್ಲಿಂದ ದಾದಾ ಮಠಕ್ಕೆ ಬಂದ. ಮಠದಲ್ಲಿ ಪದದಪ್ಪ

ನವರಿದ್ದರೆ, ಇದೆಲ್ಲ ಹಾಳಿಗೆ ಅವರೇ ಕಾರಣರಾಗಿರುವರೇನೋ ಕೇಳಬೇಕೆಂಬ ಕೌತುಕದಿಂದ ದಾದಾ ಮಠದಲ್ಲಿ ಕಾಲಿಟ್ಟ.

ಮಠದಲ್ಲಿಯೂ ಅದೇ ಹಾಡು. ಮಠದ ಬಾಗಿಲುಗಳೆಲ್ಲ ತೆರದೇ ಇದ್ದವು. ಒಬ್ಬರೂ ಒಳಗೆ ಇರಲಿಲ್ಲ. ಬೇಸತ್ತು ದಾದಾ ಅಲ್ಲಿಯೇ ಒಂದು ಪಾವಟಿಗೆಯ ಮೇಲೆ ಕುಳಿತುಕೊಂಡ. ಪ್ಲೇಗೆಂದರೆ ಏನೆಂಬ ಕಲ್ಪನೆ ದಾದಾನಿಗಿರಲಿಲ್ಲ. ಪ್ಲೇಗು ಬಂದು ಎಷ್ಟೋ ಜನರು ಸಾಯುತ್ತಿರುವರೆಂದು ಮಾತ್ರ ಅವನು ಕೇಳಿದ್ದ. ಈಗ ಈ ಪರಿಸ್ಥಿತಿಯನ್ನು ನೋಡಿದಾಗ ಇನ್ನೊಂದು ಕಲ್ಪನೆ ಮೂಡಿತು. ಬಹುಶಃ ಜನರು ತನ್ನ ಕಣ್ಣಿಗೆ ಮಾತ್ರ ಕಾಣದಾಗಿರಬೇಕೇ ಎಂದೆನಿಸಿತು. ಯಾರಿಗೆ ಗೊತ್ತು? ಅದಕ್ಕೇ ಪ್ಲೇಗು ಎಂದು ಹೆಸರಿದ್ದರೆ? ವಿಚಾರಮಾಡಿಯೇ ದಾದಾನ ತಲೆ ಕೆಟ್ಟಿತು.

ಮಳೆಗಾಲದ ಸಂಜೆ ಬಹಳ ಹೊತ್ತು ನಿಲ್ಲಲಿಲ್ಲ. ಹೊಂಬಣ್ಣ ಕರಗಿ ಕತ್ತಲೆ ಆಳವಾಗುತ್ತ ನಡೆಯಿತು. ಅಲ್ಲಲ್ಲಿ ಕಾಗೆಗಳ ಕೂಗುವಿಕೆಯೇ ಕೇಳಬರುತ್ತಿತ್ತು. ಊರು ಯಥಾಪ್ರಕಾರ ನಿರ್ಜನವಾಗಿತ್ತು. ಕತ್ತಲೆ ಊರನ್ನು ತಬ್ಬಿಕೊಂಡಿತು.

ಚಿಕ್ಕಂದಿನಲ್ಲಿ ಕೇಳಿದ್ದ ಒಂದು ಕತೆ ನೆನಪಾಯಿತು ದಾದಾನಿಗೆ. ಯಾವುದೋ ಒಂದು ಊರು. ಆ ಊರ ಅರಸನ ಪಾಪದ ಫಲವಾಗಿ ಊರಿಗೂರೇ ಶಾಪಗ್ರಸ್ತ ವಾಗಿತ್ತಂತೆ. ಒಂದು ದಿನ ಇನ್ನೊಂದು ನಗರದ ರಾಜಕುಮಾರನೊಬ್ಬ ಈ ಊರಿಗೆ ಬಂದ. ಆಗ ಹಗಲಾಗಿತ್ತು. ಊರಲ್ಲಿ ಪೇಟೆ, ಕೋಟೆ, ತೋಟಗಳು, ಬೀದಿಗಳು, ಸೌಧಗಳು, ಎಲ್ಲ ಇದ್ದವು. ಆದರೆ ಜನರೇ ಇರಲಿಲ್ಲ. ರಾಜಕುಮಾರ ಇಡೀ ದಿನ ತಿರುಗಾಡಿದ. ಒಬ್ಬರೂ ಕಾಣಬರಲಿಲ್ಲ. ಅರಮನೆಯಲ್ಲಿಯೂ ಯಾರೂ ಇರಲಿಲ್ಲವಂತೆ. ರಾಜಕುಮಾರ ಇದೆಲ್ಲವನ್ನು ನೋಡಿ ಬೇಸತ್ತು ಹೋದ. ಸಂಜೆಯಾಯಿತು. ಕತ್ತಲೆಯಾಯಿತು. ಊರು ಬಿಟ್ಟು ಹೋಗಬೇಕೆಂದು ರಾಜ-ಕುಮಾರ, ಅರಮನೆಯ ಹತ್ತಿರ ನಿಂತಿದ್ದವನು ಮರಳಿದ. ಕತ್ತಲೆಯಾದೊಡನೆ ಗುಡಿಗಳಿಂದ ಗಂಟೆ ಬಾರಿಸುವದು ಕೇಳಿಸಿತಂತೆ. ಪೇಟೆಯ ತುಂಬ ದೀಪಗಳು ಬೆಳ ಗುತ್ತಿದ್ದವು. ಭರದಿಂದ ವ್ಯಾಪಾರ ನಡೆದಿತ್ತು. ವೇಷಭೂಷಣಗಳಿಂದ ಅಲಂಕೃತ ರಾದ ಜನರು ಓಣಿಗುಂಟ ಬರುತ್ತಿದ್ದರು. ಕೋಟೆಯ ದಿಕ್ಕಿನಿಂದ ಸನ್ನೆಗಹಳೆಯ ಸಪ್ಪಳ ಕೇಳಬಂತು. ಅರಮನೆಯಿಂದ ಸಿಂಗರಿಸಿದ ರಥದಲ್ಲಿ ಅರಸ ಬರುತ್ತಿದ್ದ. ಅವನೆದುರು ಸಾಲಾಗಿ ಸೈನಿಕರು ಬರುತ್ತಿದ್ದರು. ರಾಜಕುಮಾರ ಆಶ್ಚರ್ಯದಿಂದ ದಂಗುಬಡಿದುಹೋದ. ಬೀದಿಯಲ್ಲಿ ಒಬ್ಬ ಯುವಕನನ್ನು ಕಂಡು 'ಇದೆಲ್ಲ ಏನು?'

ಎಂದು ಕೇಳಿದ. ಆಗ ಆ ಯುವಕನಿಂದ ತಿಳಿದುಬಂತು. ಆ ಊರು ಹಗಲಿನಲ್ಲಿ ಸತ್ತು ಇರುಳಿನಲ್ಲಿ ಬದುಕಿರುತ್ತಿತ್ತು. ಅರಸನ ಪಾಪವೇ ಅದಕ್ಕೆ ಕಾರಣವಾಗಿತ್ತಂತೆ. ಇರುಳೆಲ್ಲ ಸಂಭ್ರಮ, ಆಟಪಾಟಗಳು ನಡೆದು, ಬೆಳಗಿನಲ್ಲಿ ಎಲ್ಲವೂ ಮಾಯವಾಗಿರುತ್ತಿತ್ತು. ಇರುಳು ಮುಗಿಯುವದರಲ್ಲೇ ಎಲ್ಲವನ್ನೂ ಮುಗಿಸಬೇಕಾಗಿತ್ತು. ಆ ಯುವಕನಿಗೇ ವೇಳೆಯಿರಲಿಲ್ಲ. ಬಹಳ ಹೊತ್ತಿನ ವರೆಗೆ ನಿಂತು ಮಾತಾಡಲಿಲ್ಲ ಕೂಡ. ಬೆಳಕಾಗುವದರಲ್ಲೇ ಅವನು ತನ್ನ ನಲ್ಲೆಯನ್ನು ಕಂಡು ಬರಬೇಕಾಗಿತ್ತು. ರಾಜಕುಮಾರನಿಗೆ ಹೇಳಿ ಹೊರಟೇ ಹೋದ. ರಾಜಕುಮಾರ ಇಡೀ ರಾತ್ರಿ ತಿರುಗಾಡಿದ. ಯುವಕ ಹೇಳಿದಂತೆಯೇ ಎಲ್ಲವೂ ನಡೆದಿತ್ತು. ಅರುಣೋದಯವಾಗಿ, ಸೂರ್ಯನ ಹೊಂಗಿರಣಗಳು ಭೂಮಿಯನ್ನು ಮುಟ್ಟಿದಾಗ ಮಾಟ ಹಾಕಿದಂತಾಯಿತು. ಜನರೆಲ್ಲ ಇದ್ದಕ್ಕಿದಂತೆ ಅದೃಶ್ಯರಾದರು. ಹಗಲ ಬೆಳಕು ಶೂನ್ಯದೊಡನೆ ಊರನ್ನು ಪ್ರವೇಶಿಸಿತ್ತು.

ದಾದಾನಿಗೆ ಆ ಕತೆಯ ವಿವರಗಳೆಲ್ಲ ಈಗ ನೆನಪಾದವು. ಬಹುಶಃ ಪಾದಳ್ಳಿಯೂ ಶಾಪಗ್ರಸ್ತವಾಗಿದೆಯೇನೋ ಎಂದೆನಿಸಿತು. ಪಾದಳ್ಳಿಯಲ್ಲಿ ಪಾಪಕ್ಕೇನೂ ಕೊರತೆಯಿಲ್ಲ. ಪ್ಲೇಗು ಅದರ ಫಲವೇ ಇರಬೇಕು. ಸಾವಕಾಶವಾಗಿ ಕತ್ತಲೆ ವ್ಯಾಪಿಸಿತು. ದಾದಾನಿಗೆ ಮತ್ತೆ ತನ್ನ ಕತೆಯ ನೆನಪಾಯಿತು. ಯಾರಾದರೂ ಬರಬಹುದೇನೋ ಎಂದು ಹೆದರಿಕೆಯೂ ಆಯಿತು. ಕುತೂಹಲವೂ ಹುಟ್ಟಿತು. ಅಲ್ಲಿ ಕೂಡಲಾಗದೆ ಮತ್ತೆ ಎದ್ದು ಹೊರಟ.

ಆದರೆ ಪಾದಳ್ಳಿಯ ಪರಿಸ್ಥಿತಿ ಇನ್ನೂ ಶೋಚನೀಯವಾಗಿತ್ತು. ಕತೆಯಲ್ಲಿಯ ಊರು ರಾತ್ರಿಯಾದರೂ ಬದುಕಿರುತಿತ್ತು. ಇಲ್ಲಿ ಇರುಳೂ ಕೂಡ ಹಗಲಿನಷ್ಟೇ ಶೂನ್ಯವಾಗಿತ್ತು; ಹಗಲಿಗಿಂತ ಹೆಚ್ಚು ಭಯಾನಕವಾಗಿತ್ತು. ಕತ್ತಲೆ, ನಿರ್ಜನತೆ, ಭಯ ಇವೆಲ್ಲವುಗಳ ಮೂಲಕ ಮಾಟದಲ್ಲಿ ದಾದಾನಿಗೆ ನಂಬಿಕೆ ಮೂಡಿತು. ಜನರು ಸತ್ತಿರಲಿಕ್ಕಿಲ್ಲ, ಕೇವಲ ತನ್ನ ಕಣ್ಣಿಗೆ ಕಾಣದಾಗಿರಬೇಕು ಅಷ್ಟೇ ಎಂದುಕೊಂಡ. ರಾತ್ರಿ ಇಲ್ಲಿಯೇ ಇದ್ದು ನೋಡೋಣವೆಂದುಕೊಂಡ.

ಊಟದ ಗೊಡವೆ ಇರಲಿಲ್ಲ. ಅದರ ನೆನಪುಕೂಡ ದಾದಾನಿಗೆ ಆಗಲಿಲ್ಲ. ಆದರೆ ನಡೆದು ನಡೆದು ಒಂದೇ ಸವನೆ ದಣಿವಾಗಿದ್ದರಿಂದ ನಿದ್ದೆ ಬೇಕೆನಿಸಿತು. ಬಾಲಾಚಾರ್ಯರ ಮನೆಯ ಪಡಸಾಲೆಯಲ್ಲಿಯೇ ತನ್ನ ಕಂಬಳಿಯನ್ನು ಹಾಸಿ ದಾದಾ ಮಲಗಿದ.

ರಾತ್ರಿ ಬಲಿಯುತ್ತ ನಡೆದಂತೆ ಗೂಗೆಗಳ ಕೂಗು ಕೇಳತೊಡಗಿತು. ಆದರೆ ನಾಯಿಗಳ ಬೊಗಳುವಿಕೆ ಮಾತ್ರ ಕೇಳುತ್ತಿರಲಿಲ್ಲ. ದಾದಾನಿಗೆ ನಿದ್ದೆ ಹತ್ತಲು ತಡವೇನೂ ಆಗಲಿಲ್ಲ. ನಡುರಾತ್ರಿಯಾಗಿರಬೇಕು. ಕತ್ತಲೆ ದಟ್ಟವಾಗಿ ಹಬ್ಬಿತ್ತು. ದೂರದಿಂದ ಜನರು ಜಗಳಾಡುವ ಸದ್ದು ಕೇಳಿಸಿತು. ಮಾತು ಸ್ಪಷ್ಟವಾಗಿ ಕೇಳುತ್ತಿರಲಿಲ್ಲವಾದರೂ, ದನಿ ಏರಿದಂತಿತ್ತು. ಸ್ವಲ್ಪಹೊತ್ತಿನ ಮೇಲೆ ವಾಲೀಕಾರ ಮಲ್ಲ ಓಡುತ್ತೋಡುತ್ತ ಬಂದ. "ಗೌಡರ ಹಗೇ ಲಿಂಗಪ್ಪ ಲೂಟಿ ಮಾಡಿಸಿದಾ ಏಳ ದಾದಾ ಏಳ!" ಎಂದು ಕೂಗುತ್ತಿದ್ದ. ಗೌಡಿತಿ ಕರೆದಿರುವಳೆಂದೂ ಹೇಳಿದ. "ಗೌಡರ ವಾಡೇ ಸುಟ್ಟೈತೆಲ್ಲಲೇ? ಗೌಡಿತಿ ಕರಿಯಾಕ ಎಲ್ಲ್ಯದಾಳ?" ಎಂದ ದಾದಾ. "ಅಲ್ಲೇ ನೋಡ ಬಾ, ತಿಳೀತೈತಿ ನಿನಗ?" ಎಂದು ವಾಲೀಕಾರ ಮಲ್ಲ ಅವನನ್ನು ಅವಸರಿಸಿದ.

ದಾದಾ ಅವನ ಹಿಂದಿನಿಂದಲೇ ನಡೆದ. ಗೌಡರ ವಾಡೆ ಮೊದಲಿದ್ದಂತೆಯೇ ಇತ್ತು. ಪಾರ್ವತೆವ್ವ ದಾದಾನನ್ನು ಸನ್ನೆಮಾಡಿ ಒಳಗೆ ಕರೆದಳು. ದಾದಾ ಪಡಸಾಲೆಯಲ್ಲಿ ಕಾಲಿಟ್ಟ. "ಲಿಂಗಪ್ಪ ನನ್ನ ಮನೀ ಹಾಳ ಮಾಡಿದ ದಾದಾ! ದೇವರು ನಿನ್ನ ಬೆನ್ನ ಮ್ಯಾಗ ಇದ್ದಾ ಅಂತ ನಿನಗ ಏನ ಆಗಿಲ್ಲ. ನನ್ನ ಕರ್ಮಾ, ಏನ ಮಾಡೂದೈತಿ? " ಎಂದು ಕಣ್ಣೀರು ತೆಗೆದಳು. "ನಿನ್ನ ಮಗಾ ಇರೂತನಾ ಅಳಬ್ಯಾಡಯವ್ವಾ. ಆ ಲಿಂಗಪ್ಪನ್ನ ಒಂದ ಕೈ ನೋಡೇಬಿಡತೀನಿ" ಎಂದು ದಾದಾ ಅವಡುಗಚ್ಚಿ ಮೇಲೇಳಬೇಕೆಂದಿದ್ದ. ಅಷ್ಟರಲ್ಲಿ "ಏನ ನೋಡತಿ? ವಾಡೇದ ಕಬಜಾ ತೊಗೊಂಡು ಕುಂತೀನು" ಎಂದು ನಕ್ಕು ಲಿಂಗಪ್ಪ ದಾದಾನ ಮೇಲೇರಿ ಬಂದ. ದಾದಾನಿಗೆ ಪ್ರತಿಭಟಿಸಲು ಶಕ್ತಿಯೇ ಉಳಿದಿರಲಿಲ್ಲ. ಕೆಳಗೇ ಬಿದ್ದ. ಅಷ್ಟರಲ್ಲಿ ಜೈನರ ಜಿನ್ನಪ್ಪ ಬಂದು, "ಏಳ ದಾದಾ, ಮಠದಾಗ ಚಿಮಣಾ ಸತ್ತು ಬಿದ್ದಾಳ!" ಎಂದು ಕೈಹಿಡಿದು ಎಬ್ಬಿಸಿದ.

ದಾದಾ ಗಾಬರಿಗೊಂಡು ಎದ್ದು ಕುಳಿತ. ಪಶ್ಚಿಮ ದಿಕ್ಕಿನಿಂದ ಬೀಸುವ ಗಾಳಿಗೆ ಬೆವೆತ ಮೈಒಡ್ಡಿದ್ದರಿಂದ ಚಳಿಯೆನಿಸಿತು. ಕಣ್ಣೊರೆಸಿಕೊಂಡು ನೋಡಿದಾಗ ಕತ್ತಲೆ ರಾವುಬಡಿಯುತ್ತಿತ್ತು. ಇದೇನು ಕನಸೋ, ಅಥವಾ ಭೂತಚೇಷ್ಟೆಯೋ ಅವನಿಗೆ ತಿಳಿಯದಾಯಿತು. ಗೂಗೆ ಮತ್ತೊಮ್ಮೆ ಕೂಗಿತು. ಅಲ್ಲಿ ಮಲಗಲೂ ಧೈರ್ಯವಾಗಲಿಲ್ಲ ದಾದಾನಿಗೆ. ಸರಕಾರೀ ತೋಟಕ್ಕಾದರೂ ಹೋಗೋಣವೆಂದು ಅಲ್ಲಿಂದೆದ್ದು ಹೊರಟ. ತೋಟದಲ್ಲಿ ಯಾರಾದರೂ ಭೆಟ್ಟಿಯಾಗಬಹುದೆಂದು

ಅವನಿಗೆ ಆಸೆಯಿತ್ತು.

ಇನ್ನೂ ರಾತ್ರಿ ಇತ್ತು. ದಾದಾ ತೋಟದಲ್ಲಿಯ ಗುಡಿಸಲಿನ ಹತ್ತರ ಹೋಗಿ ಕೂಗಿದ. ಒಳಗಿಂದ 'ಯಾರವರು?' ಎಂದು ದನಿ ಕೇಳಬಂತು. ದಾದಾ ತನ್ನ ಹೆಸರು ಹೇಳಿ ಒಳಗೆ ನಡೆದ. ಕಮತಿಗರ ಕರಿಯಪ್ಪ ಅಲ್ಲಿ ಮಲಗಿದ್ದ. ದಾದಾನ ಗುರುತು ಹತ್ತಿದೊಡನೆ ಕರಿಯಪ್ಪ ಅವನ ಕುತಿಗೆಗೆ ತೆಕ್ಕೆಬಿದ್ದು ಅಳಹತ್ತಿದ. ದುಃಖದ ಆವೇಗ ಕಡಿಮೆಯಾದ ಮೇಲೆ ಇಬ್ಬರೂ ಮಾತಾಡುತ್ತ ಕುಳಿತರು. ಕರಿಯಪ್ಪ ಪಾದಳ್ಳಿಯ ಅನವಸ್ಥೆಯನ್ನೆಲ್ಲ ವಿವರಿಸಿದ.

ಭಯದಿಂದ ನಡುಗುತ್ತಲೇ ದಾದಾ ಚಿಮಣಾಳ ವರ್ತಮಾನವನ್ನು ಕೇಳಿದ. ಕರಿಯಪ್ಪ ತನಗೆ ಗೊತ್ತಿದ್ದಷ್ಟನ್ನು ಹೇಳಿದ. ಅದನ್ನು ಕೇಳಿ ದಾದಾನ ರಕ್ತ ಕುದಿಯಿತು. "ಹಾಗಾರ, ಆಕೀ ಕೂಸು ಎಲ್ಲೈತಿ?" ಎಂದು ಆರ್ತನಾಗಿ ಕೇಳಿದ.

"ಕೂಸು ಮಾದರ ಮಲ್ಲೀ ಹಂತ್ಯಾಕ ಇತ್ತು. ಆದರ ಮಾದರಗೇರ್‍ಯಾಗ ಹೊಳೀ ನೀರು ಹೊಕ್ಕು ಹಾಳ ಮಾಡಿದಾಗ, ನಿಂದರಲಾಕ ಜಾಗಾ ಸಿಗಲಿಲ್ಲ. ಆಗ ಮಾದರ ಚನ್ಯಾ, ಮಲ್ಲಿನ್ನ ಮತ್ತು ಆ ಕೂಸಿನ್ನ ಕರಕೊಂಡು ಸೊಲ್ಲಾಪುರಕ್ಕ ಹೋದ. ಅಲ್ಲೆ ಅವನ ಸ್ವಾದರತ್ತಿ ಮಗಳ ಅದಾಳಂತ. ಬದಕಿದ್ದರ ಸೊಲ್ಲಾಪುರದಾಗ ಇರಬೇಕು. ಆದರ ಆ ಕೂಸು ದೊಡ್ಡದಾದದ್ದು ಆಚಾರೆಪ್ಪನ ಕಣ್ಣು ಕಾಣಬೇಕಾಗಿತ್ತು." ಎಂದು ನುಡಿದ.

ಬಾಳಾಚಾರ್ಯರು ತುಂಬಿದ ಹೊಳೆಯಲ್ಲಿ ತೇಲಿಹೋದ ಕತೆಯನ್ನು ಕರಿಯಪ್ಪ ಹೇಳಿದಾಗ ದಾದಾನ ಕಣ್ಣಿಗೆ ಕತ್ತಲುಗವಿಯಿತು. "ಎಂತಾ ಪುಣ್ಯವಂತರು! ಅವರಿಗೂ ಈ ಸಾವು ಬಂತಽ!" ಎಂದು ದಾದಾ ಉದ್ಗರಿಸಿದ.

"ತವಸ್ಮಾ. ಈ ಬ್ಯಾನ್ಯಾಗ ಹ್ವಾದವರೆಲ್ಲ ಪುಣ್ಯವಂತರಂತ ತಿಳಿ. ಈಗ ನೋಡಿದಿಲ್ಲೋ? ಭೂಮಿ, ಬೀಜಾ ಕಾಣಸೋವರು ಗತಿ ಇಲ್ಲದ ಬಿದ್ದೈತಿ. ಕೆಲಸಾ ಮಾಡಿಲ್ಲ, ಭೂಮಿ, ಮಳೀ ಆಗಿ ಹಸಿ ಆಗೇತಿ. ಬಿತ್ತಲಾಕ ಜನಾನಽ ಇಲ್ಲ! ಈ ಊರಾಗ ಸತ್ತವರ್‍ಯಾರೋ, ಬದಕಿದವರ್‍ಯಾರೋ ಲೆಕ್ಕಾನ ಇಲ್ಲ. ಪ್ಲೇಗ ಬಂದೈತಿ ಅಂತ, ಮನ್ಯಾಗ ಇದ್ದವರನೆಲ್ಲ ಜಂತಹಿಡದು ಹೊರಗ ದಬ್ಬಿದರಂತ! ಊರಿ ಬಂದ ನೆಳ್ಳಿಕೋತ ಬಿದ್ದವರನ್ನ ಪೋಲೀಸರು ಎತ್ತಿ ಹೊರಗ ಒಗದರಂತ. ಏನೋ! ಜನರು ಹೆದರೀ ಸತ್ತರಂತ. ಉಳಿದವರು, ತಮ್ಮ ಹತ್ತಿದವರು ಇಲ್ಲಿ ಇರಲಾಕ ಹೋಗ್ಯಾರಂತ. ಬಾಳೀವು ಏನ ಸುಕಾ ಐತಿ, ಹೇಳು ದಾದಾ?" ಎಂದು

ಕೇಳಿದ.

ಕರಿಯಪ್ಪ ಹೇಳಿದ್ದ ಕತೆ ಹೃದಯವಿದ್ರಾವಕವಾಗಿತ್ತು. ಸತ್ವಪೂರ್ಣ ವಾಗಿ ಸಮೃದ್ಧವಾಗಿ ಬೆಳೆದಿದ್ದ ಬಾಳು, ಕ್ಷಣದಲ್ಲಿ ನಿರ್ನಾಮವಾಗುವದೆಂದರೇನು? ಹೊಳೆ, ಪ್ಲೇಗು, ಬೆಂಕಿ, ಸಾವು ನೂರು ರೂಪಗಳಲ್ಲಿ ಪ್ರಕಟವಾಗಿ ಪಾದಳ್ಳಿಯನ್ನು ನುಂಗಿತ್ತು. ದಾದಾನಿಗೆ ಏನೇನೋ ಕೇಳಬೇಕೆಂವೆನಿಸಿತ್ತು. ಆದರೂ ಕೇಳುವ ದಾಗಲಿಲ್ಲ. ವಿಚಾರಗಳು ಅಸ್ಪಷ್ಟವಾಗಿದ್ದವು. ತನ್ನ ಊರು ಇಷ್ಟು ಬೇಗ ಹೇಗೆ ಹಾಳಾಯಿತೆಂಬುದೇ ಒಡೆಯಲಾಗದ ಒಗಟಾಗಿತ್ತು. ದಾದಾ ದಂಗುಬಡಿದು ಹೋಗಿದ್ದ. ಆದರೂ ಏನಾದರೂ ಕೇಳುತ್ತಿರಬೇಕೆಂದು ಕೇಳಿದ. "ಮತ್ತ ಇಂತಾ ಅನಾಹುತದಾಗ ನೀ ಹ್ಯಾಗ ಉಳದೆಪಾ?" ಎಂದು ಕೇಳಿದ.

ಕರಿಯಪ್ಪ ಕೆಮ್ಮಿದ. ಒಮ್ಮೆ ತಲೆ ಅಲ್ಲಾಡಿಸಿ ಹಿಂದಿನ ನೆನಪೊಂದನ್ನು ಜಗ್ಗುವವರಂತೆ ಕೈಚಾಚಿ ಹೇಳಿದ: "ಏನ ಹೇಳೂದೈತಿ ಬಾರಪಾ! ಪಡದಪ್ಪನವರು ಗೂಡ ಸಾತೇನಹಳ್ಳಿಗೆ ಹೋಗಿದ್ದೆ ಅಂತ ಬದಕಿ ಉಳದೆ ಅನ್ನು. ಚಿಮಣಾ ಸತ್ತ ಸುದ್ದಿ ಬರಾಣಾ ಪಡದಪ್ಪನೋರು ಸೊಲ್ಲಾಪುರಕ್ಕ ಜಿಗದರು! ನಾನು ಇತ್ತಾಗ ಊರ ಕಡೆ ಬಂದ್ನಿ. ಮಡ್ಡ್ಯಾಗ ಕಾಶೀಮಸಾಬ ತನ್ನ ಮನಿಯವರ್ನ ಕಟಿಗೊಂಡು ವಿಜಾಪುರಕ್ಕ ಹೊಂಟಾವ ಇದರಿಗೆ ಭೆಟ್ಟಿಯಾದ. 'ಊರಿಗ್ಯಾಕ ಹೊಂಟಿಲೇ? ಜೀವ ಬ್ಯಾಡಾಗೇತಿ ಏನು? ಬೇಕಾರ ತ್ವಾಟದಾಗ ಹೋಗಿ ಇರು' ಅಂದ. ನನ್ನ ಹೆಂಡ್ರುಮಕ್ಕಳು ಪಿಡುಗಿನ್ಯಾಗ ಸತ್ತುಹೋಗಿದ್ದರು ಅಂತ ಅವನs ಹೇಳಿದ. ಇಲ್ಲಿಗೆ ಬಂದ ವಸ್ತೀ ಹಾಕಿದೆ. ದಿನಾನೂ ಊರ ಬಿಟ್ಟು ಜನಾ ಹೋಗೂದು ನೋಡ ಕೊಂತ ಇರತಿದ್ದೆ. ನನ್ನ ಕಣ್ಣದರಿಗೆ ಎಲ್ಲಾರೂ ಫಾಣಾಫಾಣ ಆಗಿ, ಊರ ದಿಕ್ಕದಿವಾಳಿ ಆಗಿ ಹೋತು. ನಾನೂ ಹೋಗಬೇಕನ್ನಾವನs! ಆದರ ಧಣಿ ಅನ್ನ ಉಂಡು ಬೆಳದ ದೇಹ, ಧಣೀ ಬೆಳಿ ಕಾಯಕೊಂತ ಇಲ್ಲೇ ಬೀಳಲಿ ಅಂತ ಇದ್ದ ಬಿಟ್ಟೇನು. ಇಲ್ಲೇ ಮಣ್ಣಾಗೂದು ಒಂದ ದಿವಸ ಐತೆಲ್ಲಾ? ನಂದರ ಏನ ಐತಿ ಹೆಂಡರಿಲ್ಲಾ, ಮಕ್ಕಳಿಲ್ಲಾ! ಪಡದಪ್ಪನವರ ಮಠಾ ಏನು, ಧಣೇರ ತ್ವಾಟ ಏನು ಎಲ್ಲಾ ಒಂದs ಅಲ್ಲ?" ಎಂದು ಕರಿಯಪ್ಪ ದೀರ್ಘವಾದ ನಿಟ್ಟುಸಿರಿನೊಂದಿ ಹೇಳಿದ.

ಇಬ್ಬರಿಗೂ ಮಾತು ಮುಗಿಸುವದು ಬೇಕಾಗಿರಲಿಲ್ಲ. ದಾದಾ ಮತ್ತೆ ಮತ್ತೆ ಏನಾದರೂ ನೆನಪು ಬಂದು ಕೇಳುತ್ತಿದ್ದ. ಗೌಡರ ವಾಡೆಯಲ್ಲಿ ಪಾರ್ವತೆವ

ಜ್ವರದಿಂದ ನರಳುತ್ತ ಬಿದ್ದದ್ದು, ಹೊರಗೆ ಹಾಕಬೇಕೆಂದರೂ ಸಾಧ್ಯವಾಗದೆ ಇದ್ದದ್ದು, ಅದೇ ವಾಡೆಗೆ ಬೆಂಕಿ ಹಚ್ಚಿದ್ದು, ಮಠದಲ್ಲಿಯ ಅನಾಹುತಗಳು, ಚಿಮಣಾಳ ಆತ್ಮ ಹತ್ಯೆ, ಬಾಳಾಚಾರ್ಯರು ಹೊಳೆಯಗುಂಟ ತೇಲಿಹೋದದ್ದು, ಅವನ ಕಣ್ಣಮುಂದೆ ದುಃಖದ ಮೆರವಣಿಗೆ ಒಂದೇಸವನೆ ನಡೆದಿತ್ತು. ಸತ್ತುಹೋದವರೆಲ್ಲರೂ ಆತ್ಮೀಯ ರಾಗಿದ್ದರು. ಆಡುತ್ತಾಡುತ್ತ ಕತೆ ಹಿಂದಕ್ಕೆ ಹೋಗುತ್ತಿತ್ತು. ದಾದಾ ತನ್ನ ಪರಾಕ್ರಮವನ್ನೆಲ್ಲ ಒಂದೊಂದಾಗಿ ನೆನೆಯುತ್ತಿದ್ದ. ಗೌಡರ ಹೊಲದಲ್ಲಿಯ ಬೆಳೆ ಯನ್ನು ಕದಿಯಲು ಬಂದಾಗ ತಾನು ಅವರನ್ನು ಓಡಿಸಿದ್ದು, ತನ್ನ ಮೇಲೆ ವಾರಂಟು ಇದ್ದಾಗ ಪಾರ್ವತೆವ್ವ ತನ್ನನ್ನು ಉಳಿಸಿಕೊಂಡದ್ದು, ಹೋಳಿಹುಣ್ಣಿವೆಯ ಸಂದರ್ಭ ದಲ್ಲಿ ಗೌಡರ ಮನೆಯನ್ನು ಕಾದದ್ದು — ಒಂದೇ, ಎರಡೇ? ಈ ಎಲ್ಲ ಗೊಂದಲ ಗಳಿಗೂ ಗೌಡರ ಮರಣ, ಅದಕ್ಕೂ ಹಿಂದೆ ಹೋದರೆ ತನ್ನ ಕಕ್ಕನ ಮರಣ, ಚಿಮಣಾಳ ಕೌಮಾರ್ಯಭಂಗ ಇವು ಮೂಲವಾಗಿದ್ದವು. ದಾದಾ ಎಲ್ಲರ ಬಗ್ಗೆಯೂ ಕೇಳಿಕೊಂಡ. ಬಾಳಾಚಾರ್ಯರಿಂದ ಮೊದಲ್ಗೊಂಡು ವಾಲೀಕಾರ ಮಲ್ಲನ ವರೆಗೂ ಎಲ್ಲರ ಸಮಾಚಾರವೂ ಅವನಿಗೆ ಬೇಕಾಗಿತ್ತು.

ಮೂಡಣದಲ್ಲಿ ಹೊತ್ತು ಮೂಡುವ ವರೆಗೂ ಇಬ್ಬರೂ ಮಾತಾಡಿದರು. ಕರಿಯಪ್ಪನಿಗಂತೂ ಇತ್ತೀಚೆಗೆ ಒಂಟಿಗತನದಲ್ಲಿ ಕಳೆಕಳೆದು ಜನರೆಂದರೆ ಬಂಗಾರ ವಾಗಿತ್ತು. ದಾದಾ ದೊರೆತದ್ದು ನಿಧಿ ದೊರೆತಂತಾಗಿತ್ತು. ಹೊಟ್ಟೆತುಂಬ ಇಬ್ಬರೂ ಮಾತಾಡಿಕೊಂಡರು. ಬೆಳಗಾದ ಮೇಲೆ ಮಾತು ಮುಗಿಸುವದು ಅನಿವಾರ್ಯ ವಾಗಿತ್ತು.

ದಾದಾನಿಗೆ ಇನ್ನೊಮ್ಮೆ ಪಾಡಳ್ಳಿಯನ್ನು ಕಣ್ಣುಮುಟ್ಟ ನೋಡಬೇಕಾ ಗಿತ್ತು. ತಿರುಗಿ ಇಂದುಪುರಕ್ಕೆ ಹೊರಡುವ ಮುನ್ನ ಪಾಡಳ್ಳಿಯನ್ನೊಮ್ಮೆ ನೋಡಿ ಕೊಂಡು ಹೋಗಬೇಕಾಗಿತ್ತು. ಕರಿಯಪ್ಪನನ್ನು ಜೊತೆಮಾಡಿಕೊಂಡು ಊರೊ- ಳಗೆ ತಿರುಗಿ ಹೊರಟ. ಕರಿಯಪ್ಪ ಇನ್ನೂ ಉಳಿದಿದ್ದ ಮಾತುಗಳನ್ನು ದಾರಿ ಯಲ್ಲಿಯೇ ಹೇಳಿದ.

ಮತ್ತೆ ಬರಿದಾಗಿದ್ದ ಪಾಡಳ್ಳಿ ಅವನನ್ನು ಸ್ವಾಗತಿಸಿತು. ಬಿರುಗಾಳಿ ಹಾಗೂ ಮಳೆಯ ಹೊಡೆತಕ್ಕೆ ಕೆಲವು ಮನೆಗಳು ಬಿದ್ದಿದ್ದವು. ಉಳಿದ ಮನೆಗಳು ಮಾತ್ರ ಇನ್ನೂ ಗಟ್ಟಿಮುಟ್ಟಾಗಿಯೇ ಇದ್ದವು. ಯಾರದೋ ಬರವಿಗಾಗಿ ಕಾಯುತ್ತಿ ದ್ದವು. ಎಂದು ತಿರುಗಿ ಪಾಡಳ್ಳಿ ತುಂಬಬೇಕೋ ಎಂದು ದಾದಾ ಚಿಂತಿಸತೊಡಗಿದ.

ವರ್ಷದ ಹಿಂದೆಯೇ ಪಾದಳ್ಳಿ ಬರಿದಾಗತೊಡಗಿತ್ತು. ದೇಶಪಾಂಡೆಯವರ ವಾಡೆಯ
ಬಾಗಿಲಂತೂ ಎಂದೋ ಮುಚ್ಚಿತ್ತು. ಪುತಳಾಬಾಯಿ ಸತ್ತು, ಬಾಪೂಸಾಹೇ
ಕನಕೇರಿಗೆ ಹೋದೊಡನೆ ಜಾಗೀರದಾರರ ದೊಡ್ಡ ವಾಡೆ ಬರಿದಾಗಿತ್ತು. ಗೌಡರ
ಸತ್ತ ಕೂಡಲೆ ಅವರ ಮನೆ ಬರಿದಾಗುವ ದಾರಿಯನ್ನೇ ಕಾಯುತ್ತಿತ್ತು. ಈ
ಸಿಡುಗು ಬಂದು, ಹೊಳೆ ತುಂಬಿ ಬಂದು ಉಳಿದವರನ್ನು ಹೊರದೂಡಿದ್ದವು. ಪಾ
ಳ್ಳಿಯ ನೆಲಕ್ಕೆ ಮನುಷ್ಯವಸತಿಯ ಬೇಸರ ಬಂದಿತ್ತೇನೋ !

ಆ ಹಾಳನ್ನು ಕಣ್ಣಿಂದ ನೋಡಿ ದಾದಾನಿಗೆ ಅಲ್ಲಿ ನಿಲ್ಲುವದಾಗಲಿಲ್ಲ. ಹಳೆಯ
ನೆನಪುಗಳೆಲ್ಲ ಅಲ್ಲಿ ದೆವ್ವವಾಗಿ ತಿರುಗಾಡುತ್ತಿರುವಂತೆ ಕಂಡಿತು. ಚಾವಡಿಯ
ಹಿಂದೆಯೇ ದಾದಾ ಕಾರಹುಣ್ಣಿವೆಯ ದಿನ ಎತ್ತುಗಳನ್ನು ತರುಬಿದ್ದ. ಚಾವಡಿಯ
ಫಕರುದ್ದೀನ ಫೌಜದಾರನ ಜೊತೆಗೆ ಜಗಳವಾಡಿದ್ದ. ಗೋಪಾಲಕೃಷ್ಣನ ಗುಡಿಯ
ಕಟ್ಟಿಯ ಮೇಲೆ, ಬ್ರಾಹ್ಮಣರ ಮನೆಗಳಿರುವ ಬೀದಿಯಲ್ಲಿ ಬಾಳಾಚಾರ್ಯ
ಎತ್ತರವಾದ ಮೂರ್ತಿ ತಿರುಗಾಡುವದನ್ನು ಹೇಗೆ ಮರೆಯಬೇಕು? ಗರಡಿಮನೆಯ
ಗೋಡೆಗಳ ಮೇಲೆ ಚಿತ್ರಿಸಿದ್ದ ಹನುಮಂತನ ವಿಕಾರವಾದ ಚಿತ್ರಕ್ಕೂ ಇಂದ
ಎಂಥ ಜೀವಕಳೆ ಬಂದಿತ್ತು! ಮನುಷ್ಯವಸತಿಯ ವಾಸನೆ ಬಡಿದು ಬಡಿದ
ಪಾದಳ್ಳಿಯ ನೆಲ ಇನ್ನೂ ಸಜೀವವಾಗಿತ್ತು. ಅರ್ಧ ಇಕ್ಕಿದ ಮನೆಬಾಗಿಲುಗಳನ
ನೋಡಿದಾಗ ಇನ್ನೂ ಯಾರೋ ಅಲ್ಲಿರುವರೆಂಬ ಸಂಶಯ ಬರುತ್ತಿತ್ತು. ಇಬ್ಬರು
ಮೌನವಾಗಿಯೇ ತಿರುಗಾಡಿದರು. ಕೊನೆಗೆ ನೆನಪು ಅಸಹನೀಯವಾಯಿತೇನೋ
ಹೊಳೆಯ ತೀರದೆಡೆಗೆ ನಡೆದರು. ನೀರಗಸೆಯಿಂದ ಮುಂದೆ ಬಂದಾಗ ದಾದಾನಿ
ಬಾಳಾಚಾರ್ಯರು ನದಿಯಲ್ಲಿ ತೇಲಿಹೋದ ಸಂಗತಿ ನೆನಪಾಯಿತು. ಆ ಸ್ಥಳವನ
ನೋಡುವ ಕುತೂಹಲವಾಗಿ ಕರಿಯಪ್ಪನನ್ನು ಕೇಳಿದ. ಕರಿಯಪ್ಪ ತೋರಿಸಿ
ಹುಣಿಸೆಮರ ಸ್ವಲ್ಪ ಅಂತರದಲ್ಲಿಯೇ ಇತ್ತು.

"ಆಚಾರೆಪ್ಪ ಹೊಳೀ ಬಿದ್ದಾಗ ಇಲ್ಲೀತನಾ ಹೊಳೀ ಬಂದಿತ್ತ ?"

"ಹೌದು, ಅವರು ಜಾಲೀಗಿಡದ ಆಚ್ಯಾಕ ಹೋದಾಗ, ದಂಡೀ ಕಡೆ
ಮಾಡಿ ಮುಳುಗಿದರಂತ. ಆಗ ದಂಡೀ ಮ್ಯಾಗಿದ್ದ ಒಬ್ಬಿಬ್ಬರು, ನೋಡಿದವ
ಹೇಳತಿದ್ದರು" ಕರಿಯಪ್ಪ ಹೇಳಿದ.

ನದಿಯ ಪ್ರವಾಹ ಇನ್ನೂ ಸೊಕ್ಕಿನಿಂದಲೇ ಹರಿಯುತ್ತಿತ್ತು. ಪಾದಳ್ಳಿಯನ
ನುಂಗಿದ್ದರೂ ಅದಕ್ಕೆ ದುಃಖವಾಗಿರಲಿಲ್ಲವೇನೋ! ತಾನೂ ಏಕೆ ಈ ಪ್ರವಾ

ದಲ್ಲಿಯೇ ಈಸುಬಿದ್ದು ಮುಳುಗಿಹೋಗಬಾರದು ಎಂದು ದಾದಾನಿಗೆ ಎನಿಸಿತು.

ದಾದಾ ಪ್ರವಾಹವನ್ನೇ ನೋಡುತ್ತ ನಿಂತಿದ್ದ. ತೆರೆಗಳು ಸಾಲುಗಟ್ಟಿ ಹರಿಯುತ್ತಿದ್ದವು. ಕಾಲನ ಅನಾಶಕ್ತಿಯಷ್ಟೇ ಹೊಳೆಯ ಅನಾಸಕ್ತಿ ಆಶ್ಚರ್ಯಕರವಾಗಿತ್ತು. ಅನಂತದ ಸಂಕೇತದಂತೆ ನೆಲವನ್ನು ಕಚ್ಚಿಕೊಂಡೇ ಮುಂದೆ ಮುಂದೆ ಸಾಗಿತ್ತು. ದಂಡೆಯ ಮೇಲಿನ ಜೀವನ ಬದಲಾಗುತ್ತ ನಡೆದಿದ್ದರೂ, ಅದಕ್ಕಾಗಿ ಯೋಚಿಸುವಷ್ಟು ಅವಕಾಶ ನದಿಗಿರಲಿಲ್ಲ. ಈ ನದಿಯ ಎದುರು ಪಾದಳ್ಳಿ ಮೊನ್ನೆ ಮೊನ್ನೆ ಹುಟ್ಟಿ ಕಣ್ಣು ತೆರೆದ ಕೂಸು. ಹುಟ್ಟಿದ್ದು ಆಯುಷ್ಯ ಮುಗಿಸೊಡನೆಯೇ ಸತ್ತುಹೋಗಿತ್ತು. ತನ್ನ ಕರ್ತವ್ಯವೆಂಬಂತೆ ಪಾದಳ್ಳಿಯ ಶ್ರಾದ್ಧವನ್ನು ಮುಗಿಸಿ ಹೊಳೆ ಮುಂದೆ ಸಾಗಿತ್ತು. ನೆಲ ನೀರುಗಳು ಒಂದನ್ನೊಂದು ತಬ್ಬಿಕೊಂಡು ಏನೋ ಕಿವಿಮಾತು ಹೇಳುವಂತಿದ್ದವು.

ದಾದಾ ನೋಡುತ್ತಲೇ ಇದ್ದ. ತೆರೆಯ ಹಿಂದೆ ತೆರೆಗಳು ಸಾಲುಗಟ್ಟಿ ನಡೆದಿದ್ದವು. ಹುಟ್ಟು-ಸಾವುಗಳಿಲ್ಲದ ನದಿಯ ಒಡಲಿನಲ್ಲಿ ತೆರೆ ಹುಟ್ಟಿ ಸಾಯುವ ಲೀಲೆ ಬೆರಗುಗೊಳಿಸುವಂತಿತ್ತು. ಹೊಳೆಯ ದಂಡೆಯಿಂದ ಹಿಂದಿರುಗಿ ನೋಡಿದಾಗ ಪಾದಳ್ಳಿ ಜೀವ ಹೋದ ದೇಹದಂತೆ ಬಿದ್ದಿತ್ತು. ಪುನರುಜ್ಜೀವನದ ಆಸೆಯಿಲ್ಲದೆ ಬಿದ್ದಂತಿತ್ತು.

ಆದರೂ ಹಾಗೆನ್ನಲು ಬರುವಂತಿರಲಿಲ್ಲ. ಅಪಾರವಾದ ಜಲರಾಶಿಯಿಂದ ತುಂಬಿಕೊಂಡ ಹೊಳೆ ಇನ್ನೂ ಹರಿಯುತ್ತಿದೆ. ನೆಲ ಸುತ್ತಲೂ ವ್ಯಾಪಿಸಿದೆ. ದಂಡೆಯ ಮೇಲೆ ಈಗಾಗಲೇ ಹುಲ್ಲು ಚಿಗುರಿರಲಿಲ್ಲವೇ? ಯಾರಿಗೆ ಗೊತ್ತು? ಜೀವನ ಹುಟ್ಟುವುದೇ ಒಂದು ವಿಸ್ಮಯ! ಪಾದಳ್ಳಿ ತುಂಬಿಕೊಳ್ಳುವುದಿಲ್ಲವೆಂದು ಹೇಗೆ ಹೇಳಬೇಕು? ಪಿಡುಗಿಗೆ ಹೆದರಿ ಓಡಿದವರು ತಿರುಗಿ ಬರಬಹುದು. ಪಾದಳ್ಳಿ ಅವರಿಗಾಗಿ ಕಾಯುತ್ತಿದೆ. ತಾನು ತಿರುಗಿ ಬಂದಿರಲಿಲ್ಲವೇ? ಹೊಸ ಸೃಷ್ಟಿಯ ಕೃಷಿಕರ್ಮದಲ್ಲಿ ಕರಿಯಪ್ಪ ಈಗ ನಿರತನಾಗಿರಲಿಲ್ಲವೇ? ಜಾಗೀರದಾರರ ತೋಟವನ್ನು ಸಾಗುಮಾಡುವ ಹೊಣೆಯನ್ನು ಹೊತ್ತಿದ್ದ. ಲಕ್ಷ್ಮೀಬಾಯಿ ಇನ್ನೂ ಮಡೋಣಿಯಲ್ಲಿ ಇದ್ದಾಳೆ. ಅವಳ ವಂಶವನ್ನು ಮುಂದುವರಿಸಲು ಯಾರಾದರೂ ಹುಟ್ಟುವರು. ದೇಶಪಾಂಡೆ ಮನೆತನದ ವಂಶ ಇನ್ನೊಂದು ಕಡೆಗೆ ಬೆಳೆಯುತ್ತಿರಲಿಲ್ಲವೇ? ಪಾದಳ್ಳಿಯ ಸಮೃದ್ಧಿ ಈ ಬೀಜಗಳಲ್ಲಿಯೇ ಅಡಗಿತ್ತು. ನೆಲದ ಆಕ್ರಂದ ಮಾತ್ರ ಎಂದೂ ಬರಿದಾಗಲಾರದು. ಸತ್ತವರು ತಿರುಗಿ ಬರಲಿಕ್ಕಿಲ್ಲ. ಅವರ ದಿಕ್ಕು

...ಕನಲ್ಲಿ ಚಲ್ಲಿಹೋದ ಪಾದಳ್ಳಿಯ ಸತ್ವ ತಿರುಗಿ ಒಂದು ಕಡೆಗೆ ಕೂಡಲೇಬೇಕಾ
ಗಿದೆ. ಅದಕ್ಕೆ ಕಾಲ ಬೇಕು. ಬರಿದಾಗಿ ಯಾವುದೂ ಉಳಿಯಲಾರದೆಂಬುದಕ್ಕೆ
ಈ ನದಿಯ ಪ್ರವಾಹವೇ ಸಾಕ್ಷಿಯಾಗಿತ್ತು. ಪಾದಳ್ಳಿ ಬರಿದಾಯಿತೆಂದು ಹೊ
ಯೇನೂ ಬತ್ತಿಹೋಗಿಲ್ಲ.

ಆದರೂ ದಾದಾನಿಗೆ ದುಃಖ ತಡೆಯಲಿಲ್ಲ. ಚಿಮಣಾಳ ದುರ್ಮರಣ, ಬಾಳ
ಚಾರ್ಯರ ಸಾವು, ಲಕ್ಷ್ಮಣ ಪರದೇಶಿಯಂತೆ ಬೇರೆ ಊರನ್ನು ಸೇರಿದ್ದು ಇವ
ಅವನ ವೈಯಕ್ತಿಕ ದುಃಖಗಳಾಗಿದ್ದವು. ಅವುಗಳನ್ನು ನೆನೆದು ಕಣ್ಣೀರು ಸುರಿಸ
ಹತ್ತಿದ. ಅದನ್ನು ನೋಡಿ ಕರಿಯಪ್ಪ ಕಾರಣವನ್ನು ಕೇಳಿದಾಗ ಹೇಳಲೆ
ಬೇಕಾಯಿತು. "ಯಾರ ಸಲುವಾಗಿ ಬದಕಬೇಕಾಗೇತಿ, ಹೇಳು ಕರಿಯಪ್ಪಾ?"
ಎಂದು ಗೋಳಾಡಿದ.

"ಹುಚ್ಚ ಆದೀ ನೋಡು ದಾದಾ. ನಾ ಊರಿಂದ ಬರೂದರಾಗ ನನ
ಹೇಣತಿ, ಮೂರು ಮಕ್ಕಳು ಸತ್ತುಹೋದರಂತ ಕೇಳಿದರೂ ನಾ ನಿನ್ಹಾಂಗ ಹುಚ್ಚ
ಆಗಲಿಲ್ಲ. ಮನಶ್ಯಾ ಇರೂತನಾ ಸಾಯತೀನಿ ಅಂತ ಅನಬಾರದು ನೋಡು
ಇದ್ದಾಗ ಸತ್ಹಾಂಗ ಇರಬಾರದು ನೋಡು. ನಾ ಇರೂಮುಟಾ ತ್ವಾಟಾ ಸಾ
ಮಾಡಿ, ಧಣೇರ ಸೇವಾ ಮಾಡೂದುಲ್ಲಃ? ಹಾಗಃ ನೀನೂ ಇರಬೇಕು. ಆಚಾರೆಪ್ಪ
ಹೇಳತಿದ್ದರು, 'ದೇವರು ಜನ್ಮಾ ಕೊಟ್ಟಾಗ ನಮ್ಮಿಂದ ಏನೋ ಕೆಲಸ ಆ
ಬೇಕಾಗಿರತೈತಿ ಅಂತ ಕೊಟ್ಟಿರತಾನು. ಯಾರ ಕೆಲಸಾನೂ ದೇವರಿಗೆ ಬ್ಯಾಡಾಗ
ದುಲ್ಲ.' ಸಾಯಾಕಃ ನಾವು ಹುಟ್ಟಿದ್ದರ, ಈಟ ದಿನಾ ಬಾಳೇ ಯಾಕ ಮಾ
ಬೇಕು? ಏಳ, ಏಳ" ಎಂದು ಎಲ್ಲಿಲ್ಲದ ಅಕ್ಕರತೆಯಿಂದ ಎಬ್ಬಿಸಿದ.

ದಾದಾ ಎದ್ದ. ಅವನ ಮನಸ್ಸು ನಿರ್ವಿಣ್ಣವಾಗಿತ್ತು. ಹೊಳೆ ಶಾಂತವಾ
ಹರಿಯುತ್ತಲೇ ಇತ್ತು. ದೂರದ ಮರಡಿಸಾಲುಗಳ ಮೇಲೆ ಬಿಸಿಲು-ನೆರಳ
ಮುಗಿಯದ ಆಟದಲ್ಲಿ ತೊಡಗಿದ್ದವು. ಇನ್ನೊಂದು ಸೃಷ್ಟಿಯನ್ನು ನಿರ್ಮಿಸಲ
ಹೊಂಚುಹಾಕಿರುವಂತೆ ಪ್ರಕೃತಿ ಮೌನವಾಗಿತ್ತು. ಮೋಡ ಸರಿದಾಗ ಬೀಳು
ಬಿಸಿಲು ಕಾವು ಕೊಡುವಂತಿತ್ತು. ವಿಶಾಲವಾದ ಬಯಲು ಮಳೆಗಾಲದ ಹಸಿ
ನಿಂದ ತುಂಬಿಕೊಂಡು ದೇವತೆಗಳನ್ನೇ ಆಟಕ್ಕೆ ಕರೆಯುವಂತಿತ್ತು. ಹೊಸ ಸೃಷ್ಟಿ
ಯೊಂದನ್ನು ತನ್ನ ಬಸಿರಲ್ಲಿಟ್ಟುಕೊಂಡಂತಿದ್ದ ಈ ನಿರೀಕ್ಷೆ ರಮ್ಯವಾಗಿತ್ತು. ಕ
ಯಪ್ಪನ ಹಿಂದೆ ಅವನ ನೆರಳಿನಂತೆ ದಾದಾ ಸಾಗಿದ್ದ.

— ಸಂಪೂರ್ಣ —

# ಅರ್ಥಕೋಶ

ಆಪೇಶಿ : ಕೈಲಾಗದವ
ಅಟೊಕಿನಾಗ : ಕೈಯುಳತೆಯಲ್ಲಿ
ಅಗಡುಮಾಡು : ಕೆಡಿಸು, ಅಡ್ಡಹಾದಿ ಹಚ್ಚು
ಅಟೊಪಿಸು : ಹಿಡಿತದಲ್ಲಿ ಬರು
ಅಬರು : ಮಾನ ಮರ್ಯಾದೆ
ಅಬಲಖ : ಪಂಚರಂಗಿ, ಪಂಚಕಲ್ಯಾಣಿ
ಅಮಲು : ಅಧಿಕಾರ, ಮದ
ಅಲಕ್ಕನೆ : ಟಣ್ಣನೆ
ಅಗದಿ : ತೀರ
ಆಸಗೊಳ್ಳು : ಹಿಡಿತದಲ್ಲಿ ಸಿಗು
ಅಮಾದಾನ : ಬೇಕಾದಷ್ಟು
ಆಪಸಾತಿನಲ್ಲಿ : ತಮ್ಮತಮ್ಮೊಳಗೆ
ಆಕ್ಕಸ : ಆಕ್ರೋಶ
ಆಯಾ : ಕಾಳಿನ ರೂಪದಲ್ಲಿ ಪ್ರತಿಫಲ
ಆದಾವತಿ : ದ್ವೇಷ
ಅಜೂಬಾಜು : ನೆರೆಹೊರೆ
ಇಂಗ ಹಚ್ಚು : ಮೋಸ ಮಾಡು
ಇರಕಳ : ಹಾಯುವ ಸ್ವಭಾವದ
ಇಕ್ಕಲು ಹಾಕು : ಗೂಡು ಹಾಕು
ಇಸಮು ; ಆಸಾಮಿ, ಕುಳ
ಇರಾದೆ : ಉದ್ದೇಶ
ಉಪ್ಪು ಹಾಕು : ಕಾರಭಾರ ಮಾಡಗೊಡು
ಉಸಾಬರಿಗೆ : ಗೋಜಿಗೆ
ಉಪದ್ವ್ಯಾಪಿ : ಅಧಿಕಪ್ರಸಂಗಿ
ಉತಾರ : Extract.
ಎಕ್ಕೆ ಎಲೆ : ಎಕ್ಕದ ಎಲೆ
ಎಡತಾಕು : ಅಡ್ಡಾಡು
ಎಡವಟ್ಟ : ಹಟಮಾರಿ
ಒಪ್ಪು ಇಟಗೊ : ಮೇಲುಗಟ್ಟು
ಒನಕೊಂತs : ಒನೆಯುತ್ತ, ಒನಪು ಮಾಡುತ್ತ
ಕಬುಲಾಯತಿ : ಗೇಣಿ, ಲಾವಣಿ
ಕಿತಾಪತಿ : ಅಧಿಕಪ್ರಸಂಗ
ಕಿತಬಿ : ಅಧಿಕ ಪ್ರಸಂಗ
ಕಣಿಹೇಳು : ಭವಿಷ್ಯ ಹೇಳು
ಕೋರಿ ಮುಸುಕು : ಕಂಬಳಿ ಮುಸುಕು
ಕೆರವು : ಕಾಲುಮರಿ, ಪಾದರಕ್ಷೆ
ಕರಾಮತಿ : ತಂತ್ರ
ಕರಸಾಲ : ಬರಗಾಲ
ಕಮಾಲ : ಅದ್ಭುತ, ಕಸರತ್ತು
ಕಮರಾ : ಕೋಣೆ
ಕಿಳ್ಳಿಕ್ಯಾತರಾಟ : ಗೊಂಬೆಯಾಟ
ಕವಕ್ಕನ : ಅವಕ್ಕನೆ
ಕಡಲೆಯ ಚಟ್ಟ : ಕಡಲೆಯ ಚರಟ
ಕಬೂಲಿ : ಒಪ್ಪಿಗೆ
ಕಕಲಾತಿ : ಅಕ್ಕರೆ
ಕಣಿಕೆ : ಮೇವು
ಕೊಳ್ಳೀಕವಕ : ಕಿಲಾಡಿ, ಕಿಡಿಗೇಡಿ
ಕವಡುಗಂಟಕತನ : ಮೋಸಗಾರಿಕೆ
ಕೊಂಬುಚೇರು : ಕೊಡಿಗೆ ಹಾಕುವ ಆಭರಣ, ಆಣಸು
ಕೋಲಿ : ಕೊಯ್ದು ಉಳಿದ ದಂಟಿನ ಭಾಗ
ಕುಸ್ತಿ ಫಳಿ : ಕುಸ್ತಿಯ ಕಣ
ಕಡಾವಿಗೆ : ಕಟ್ಟಿಗೆ ಪಾದರಕ್ಷೆ
ಕೂಳುಕೊಬ್ಬರಿಯಾಗು: ಕೂಳಿಲ್ಲದೆ ಇರು
ಖುಶಾಲ : ಕ್ಷೇಮ, ಸ್ವೇಚ್ಛೆಯಿಂದ
ಖಬರ : ಅರಿವು
ಖಂಬೀರ : ಧೈರ್ಯಶಾಲಿ

ಖೋಡ : ಸೊಕ್ಕು
ಖಾಸ ದೇಖರೇಖ : ಸ್ವಂತ ಮೇಲ್ವಿಚಾರಣೆ
ಖುರಾಕು : ಪೌಷ್ಟಿಕ ಆಹಾರ
ಖಾಸಗತ : ಸ್ವಂತ
ಗುನ್ನೆ : ಅಪರಾಧ
ಗರಡಿಮನೆ : ತಾಲೀಮುಖಾನೆ
ಗುಳೇ ಹೋಗು : ದೇಶಾಂತರ ಹೋಗು
ಗಬ್ಬ ನಾತ : ಹೊಲಸು ವಾಸನೆ
ಗರೀಬ : ಬಡವ, ಭೋಳೆ
ಗಪ್ಪ ಮಾಡು : ಮುಚ್ಚಿಡು
ಗರಜು : ಅವಶ್ಯಕತೆ
ಗೋರ್ಯಾಳ : ಸ್ಮಶಾನ
ಗರಸು : ಕಟಕ ಮಣ್ಣು, ಮುರುಮ
ಗುಳೇ ಹಾಕು : ಕೂಡಿ ಹಾಕು
ಗುಳದಾಳಿ : ಮಂಗಳಸೂತ್ರ
ಗೊಬ್ಬರ ಗುಡೆ : ಗೊಬ್ಬರದ ಗುಂಪು
ಗಸಗ್ಗನ : ತೀವ್ರವಾಗಿ
ಗೊಂಗಡಿ : ಕಂಬಳಿ
ಗೋಪಾಳ : ಲಂಚ
ಗೊಂಜಾಳ ಘಡಾ : ಗೋವಿನ ಜೋಳದ ನಿಲುವು
ಗಡಾನ : ಕೂಡಲೆ
ಗಾಳಿಗರಾ : ಗಾಳಿ ತುಂಬಿದ ಕರು
ಗಬ್ಬ : ಬಸಿರು
ಘಾಣ : ಹೊಲಸು
ಚರಗ ಚಲ್ಲು : ಯಳ್ಳಮಾಸಿಯ ದಿನ ಹೊಲಕ್ಕೆ ಪೂಜೆ ಮಾಡಿ ದಿಗ್ಬಲಿ ಕೊಡುವದು
ಚಮಟಾ ಬೆಳಗು : ಚರ್ಮಸುಲಿ
ಚಿಟಕೆಮುರಿ : ನೆಟಿಕೆ ಮುರಿ, ಶಪಿಸು
ಚೌಕಸಿ : ವಿಚಾರಣೆ

ಚಾಳಿ : ಚಟ
ಚಿತಾವಣಿ : ಪೀಡೆ
ಚಡಾವು : ಪಾಪೋಸು
ಚಾಟು : ಆಶ್ರಯ
ಚೇಲಾ : ಶಿಷ್ಯ
ಛೆಂಜಿ : ಸಂಜೆ
ಛಪಾಯಿಸು : ಮುಚ್ಚಿಡು, ಗಪ್ ಮಾಡು
ಛಾನಸ ಸ್ವಭಾವದ : ಛಾಂದಸ
ಛಾಪು ಹಾಕು : ಪ್ರಭಾವ ಬೀರು
ಜರಾ : ಸ್ವಲ್ಪ
ಜೀತ : ದುಡಿತ
ಜಡೀಬೇಕು : ಹೊಡೆಯಬೇಕು
ಜನಾವರ : ದನಕರು
ಜಂಜಾಟ : ಗೊಂದಲ
ಜಂಪಲಿಕ್ಕು : ಮಳೆ ಹನಿಹನಿಯಾಗಿ ಬೀಳು
ಟಬರು : ಸೊಕ್ಕು
ಟರಾಯಿಸು : ನಿರ್ಣಯಿಸು
ಟೋಳಿಕಟ್ಟು : ಗುಂಪುಗಟ್ಟು
ಠಾವಿಕಿ : ಗೊತ್ತು
ಠಾಮ ಮತ : ನಿಶ್ಚಿತ ಅಭಿಪ್ರಾಯ
ತುಫಾನಿ : ಆರೋಪ, ಅಪಾದನೆ
ತಂತಿಕಟ್ಟು : ಗೆರೆಕೊರೆದು, ಸರಿಯಾಗಿ
ತರುಬು : ತಡೆ, ನಿಲ್ಲಿಸು
ತಳಿ : ವಂಶ
ತಾಬಡತೋಬ : ಕೂಡಲೆ
ತಾಬೇಮಾಡು : ವಶಕ್ಕೆ ಕೊಡು
ತಿಪ್ಪರಲಾಗ ಒಗೆ : ಲಾಗ ಹಾಕು
ತಳುಕು : ತೊಡಕು, ಸಂಬಂಧ
ತುಡುರು : ಜಬರಿಸು
ತೋಂಡಿ : ಮೌಖಿಕ

ತಾಕತ : ಶಕ್ತಿ, ಬಲ
ತುರಾಯಿಹಚ್ಚು : ಮೆರೆದಾಡು
ತರ್ಫೆ : ಪರವಾಗಿ
ತರಾತುರಿ : ಅವಸರ
ಥರಾ ಅಲ್ಲ : ಯೋಗ್ಯವಲ್ಲ
ಥಾಕಿಲ್ಲದ : ಸಂಬಂಧವಿಲ್ಲದ, ಅಸಂಬದ್ಧ
ಥೋಡಾ ಥೋಡಾ : ಸ್ವಲ್ಪ ಸ್ವಲ್ಪ
ದಗದ : ಕೆಲಸ
ದೇಶನಿಕಾಳೆ : ಅಡ್ನಾಡಿ, ಪೋಲಿ
ದಿಂಡಿ : ಪಂಢರಪುರಕ್ಕೆ ಹೋಗುವ ಭಕ್ತರ ಮೇಳ
ದಮ್ಮು ಹಿಡಿ : ತಡೆ, ಸಹಿಸು, ಸುಮ್ಮನಿರು
ದಾಂಡಗಾಯಿ : ಪುಂಡಾಡಿಕೆ
ದರಕಾರಮಾಡು : ಲಕ್ಷ್ಯಕೊಡು
ದಗ್ಗದುಡಿ : ಮೈಮುರಿಯುವಂತೆ ದುಡಿ
ದಸ್ತೂರ : ದಸ್ಕತ್ತು
ದಾದಮಾಡು : ಲಕ್ಷ್ಯಕೊಡು
ದಿಶಾಭೂಲ : ದಿಕ್ಕುಪಾಲು
ಧಾಬೆ : ಕೊಟ್ಟಿಗೆ
ಧಡೇದ ಬ್ಯಾನಿ : ಹೃದಯವಿಕಾರ
ಧಮಕಿ : ಬೆದರಿಕೆ
ಧುತ್ತ್ಯಾನಂಥವರು : ಧಾಂಡಿಗರು
ನಿಕಾಲ : ನಿರ್ಣಯ
ನಜರು : ದೃಷ್ಟಿ
ನಿರಾಳ : ಬೇರೆ, ಭಿನ್ನವಾದ
ನೀರಿನ ಮಲುವು : ಪ್ರವಾಹದ ಓಘ
ನೆಲಹಟ್ಟು : ನೆಲಕ್ಕೆ ಬೆನ್ನು ಹಚ್ಚಿ
ನಸಿ ಬ್ಯಾಸಿ ; ಸಣ್ಣಾಗಿ ಬ್ಯಾಸಿ
ನಜರಬಂದಿ : ಕಣ್ಣರಿಕೆ
ನಿಟ್ಟುಹಚ್ಚು : ಸಾಲಾಗಿರಿಸು

ಪರಲು : ಸಂಬಂಧ
ಪಾಡು : ಲೇಸು
ಪಟ್ಟನS : ಕೂಡಲೆ
ಪ್ಯಾಲಿ : ಮೂರ್ಖ
ಪಾವುಡ : ರುಮಾಲು
ಪಂಚೇತಿ : ಪಂಚಾಯತಿ, ಕಾರಭಾರ
ಪಾಯಬಂದ ಕಾಡಣಿ : ಕುದುರೆಯ ಹಿಂಗಾಲಿಗೆ ಕಟ್ಟುವ ಹಗ್ಗ
ಪೀಕು : ಬೆಳೆ
ಪರ್‍ಯಾಣ : ಹರಿವಾಣ
ಪಟಾಯಿತ : ಚತುರ
ಪುಕಾರಿಸು : ಸಾರು
ಪಾವಣೆ : ಅತಿಥಿ
ಪಸಂತ : ಮೆಚ್ಚಿಕೆ
ಫರಕ : ಅಂತರ
ಫಂಟಹಚ್ಚು : ಅನವಶ್ಯಕ ಮಾತುಗಳನ್ನಾಡು
ಫೋತಿಆಗು : ಸಾಯು
ಫೈಲಾಸು : ಹಬ್ಬು, ಹರಡು
ಫಸಲು : ಬೆಳೆ
ಬಿದಾಗಿ : ಕಾಣಿಕೆ, ಸಂಭಾವನೆ
ಬಟ್ಟಾ : ಕಲಂಕ
ಬೆಳ್ಳಿ : ಶುಕ್ರ
ಬಾಬು : ಮಾಮೂಲು
ಬೇಬರಸಿ : ಬೇವಾರ್ಸಿ, ಪರದೇಶಿ
ಬಡ್ಡ : ಗೊಡ್ಡು, ವಯಸ್ಸಾದ
ಬೇಪತ್ತೆ : ನಾಪತ್ತೆ
ಬೈಲಕಡೆಗೆ : ಬಹಿರ್ದೆಸೆಗೆ
ಬಳುವಳಿ : ಉಡುಗೊರೆ
ಬಾಟ : ಜೋಳದ ಹಸಿದಂಟು
ಬಕ್ಕಣ : ಜೇಬು
ಬರಹಣ : ಅಪಥ್ಯ

ಭಾಗಾದಿ : ಧಾಯಾದಿ
ಭಿಡೆ : ದಾಕ್ಷಿಣ್ಯ
ಭುಲತಾಪಿ : ಭುಲ್ಲವಿಸು, ಮರಳು ಮಾಡು
ಮಾರೀಬ್ಯಾನಿ : ಕಾಳರಾ
ಮಳ್ಳಹುಡುಗ : ಬೆಪ್ಪ
ಮುರುವು : ದನಕ್ಕೆ ಇಡುವ ಹೊಟ್ಟು
ಮಣಕ : ಮೊದಲ ಗಂಡು ಕರು
ಮುಕ್ಕಟ್ಟ : ಮೊದಲೇ
ಮೋಘಂ : ಅಂದಾಜು, ಅನಿಶ್ಚಿತ
ಮಗರೂರಿ : ಸೊಕ್ಕು
ಮುಸ್ತಾತು : ಚನ್ನಾಗಿ ಆಯಿತು, ಬೇಕಾದಷ್ಟಾಯಿತು
ಮಸಲತ್ತು : ಹೊಂಚು
ಮುಸಿಕೆ : ಹೊಡೆತ
ಮೈತ : ಮೃತ
ಮುಡ್ಡಿ : ಮರಡಿ
ಮಖೀನ : ಮುಖಹೀನ
ಮಡಸ : ಬೈಗುಳಲ್ಲಿ ಉಪಯೋಗಿಸುವ ಒಂದು ಪದ
ಮೋಕಳೀಕ : ಬಿಡುಗಡೆ
ಯುಮುಕು : ಬಿನ್ನಾಣ, ಒಯ್ಯಾರ
ರವದಿ : ದಂಟಿನ ಮೇಲಿನ ಸಿಪ್ಪೆ
ರಾಬ : ದುಡಿತ
ರಿವಾಜು : ಪದ್ಧತಿ, ಆಚಾರ
ರಾಜರೋಸ : ಡಾಣಾಡಂಗುರವಾಗಿ
ರಾಸ್ತ : ಉಚಿತ
ರಬ್ಬ ಆಗು : ರಂಗಿಗೇರು
ರಾಮರಾಮುಮಾಡು : ನಮಸ್ಕರಿಸು
ಲಾಯಖ : ಯೋಗ್ಯ
ಲಾಖ : ಲಕ್ಷ
ಲಡಾಯಿ : ಯುದ್ಧ
ವಲ್ಲಿ : ಧೋತರ
ವಗತಾನ : ಒಗೆತನ
ವರ್ಮ : ದ್ವೇಷ
ವಜನ : ತೂಕ, ಪ್ರತಿಷ್ಠೆ
ವಾಜಿಮಿ : ಯೋಗ್ಯ
ವಾಗತ್ಯ : ಅಚ್ಚುಕಟ್ಟು
ವಾರಿಯಾಗು : ಓರೆಯಾಗು
ಶಪ್ಪಥ್ : ಆಣೆ, ಶಪಥ
ಷಡ್ಡಕ : ಹೆಂಡತಿಯ ತಂಗಿಯ ಇಲ್ಲವೆ ಅಕ್ಕನ ಗಂಡ
ಸೀದಾ : ಊಟದ ಸಾಮಗ್ರಿ
ಸದರು : ಜಗಲಿ, ಕಟ್ಟೆ
ಸನಮಂತ : ಒಪ್ಪಿಗೆ
ಸಬುಳ : ಸಪೂರ
ಸೋಟರು : ಲಫಂಗರು, ಫಟಿಂಗರು
ಸವ್ವಾರಿಹಾಕಿ : ಬಡ್ಡಿ ಸಹಿತ, ಒಂದಕ್ಕೆ ಒಂದೂಕಾಲು
ಸವಡು : ಅವಕಾಶ
ಸಮ್ಮಸದ : ತಿಳಿಯದೆ
ಸೀಮಿಸರಾಡ : ಸೀಮೆ, ಹದ್ದು
ಸವಾರಿ : ಕನೂನು
ಸಿದ್ಧಪತ್ರಿ : ಗಾಂಜಾ
ಸೋಯಿ ಇಲ್ಲ : ಸಾಧ್ಯವಿಲ್ಲ
ಸರಿ : ಅಂಟು
ಹೊನ್ನುಗ್ಗಿ : ಕಾರಹುಣ್ಣಿಮೆಯ ಮರು ದಿನ
ಹರ್ಲಿಮಾಡು : ದೋಷ ಹೊರಿಸು
ಹುರಿಬುಡ್ಡಿ : ಸುಟ್ಟ ಹಸಿ ಕಡಲೆಕಾಯಿ
ಹಸನ : ಸ್ವಚ್ಛ
ಹೆಂಡಿ : ಸೆಗಣಿ
ಹುಣಸಿಪಕ್ಕ : ಹುಣಿಸೆಬೀಜ
ಹರಕತ್ತ : ಅಡ್ಡಿ
ಹಕೀಕತ : ಮಾಹಿತಿ, ಸಮಾಚಾರ

